# ಶ್ರೀಮದ್ ಭಗವದ್ಗೀತೆ

ಅಥವಾ

## ಭಾವಾರ್ಥ ದೀಪಿಕಾ

ಅರ್ಥಾತ್

## ಶ್ರೀ ಜ್ಞಾನೇಶ್ವರಿಯ ಕನ್ನಡ ಅನುವಾದವು




ಲೇಖಕ :

**ಹ. ಭ. ಪ. ಶ್ರೀನಿವಾಸ ಕೃಷ್ಣ ಕುಲಕರ್ಣಿ ಶ್ರೀ ವಿಠ್ಠಲಮಂದಿರ ಬಾವಲತ್ತಿ**

ತಾ. ಬಾಗಲಕೋಟ ಜಿ. ವಿಜಾಪೂರ



# ॐ नमः परमात्मने ।

## मंगलम् ।

पार्थाय प्रतिबोधितां भगवता नारायणेन स्वयं
व्यासेन ग्रथितां पुराणमुनिना मध्येमहाभारतम् ।
अद्वैतामृतवर्षिणीं भगवतीमष्टादशाध्यायिनी-
मंब त्वामनुसंदधामि भगवद्गीते भवद्वेषिणीम् ॥ १ ॥

प्रपन्नपरिजाताय तोत्रवेत्रैकपाणये ।
ज्ञानमुद्राय कृष्णाय गीतामृतदुहे नमः ॥ २ ॥
सर्वोपनिषदो गावो दोग्धा गोपालनंदनः ।
पार्थो वत्सः सुधीर्भोक्ता दुग्धं गीतामृतं महत् ॥ ३ ॥

वसुदेवसुतं देवं कंसचाणूरमर्दनम् ।
देवकीपरमानंदं कृष्णं वंदे जगद्गुरुम् ॥ ४ ॥



# ಗ್ರಂಥಕರ್ತರು



ಹರಿಭಕ್ತ ಶ್ರೀ. ಶ್ರೀನಿವಾಸ ಕೃಷ್ಣ ಕುಲಕರ್ಣಿ

ಸುನಗ ಶ್ರೀ ವಿಠ್ಠಲಮಂದಿರ ಬಾವಲತ್ತಿ

ಚಿ|| ವಿಠ್ಠಲನು

ಕನ್ನಡ

# ಸಾರ್ಥ ಜ್ಞಾನೇಶ್ವರೀ

( ಸಚಿತ್ರ )

## ೧ನೆಯ ಭಾಗ

( ೧ರಿಂದ ೯ ಅಧ್ಯಾಯಗಳು )

ಶ್ರೀಮದ್ಭಗವದ್ಗೀತೆಯ ಮೇಲೆ "ಜ್ಞಾನೇಶ್ವರರು" ಮಹಾರಾಷ್ಟ್ರ ಭಾಷೆಯಲ್ಲಿ ಬರೆದ
ಭಾವಾರ್ಥದೀಪಿಕೆ ಎಂಬ ಟೀಕೆಯ ಕನ್ನಡ ಅನುವಾದವು.

ಲೇಖಕ:

**ಶ್ರೀನಿವಾಸ ಕೃಷ್ಣ ಕುಲಕರ್ಣಿ, ಸುನಗ**

ಶ್ರೀ ವಿಠ್ಠಲ ಮಂದಿರ, ಬಾವಲತ್ತಿ
ತಾ. ಬಾಗಲಕೋಟ
ಜಿ. ವಿಜಾಪೂರ

ಪ್ರಥಮಾವೃತ್ತಿ ೧೦೦೦ ಪ್ರತಿಗಳು

೧೯೩೫



ಶಕೆ ೧೮೫೭ ] [ ಬೆಲೆ ೩ ರೂಪಾಯಿ

# ಅರ್ಪಣ ಪತ್ರಿಕೆ




ಶ್ರೀ ವಿಠ್ಠಲಾರ್ಪಣಮಸ್ತು

ಹರಿಭಕ್ತ ಸುನಗ ಶ್ರೀನಿವಾಸರಾಯರು

# ಮುನ್ನುಡಿ

ಶ್ರೀಯುತ ಶ್ರೀನಿವಾಸ ಕೃಷ್ಣ ಕುಲಕರ್ಣಿ ಸುನಗ ಇವರು ಬಹಳ ಶ್ರಮಪಟ್ಟು ಮಹಾರಾಷ್ಟ್ರ ಭಾಷೆಯಲ್ಲಿಯ ಜ್ಞಾನೇಶ್ವರಿಯನ್ನು ಕನ್ನಡಕ್ಕೆ ಪರಿವರ್ತಿಸಿದ್ದಾರೆ. ಜ್ಞಾನೇಶ್ವರ ಮಹಾರಾಜರೆಂದರೆ ಭಗವಂತನ ಚಿತ್ಕಲಾ ಸ್ವರೂಪರು. ಅವರ ವಾಣಿಯಲ್ಲಿ ರಸಸಂತಿಯ ಮಾಧುರ್ಯವಿದೆ. ಲಾಲಿತ್ಯವಿದೆ. ಬ್ರಹ್ಮತೇಜಸ್ಸಿನ ಹೊಳಪಿದೆ. ಜ್ಞಾನೇಶ್ವರ ಮಹಾರಾಜರ ಈ ಜ್ಞಾನೇಶ್ವರಿಯಿಂದ ಭೂದೇವಿಯು ಅಮೃತವತಿಯಾದಳೆಂದು ಹೇಳಿದರೆ ಅತ್ಯುಕ್ತಿಯಾಗಲಾರದು. ಭಗವದ್ಗೀತೆಯ ಸ್ವಾರಸ್ಯವನ್ನು ಮಹಾರಾಜರು ಅತ್ಯುತ್ತಮವಾಗಿ ತಮ್ಮ ಗ್ರಂಥದಲ್ಲಿ ತೋರಿಸಿ ಬಿಟ್ಟಿದ್ದಾರೆ. ಅವರ ವಿವರಣಶಕ್ತಿಯು ಅನ್ಯಾದೃಶವಾಗಿರುವದು. ವಿಷಯವಿಸ್ತಾರವನ್ನು ಮಾಡುವಾಗ ಅವರು ಉಪಯೋಗಿಸಿದ ಉಪಮೆಗಳು ಸ್ವಾಭಾವಿಕವಾದವುಗಳೂ, ಹೃದಯಂಗಮವಾದವುಗಳೂ ಆಗಿರುತ್ತವೆ. ತತ್ವದ ಅರ್ಥವು ಎದ್ದಾಗಿಮೂಡುವಂತೆ ಉಪಮಾ ಸಾಮಗ್ರಿಯನ್ನು ಉಪಯೋಗಮಾಡಿದ ಕುಶಲತೆಯು ಅವರಿಗೊಬ್ಬರಿಗೆ ಸಲ್ಲುವದು. ಅವರಲ್ಲಿ ದಿವ್ಯದೃಷ್ಟಿ ಇದ್ದಿತು. ದಿವ್ಯಾನುಭವವು ಇದ್ದಿತು ದಿವ್ಯ ಸ್ಫೂರ್ತಿಯಿದ್ದಿತು. ದಿವ್ಯ ಸಂಸ್ಕಾರವಿದ್ದಿತು. ದಿವ್ಯವಾಣಿಯಿದ್ದಿತು. ಇವೆಲ್ಲವುಗಳ ವ್ಯಕ್ತಿಸೃಷ್ಟಿಯೇ ಜ್ಞಾನೇಶ್ವರಿಯು. ಅದು ಕಾವ್ಯವೂ ಅಹುದು. ಧರ್ಮಗ್ರಂಥವೂ ಅಹುದು. ನೀತಿಗ್ರಂಥವೂ ಅಹುದು. ವ್ಯವಹಾರಗ್ರಂಥವೂ ಅಹುದು. ಇಂತಹ ಗ್ರಂಥದ ಅನುವಾದವನ್ನು ಸರಳವಾದ ಗದ್ಯದಲ್ಲಿ ಮಾಡಿದ ಪ್ರಥಮ ಶ್ರೇಯವು ಶ್ರೀನಿವಾಸ ಕೃಷ್ಣ ಕುಲಕರ್ಣಿಯವರಿಗೆ ಸಲ್ಲತಕ್ಕದ್ದು. ಪಂಡಿತರಿಗೂ ಪಾಮರರಿಗೂ ಉಪಯೋಗವಾಗುವಂತೆ ಅವರ ಶೈಲಿಯಿದೆ. ಅದರಲ್ಲಿ ದೋಷವಿಲ್ಲದಿರಲಿಕ್ಕಿಲ್ಲ ಆದರೆ ವಿಷಯಗಾಂಭೀರ್ಯವನ್ನು ಅನುಲಕ್ಷಿಸಿದರೆ ಎಲ್ಲರೂ ಓದಿ ಆನಂದಪಡತಕ್ಕ ವಸ್ತುವದು. ಇಂಥ ಗ್ರಂಥವನ್ನು ಪ್ರಸಿದ್ಧಿಸಬೇಕಾದರೆ ಹಣವು ಹೇರಳವಾಗಿ ಬೇಕು. ಆದುದರಿಂದ ಉದಾರರಾದ ಸದ್ಗೃಹಸ್ಥರೂ ಹಿಂದು ಸಂಸ್ಕೃತಿಯ ಅಭಿಮಾನಿಗಳೂ ಶಕ್ಯವಿದ್ದಷ್ಟು ದ್ರವ್ಯಸಹಾಯವನ್ನು ಮಾಡಿ ಶ್ರೇಯೋಭಾಗಿಗಳಾಗಬೇಕೆಂದು ಬಿನ್ನವಿಸುವ,

**ಹಣಮಂತರಾವ ಕೊಂಣೂರ.** ಎಂ. ಎ.,
**ವಿಜಾಪುರ.**

---

# ಪ್ರಸ್ತಾವನೆ.

---

ಶ್ರೀಪಾಂಡುರಂಗನ ಪ್ರೇರಣೆಯಿಂದಲೂ ಆಲಂದೀಪ ಶ್ರೀಜ್ಞಾನೇಶ್ವರ ಮಹಾರಾಜರ ಕೃಪೆಯಿಂದಲೂ ಸಾರ್ಥ ಜ್ಞಾನೇಶ್ವರೀ ಎಂಬ ಮಹಾರಾಷ್ಟ್ರ ಗ್ರಂಥದ ಮೊದಲಿನ ಒಂಬತ್ತು ಅಧ್ಯಾಯಗಳ ಕನ್ನಡ ಅನುವಾದದ ೧ ನೇ ಭಾಗ ಮುದ್ರಣಕಾರ್ಯವನ್ನು ಸಂಪೂರ್ಣ ಮುಗಿಸಿ ಕರ್ಣಾಟಕ ವಾಚಕರ ಕೈಯಲ್ಲಿ ಕೊಡುವ ಸುಯೋಗವು ಶಕೆ ೧೮೫೭ ಆಶ್ವಿನ ಶುಧ್ಧ ವಿಜಯುದಶಮಿ ( ದಸರೆ) ಸುಮುಹೂರ್ತಕ್ಕೆ ಬಂದಿರುತ್ತದೆ. ಈ ಬಗ್ಗೆ ಆ ದಯಾಘನ ಶ್ರೀಪಾಂಡುರಂಗನ ಚರಣಕಮಲಗಳ ಸ್ಮರಣಮಾಡಿ ಪ್ರಸ್ತಾವನೆಯು ಒಂದೆರಡು ಶಬ್ದಗಳನ್ನು ಬರೆಯುವೆನು.

ಮಹಾರಾಷ್ಟ್ರ ವಾಙ್ಮಯದಲ್ಲಿ ಆದಿಕವಿ ಎಂದು, ಮಹಾರಾಷ್ಟ್ರ ಕವಿಕುಲತಿಲಕನೆಂದು ಲೋಕವಿಖ್ಯಾತಿಯಂ ಪಡೆದ ಮಹಾವೈಷ್ಣವ ಶಿರೋಮಣಿಯಾದ ಶ್ರೀ ಜ್ಞಾನೇಶ್ವರ ಮಹಾರಾಜರು ಭಾಗವತಧರ್ಮದ ಆದ್ಯಪ್ರವರ್ತಕರೂ ಆಚಾರ್ಯರೂ ಆಗಿರುವರು. ಇವರು ಭಗವದ್ಗೀತೆಯ ಮೇಲೆ ಮಹಾರಾಷ್ಟ್ರಭಾಷೆಯಲ್ಲಿ ಭಾವಾರ್ಥದೀಪಿಕೆ ಎಂಬ ಲೋಕೋತ್ತರವಾದ ಪದ್ಯಪ್ರಬಂಧವನ್ನು ೬೪೫ ವರುಷಗಳ ಹಿಂದೆ ರಚಿಸಿದ್ದು ಈ ಸುಪ್ರಸಿದ್ಧ ಕಾವ್ಯದ ಗುಣ ಗಾಂಭೀರ್ಯವೇ ಆ ಮಹಾಕವಿಯ ಆ ಮಹಾಗ್ರಂಥದ ಮಹಿಮೆಗೆ ಕನ್ನಡಿಯಾಗಿದೆ. ಇದರಲ್ಲಿ ಪದಲಾಲಿತ್ಯ, ಅರ್ಥ ಗಾಂಭೀರ್ಯ, ಸರಲತೆ, ಮಾಧುರ್ಯ ಶೈಲಿ, ಅರ್ಥಚಮತ್ಕೃತಿ, ಅಲಂಕಾರ ಮುಂತಾದವು ಎಷ್ಟು ಕೊಂಡಾಡಿದರೂ ಸಾಲದು. ಮಹಾರಾಷ್ಟ್ರದವರ ಭಾಗ್ಯವು ದೊಡ್ಡದೆಂದು ಇಂಥ ಅಮೃತಸಿಧಿಯು ಅವರಿಗೆ ದೊರಕಿರುವದು. ಭಾವಾರ್ಥ ದೀಪಿಕೆಯಂದರೆ ಅದು ಶ್ರೀಕೃಷ್ಣ ಪರಮಾತ್ಮನ ಸಂಸ್ಕೃತಗೀತೆಯ ನಿಜವಾದ ಭಾವಾರ್ಥವನ್ನು ತಿಳಿಸುವ ವಿಸ್ತೃತವಾದ ಟೀಕೆಯು. ಈ ಭಾವಾರ್ಥದೀಪಿಕೆಯು ಗ್ರಂಥವೇ **ಜ್ಞಾನೇಶ್ವರಿ,** ಎಂಬ ಹೆಸರಿನಿಂದ ಪ್ರಸಿದ್ಧಹೊಂದಿರುವದು. ಭಕ್ತಿಮಾರ್ಗದ ಕೇಂದ್ರಸ್ಥಾನವಾದ ಭೂವೈಕುಂಠವೆನಿಸಿದ ಶ್ರೀಕ್ಷೇತ್ರ ಪಂಢರಿಯಲ್ಲಿ ಭಾಗವತ ಧರ್ಮಾನುಯಾಯಿಗಳಲ್ಲಿ ಈ ಜ್ಞಾನೇಶ್ವರೀ ಗ್ರಂಥಕ್ಕೆ ಮೂಲ ಗೀತೆಗಿಂತಲೂ ಹೆಚ್ಚಿಗೆ ಮಹತ್ವವಿರುತ್ತದೆ. ಮಹಾರಾಷ್ಟ್ರದಲ್ಲಿಯ ಪಟ್ಟಣ ಗ್ರಾಮ ಹಳ್ಳಿ ಊರು ಮುಂತಾದವುಗಳಲ್ಲಿ ಶ್ರೇಷ್ಠವರ್ಣದ ಬ್ರಾಹ್ಮಣರಿಂದ ಕನಿಷ್ಟವರ್ಣದ ಸ್ತ್ರೀ ಶೂದ್ರಾದಿಗಳಿಗೂ ಈ ಜ್ಞಾನೇಶ್ವರಿಯು ಅವಗತವಿರುವದು. ಇವರು ಪ್ರತಿಯೊಬ್ಬರು ಪ್ರತಿದಿವಸ ಭಕ್ತಿಯಿಂದ ಪಠಣ ಪಾರಾಯಣ ಮಾಡಿ ಓದಿ ಕೇಳಿ ಆನಂದಿಸದವರೇ ಇಲ್ಲ. ಸತತ ಜ್ಞಾನೇಶ್ವರಿ ಎಂಬ ಜ್ಞಾನಗಂಗಾನದಿಯು ಮಹಾರಾಷ್ಟ್ರದಲ್ಲಿ ಹರಿದು ಇದೀಗ ವಿಜಯುದಶಮೀ ಸುಮುಹೂರ್ತದಲ್ಲಿ ಕನ್ನಡ ಸ್ವರೂಪವನ್ನು ಧರಿಸಿ ಕರ್ಣಾಟಕದಲ್ಲಿ ಹರಿದುಬಂದಿರುತ್ತದೆ. ಭಗವದ್ಭಕ್ತರು ಅದರಲ್ಲಿ ಅವಗಾಹನವನ್ನು ಮಾಡಿ ಪವಿತ್ರರಾಗಿ ಸಂಸಾರದುಃಖವನ್ನು ನೀಗಿ ಸುಖಿಗಳಾಗಬೇಕೆಂದು ಹಾರೈಸುವನು.

ನಮ್ಮ ಕರ್ಣಾಟಕದಲ್ಲಿ ಗೀತೆಯ ಪಠಣ ಪಾರಾಯಣ ಬ್ರಾಹ್ಮಣರ ಹೊರ್ತು ಇನ್ನಿತರ ವರ್ಣದವರು ಮಾಡಬಾರದೆಂದೂ ಬ್ರಾಹ್ಮಣರಷ್ಟೇ ಮಾಡಬೇಕೆಂದೂ ತಿಳುವಳಿಕೆಯು ನೆಲೆಗೊಂಡಿರುವದು. ಗೀತೆಯ ಪಠಣ ಪಾರಾಯಣದ ಗುತ್ತಿಗೆಯು ಬ್ರಾಹ್ಮಣರಿಗಷ್ಟೇ ಕೊಟ್ಟದೆ ಎಂಬ ಮೂರ್ಖ ಕಲ್ಪನೆಯು ನಮ್ಮಲ್ಲಿರುವದು ಈ ಕಲ್ಪನೆಯು ಪೂರ್ವಕಾಲದಲ್ಲಿ ರೂಢಿಯಲ್ಲಿರಲಿಲ್ಲ. ಇಷ್ಟೇ ಅಲ್ಲ ಜೈವಲಿ, ಗಾರ್ಗ್ಯಾಯನಿಯಂಥ ಕ್ಷತ್ರಿಯರೇ ಗುರುಗಳಾಗಿ ಎಷ್ಟೋಸಾರೆ ಬ್ರಾಹ್ಮಣರಿಗೆ ಬ್ರಹ್ಮವಿದ್ಯೆಯ ದೀಕ್ಷೆಯನ್ನು ಕೊಟ್ಟರೆಂಬದು ಒಳ್ಳೇ ಮಹತ್ವದ ಸಂಗತಿಯು. ಗೀತೋಪದೇಶವನ್ನು ಮಾಡಿದ ಶ್ರೀಕೃಷ್ಣ ಪರಮಾತ್ಮನು ಸ್ವತಃ ಕ್ಷತ್ರಿಯ ಶ್ರೇಷ್ಠನು ಅದನ್ನು ಕೇಳುವ ಪಾರ್ಥನು ಕ್ಷತ್ರಿಯ ವೀರನೇ ಮಹಾಭಾರತದಲ್ಲಿಯ ವ್ಯಾಧ, ವಿದುರ, ವಿದುಲಾ, ಮುಂತಾದವರು ಭಾಗವತದಲ್ಲಿಯ ಉದ್ಧವ ಮುಂತಾದ ಉದಾಹರಣೆಗಳನ್ನು ನೋಡಿದರೆ ಬ್ರಹ್ಮವಿದ್ಯೆಯ ಜ್ಞಾನವೂ ಅದರ ಅಭ್ಯಾಸವೂ ಎಲ್ಲ ಬಗೆಯ ಜನರಲ್ಲಿ ಹಬ್ಬಿತ್ತೆಂದು ಕಂಡುಬರುವದು, ಗೀತೆಯು ಮಹಾಭಾರತವೆಂಬ ಪುರಾಣದ ಭಾಗವು ಶ್ರುತಿಬಾಹ್ಯವಿದ್ದ ವರ್ಣದವರ

**ಸಲುವಾಗಿಯೇ ಅವರ ಉದ್ಧಾರಾರ್ಥವಾಗಿ ಮಹಾಭಾರತವೆಂಬ "ಪಂಚಮವೇದದ" ಅವತಾರವಾಗಿರುವದು. ಆದುದ**ರಿಂದ ಅದರ ಅಭ್ಯಾಸಮಾಡಲಿಕ್ಕೂ ತದಂತರ್ಗತವಾದ ಗೀತೆಯ ಅಭ್ಯಾಸಮಾಡಲಿಕ್ಕೂ ಸ್ತ್ರೀ ಶೂದ್ರ ಮುಂತಾದವರಿಗೆ ಯಾವ ನಿರ್ಬಂಧವೂ ಇಲ್ಲ. ಈ ರೀತಿ ಗೀತೆಯು ಸಾಮಾನ್ಯಜನರ ಉದ್ಧಾರಕ್ಕಾಗಿ ಬರೆಯಲ್ಪಟ್ಟ ಗ್ರಂಥವು. ಎಲ್ಲರಿಗೂ ತಿಳಿಯಬೇಕು. ಎಲ್ಲರೂ ಅಧ್ಯಾತ್ಮವಿದ್ಯೆಯ ಅಭ್ಯಾಸ ಮಾಡಬೇಕು, ಎಲ್ಲರಿಗೂ ಅತ್ಯುಚ್ಚಧ್ಯೇಯ ಪರಬ್ರಹ್ಮ ಪರಮಾತ್ಮನ ದರ್ಶನವಾಗಬೇಕು. ಎಲ್ಲರೂ ಪರಮಶಾಂತಿಯ ಸವಿಯನ್ನುಣಬೇಕು ಎಂಬ ಸದುದ್ದೇಶದಿಂದ ವ್ಯಾಸರು ಮಾಡಿದ ಪ್ರಯತ್ನವು ಅಂದರೆ ಶ್ರೀ ಕೃಷ್ಣಾರ್ಜುನರ ಸಂವಾದವನ್ನು ಸುಲಭ ಸಂಸ್ಕೃತದಲ್ಲಿ ರೂಪಗೊಳಿಸಿದ್ದು ಇದೇ ಸದುದ್ದೇಶದಿಂದಲ್ಲದೆ ಮತ್ತಿನ್ನೇನು ? ಗೀತೆಯು ಕೇವಲ ಹಿಂದೀಯರ ಗ್ರಂಥವಲ್ಲ ಅದು ಬರಿಯ ಭಾರತೀಯರಿಗಾಗಿ ಹೇಳಿದ ಉಪದೇಶವಲ್ಲ. ಇಡೀ ಮಾನವಜಾತಿಗೆ ಮಾಡಿದ ಉಪದೇಶವಿರುವದು. ವಿಚಾರಮಾಡಿ ನೋಡಲು ಗೀತೆಯನ್ನು ಎಲ್ಲರೂ ಓದಬಹುದು. ಕೇಳಬಹುದು. ಆದರೂ ಅದರ ಯೋಗ್ಯ ಫಲವು ದೊರಕಬೇಕಾದರೆ ಶ್ರೀಕೃಷ್ಣನು ಕೊನೆಗೆ ಹೇಳಿದಂತೆ " ಇದಂ ತೇ ನಾತಪಸ್ಕಾಯ ನಾ ಭಕ್ತಾಯ ಕದಾಚನ ॥ ತಪಸ್ಸಿಲ್ಲದ ಭಕ್ತಿಯಿಲ್ಲದ ಕೇಳುವ ಇಚ್ಛೆಯಿಲ್ಲದ ಹಾಗೂ ನನ್ನನ್ನು ದೂಷಿಸುವವನಿಗೆ ಇದನ್ನು ಹೇಳಕೂಡದು. ನನ್ನ ಮತ್ತು ನನ್ನ ಭಕ್ತರ ವಿಷಯದಲ್ಲಿ ಯಾವನ ಪೂಜ್ಯಬುದ್ಧಿ ಇರುವದಿಲ್ಲವೋ ಇಂಥವನಿಗೆ ಗೀತಾಶಾಸ್ತ್ರವನ್ನು ಮುಟ್ಟಗೊಡಬಾರದು. ಅರ್ಥಾತ್ ಅರ್ಜುನನ ಮನಸ್ಥಿತಿಯು ಗೀತೆಯನ್ನು ಶ್ರವಣಮಾಡುವಾಗ ಅವನಲ್ಲಿ ಧೃಡವಿಶ್ವಾಸವೂ ಆಸ್ಥಾಬುದ್ಧಿಯೂ ಸಂಪೂರ್ಣ ತುಂಬಿ ತುಳುಕುತ್ತಿತ್ತು. ಆದುದರಿಂದಲೇ ಶ್ರೀಕೃಷ್ಣನು " ಗುಹ್ಯಾತ್ ಗುಹ್ಯತರಂ " ಅಂದರೆ ಯಾರಿಗೂ ಹೇಳದೇ ಮರೆಮಾಡಿ ಇಟ್ಟ ಗುಟ್ಟಿನ ಗುಟ್ಟನ್ನು ಅವನಿಗೆ ಹೇಳಿದನು. ಜ್ಞಾನೇಶ್ವರ ಮಹಾರಾಜರು ಅನ್ನುವದೇನಂದರೆ ಶ್ರೋತ್ರಗಳು ನಿಷ್ಕಾಮಉಳ್ಳವರಾಗಿ ಕುಶಾಗ್ರ ಬುದ್ಧಿಯಿಂದ ಈ ಭಗವದ್ಗೀತೆಯ ಅನುಭವವನ್ನು ತೆಗೆದುಕೊಳ್ಳಬೇಕು. (ಹೀಗೆ ಏಕೆ ?) ಅಂದರೆ ಗೀತೆಯಲ್ಲಿಯ ಪರಮತತ್ವವು ಶಬ್ದಾತೀತವಿರುವದರಿಂದ ತಿಳಿಯಲಿಕ್ಕೆ ಕಠಿಣವಿರುತ್ತದೆ. ಈ ಗೀತೆಯಲ್ಲಿಯ ಕಥೆಯನ್ನು ಮಾತನಾಡದೆ ವಿಚಾರಮಾಡಬೇಕು. ಇಂದ್ರಿಯಗಳಿಗೆ ತಿಳಿಯಗೊಡದೇ ಅದರ ಅನುಭವ ತೆಗೆದುಕೊಳ್ಳಬೇಕು. ಮತ್ತು ಅದನ್ನು ಕೇಳುವ ಮೊದಲು ಅದರಲ್ಲಿಯ ರಹಸ್ಯ ತಿಳಿದುಕೊಳ್ಳಬೇಕು. ಭ್ರಮರಗಳು ಕಮಲದಲಕ್ಕೆ ತಿಳಿಯಗೊಡದಂತೆ ಅದರೊಳಗಿನ ಪುಷ್ಪರೇಣುವನ್ನು ಹೇಗೆ ಸೇವಿಸುತ್ತವೆಯೋ ಅದೇ ಪದ್ಧತಿಯಿಂದ ಈ ಗ್ರಂಥದಲ್ಲಿಯ ತತ್ವಸೇವನೆಯನ್ನು ಮಾಡಬೇಕೆಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳಿರುವನು. ಅರ್ಜುನನ ಗುಣಗಳ ಸ್ವಲ್ಪಾಂಶವಾದರೂ ನಮ್ಮಲ್ಲಿರದೇ ಹೋದರೆ ನಾವು ಗೀತೆಯನ್ನು ಕೇಳಲಿಕ್ಕೆ ಅನಧಿಕಾರಿಗಳು. ಅನೇಕ ಗ್ರಂಥಗಳಲ್ಲಿ ಬೇರೆ ಬೇರೆ ಋಷಿಮುನಿಗಳು ವೇದಾಂತಿಗಳು ಗೀತೆಯ ಮಹಾತ್ಮ್ಯವನ್ನು ಪರಿಪರಿಯಿಂದ ವರ್ಣಿಸಿದ್ದಾರೆ. ಅದನ್ನೆಲ್ಲ ಇಲ್ಲಿ ವಿವರಿಸಲು ಸಾಧ್ಯವಿರುವದಿಲ್ಲ.

" **ಯಸ್ಯ ನಿಶ್ವಸಿತೋವೇದಃ** " ಯಾವ ಪರಮಾತ್ಮನ ನಿಶ್ವಾಸವೇ ವೇದವು ಅಂದರೆ ಈ ವೇದಗಳು ಯಾವ ಸರ್ವೇಶ್ವರನ ಯೋಗ ನಿದ್ರೆಯ ಶ್ವಾಸದಲ್ಲಿ ಸಹಜವಾಗಿ ಉದ್ಭವಿಸಿರುವವೋ, ಆ ವೇದಗಳಿಗೆ ಪರಮಾತ್ಮನ ಪ್ರತ್ಯಕ್ಷ ಸ್ವರೂಪದ ಅಂತ ತಿಳಿಯದೆ ನೇತಿ, ನೇತಿ, ಎಂದು ಹಿಂದೆ ತಿರುಗಿದವು. ಜಗದೀಶ್ವರ ಶ್ರೀಕೃಷ್ಣನು ಸ್ವಮುಖದಿಂದ ಈ ಗೀತಾಶಾಸ್ತ್ರವನ್ನು ತನ್ನ ಪ್ರೇಮದ ಶಿಷ್ಯನಾದ ಅರ್ಜುನನಿಗೆ ಉಪದೇಶಿಸಿದ ಈ ಅಮೃತರೂಪ ಗೀತಾಶಾಸ್ತ್ರವು ವೇದಗಳಿಗಿಂತಲೂ ಹೆಚ್ಚಿನದೆಂದು ಹೇಳಲು ಅಭ್ಯಂತರವೇನು ? ಅದರ ವರ್ಣನವನ್ನು ಇನ್ಯಾವ ಶಬ್ದಗಳಿಂದ ಮಾಡಬೇಕು ? ಇದಂತೂ ಇರಲಿ. ಇನ್ನೊಂದುಕಡೆ ಮಹಾರಾಜರು ಗೀತೆಯ ಮಹತ್ಮೆಯ ವಿಷಯವಾಗಿ ಮಾಡಿದ ವರ್ಣನೆಯನ್ನು ಅವರ ಪರಿಭಾಷೆಯಲ್ಲಿಯೇ ಹೇಳುವೆನು ಚಿತ್ತವಿಡಿರಿ " ಸಾಚಚಿ ಬೋಲಾಚೆ ನಹ್ವೆ ಹೇ ಶಾಸ್ತ್ರ । ಪೈ ಸಂಸಾರ ಜಿಣತೇ ಹೆ ಶಸ್ತ್ರ । ಆತ್ಮಾ ಅವತರವಿತೆ ಮಂತ್ರ । ಅಕ್ಷರೇ ಇಯೇ ॥

**ಅರ್ಥ:—** ನಿಜವಾಗಿ ಗೀತೆಯು ಶಬ್ದಪಾಂಡಿತ್ಯ ತೋರಿಸುವ ಮಾತಿನಶಾಸ್ತ್ರವಿರುವದಿಲ್ಲ. ಆದರೆ, ಗೀತಾಶಾಸ್ತ್ರವು ಸಂಸಾರವನ್ನು ಜಯಿಸುವ ಶಸ್ತ್ರವಾಗಿರುವದು. ಬಹಳ ಹೇಳುವದೇನು ? ಈ ಗೀತಾಕ್ಷರಗಳು ಆತ್ಮಭಾವ

ವನ್ನುಂಟು ಮಾಡುವಂಥ ಮಂತ್ರವಿರುತ್ತದೆ. ಇದರಲ್ಲಿ ಪರಮಾತ್ಮಪ್ರಾಪ್ತಿಯನ್ನು ಮಾಡಿಕೊಡುವಂಥ ಸಂಪೂರ್ಣ ಶಕ್ತಿಯಿರುತ್ತದೆಂದು ಹೇಳಿರುವರು. "ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರ ಸಂಗ್ರಹೈಃ। ಗೀತೆಯೊಂದನ್ನೇ ಪೂರಾ ಚನ್ನಾಗಿ ಅಧ್ಯಯನ ಮಾಡಿದರಾಯಿತು. ಮಿಕ್ಕ ಸಾವಿರಾರು ಶಾಸ್ತ್ರಗಳನ್ನು ಓದಿ ಮಾಡುವದೇನು ? ಎಂದು ಹೇಳಿರುವದು ನಿಜವಾಗಿರುವದು. ಆದುದರಿಂದಲೇ ಇದಕ್ಕೆ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು–ಬ್ರಹ್ಮವಿದ್ಯಾಯಾಂ ಯೋಗ ಶಾಸ್ತ್ರೇ ಶ್ರೀ ಕೃಷ್ಣಾರ್ಜುನ ಸಂವಾದೇ ಎಂಬ ಶಬ್ದಗಳು ಪ್ರತಿಯೊಂದು ಅಧ್ಯಾಯದ ಕಡೆಯಲ್ಲಿ ಸಂಕಲ್ಪವಿರುವದು. ಅಂದರೆ ಇದರಲ್ಲಿ ಪರಿಪೂರ್ಣವಾಗಿ ಬ್ರಹ್ಮವಿದ್ಯೆಯೇ ಓತಪ್ರೋತವಾಗಿ ತುಂಬಿಕೊಂಡಿರುವದು. ಗೀತೆಯ ಮೇಲೆ ಭಾವಾರ್ಥದೀಪಿಕೆ ಎಂಬ ಟೀಕೆಯನ್ನು ಮಹಾರಾಜರು ಶಕೆ ೧೨೧೨ ನೇದರಲ್ಲಿ ಬರೆದರು. ಆಗಿನ ಕಾಲಕ್ಕೆ ಮಹಾರಾಷ್ಟ್ರದಲ್ಲಿ ಅನೇಕ ಪ್ರಕಾರದ ರಾಜಕೀಯ ಕ್ರಾಂತಿಗಳು ನಡೆದು ನಾಮಶೇಷವಾಗಲಾರಂಭಿಸಿದ ಭಾಗವತ ಧರ್ಮದ ಸ್ಥಾಪನೆಮಾಡುವದಕ್ಕೋಸ್ಕರ ಭಕ್ತರ ಮೇಲಿನ ಪ್ರೇಮದದೆಶೆಯಿಂದ ಮನಮರುಗಿ ಪಾಂಡುರಂಗನೇ ಜ್ಞಾನೇಶ್ವರರೂಪದಲ್ಲಿ ಪ್ರಕಟವಾದನು. ಮತ್ತು ತನ್ನ ಪುರಾತನ ಭಕ್ತರಿಗೆ ಹೊಸ ಹೆಸರುಗಳನ್ನು ಕೊಟ್ಟು ಅವತಾರ ಮಾಡಿಸಿದನು. ಭಕ್ತರೇ ಆಗಿನ ಕಾಲದ ಸಾಧುಸಂತರ ಸಮುದಾಯವು. ನಾಮದೇವ, ಗೋರಾಕುಂಬಾರ, ಸಾಂವತಾಮಾಳಿ, ನರಹರಿ ಸೋನಾರ, ಚೋಖಾ ಮೇಳಾ, ಜಗಮಿತ್ರ ನಾಗಾ, ವಿಸೋಬಾ ಖೇಚರ, ಜನಾಬಾಯಿ, ಚಾಂಗದೇವ ಇವರೇ ಸಮಕಾಲೀನ ಭಕ್ತಸಂತರು. ಭಾಗವತ ಧರ್ಮದ ಅರ್ಥಾತ್ ಭಕ್ತಿಮಾರ್ಗದ ಯಶೋಧ್ವಜವನ್ನು ಮೆರಿಸಿದವರು. ಜ್ಞಾನೇಶ್ವರ ಮಹಾರಾಜರು ಪೈಠಣದಲ್ಲಿ ಕೋಣನ ಮುಖದಿಂದ ನಾಲ್ಕು ವೇದಗಳನ್ನು ನುಡಿಸಿದರು. ಚಾಂಗದೇವನ ಗರ್ವ ಹರಣ ಮಾಡುವದಕ್ಕೋಸುಗ ಗೋಡೆಯನ್ನು ನಡಿಸಿದರು. ಸ್ವರ್ಗದ ಪಿತರುಗಳನ್ನು ಆಮಂತ್ರಣಮಾಡಿ ಶ್ರಾದ್ಧದ ಭೋಜನಕ್ಕೆ ತರಿಸಿದರು. ಇಂಥ ಅಮಾನುಷಕೃತಿಗಳಿಂದ ಪರಮೇಶ್ವರನ ಅವತಾರವೆಂದು ಜಗತ್ಪ್ರಸಿದ್ಧ ಹೊಂದಿ ಅವರು ಬರೆದ ಗ್ರಂಥವೇ ಜ್ಞಾನೇಶ್ವರಿಯು. ಈ ದಿವ್ಯ ಗ್ರಂಥವನ್ನು ವಾಣಿಯಿಂದ ಓದಿ ಬುದ್ಧಿಯಿಂದ ತಿಳಿದು ಒಗೆದು ಬಿಡುವ ಪುಸ್ತಕವು ಇದಲ್ಲ. ಸಕಲ ಜೀವರುಗಳನ್ನು ಅಧ್ಯಾತ್ಮಮಯ ಮಾಡುವದೇ ಇದರ ಉದ್ದೇಶವಿರುವದರಿಂದ ಅಧ್ಯಾತ್ಮಾನುಭವಕ್ಕೆ ಸಿದ್ಧರಾಗಿ ನಾವು ಜ್ಞಾನೇಶ್ವರಿಯ ಅಭ್ಯಾಸವನ್ನು ಪ್ರಾರಂಭ ಮಾಡಬೇಕು. ಶಾಬ್ದಿಕ ಸಂಸ್ಕೃತ ಜ್ಞಾನವನ್ನು ಮಾಡಿಕೊಂಡು ಎಷ್ಟೋ ಗ್ರಂಥಗಳನ್ನೋದಿ ಪರಿಶೀಲಿಸಿದರೂ ಅಧ್ಯಾತ್ಮಾನುಭವವು ಏನೂ ಇಲ್ಲದೇ ಹೋದರೆ "ಕತ್ತೆಯು ತಾ ಹೊತ್ತರೇನು ಶಾಸ್ತ್ರಂಗಳ್" ಎಂಬಂತೆ ಸ್ಥಿತಿಯಾಗುವದು.

ದ್ವೈತಾದ್ವೈತಗಳ ತಿರುಳು ತಿಳಿಯದೇ ಹುರುಳು ಹೊಳಿಯದೇ ನಾನು ದ್ವೈತ ನಾನು ಅದ್ವೈತ ಎಂದು ಹೇಳುವ ಹಟವಾದಿಗಳು ಆಚಾರ್ಯತ್ರಯರ ಅನುಯಾಯಿಗಳಲ್ಲಿ ತಂಮ ಸಂಪ್ರದಾಯದ ಪುಸ್ತಕಗಳನ್ನು ಮಾತ್ರ ಓದುವರು. ಅನ್ಯ ಸಂಪ್ರದಾಯದ ಗ್ರಂಥಗಳನ್ನು ದೂರ ಸರಿಸಿಬಿಡುವರು. ಓದಿದರೆ ಕೇವಲ ಟೀಕಿಸುವ ಮುದ್ರೆಯಿಂದಲೂ ಅಂಥ ಶ್ರದ್ಧೆಯಿಂದಲೂ ಓದುತ್ತಾರೆ. ಪಂಢರಿ ಕ್ಷೇತ್ರದಲ್ಲಿ ಯಾವ ಜ್ಞಾನದೇವನ ನಾಮಸ್ಮರಣೆಯ ಜಯ ಘೋಷವೇ ನಡೆಯುತ್ತಿರುವದೋ, ಆ ಜ್ಞಾನೇಶ್ವರರ ಹೆಸರು ಉಚ್ಚರಿಸುವದು ನಮ್ಮಲ್ಲಿಯ ವೈಷ್ಣವರಿಗೆ ಸಹನವಾಗುವದಿಲ್ಲ; ಕರ್ಣಕಠೋರವಾಗುವದು. ಅಂದಬಳಿಕ ಜ್ಞಾನೇಶ್ವರಿಗ್ರಂಥವನ್ನೋದುವದು ಅಥವಾ ಶ್ರವಣ ಮಾಡುವದಂತೂ ದೂರೇ ಉಳಿಯಿತು. ಈ ಜ್ಞಾನೇಶ್ವರಿ ಗ್ರಂಥವು ದ್ವೈತವೋ ಅದ್ವೈತವೋ ಇದರಿಂದ ನಾವು ಏನು ಅರಿತುಕೊಳ್ಳಬೇಕೆಂಬುವದೇ ಮಹತ್ವದ ಸಂಗತಿಯಾಗಿರುವದು. ವೇದ ಉಪನಿಷತ್ತುಗಳ ರಹಸ್ಯವನ್ನು ಆಚಾರ್ಯತ್ರಯರು ಮೂರು ಬೇರೆ ಬೇರೆ ಬಗೆಯಾಗಿ ಮಾಡಿದ್ದಾರೆ. ಅವುಗಳಲ್ಲಿ ಯಾವದು ಸರಿಯಾದದ್ದು ಎಂಬದನ್ನು ನಿರ್ಣಯಿಸುವದು ಸಾಮಾನ್ಯ ಕೆಲಸವಲ್ಲ. ಆಚಾರ್ಯತ್ರಯರು ಧರ್ಮಗ್ಲಾನಿ ಆದಾಗ್ಗೆ ಧರ್ಮ ಸಂಸ್ಥಾಪನೆ ಮಾಡುವದರ ದೆಶೆಯಿಂದ ದೇಶಕಾಲಮಾನಾನುಸಾರವಾಗಿ ಮತ ಸ್ಥಾಪನಾ ಮಾಡಿದರು. ಶ್ರೀ ಜ್ಞಾನೇಶ್ವರರು ಎಲ್ಲ ಮತದವರ ಮತ್ತು ಮಾನವೀ ಪ್ರಾಣಿಗಳ ಉದ್ಧಾರಾರ್ಥವಾಗಿ ಅವರ ಅವತಾರವು. ಜೀವದ ಪರಮ ಧರ್ಮ ಅಂದರೆ ಶ್ರೀಹರಿಯ ನಾಮಸಂಕೀರ್ತನೆಯಿಂದ ಭಗವಂತನಲ್ಲಿ ಭಕ್ತಿಯೋಗವನ್ನು ಸಾಧಿಸುವದೇ ಶ್ರೇಷ್ಠ ಉಪಾಯವೆಂದು ಜ್ಞಾನೇಶ್ವರಿ ಗ್ರಂಥದಲ್ಲಿ ಹೇಳಿರು

ವರು. ಭಾಗವತ ಧರ್ಮದ ಪ್ರವರ್ತಕರಾದ ಜ್ಞಾನೇಶ್ವರ ನಾಮದೇವ ಏಕನಾಥ ತುಕಾರಾಮ ಈ ನಾಲ್ಕು ಕಂಬಗಳ ಮೇಲೆ ಮಹಾರಾಷ್ಟ್ರದೊಳಗಿನ ಭಕ್ತಿಪಂಥದ ಧ್ವಾರಕಾ ಅರ್ಥಾತ್ ಪಂಢರಪುರವು ನಿರ್ಮಾಣವಾಗಿರುವದು. ಇದು ಅವಿನಾಶಇದ್ದು ಕಾಲಯಮನಿಂದಲೂ ಮುಳುಗಿಸುವದಾಗಲಾರದು. ಪಂಢರಪುರವು ಭಕ್ತರ ಯುನಿವ್ಹರ್ಸಿಟಿ (University) ವಿಶ್ವವಿದ್ಯಾಲಯ ವಿರುವದು. ಅದರ ಕೆಳಗೆ ಆಳಂದಿ, ದೇವು, ಪೈಠಣ, (College) ಕಾಲೇಜ ಇರುತ್ತವೆ. ಶ್ರೀಕೃಷ್ಣನೆಂದರೆ ವಿಠ್ಠಲನು. ಇವನು ನಂಮ ಉಪಾಸ್ಯ ದೈವತನಾಗಿರುವನು. ರಾಮಕೃಷ್ಣಹರಿನಾಮಸ್ಮರಣವು ಸರ್ವಜಾತಿಯವರ ಸರ್ವ ಮತದವರ ಉಘಡವಾದ ತಾರಕಮಂತ್ರವಿರುವದು. ಬ್ರಾಹ್ಮಣರಿಂದ ಅಂತ್ಯಜರವರೆಗೆ ಸರ್ವರಿಗೆ ತಮ್ಮ ತಮ್ಮ ಸ್ವಧರ್ಮಕ್ಕನುಸರಿಸಿ ಈ ಮಂತ್ರದ ಜಯಘೋಷವನ್ನು ಮಾಡಿ ವಿಠ್ಠಲಪದವನ್ನು ಪ್ರಾಪ್ತಿ ಮಾಡಿಕೊಳ್ಳುವ ಅಧಿಕಾರವದೆ ಎಂಬ ನಿರ್ಣಯವನ್ನು ಶ್ರೀಜ್ಞಾನೇಶ್ವರರು ಸಿದ್ಧಾಂತಮಾಡಿರುವರು. ಶ್ರೀಜ್ಞಾನೇಶ್ವರಿ ಗ್ರಂಥವು ಶ್ರೀಮದಾನಂದ ತೀರ್ಥರ ಭಾಷ್ಯಕ್ಕೂ ಶ್ರುತಿ ಸ್ಮೃತಿಗಳ ಆಶಯಕ್ಕೂ ಯುಕ್ತಿಗೂ ಅನುಭವಕ್ಕೂ ಹೊಂದುವಂಥದಿರುವದೆಂದು ನಿರ್ವಿವಾದವಾಗಿ ಹೇಳಬಹುದು. ಈ ಗ್ರಂಥನಿಧಿಯು ಮಹಾರಾಷ್ಟ್ರದಲ್ಲಿ ಹುಟ್ಟಿ ೬೦೦ ವರ್ಷಗಳಾಗಿ ಹೋದರೂ ಇಂದಿನ ವರೆಗೆ ಕನ್ನಡ ಬಾಂಧವರು ಕನ್ನಡದಲ್ಲಿ ಪರಿವರ್ತಿಸಲು ಯಾರೂ ಯತ್ನಿಸಿರುವದಿಲ್ಲ. ಕನ್ನಡಿಗರಿಗೆ ಜ್ಞಾನೇಶ್ವರಿಯ ಪರಿಚಯವೇ ಇರುವದಿಲ್ಲ. ಇಲ್ಲವೆಂದರೆ ೨-೩ ವರ್ಷಗಳ ಹಿಂದೆ ಶ್ರೀಯುತ ಮೂಡಕಟ್ಟಿ ಮಾಮಲೇದಾರರೊಬ್ಬರೇ ಕನ್ನಡ ಭಾಮಿನಿ ಷಟ್ಪದಿಯಲ್ಲಿ ಜ್ಞಾನೇಶ್ವರಿಯ ಮೇಲೆ ಕವಿತ್ವವನ್ನು ಮಾಡಿರುವರು. ಜ್ಞಾನೇಶ್ವರರ ಮರಾಠಿ ಓವಿಗಳು ಪ್ರಾಸಾದಿಕವಿದ್ದು ದೈವೀಸ್ಫೂರ್ತಿ ಸಂಚಾರವಾದಾಗ ರಚಿಸಲ್ಪಟ್ಟಿರುವವು. ಮೂಡ ಕಟ್ಟಿಯವರು ಮಾಡಿದ ಕವಿತ್ವದಲ್ಲಿ ಜ್ಞಾನೇಶ್ವರಿಯ ಭಾವವನ್ನು ತರಲು ಯತ್ನಿಸಿರುವರು. ಇವರ ಕವಿತ್ವಗಳು ವರ್ಣನೀಯವಿರುವವು ಆದರೆ ಪ್ರಾಸಾದಿಕ ಓವಿಗಳಲ್ಲಿಯ ತಿರುಳು ಈ ಬರಿಯ ಭಾಮಿನಿಷಟ್ಪದಿ ಭಾಷಾಂತರದಿಂದ ಸರಿಯಾದ ಅರ್ಥಬೋಧವಾಗಲಾರದು. ಇವರು ಮೂಲಪ್ರಾಸಾದಿಕ ಓವಿಗಳನ್ನೇ ಲೋಪಗೊಳಿಸಿರುವರು. ಇದು ವ್ಯರ್ಥವಾದ ಶ್ರಮವೇ ಸರಿ. ಅವರೀ ಕೃತ್ಯವು ಸುವರ್ಣದ ಅಲಂಕಾರಗಳಿಗೆ ಬೆಳ್ಳಿಯ ಮಲಮು ಮಾಡಿದಂತೆ ಇರುವದು. ಮತ್ತು ಜ್ಞಾನೇಶ್ವರಿಯ ಪ್ರತಿಯೊಂದು ಅಧ್ಯಾಯದ ಕಡೆಯಲ್ಲಿ "ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥ ದೀಪಿಕಾಯಾಂ" ಅಂಬುವ ಜ್ಞಾನೇಶ್ವರರ ಸಂಕಲ್ಪವನ್ನು ಕಿತ್ತುಹಾಕಿ "ಇತಿ ಶ್ರೀ ಮೂಡಕಟ್ಟಿ ಸುಬ್ಬರಾವಾತ್ಮಜ ರಾಘವೇಂದ್ರರಾಯಕೃತ" ಜ್ಞಾನೇಶ್ವರಿ ಎಂದು ಬರೆದಿದ್ದಾರೆ. ಇದು ಕೆಲವು ಪಂಢರಿ ಸತ್ಪುರುಷರಿಗೆ ಸಾಮಾನ್ಯವೆನಿಸುವದು.

ಅಖಿಲವಿಶ್ವವೇ ಯಾವ ಈ ದಿವ್ಯಗ್ರಂಥವನ್ನು ಕೊಂಡಾಡುತ್ತಿರುವದೋ, ಪರದೇಶದಲ್ಲಿ ಪರಸಂಸ್ಕೃತಿಯವರು ಸಹ ಯಾವ ಗ್ರಂಥವನ್ನು ಮಾನ್ಯಮಾಡಿರುವರೋ ಅಂತಹ ಆ ಜ್ಞಾನೇಶ್ವರೀ ಮಹಾಗ್ರಂಥದ ಕಿಂಚಿತ್ತಾದರೂ ಪರಿಚಯವನ್ನು ನನ್ನ ಕನ್ನಡ ಬಾಂಧವರಿಗೆ ಮಾಡಿಕೊಡಬೇಕೆಂದು ಈ ಸಹಾಸವನ್ನು ಮಾಡಿರುವೆನು. ಆದರೆ ಇದುವರೆಗೆ ಯಾವ ಗ್ರಂಥದ ಎಷ್ಟೋ ಭಾಷಾಂತರಗಳು ಇನ್ನಿತರ ಎಲ್ಲ ರಾಷ್ಟ್ರಭಾಷೆಗಳಲ್ಲಿ ಆಗಿಹೋಗಿರುವದೋ ಆ ಜ್ಞಾನೇಶ್ವರಿ ಕನ್ನಡ ಅನುವಾದವು ನಮ್ಮಲ್ಲಿ ಆಗಬಾರದೆಂದರೆ ಅದು ನಮ್ಮ ಕೇವಲ ಸೋಮಾರಿತನವೇ ಸರಿ. ಅದಕ್ಕಾಗಿ ಈ ಶ್ರೇಷ್ಠ ಜ್ಞಾನೇಶ್ವರಿಯ ಪದ್ಯಗಳನ್ನು ೨೫ ವರ್ಷಗಳ ವರೆಗೆ ಪಠಣ ಪಾರಾಯಣ ಮಾಡಿ ಸಂತರ ಮುಖದಿಂದ ಶ್ರವಣ ಮಾಡಿ ಶ್ರೀ ಜ್ಞಾನೇಶ್ವರರ ಅಮೋಘವಾದ ಕೃಪಾಪ್ರಸಾದದಿಂದಲೇ ಜ್ಞಾನೇಶ್ವರಿಯ (ಓವಿ) ಪದ್ಯಗಳಲ್ಲಿ ಅಡಕವಾಗಿರುವ ಅಮೃತವನ್ನು ಸವಿದು ನನ್ನ ಕನ್ನಡ ಬಂಧುಗಳಿಗೂ ಅದರ ಸ್ವಾದವನ್ನು ಸವಿಸಬೇಕೆಂದು ಈ ಪ್ರಯತ್ನವನ್ನು ಮಾಡಿರುವೆನು. ಮರಾಠೀ ಭಾಷೆಯನ್ನು ಪೂರ್ಣ ಬಲ್ಲ ಪಂಡಿತರು ಕೂಡ ಈ ಜ್ಞಾನೇಶ್ವರಿಯ ಓವಿಗಳ ಅರ್ಥವನ್ನು ಎಷ್ಟು ಸ್ಪಷ್ಟಮಾಡಿ ಹೇಳಿದರೂ ಮೂಲ ಓವಿಗಳಿಂದಾಗುವ ದಿವ್ಯ ಬೋಧವು ಯಾವ ವಿವೇಚನದಿಂದಲೂ ಆಗದು ಎಂದು ಅಭಿಪ್ರಾಯಪಟ್ಟಿರುವರು. ಈ ಓವಿಗಳ ಭಾಷಾಂತರವನ್ನಾಗಲೀ ಸ್ಪಷ್ಟೀಕರಣವನ್ನಾಗಲೀ ಯಾರೇ ಯಾವ ಭಾಷೆಯಲ್ಲಿ ಮಾಡಿದರೂ ಅದು ಮೂಲ ಓವಿಗಳ ಮಹತ್ವವನ್ನು ತೋರಿಸಿ ಅವುಗಳನ್ನು ಅಭ್ಯಸಿಸಿರಿ. ಎಂದು ಹೇಳುವ ಉದ್ದೇಶದಿಂದಲೇ ಹೊರತು ಅವುಗಳನ್ನು ಬಿಟ್ಟು ಭಾಷಾಂತರದಿಂದಲೇ ಸಂತುಷ್ಟರಾಗಿರೆಂದು ಹೇಳಲಿಕ್ಕಲ್ಲ. ನಾನೀಗ

ಆ ಶ್ರೇಷ್ಠ ಓವಿಗಳ ಅಸಕು ಮಸಕು ಪ್ರತಿಬಿಂಬವನ್ನು ಕನ್ನಡದಲ್ಲಿ ತೋರಿಸಲು ಪ್ರಯತ್ನ ಮಾಡಿದ್ದೇನೆ. ಮುಖ್ಯವಾಗಿ ಅದರಲ್ಲಿ ಜಗತ್ಯದ ವಿದ್ವಾಂಸರನ್ನೇ ಬೆರಗುಗೊಳಿಸುವಂಥ ದಿವ್ಯ ವಿಚಾರಗಳು ತುಂಬಿರುವವೆಂದು ಮನಗಂಡು ಅದನ್ನು ನನ್ನ ಕನ್ನಡಿಗರಿಗೆ ಮನವರಿಕೆ ಮಾಡಿಕೊಡಬೇಕೆಂಬುವದೇ ನನ್ನ ಉದ್ಯಶ್ಯ. ಈ ಕೆಲಸವನ್ನು ಕೈಕೊಳ್ಳಬೇಕೆನ್ನುವಷ್ಟರಲ್ಲಿಯೇ ನನಗೆ ಮೂಲವ್ಯಾಧಿ ಮುಂತಾದ ನಾನಾತರದ ರೋಗಗಳು ಅಂಟಿಕೊಂಡವು. ಆ ಕಷ್ಟದಿಂದ ಬಳಲುತ್ತಿರುವೆನು. ಇದಲ್ಲದೇ ಎಲ್ಲಕ್ಕೂ ಮುಖ್ಯವಾದ ಅಡಚಣಿ ಎಂದರೆ ದುಡ್ಡಿನದು. ಮುದ್ರಣಕ್ಕೆ ಬೇಕಾಗುವ ಒಂದು ಸಾವಿರ ರೂಪಾಯಿ ಸುಮಾರು ಹಣವನ್ನು ಎಲ್ಲಿಂದ ತರುವದು, ಎಂಬ ವಿಚಾರದಿಂದ ಮುದ್ರಣಕಾರ್ಯವು ಹಾಗೇ ಮುಂದೆ ಬೀಳುತ್ತ ನಡೆದಿತ್ತು. ಉದಾಶೀನನಾದ ನಾನು ಅಕಸ್ಮಾತ್ತಾಗಿ ಇಲಕಲ್ಲ ಗ್ರಾಮಕ್ಕೆ ಹೋದಾಗ್ಗೆ ಅಲ್ಲಿ ನನ್ನ ಕೆಲಜನ ಉದಾರ ಸದ್ಗೃಹಸ್ಥರು ಪ್ರೋತ್ಸಾಹನೆಯನ್ನೀಯಲು ಒಂದುತರದ ಧೈರ್ಯದಿಂದ ಕೊನೆಗೆ ಸಾಲವಾದರೂ ಚಿಂತೆಇಲ್ಲ ಎಂದು ಧೃಡವಾಗಿ ಈ ಕೆಲಸವನ್ನು ಕೈಕೊಂಡಿರುವೆನು. ಇದೀಗ ಸಿದ್ಧಪಡಿಸಿದ ಜ್ಞಾನೇಶ್ವರೀ ಗ್ರಂಥದ ಕನ್ನಡ ಅನುವಾದದ ಮೊದಲನೆಯ ಒಂಬತ್ತು ಅಧ್ಯಾಯಗಳಿಂದ ಕೂಡಿದ ೧ನೆಯಭಾಗವು ಪೂರ್ಣಹೊಂದಿರುವದು. ಆ ಗ್ರಂಥವು ನಿಮ್ಮೆಲ್ಲರ ಕೈಸೇರಬೇಕಾಗಿದೆ. ಮುಂದಿನ ಭಾಗದಲ್ಲಿ ಉಳಿದ ೯ ಅಧ್ಯಾಯಗಳ ಅರ್ಥವು ಬರುವದು. ಆ ಭಾಗವೂ ಕೂಡ ಈಗಿನಕಿಂತಲೂ ಹೆಚ್ಚು ದೊಡ್ಡದಾಗುವ ಸಂಭವವದೆ. ಅದು ತೀವ್ರ ಮುದ್ರಿಸಿ ಪ್ರಸಿದ್ಧವಾಗುವದು ಕೇವಲ ತಮ್ಮಂಥ ವಾಚಕರ ಆಶ್ರಯವನ್ನೇ ಅವಲಂಬಿಸಿದೆ ಆದುದರಿಂದ ಎಲ್ಲರೂ ಪ್ರಕೃತ ಗ್ರಂಥಕ್ಕೆ ಆಶ್ರಯ ಕೊಟ್ಟು ಮುಂದಿನ ಭಾಗವು ತೀವ್ರ ಹೊರಡುವಂತೆ ಪ್ರೋತ್ಸಾಹನೆಗೊಳಿಸುವಿರೆಂದು ಆಶಿಸುತ್ತೇನೆ.

## ಅಭಾರಪ್ರದರ್ಶನದ ಎರಡೇ ಮಾತುಗಳು

ಶ್ರೀ ಜ್ಞಾನೇಶ್ವರೀಗ್ರಂಥದ ಮುದ್ರಣ ಕಾರ್ಯಕ್ಕೆ ಹಣಕೊಟ್ಟು ಸಹಾಯಮಾಡಿದ ಮಹನೀಯರು

### ಇಲಕಲ್ಲ

| | | | ರೂಪಾಯಿ |
|---|---|---|---|
| ಶ್ರೀಯುತ | ಮ॥ ರಾ॥ | ಓಂಕಾರೆಪ್ಪಾ ವಿರಭದ್ರಪ್ಪಾ ಅರಳಿಕಟ್ಟಿ ಮರ್ಚಂಟ | ೫೧ |
| ,, | ,, | ಯಲ್ಲೂಸಾವಜಿ ನರಸಿಂಗಸಾ ಚವ್ಹಾಣ ಮರ್ಚಂಟ | ೫೧ |
| ,, | ,, | ನಾರಾಯಣ ಸಾವಜಿ ಚವ್ಹಾಣ ಮರ್ಚಂಟ | ೨೫ |
| | ಹರಿಭಕ್ತ | ಹನುಮಂತಪ್ಪಾ ತುಳಜಪ್ಪಾ ಮಿರ್ಜಕರ | ೧೦ |
| | ,, | ಪರಸಪ್ಪಾ ಫಕೀರಪ್ಪಾ ಚವದರಿ | ೫ |
| | | | ೧೪೨ |

### ಗೂಡೂರ

ಶ್ರೀಯುತ ಮ॥ ರಾ॥ ಗಣಪತಸಾ ರಾಜಣಸಾ ಪಾಟೀಲ ಗೂಡೂರ ಇವರು ಬಿನ್ನ ವ್ಯಾಜ ಕೈಗಡ ಕೊಟ್ಟು ಸಹಾಯ ಮಾಡಿದ ರೂಪಾಯಿ ( ೨೦೦ )

ಈ ಉದಾರ ಚರಿತರ ಉಪಕಾರದೆಶೆಯಿಂದಾ ನಾನು ಋಣಿಯಾಗಿದ್ದೇನೆ.

ಕರ್ನಾಟಕ ಪ್ರಿಂಟಿಂಗಪ್ರೆಸ್ಸಿನ ಒಡೆಯರಾದ **ಜಠಾರ ಬಳವಂತರಾಯರೂ** ಅವರ ಚಿರಂಜೀವರಾದ ಮ್ಯಾನೇಜರ **ಅಣ್ಣಾರಾಯರೂ** ಶಾಂತಮನಸ್ಸಿನಿಂದ ತಪ್ಪುತಡೆಗಳಿಲ್ಲದೇ ಅಂದವಾಗಿ ಜ್ಞಾನೇಶ್ವರೀ ಗ್ರಂಥನನ್ನು ಮುದ್ರಿಸಿ ಸಹಾಯ ಮಾಡಿದ್ದರಿಂದ ಅವರ ಉಪಕಾರವನ್ನು ಸ್ಮರಿಸದೇ ಇರಲಾರೆನು.

ಮುಕ್ಕಾಮು **ಧಾರವಾಡ,**
ಆಶ್ವಿನ ಶು ೧೦ (ವಿಜಯದಶಮಿ)
ಶಕೆ ೧೮೫೭
ಸನ್ ೧೯೩೫

ಗ್ರಂಥಕರ್ತ—

**ಶ್ರೀನಿವಾಸ ಕೃಷ್ಣ ಕುಲಕರ್ಣಿ ಸುನಗ,**
**ಶ್ರೀ ವಿಠ್ಠಲಮಂದಿರ ಬಾವಲತ್ತಿ.**

# ಜ್ಞಾನೇಶ್ವರ ಮಹಾರಾಜರ ಚರಿತ್ರೆ



ಶ್ರೀಜ್ಞಾನೇಶ್ವರ ಮಹಾರಾಜರಪೂರ್ವಜರು ಪೈಠಣದಿಂದ ನಾಲ್ಕು ಹರದಾರಿಯ ಮೇಲೆ ಗೋದಾವರೀ ತೀರದಲ್ಲಿರುವ ಆಪೇಗ್ರಾಮದ ಕುಲಕರ್ಣಿಯರು. ಇವರು ಮಧ್ಯಾಂಜಿನ ಶಾಖಾದ ದೇಶಸ್ಥ ಯಜುರ್ವೇದ ಬ್ರಾಹ್ಮಣರು. ಪಂಚಪ್ರವರಾನ್ವಿತ ವತ್ಸಗೋತ್ರವು. ಇವರ ವಂಶದಲ್ಲಿ ಭಗವದ್ಭಕ್ತ ಗೋವಿಂದಪಂತನ ಭಾರ್ಯಾ ಮಿರಾಬಾಯಿ ಇವಳಿಂದ ಅವಳ ೩೫ ನೇ ವರ್ಷಕ್ಕೆ ಭಗವದನುಗ್ರಹದಿಂದ ವಿಠ್ಠಲಪಂತನೆಂಬ ಮಗನು ಹುಟ್ಟಿದನು. ಇವರೇ ಶ್ರೀ ಜ್ಞಾನೇಶ್ವರ ಮಹಾರಾಜರ ಜನಕರು. ಮಿರಾಬಾಯಿಯು ಪೈಠಣದಲ್ಲಿ ದೇವಕುಳೆ ಇವರ ಮನೆತನದವಳು. ಈ ಮನೆತನವು ಇನ್ನೂವರೆಗೆ ಪೈಠಣದಲ್ಲಿರುತ್ತದೆ. ವೇದಮಾತಾ ಗಾಯತ್ರೀ ಪುರಶ್ಚರಣದಿಂದ ಗೋವಿಂದಪಂತನಿಗೆ ವಿಠ್ಠಲಪಂತನೆಂಬ ಮಗನು ಹುಟ್ಟಿದನು. ವಿಠ್ಠಲಪಂತನು ಚಿಕ್ಕಂದಿನಿಂದ ವೈರಾಗ್ಯಶೀಲನಿದ್ದನು. ಅವರ ೬ ನೇ ವರ್ಷದಲ್ಲಿ ವ್ರತಬಂಧವು ಆಯಿತು. ಗಾಯತ್ರಿ ಮಂತ್ರೋಪದೇಶವಾಯಿತು. ಆ ಮೇಲೆ ಅವರು ಪೈಠಣದಲ್ಲಿ ಮಾತುಲಗ್ರಹದಲ್ಲಿಯೇ ಬೆಳೆದು ವೇದಪಠಣ, ಕಾವ್ಯ, ವ್ಯಾಕರಣ ಮುಂತಾದ ವಿದ್ಯಗಳಲ್ಲಿ ನಿಪುಣನಾಗಿ ಪಂಡಿತರಲ್ಲಿ ಇವನ ಗಣನೆಯಾಯಿತು. ಅವನು ತೀರ್ಥಾಟನ ಮಾಡುವುದಕ್ಕೆ ತಂದೆಯ ಅಪ್ಪಣೆಯನ್ನು ಪಡೆದು ಹೊರಟನು. ವಿಠ್ಠಲಪಂತನು ಸಕಲ ಪುಣ್ಯಕ್ಷೇತ್ರಗಳನ್ನು ಸುತ್ತುತ್ತಾ ಆಳಂದಿಗೆ ಬಂದು ಶ್ರೀ ಸಿದ್ಧೇಶ್ವರ ದೇವಾಲಯದಲ್ಲಿ ಉಳಕೊಂಡನು. ಆಲಂದೀ ಗ್ರಾಮದಲ್ಲಿ ಸಿದ್ಧೋಪಂತನೆಂಬ ಸದಾಚಾರಸಂಪನ್ನಜ್ಞಾನಿಪುರುಷನಿದ್ದನು. ಅವನು ೨೪ ಗ್ರಾಮುಗಳ ವತನದಾರಕುಲಕರ್ಣಿಯು ಅವನ ಹೆಂಡತಿ ಉಮಾಬಾಯಿ ಎಂಬವಳು ಧರ್ಮಾನುಕೂಲೆಯಾಗಿದ್ದಳು. ಈ ದಂಪತಿಗಳಿಗೆ ಒಂದು ಉಪವರ ಕನ್ಯೆ ಇತ್ತು. ಅವಳ ಹೆಸರು ರುಕ್ಮಿಣಿಬಾಯಿ. ಅವಳಿಗೆ ವರವನ್ನು ಶೋಧ ಮಾಡುವದರ ದೆಶೆಯಿಂದ ಸಿದ್ಧೋಪಂತನು ಯಾವಾಗಲೂ ಆಲೋಚಿಸುತ್ತಿದ್ದನು. ಅಕಸ್ಮಾತ್ ಆ ಸಿದ್ಧೇಶ್ವರ ದೇವಾಲಯಕ್ಕೆ ಹೋದಾಗ್ಗೆ ಆ ಬ್ರಹ್ಮಚಾರಿಯು ನಿಷ್ಠೆಯನ್ನು ನೋಡಿ ಎಲೈ ಮಹಾತ್ಮನೇ ! ನಿನ್ನ ದೇಶ ಯಾವದು ? ನಿನ್ನ ತಂದೆ ತಾಯಿಗಳು ಇರುವರೇ ? ಇಲ್ಲಿ ಏತಕ್ಕೆ ಬಂದಿರುವಿ ಎಂದು ಕೇಳಿದನು. ಅದಕ್ಕೆ ವಿಠ್ಠಲನು ಪ್ರತ್ಯುತ್ತರವಾಗಿ ಅಯ್ಯಾ ! ನಾನು ಗೋದಾವರಿತೀರದಲ್ಲಿರುವ ಆಪೇಗ್ರಾಮದವನು. ಅಲ್ಲಿ ನನ್ನ ತಾಯಿತಂದೆಗಳಿರುವರು. ನಾನು ತೀರ್ಥಯಾತ್ರಾರ್ಥವಾಗಿ ಹೊರಟು ದ್ವಾರಕೆ ಮೊದಲಾದಪುಣ್ಯ ಕ್ಷೇತ್ರಗಳನ್ನು ನೋಡಿಕೊಂಡು ಪುಣ್ಯ ತೀರ್ಥಗಳಲ್ಲಿ ಸ್ನಾನ ಮಾಡಿ ಇಲ್ಲಿಗೆ ಬಂದಿರುವೆನು ಎಂದನು. ಸಿದ್ಧೋಪಂತನು ಆ ಬ್ರಹ್ಮಚಾರಿಯನ್ನು ತಮ್ಮ ಮನೆಗೆ ಕರೆದುಕೊಂಡು ಹೋಗಿ ಆತನನ್ನು ಸತ್ಕರಿಸಿದನು. ಆ ರಾತ್ರಿ ಸಿದ್ಧೋಪಂತನ ಸ್ವಪ್ನದಲ್ಲಿ ಪಾಂಡುರಂಗನು ಬಂದು, ನಿನ್ನ ಮಗಳನ್ನು ಈ ಬ್ರಹ್ಮಚಾರಿಗೆ ಕೊಟ್ಟು ಮದುವೆಮಾಡು ಎಂದು ಹೇಳಿ ಅದೃಶ್ಯನಾದನು. ಮರುದಿನ ಬೆಳಿಗ್ಗೆ ಆ ಗ್ರಹಸ್ಥನು ಆ ಬ್ರಹ್ಮಚಾರಿ ವಿಠ್ಠಲನನ್ನು ನೋಡಿ, ಭಗವಂತನ ಸ್ವಪ್ನವನ್ನು ತಿಳುಹಿಸಿದನು. ವಿಠ್ಠಲನು ಭಗವದಾಜ್ಞೆಯಂತೆ ಆಗಬಹುದೆಂದು ಒಡಂಬಟ್ಟಮೇಲೆ ಒಂದು ಶುಭಲಗ್ನದಲ್ಲಿ ತನ್ನ ಮಗಳಾದ ರುಕ್ಮಿಣಿಯನ್ನು ಆ ಬ್ರಹ್ಮಚಾರಿಗೆ ಕೊಟ್ಟು ಸಾಲಂಕೃತ ಕನ್ಯಾದಾನವ ಮಾಡಿದನು. ಆಮೇಲೆ ತನ್ನ ಮಗಳನ್ನೂ ಅಳಿಯನನ್ನೂ ಕರೆದುಕೊಂಡು ಪಂಢರಪುರಕ್ಕೆ ಹೋಗಿ ಆಷಾಢಯಾತ್ರೆಯನ್ನು ಮಾಡಿಕೊಂಡು ಪಾಂಡುರಂಗನ ದರ್ಶನದಿಂದ್ಧ ಧನ್ಯರಾಗಿ ಮರಳಿ ಊರಿಗೆ ಬಂದರು. ಕೆಲವು ದಿನಗಳತರುವಾಯ ಸಿದ್ಧೋಪಂತನಿಗೆ ಆರ್ಯರೇ ! ನಾನು ಸೇತುಯಾತ್ರೆಯನ್ನು ಮಾಡಿಕೊಂಡು ಜಾಗ್ರತೆಯಲ್ಲಿ ಬಂದು ಸೇರುವೆನು ಎಂದು ಹೇಳಿ ವಿಠ್ಠಲನು ಅವರ ಅಪ್ಪಣೆಯಂ ಪಡೆದು ರಾಮೇಶ್ವರಕ್ಕೆ ಹೋಗಿ-ಸೇತು ಸ್ನಾನ ಮಾಡಿಕೊಂಡು ಜಾಗ್ರತೆಯಲ್ಲಿ ಮಾವನ ಮನೆಗೆ ಬಂದು ಸೇರಿದನು. ಅಲ್ಲಿಒಂದೆರಡು ದಿವಸವಿದ್ದು ತನ್ನ ಸ್ಥಳಕ್ಕೆ ಹೋಗಿ ತಾಯಿ ತಂದೆಗಳನ್ನು ನೋಡಿಕೊಂಡು ಬರಬೇಕೆಂದು ಹೇಳಲು ಸಿದ್ಧೋಪಂತನು ಸಂತೋಷಪಟ್ಟು ತನ್ನ ಹೆಂಡತಿಯನ್ನೂ ಮಗಳನ್ನೂ ಕರೆದುಕೊಂಡು ಬೀಗರನ್ನು ನೋಡಿಕೊಂಡು

ಬರುವದಕ್ಕೋಸ್ಕರ ತಾನು ಪ್ರಯಾಣ ಮಾಡಿ ಹೊರಟನು. ಜಾಗ್ರತೆಯಲ್ಲಿ ಗೋವಿಂದ ಪಂತನನ್ನು ಕಂಡು ನಡೆದ ಸಮಾಚಾರವನ್ನೆಲ್ಲ ತಿಳಿಸಲು ಅತ್ಯಾನಂದದಿಂದ ಅವರನ್ನು ಸತ್ಕರಿಸಿ ಕೆಲವು ದಿವಸಗಳತನಕ ಇರಿಸಿಕೊಂಡಿದ್ದು ಕಳುಹಿಸಿಕೊಡಲು ಆತನು ಪತ್ನಿಸಹಿತವಾಗಿ ಅಲಂಕಾಪುರಕ್ಕೆ ಬಂದು ಸೇರಿದನು. ಇತ್ತ ವಿಠ್ಠಲನೂ ಅವನ ಹೆಂಡತಿಯೂ ತಾಯಿತಂದೆಗಳಿಗೆ ಭಕ್ತಿಯಿಂದ ಶುಶ್ರೂಷೆ ಮಾಡಿಕೊಂಡಿದ್ದರು. ಕೆಲವು ದಿನಗಳ ತರುವಾಯ ಆ ವೃದ್ಧ ದಂಪತಿಗಳು ಪರಮ ಪದಕ್ಕೆ ಸೇರಿದರು. ಸಿದ್ಧೋಪಂತನು ಈ ಸುದ್ದಿಯನ್ನು ಕೇಳಿ ಅಲ್ಲಿಗೆ ಬಂದು ಅಳಿಯನನ್ನು ನೋಡಿ ಅಯ್ಯಾ! ನೀನು ವೈರಾಗ್ಯದಿಂದಿದ್ದರೆ, ಸಂಸಾರ ನಿರ್ವಹಿಸುವದು, ಕಷ್ಟವಾಗುವದು ನೀನೂ ನಿನ್ನ ಹೆಂಡತಿಯೂ ನಮ್ಮ ಮನೆಗೆ ಬಂದು ಸುಖವಾಗಿರಿ. ಎಂದು ಪ್ರಾರ್ಥಿಸಿದನು. ಅವನ ಮಾತಿಗೆ ಸಮ್ಮತಿಸಿ ಪತ್ನಿಯೊಂದಿಗೆ ಹೊರಟು ಆಲಂದಿಗೆ ಬಂದು ತನ್ನ ಮಾವನಮನೆಗೆ ಬಂದು ಸೇರಿದನು. ಆತನಿಗೆ ದಿನೇದಿನೇ ವೈರಾಗ್ಯವು ಹೆಚ್ಚುತ್ತಾ ಒಂದುದಿನ ತನ್ನ ಹೆಂಡತಿಯನ್ನು ನೋಡಿ ಸತಿಯೇ! ನನಗೆ ಇದುವರೆಗೂ ಮಕ್ಕಳಾಗಿಲ್ಲ. ಮುಂದೆ ಆಗುವದೆಂಬ ಭರವಸೆ ಇಲ್ಲ. ನಾನು ಕಾಶಿಗೆ ಹೋಗಿ ಸನ್ಯಾಸ ತಗೆದುಕೊಳ್ಳಬೇಕೆಂದಿದ್ದೇನೆ ನೀನು ದಯಮಾಡಿ ಅನುಮತಿ ಕೊಡಬೇಕೆಂದನು. ಅವಳು ಪತಿಯ ಮಾತುಗಳನ್ನು ಕೇಳಿ ಚಿಂತಿಸಿ ಅವನಿಗೇನೂ ಉತ್ತರ ಕೊಡದೆ ತನ್ನ ತಂದೆಯಬಳಿಗೆ ಹೋಗಿ ಪತಿಯ ಆಜ್ಞೆಯನ್ನು ತಿಳಿಸಿದಳು. ಅದನ್ನು ಕೇಳಿ ಸಿದ್ಧೋಪಂತನು ಮಗಳೇ ಚಿಂತಿಸಬೇಡ ಪುತ್ರರನ್ನು ಪಡೆದು ಪಿತೃಋಣವನ್ನು ತೀರಿಸುವದಕ್ಕೆ ಮುಂಚೆ ಸನ್ಯಾಸವನ್ನು ತೆಗೆದುಕೊಳ್ಳಕೂಡದೆಂದು ಶಾಸ್ತ್ರದಲ್ಲಿ ಹೇಳಿದೆ. ಇವನು ಆ ಶಾಸ್ತ್ರವನ್ನು ಉಲ್ಲಂಘಿಸುವನೇ ? ನೀನು ಸನ್ಯಾಸಕ್ಕನುಮತಿಕೊಡದೆ ಮೌನವಾಗಿರು. ಎಂದು ಹೇಳಿಕಳುಹಿದನು. ಒಂದುದಿನ ರುಕುಮಾಬಾಯಿ ಮಲಗಿ ನಿದ್ರಿಸುತ್ತಿರುವಾಗ ಅರ್ಧರಾತ್ರಿಯಲ್ಲಿ ವಿಠ್ಠಲನು ಎದ್ದು ಯಾರಿಗೂ ತಿಳಿಯದ ಹಾಗೆ ಹೊರಟು ಪ್ರಯಾಗ ಕ್ಷೇತ್ರಕ್ಕೆ ಹೋಗಿ ಅಲ್ಲಿಂದ ಕಾಶೀ ಕ್ಷೇತ್ರಕ್ಕೆ ಬಂದು ಜ್ಞಾನಸಿದ್ಧಿಯಾದ ರಾಮಾನಂದರ ಚರಣಕ್ಕೆ ಶರಣಾಗತನಾಗಿ ತನಗೆ ಸನ್ಯಾಸವನ್ನು ಕೊಡಿಸಬೇಕೆಂದು ಬೇಡಿಕೊಂಡನು. ಅದಕ್ಕಾತನು ವಿಠ್ಠಲನನ್ನು ನೋಡಿ ಪುತ್ರನನ್ನು ಪಡೆದು ಪಿತೃಋಣವನ್ನು ತೀರಿಸಿದ್ದೀಯಾ ? ನಿನ್ನ ತಾಯಿ ತಂದೆ ಹೆಂಡತಿಗಳಿಗೆ ಯಾವ ಕೊರತೆಯೂ ಇಲ್ಲದೇ ತೃಪ್ತಿಪಡಿಸಿ ಅವರ ಅನುಮತಿಯನ್ನು ಪಡೆದು ಬಂದಿರುವೆಯಾ ? ಎಂದು ಕೇಳಿದನು. ವಿಠ್ಠಲನು ಗುರುಗಳಿಗೆ ಕೈಮುಗಿದು ಸ್ವಾಮೀ ತಮ್ಮ ಅಪ್ಪಣೆಯಂತೆ ಎಲ್ಲವನ್ನೂ ಮಾಡಿ ಬಂದಿದ್ದೇನೆ ಎಂದು ಹೇಳಲು ಅವನ ಮಾತು ನಿಜವೆಂದು ನಂಬಿ ಸ್ವಾಮಿಗಳು ಅವನಿಗೆ ಸನ್ಯಾಸವನ್ನು ಕೊಟ್ಟರು. ಈ ಸುದ್ದಿಯನ್ನು ರುಕುಮಾಬಾಯಿಯು ಕೇಳಿ ದುಃಖದಿಂದ ಗೋಳಾಡುತ್ತಿದ್ದಳು. ಆಸಾಧ್ವಿಯು, ಮನಸನ್ನು ಧೃಡಪಡಿಸಿ ವೈರಾಗ್ಯ ಶೀಲಳಾಗಿ ಅಶ್ವತ್ಥವನ್ನು ಭಯಭಕ್ತಿಯಿಂದ ನಿಯಮಗಳೊಂದಿಗೆ ಪೂಜಿಸುತ್ತಿದ್ದಳು. ಕೆಲವು ದಿನಗಳಮೇಲೆ ಅಶ್ವತ್ಥ ನಾರಾಯಣನಿಗೆ ಆಕೆಯಮೇಲೆ ಕೃಪೆಯುಂಟಾಯಿತು. ಅವಳ ಪತಿಗೆ ಗುರುವಾದ ರಾಮಾನಂದಸ್ವಾಮಿಯು ಶೇತು ಯಾತ್ರೆಗೆ ಹೊರಟು ಬರುವಾಗ ಮಾರ್ಗವಶದಿಂದ ಆಲಂದಿಗೆ ಬಂದು ರುಕುಮಾಬಾಯಿಯು ಪ್ರದಕ್ಷಿಣೆ ಮಾಡುತ್ತಿದ್ದ ಅಶ್ವತ್ಥ ವೃಕ್ಷದ ಕಟ್ಟೆಯಮೇಲೆ ಕುಳಿತುಕೊಂಡರು ರುಕುಮಾಬಾಯಿಯು ಭಯಭಕ್ತಿಗಳಿಂದ ಆ ಯತಿಗೆ ನಮಸ್ಕರಿಸಿದಳು. ನೀನು ಸುಪುತ್ರರನ್ನು ಪಡೆದು ದೀರ್ಘ ಸುಮಂಗಲಿಯಾಗಿ ಬಾಳು. ಎಂದು ಆಶೀರ್ವದಿಸಿದರು. ಆ ಸತಿಯು ಕಿರುನಗೆ ನಕ್ಕಳು. ಸ್ವಾಮಿಯು ಮಗಳೇ ! ಏಕೆ ನಗುತ್ತೀ ಎಂದು ಕೇಳಲು ಆಕೆಯು ಮಹಾತ್ಮನೇ ಪತಿ ಇಲ್ಲದೇ ಮಕ್ಕಳು ಹೇಗೆ ಜನಿಸುವರು ? ನನ್ನ ಪತಿಯು ಸನ್ಯಾಸ ವಹಿಸಿರುವನು. ತಮ್ಮ ಆಶಿರ್ವಾದವು ಭಾಗ್ಯಹೀನಿಯಾದ ನನಗೆ ವಿಫಲವಾಗುವದಲ್ಲ ! ಎಂದು ಚಿಂತಿಸಿ ನಕ್ಕೆನು ಎಂದಳು. ನಡೆದ ಸಮಾಚಾರವನ್ನೆಲ್ಲ ಅವಳ ತಂದೆಯನ್ನು ಕರೆಯಿಸಿ ತಿಳಿದುಕೊಂಡರು. ಇವಳ ಗಂಡನೇ ನನಗೆ ಸುಳ್ಳು ಹೇಳಿದ್ದರಿಂದ ನಾನು ಸನ್ಯಾಸ ದೀಕ್ಷೆಯನ್ನು ಕೊಟ್ಟಿರುವೆನು ಎಂದು ಕಂಡು ಬಂತು ಅಪುತ್ರವಂತರು ಸನ್ಯಾಸ ಪಡೆಯಕೂಡದೆಂದು ಶಾಸ್ತ್ರವಿದೆ. ಇದಕ್ಕೆ ವಿರುದ್ಧವಾಗಿ ಸನ್ಯಾಸ ಪಡೆಯುವವನೂ ಸನ್ಯಾಸ ಕೊಟ್ಟವನೂ ಅಪರಾಧಿಗಳಾಗುವರು. ಎಂದು ಹೇಳಿ ತನ್ನ ತಪ್ಪನ್ನು ಸರಿಮಾಡಿಕೊಳ್ಳಲು ನಾನು ಮರಳಿ ಕಾಸಿಗೆ ಹೋಗುವೆನು. ನಿನ್ನ ಮಗಳನ್ನು ಕರೆದುಕೊಂಡು ಅಲ್ಲಿಗೆ ಬಾ ಎಂದು ಸಿದ್ಧೋಪಂತನಿಗೆ ಹೇಳಿ ಕಾಸಿಗೆ ಹೋದರು. ಆ ಯೋಗಿಯ ಹಿಂದೆಯೇ ಹೊರಟು ಕಾಶೀ ಕ್ಷೇತ್ರಕ್ಕೆ ಹೋಗಿ ಅವರ ಆಶ್ರಮದಲ್ಲಿಯೇ ಇಳಿದುಕೊಂಡರು. ಶ್ರೀರಾಮಾನಂದರು ವಿಠ್ಠಲನನ್ನು ಕರೆಯಿಸಿ ಅಯ್ಯಾ !

ನೀನು ನನ್ನನ್ನು ವಂಚಿಸಿ ಸುಳ್ಳಾಡಿ ಆಶ್ರಮವನ್ನು ಪಡೆದಿಯೋ ಎಂದು ಗದರಿಸಿದನು. ವಿಠ್ಠಲನು ಭಯಕಂಪಿತನಾಗಿ ಕ್ಷಮಿಸಬೇಕೆಂದು ಪಾದಗಳಲ್ಲಿ ಬಿದ್ದನು. ವಿಠ್ಠಲನೇ ನಿನ್ನ ಹೆಂಡತಿಯನ್ನು ಕರೆದುಕೊಂಡು ಬಂದಿರುವೆನು. ಇಕೋ ಆಕೆಯೊಡನೆ ಕೂಡಿ ನಿನ್ನ ಸ್ಥಳಕ್ಕೆ ಹೋಗಿ ಗೃಹಸ್ಥನಾಗಿ ಸುಖದಿಂದಿರು. ನನ್ನ ಗುರುವಾಜ್ಞೆಯನ್ನು ಪರಿಪಾಲಿಸು ನಿನ್ನಿಂದ ನಿನ್ನ ಹೆಂಡತಿಯಲ್ಲಿ ದೇವತಾಂಶರಾದ ತ್ರಿಮೂರ್ತಿಗಳೇ ಜನಿಸುವರು ಅವರಿಂದ ಜಗದುದ್ಧಾರವಾಗುವದು. ನನ್ನ ಅಂತರ್ಯಾಮಿಯಾದ ಶ್ರೀರಾಮಚಂದ್ರನೇ ನನ್ನ ಬಾಯಿಯಿಂದ ಹೊರಡಿಸುದುದರಿಂದ ನನ್ನ ಮಾತು ಎಂದಿಗೂ ವ್ಯರ್ಥವಾಗುವದಿಲ್ಲ ಪಾಂಡುರಂಗನು ಸ್ವಪ್ನದಲ್ಲಿ ಒಂದು ರುಕುಮಾಬಾಯಿಯನ್ನು ನಿನಗೆ ಮದುವೆಮಾಡಿಕೊಡೆಂದು ನಿಮ್ಮ ಮಾವನಿಗೆ ನಿಯಮಿಸಿದಾಗ ನಿನ್ನಿಂದ ದೇವತಾಂಶರಾದ ನಾಲ್ವರು ಭಕ್ತರು ಅವತರಿಸಬೇಕೆಂದು ಅನುಗ್ರಹಿಸಿರುವನು. ಈ ಸಂದರ್ಭವನ್ನು ಯೋಚಿಸಿ ನೀನು ಗೃಹಸ್ಥನಾಗಿ ಮಕ್ಕಳನ್ನು ಪಡೆ. ಇದರಿಂದ ನಿನಗೆ ಪಾಪವಿಲ್ಲ ಎಂದು ಹೇಳಿ ಆತನೊಂದಿಗೆ ರುಕುಮಾಬಾಯಿಯನ್ನು ಅಲಂಕಾಪುರಕ್ಕೆ ಕಳಿಸಿದನು. ವಿಠ್ಠಲನಿಗೆ ಆ ಸಾಧ್ವಿಯಲ್ಲಿ ಮೂವರು ಗಂಡುಮಕ್ಕಳೂ ಒಬ್ಬ ಹೆಣ್ಣುಮಗಳೂ ಹುಟ್ಟಿದರು.

## ಶ್ರೀಜ್ಞಾನೇಶ್ವರಾದಿ ಸಂಣಮಕ್ಕಳ ಜನ್ಮಕಾಲವು

ಅವರಲ್ಲಿ ಹಿರಿಯ ಮಗ ನಿವೃತ್ತಿದೇವನು ಶ್ರೀಸದಾಶಿವಾಂಶದಿಂದಲೂ ಎರಡನೇಯವನಾದ ಜ್ಞಾನದೇವನು ವಿಷ್ಣುವಿನ ಅಂಶದಿಂದಲೂ ಕಿರಿಯವನಾದ ಸೋಪಾನದೇವನು ಬ್ರಹ್ಮನ ಅಂಶದಿಂದಲೂ ಕಡೆಯಮಗಳಾದ ಮುಕ್ತಾಬಾಯಿಯು ಯೋಗಮಾಯಾಂಶದಿಂದಲೂ ಅವತರಿಸಿದರು ನಿವೃತ್ತಿನಾಥರು ಶಕೆ ೧೧೯೫ ರಲ್ಲಿ ಮತ್ತು ಶ್ರೀ ಜ್ಞಾನೇಶ್ವರರು ಶಕೆ ೧೧೯೭ ಯುವನಾಮ ಸಂವತ್ಸರ ಶ್ರಾವಣ ಕೃಷ್ಣಾಷ್ಟಮಿ ಬುಧವಾರ ರೋಹಿಣಿ ನಕ್ಷತ್ರದ ಮಧ್ಯರಾತ್ರಿಯಲ್ಲಿ ಜನಿಸಿದರು ಶ್ರೀಕೃಷ್ಣನ ಜನ್ಮವಾದರೂ ಇದೇ ಸುಮುಹೂರ್ತದ ಮೇಲೆ ಆಗಿರುವದು ಸೋಪಾನದೇವರು ಮುಕ್ತಾಬಾಯಿಯವರು ಎರಡೆರಡು ವರ್ಷದ ಅಂತರದಿಂದ ಜನಿಸಿದರು. ಈ ನಾಲ್ಕು ಮಕ್ಕಳು ನಾಲ್ಕು ಸೂರ್ಯರೇ ಭೂಮಿಯ ಮೇಲೆ ಪ್ರಗಟವಾಗಿರುವರೆಂದು ಅಥವಾ ಚತುರ್ವಿಧ ಪುರುಷಾರ್ಥವೇ ಸಾಕಾರರೂಪದಿಂದ ಅವತರಿಸಿದರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ವಿಠ್ಠಲ ಪಂತನು ಅಕಾಲದಲ್ಲಿ ಸನ್ಯಾಸ ತೆಗೆದುಕೊಂಡದ್ದರಿಂದ ರುಕ್ಮಿಣಿಬಾಯಿಗೆ ೧೨ ವರ್ಷ ಘೋರವಾದ ತಪಶ್ಚರ್ಯವನ್ನು ಮಾಡುವ ಸಂಧಿಯು ದೊರಕಿತು. ವಿಠ್ಠಲಪಂತನಂಥ ವೈರಾಗ್ಯಶೀಲ ತಂದೆಯು ಮಹಾಪತಿವ್ರತಾ ಶಿರೋಮಣಿಯಾದ ಮಾತೋಶ್ರೀಯ ಉದರದಲ್ಲಿ ಜ್ಞಾನೇಶ್ವರಾದಿ ಬ್ರಹ್ಮನಿಷ್ಠರು ಜನಿಸಿದರು. ಅವರು ತಮಗೆ ಯೋಗ್ಯರಾದ ತಾಯಿತಂದೆಗಳನ್ನು ಹುಡುಕುತ್ತಿದ್ದರು. ಅವರಿಗೆ ಎಲ್ಲಿಯೂ ಕಾಣಲಿಲ್ಲ ಕಾರಣಾ, ವಿಠ್ಠಲರುಕ್ಮಿಣಿಬಾಯಿಗೆ ತೀವ್ರ ತಪಶ್ಚರ್ಯದ ಸಂಧಿಯನ್ನು ಅನಾಯಾಸವಾಗಿ ಸಾಧಿಸಿ ಕೊಟ್ಟು ಅವರ ಪರಮ ಪವಿತ್ರವಾದ ಉದರದಲ್ಲಿ ಜನ್ಮತೆಗೆದುಕೊಂಡರು. ಕಾಮನಾತ್ಯಾಗವಾದ ಸನ್ಯಾಸದ ಹೊಟ್ಟೆಯಲ್ಲಿಯೇ ಜ್ಞಾನವು ಜನ್ಮಹೊಂದುವದು. ಇದು ಯುಕ್ತವಾದದ್ದೇ.

" ಶುಚೀನಾಂ ಶ್ರೀಮತಾಂ ಗೇಹೇ ಯೋಗ ಭ್ರಷ್ಟೋಽಭಿಜಾಯತೇ ।
ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ ॥ ಭ. ಗೀ. ಅ. ೬

ಯೋಗಭ್ರಷ್ಟ ಮಹಾತ್ಮರು ದೈವಿಸಂಪತ್ತಿಯಿಂದ ಶ್ರೀಮಂತ ಅಥವಾ ಪವಿತ್ರಕುಲದಲ್ಲಿ ನಿಷ್ಕಾಮಿಯುಳ್ಳ ತಾಯಿತಂದೆಗಳ ಹೊಟ್ಟೆಯಲ್ಲಿಯೇ ಜನ್ಮತೆಗೆದುಕೊಳ್ಳುತ್ತಾರೆ. ಈ ಸರ್ವೋತ್ಕೃಷ್ಟವಾದ ಸಿದ್ಧಾಂತಕ್ಕೆ ಅನುಸರಿಸಿ ಶ್ರೀ ಜ್ಞಾನೇಶ್ವರಾದಿ ಪ್ರಭೃತಿಗಳು ಜಗತ್ತಿನ ಜಡಜೀವರ ಉದ್ಧಾರಾರ್ಥವಾಗಿ ಶುಚಿ ಮತ್ತು ಶ್ರೀಮಂತ ಮಾತಾಪಿತರರನ್ನು ಹುಡುಕಿ ಪಿತರರಿಗೆ ಅನುರೂಪವಾದ ಪುತ್ರರು ಪುತ್ರರಿಗೆ ಅನುರೂಪವಾದ ತಾಯಿತಂದೆಗಳ ಉದರದಲ್ಲಿ ಜನ್ಮತೆಗೆದುಕೊಂಡರು. ತಪಾಚರಣೆಯು ನಿರ್ವಿಷಯವಾಸನೆಯು ಲೋಕೋತ್ತರ ಇರದ ಹೊರತು ವಿಭೂತಿಗಳ ಜನ

ಕತ್ವವು ಎಂದಿಗೂ ಬರಲಾರದು. ಈ ದೇವತಾಂಶ ಸಂಭೂತ ಮಕ್ಕಳು ಹುಟ್ಟಿ ದಿನದಿನೆ ಪ್ರವರ್ಧಮಾನವಾಗುತ್ತ ಬಂದರು. ಸ್ವಜಾತಿಯ ಬಂಧುಜನರಲ್ಲಿ ಅನೇಕ ಬ್ರಾಹ್ಮಣರು ಈ ಹುಡುಗರನ್ನು ಸನ್ಯಾಸಿಯ ಮಕ್ಕಳೆಂದು ನಿಂದಿಸಿ ಬಹಿಷ್ಕಾರ ಹಾಕಿದರು. ಊರ ಹೊರಗೆ ಇರಿಸಿದರು. ಅನೇಕ ಕಷ್ಟನಷ್ಟಗಳನ್ನು ಸೋಸಬೇಕಾಯಿತು. ಆಗ, ರುಕ್ಮಿಣಿಬಾಯಿಯು ತಂನ ಪತಿಯನ್ನು ನೋಡಿ ನಾಥ! ನಮ್ಮ ಮಕ್ಕಳಿಗೆ ವ್ರತಬಂಧವು ಇಲ್ಲದೆ ಇರುವದರಿಂದ ನನಗೆ ತುಂಬ ವ್ಯಸನವಾಗಿದೆ ಎಂದಳು. ಆಗ ವಿಠ್ಠಲನು ತನ್ನ ಮಕ್ಕಳನ್ನೇ ಕರೆದುಕೊಂಡು ಬ್ರಾಹ್ಮಣ ಸಭೆಗೆ ಹೋಗಿ ನಮಸ್ಕರಿಸಿ ವೇದಮೂರ್ತಿಗಳಿರಾ! ನನ್ನ ಅಪರಾಧವನ್ನು ಕ್ಷಮಿಸಿ ನನಗೆ ಪ್ರಾಯಶ್ಚಿತವನ್ನು ವಿಧಿಸಿ ನನ್ನ ಮಕ್ಕಳಿಗೆ ವ್ರತಬಂಧಮಾಡಿಸಬೇಕೆಂದು ಬೇಡಿಕೊಂಡನು. ಅವರು ಸ್ವಲ್ಪಾದರೂ ದಯವಿಲ್ಲವೇ, ಎಲೈ ಭ್ರಷ್ಟನೇ! ನಿನಗೆ ಪ್ರಾಯಶ್ಚಿತ್ತವು ಮರಣವೇ ಹೊರ್ತು ಮತ್ತೊಂದು ಇಲ್ಲವು. ನಿಮ್ಮ ಶರೀರಗಳನ್ನು ತ್ರಿವೇಣೀಸಂಗಮಗಳಲ್ಲಿ ತಳ್ಳಿಬಿಡಬೇಕು. ಎಂದು ಹೇಳಿದರು. ಉಭಯ ದಂಪತಿಗಳು ಬ್ರಾಹ್ಮಣರ ಆಜ್ಞಾನುಸಾರವಾಗಿ ವ್ಯಸನಗೊಂಡು ಮಕ್ಕಳನ್ನು ಬಿಟ್ಟು ಗಂಗೆಯಲ್ಲಿ ತಮ್ಮ ದೇಹ ಅರ್ಪಣಮಾಡಿದರು. ಮುಂದೆ ಕೆಲವು ದಿವಸಗಳ ಮೇಲೆ ನಿವೃತ್ತಿನಾಥ ಮೊದಲಾದವರು ಬ್ರಾಹ್ಮಣರ ಬಳಿಗೆ ಬಂದು ನಮ್ಮ ತಂದೆತಾಯಿಗಳು ನಿಮ್ಮ ಆಜ್ಞಾನುಸಾರವಾಗಿ ದೇಹಾಂತ ಪ್ರಾಯಶ್ಚಿತ್ತವನ್ನು ಪಡೆದರು. ಇನ್ನಾದರೂ ನಮಗೆ ಮುಂಜಿವಿಯನ್ನು ಮಾಡಿ ಗಾಯತ್ರೀ ಮಂತ್ರೋಪದೇಶವನ್ನು ಕೊಟ್ಟು ಉದ್ಧರಿಸಬೇಕೆಂದು ಬೇಡಿಕೊಂಡರು. ಆ ನಿರ್ದಯರಾದ ಬ್ರಾಹ್ಮಣರು ಹೀಗೆ ಮಾಡಲು ಶಾಸ್ತ್ರಾಧಾರ ವಿರುವದಿಲ್ಲ. ನೀವು ಪೈಠಣಕ್ಕೆ ಹೋಗಿರಿ. ಅಲ್ಲಿ ಶಾಸ್ತ್ರಜ್ಞ ಬ್ರಾಹ್ಮಣರು ಬಹು ಮಂದಿ ಇರುವರು. ಅವರು ಯಾವ ರೀತಿ ಪ್ರಾಯಶ್ಚಿತ್ತ ಮಾಡಿದರೆ ನೀವು ಶುದ್ಧರಾಗುವಿರೆಂದು ಹೇಳುವರೋ ಅದನ್ನು ಅವರಿಂದ ಬರೆಯಿಸಿಕೊಂಡು ಬಂದರೆ ಅದರಂತೆ ನಡೆದುಕೊಳ್ಳುವೆವೆಂದು ಹೇಳಿದರು. ಆಗ ನಿವೃತ್ತಿದೇವ ಮೊದಲಾದವರು ಪೈಠಣಕ್ಕೆ ಹೋಗಿ ಬ್ರಾಹ್ಮಣ ಸಭೆಯಲ್ಲಿ ಯಾವದ್ವೃತ್ತಾಂತವನ್ನು ಶ್ರುತಪಡಿಸಿದರು. ನಿವೃತ್ತಿನಾಥರು ಸದ್ಗತಿತಾಂತಃಕರಣದಿಂದ

ಸಮಸ್ತ ಸಂಪತ್ಸಮವಾಪ್ತ ಹೇತವಃ ॥ ಸಮುತ್ಥಿತಾಪತ್ಕುಲ ಧೂಮಕೇತವಃ ।
ಅಪಾರ ಸಂಸಾರ ಸಮುದ್ರಸೇತವಃ । ಪುನಂತುಮಾಂ ಬ್ರಾಹ್ಮಣಪಾದ ಪಾಂಸವಃ ॥ ೧ ॥

ಹೀಗೆ ಅಂದು ಬ್ರಹ್ಮವೃಂದಕ್ಕೆ ಸಾಷ್ಟಾಂಗ ನಮಸ್ಕಾರಮಾಡಿದರು. ಬ್ರಹ್ಮಸಭೆಯಲ್ಲಿ ದೊಡ್ಡ ದೊಡ್ಡ ವೈದಿಕರು ಶಾಸ್ತ್ರಜ್ಞರು ಶ್ರುತಿ ಸ್ಮೃತ್ಯಾಧ್ಯಯನದಿಂದ ಪಂಡಿತರೆನಿಸಿಕೊಂಡ ನೂರಾರು ಮಂದಿ ಬ್ರಾಹ್ಮಣರು ಸಭಾಸ್ಥಾನಕ್ಕೆ ಬಂದು ಕುಳಿತರು. ಈ ನಾಲ್ಕೂ ಸಂಣ ಮಕ್ಕಳ ಮುಖದಲ್ಲಿ ದಿವ್ಯತೇಜವು ಹೊಳೆಯುತ್ತಿತ್ತು, ಆದರೆ ಮಾಡುವದೇನು, ನಿಷ್ಕರುಣಿಗಳಾದ ಆ ಬ್ರಾಹ್ಮಣರು ಸನ್ಯಾಸಿಗಳ ಮಕ್ಕಳಿಗೆ ಮುಂಜಿವೆಯನ್ನು ಮಾಡಲಿಕ್ಕೆ ಧರ್ಮಶಾಸ್ತ್ರದಲ್ಲಿ ಎಲ್ಲಿಯೂ ವಿಧಿ ಹೇಳಿರುವದಿಲ್ಲ, ಪ್ರಾಯಶ್ಚಿತ್‌ದಿಂದ ನಿಮ್ಮನ್ನು ಪಾವನರನ್ನಾಗಿ ಮಾಡಲು ಬರುವಂತಿಲ್ಲ. ನೀವು ಜಿತೇಂದ್ರಿಯರಾಗಿ ಇರ್ರಿ. ಲಗ್ನಮಾಡಿಕೊಂಡು ಸಂಸಾರ ವಿಸ್ತಾರವನ್ನು ಮಾಡಬೇಡಿರಿ. ಭಗವಂತನಿಗೆ ಶರಣಾಗತರಾಗಿ ಸರ್ವ ಭೂತ ಮಾತ್ರಗಳಲ್ಲಿ ಭಗವದ್ಭಾವವನ್ನಿಟ್ಟು ಹರಿಚಿಂತನದಲ್ಲಿ ಕಾಲ ಕಳೆಯಿರಿ. ಎಂದು ಬ್ರಾಹ್ಮಣರ ಮುಖದಿಂದ ಈ ನಿರ್ಣಯವನ್ನು ಕೇಳಿ ನಿವೃತ್ತಿನಾಥರಿಗೆ ಜ್ಞಾನೇಶ್ವರರಿಗೆ ಪರಮ ಸಂತೋಷವಾಯಿತು. ಯಾರಿಗೆ ವಿಷಯದ ಸ್ಮರಣವೇ ಇಲ್ಲ ಅವರಿಗೆ ವಿಷಯ ಸೇವನೆಯನ್ನು ಬಿಟ್ಟು ಬಿಡು ಎಂದು ಹೇಳುವದು ಅದು ಅವರಿಗೆ ಶಿಕ್ಷೆಯೆನಿಸದು. ನಾಲ್ಕು ಮಂದಿ ಅಣ್ಣ ತಮ್ಮಂದಿರು ಅಜನ್ಮ ಬ್ರಹ್ಮಚರ್ಯ ವ್ರತಸ್ಥರಾಗಿದ್ದರು. ಜನ್ಮ ಪ್ರಸಂಗದಲ್ಲಿ ಅವರು ಸ್ತ್ರೀ ದೇಹವನ್ನು ಸ್ಪರ್ಶ ಮಾಡಿದ್ದರಲ್ಲದೇ ಅವರು ಅನಂತರ ಸರ್ವಜನ್ಮದಲ್ಲಿ ಸ್ತ್ರೀಸ್ಪರ್ಶವಿಲ್ಲದೇ ತಮ್ಮ ಜನ್ಮವನ್ನು ಮಡಿಯಿಂದ ಪವಿತ್ರ ವಾಗಿಟ್ಟುಕೊಂಡರು. ಬ್ರಾಹ್ಮಣರ ಮುಖದಿಂದ ಹೊರಟ ನಿರ್ಣಯವನ್ನು ಕೇಳಿದಕೂಡಲೇ ನಾಲ್ಕು ಮಂದಿ ಅಣ್ಣ ತಮ್ಮಂದಿರಗೆ ಮನಸಿನೊಳಗಿನ ಮಾತೇ ದೊರಕಿದಂತಾಯಿತು. ಅದರಿಂದ ಅವರಿಗೆ ಸಂತೋಷವಾಗುವದೇನಾಶ್ಚರ್ಯ?

## ॥ ಶ್ರೀ ಜ್ಞಾನೇಶ್ವರ ಪ್ರಸನ್ನ ॥

ನಮಾಮಿ ಸದ್ಗುರುಂ ಶಾಂತಂ ಸಚ್ಚಿದಾನಂದ ವಿಗ್ರಹಂ ।
ಪೂರ್ಣ ಬ್ರಹ್ಮ ಪರಾನಂದಮೀಶಂ ಆಲಂದಿ-ವಲ್ಲಭಮ್ ॥



ಜ್ಞಾನೇಶೋ ಭಗವಾನ್ ವಿಷ್ಣು । ನಿವೃತ್ತಿರ್ಭಗವಾನ್ ಹರಃ ।
ಸೋಪಾನೋ ಭಗವಾನ್‌ಬ್ರಹ್ಮಾ । ಮುಕ್ತಾಖ್ಯಾ ಬ್ರಹ್ಮಚಿತ್ಕಲಾ ॥ ೧ ॥

ಜ್ಞಾನೇಶ್ವರ ಮಹಾರಾಜರು ಕೋಣನ ಬಾಯಿಂದ ವೇದ ನುಡಿಸಿದುದು.

## ಬ್ರಹ್ಮ ಸಮಾಜವು

ಮತ್ತು

## ಪೈಠಣದ ಚಮತ್ಕಾರವು.

ಇಷ್ಟರಲ್ಲಿ ಬ್ರಹ್ಮವೃಂದದಲ್ಲಿ ಯಾರೋ ಕುಟಿಲರು, ಜ್ಞಾನದೇವನನ್ನು ನೋಡಿ ಅಯ್ಯಾ ನಿನಗೆ ಹೆಸರನ್ನು ಕೊಟ್ಟವರಾರು ? ವೇದಶಾಸ್ತ್ರಗಳನ್ನು ನೀನು ಸಾಂಗವಾಗಿ ಅಭ್ಯಾಸಮಾಡಿರುವೆಯಾ ? ಎಂದು ಅಪಹಾಸ್ಯ ಮಾಡುತ್ತಿದ್ದರು. ಆ ವೇಳೆಯಲ್ಲಿ ಒಬ್ಬ ತುರುಕನು ಕೋಣನ ಮೇಲೆ ಚರ್ಮದ ಕಪಾಲಿಯನ್ನು ಹೇರಿಕೊಂಡು ಬರುತ್ತಿದ್ದನು. ಆ ಬ್ರಾಹ್ಮಣರು ಜ್ಞಾನದೇವನನ್ನು ನೋಡಿ ಈ ಕೋಣನಿಗೆ ಜ್ಞಾನೇಶ್ವರನೆಂದು ನಾಮಕರಣ ಮಾಡಿದೆವು ಎಂದರು. ಜ್ಞಾನದೇವನು ಬ್ರಾಹ್ಮಣರಿಗೆ ಕೈಮುಗಿದು ವಿಪ್ರರೇ ! ಈ ಕೋಣನಿಗೂ ನನಗೂ ಯಾವ ಭೇದವೂ ಇಲ್ಲ. ಸಮಸ್ತ ಪ್ರಾಣಿಗಳಲ್ಲಿಯೂ ವಾಸವಾಗಿರುವ ಪರಮಾತ್ಮನು ಈ ಕೋಣನಲ್ಲಿಲ್ಲವೇ ? ಎಂದನು. ಆ ವಿಪ್ರರು ಅವನನ್ನು ನೋಡಿ ನಿನ್ನ ಅಧ್ಯವಸಾಯವು ನಿಜವಾಗಿದ್ದರೆ ಈ ಕೋಣನನ್ನು ಹೊಡೆದರೆ, ನಿನ್ನ ಮೈಯಲ್ಲಿ ಗಾಯುಗಳು ಕಾಣಬರಬೇಕಲ್ಲವೇ? ಎಂದರು. ನಿಜವೆಂದು ಜ್ಞಾನದೇವನು ಒಪ್ಪಿದನು. ಬ್ರಾಹ್ಮಣರು, ಆ ತುರುಕನಿಂದ ಕೋಣನನ್ನು ಒಳಿತಾಗಿ ಬಾರಕೋಲಿನಿಂದ ಹೊಡೆಯಿಸಿದರು. ಆ ಗಾಯುಗಳೆಲ್ಲ ಜ್ಞಾನದೇವನ ಬೆನ್ನಿನಮೇಲೆ ಕಾಣಬಂದವು. ಆದರೂ ಬ್ರಾಹ್ಮಣರಿಗೆ ತೃಪ್ತಿ ಇಲ್ಲದೇ ‘‘ ಜ್ಞಾನದೇವಾ ! ನಿನಗೆ ನಿನ್ನ ಸರ್ವಕುಲವನ್ನು ಪಾವನಮಾಡಿಕೊಳ್ಳುವದಿದ್ದರೆ ಈ ಕೋಣನ ಮುಖದಿಂದ ವೇದವನ್ನು ನುಡಿಸು, ಎಂದರು. ಜ್ಞಾನದೇವನು ಎದ್ದು ನಿಂತು ಬ್ರಾಹ್ಮಣರಿಗೆ ಅಭಿವಂದನ ಮಾಡಿ ಅನ್ನುತ್ತಾನೆ— ತಾವು ಭೂದೇವರೇ ಇದ್ದೀರಿ. ನಿಮ್ಮ ಮುಖದಿಂದ ಹೊರಟ ಅಕ್ಷರಗಳು ಎಂದಿಗೂ ನಿಷ್ಫಲವಾಗಲಾರವು ಎಂದು ಹೇಳಿ, ತನ್ನ ಪದ್ಮಕರದಿಂದ ಕೋಣನ ತಲೆಯನ್ನು ಸವರಿ ನೀನು ವೇದಗಳನ್ನುಚ್ಚರಿಸಿ ಈ ಬ್ರಾಹ್ಮಣರಿಗೆ ಸಂತೋಷವನ್ನುಂಟು ಮಾಡು ಎಂದು ನಿಯಮಿಸಿದನು. ಕೂಡಲೇ ಆ ಕೋಣವು ಬಾಯಿ ತೆರೆದು ನಾಲ್ಕು ವೇದಗಳನ್ನು ಉಚ್ಚರಿಸತೊಡಗಿತು. ಈ ಆಶ್ಚರ್ಯವನ್ನು ನೋಡಿ ಬ್ರಾಹ್ಮಣರು ಕೋಲಾಹಲ ಧ್ವನಿಯಿಂದ ಕೂಗಿಕೊಳ್ಳಲಿಕ್ಕೆ ಹತ್ತಿದರು. ಆ ಕೋಣನ ಮುಖದಿಂದ ವೇದ ಉಚ್ಚಾರವು ಸ್ವಚ್ಛವಾಗುತ್ತಿತ್ತು. ಸ್ವರವರ್ಣವು ಎಳ್ಳಷ್ಟು ತಪ್ಪುತ್ತಿದ್ದಿಲ್ಲ. ದೊಡ್ಡ ದೊಡ್ಡ ವೇದ ಪಾಠಕರು ನಾಚಿಕೆಯಿಂದ ಕೆಳಗೆ ಮೋರೆಯನ್ನು ತಗ್ಗಿಸಿಕೊಂಡು ನಿಂತಿದ್ದರು. ಒಂದು ಪ್ರಹರದ ವರೆಗೆ ವೇದಘೋಷವಾಗುತ್ತಿತ್ತು. ಇಂಥ ಅಪೂರ್ವವಾದ ಪ್ರಸಂಗವು ಯಾರು ಯಾವ ಕಣ್ಣಿನಿಂದ ಪ್ರತ್ಯಕ್ಷ ನೋಡಿರುವರು, ಆ ಕಣ್ಣುಗಳೇ ಧನ್ಯವೆಂದು ಹೇಳಬೇಕು. ಇಂಥ ಅಪೂರ್ವವಾದ ಚಮತ್ಕಾರವನ್ನು ನೋಡುವ ಭಾಗ್ಯವು ಶಕೆ ೧೨೧೮ ಮಾಘ ಶುದ್ಧ ೫ ಮಿತಿಗೆ ಪೈಠಣದಲ್ಲಿ ಗೋದಾವರೀ ನದಿಯ ದಂಡೆಯಮೇಲೆ ಕಂಡುಬಂದಿತು. ಶ್ರೀಜ್ಞಾನೇಶ್ವರರು ಸಾಕ್ಷಾತ್ ವಿಷ್ಣುವಿನ ಅವತಾರವಾಗಿರುವರೆಂಬದು ಅವರಿಗೆ ನಿಶ್ಚಯವಾಯಿತು. ಬ್ರಹ್ಮವೃಂದವು ಲಜ್ಜಿತವಾಯಿತು. ಬ್ರಾಹ್ಮಣರು ಗಲಿತ ಗರ್ವಉಳ್ಳವರಾಗಿ ಜ್ಞಾನೇಶ್ವರ ಮಹಾರಾಜರ ಬ್ರಹ್ಮತೇಜವನ್ನು ನೋಡಿ ಪೈಠಣದ ಬ್ರಾಹ್ಮಣರು ತಮ್ಮ ನಿಜವಾದ ಸ್ವರೂಪದ ಗುರುತು ಹಿಡಿದರು. ಅವರು ಅನುತಾಪದಿಂದ ತಪ್ತರಾದರು. ಅವರು ಕರ್ಮನಿಷ್ಠರಿದ್ದರು. ಅವರಿಗೆ ಅಕರ್ತಾತ್ಮಸ್ಥಿತಿಯ ಬೋಧವು ಆಗಿದ್ದಿಲ್ಲ. ಅವರು ಶಬ್ದಶಾಸ್ತ್ರವನ್ನು ತಿಳಿದವರಿದ್ದರು. ಆದರೆ ನಿಃಶಬ್ದ ಸ್ಥಿತಿಯ ಅನುಭವವು ಅವರಿಗೆ ಇದ್ದಿಲ್ಲ. ಅವರು ವಿಧಿವಿಧಾನವನ್ನು ಯಥಾಶಾಸ್ತ್ರ ಬಲ್ಲವರಿದ್ದರು. ಆದರೆ ವಿಧಿ ನಿಷೇಧ ಎಲ್ಲಿ ಮುಳುಗಿ ಹೋಗುತ್ತವೆ ಎಂಬ ಅವಸ್ಥಾದ ಸಾಕ್ಷಾತ್ಕಾರವು ಅವರಿಗೆ ಆಗಿದ್ದಿಲ್ಲ. ಶ್ರೀಜ್ಞಾನೇಶ್ವರ ರೂಪವೆಂಬ ಕನ್ನಡಿಯಲ್ಲಿ ಅವರು ತಮ್ಮ ಮೋರೆಯನ್ನು ನೋಡಿಕೊಂಡರು. ಅವರಿಗೆ ತಮ್ಮ ಮುಖವು ಅಮಂಗಲ ಹೊಲಸು ಇರುವದೆಂಬದು ಕಂಡುಬಂತು. ನಾವು ವೇದಶಾಸ್ತ್ರದ ಅಧ್ಯಯನ ಮಾಡಿದೆವು. ಆದರೆ ವೇದವು ಯಾರ ನಿಶ್ವಾಸವದೆ. ಆ ಪರಮಾತ್ಮನನ್ನು ನಾವು ಗುರ್ತು ಹಿಡಿಯಲಿಲ್ಲವೆಂಬ ವಿಷಯದಲ್ಲಿ ಅವರಿಗೆ ಬಹಳೇ ದುಃಖವಾಯಿತು. ನಿಜವಾದ ಬ್ರಾಹ್ಮಣನೆಂದರೆ ಬ್ರಹ್ಮವೇತ್ತಾ ಪುರುಷನು. ಆ ಬ್ರಹ್ಮನಿಷ್ಠಪುರುಷ ಜ್ಞಾನದೇವನನು ನೋಡಿ ಅವರ ದೇಹಬುದ್ಧಿ ಎಂಬ ಅಮಂಗಲ ಪದಾರ್ಥದಲ್ಲಿ ಕೂಡಿ ಬೆಳೆದ ಮಿಥ್ಯಾಭೂತವಾದ

ಜಾತ್ಯಾಭಿಮಾನವು ಲಯ ಹೊಂದಿತು. ಈ ಮೂವರು ತ್ರಿಮೂರ್ತಿಗಳ ಅವತಾರವೇ ಹೊರತು ಬೇರೆಯಲ್ಲ. ಇವರ ಪಾದಸ್ಪರ್ಶದಿಂದ ಜನರ ಪಾಪರಾಶಿಗಳೆಲ್ಲವೂ ತೊಲಗುವವು. ಇಂಥವರಿಗೆ ಪ್ರಾಯಶ್ಚಿತ್ತವೆಂದರೆ ಏನು ! ಇವರೇ ಪರಮ ಪಾವನರು ಎಂದು ಹೇಳಿ ಆ ಮಹಾತ್ಮರನ್ನು ತಮ್ಮ ಜಾತಿಯಲ್ಲಿ ಸೇರಿಸಿಕೊಂಡು ಗೌರವಿಸಿದರು. ಬ್ರಾಹ್ಮಣರು ಈ ಆಶ್ಚರ್ಯವನ್ನು ಜ್ಞಾನದೇವರ ಮಹಿಮೆಯನ್ನು ವಿಶದವಾಗಿ ಬರೆದು ಮೂವರು ಪ್ರತ್ಯಕ್ಷ ಬ್ರಹ್ಮ, ವಿಷ್ಣು, ಮಹೇಶ್ವರರ ಮೂರ್ತಿಮಂತ ಅವತಾರವಿದ್ದು ಇವರೇ ಜಗದ್ಗುರುಗಳಿರುವರು. ಇವರಿಗೆ ಪ್ರಾಯಶ್ಚಿತ್ತ ಕಾರಣವಿರುವದಿಲ್ಲೆಂದು ನಿಶ್ಚಯಿಸಿ ಶುದ್ಧಿಪತ್ರವನ್ನು ಬರೆದು ಶ್ರೀನಿವೃತ್ತಿನಾಥನ ಸ್ವಾಧೀನದಲ್ಲಿ ಕೊಟ್ಟರು.

## ತೀರ್ಥಯಾತ್ರೆಯು

ಪೈಠಣದ ನಾರೀ ನರರಿಗೆ ತಮ್ಮ ವಿಭೂತಿಮತ್ವದ ತೇಜವನ್ನು ತೋರಿಸಿ ಜ್ಞಾನೇಶ್ವರ ಮಹಾರಾಜರು, ತಮ್ಮ ಅಣ್ಣ ತಮ್ಮಂದಿರೊಡನೆ ವೇದವನ್ನುಚ್ಚರಿಸುವ ಕೋಣನನ್ನು ಸಂಗಡ ತೆಗೆದುಕೊಂಡು ತೀರ್ಥಯಾತ್ರೆಗೆ ಹೊರಟರು. ಆ ಕೋಣವು ವೇದಘೋಷವನ್ನು ಉಘಡವಾಗಿ ಉಚ್ಚರಿಸುತ್ತ ಅವರ ಸಂಗಡವೇ ತಿರುಗುತ್ತಿತ್ತು. ‘‘ ಆಳೆ, ಮುಕ್ಕಾಮಿನಲ್ಲಿ ಕೋಣನಿಗೆ ಸಮಾಧಿಯನ್ನು ಕೊಟ್ಟು ಮುಂದೆ ತಮ್ಮ ಸಂಚಾರಮಾಡುತ್ತ ತಮ್ಮ ಕಾಲುಗಳಿಂದ ಸ್ಪರ್ಶವಾದ ಭೂಭಾಗವನ್ನು ಪವಿತ್ರ ಮಾಡುತ್ತ ನೇವಾಸೀ ಗ್ರಾಮಕ್ಕೆ ಬಂದು ಮುಟ್ಟಿದರು. ಈ ಗ್ರಾಮವು ನಗರ ಜಿಲ್ಹೆಯಲ್ಲಿ ಪ್ರವರಾ ನದಿಯ ದಂಡೆಗೆ ಇರುತ್ತದೆ. ಸಮುದ್ರಮಂಥನ ಸಮಯದಲ್ಲಿ ಹೊರಟ ಅಮೃತ ಪ್ರಾಪ್ತಿಯ ಸಲುವಾಗಿ ದೇವದೈತ್ಯರಲ್ಲಿ ಜಗಳ ಉದ್ಭವಿಸಿತು. ಅಮೃತ ಕಲಶವು ದೈತ್ಯರ ಕೈವಶವಾದ್ದರಿಂದ ದೇವಪಕ್ಷಪಾತಿಯಾದ ವಿಷ್ಣುವು ಮೋಹಿನೀ ರೂಪವನ್ನು ಧರಿಸಿದನು. ಅದೇ ಮೋಹಿನೀರಾಜನ ದೇವಾಲಯವು ನೇವಾಸೀ ಗ್ರಾಮದಲ್ಲಿ ಇರುವದು. ಈ ಪವಿತ್ರ ಪುಣ್ಯದೇವಸ್ಥಾನದಲ್ಲಿ ಜ್ಞಾನೇಶ್ವರರು ಭಗವದ್ಗೀತೆಯಮೇಲೆ ಭಾವಾರ್ಥ ದೀಪಿಕೆಎಂಬ ಟೀಕೆಯನ್ನು ಗೋಡೆಯಮೇಲೆ ನಿತ್ಯ ಬರೆಯುವದನ್ನು ನೇವಾಸಿ ಗ್ರಾಮದ ಕುಲಕರ್ಣಿ ಸಚ್ಚಿದಾನಂದಬಾಬಾ ಎಂಬವರು ಶಕೆ ೧೨೧೨ನೇದರಲ್ಲಿ ಜ್ಞಾನೇಶ್ವರಿಯ ಲೇಖಕರಾದರೆಂದು ಮಹಾರಾಜರೇ ಕಡೆಯ ಅಧ್ಯಾಯದಲ್ಲಿ ಬರೆದಿರುವರು. ಗ್ರಂಥಕರ್ತನು ಶ್ರೀಜ್ಞಾನೇಶ್ವರರ ಚರಣಗಳನ್ನು ಹೃದಯದಲ್ಲಿಟ್ಟು ಯಾವಾಗಲೂ ಚಿಂತಿಸುವನು.

---

## ಜ್ಞಾನೇಶ್ವರಿಯ ಅಧ್ಯಾಯದ

# ಅನುಕ್ರಮಣಿಕೆ

॥ ಶ್ರೀ ವಿಠ್ಠಲರುಕ್ಮಿಣಿ ಪ್ರಸನ್ನ ॥



# ಜ್ಞಾನೇಶ್ವರೀ

## ಶ್ರೀಗಣೇಶಾಯ ನಮಃ

## ಮೊದಲನೇ ಅಧ್ಯಾಯವು

[ ಓಂಕಾರವೇ ಪರಮಾತ್ಮನಿರುವನೆಂಬ ಭಾವನೆಯಿಂದ ಶ್ರೀ ಜ್ಞಾನೇಶ್ವರ ಮಹಾರಾಜರು ಇಲ್ಲಿ ಮಂಗಲ ಮಾಡುತ್ತಾರೆ. ]

**ಓಂ ನಮೋ ಜೀ ಆದ್ಯಾ । ವೇದಪ್ರತಿಪಾದ್ಯಾ । ಜಯ ಜಯ ಸ್ವಸಂವೇದ್ಯಾ । ಆತ್ಮರೂಪಾ ॥೧॥**
**ದೇವಾ ತೂಚಿ ಗಣೇಶು । ಸಕಲಾರ್ಥಮತಿಪ್ರಕಾಶು । ಮ್ಹಣೆ ನಿವೃತ್ತಿದಾಸು । ಅವಧಾರಿಜೋ ಜೀ ॥೨॥**
**ಹೇ ಶಬ್ದಬ್ರಹ್ಮ ಅಶೇಷ । ತೇಚಿ ಮೂರ್ತಿ ಸುವೇಶ । ತೇಥ ವರ್ಣವಪು ನಿರ್ದೋಷ । ಮಿರವತ ಅಸೇ ॥೩॥**
**ಸ್ಮೃತಿ ತೇಚಿ ಅವಯವ । ದೇಖಾ ಆಂಗೀಕಭಾವ । ತೇಥ ಲಾವಣ್ಯಾಚೀ ಠೇವ । ಅರ್ಥಶೋಭಾ ॥೪॥**
**ಅಷ್ಟಾದಶ ಪುರಾಣೆ । ತೀಚಿ ಮಣಿಭೂಷಣೆ । ಪದಪದ್ಧತಿ ಖೇವಣೇ । ಪ್ರಮೇಯ ರತ್ನಾಂಚಿ ॥೫॥**
**ಪದಬಂಧ ನಾಗರ । ತೇಚಿ ರಂಗಾಥಿಲೇ ಅಂಬರ । ಜೇಥ ಸಾಹಿತ್ಯ ವಾಣೇ ಸಪೂರ । ಉಜಾಳಾಚೆ ॥೬॥**
**ದೇಖಾ ಕಾವ್ಯನಾಟಕಾ । ಜೇ ನಿರ್ಧಾರಿತಾ ಸಕೌತುಕಾ । ತ್ಯಾಚಿ ರುಣಝುಣತೀ ಕ್ಷುದ್ರಘಂಟಿಕಾ**

---

**ಅರ್ಥ**—ಈ ಸರ್ವಕ್ಕೂ ಮೂಲವಾಗಿರುವ, ಮತ್ತು ವೇದಪ್ರತಿಪಾದ್ಯವಾಗಿರುವ, ಓಂಕಾರಸ್ವರೂಪನೇ ನಿನಗೆ ನಮಸ್ಕಾರವಿರಲಿ. ಸ್ವಸಂವೇದ್ಯವೂ, ಸರ್ವವ್ಯಾಪಿಯೂ, ಆದ ಓಂಕಾರನೇ ನಿನಗೆ ಜಯಜಯಕಾರವಿರಲಿ ॥ ೧ ॥ ಸರ್ವಬುದ್ಧಿಪ್ರಕಾಶಕನಾದ ಗಣೇಶನೂ ನೀನಿರುವಿ. ನಿವೃತ್ತಿ ನಾಥರ ಶಿಷ್ಯರು (ಶ್ರೀ ಜ್ಞಾನೇಶ್ವರರು) ಅನ್ನುತ್ತಾರೆ. ಮಹಾರಾಜರೇ ಶ್ರವಣಮಾಡಿರಿ ॥ ೨॥ ಸ್ವರ ವ್ಯಂಜನ ಇವುಗಳು ಆ ರೂಪದ ಸುಂದರ ಕಾಂತಿಯಿರುತ್ತವೆ. ಆ ಶಬ್ದಮಾತ್ರಗಳು ಅಂದರೆ ಸಂಪೂರ್ಣ ವೇದವು ಇದೇ ನಿನ್ನ ಉತ್ತಮವಾದ ಗಣೇಶನ ಮೂರ್ತಿ ಇರುತ್ತದೆ ॥ ೩ ॥ ವಿಚಾರಮಾಡಿ ನೋಡಿದರೆ ಮನ್ವಾದಿಕರ ಸ್ಮೃತಿಗಳೇ ಆ ವಿಘ್ನೇಶ್ವರನ ಅವಯವಗಳಾಗಿರುವವು. ಆ ಸ್ಮೃತಿಯೊಳಗಿನ ಅರ್ಥ ಸೌಂದರ್ಯದಿಂದ ಆ ಅವಯವಗಳು ಕೇವಲ ಲಾವಣ್ಯದ ಖಣಿಯೇ ಆಗಿರುವವು ॥ ೪ ॥ ಹದಿನೆಂಟು ಪುರಾಣಗಳು ಇವೇ ಆ ವಿಘ್ನೇಶ್ವರನ ಮೈಮೇಲಿನ ರತ್ನಖಚಿತ ಅಲಂಕಾರಗಳು ಅವರಲ್ಲಿ ಪ್ರತಿಪಾದನ ಮಾಡಿದ ತತ್ವಗಳು ಇವೇ ರತ್ನಗಳು. ಛಂದೋಬದ್ಧ ಶಬ್ದಗಳು ಇವೇ ಅವುಗಳ ಕುಂದಣಗಳಿರುತ್ತವೆ ॥ ೫ ॥ ಉತ್ತಮ ಪ್ರಕಾರದ ಶಬ್ದರಚನೆಯೇ ಆ ಗಣಪತಿಯ ಮೈಮೇಲಿನ ಬಣ್ಣದ ವಸ್ತ್ರಗಳಿರುತ್ತವೆ. ಮತ್ತು ಆ ಶಬ್ದರಚನೆಯೊಳಗಿನ ಅಲಂಕಾರಗಳು ಆ ವಸ್ತ್ರದ ಚಕಚಕಿತವಾದ ಎಳೆಗಳಿರುತ್ತವೆ ॥ ೬ ॥ ಕಾವ್ಯ ಮತ್ತು ನಾಟಕಗಳನ್ನು ವಿಚಾರಮಾಡಿ ನೋಡಿದರೆ! ಆ ಕಾವ್ಯ ನಾಟಕಗಳು ಆ ವಿಘ್ನೇಶ್ವರನ ಕಾಲೊಳಗಿನ ಸಂಣ ಗೆಜ್ಜೆಗಳಿದ್ದು ಅರ್ಥರೂಪವಾದಂಥ ಶಬ್ದಗಳ ನಾದವು ಝಣಝಣಯೆಂದು

**ಅರ್ಥಧ್ವನಿ ॥೭॥ ನಾನಾ ಪ್ರಮೇಯಾಂಚೀ ಪರೀ । ನಿಪುಣಪಣೇ ಪಾಹತಾ ಕುಸರೀ। ದಿಸತೀ ಉಚಿತ ಪದೇ ಮಾರ್ತುಕಾರೀ। ರತ್ನೇ ಭಲೀ ॥ ೮ ॥ ತೇಥ ವ್ಯಾಸಾದಿಕಾಂಚ್ಯಾ ಮತಿ । ಮೇಖಳಾ ಮಿರವತೀ । ಚೋಖಾಳಪಣೇ ಝಳಕತೀ। ಪಲ್ಲವ ಸಡಕಾ ॥೯॥ ದೇಖಾ ಷಡ್‌ದರ್ಶನೆ ಮ್ಹಣಿಪತಿ । ತೇಚಿ ಭುಜಾಂ-ಚೀ ಆಕೃತೀ । ಮ್ಹಣವೂನಿ ವಿಸಂವಾದೇ ಧರಿತೀ । ಆಯುಧೇ ಹಾತೀ ॥ ೧೦ ॥ ತರೀ ತರ್ಕು ತೋಚಿ ಪರಶು । ನೀತಿಭೇದು ಅಂಕುಶು । ವೇದಾಂತು ತೋ ಮಹಾರಸು । ಮೋದಕು ಮಿರವೆ ॥೧೧॥ ಏಕೇ ಹಾತೀ ದಂತು । ಜೋ ಸ್ವಭಾವತಾ ಖಂಡಿತು । ತೋ ಬೌದ್ಧಮತ ಸಂಕೇತು। ವಾರ್ತಿಕಾಚಾ ॥೧೨॥ ಮಗ ಸಹಜೇ ಸತ್ಕಾರವಾದು। ತೋ ಪದ್ಮಕರು ವರದು। ಧರ್ಮಪ್ರತಿಷ್ಠಾ ತೋ ಸಿದ್ಧು । ಅಭಯ ಹಸ್ತು ॥೧೩॥ ದೇಖಾ ವಿವೇಕವಂತು ಸುವಿಮಳು । ತೋಚಿ ಶುಂಡಾದಂಡು ಸರಳು । ಜೇಥ ಪರಮಾ-ನಂದು ಕೇವಳು । ಮಹಾಸುಖಾಚಾ ॥೧೪॥ ತರೀ ಸಂವಾದು ತೋಚಿ ದಶನು । ಜೋ ಸಮತಾ ಶುಭ್ರ ವರ್ಣು। ದೇವೋ ಉನ್ಮೇಷ ಸೂಕ್ಷ್ಮೇಕ್ಷಣು । ವಿಘ್ನರಾಜು ॥೧೫॥ ಮಜ ಅವಗಮಲಿಯಾ ದೋನೀ। ಮೀಮಾಂಸಾ ಶ್ರವಣಸ್ಥಾನೀ । ಬೋಧ ಮದಾಮೃತ ಮುನೀ । ಅಲೀ ಸೇವಿತೀ ॥೧೬॥ ಪ್ರಮೇಯ ಪ್ರವಾಲ ಸುಪ್ರಭ। ದ್ವೈತಾದ್ವೈತ ತೇಚಿ ನಿಕುಂಭ। ಸರಿಸೇ ಪಣೇ ಏಕವಟಿತ ಇಭ ಮಸ್ತಕಾವರೀ ॥೧೭॥**

---

ನುಡಿಯುತ್ತದೆ ॥ ೭ ॥ ಯಾಕಂದರೆ ಅದರಲ್ಲಿ ಪ್ರತಿಪಾದನ ಮಾಡಿದ ಅನೇಕ ಪ್ರಕಾರದ ತತ್ವಗಳು ಮತ್ತು ಅವರೊಳಗಿನ ಕುಶಲತೆಯನ್ನೂ ಸೂಕ್ಷ್ಮರೀತಿಯಿಂದ ವಿಚಾರಮಾಡಲು ಅಲ್ಲಿ ಆರಿಸಿದ ವಾಕ್ಯಗಳಲ್ಲಿ ಕೆಲವು ಉತ್ತಮ ರತ್ನಗಳೆಂದು ಕಂಡು ಬರುತ್ತವೆ ॥ ೮ ॥ ಇಲ್ಲಿ ವ್ಯಾಸಾದಿಕರ ಬುದ್ಧಿಯು ಇದೇ ಒಂದು (ಆ ಗಣಪತಿಯು) ಟೊಂಕಕ್ಕೆ ಕಟ್ಟಿದ ವಸ್ತ್ರದಂತೆ ಶೋಭಾಯಮಾನವಾಗಿರುತ್ತದೆ. ವ್ಯಾಸಾದಿಕರ ಬುದ್ಧಿಯ ನಿರ್ದೋಷತನವು ಮೇಖಲಾದ ಪದರಿನ ತುದಿಗಳಂತೆ ಹೊಳೆಯುತ್ತದೆ ॥ ೯ ॥ ವಿಚಾರಮಾಡಿ ನೋಡಲು ಆರು ಶಾಸ್ತ್ರಗಳು ಅಂತಾ ಯಾವದಕ್ಕೆ ಅನ್ನುತ್ತಾರೋ ಅದೇ ಆ ಗಣಪತಿಯ ಆರು ಹಸ್ತಗಳಿರುತ್ತವೆ. ಅದರೊಳಗಿನ ಭಿನ್ನ ಭಿನ್ನ ಮತಗಳು ಇವುಗಳೇ ವಿಘ್ನೇಶ್ವರನ ಕೈಯೊಳಗಿನ ಶಸ್ತ್ರಗಳಿರುತ್ತವೆ ॥ ೧೦ ॥ ಅವುಗಳಲ್ಲಿಯ ತರ್ಕಶಾಸ್ತ್ರವು ಪರಶು, ನ್ಯಾಯಶಾಸ್ತ್ರವು ಅಂಕುಶ, ಮತ್ತು ವೇದಾಂತ ಶಾಸ್ತ್ರವು ಸವಿಯಾದ ರಸಪೂರ್ಣ ಮೋದಕ ದಂತೆ ಶೋಭಿಸುತ್ತದೆ ॥ ೧೧ ॥ ಬೌದ್ಧಮತಪ ನಿದರ್ಶನಮಾಡುವಂಥ ಬೌದ್ಧ ವಾರ್ತಿಕಕಾರನು ಪ್ರತಿಪಾದನ ಮಾಡಿದಂಥ ಬೌದ್ಧಮತವು ಇದೇ ಒಂದು ಸ್ವಭಾವತಃ ಖಂಡಿತವಾದ ದಂತವು ಅದು ಪಾತಂಜಲ ದರ್ಶನ ರೂಪಿ ಒಂದು ಕೈಯಲ್ಲಿ ಹಿಡಿದಿದ್ದಾನೆ ॥ ೧೨ ॥ ಆ ಮೇಲೆ ಕಲ್ಯಾಣಕರ ವರದಾಯಕವಾದ ಯಾವ ಹಸ್ತವೋ, ಅದು ಸತ್ಕಾರವಾದವು. ಅಂದರೆ ಬ್ರಹ್ಮವಿಷಯಕ ವಾದವಾಗಿರುತ್ತದೆ. ಅದು ಧರ್ಮಸಂಸ್ಥಾಪನೆ ಮಾಡುವಂಥ ಸ್ವಭಾವಸಿದ್ಧವಾದ ಅಭಯಹಸ್ತವಿರುತ್ತದೆ ॥ ೧೩ ॥ ಯಾವಸ್ಥಾನದಲ್ಲಿ ಮಹಾಸುಖದ ಪರಮಾನಂದವಿರುತ್ತದೆಯೋ, ಅದು ಅತಿ ನಿರ್ಮಲವಾದ ವಿಚಾರವೆಂಬುವದೇ ಸೊಂಡಿಯಾಗಿರುತ್ತದೆ ॥ ೧೪ ॥ ಹಾಗೆಯೇ ಉತ್ತಮವಾದ ಸಂವಾದವು ತರುಣ ಶುಭ್ರವಾದ ಹಲ್ಲಿನಂತೆ ಇದ್ದು ಜ್ಞಾನದೃಷ್ಟಿಯಂದರೆ ಆ ವಿಘ್ನರಾಜನ ಸೂಕ್ಷ್ಮವಾದ ನೇತ್ರಗಳೇ ಸರಿ ॥ ೧೫ ॥ ಪೂರ್ವ ಮತ್ತು ಉತ್ತರ ಮೀಮಾಂಸೆಗಳು ನನಗೆ ಕಿವಿಗಳಂತೆ ತೋರಿದವು ಬೋಧಾಮೃತವು ಗಂಡಸ್ಥಲದಿಂದ ಹೊರಡುವ ಮದವು ಅದನ್ನು ಸೇವನ ಮಾಡುವ ಮುನಿಗಳೇ ಭ್ರಮರಗಳಾಗಿರುತ್ತಾರೆ ॥ ೧೬ ॥ ಮೇಲೆ ಹೇಳಿದ ಶ್ರುತಿ ಸ್ಮೃತ್ಯಾದಿಗಳಲ್ಲಿ ಪ್ರತಿಪಾದನ ಮಾಡಿದ ತತ್ವಗಳು ಇವೇ ಆ ಗಣಪತಿಯ ಮೈಮೇಲಿನ ತೇಜಃಪುಂಜವಾದ ಹವಳಗಳಂತೆ ತೋರುತ್ತವೆ. ಮತ್ತು ದ್ವೈತ, ಅದ್ವೈತ ಸಿದ್ಧಾಂತಗಳು ಇವೇ ಆ ಗಜವದನನ ಮಸ್ತಕದೊಳಗಿನ ಗಂಡಸ್ಥಲಗಳಿದ್ದು ಅವು ಸಮಾನವಾದ ಬಲದಿಂದ ಒಂದೇ ಸಮನಾಗಿ ಶೋಭಿಸುತ್ತವೆ ॥ ೧೭ ॥

**ಉಪರಿ ದಶೋಪನಿಷದೇ । ಜಿಯೇ ಉದಾರೇ ಜ್ಞಾನ ಮಕರಂದೇ । ತಿಯೇ ಕುಸುಮೇ ಮುಗುಟೀ ಸುಗಂಧೇ ಶೋಭತೀ ಭಲೀ ॥ ೧೮ ॥ ಅಕಾರ ಚರಣಯುಗುಲ । ಉಕಾರ ಉದರ ವಿಶಾಲ । ಮಕಾರ ಮಹಾಮಂಡಲ । ಮಸ್ತಕಾ ಕಾರೇ ॥ ೧೯ ॥ ಹೇತಿನ್ಹೀ ಏಕವಟಲೇ । ತೇಥ ಶಬ್ದಬ್ರಹ್ಮ ಕವಳಲೇ । ತೇ ಮಿಯಾ ಶ್ರೀಗುರು ಕೃಪಾ ನಮಿಲೇ । ಆದಿ ಬೀಜ ॥ ೨೦ ॥ ಆತಾ ಅಭಿನವ ವಾಗ್ವಿಲಾಸಿನೀ । ಜೇ ಚಾತುರ್ಯಾರ್ಥಕಲಾ ಕಾಮಿನೀ । ತೇ ಶಾರದಾ ವಿಶ್ವಮೋಹಿನೀ । ನಮಿಲೀ ಮಿಯಾ ॥ ೨೧ ॥ ಮಜ ಹೃದಯೀ ಸದ್ಗುರೂ । ಜೇಣೇ ತಾರಿಲೋ ಹಾ ಸಂಸಾರ ಪುರೂ । ಮ್ಹಣವೂನಿ ವಿಶೇಷೆ ಅತ್ಯಾದರೂ ವಿವೇಕಾವರೀ ॥ ೨೨ ॥ ಜೈಸೇ ಡೋಳ್ಯಾ ಅಂಜನ ಭೇಟೇ । ತೇ ವೇಳೀ ದೃಷ್ಟೀಸೀ ಫಾಂಟಾ ಫುಟೆ । ಮಗ ವಾಸ ಪಾಹಿಜೆ ತೇಥ ಪ್ರಗಟೇ । ಮಹಾನಿಧೀ ॥ ೨೩ ॥ ಕಾ ಚಿಂತಾಮಣೀ ಆಲಿ ಯಾ ಹಾತೀ । ಸದಾ ವಿಜಯವೃತ್ತೀ ಮನೋರಥೀ । ತೈಸಾ ಮೀ ಪೂರ್ಣ ಕಾಮ ಶ್ರೀ ನಿವೃತ್ತಿ । ಜ್ಞಾನದೇವೋ ಮ್ಹಣೆ ॥ ೨೪ ॥ ಮ್ಹಣೋನಿ ಜಾಣತೇನೆ ಗುರೂ ಭಜಿಜೇ । ತೇಣೇ ಕೃತಕಾರ್ಯ ಹೋಇಜೇ । ಜೈಸೆ ಮೂಳ ಸಿಂಚನೇ ಸಹಜೇ । ಶಾಖಾ ಪಲ್ಲವ ಸಂತೋಷತೀ ॥ ೨೫ ॥ ಕಾ ತೀರ್ಥೆ ಜಿಯೇ ತ್ರಿಭುವನೀ । ತಿಯೇ ಘಡತೀ ಸಮುದ್ರಾವ ಗಾಹನೀ । ನಾತರೀ ಅಮೃತ ರಸಾಸ್ವಾದನೀ । ರಸ ಸಕಳ ॥ ೨೬ ॥**

---

ಈ ಗಂಡಸ್ಥಲದ ಮುಕುಟದ ಮೇಲೆ ಶೋಭಿಸುವ ಸುಗಂಧಿತವಾದ ಪುಷ್ಪಗಳೆಂದರೆ ಜ್ಞಾನಮಕರಂದದಿಂದ ಪರಿಪೂರ್ಣವಾದ ದಶೋಪನಿಷತ್ತುಗಳು ॥ ೧೮ ॥ ಓಂಕಾರದಲ್ಲಿಯ ಅಕಾರವು ಎರಡೂ ಕಾಲುಗಳಂತೆಯೂ ಉಕಾರವು ವಿಶಾಲವಾದ ಉದರದಂತೆಯೂ ಮತ್ತು ಮಕಾರವು ಸರ್ವ ಅವಯವಗಳಲ್ಲಿ ಶ್ರೇಷ್ಠವಾದ ಮಸ್ತಕದಂತೆಯೂ ಇರುತ್ತವೆ ॥ ೧೯ ॥ ಅಕಾರ ಉಕಾರ ಮಕಾರಗಳು ಯಾವ ಕಾಲಕ್ಕೆ ಒಂದಾಗಿ ಕೂಡಿದವೋ ಆಗ್ಗೆ ಅದರಲ್ಲಿ ಶಬ್ದಬ್ರಹ್ಮವು ಕೂಡಿ ಓಂಕಾರ ರೂಪವಾಯಿತು. ಆ ಮೂಲ ಬೀಜಕ್ಕೆ ನಾನು ಶ್ರೀಗುರು ನಿವೃತ್ತಿ ನಾಥರ ಕೃಪೆಯಿಂದ ನಮಸ್ಕಾರ ಮಾಡುತ್ತೇನೆ. ॥ ೨೦ ॥ ಇನ್ನು ಅಪೂರ್ವವಾದ ವಾಣಿಯಲ್ಲಿ ವಿಲಾಸಮಾಡುವಂಥ ಮತ್ತು ಚಾತುರ್ಯ, ಅರ್ಥ, ಕಲಾ, ಇವುಗಳಿಗೆ ಅಧಿದೇವತೆಯಾಗಿರುವ ಮತ್ತು ವಿಶ್ವವನ್ನು ಮೋಹಿಸಿ ಬಿಡುವಂಥ ಸರಸ್ವತಿಗೆ ನಾನು ನಮಸ್ಕಾರ ಮಾಡುತ್ತೇನೆ. ॥ ೨೧ ॥ ನನ್ನ ಹೃದಯದಲ್ಲಿ ವಾಸಮಾಡುವಂಥ ಸದ್ಗುರುಗಳ ಕೃಪೆಯಿಂದ ಸಂಸಾರವೆಂಬ ಮಹಾಪೂರದಿಂದ ನಾನು ಪಾರಾದೆನು. ಆದುದರಿಂದ ವಿಚಾರದ ಮೇಲೆ ನನ್ನ ಪ್ರೀತಿಯು ಬಹಳೇ ಆಗಿರುವದು ॥ ೨೨ ॥ ಯಾವ ಪ್ರಕಾರ ಕಣ್ಣಿನಲ್ಲಿ ದಿವ್ಯಾಂಜನವನ್ನು ಹಾಕಲಾಗಿ ಅವನ ದೃಷ್ಟಿಗೆ ಭೂಮಿಗತ ದ್ರವ್ಯದ ರಾಶಿಯು ಕಾಣಿಸುತ್ತದೆ ॥ ೨೩ ॥ ಅಥವಾ ಚಿಂತಾಮಣಿಯು ಹಸ್ತಗತವಾದಮೇಲೆ ಯಾವ ಪ್ರಕಾರ ಮನಸಿನಲ್ಲಿಯ ಅಪೇಕ್ಷೆಗಳು ಸರ್ವಕಾಲದಲ್ಲಿಯೂ ಪೂರ್ಣವಾಗುತ್ತವೆ ಆ ಪ್ರಕಾರ ಶ್ರೀ ಜ್ಞಾನದೇವರು ಅನ್ನುತ್ತಾರೆ. ಶ್ರೀಗುರು ನಿವೃತ್ತಿನಾಥರ ಕೃಪೆಯಿಂದ ನನ್ನ ಯಾವತ್ತೂ ಮನೋರಥಗಳು ಸಫಲವಾಗುತ್ತವೆ ॥ ೨೪ ॥ ಆದುದರಿಂದ ಯಾರು ಸುಜ್ಞರಿರುತ್ತಾರೋ ಅವರು ಶ್ರೀಗುರುಗಳ ಸೇವೆಮಾಡಿ ಧನ್ಯರಾಗಬೇಕು. ಹ್ಯಾಗಂದರೆ ಯಾವ ಪ್ರಕಾರ ಗಿಡದ ಬೊಡ್ಡಿಗೆ ನೀರು ಹಾಕಿದರೆ ಅದರ ಟೊಂಗೆಗಳು ಮತ್ತು ಎಲೆಗಳು ಕಳೆ ಉಳ್ಳವುಗಳಾಗುತ್ತವೆಯೋ ॥ ೨೫ ॥ ಅಥವಾ ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕಗಳಲ್ಲಿ ಎಷ್ಟು ತೀರ್ಥಗಳಿರುತ್ತವೆಯೋ ಅವೆಲ್ಲವುಗಳಲ್ಲಿ ಸ್ನಾನಮಾಡಿದರೆ ಬರುವ ಪುಣ್ಯವು ಒಂದೇ ಸಮುದ್ರಾವಗಾಹನ ಮಾಡಿದರೆ ಬರುವದು ಅಥವಾ ಅಮೃತರಸ ಸೇವಿಸುವದರಿಂದ ಎಲ್ಲ ರಸಗಳ ಸೇವನೆ ಮಾಡಿದಂತೆ ಆಗುತ್ತದೆ ॥ ೨೬ ॥

**ತೈಸಾ ಪುಢತ ಪುಢತೀ ತೋಚಿ । ಮಿಯಾ ಅಭಿವಂದಿಲಾ ಶ್ರೀ ಗುರುಚಿ । ಜೋ ಅಭಿಲಾಷಿತ ಮನೋರುಚಿ । ಪುರವಿತಾ ತೋ ॥ ೨೭ ॥ ಆತಾ ಅವಧಾರಾ ಕಥಾ ಗಹನ । ಜೇ ಸಕಳಾ ಕೌತುಕಾ ಜನ್ಮಸ್ಥಾನ । ಕೀ ಅಭಿನವ ಉದ್ಯಾನ । ವಿವೇಕ ತರೂಚೆ ॥ ೨೮ ॥ ನಾತರೀ ಸರ್ವ ಸುಖಾಚಿ ಆದಿ । ಜೇ ಪ್ರಮೇಯ ಮಹಾನಿಧಿ । ನಾನಾ ನವರಸ ಸುಧಾಬ್ಧಿ । ಪರಿ ಪೂರ್ಣ ಹೇ ॥ ೨೯ ॥ ಕೀ ಪರಮ ಧಾಮ ಪ್ರಕಟ । ಸರ್ವ ವಿದ್ಯಾಚೆ ಮೂಳಪೀಠ । ಶಾಸ್ತ್ರ ಜಾತಾ ವಿಶಿಷ್ಟ । ಅಶೇಷಾಚೆ ॥ ೩೦ ॥ ನಾತರೀ ಸಕಳ ಧರ್ಮಾಚೆ ಮಾಹೇರ । ಸಜ್ಜನಾಚೆ ಜಿವ್ಹಾರ । ಲಾವಣ್ಯ ರತ್ನಭಾಂಡಾರ । ಶಾರದೇಚೆ ॥ ೩೧ ॥ ನಾನಾ ಕಥಾ ರೂಪೇ ಭಾರತೀ । ಪ್ರಕಟಲೀ ಅಸೇ ತ್ರಿಜಗತೀ । ಆವಿಷ್ಕರೋನಿ ಮಹಾಮತೀ । ವ್ಯಾಸಾಚೀ ಯೇ ॥ ೩೨ ॥ ಮ್ಹಣೋನಿ ಹಾ ಕಾವ್ಯಾ ರಾವೋ । ಗ್ರಂಥ ಗುರೂ ನತೀಚಾ ಠಾವೋ । ಏಥೂನಿ ರಸಾ ರ್ಝಾಲಾ ಆವೋ । ರಸಾಳಪಣಾಚಾ ॥ ೩೩ ॥ ತೇವಿಚಿ ಐಕಾ ಆಣೀ ಕ ಏಕ । ಏಥೂನಿ ಶಬ್ದ ಶ್ರೀ ಸಚ್ಛಾಸ್ತ್ರಿಕ । ಆಣೀ ಮಹಾಬೋಧೀ ಕೋವಳೀಕ । ದುಣಾವಲೀ ॥ ೩೪ ॥ ಏಥ ಚಾತುರ್ಯ ಶಾಹಣೇ ಝಾಲೇ । ಪ್ರಮೇಯ ರುಚೀಸ ಆಲೇ । ಆಣಿ ಸೌಭಾಗ್ಯ ಪೋಖಲೆ । ಸುಖಾಚೆ ಏಥ ॥ ೩೫ ॥ ಮಾಧುರ್ಯೀ ಮಧುರತಾ । ಶೃಂಗಾರೀ ಸುರೇಖತಾ । ರೂಢಪಣ ಉಚಿತಾ । ದಿಸಲೇ ಭಲೇ ॥ ೩೬ ॥ ಏಥ ಕಳಾವಿದ ಪಣ ಕಳಾ । ಪುಣ್ಯಾಸಿ ಪ್ರತಾಪು ಆಗಳಾ । ಮ್ಹಣವೂನಿ ಜನಮೇಜಯಾಚೆ ಅವ ಲೀಳಾ । ದೋಷ ಹರಲೆ ॥ ೩೭ ॥**

---

ಆ ಪ್ರಕಾರ ಇಚ್ಛಿತ ಮನೋರಥವನ್ನು ಪೂರ್ಣಮಾಡುವ ಯಾವ ಶ್ರೀಗುರುಗಳು ಅವರಿಗೇನೇ ನಾನು ಪುನಃ ಪುನಃ ನಮಸ್ಕಾರ ಮಾಡುತ್ತೇನೆ ॥ ೨೭ ॥ ಇನ್ನು ಮುಂದೆ ಯಾವತ್ತೂ ಆನಂದಗಳನ್ನು ಉಂಟುಮಾಡುವಂಥ ಅಥವಾ ವಿಚಾರ ರೂಪ ವೃಕ್ಷದ ಸುಂದರವಾದ ತೋಟವೇ ಆದಂಥ ಗಹನವಾದ ಕಥೆಯನ್ನು ಶ್ರವಣಮಾಡಿರಿ ॥೨೮॥ ಅಥವಾ ಆ ಕಥೆಯು ಯಾವತ್ತು ಸುಖಗಳಿಗೆ ಕಾರಣವಾದ ಮತ್ತು ಸರ್ವಸಿದ್ಧಾಂತಗಳ ನಿಧಿಯಾದ ನವರಸದಿಂದ ತುಂಬಿದ ಅಮೃತಸಿಂಧುವೇ ಆಗಿರುತ್ತದೆ ॥೨೯॥ ಅದು ಮೋಕ್ಷದ ಪ್ರತಿಬಂಧರಹಿತ ಸ್ಥಾನವು ಅಥವಾ ಸರ್ವವಿದ್ಯಗಳ ಆದಿಸ್ಥಾನವು ಸರ್ವಶಾಸ್ತ್ರಗಳಿಗೆ ಆಶ್ರಯವೇ ಆಗಿರುತ್ತದೆ ॥ ೩೦ ॥ ಇದು ಎಲ್ಲ ಧರ್ಮಗಳ ತೌರಮನೆಯು ಅಥವಾ ಸಜ್ಜನರ ಹೃದಯವು ಅಥವಾ ಸರಸ್ವತಿಯ ಲಾವಣ್ಯರೂಪದ ರತ್ನಗಳ ನಿಧಿಯೇ ಆಗಿರುತ್ತದೆ ॥ ೩೧ ॥ ಅಥವಾ ಶ್ರೀ ವ್ಯಾಸದೇವರ ಮಹಾಮತಿಯಲ್ಲಿ ಪ್ರವೇಶಮಾಡಿ ಭಾರತದಲ್ಲಿ ಕಥಾರೂಪದಿಂದ ಈ ಮೂರೂ ಲೋಕಗಳಲ್ಲಿ ಪ್ರಕಟವಾಗಿರುತ್ತದೆ ॥ ೩೨ ॥ ಆದುದರಿಂದ ಈ ಕಥೆಯು ಎಲ್ಲ ಕಾವ್ಯಗಳಲ್ಲಿ ರಾಜನೆನಿಸಿದ್ದು ಎಲ್ಲ ಗ್ರಂಥಗಳಲ್ಲಿ ಶ್ರೇಷ್ಠವಾದ ಸ್ಥಾನವಾಗಿರುತ್ತದೆ. ಇದರಿಂದಲೇ ಶೃಂಗಾರಾದಿ ನವರಸಗಳಿಗೆ ರಸಗಾಂಭೀರ್ಯದ ಶೋಭೆಯು ಉಂಟಾಗಿರುತ್ತದೆ ॥೩೩॥ ಹಾಗೆಯೇ ಇನ್ನೊಂದು ಮಾತು ನೆನಪಿನಲ್ಲಿ ಇಡತಕ್ಕದ್ದು ಏನಂದರೆ ಈ ಕಥೆಯಿಂದಲೇ ಶಬ್ದರೂಪಿ ಲಕ್ಷ್ಮಿಗೆ ಸತ್‌ಶಾಸ್ತ್ರೀಯ ರೂಪವುಂಟಾಗಿ ಆತ್ಮ ಬೋಧನೆಗೆ ವಿಶೇಷ ಶೋಭೆಯುಂಟಾಗಿದೆ ॥ ೩೪ ॥ ಈ ಕಥೆಯಿಂದಲೇ ಚಾತುರ್ಯವು ಜಾಣತನವನ್ನು ಹೊಂದಿತು ತತ್ವಾರ್ಥಕ್ಕೆ ವಿಶೇಷವಾಗಿ ರಸ ಉತ್ಪನ್ನವಾಯಿತು ಈ ಕಥೆಯಿಂದಲೇ ಸುಖದ ಸೌಭಾಗ್ಯವು ಬೆಳೆಯಿತು ॥ ೩೫ ॥ ಮಾಧುರ್ಯಕ್ಕೆ ಮಧುರತೆಯೂ ಶೃಂಗಾರಕ್ಕೆ ಸುರಸವೂ ಮತ್ತು ಯೋಗ್ಯವಸ್ತುವಿಗೆ ಶ್ರೇಷ್ಠತೆಯೂ ಉತ್ಪನ್ನವಾಗಿ ಅವೆಲ್ಲವೂ ಉತ್ತಮವಾಗಿ ಶೋಭಿಸಹತ್ತಿದವು ॥ ೩೬ ॥ ಈ ಕಥೆಯಿಂದಲೇ ಕಲೆಗಳಿಗೆ ಕೌಶಲ್ಯವು ಪ್ರಾಪ್ತವಾಯಿತು. ಮತ್ತು ಪುಣ್ಯದ ಮಹಾತ್ಮ್ಯವು ಬಹಳೇ ವೃದ್ಧಿಂಗತವಾಯಿತು ಆದ್ದರಿಂದಲೇ (ಹದಿನೆಂಟು ದಿವಸಗಳಲ್ಲಿ ಭಾರತದ ಹದಿನೆಂಟು ಪರ್ವಗಳನ್ನು ಕೇಳಿದ್ದರಿಂದ) ಜನಮೇಜಯನ ಬ್ರಹ್ಮಹತ್ಯೆಯ ದೋಷವು ಸಹಜವಾಗಿ ನಾಶವಾಯಿತು ॥೩೭॥

ಆಣಿಪಾಹತಾ ನಾವೇಕ । ರಂಗೀ ಸುರಂಗ ತೇಚೀ ಅಗಳಿಕ । ಗುಣಾ ಸಗುಣ ಪಣಾಚೆಬಿಕ । ಬಹುವಸ ಏಥ ॥ ೩೮॥ ಭಾನುಚೇನಿ ತೇಜೆ ಧವಳಲೀ । ಜೈಸೀ ತ್ರೈಲೋಕ್ಯ ದಿಸ ಉಜಳಲೇ । ತೈಸೇ ವ್ಯಾಸಮತಿ ಕವಳಲೀ । ಮಿರವೇ ವಿಶ್ವ ॥ ೩೯ ॥ ಕಾಸುಕ್ಷೇತ್ರೀ ಬೀಜ ಘಾತಲೇ । ತೇ ಅಪುಲಿಯಾ ಪರೀ ವಿಸ್ತಾರಲೇ । ತೈಸೇ ಭಾರತೀ ಸುರವಾಡಲೇ । ಅರ್ಥ ಜಾತ ॥ ೪೦ ॥ ನಾತರೀ ನಗರಾತರೀ ವಸಿಜೆ । ತರೀ ನಾಗರಾಚಿ ಹೋಈಜೆ । ತೈಸೆ ವ್ಯಾಸೋಕ್ತಿ ತೇಜೇ । ಧವಳತ ಸಕಲ ॥ ೪೧ ॥ ಕೀ ಪ್ರಥಮ ವಯಸಾಕಾಳೀ । ಲಾವಣ್ಯಾಚೀ ನವ್ಹಾಳೀ । ಪ್ರಕಟೇ ಜೈಸೀ ಆಗಳೀ । ಅಂಗನಾಅಂಗೀ ॥ ೪೨ ॥ ನಾತರೀ ಉದ್ಯಾನೀ ಮಾಧವೀ ಘಡೆ । ತೇಥ ವನಶೋಭೇಚೀ ಖಾಣೀ ಉಘಡೆ । ಆದಿಲಾಪಾಸೋನಿ ಅಪಾಡೆ । ಜಿಯಾಪರೀ ॥ ೪೩ ॥ ನಾನಾ ಘನಿಭೂತ ಸುವರ್ಣ । ಜೈಸೇ ನ್ಯಾಹಾಳಿತಾ ಸಾಧಾರಣ । ಮಗ ಅಳಂಕಾರೀ ಬರವೇ ಪಣ । ನಿವಾಡು ದಾವೀ ॥ ೪೪ ॥ ತೈಸೆ ವ್ಯಾಸೋಕ್ತಿ ಅಳಂಕಾರೀಲೇ । ಅವಡೇತೇ ಬರವೇಪಣ ಪಾತಲೆ । ತೇ ಜಾಣೋನಿ ಕಾಯ ಆಶ್ರಯಿಲೇ । ಇತಿಹಾಸೀ ॥ ೪೫ ॥ ನಾನಾ ಪುರತಿಯೇ ಪ್ರತಿಷ್ಠೇಲಾಗಿ ಸಾನೀವ ಧರೂನಿ ಆಂಗೀ । ಪುರಾಣೇ ಆಖ್ಯಾನರೂಪೇ ಜಗೀ । ಭಾರತಾ ಆಲೀ ॥ ೪೬ ॥ ಮ್ಹಣವೂನಿ ಮಹಾ ಭಾರತೀ ನಾಹೀ । ತೇ ನೋಹೇಚಿ ಲೋಕೀತಿಹೀ । ಯೇಣೇ ಕಾರಣೇ ಮ್ಹಣಿಪೇ ಪಾಹೀ । ವ್ಯಾಸೋಚ್ಛಿಷ್ಟ ಜಗತ್ರಯ ॥ ೪೭ ॥ ಐಸೀ ಜಗೀ ಸುರಸ ಕಥಾ । ಜೇ ಜನ್ಮಭೂಮಿ ಪರಮಾರ್ಥ । ಮುನಿ ಸಾಂಗೇ ನೃಪನಾಥಾ । ಜನಮೇಜಯಾ ॥ ೪೮ ॥

---

ಮತ್ತು ಒಂದು ಕ್ಷಣ ನೋಡಲು ಶೃಂಗಾರಾದಿ ರಸಗಳಿಗೆ ವಿಶೇಷವಾಗಿ ಪೋಷಕತೆಯು ಮತ್ತು ಗುಣಗಳಿಗೆ ಒಳ್ಳೇತನದ ಕಾಂತಿಯೂ ಈ ಕಥೆಯಿಂದಲೇ ಉತ್ಪನ್ನವಾಯಿತು ॥ ೩೮ ॥ ಯಾವ ಪ್ರಕಾರ ಸೂರ್ಯೋದಯುವಾದ ಕೂಡ್ಲೆ ಮೂರು ಲೋಕಗಳಲ್ಲಿಯೂ ಪ್ರಕಾಶ ವುಂಟಾಗುತ್ತದೆ ಆಪ್ರಕಾರ ಶ್ರೀ ವ್ಯಾಸರ ಬುದ್ಧಿಯಿಂದ ಈ ಕಥೆಯು ಹೊರಟಿದ್ದರಿಂದ ಎಲ್ಲ ಜಗತ್ತಿಗೂ ಇವರ ಪ್ರಕಾಶಬಿದ್ದು ಅದು ಬಹಳ ಶೋಭಾಯಮಾನವಾಗಿ ತೋರಿತು ॥ ೩೯ ॥ ಅಥವಾ ಉತ್ತಮವಾದ ಹೊಲದಲ್ಲಿ ಬೀಜವನ್ನು ಬಿತ್ತಲಾಗಿ ಯಾವ ಪ್ರಕಾರ ಸಹಜವಾಗಿ ಅದರ ವಿಸ್ತಾರವಾಗುತ್ತದೆ. ಹಾಗೆ ಈ ಭಾರತದಲ್ಲಿ ಎಲ್ಲ ವಿಷಯುಗಳು ಶೋಭಿಸುತ್ತವೆ ॥ ೪೦ ॥ ಅಥವಾ ಶಹರದಲ್ಲಿ ಇರುವದರಿಂದ ಮನುಷ್ಯನು ಬುದ್ಧಿವಂತನಾಗುವಂತೆ ಶ್ರೀ ವ್ಯಾಸರ ವಾಣಿಯು ತೇಜದಿಂದ ಎಲ್ಲ ಜಗವು ಸ್ವಚ್ಛ (ಜ್ಞಾನಮಯ) ವಾಯಿತು ॥ ೪೧ ॥ ಹಾಗೆಯೇ ತಾರುಣ್ಯಾವಸ್ಥೆಯಲ್ಲಿ ಸೌಂದರ್ಯದ ಶೋಭೆಯು ಸ್ತ್ರೀಯರಲ್ಲಿ ಯಾವ ಪ್ರಕಾರಾ ವಿಶೇಷವಾಗಿ ಕಂಡು ಬರುತ್ತದೆ. ಮತ್ತು ವಸಂತಋತುವು ಬರಲಾಗಿ ಸಣ್ಣ ದೊಡ್ಡ ಎಲ್ಲ ವೃಕ್ಷಗಳು ಪ್ರಫುಲ್ಲಿತವಾಗಿ ವನಶ್ರೀಯ ಶೋಭೆಯು ಹ್ಯಾಗೆ ಉಂಟಾಗುತ್ತದೆ ॥ ೪೩ ॥ ಅಥವಾ ಬಂಗಾರದ ಗಟ್ಟಿಗಳನ್ನು ನೋಡಿದರೆ ಸಾಧಾರಣವಾಗಿ ಕಾಣಿಸುತ್ತವೆ. ಆದರೆ ಅವುಗಳ ಅಲಂಕಾರಗಳನ್ನು ಮಾಡಿದರೆ ಅವುಗಳ ಶೋಭೆಯು ವಿಶೇಷ ಸುಂದರವಾಗಿ ಬೇರೆಯೇ ಕಾಣಿಸುತ್ತದೆ ॥ ೪೪ ॥ ಶ್ರೀ ವ್ಯಾಸರು ಅಲಂಕರಿಸಿದ ಯಾವದೇ ಕಥೆಗೆ ಪವಿತ್ರತೆಯು ಉತ್ಪನ್ನವಾಯಿತು. ಎಂಬವನ್ನು ತಿಳಿದುಕೊಂಡೇ ಇತಿಹಾಸಕಾರರು ತಾವಾಗಿಯೇ ಆ ಕಥೆಯನ್ನು ಆಶ್ರಯಿಸಿದರು ॥ ೪೫ ॥ ಅಥವಾ ಜಗತ್ತಿನಲ್ಲಿ ಪೂರ್ಣ ಪ್ರತಿಷ್ಟೆಯು ದೊರಿಯುವದೆಂದು ನಮ್ರತೆಯಿಂದ ಎಲ್ಲ ಪುರಾಣಗಳು ಆಖ್ಯಾನ ರೂಪದಿಂದ ಭಾರತದಲ್ಲಿ ಬಂದು ಸೇರಿದವು ॥ ೪೬ ॥ ಆದುದರಿಂದ ಭಾರತದಲ್ಲಿ ಯಾವ ಕಥೆಯು ಇಲ್ಲವೋ ಅದು ಮೂರು ಲೋಕಗಳಲ್ಲಿಯೂ ಇರುವದಿಲ್ಲ. ಈ ಕಾರಣದ ದೆಸೆಯಿಂದ ಜಗತ್ತಿನಲ್ಲಿ ಯಾವ ಕಥೆಗಳು ಇರುತ್ತವೆ. ಅವು ವ್ಯಾಸೋಚ್ಛಿಷ್ಟವೆಂದು ಅನ್ನುತ್ತಾರೆ ॥ ೪೭ ॥ ಸರ್ವ ಜಗತ್ತಿನಲ್ಲಿ ಅತಿಶಯ ಮಧುರ ಪಾರಮಾರ್ಥದ ಉತ್ಪತ್ತಿಯ ಸ್ಥಾನವಾದ ಈ ಕಥೆಯನ್ನು ವೈಶಂಪಾಯನರು ಜನಮೇಜಯರಾಯನಿಗೆ ಹೇಳಿದರು ॥ ೪೮ ॥

**ಜೇ ಅದ್ವಿತೀಯ ಉತ್ತಮು । ಪವಿತ್ರೈಕ ನಿರುಪಮು । ಪರಮ ಮಂಗಲ ಧಾಮು । ಅವಧಾರಿಜೋ ॥ ೪೯ ॥ ಆತಾ ಭಾರತ ಕಮಳ ಪರಾಗು । ಗೀತಾಖ್ಯು ಪ್ರಸಂಗು । ಜೋ ಸಂವಾದಲಾ ಶ್ರೀರಂಗು । ಅರ್ಜುನೇಸಿ ॥ ೫೦ ॥ ನಾತರೀ ಶಬ್ದ ಬ್ರಹ್ಮಾಬ್ಧಿ । ಮಥಿಯಲಾ ವ್ಯಾಸಬುದ್ಧೀ । ನಿವಡಿಲೇ ನಿರವಧಿ । ನವನೀತ ಹೇ ॥ ೫೧ ॥ ಮಗ ಜ್ಞಾನಾಗ್ನಿ ಸಂಪರ್ಕೇ । ಕಡಸಿಲೇನಿ ವಿವೇಕೇ । ಪದ ಆಲೇ ಪರಿಪಾಕೇ । ಆಮೋದಾಸೀ ॥ ೫೨ ॥ ಜೇ ಅಪೇಕ್ಷಿಜೇ ವಿರಕ್ತೀ । ಸದಾ ಅನುಭವಿಜೇ ಸಂತೀ । ಸೋಹಂಭಾವೇ ಪಾರಾಂಗತೀ । ರಮಿಜೇ ಜೇಥ ॥ ೫೩ ॥ ಜೇ ಆಕರ್ಣಿಜೇ ಭಕ್ತೀ । ಜೇ ಆದಿವಂದ್ಯ ತ್ರಿಜಗತೀ । ಜೇ ಭೀಷ್ಮ ಪರ್ವ ಸಂಗತೀ । ಮ್ಹಣಿತಲೀ ಕಥಾ ॥ ೫೪ ॥ ಜೇ ಭಗವದ್ಗೀತಾ ಮ್ಹಣಿಜೇ । ಜೇ ಬ್ರಹ್ಮೇಶಾನೀ ಪ್ರಶಂಸಿಜೇ । ಜೇ ಸನಕಾದಿಕೀ ಸೇವಿಜೆ । ಆದರೇಸೀ ॥ ೫೫ ॥ ಜೈಸೇ ಶಾರದಿಯೇಚೇ ಚಂದ್ರಕಳೇ । ಮಾಜೀ ಅಮೃತಕಣ ಕೋವಳೇ । ತೇ ವೇಂಚಿತೀ ಮನೇ ಮವಾಳೇ । ಚಕೋರ ತಲಗೇ ॥ ೫೬ ॥ ತಿಯಾಪರೀ ಶ್ರೋತಾ । ಅನುಭವಾವೀ ಹೇ ಕಥಾ । ಅತಿ ಹಳುವಾರ ಪಣ ಚಿತ್ತಾ । ಆಣೂನಿಯಾ ॥ ೫೭ ॥ ಹೇ ಶಬ್ದೇವಿಣ ಸಂವಾದಿಜೇ । ಇಂದ್ರಿಯಾನೇಣತಾ ಭೋಗಿಜೇ । ಬೋಲಾ ಆದಿ ಝೋಂಬಿಜೇ । ಪ್ರಮೇಯಾಸೀ ॥ ೫೮ ॥**

---

ಯಾವದು ಅದ್ವಿತೀಯ ಉತ್ತಮು ಪಾವನ ಮಾಡುವಂಥ ಅನುಪಮೇಯವಾದದ್ದೂ ಮತ್ತು ಮೋಕ್ಷದ ತವರ ಮನೆಯು ಆಗಿರುತ್ತದೆ. ಅಂಥ ಕಥೆಯನ್ನು ಕೇಳಿರಿ ॥ ೪೯ ॥ ಇನ್ನು ಭಾರತ ಇದೇ ಒಂದು ಕಮಲ ಪುಷ್ಪವು ಮತ್ತು ಭಗವಂತನು ಸ್ವತಃ ಅರ್ಜುನನಿಗೆ ಹೇಳಿದ ಗೀತಾ ವಿಷಯವು ಇದೇ ಅದರಲ್ಲಿಯ ಪುಷ್ಪ ರೇಣು ಇರುತ್ತದೆ ॥ ೫೦ ॥ ಅಥವಾ ಶ್ರೀ ವ್ಯಾಸರು ವೇದರೂಪ ಸಮುದ್ರವನ್ನು ಬುದ್ಧಿರೂಪ ಕಡಗೋಲಿನಿಂದ ಕಡೆದು ಅದರಲ್ಲಿ ಗೀತಾರೂಪ ಅನುಪಮೇಯವಾದ ಬೆಣ್ಣೆಯನ್ನು ತೆಗಿದರು ॥ ೫೧ ॥ ಅದಕ್ಕೆ ಜ್ಞಾನರೂಪ ಅಗ್ನಿಯ ಕಾವು ಕೊಟ್ಟು ವಿಚಾರರೂಪ ಉಕ್ಕು ಬಂದ ಮೇಲೆ ಭಗವದ್ಗೀತಾ ಎಂಬ ಪದ್ಯರೂಪ ಸುವಾಸಿಕ ತುಪ್ಪವಾಯಿತು. ॥ ೫೨ ॥ ವೈರಾಗ್ಯ ಉಳ್ಳವರು ಯಾವ ಗೀತಾರೂಪ ತುಪ್ಪದ ಅಪೇಕ್ಷೆ ಮಾಡುತ್ತಾರೆ. ಸಂತರು ಅದನ್ನು ಯಾವಾಗಲೂ ಅನುಭವಿಸುತ್ತಾರೋ, ( ಸೇವನ ಮಾಡುತ್ತಾರೆ ) ಯಾವ ಸ್ಥಾನದಲ್ಲಿ ಬ್ರಹ್ಮಾತ್ಮೈಕ್ಯಭಾವದಿಂದ ನಿಷ್ಣಾತರಾದ ಬ್ರಹ್ಮನಿಷ್ಠರು ಆನಂದ ಹೊಂದುತ್ತಾರೋ, ॥ ೫೩ ॥ ಆ ಗೀತಾಖ್ಯವನ್ನು ಭಕ್ತರು ಶ್ರವಣ ಮಾಡಲಿಕ್ಕೆ ಯೋಗ್ಯವಾಗಿರುವದು ಮತ್ತು ಅದು ಮೂರು ಲೋಕಗಳಲ್ಲಿಯೂ ಪರಮಪೂಜ್ಯವಾಗಿರುವದು. ಆ ಗೀತೆಯನ್ನು ಭೀಷ್ಮಪರ್ವದಲ್ಲಿ ಪ್ರಸಂಗಾನುಸಾರವಾಗಿ ಹೇಳಿರುತ್ತದೆ. ॥ ೫೪ ॥ ಯಾವದಕ್ಕೆ ಭಗವದ್ಗೀತೆಯೆಂದೆನ್ನುತ್ತಾರೋ, ಆ ಗೀತಾಖ್ಯವನ್ನು ಬ್ರಹ್ಮ ಮತ್ತು ಶಂಕರನು ಸ್ತವನ ಮಾಡುವರೋ ಅದನ್ನು ಸನಕಾದಿಕರು ಅತಿ ಆದರದಿಂದ ಸೇವನ ಮಾಡುತ್ತಾರೆ. ॥ ೫೫ ॥ ಯಾವ ಪ್ರಕಾರಾ ಶರದೃತುವಿನಲ್ಲಿ ಪೌರ್ಣಿಮೆಯ ಬೆಳದಿಂಗಳದ ಅತಿಸೂಕ್ಷ್ಮವಾದ ಅಮೃತ ಕಣಗಳನ್ನು ಚಕೋರ ಪಕ್ಷಿಯ ಮರಿಗಳು ಆನಂದಯುಕ್ತವಾಗಿ ಬಹು ಕುಶಲತೆಯಿಂದ ಪ್ರಾಶನ ಮಾಡುತ್ತವೆ ॥ ೫೬ ॥ ಅದೇ ಪ್ರಕಾರಾ ಶ್ರೋತೃಗಳು ನಿಷ್ಕಾಮವುಳ್ಳವರಾಗಿ ಕುಶಾಗ್ರ ಬುದ್ಧಿಯಿಂದ ಈ ಭಗವದ್ಗೀತೆಯ ಅನುಭವವನ್ನು ತೆಗೆದುಕೊಳ್ಳಬೇಕು. ( ಹೀಗೆಯೇಕೆ ? ) ಅಂದರೆ ಗೀತೆಯಲ್ಲಿಯ ಪರಮ ತತ್ವವು ಶಬ್ದಾತೀತವಿರುವದರಿಂದ ತಿಳಿಯಲಿಕ್ಕೆ ಕಠಿಣವಿರುತ್ತದೆ. ॥ ೫೭ ॥ ಈ ಗೀತೆಯಲ್ಲಿಯ ಕಥೆಯನ್ನು ಮಾತನಾಡದೆ ವಿಚಾರ ಮಾಡಬೇಕು. ಇಂದ್ರಿಯಗಳಿಗೆ ತಿಳಿಯಗೊಡದೆ ಅದರ ಅನುಭವ ತೆಗೆದುಕೊಳ್ಳಬೇಕು. ಮತ್ತು ಅದನ್ನು ಕೇಳುವ ಮೊದಲು ಅದರಲ್ಲಿಯ ರಹಸ್ಯ ತಿಳಕೊಳ್ಳಬೇಕು. ॥ ೫೮ ॥

**ಜೈಸೇ ಭ್ರಮರ ಪರಾಗು ನೇತೀ । ಪರೀ ಕವಳದಳೇ ನೇಣತೀ । ತೈಸೀ ಪರೀ ಆಹೇ ಸೇವಿತೀ । ಗ್ರಂಥೀ ಇಯೇ ॥ ೫೯ ॥ ಕಾ ಆಪುಲಾ ಠಾವೋ ನಸಾಂಡಿತಾ । ಆಲಿಂಗೀಜೆ ಚಂದ್ರು ಪ್ರಕಟತಾ । ಹಾ ಅನುರಾಗು ಭೋಗಿತಾ । ಕುಮುದಿನೀ ಜಾಣೇ ॥ ೬೦ ॥ ಐಸೇನಿ ಗಂಭೀರಪಣೇ । ಸ್ಥಿರಾವಲೇನಿ ಅಂತಃಕರಣೇ । ಆಥಿಲಾತೋಚಿ ಜಾಣೆ । ಮಾನೂ ಇಯೇ ॥ ೬೧ ॥ ಅಹೋ ಅರ್ಜುನಾಚಿಯೇ ಪಾಂತೀ । ಜೇ ಪರಿಸಣಯಾ ಯೋಗ್ಯ ಹೋತೀ । ತಿಹೀ ಕೃಪಾಕರೂನಿ ಸಂತೀ । ಅವಧಾನದ್ಯಾವೇ ॥ ೬೨ ॥ ಹೇ ಸಲಗೀ ಮ್ಯಾ ಮ್ಹಣಿತಲೇ । ಚರಣಾಂಲಾಗೋನಿ ವಿನವಿಲೇ । ಪ್ರಭೊ ಸಖೋಲ ಹೃದಯ ಆಪುಲೇ । ಮ್ಹಣಊನಿಯಾ ॥ ೬೩ ॥ ಜೈಸಾ ಸ್ವಭಾವೋ ಮಾಯಬಾಪಾಂಚಾ ॥ ಅಪತ್ಯಬೋಲೇ ಜರೀ ಬೋಬಡೀ ವಾಚಾ । ತರೀ ಅಧಿಕಚಿ ತಯಾಚಾ । ಸಂತೋಷ ಆಥೀ ॥ ೬೪ ॥ ತೈಸಾ ತುಮ್ಹೀಮೀ ಅಂಗಿಕಾರಿಲಾ । ಸಜ್ಜನೀ ಆಪುಲಾ ಮ್ಹಣಿತಲಾ । ತರೀ ಉಣೆ ಸಹಜೇ ಉಪಸಾಹಲಾ । ಪ್ರಾರ್ಥೂ ಕಾಈ ॥ ೬೫ ॥ ಪರೀ ಅಪರಾಧು ತೋ ಆಣೀಕ ಆಹೆ । ಜೇ ಮೀ ಗೀತಾರ್ಥು ಕವಳೂ ಪಾಹೆ । ತೇ ಅವಧಾರಾ ವಿನವೂಲಾಹೇ । ಮ್ಹಣಾನಿಯಾ ॥ ೬೬ ॥ ಹೇ ಅನಾವರ ನ ವಿಚಾರಿತಾ । ವಾಯಾಚಿ ಧಿವಸಾ ಉಪನಲಾ ಚಿತ್ತಾ । ಯೇರ್ಹವೀ ಕಾಯ ಭಾನುತೇಜೀ ಖದ್ಯೋತಾ । ಶೋಭಾ ಆಥೀ ॥ ೬೭ ॥**

---

ಯಾವ ಪ್ರಕಾರಾ ಭ್ರಮರಗಳು ಕಮಲ ದಲಕ್ಕೆ ತಿಳಿಯಗೊಡದಂತೆ ಅದರೊಳಗಿನ ಪುಷ್ಪ ರೇಣುವನ್ನು ಸೇವಿಸುತ್ತವೆಯೋ ಅದೇ ಪದ್ಧತಿಯಿಂದ ಈ ಗ್ರಂಥದಲ್ಲಿಯ ತತ್ವಸೇವನೆಯನ್ನು ಮಾಡಬೇಕು. ॥೫೯॥ ಚಂದ್ರಪ್ರಕಾಶ ಬಿದ್ದ ಕೂಡ್ಲೆ ಕಮಲವು ಅರಳಿ ತನ್ನ ಸ್ಥಳವನ್ನು ಬಿಡದೇ ಯಾವ ಪ್ರಕಾರಾ ಚಂದ್ರನನ್ನು ಪ್ರೀತಿಯಿಂದ ಅಲಂಗಿಸುವ ಸುಖವನ್ನು ಹೊಂದುತ್ತದೋ, ॥೬೦॥ ಅದೇ ಪ್ರಕಾರಾ ಶಮದಮಗಳಿಂದ ಯಾವನ ಅಂತಃಕರಣವು ಸ್ಥಿರವಾಗಿರುತ್ತದೆ ಅವನೇ ಈ ಕಥೆಯ ರಹಸ್ಯವನ್ನು ತಿಳಿಯುವನು ಎಂದು ನಾವು ತಿಳಿಯುತ್ತೇವೆ. ॥೬೧॥ ಅದೇ ಪ್ರಕಾರಾ ಅರ್ಜುನನು ಅಧಿಕಾರವುಳ್ಳವನಿದ್ದನೆಂದು (ಶ್ರೀ ಜ್ಞಾನೇಶ್ವರ ಮಹಾರಾಜರು ನಂತರ ಮುಂದೆ ಪ್ರತಿಪಾದನೆ ಮಾಡುತ್ತಾರೆ) ಅರ್ಜುನನ ಯೋಗ್ಯತೆಯುಳ್ಳ ಶ್ರೋತೆಗಳು ಯಾರು ಇರುವರೋ (ಆ ಸದ್ಭಕ್ತ) ಸಂತರು ದಯವಿಟ್ಟು ಈ ಕಥೆಯ ಕಡಿಗೆ ಲಕ್ಷ ಕೊಡಬೇಕು. (ಈ ಸಂಭಾಷಣವು ಸ್ವಲ್ಪ ಅಧಿಕವಾಯಿತೆಂದು ಅದರ ಪರಿಹಾರ ಮಾಡುತ್ತಾರೆ) ॥೬೨॥ ಪ್ರಭೋನಿಮ್ಮ ಹೃದಯವು ಬಹಳೇ ಗಂಭೀರವಾದದ್ದಿರುತ್ತದೆ. ಆದುದರಿಂದ ನಿಮ್ಮ ಚರಣಾರವಿಂದದಲ್ಲಿ ಇದು ನನ್ನ ಸಲುಗೆಯ ವಿನಂತಿ ಇರುತ್ತದೆ ॥ ೬೩ ॥ ಯಾವ ಪ್ರಕಾರಾ ಸಣ್ಣ ಬಾಲಕನು ತೊದಲ ನುಡಿಗಳನ್ನಾಡಿದರೂ ಕೂಡ ತಾಯಿತಂದೆಗಳಿಗೆ ಸ್ವಭಾವಿಕವಾಗಿ ಅದರ ವಿಷಯವಾಗಿ ಬಹಳ ಸಂತೋಷ ಉಂಟಾಗುತ್ತದೆ ॥೬೪॥ ಆ ಪ್ರಕಾರಾ ನೀವು ಸಜ್ಜನರು ನನ್ನ ಅಂಗೀಕಾರ ಮಾಡಿದ್ದು ಯಾವಾಗ್ಗೆ ನೀವು ನನಗೆ "ನಮ್ಮವ"ನೆಂದು ತಿಳಿದಿರುವಿರಿ ಆಗ್ಗೆ ನನ್ನಲ್ಲಿ ಯಾವ ನ್ಯೂನತೆಗಳಿದ್ದರೂ ಅವುಗಳನ್ನು ನೀವು ಸಹಜವಾಗಿ ಸಹನ ಮಾಡುವಿರಿ ! ಅದಕ್ಕಾಗಿ ನಾನು ತಮ್ಮ ಪ್ರಾರ್ಥನೆ ಮಾಡಬೇಕೆಂಬ ಆವಶ್ಯವೇ ಇರುವದಿಲ್ಲ. ॥೬೫॥ ಆದರೆ ಯಾವ ಅಪರಾಧವು ನನ್ನ ಕೈಯಿಂದ ಆಗುತ್ತದೆ ಅದು ಬೇರೆಯೇ ಆಗಿರುತ್ತದೆ. ಗೀತೆಯ ಅರ್ಥವನ್ನು ನಾನು ಸ್ಪಷ್ಟಮಾಡಬೇಕೆಂದು ಅನ್ನುತ್ತೇನೆ. ಅದಕ್ಕೆ ಇತ್ತ ಕಡೆಗೆ ಲಕ್ಷ ಕೊಡಿರಿ. ಎಂದು ತಮ್ಮಂಥ ಜ್ಞಾನಿಗಳಿಗೆ ವಿನಂತಿ ಮಾಡುತ್ತೇನೆ. ಇದೇ ಅಪರಾಧವಿರುವದಿಲ್ಲೇನು ? ॥ ೬೬ ॥ ಈ ಗೀತೆಯ ಅರ್ಥ ಮಾಡುವ ಕೆಲಸವು ಬಹಳೇ ಕಠಿಣವಿರುತ್ತದೆ. ಇದರ ವಿಚಾರ ಮನಸಿನಲ್ಲಿ ಮಾಡದೇ ಅದನ್ನು ಸ್ಪಷ್ಟ ಮಾಡಲಿಕ್ಕೆ ನನ್ನ ಮನಸಿನಲ್ಲಿ ವ್ಯರ್ಥವಾಗಿ ಧೈರ್ಯವು ಉತ್ಪನ್ನವಾಗಿದೆ. ಸೂರ್ಯನ ತೇಜದ ಮುಂದೆ ಹೊನ್ನೀಹುಳದ ತೇಜವು ಹ್ಯಾಗೆ ಬಿದ್ದೀತು ? ॥ ೬೭ ॥

**ಕೀ ಟಿಟಿಭೂ ಚಾಂಚೂವರೀ । ಮಾಪ ಸುಯೋಸಾಗರೀ । ಮೀ ನೇಣತೂ ತ್ಯಾಪರೀ । ಪ್ರವರ್ತೇ ಯೇಥ ॥ ೧೮ ॥ ಆಯಕಾ ಆಕಾಶ ಗಿವಸಾವೇ । ತರೀ ಆಣೀಕ ತ್ಯಾಹುನಿ ಥೋರ ಹೋ ಆವೆ । ಮ್ಹಣವೂನಿ ಅಪಾಡು ಹೇ ಆಘವೆ । ನಿರ್ಧಾರಿತಾ ॥ ೧೯ ॥ ತಯಾ ಗೀತಾರ್ಥಾಚೀ ಥೋರೀ । ಸ್ವಯೇ ಶಂಭೂ ವಿವರೀ । ಜೇಥ ಭವಾನೀ । ಪ್ರಶ್ನು ಕರೀ । ಚಮತ್ಕಾರೋನೀ ॥ ೨೦ ॥ ತೇಥ ಹರೂಮ್ಹಣೇನೇಣಿಜೆ । ದೇವೀ ಜೈಸೇ ಕಾಸ್ವರೂಪ ತುಝೆ । ತೈಸೇ ಹೇ ನಿತ್ಯ ನೂತನ ದೇಖಿಜೆ । ಗೀತಾ ತತ್ವ ॥ ೨೧ ॥ ಹಾವೇದಾರ್ಥ ಸಾಗರು ಜಯಾ ನಿದ್ರಿತಾಚಾ ಘೋರರೂ । ತೋ ಸ್ವಯೇ ಸರ್ವೇಶ್ವರೂ । ಪ್ರತ್ಯಕ್ಷ ಅನುವಾದಲಾ ॥ ೨೨ ॥ ಐಸೇ ಜೇ ಅಗಾಧ । ಜೇಥ ವೇಡಾವತೀ ವೇದ । ತೇಥ ಅಲ್ಪಮೀ ಮತಿಮಂದ । ಕಾಯ ಹೋಯ ॥ ೨೩ ॥ ಹೇ ಅಪಾರ ಕೈಸೇನಿ ಕವಳಾವೆ । ಮಹಾತೇಜ ಕವಣೆ ಧವಳಾವೆ । ಗಗನ ಮುಠೀ ಸುವಾವೇ । ಮಶಕೇ ಕೇವೀ ॥ ೨೪ ॥ ಪರೀ ಏಥ ಅಸೇ ಏಕು ಆಧಾರು । ತೇಣೇಚಿ ಬೋಲೆ ಮೀ ಸಧರೂ । ಜೈಸಾನುಕೂಳ ಶ್ರೀಗುರೂ । ಜ್ಞಾನದೇವೋ ಮ್ಹಣೆ ॥ ೨೫ ॥ ಯೇರ್ಹವೀ ತರೀ ಮೀ ಮೂರ್ಖ । ಜರೀ ಜಾಹಲಾ ಅವಿವೇಕ । ತರೀ ಸಂತ ಕೃಪಾದೀಪಕ । ಸೋಜ್ವಳು ಅಸೇ ॥ ೨೬ ॥**

---

ಅಥವಾ ( ತನ್ನ ಮರಿಗಳನ್ನು ಸಮುದ್ರವು ಎಳೆದೊಯ್ಯಿತು ಎಂದು ಅದರ ಸೇಡು ತೀರಿಸುವದಕ್ಕಾಗಿ ) ಯಾವ ಪ್ರಕಾರಾ ಟಿಂವಕ್ಕಿಯು ಸಮುದ್ರವನ್ನು ಶೋಷಿಸಬೇಕೆಂದು ತನ್ನ ಚುಂಚಿನಿಂದ ಸಮುದ್ರದ ನೀರನ್ನು ಅಟ್ಟಿಸುವ ಪ್ರಯತ್ನ ಮಾಡುವದಕ್ಕೆ ಯತ್ನಿಸುವದೋ ಅದೇ ಪ್ರಕಾರಾ ನನ್ನ ಅಧಿಕಾರವಿಲ್ಲದೇ ಗೀತೆಯಂಥ ಗ್ರಂಥದ ಅರ್ಥವನ್ನು ಮಾಡಲಿಕ್ಕೆ ನಾನು ಪ್ರವೃತ್ತನಾಗಿರುವೆನು ॥ ೧೮ ॥ ಹೀಗೆ ನೋಡಿರಿ. ಯಾವ ಆಕಾಶವನ್ನು ಹಿಡಿಯಬೇಕೆಂದು ಮಾಡಿದರೆ ಅದಕ್ಕಿಂತಲೂ ತಾವು ಹೆಚ್ಚು ಬೆಳೆಯಬೇಕಾಗುತ್ತದೆ. ಆ ಪ್ರಕಾರಾ ನಿಜವಾಗಿ ಗೀತೆಯ ಅರ್ಥ ಮಾಡಲು ನನ್ನಕಿಂತಲೂ ಹೆಚ್ಚಿನ ಯೋಗ್ಯ ಮನುಷ್ಯರು ಬೇಕಾಗಿದ್ದರು. ಯಾಕಂದರೆ ಆ ಕೆಲಸವು ನನ್ನ ಶಕ್ತಿಯ ಹೊರಗೆ ಇರುತ್ತದೆ. ॥ ೧೯ ॥ ಯಾಕಂದರೆ ಈ ಗೀತೆಯ ಮಹತ್ಮೆಯು ವಿಶೇಷವಾಗಿರುತ್ತದೆ. ಸ್ವತಃ ಶಂಕರನು ಇದರ ಚರ್ಚೆಯನ್ನು ಮಾಡುವಾಗ್ಗೆ ಭವಾನಿಗೆ ಚಮತ್ಕಾರವೆನಿಸಿ ಅವಳು ಶಂಕರನಿಗೆ ಪ್ರಶ್ನೆ ಮಾಡಲಾಗಿ ॥ ೨೦ ॥ ಶ್ರೀ ಶಂಕರನು ಅನ್ನುತ್ತಾನೆ. ಎಲೈ ಪಾರ್ವತಿ ನಿನ್ನ ಸ್ವರೂಪವು ನಿತ್ಯ ಹೊಸದಾಗಿ ಇದ್ದದರಿಂದ ಯಾವ ಪ್ರಕಾರಾ ಅದರ ಅಂತಪತ್ತುವದಿಲ್ಲವೋ ಹಾಗೆ ಗೀತೆಯ ತತ್ವವು ನಿತ್ಯವಾಗಿ ಹೊಸದಾಗಿ ಇದ್ದದರಿಂದ ಅದಾವರೂ ತಿಳಿಯಲಾರದು ॥ ೨೧ ॥ ಯಾಕಂದರೆ ಯಾವ ಸರ್ವೇಶನ ನಿದ್ರೆಯ ಶಬ್ದದಿಂದ ವೇದಗಳು ಸಹಜವಾಗಿ ಉತ್ಪನ್ನವಾದವೋ, ಆ ಜಗದೀಶ್ವರನು ತನ್ನ ಸ್ವಮುಖದಿಂದ ಈ ಗೀತಾಶಾಸ್ತ್ರವನ್ನು ಅರ್ಜುನನಿಗೆ ಹೇಳಿದನು ॥ ೨೨ ॥ ಹೀಗೆ ಈ ಗೀತಾಶಾಸ್ತ್ರವು ಗಹನವಿದ್ದು ಈ ಸ್ಥಾನದಲ್ಲಿ ವೇದಗಳ ಮತಿಯೂ ಕೂಡಾ ಕುಂಠಿತವಾಗುತ್ತದೆ. ಅಂದ ಬಳಿಕ ಈ ಸ್ಥಳದಲ್ಲಿ ಅಲ್ಪಜ್ಞನೂ ಮಂದಮತಿಯೂ ಆದ ನನ್ನಂಥವನ ಪಾಡೇನು ! ॥ ೨೩ ॥ ಈ ಅಪಾರವಾದ ಗೀತಾ ತತ್ವವನ್ನು ಹ್ಯಾಗೆ ತಿಳಕೊಳ್ಳಬೇಕು ? ಸೂರ್ಯನ ತೇಜಸ್ಸನ್ನು ಯಾರು ಬೆಳಗಬೇಕು ? ಅಥವಾ ಸಣ್ಣ ಹುಳವು ಆಕಾಶವನ್ನು ತನ್ನ ಮುಷ್ಟಿಯಲ್ಲಿ ಹೇಗೆ ಹಿಡಿಯಬೇಕು ? ॥ ೨೪ ॥ ಆದರೆ ಶ್ರೀ ಜ್ಞಾನದೇವರು ಅನ್ನುತ್ತಾರೆ. ಯಾವಾಗ್ಗೆ ಶ್ರೀಗುರುಗಳು ನನಗೆ ಅನುಕೂಲ ಇರುತ್ತಾರೆ. ಆಗ್ಗೆ ಇಂಥ ಮಹತ್‍ಕೃತ್ಯವನ್ನು ಮಾಡಲಿಕ್ಕೆ ಅವರದೇ ನನಗೆ ಆಧಾರವಿರುತ್ತದೆ. ಮತ್ತು ಇವರಿಂದಲೇ ನನಗೆ ಧೈರ್ಯ ಬಂದಿರುತ್ತದೆ ॥ ೨೫ ॥ ನಾನು ಅಜ್ಞಾನಿಯೂ ಅವಿವೇಕಿಯೂ ಇದ್ದಾಗ್ಯೂ ಸಂತರ ಕೃಪಾರೂಪ ದೀಪದಿಂದ ಸೋಜ್ವಲ ( ಯೋಗ್ಯ ) ನಾಗಿರುತ್ತೇನೆ ॥ ೨೬ ।

**ಲೋಹಾಚೆ ಕನಕ ಹೋಯೇ । ಹೇ ಸಾಮರ್ಥ್ಯ ಪರಿಸೀಚ ಆಹೆ ಕೀ ಮೃತಹೀ ಜೀವಿತ ಲಾಹೆ । ಅಮೃತ ಸಿದ್ಧಿ ॥ ೭೭ ॥ ಜರೀ ಪ್ರಕಟೇ ಸಿದ್ಧ ಸರಸ್ವತೀ । ತರೀ ಮುಂಕಯಾ ಆಥೀಭಾರತೀ । ಏಥ ವಸ್ತು ಸಾಮರ್ಥ್ಯ ಶಕ್ತೀ । । ನವಲ ಕಾಯೀ ॥ ೭೮ ॥ ಜಯಾತೇ ಕಾಮಧೇನು ಮಾಯ । ತಯಾಸೀ ಅಪ್ರಾಪ್ಯ ಕಾಹೀ ಆಹೆ । ಮ್ಹಣೂನಿ ಮೀ ಪ್ರವರ್ತೋಂ ಲಾಹೇ । ಗ್ರಂಥೀ ಇಯೇ ॥ ೭೯ ॥ ತರೀ ನ್ಯೂನತೇ ಪುರತೇ । ಅಧಿಕತೇ ಸರತೇ । ಕರೂನಿ ಘೇಯಾವೆ ಹೇ ತುಂಮತೇ । ವಿನವಿತು ಅಸೇ ॥ ೮೦ ॥ ಆತಾ ದೇಈಜೋ ಅವಧಾನ ತುಮ್ಹೀ ಬೋಲವಿಲ್ಹಾ ಮೀ ಬೋಲೇನ । ಜೈಸೇ ಚೇಷ್ಟೇ ಸೂತ್ರಾಧೀನ । ದಾರೂಯಂತ್ರ ॥ ೮೧ ॥ ತೈಸಾ ಮೀ ಅನುಗ್ರಹೀತು ಸಾಧೂಂಚಾ ನಿರೂಪಿತು । ತೇ ಆಪುಲಿಯಾ ಪರಿ ಅಲಂಕರಿತು । ಭಲತಯಾಪರೀ ॥ ೮೨ ॥ ತವ ಶ್ರೀಗುರೂ ಮ್ಹಣತೀ ರಾಹೀ । ಹೇ ತುಜ ಬೋಲಾವೇ ನಲಗೇ ಕಾಹೀ । ಆತಾ ಗ್ರಂಥಾ ಚಿತ್ತ ದೇಈ । ಝಡಕರೀ ವೇಗಾ ॥ ೮೩ ॥ ಯಾ ಬೋಲಾ ನಿವೃತ್ತಿದಾಸು । ಪಾವೂನಿ ಪರಮ ಉಲ್ಲಾಸು । ಮ್ಹಣೆ ಪರಿಯೇಸಾ ಮನಾ ಅವಕಾಶು । ದೇವೂನಿಯಾ ॥ ೮೪ ॥**

---

ಪರಿಸ ಮಣಿಯ ಸಾಮರ್ಥ್ಯದಿಂದ ಕಬ್ಬಿಣವು ಬಂಗಾರವಾಗುತ್ತದೆ. ಅಥವಾ ಮೃತ ಮನುಷ್ಯನು ಅಮೃತ ಪಾನದಿಂದ ಜೀವಂತವಾಗುತ್ತಾನೆ. ॥ ೭೭ ॥ ಅಥವಾ ಸರಸ್ವತಿಯೇ ಪ್ರಸಂನವಾದರೆ ಮೂಕನಿಗೂ ಕೂಡಾ ವಾಚಾ ಉತ್ಪನ್ನವಾಗುತ್ತದೆ. ಅಂದಬಳಿಕ ಇದರಲ್ಲಿ ಆಶ್ಚರ್ಯವೇನು? ಇದು ಕೇವಲ ವಸ್ತು ಮಾಹತ್ಮ್ಯ ಇರುತ್ತದೆ. ॥ ೭೮ ॥ ಕಾಮಧೇನುವೇ ಯಾರತಾಯಿಯಾಯು ಆ ಕೂಸಿಗೆ ದುರ್ಲಭವಾದದ್ದು ಯಾವದಿರುತ್ತದೆ? ಆದುದರಿಂದ ನಾನು ಈ ಗ್ರಂಥವನ್ನು ಮಾಡಲಿಕ್ಕೆ ಪ್ರವೃತ್ತನಾಗಿರುವೆನು. ॥ ೭೯ ॥ ಆದರೂ ಇದರಲ್ಲಿ ಕಡಿಮೆ ಇದ್ದದ್ದನ್ನು ಪೂರ್ಣಮಾಡಿಕೊಂಡು ಹೆಚ್ಚಾದದ್ದನ್ನು ಬಿಟ್ಟುಬಿಡಿರಿ ಎಂದು ತಮಗೆ ನನ್ನ ವಿನಂತಿ ಇರುತ್ತದೆ. ॥ ೮೦ ॥ ಶ್ರೀಗುರು ನಿವೃತ್ತಿನಾಥ ಮಹಾರಾಜರೇ ಇನ್ನುಮೇಲೆ ನೀವು ( ಈ ಕಥೆಯ ಕಡೆಗೆ ) ಅವಧಾನವನ್ನು ಕೊಡಬೇಕು. ಮತ್ತು ನೀವು ನನ್ನ ( ಅಂತರಂಗದಲ್ಲಿ ನಿಂತು. ಮಾತಾಡಿಸುವದರಿಂದಲೇ ನಾನು ಗೀತೆಯಂಥ ಗ್ರಂಥದಮೇಲೆ ವ್ಯಾಖ್ಯಾನ ಮಾಡುತ್ತೇನೆ ) ಸಂಭಾಷಣ ಮಾಡುತ್ತೇನೆ. ಕಳಸೂತ್ರದ ಕಟ್ಟಿಗೆಯ ಗೊಂಬೆಯು ಸೂತ್ರಧಾರನು ಕುಣಿಸುವಂತೆ ಅದು ಕುಣಿಯುತ್ತದೆ. ॥ ೮೧ ॥ ಅದರಂತೆ ನೀವು ನನ್ನಮೇಲೆ ಅನುಗ್ರಹ ಮಾಡಿರುವಿರಿ. ನಾನು ಸಾಧುಗಳ ಅಜ್ಞಾಧಾರಿ ಇದ್ದೇನೆ. ನೀವು ನಿಮ್ಮ ಅಪೇಕ್ಷೆಯಂತೆ ನನ್ನನ್ನು ಸುಶೋಭಿತನನ್ನಾಗಿ ಮಾಡಿ ಕುಣಿಸಿದಂತೆ ನಾನು ಕುಣಿಯುವೆನು. ॥ ೮೨ ॥ ಆ ಕಾಲಕ್ಕೆ ಶ್ರೀಗುರು ನಿವೃತ್ತಿನಾಥರು ಅನ್ನುತ್ತಾರೆ. ಸಾಕು ಬಿಡು ಇದನ್ನು ನೀನು ನಮಗೆ ಹೇಳಬೇಕಾಗಿರುವದೇನು? ಇನ್ನು ( ವ್ಯರ್ಥವಾಗಿ ಕಾಲಕಳೆಯದೆ ) ತೀವ್ರವೇ, ಗೀತಾರ್ಥ ಹೇಳುವವದರ ಕಡೆಗೆ ಲಕ್ಷಪೂರೈಸು ॥ ೮೩ ॥ ಅಂತಾ ಶ್ರೀಗುರುಗಳ ಆಜ್ಞೆಯಾದದ್ದನ್ನು ನೋಡಿ ಶ್ರೀ ನಿವೃತ್ತಿನಾಥರ ಶಿಷ್ಯ ಜ್ಞಾನದೇವರು, ಪರಮ ಸಂತುಷ್ಟ ಚಿತ್ತ ಉಳ್ಳವರಾಗಿ ನಾನು ( ಗೀತೆಯಲ್ಲಿಯ ಶ್ರೀ ಕೃಷ್ಣಾರ್ಜುನರ ಸಂವಾದದ ) ಸಂಭಾಷಣವನ್ನೇ ಮಾಡುತ್ತೇನೆ. ಆ ಸಂವಾದವನ್ನು ಶಾಂತಮನಸ್ಸಿನಿಂದ ಶ್ರವಣ ಮಾಡಬೇಕು. ॥ ೮೪ ॥

---

# ಶ್ರೀಮದ್ಭಗವದ್ಗೀತೆ ಅಥವಾ ಶ್ರೀ ಜ್ಞಾನೇಶ್ವರೀ

## ಮೊದಲನೆಯ ಅಧ್ಯಾಯವು

---

**ಧೃತರಾಷ್ಟ್ರ ಉವಾಚ—**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

[ **ಧರ್ಮಕ್ಷೇತ್ರೇ ಇತಿ** ] ತರೀ ಪುತ್ರಸ್ನೇಹೇ ಮೋಹಿತ । ಧೃತರಾಷ್ಟ್ರ ಅಸೇ ಪುಸತ । ಮ್ಹಣೇ ಸಂಜಯಾ ಸಾಂಗೇ ಮಾತ । ಕುರುಕ್ಷೇತ್ರೀಚೀ ॥ ೮೫ ॥ ಜೇ ಧರ್ಮಾಲಯ ಮ್ಹಣಿಜೇ । ತೇಥ ಪಾಂಡವ ಆಣಿ ಮಾಝೇ । ಗೇಲೇ ಅಸತೀ ವ್ಯಾಜೇ । ಝುಂಝಾ ಚೇನಿ ॥೮೬॥ ತರೀ ತಿಹೀ ಯೇತುಲಾ ಅವಸರೀ। ಕಾಯ ಕಿಜತ ಅಸೇ ಯೇರ ಯೇರೀ । ತೇ ಝಡಕರೀ ಕಥನ ಕರೀ । ಮಜ ಪ್ರತಿ ॥ ೮೭ ॥

**ಅರ್ಥ**— ಪುತ್ರಪ್ರೇಮದಿಂದ ಮೋಹಿತನಾದ ಧೃತರಾಷ್ಟ್ರ ರಾಜನು ಅನ್ನುತ್ತಾನೆ. “ಸಂಜಯನೇ ಕುರುಕ್ಷೇತ್ರದಲ್ಲಿ ನಡೆದ ಸಂಗತಿಯನ್ನು ನನ್ನ ಮುಂದೆ ಹೇಳು. ॥ ೮೫ ॥ ಯಾವ ಕುರುಕ್ಷೇತ್ರವು ಧರ್ಮಸಾಧನಕ್ಕೆ ಯೋಗ್ಯವಾದ ಸ್ಥಳವೆಂದು ಕರೆಯಲ್ಪಡುತ್ತಿದೆಯೋ, ಅಲ್ಲಿ ನನ್ನ ಮಕ್ಕಳೂ ಮತ್ತು ಪಂಡುರಾಜನ ಮಕ್ಕಳೂ ಯುದ್ಧಕ್ಕೋಸುಗ ಹೋಗಿದ್ದಾರೆ. ॥ ೮೬ ॥ ಆದರೆ ಅವರು ಪರಸ್ಪರರಲ್ಲಿ ಇಷ್ಟು ಹೊತ್ತಿನವರೆಗೆ ಏನು ಮಾಡುತ್ತಿರುವರೆಂಬುದನ್ನು ನನಗೆ ಬೇಗನೇ ಹೇಳು. ॥ ೮೭ ॥

**ಸಂಜಯ ಉವಾಚ—**

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**
**ಪಶ್ಯೈತಾಂ ಪಾಂಡು ಪುತ್ರಾಣಾಮಾಚಾರ್ಯ ಮಹತೀಂ ಚಮೂಂ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

[**ದೃಷ್ಟ್ವಾತು ಇತಿ**] ತಿಯೇ ವೇಳೀ ತೋ ಸಂಜಯ ಬೋಲೇ । ಮ್ಹಣೇ ಪಾಂಡವ ಸೈನ್ಯ ಉಚಲಲೇ । ಜೈಸೇ ಮಹಾಪ್ರಳಯೀ ಪಸರಿಲೆ । ಕೃತಾಂತ ಮುಖ ॥ ೮೮ ॥ ತೈಸೇ ತೇ ಘನದಾಟ। ಉಠಾವಲೇ ಏಕವಟ । ಜೈಸೇ ಉಸಳಲೇ ಮಹಾ ಪ್ರಳಿಯೀ ಕಾಲಕೂಟ । ಧರೀ ಕವಣ ॥೮೯॥ ನಾತರೀ ವಡವಾನಲ ಸಾಂದು ಕಲಾ । ಪ್ರಲಯವಾತೇ ಪ್ರೋಕ್ಷಿಲಾ । ಸಾಗರ ಶೋಷೂನಿ ಉಧವಲಾ । ಅಂಬರಾಸೀ ॥ ೯೦ ॥ ತೈಸೇ ದಳ ದುರ್ಧರ । ನಾನಾ ವ್ಯೂಹೀ ಪರಿಕರ । ಅವಗಮಲೇ ಭಯಾಸುರ ತಿಯೇ ಕಾಳೀ ॥ ೯೧ ॥ ತೇ ದೇಖೋನಿ ದುರ್ಯೋಧನೇ । ಅವ್ಹೇರಿಲೇ ಕವಣೇ ಮಾನೇ । ಜೈಸೇ ನ ಗಣಿಜೇ ಪಂಚಾನನೇ । ಗಜ ಘಟಾಂತೇ ॥ ೯೨ ॥ ಮಗ ದ್ರೋಣಾಪಾಸೀ ಆಲಾ । ತಯಾ ತೇ ಮ್ಹಣೇ ಹಾ ದೇಖಿಲಾ? । ಕೈಸಾ ದಳಭಾರ ಉಚಳಲಾ ಪಾಂಡವಾಂಚಾ ॥ ೯೩ ॥ ಗಿರಿ ದುರ್ಗ ಜೈಸೇ ಚಾಲತೇ । ತೈಸೇ ವಿವಿಧ ವ್ಯೂಹ ಭಂವತೇ । ರಚಲೇ ಆಥಿ ಬುದ್ಧಿಮಂತೇ । ದ್ರುಪದ ಕುಮರೇ ॥ ೯೪ ॥ ಜೋ ಕಾ ತುಮ್ಹೀ ಶಿಷ್ಯ ಆಪುಲಾ । ವಿದ್ಯೇಸಿ ವಸೌಟಾ ಕೇಲಾ । ತೇಣೇ ಹಾ ಸೈನ್ಯಸಿಂಧು ಪಾಖಾರಿಲಾ । ದೇಖ ದೇಖ ॥ ೯೫ ॥

**ಅರ್ಥ** – ಆಗ ಸಂಜಯನು ಅನ್ನುತ್ತಾನೆ. “ ಮಹಾ ಪ್ರಳಯದಕಾಲಕ್ಕೆ ಕಾಲಮೃತ್ಯುವಿನ ಬಾಯಿಯು ವಿಕರಾಲವಾಗಿಯೂ, ವಿಶಾಲವಾಗಿಯೂ ತೆರೆದಿರುವಂತೇ ಪಾಂಡವರ ಸೈನ್ಯವು ಭಯಾವಹವಾಗಿರುವದು. ॥ ೮೮ ॥ ಕಾಳಕೂಟ ವಿಷವು ಉಕ್ಕೇರಿ ಬಂದರೆ ಅದನ್ನು ಸಹಿಸುವುದು ಹೇಗೆ ತಾನೇ ಅಸಾಧ್ಯವೋ ಹಾಗೆಯೇ ಯುದ್ಧಸನ್ನದ್ಧವಾಗಿ ಮೇಲೇರಿ ಬರುತ್ತಿರುವ ಪಾಂಡವರ ಮಹಾಸೈನ್ಯವನ್ನು ತಡೆಯುವದೂ ಅಸಾಧ್ಯವಾದದ್ದು. ॥ ೮೯ ॥ ಪ್ರಳಯಾಗ್ನಿಯು ಪ್ರಳಯವಾಯುವಿನಿಂದ ವಿಸ್ತಾರವಾಗಿ ಮಹಾಸಮುದ್ರದ ಜಲವನ್ನೇ ಶೋಷಿಸಿ ಆಕಾಶದವರೆಗೆ ಪ್ರದೀಪ್ತವಾಗಿ ಭೀಕರವಾಗುವಂತೆ ॥ ೯೦ ॥ ಪಾಂಡವರ ಪ್ರಚಂಡವಾದ ಸೈನ್ಯವೂ ನಾನಾತರಹದ ವ್ಯೂಹ ರಚನೆಯಿಂದ ಕೂಡಿಕೊಂಡು ಬಹು ಬಯಂಕರವಾಗಿ ತೋರುತ್ತದೆ. ॥ ೯೧ ॥ ಆದರೆ ಸಿಂಹವು ಆನೆಯ ಹಿಂಡನ್ನು ನೋಡಿ ಗಣನೆಗೆ ತಾರದೇ ಅದನ್ನು ತಿರಸ್ಕರಿಸುವಂತೆ ದುರ್ಯೋಧನನು ಪಾಂಡವರ ಸೈನ್ಯವನ್ನು ನೋಡಿ ಅದೊಂದು ಕಃಪದಾರ್ಥವೆಂದು ತಿಳಿದಿರುವನು. ॥ ೯೨ ॥ ಆ ಮೇಲೆ ದುರ್ಯೋಧನನು ದ್ರೋಣಾಚಾರ್ಯರ ಹತ್ತಿರಕ್ಕೆ ಬಂದು ಅನ್ನುತ್ತಾನೆ. “ ಆಚಾರ್ಯರೇ ಪಾಂಡವರ ಸೈನ್ಯವು ಹೇಗೆ ಸನ್ನದ್ಧವಾಗಿರುವುದೆಂಬುದನ್ನು ನೋಡಿರುವಿರಾ ? ॥ ೯೩ ॥ ಬುದ್ಧಿವಂತನಾದ ದ್ರುಪದಪುತ್ರನಾದ ಧೃಷ್ಟದ್ಯುಮ್ನನು ಸೈನ್ಯದ ವ್ಯೂಹವನ್ನು ಒಳ್ಳೇ ಚಾತುರ್ಯದಿಂದ ರಚಿಸಿದ್ದಾನೆ. ಅದನ್ನು ನೋಡಿದರೆ, ಅದೇನು ಪ್ರತ್ಯಕ್ಷ ಗಿರಿಗಳೂ, ಕೋಟೆಗಳೂ ನಡೆದು ಬರುತ್ತಿವೆಯೋ ಎಂಬಂತೆ ಭಾಸವಾಗುತ್ತಿದೆ. ॥ ೯೪ ॥ ಆಚಾರ್ಯರೇ, ಅದೋ ಅಲ್ಲಿ ನೋಡಿ, ನೀವು ಬಹು ಪ್ರೀತಿಯಿಂದ ಕಲಿಸಿ ಪಾರಂಗತನನ್ನಾಗಿ ಮಾಡಿದ ಶಿಷ್ಯಶ್ರೇಷ್ಠ ಧೃಷ್ಟದ್ಯುಮ್ನನು ತನ್ನ ಸೈನ್ಯವನ್ನು ವಿಸ್ತಾರವಾಗಿ ಹೇಗೆ ಶಿಸ್ತಿನಿಂದ ನಿಲ್ಲಿಸಿದ್ದಾನೆ ! ॥ ೯೫ ॥

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

[ **ಅತ್ರ ಶೂರ ಇತಿ** ] ಆಣೀಕಹೀ ಅಸಾಧಾರಣ । ಜೇ ಶಸ್ತ್ರಾಸ್ತ್ರೀ ಪ್ರವೀಣ । ಕ್ಷಾತ್ರಧರ್ಮಿ ನಿಪುಣ । ವೀರ ಆಹಾತೀ ॥ ೯೬ ॥ ಜೇ ಬಳೇ ಪ್ರೌಢೀ ಪೌರುಷೇ । ಭೀಮಾರ್ಜುನಾ ಸಾರಿಖೇ । ತೇ ಸಾಂಗೇನ ಕೌತುಕೇ । ಪ್ರಸಂಗೇಚೀ ॥ ೯೭ ॥ ಏಥ ಯುಯುಧಾನ ಸುಭಟ । ಆಲಾ ಅಸೇ ವಿರಾಟ । ಮಹಾರಥೀ ಶ್ರೇಷ್ಠ । ದ್ರುಪದ ವೀರ ॥ ೯೮ ॥

**ಅರ್ಥ**:— ಇನ್ನೂ ಅದೆಷ್ಟೋ ಶಸ್ತ್ರಾಸ್ತ್ರ ವಿಶಾರದರೂ, ಕ್ಷಾತ್ರ ಧರ್ಮನಿಪುಣರೂ, ದೊಡ್ಡ ದೊಡ್ಡ ಪರಾಕ್ರಮಿಗಳೂ ಇದ್ದಾರೆ. ॥ ೯೬ ॥ ಅಲ್ಲದೇ ಬಲದಿಂದಲೂ, ಯೋಗ್ಯತೆಯಿಂದಲೂ ಪುರುಷಾರ್ಥದಿಂದೂ ಭೀಮಾರ್ಜುನರನ್ನು ಸರಿಗಟ್ಟುವ ಮಹಾವೀರರಿನ್ನೆಷ್ಟೋ ಜನರಿದ್ದಾರೆ. ಅವರೆಲ್ಲರನ್ನೂ ಪ್ರಸಂಗಾನುಸಾರವಾಗಿ ಬಣ್ಣಿಸುತ್ತೇನೆ. ॥ ೯೭ ॥ ಮತ್ತು ಈ ಸಂಗ್ರಾಮಕ್ಕೆ ಮಹಾವೀರನಾದ ಯುಯುಧಾನ ರಾಜನೂ, ವಿರಾಟಭೂಪನೂ, ಶ್ರೇಷ್ಠ ಮಹಾರಥಿಯಾದ ದ್ರುಪದ ರಾಜನೂ ಬಂದಿರುವರು. ॥ ೯೮ ॥

**ಧೃಷ್ಟಕೇತುಶ್ಚೇಕಿತಾನಃ ಕಾಶಿರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿ ಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**
**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

[**ಧೃಷ್ಟಕೇತುರಿತಿ**] ಚೇಕಿತಾನ ಧೃಷ್ಟಕೇತು। ಕಾಶಿರಾಜ ವಿಕ್ರಾಂತು। ಉತ್ತಮೌಜಾ ನೃಪನಾಥು। ಶೈಬ್ಯದೇಖ ॥ ೯೯ ॥ ಹಾ ಕುಂತಿಭೋಜ ಪಾಹೆ । ಏಥ ಯುಧಾಮನ್ಯು ಆಲಾ ಆಹೆ । ಆಣಿ ಪುರುಜಿತಾದಿ ರಾಯ ಹೇ । ಸಕಳ ದೇಖ ॥ ೧೦೦ ॥ ಹಾ ಸುಭದ್ರಾಹೃದಯ ನಂದನ । ಜೋ ಅಪರ ನವಾರ್ಜುನ । ತೋ ಅಭಿಮನ್ಯು ಮ್ಹಣೇ ದುರ್ಯೋಧನ । ದೇಖೇ ದ್ರೋಣಾ ॥ ೧ ॥ ಆಣೀಕಹೀ ದ್ರೌಪದೀ ಕುಮರ । ಹೇ ಸಕಳ ಹೀ ಮಹಾರಥೀ ವೀರ । ಮಿತೀ ನೇಣಿಜೇ ಪರಿ ಅಪಾರ । ಮಿನಲೇ ಅಸತೀ ॥ ೨ ॥

**ಅರ್ಥ—** ಚೇಕಿತಾನ, ಧೃಷ್ಟಕೇತು, ಪರಾಕ್ರಮಿಯಾದ ಕಾಶಿರಾಜ ರಾಜಶ್ರೇಷ್ಠನಾದ ಉತ್ತಮೌಜ, ಮತ್ತು ಶೈಬ್ಯರಾಜ ಇವೇ ಮೊದಲಾದ ರಾಜರು ಬಂದುದನ್ನು ನೋಡಿರಿ." ॥ ೯೯ ॥ ಅಲ್ಲದೇ ಅದೋ ಆ ಕುಂತಿ ಭೋಜನನ್ನು ನೋಡಿರಿ. ಅಕೋ ಅಲ್ಲಿರುವ ಯುಧಾಮನ್ಯುವಿನನ್ನು ನೋಡಿರಿ. ಅಲ್ಲಿಯೇ ಕಾದಿರುವ ಪುರೂಜಿತ್ ಮೊದಲಾದ ಅಖಿಲ ರಾಜಸಮೂಹವನ್ನೂ ಅವಲೋಕಿಸಿರಿ. ॥ ೧೦೦ ॥ ದುರ್ಯೋಧನನು ಮತ್ತೆ ಹೇಳುತ್ತಾನೆ. "ಆಚಾರ್ಯರೇ, ಸುಭದ್ರೆಗೆ ಆಹ್ಲಾದವನ್ನುಂಟುಮಾಡುವ ಪ್ರಬಲ ಪರಾಕ್ರಮಿಯಾದ ಅಭಿಮನ್ಯುವು ನೂತನ ಅರ್ಜುನನಂತೆ ವೀರ ಶ್ರೀಯಿಯಿಂದ ನಿಂತಿರುವನು. ನೋಡಿರಿ. ॥ ೧ ॥ ಅದರಂತೆಯೇ ದ್ರೌಪದಿಯ ಮಕ್ಕಳೂ ಎಲ್ಲ ಮಹಾರಥಿಗಳೂ, ಅಸಂಖ್ಯ ವೀರರೂ ಈ ಸಂಗ್ರಾಮದಲ್ಲಿ ನೆರೆದಿದ್ದಾರೆ. ॥ ೨ ॥

**ಅಸ್ಮಾಕಂತು ವಿಶಿಷ್ಟಾಯೇ ತಾನ್ನಿಬೋಧ ದ್ವಿಜೋತ್ತಮ !**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿತೇ ॥ ೭ ॥**
**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವಚ ॥ ೮ ॥**

**[ ಅಸ್ಮಾಕಂತು ಇತಿ ]** ಆತಾ ಆಮಚ್ಯಾದಳೀ ನಾಯಕ । ಜೇ ರೂಢವೀರ ಸೈನಿಕ । ತೇ ಪ್ರಸಂಗೇ ಆಇಕ । ಸಾಂಗಿಜತೀ ॥ ೩ ॥ ಉದ್ದೇಶೇ ಏಕದೋನೀ । ಜಾಯಿ ಜತೀ ಬೋಲೋನೀ । ತುಮ್ಹೀ ಆದಿ ಕರೂನಿ । ಮುಖ್ಯ ಜೇ ಜೇ ॥ ೪ ॥ ಹಾ ಭೀಷ್ಮ ಗಂಗಾನಂದನು । ಜೋ ಪ್ರತಾಪ ತೇಜಸ್ವೀ ಭಾನು । ರಿಪುಗಜ ಪಂಚಾನನು । ಕರ್ಣವೀರ ॥ ೫ ॥ ಏಕೇಕಾತೇನೆ ಮನೋ ವ್ಯಾಪಾರೇ । ಹೇ ವಿಶ್ವ ಹೋಯ ಸಂಹರೇ । ಹಾ ಕೃಪಾಚಾರ್ಯ ನಪುರೆ । ಏಕಲಾಚಿ ॥ ೬ ॥ ಏಥ ವಿಕರ್ಣ ವೀರ ಆಹೆ । ಹಾ ಅಶ್ವತ್ಥಾಮಾ ಪೈಲ ಪಾಹೆ । ಯಾಚಾ ಅಡವರಸದಾ ವಾಹೆ । ಕೃತಾಂತ ಮನಿ ॥ ೭ ॥ ಸಮಿತಿಂಜಯ ಸೌಮದತ್ತಿ । ಐಸೇ ಆಣಿಕಹೀ ಬಹುತ ಆಹಾತಿ । ಜಯಾಚಿಯಾ ಬಳಾ ಮಿತಿ । ಧಾತಾ ಹಿ ನೇಣೇ ॥ ೮ ॥

**ಅರ್ಥ—** ಎಲೈ ಬ್ರಾಹ್ಮಣ ಶ್ರೇಷ್ಠರೇ, ಇನ್ನು ನಮ್ಮೊಳಗಿರುವ ಮಹತ್ವದ ಸೇನಾನಾಯಕರ ಹೆಸರುಗಳನ್ನು ನಿದರ್ಶನಾರ್ಥವಾಗಿ ಹೇಳುವೆನು ಕೇಳಿರಿ. ॥ ೪ ॥ ಶೌರ್ಯದಿಂದಲೂ, ಬಲದಿಂದಲೂ ಪ್ರತಿ ಸೂರ್ಯನಂತೆ ಪ್ರಕಾಶಿಸುತ್ತಿರುವ ಗಂಗಾನಂದನನಾದ ಭೀಷ್ಮಾಚಾರ್ಯರೂ, ಶತ್ರುರೂಪೀ ಆನೆಗಳಿಗೆ ಕೇವಲ ಸಿಂಹನಂತೆ ತೋರುವ ಆ ಭೀಮ ಪರಾಕ್ರಮಿಯಾದ ಕರ್ಣನು ॥ ೫ ॥ ಇವರಲ್ಲಿ ಒಬ್ಬೊಬ್ಬರೇ ತಮ್ಮ ಮನಸ್ಸಿಗೆ ಬಂದರೆ ವಿಶ್ವದ ಸಂಹಾರವನ್ನೇ ಮಾಡಿಬಿಡುವರು. ಹೆಚ್ಚಿಗೆ ಹೇಳುವದೇನು ? ಈ ಕೃಪಾಚಾರ್ಯರೊಬ್ಬರೇ ಸಹ ಈ ಕೃತ್ಯವನ್ನು ಮಾಡಲಿಕ್ಕೆ ಸಾಕಾಗಿರುವರು. ॥ ೬ ॥ ಈ ಸ್ಥಳದಲ್ಲಿ ಮಹಾವೀರನಾದ ಕರ್ಣನೂ ಇರುವನು. ಅದರಂತೆ ಅಲ್ಲಿರುವ ಅಶ್ವತ್ಥಾಮನು ಪ್ರತ್ಯಕ್ಷ ಕಾಲಯಮನಿಗೆ ಕೂಡಾ ಭೀತಿದಾಯಕನಾಗಿರುವನು. ॥ ೧-೭ ॥ ಯುದ್ಧದಲ್ಲಿ ಸದೈವ ವಿಜಯಿಯಾದ ಈ ಸೋಮದತ್ತಿಯೂ ಅಲ್ಲದೇ ಪ್ರತ್ಯಕ್ಷ ಬ್ರಹ್ಮದೇವನಿಗೂ ತಿಳಿಯಲಸದಳವಾದ ಪರಾಕ್ರಮ ಉಳ್ಳ ಮಹಾ ವೀರರೂ ಇನ್ನೆಷ್ಟೊ ಇದ್ದಾರೆ. ॥ ೧೦೮ ॥

**ಅನ್ಯೇಚ ಬಹವಃ ಶೂರಾ ಮದರ್ಥೇ ತ್ಯಕ್ತ ಜೀವಿತಾಃ ।**
**ನಾನಾ ಶಸ್ತ್ರ ಪ್ರಹರಣಾಃ ಸರ್ವೇ ಯುದ್ಧ ವಿಶಾರದಾಃ ॥ ೯ ॥**

**[ ಅನ್ಯೇಚ ಬಹವಃ ಶೂರಾ ಇತಿ ]** ಜೇ ಶಸ್ತ್ರವಿದ್ಯಾ ಪಾರಂಗತ । ಮಂತ್ರಾವತಾರ ಮೂರ್ತ । ಹೋ ಕಾ ಜೇ ಅಸ್ತ್ರಜಾತ । ಏಥೂನಿ ರೂಢ ॥ ೯ ॥ ಹೇ ಅಪ್ರತಿಮಲ್ಲ ಜಗೀ । ಪುರತಾ ಪ್ರತಾಪ ಆಂಗೀ । ಪರೀ ಸರ್ವಪ್ರಾಣೇ ಮಜಚಿ ಲಾಗೀ । ಆರಾಯಿಲೇ ಅಸತಿ ॥ ೧೦ ॥ ಪತಿವ್ರತೇಚೆ ಹೃದಯ ಜೈಸೇ ।

ಪತಿವಾಂಚೂನಿ ನ ಸ್ಪರ್ಶೇ । ಮೀ ಸರ್ವಸ್ವ ಯಾ ತೈಸೇ । ಸುಭಟಾಸೀ ॥೧೧॥ ಆಮುಚಿಯಾ ಕಾಜಾಚೇ ನಿಪಾಡೇ । ದೇಖತೀ ಆಪುಲೇ ಜೀವಿತ ಥೋಕಡೇ । ಐಸೇ ನಿರವಧಿ ಚೋಖಡೇ । ಸ್ವಾಮಿಭಕ್ತ ॥೧೨॥ ಜುಂಝುತಿ ಕುಳಕಣೀ ಜಾಣತೀ । ಕಳೇ ಕೀರ್ತಿಸೀ ಜಿತೀ । ಹೇ ಬಹು ಅಸೋ ಕ್ಷಾತ್ರ ನೀತಿ । ಯಥೋ ನಿಯಾ ॥ ೧೩ ॥ ಐಸೇ ಸರ್ವಾಪರೀ ಪುರತೇ । ವೀರದಳೇ ಆಮುತೇ । ಆತಾ ಕಾಯಗಣೂ ಯಾತೇ । ಅಪಾರ ಹೇ ॥ ೧೪ ॥

**ಅರ್ಥ**— ಅವರು ಶಸ್ತ್ರವಿದ್ಯೆಯಲ್ಲಿ ನಿಪುಣರೂ, ಮೂರ್ತಿಮಂತ ಮಂತ್ರಾವತಾರರೂ, ಹೆಚ್ಚೇನು ಅಸ್ತ್ರವಿದ್ಯೆಯು ಪ್ರಸಿದ್ಧಿಗೆ ಬಂದುದೇ ಇವರಿಂದ. ॥ ೯ ॥ ಇವರು ಅಪ್ರತಿಮ ಪರಾಕ್ರಮಿಗಳೂ, ಬಲವಂತರೂ ಇದ್ದು ಈ ಜಗತ್ತಿನಲ್ಲಿ ಇವರ ಸಮಾನರಾದ ಯುದ್ಧವಿಶಾರದರು ಯಾರೂ ಇರುವದಿಲ್ಲ. ಆದರೆ ಅವರು ಜೀವಭಾವದಿಂದ ನನ್ನನ್ನೇ ಆಶ್ರಯಿಸಿರುವರು. ॥ ೧೦ ॥ ಪತಿವ್ರತೆಯ ಮನಸ್ಸು ತನ್ನ ಪತಿಯ ಹೊರ್ತು ಅನ್ಯ ಸ್ಥಳದಲ್ಲಿ ಸೇರುವದಿಲ್ಲ. ಆದರೆ ಕೇವಲ ಪತಿಯನ್ನೇ ಆಶ್ರಯಿಸಿರುವದು ಅದರಂತೆಯೇ ಈ ವೀರರಿಗೆ ನಾನು ಪ್ರಾಣದಂತೆ ಪ್ರಿಯನಾಗಿರುವೆನು. ॥ ೧೧ ॥ ಇವರು ಸ್ವಾಮಿಭಕ್ತಿಯಲ್ಲಿ ಧೃಡವಾದ ವಿಶ್ವಾಸವುಳ್ಳವರಾಗಿರುವರು. ಯಾಕಂದರೆ ಅವರು ನಮ್ಮ ಕಾರ್ಯದ ಮುಂದೆ ತಮ್ಮ ಪ್ರಾಣವನ್ನು ಸಹ ತುಚ್ಛವೆಂದು ತಿಳಿದಿರುವರು. ಇವರು ಯುದ್ಧಕಲೆಯಲ್ಲಿ ಬಹು ಚತುರರಲ್ಲದೇ ಸರ್ವಕಲೆಗಳಲ್ಲಿ ನಿಪುಣರೂ, ಕೀರ್ತಿಶಾಲಿಗಳೂ ಇರುವರು. ಬಹಳ ಹೇಳುವದೇನು ಕ್ಷಾತ್ರಧರ್ಮವು ಬೆಳಕಿಗೆ ಬಂದುದು ಇವರಿಂದಲೇ. ॥ ೧೩ ॥ ಹೀಗೆ ನಮ್ಮ ಸೈನ್ಯದಲ್ಲಿ ಶೂರರಾದ ಯುದ್ಧಪಟುಗಳೂ, ಅಗಣಿತ ಮಹಾವೀರರೂ ಇರುವರು. ಅವರು ಅಪಾರವಾಗಿರುವರು. ಅವರ ಎಣಿಕೆಯನ್ನು ಹೇಗೆ ಮಾಡುವದು ? ॥ ೧೪ ॥

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

**[ ಅಪರ್ಯಾಪ್ತಮಿತಿ ]** ಪರಿ ಕ್ಷತ್ರಿಯಾ ಮಾಜಿ ಶ್ರೇಷ್ಠ । ಜೋ ಜಗಜೇಠೀ ಜಗೀ ಸುಭಟ । ತಯಾ ದಳವೈ ಪಣಾಚಾ ಪಾಟ । ಭೀಷ್ಮಾಸಿದ್ಧೈ ॥ ೧೫ ॥ ಆತಾ ಯಾಚೇನಿ ಬಳೇ ಗವಸಲೇ । ಹೇ ದುರ್ಗ ಜೈಸೇ ಪನ್ನಾಸಿಲೇ । ಯೆಣೇ ಪಾಡೇ ಥೇಕುಲೆ । ಲೋಕತ್ರಯ ॥ ೧೬ ॥ ಆಧೀಚ ಸಮುದ್ರಪಾಹೀ । ತೇಥ ದುವಾಡವಣ ಕವಣಾ ನಾಹಿ । ಮಗ ವಡವಾನಳ ತೈಸೇಯಾಹಿ । ವಿರಜಾ ಜೈಸಾ ॥ ೧೭ ॥ ನಾತರಿ ಪ್ರಲಯವಹ್ನಿ ಮಹಾವಾತ । ಯಾ ದೋಘಾ ಜೈಸಾ ಸಾಂಘಾತ । ತೈಸಾ ಹಾಗಂಗಾಸುತ । ಸೇನಾಪತಿ ॥ ೧೮ ॥ ಆತಾ ಯೇಣೇಸೀ ಕವಣ ಭಿಡೇ । ಹೇ ಪಾಂಡವ ಸೈನ್ಯಕೀರ ಥೋಕಡೆ । ವರಚಿಲೀಸಿ ಪಾಡೆ । ದಿಸತ ಅಸೆ ॥ ೧೯ ॥ [ ಇದಮಿತಿ ] ಪರೀ ಭೀಮಸೇನ ಬೇಥು । ತೋ ಜಾಹಲಾ ಅಸೆ ಸೇನಾನಾಥು । ಐಸೇ ಬೋಲೋನಿಯಾ ಮಾತು । ಸಾಂಡಿಲೀತೆಸೇ ॥ ೨೦

**ಅರ್ಥ**— ಎಲ್ಲ ಕ್ಷತ್ರಿಯರಲ್ಲಿಯೂ ಯುದ್ಧವಿಶಾರದರಲ್ಲಿಯೂ ಶ್ರೇಷ್ಠರೂ ಪ್ರತಾಪಶಾಲಿಗಳೂ ಆದ ಭೀಷ್ಮಾಚಾರ್ಯರ ಕಡೆಗೆ ಎಲ್ಲ ಸೈನ್ಯದ ಆಧಿಪತ್ಯವನ್ನು ಕೊಟ್ಟಿರುತ್ತದೆ. ॥ ೧೫ ॥ ಭೀಷ್ಮರು ಈ ಎಲ್ಲ ಸೈನ್ಯವನ್ನು ಕೂಡಹಾಕಿ ಒಳ್ಳೇ ಯುಕ್ತಿಯಿಂದ ರಚನೆಯನ್ನು ಮಾಡಿರುವರು. ಅವನ್ನು ನೋಡಿದರೆ ಒಂದು ಕಿಲ್ಲೆಯನ್ನು ಕಟ್ಟಿದಂತೆ ತೋರುತ್ತದೆ. ಅವರ ಪರಾಕ್ರಮದ ಮುಂದೆ ಸ್ವರ್ಗ, ಮೃತ್ಯು, ಪಾತಾಳ ಈ ಮೂರು ಲೋಕಗಳೂ ಸಹ ತುಚ್ಛವಾಗಿರುವವು. ॥ ೧೬ ॥ ವಿಚಾರ ಮಾಡಿ ನೋಡಿದರೆ, ಸಮುದ್ರವು ಮೊದಲೇ ದುಸ್ತರವಾದುದು. ಅದಕ್ಕೆ ವಡವಾನಲದ ಜೊತೆಯು ಸಿಕ್ಕಮೇಲೆ ಕೇಳುವದೇನು? ॥ ೧೭ ॥ ಇಲ್ಲವೇ ಪ್ರಲಯಾಗ್ನಿಗೆ ಬಿರುಗಾಳಿಯ ಸಹಾಯವಾಗಿ ಅದ್ಭುತವಾದ ಸಂಯೋಗವಾಗುವಂತೆ ನಮ್ಮ ಈ ಅಪರಿಮಿತವಾದ ಸೈನ್ಯಕ್ಕೆ ಗಂಗಾನಂದನರಾದ ಭೀಷ್ಮರು ಸೇನಾಪತಿಯಾಗಿ ದೊರಕಿರುವದರಿಂದ ॥ ೧೮ ॥ ನಮ್ಮ ಈ ಸೈನ್ಯದ ಸಂಗಡ ಯುದ್ಧಮಾಡಲಿಕ್ಕೆ ಯಾರು ಸಮರ್ಥರಿರುವರು ? ಪಾಂಡವರ

ಸೈನ್ಯವು ನಿಜವಾಗಿ ತೀರ ಸ್ವಲ್ಪವಿದ್ದಾಗ್ಯೂ ಆ ಸೈನ್ಯದ ರಚನೆಯು ಮಾತ್ರ ಬಹು ದೊಡ್ಡದಾಗಿ ತೋರುವದು ॥ ೧೯ ॥ ಪಾಂಡವರ ಸೇನಾಧಿಪತ್ಯವನ್ನು ವಜ್ರದೇಹಿಯಿದ್ದು, ಜಡನಾಗಿರುವ ಭೀಮನು ಸ್ವೀಕಾರಮಾಡಿರುವನು. ಇಷ್ಟು ಹೇಳಿದರೂ ಕೂಡ ದ್ರೋಣಾಚಾರ್ಯರ ಮನಸಿನ ಮೇಲೆ ಯಾವ ಪರಿಣಾಮವೂ ಆಗದಿರುವವನ್ನು ಕಂಡು ದುರ್ಯೋಧನನು ಸ್ತಬ್ಧನಾದನು. ॥ ೧೨೦ ॥

**ಅಯನೇಷು ಚ ಸರ್ವೇಷು ಯಥಾಭಾಗ ಮವಸ್ಥಿತಾಃ ।**
**ಭೀಷ್ಮ ಮೇವಾಭಿರಕ್ಷಂತು ಭವಂತಃ ಸರ್ವ ಏವಹಿ ॥ ೧೧ ॥**

**[ ಅಯನೇಷು ಚೇತಿ ]** ಮಗ ಪುನರಪಿ ಕಾಯಬೋಲೆ । ಸಕಳ ಸೈನಿಕಾತೇ ಮ್ಹಣಿತಲೇ । ಆತಾ ದಳಭಾರ ಆಪುಲಾಲೆ । ಸರಸೇ ಕರಾ ॥ ೨೧ ॥ ಜಯಾ ಜಯಾ ಅಕ್ಷೌಹಿಣೀ । ತೇಣೇ ತಿಯಾ ಆಪಣೀ । ವರಗಣ ಕವಣ ಕವಣೀ । ಮಹಾರಥಿಯಾ ॥ ೨೨ ॥ ತೇಣೇ ತಿಯಾ ಆವರಿಜೇ । ಭೀಷ್ಮಾತಳೀ ರಾಹಿಜೆ । ದ್ರೋಣಾತೇಮ್ಹಣೇ ಪಾಹಿಜೇ । ತುಮ್ಹೀಸಕಳ ॥ ೨೩ ॥ ಹಾಚಿ ಏಕರಕ್ಷಾವಾ । ಮೀ ತೈಸಾ ಹಾ ದೇಖಾವಾ । ಏಣೆ ದಳಭಾರ ಆಘವಾ । ಸಾಚ ಅಮುಚಾ ॥ ೨೪ ॥

**ಅರ್ಥ—** ಆ ಮೇಲೆ ಎಲ್ಲ ಸೇನಾನಾಯಕರನ್ನು ಕುರಿತು ದುರ್ಯೋಧನರಾಜನು ಅನ್ನುತ್ತಾನೆ. "ಎಲ್ಲರೂ ನಿಮ್ಮ ನಿಮ್ಮ ಸೈನ್ಯವನ್ನು ಸಿದ್ಧಪಡಿಸಬೇಕು. ॥ ೨೧ ॥ ಅಕ್ಷೌಹಿಣೀ ಸೈನ್ಯವಿದ್ದ ಆ ಮಹಾರಥಿಗಳೆಲ್ಲರೂ ತಮ್ಮ ತಮ್ಮ ಸೈನ್ಯದ ಮುಂದೆ ನಿಲ್ಲಬೇಕು ॥ ೨೨ ॥ ಮತ್ತು ಎಲ್ಲರೂ ತಮ್ಮ ತಮ್ಮ ಅಕ್ಷೌಹಿಣೀ ಸೈನ್ಯವನ್ನು ಸಂಬಾಳಿಸಿ ಭೀಷ್ಮರ ಆಧೀನವಲ್ಲಿದ್ದುಕೊಂಡು ಅವರ ಅಪ್ಪಣೆಯಂತೆ ನಡೆದುಕೊಳ್ಳಬೇಕು." ಆ ಮೇಲೆ ಅವನು ದ್ರೋಣಾಚಾರ್ಯರಿಗೆ ಅನ್ನುತ್ತಾನೆ. "ನೀವು ಎಲ್ಲ ಸೈನ್ಯದ ಮೇಲ್ವಿಚಾರಣೆಯನ್ನು ಮಾಡಬೇಕು. ॥೨೩॥ ಭೀಷ್ಮಪಿತಾಮಹನನ್ನು ನನ್ನಂತೆಯೇ ತಿಳಿದು ಅವರನ್ನು ರಕ್ಷಿಸಬೇಕು. ಯಾಕಂದರೆ ನಮ್ಮ ಎಲ್ಲ ಸೈನ್ಯದ ಭಾರವು ಅವರನ್ನೇ ಅವಲಂಬಿಸಿರುವದು. ॥೨೪॥

**ಸಂಜಯ ಉವಾಚ—**

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂದಧ್ಮೌ ಪ್ರತಾಪವಾನ್ ॥ ೧೨ ॥**

**[ ತಸ್ಯ ಸಂಜನಯನ್ನಿತಿ ]** ಯಾ ರಾಜಯಾಚಿಯಾ ಬೋಲಾ । ಸೇನಾಪತಿ ಸಂತೋಷಲಾ । ಮಗ ತೇಣೇ ಕೇಲಾ ಸಿಂಹನಾದ ॥ ೨೫ ॥ ತೋ ಗಾಜತ ಅಸೇ ಅದ್ಭುತ । ದೋಹೀ ಸೈನ್ಯ ಆತ । ಪ್ರತಿಧ್ವನಿ ನಸಮಾತ । ಉಪಜತ ಅಸೆ ॥ ೨೬ ॥ ತಯಾಚಿ ತುಲಗಾಸವೆ ವೀರವೃತ್ತಿ ಚೇನಿ ಥಾವೆ । ದಿವ್ಯಶಂಖ ಭೀಷ್ಮದೇವೆ । ಆಸ್ಫುರಿಲಾ ॥ ೨೭ ॥ ತೇ ದೋನ್ಹೀ ನಾದ ಮಿನಲೇ । ತೇಥ ತ್ರೈಲೋಕ್ಯ ಬಧಿರೀ ಭೂತ ಜಾಹಲೇ । ಜೈಸೆ ಆಕಾಶ ಕಾ ಪಡಿಲೆ । ತುಟೋನಿಯಾ ॥ ೨೮ ॥ ಘನಘುಡೀತ ಅಂಬರ । ಉಚಂಬಳತ ಸಾಗರ । ಕ್ಷೋಭಲೇ ಚರಾಚರ । ಕಾಂಪತ ಅಸೇ ॥ ೨೯ ॥ ತೇಣೇ ಮಹಾಘೋಷ ಗಜರೇ । ದುಮದುಮಿತೀ ಗಿರಿಕಂದರೆ । ತವ ದಳಾ ಮಾಜಿ ರಣತುರೆ । ಅಸ್ಫುರಿಲೀ ॥ ೧೩೦ ॥

**ಅರ್ಥ—** ದುರ್ಯೋಧನರಾಜನ ಈ ಭಾಷಣವನ್ನು ಕೇಳಿ ಭೀಷ್ಮನಿಗೆ ಬಹಳೇ ಸಂತೋಷವಾಗಿ ಸಿಂಹ ಗರ್ಜನೆಯನ್ನು ಮಾಡಿದನು ॥ ೨೫ ॥ ಆ ಗರ್ಜನೆಯೂ ಎರಡೂ ಸೈನ್ಯಗಳಲ್ಲಿ ಗಲಭೆಯನ್ನುಂಟು ಮಾಡಿತು. ಆ ಗರ್ಜನೆಯ ಪ್ರತಿಧ್ವನಿಯು ಆಕಾಶಮಂಡಲವನ್ನೆಲ್ಲ ವ್ಯಾಪಿಸಿತು. ॥ ೨೬ ॥ ಆ ಪ್ರತಿ ಧ್ವನಿಯು ಹೊರಡು ವಷ್ಟರಲ್ಲಿ ವೀರ ವೃತ್ತಿಯ ಬಲದಿಂದ ಭೀಷ್ಮನು ತನ್ನ ದಿವ್ಯವಾದ ಶಂಖವನ್ನು ಊದಿದನು ॥ ೨೭ ॥ ಆ ಎರಡೂ

ಧ್ವನಿಗಳು ಒಟ್ಟುಗೂಡಿದ ಕೂಡಲೇ ಆಕಾಶದಲ್ಲಿ ಘುಡಘುಡಾಟ ಶಬ್ದವು ಉದ್ಭವಿಸಿ ಆಕಾಶವೇ ಬಿರಿದು ಬೀಳುವದೋ ಎಂಬಂತೆ ಭಾಸವಾಯಿತು. ಮತ್ತು ಮೂರು ಲೋಕಗಳಲ್ಲಿಯ ಎಲ್ಲರ ಕಿವಿಗಳೂ ಗಡುಚಿಕ್ಕಿದವು ॥ ೨೮ ॥ ಆ ಕಾಲಕ್ಕೆ ಆಕಾಶದಲ್ಲಿ ಘುಡಘುಡಾಟ ಶಬ್ದವು ಉಂಟಾಗಿ ಅದೊಂದು ಭೀಕರ ಸ್ವರೂಪವನ್ನು ತಾಳಿತು. ಸಮುದ್ರವು ಉಕ್ಕೇರಿತು ಮತ್ತು ಈ ಸ್ಥಾವರ ಜಂಗಮಾತ್ಮಕ ವಿಶ್ವವು ಗಾಬರಿಯಾಗಿ ಬಿಟ್ಟಿತು. ಪೃಥ್ವಿಯು ಥರಥರ ನಡುಗಿತು ॥ ೨೯ ॥ ಮತ್ತು ಈ ಮಹಾಧ್ವನಿಯ ಘೋಷದಿಂದ ಪರ್ವತಗಳ ಗುಹೆಗಳಲ್ಲಿ ಸಹ ಪ್ರತಿಧ್ವನಿಯು ಉಂಟಾಯಿತು. ಹೀಗೆಲ್ಲ ನಡೆದಿರುವ ಸಮಯದಲ್ಲಿ ಆ ಸೈನ್ಯದೊಳಗೆ ರಣವಾದ್ಯಗಳನ್ನು ಬಾರಿಸಲಿಕ್ಕೆ ಹತ್ತಿದರು ॥ ೧೩೦ ॥

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕ ಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋ ಭವತ್ ॥ ೧೩ ॥**

[ **ತತಃ ಶಂಖಾಇತಿ** ] ಉದಂಡ ಸೈಘ ವಾಜತೇ । ಭಯಾನಕೇ ಖಾಖಾತೇ । ಮಹಾ ಪ್ರಳಯುಜೇಥೆ । ಥೋಕಡಾಪೀ ॥ ೩೧ ॥ ಭೇರೀ ನಿಶಾಣ ಮಾಂದಳ । ಶಂಖಕಾಹಳಾ ಭೋಗಳ । ಆಣಿಭಯಾಸೂರ ರಣಕೋಲ್ಹಾಳಸುಭಟಾಂಚೆ ॥ ೩೨॥ ಆವೇಶೇ ಭುಜಾ ತ್ರಾಹಾಟಿತೀ । ವಿಸಣೇಲೇ ಹಾಂಕಾ ದೇತೀ । ಜೇಥ ಮಹಾಮದ ಭದ್ರಜಾತೀ । ಆವರತೀ ನಾ ॥ ೩೩ ॥ ತೇಥ ಭೇಡಾಂಚೀ ಕವಣ ಮಾತ । ಕಾಂಚಯಾ ಕೇರಫಿಟತ । ಜೇಣೇ ದಚಕಲಾ ಕೃತಾಂತ । ಆಂಗನೇಘೆ ॥ ೩೪ ॥ ಏಕಾ ಉಭಯಾಜ ಪ್ರಾಣಗೇಲೆ । ಚಾಂಗಾಂಚೆದಾಂತ ಬೈಸಲೇ । ಬಿರುದಾಚೆ ದಾದುಲೇ । ಹಿವತಾತೀ ॥ ೩೫ ॥ ಐಸಾ ಅದ್ಭುತ ತೂರ ಬಂಬಾಳ । ಐಕೋನಿ ಬ್ರಹ್ಮಾ ವ್ಯಾಕುಳ । ದೇವ ಮ್ಹಣತೀ ಪ್ರಳಯ ಕಾಳ । ವೋಢವಲಾ ಆಜೀ ॥ ೩೬ ॥

**ಅರ್ಥ**— ಉದ್ದಂಡವಾದ ರಣವಾದ್ಯಗಳ ಧ್ವನಿಯು ಭಯಂಕರವಾಗಿಯೂ ಕರ್ಕಶವಾಗಿಯೂ ಎಲ್ಲೆಲ್ಲಿಯೂ ತುಂಬ ಹೋಗಿರಲು ಆ ರಣಭೂಮಿಯಲ್ಲಿದ್ದ ಪರಾಕ್ರಮಿಗಳಿಗೆ ಕೂಡ ಪ್ರಳಯಕಾಲವು ಸಮೀಪಿಸಿತೆಂಬಂತೆ ತೋರಿತು ॥ ೩೧ ॥ ನೌಬತ್ತು, ನಿಶಾನೆ, ಶಂಖ, ಝೂಂಗಟೆ, ತುತೂರಿ ಮುಂತಾದ ನಾನಾಪ್ರಕಾರದ ರಣವಾದ್ಯಗಳ ಧ್ವನಿಯೂ ಶೂರ ಪರಾಕ್ರಮಿಗಳ ಯುದ್ಧೋತ್ಸಾಹದ ರಣಕಲ್ಲೋಲವೂ ಪ್ರಾರಂಭವಾದವು. ॥ ೩೨ ॥ ಕೆಲವರು ಆವೇಶದಿಂದ ಸಡ್ಡು ಹೊಡೆಯುತ್ತಲಿದ್ದರು, ಕೆಲವರು ಎಚ್ಚರದಪ್ಪಿ ದೊಡ್ಡ ಧ್ವನಿಯಿಂದೂ ಕೂಗಿಡುತ್ತಲಿದ್ದರು, ಮತ್ತು ಮದೋನ್ಮತ್ತವಾದ ಆನೆಗಳು ಎಚ್ಚರದಪ್ಪಿ ಹೋಗಿ ಮಾವುತರಿಗೆ ಅಸುಕೊಳ್ಳದಂತಾದವು. ॥ ೩೩ ॥ ಆ ಸ್ಥಳದಲ್ಲಿ ಅಂಜುಬುರುಕರ ಸ್ಥಿತಿಯನ್ನು ಏನೆಂದು ಕೇಳುವದು ! ಬೆದರಿದವರೆಲ್ಲರೂ ಕಸದಂತೆ ಹಾರಿ ಹೋದರು. ಯಮದೇವನಿಗೆ ಸಹ ಭಯವುಂಟಾಗಿ ಅವನು ರಣಾಂಗಣದ ಕಡೆಗೆ ಮೋರೆ ತಿರುವಿ ನೋಡದಾದನು. ॥ ೩೪ ॥ ಎಷ್ಟೋ ಜನರು ನಿಂತ ನಿಂತಲ್ಲಿಯೇ ಪ್ರಾಣವನ್ನು ನೀಗಿದರು. ಧೈರ್ಯಶಾಲಿಗಳಿಪ್ಪವರ ಹಲ್ಲುಗಳು ಕುಳಿತು ಬಿಟ್ಟವು. ( ಗಟಗರಿಸಿದವು. ) ಹೆಸರು ವಾಸಿಗಳಾದ ಯುದ್ಧವಿಶಾರದರ ಶರೀರಗಳು ನಡುಗ ತೊಡಗಿದವು. ॥ ೩೫ ॥ ಈ ಪ್ರಕಾರದ ವಾದ್ಯ ಧ್ವನಿಗಳನ್ನು ಕೇಳಿ ಬ್ರಹ್ಮದೇವರು ಸಹ ವ್ಯಾಕುಲಪಟ್ಟರು. ಮತ್ತು ಇಂದ್ರಾದಿ ದೇವತೆಗಳು ಈ ಹೊತ್ತಿನದಿವಸ ಪ್ರಲಯಕಾಲವೇ ಬಂದೊದಗಿತು. ಎಂದು ಮಾತನಾಡತೊಡಗಿದರು. ॥ ೩೬ ॥

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**
**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮ ಕರ್ಮಾ ವೃಕೋದರಃ ॥ ೧೫ ॥**

**ಅನಂತವಿಜಯಂ ರಾಜಾ ಕುಂತಿ ಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷ ಮಣಿ ಪುಷ್ಪಕೌ ॥ ೧೬ ॥**

**[ ತತಃ ಶ್ವೇತೈರಿತಿ ]** ಐಸೀ ಸ್ವರ್ಗೀ ಮಾತ । ದೇಖೋನಿ ತೋ ಆಕಾಂತ । ತವ ಪಾಂಡವ ದಳಾ ಆಂತ । ವರ್ತಲೇ ಕಾಯೀ ॥ ೩೭ ॥ ಹೋ ಕಾ ನಿಜಸಾರ ವಿಜಯಾಚೆ । ಕೀ ತೇ ಭಾಂಡಾರ ಮಹಾತೇಜಾಚೇ । ಜೇಥ ಗರುಡಾಚಿಯೇ ಜಾವಳಿಚೇ । ಕಾತಲೇ ಚಾರ್ಹೀ ॥ ೩೮ ॥ ಕೀ ಪಾಂಖಾಚಾ ಮೇರೂ ಜೈಸಾ । ರಹವರ ಮಿರವ ತಸೇ ತೈಸಾ । ತೇಜೇ ಕೋಂದಾಟಲಿಯಾ ದಿಶಾ । ಜಯಾ ಚೇನಿ ॥ ೩೯ ॥ ಜೇಥ ಅಶ್ವವಾಹಕ ಆಪಣ । ವೈಕುಂಠೀಚಾ ರಾಣಾ ಜಾಣ । ತಯಾ ರಥಾಚೇ ಗುಣ । ಕಾಯ ವರ್ಣೂ ॥ ೧೪೦ ॥ ಧ್ವಜಸ್ತಂಭಾವರೀ ವಾನರ । ತೋ ಮೂರ್ತಿಮಂತ ಶಂಕರ । ಸಾರಥೀ ಶಾರ್ಙ್ಗಧರ । ಅರ್ಜುನೇಸೀ ॥ ೪೧ ॥ ದೇಖಾ ನವಲ ತಯಾ ಪ್ರಭೂಚೇ । ಅದ್ಭುತ ಪ್ರೇಮಭಕ್ತಾಂಚೆ । ಜೇ ಸಾರಥ್ಯಪಣ ಪಾರ್ಥಾಚೇ । ಕರೀತ ಅಸೇ ॥ ೪೨ ॥ ಪಾಈಕು ಪಾಠೀಸೀ ಘಾತಲಾ । ಆಪಣ ಪುಢಾ ರಾಹಿಲಾ । ತೇಣೇ ಪಾಂಚಜನ್ಯ ಆಸ್ಫುರಿಲಾ । ಅವಲೀಳಾಚೀ ॥ ೪೩ ॥ ಪರೀ ತೋ ಮಹಾಘೋಷ ಥೋರು । ಗರ್ಜತ ಅಸೇ ಗಹಿರು । ಜೈಸೇ ಉದೇಲಾ ಲೋಪೀ ದಿನಕರು । ನಕ್ಷತ್ರಾತೇ ॥ ೪೪ ॥ ತೈಸೇ ತೂರಬಂಬಾಳ ಭಂವತೇ । ಕೌರವದಳೀ ಗಾಜತ ಹೋತೇ । ತೇ ಹಾರಪೋನಿ ನೇಣೋ ಕೇ ಉತೇ । ಗೇಲೇ ತೇಥೇ ॥ ೪೫ ॥ ತೈಸಾಚಿ ದೇಟೇ ಯೇರೆ । ನಿನಾದೇ ಅತಿ ಗಜರೇ । ದೇವದತ್ತ ಧನುರ್ಧರೇ । ಆಸ್ಫುರಿಲಾ ॥ ೪೬ ॥ ತೇ ದೋನೀ ಶಬ್ದ ಅಚಾಟ । ಮಿನಲೇ ಏಕವಟ । ತೇಥ ಬ್ರಹ್ಮಕಟಾಹ ಶತಕೂಟ । ಹೋ ಪಾಹತ ಅಸೇ ॥ ೪೭ ॥ ತವ ಭೀಮಸೇನ ವಿನಣೇಲಾ । ಜೈಸಾ ಮಹಾಕಾಳ ಖವಳಲಾ । ತೇಣೆ ಪೌಂಡ್ರು ಆಸ್ಫುರಿಲಾ । ಮಹಾ ಶಂಖು ॥ ೪೮ ॥ ತೋಮಹಾ ಪ್ರಲಯ ಜಲಧರ । ಜೈಸೇ ಗಡಗಡಿತ ಗಹಿರ । ತವ ಅನಂತ ವಿಜಯ ಯುಧಿಷ್ಠಿರ । ಆಸ್ಫುರಿತ ಅಸೇ ॥ ೪೯ ॥ ನಕುಳೇ ಸುಘೋಷ । ಸಹ ದೇವೇ ಮಣಿಪುಷ್ಪಕ । ಜೇಣೇ ನಾದೇ ಅಂತಕ । ಗಜಬಜಲಾ ಠಾಕೇ ॥ ೧೫೦ ॥

**ಅರ್ಥ**— ಹೀಗೆ ಸ್ವರ್ಗಲೋಕದಲ್ಲಿ ಗಲಭೆಯೆದ್ದಿರಲು ( ಗೊಂದಲು ) ಇತ್ತ ಕಡೆಗೆ ಪಾಂಡವ ಸೈನ್ಯ ದಲ್ಲಿ ಏನು ನಡೆದಿರುವದೆಂಬುದನ್ನು ನೋಡಿರಿ. ॥ ೩೭ ॥ ಅರ್ಜುನನ ರಥವು ವಿಜಯದ ಪ್ರತ್ಯಕ್ಷ ತೌರುಮನೆ ಯಾಗಿದ್ದು, ಪ್ರಫುಲ್ಲಿತವಾದ ತೇಜದ ಕೇವಲ ಭಾಂಡಾರವೇ ಆಗಿದ್ದಿತು. ಮತ್ತು ಆ ರಥಕ್ಕೆ ಗರುಡನಂತೆ ವೇಗವುಳ್ಳ ನಾಲ್ಕು ಕುದುರೆಗಳನ್ನು ಹೂಡಿದ್ದು ॥ ೩೮ ॥ ಆ ಶ್ರೇಷ್ಠ ರಥವು ಪಕ್ಕದಿಂದ ಯುಕ್ತವಾದ ಮೇರೂ ಪರ್ವತದೋಪಾದಿಯಲ್ಲಿ ಶೋಭಾಯಮಾನವಾಗಿ ಕಂಗೊಳಿಸುತಲಿದ್ದಿತು. ಆ ರಥದ ತೇಜದಿಂದ ಹತ್ತೂ ದಿಕ್ಕು ಗಳು ಮಿಂಚಿನಂತೆ ಹೊಳೆಯುತ್ತಿದ್ದವು. ॥ ೩೯ ॥ ಯಾವ ರಥದ ಮೇಲೆ ಪ್ರತ್ಯಕ್ಷ ವೈಕುಂಠಾಧಿಪತಿ ಶ್ರೀಕೃಷ್ಣ ಪರಮಾತ್ಮನು ಸಾರಥಿಯಾಗಿರುವನೋ, ಆ ರಥದ ಗುಣವರ್ಣನೆಯನ್ನು ಮಾಡುವದು ಯಾರಿಂದ ಸಾಧ್ಯವು ? ॥ ೧೪೦ ॥ ಸಾಕ್ಷಾತ್ ಶ್ರೀ ಶಂಕರಾವತಾರನಾದ ಮಾರುತಿರಾಯನು ಧ್ವಜಸ್ತಂಭದ ಮೇಲೆ ಕುಳಿತಿರುವನು. ಮತ್ತು ಆ ರಥದಲ್ಲಿ ಶಾರ್ಙ್ಗ ಪಾಣಿಯಾದ ಭಗವಾನ್ ಶ್ರೀಕೃಷ್ಣನು ಅರ್ಜುನನ ಸಾರಥಿಯಾಗಿರುವನು. ॥ ೪೧ ॥ ಆ ಪರಮಾತ್ಮನ ಆಶ್ಚರ್ಯಕರವಾದ ಅದ್ಭುತ ಪ್ರೇಮವನ್ನು ನೋಡಿರಿ. ಭಕ್ತರ ಮೇಲಿನ ಅತ್ಯಂತ ಪ್ರೇಮ ವಾತ್ಸಲ್ಯದಿಂದ ಅರ್ಜುನನ ಸಾರಥ್ಯ ಕೆಲಸವನ್ನು ಮಾಡುತ್ತಿರುವನು. ॥ ೪೨ ॥ ತನ್ನ ಸೇವಕನನ್ನು ತನ್ನ ಬೆನ್ನ ಹಿಂದೆ ಹಾಕಿಕೊಂಡು ತಾನು ಮುಂದೆ ಕುಳಿತಂಥ ಭಗವಾನ್ ಶ್ರೀಕೃಷ್ಣನು ತನ್ನ ಪಾಂಚಜನ್ಯವೆಂಬ ಶಂಖವನ್ನು ಸಹಜವಾಗಿ ಲೀಲೆಯಿಂದ ಊದಿದನು. ॥ ೪೩ ॥ ಆದರೆ ಸೂರ್ಯೋದಯವಾದ ಮೇಲೆ ನಕ್ಷತ್ರಗಳು ಅಡಗು ವಂತೆ ಶಂಖದ ದೊಡ್ಡ ಧ್ವನಿಯಿಂದ ॥ ೪೪ ॥ ಕೌರವರ ಸೈನ್ಯದಲ್ಲಿಯ ಮೊಳಗತಕ್ಕಂತ ವಾದ್ಯ ಧ್ವನಿಯು

ಎಲ್ಲ ಕಡೆಗೂ ಅಡಗಿ ಹೋಯಿತು. ಆದರೆ ಆ ಧ್ವನಿಯು ಅಡಗಿ ಹೋದುದೆಲ್ಲಿ ಎಂಬುದೇತಿಳಿಯದಾಯಿತು. ॥ ೪೫ ॥ ಅದೇ ಪ್ರಕಾರ ಅರ್ಜುನನಾದರೂ ತನ್ನ ದೇವದತ್ತವೆಂಬ ಭಯಂಕರ ನಾದವುಳ್ಳ ಶಂಖವನ್ನು ಒಳ್ಳೇ ಆವೇಶದಿಂದ ಊದಿದನು ॥ ೪೬ ॥ ಆವಾಗ ಎರಡೂ ಶಂಖಗಳ ಅದ್ಭುತ ಧ್ವನಿಗಳು ಒಂದೇ ಕಡೆಗೆ ಕೂಡಿದ್ದ ರಿಂದ ಬ್ರಹ್ಮಾಂಡವೇ ಒಡೆದು ನೂರಾರು ತುಣುಕುಗಳು ಆಗುತ್ತವೆಯೋ ಎನ್ನುವಂತೆ ತೋರಿತು. ॥ ೪೭ ॥ ಇಷ್ಟರಲ್ಲಿ ಭೀಮಸೇನನಿಗೂ ಆವೇಶಬಂದಿತು. ಅವನು ಮಹಾಕಾಲನಂತೆ ನ್ನೈಮರೆತು ತನ್ನ ಪೌಂಡ್ರವೆಂಬ ಹೆಸ ರಿನ ಮಹಾಶಂಖವನ್ನೂದಿದನು. ॥ ೪೮ ॥ ಆ ಶಂಖದ ಭಯಾನಕವಾದ ಧ್ವನಿಯು ಮಹಾ ಪ್ರಲಯ ಕಾಲದ ಮೇಘಗರ್ಜನೆಯಂತೆ ಆಗುತ್ತಿರುವಷ್ಟರಲ್ಲಿ ಧರ್ಮರಾಜನು ಅನಂತವಿಜಯವೆಂಬ ಶಂಖವನ್ನು ಊದಿದನು. ॥ ೪೯ ॥ ನಕುಲನು ಸುಘೋಷವನ್ನೂ, ಸಹದೇವನು ಮಣಿಪುಷ್ಪಕವೆಂಬ ಶಂಖವನ್ನೂ ಊದಿದರು. ಆ ನಾದದಿಂದ ಪ್ರತ್ಯಕ್ಷ ಯಮನು ಸಹ ಭಯಗ್ರಸ್ತನಾದನು ॥ ೧೫೦ ।

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾ ಪರಾಜಿತಃ ॥ ೧೭ ॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥ ೧೮ ॥**
**ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥**

**[ ಕಾಶ್ಯಶ್ಚೇತಿ ]** ತೇಥ ಭೂಪತಿ ಹೋತೆ ಅನೇಕ । ದ್ರುಪದ ದ್ರೌಪದೇಯಾದಿಕ । ಹಾಕಾಶೀ ಪತಿ ದೇಖ । ಮಹಾಬಾಹು ॥ ೫೧ ॥ ತೇಥ ಅರ್ಜುನಾಚಾ ಸುತ । ಸಾತ್ಯಕೀ ಅಪರಾಜಿತ । ದೃಷ್ಟದ್ಯುಮ್ನ ನೃಪನಾಥ । ಶಿಖಂಡೀ ಹನ ॥ ೫೨ ॥ ವಿರಾಟಾದಿ ನೃಪವರ । ಜೇ ಸೈನಿಕ ಮುಖ್ಯ ವೀರ । ತಿಹೀನಾನಾ ಶಂಖ ನಿರಂತರ । ಆಸ್ಫುರಿಲೇ ॥ ೫೩ ॥ ತೇಣೇ ಮಹಾಘೋಷನಿರ್ಘಾತೇ ಶೇಷಕೂರ್ಮ ಅವಚಿತೆ । ಗಜಬಜೋನಿ ಭೂಭಾರಾತೆ । ಸಾಂಡೂ ಪಾಹತೀ ॥ ೫೪ ॥ ತೇಥ ತ್ರಿಸ್ಹೀ ಲೋಕ ಡಳಮಳಿತ । ಮೇರೂ ಮಾಂದಾರ ಆಂದೋಲಿತ । ಸಮುದ್ರ ಜಳ ಉಸಳತ । ಕೈಲಾಸವರೀ ॥ ೫೫ ॥ ಪೃಥ್ವೀತಳ ಉಲಥೋ ಪಹಾತ । ಆಕಾಶ ಅಸೇ ಆಸುಡತ । ತೇಥ ಸಡಾ ಹೋತ । ನಕ್ಷತ್ರಾಂಚಾ ॥ ೫೬ ॥ ಸೃಷ್ಟಿ ಗೇಲೀರೇ ಗೇಲೀ । ದೇವಾ ಮೋಕಳವಾದೀ ಜಾಹಲೀ । ಐಸೀ ಏಕ ಟಾಳೀ ಪಿಟಲೀ । ಸತ್ಯಲೋಕೀ ॥ ೫೭ ॥ ದಿಹಾಚಿ ದಿನಥೋಕಲಾ । ಜೈಸಾ ಪ್ರಳಯ ಕಾಳ ಮಾಂಡಲಾ । ತೈಸಾ ಹಾಹಾಕಾರ ಜಾಹಲಾ । ತಿಹೀ ಲೋಕೀ ॥ ೫೮ ॥ ತೇ ದೇಖೋನಿ ಆದಿಪುರುಷ ವಿಸ್ಮಿತ । ಮ್ಹಣೆ ಝುಣೆ ಹೋಯಪಾ ಅಂತ । ಮಗ ಲೋಪಲಾ ಅದ್ಭುತ । ಸಂಭ್ರಮ ತೋ ॥ ೫೯ ॥ ಮ್ಹಣೋನಿ ವಿಶ್ವ ಸಾವರಲೆ । ಏರ್ಹವೀ ಯುಗಾಂತ ಹೋತೇ ಮೋಡವಲೇ । ಜೈ ಮಹಾಶಂಖ ಆಸ್ಫುರಿಲೇ । ಕೃಷ್ಣಾದಿಕಿ ॥ ೧೬೦ ॥ ತೋ ಘೋಷ ತರೀ ಉಪಸಂಹರಲಾ । ಪರೀಪಡಿಸಾದ ಹೋತಾ ರಾಹಿಲಾ । ತೇಣೇ ದಳಭಾರ ವಿಧ್ವಂಸಿಲಾ । ಕೌರ ವಾಂಚಾ ॥ ೬೧ ॥ ಜೈಸಾ ಗಜಘಟಾ ಆತ । ಸಿಂಹಲೀಲಾ ವಿದಾರಿತ । ತೈಸಾ ಹೃದ ಯಾತೇ ಭೇದಿತ । ಕೌರವಾಚಿಯಾ ॥ ೬೨ ॥ ತೋ ಗಾಜತ ಜವ ಆ ಇಕತೀ । ತವ ಉಭೇಚೀ ಹಿಯೇ ಘಾಲಿತೀ । ಏಕ ಮೇಕಾತೇ ಮ್ಹಣತೀ । ಸಾವಧ ರೇ ಸಾವಧ ॥ ೬೩ ॥

**ಅರ್ಥ—** ದ್ರುಪದರಾಜನೂ, ಮಹಾಶೂರನಾದ ಕಾಶೀರಾಜನೂ ದ್ರೌಪದಿಯ ಮಕ್ಕಳೂ ಇನ್ನೂ ಅನೇಕ ಸಮರ್ಥರಾಜರೂ ಆ ಸಂಗ್ರಾಮದಲ್ಲಿ ನೆರೆದಿದ್ದರು. ॥ ೪೧ ॥ ಅವರೆಲ್ಲರೂ ಅರ್ಜುನನ ವೀರಪುತ್ರನಾದ ಅಭಿಮನ್ಯುವೂ ಜಯಿಸಲಸದಳನಾದ ಸಾತ್ಯಕಿಯು, ರಾಜಶ್ರೇಷ್ಠ ದೃಷ್ಟದ್ಯುಮ್ನನೂ, ಶಿಖಂಡಿಯೂ ॥ ೪೨ ॥ ವಿರಾಟನೇ ಮೊದಲಾದ ಅನೇಕ ಸೇನಾನಾಯಕರೂ ಒಂದೇಸವನೇ ತಮ್ಮ ತಮ್ಮ ಶಂಖಗಳನ್ನು ಊದಿದರು. ॥ ೪೩ ॥ ಆ ಶಂಖದ ಮಹಾಧ್ವನಿಯ ಆ ಘಾತದಿಂದ ಶೇಷ ಮತ್ತೂ ಕೂರ್ಮನೂ ಒಂದೇಕಾಲಕ್ಕೆ ಭಯದಿಂದ ಎದೆಗುಂದಿದರು. ಮತ್ತು ಪೃಥ್ವಿಯ ಭಾರವನ್ನು ಬಿಸುಟ ಬಿಡಲಿಕ್ಕೆ ಉದ್ಯುಕ್ತರಾದರು. ॥ ೪೪ ॥ ಆ ಯೋಗದಿಂದ ಮೂರು ಲೋಕಗಳೂ ಅಲ್ಲೋಲ ಕಲ್ಲೋಲವಾದವು. ಮೇರು ಮತ್ತು ಮಂದಾರ ಪರ್ವತಗಳು ಅಗುಳಾಡಲಿಕ್ಕೆ ಹತ್ತಿದವು. ಸಮುದ್ರದ ನೀರು ಕೈಲಾಸದವರೆಗೆ ಉಕ್ಕೇರಿತು. ॥ ೪೫ ॥ ಪೃಥ್ವಿಯು ಬೊಕ್ಕುಬೋರಲು ಬೀಳುವಂತೆಯೂ ಆಕಾಶವು ಮುರಿದು ಬೀಳುವಂತೆಯೂ ಭಾಸವಾಯಿತು. ॥ ೪೬ ॥ ಸತ್ಯಲೋಕದಲ್ಲಿ ಸುರರು "ಸೃಷ್ಟಿಯು ಮುಳಿಗಿತೋ ಮುಳಿಗಿತು" ಎಂದು ಕೂಗಿ ಚಪ್ಪಾಳೆಯನ್ನಿಕ್ಕಿದರು. "ಇನ್ನುಮೇಲೆ ದೇವತೆಗಳು ನಿರಾಶ್ರಿತರಾದರು." ಎಂಬುದೊಂದೇ ಕೂಗು ಕೇಳಿಸುತ್ತಲಿದ್ದಿತು ॥ ೪೭ ॥ ಸೂರ್ಯನು ಹಗಲಿನಲ್ಲಿ ಸ್ತಬ್ಧವಾಗಿ ನಿಂತನು. ಪ್ರಳಯಕಾಲವೇ ಬಂದೊದಗಿತೆಂದು ಮೂರು ಲೋಕಗಳಲ್ಲಿಯೂ ಹಾ ಹಾ ಕಾರವು ಉಂಟಾಯಿತು. ॥ ೪೮ ॥ ಅದನ್ನು ನೋಡಿ ಆದಿಪುರುಷನಾದ ಭಗವಾನ್ ಶ್ರೀಕೃಷ್ಣನು ಬಹಳೇ ಆಶ್ಚರ್ಯಚಕಿತನಾದನು. ಮತ್ತು ಒಂದು ವೇಳೆ ಸೃಷ್ಟಿಯ ಅಂತವಾದರೂ ಆಗಬಹುದೆಂಬ ಭಯದಿಂದ ಅವನು ಆ ಅದ್ಭುತವಾದ ಶಂಖ ಧ್ವನಿಯನ್ನು ಅಡಗಿಸಿದನು. ॥ ೪೯ ॥ ಅಂತೆಯೇ ಈ ಸೃಷ್ಟಿಯು ಬದುಕಿ ಉಳಿಯಿತು. ಇಲ್ಲದಿದ್ದರೆ ಕೃಷ್ಣ ಮೊದಲಾದ ವೀರರು ಶಂಖವನ್ನು ಊದಿದಾಗಲೇ ಅದರ ಅವಸಾನಕಾಲವು ಬಂದಿದ್ದಿತು. ॥ ೧೫೦ ॥ ಆ ಶಂಖದ ಧ್ವನಿಗಳು ಇಲ್ಲದಂತಾದರೂ ಪ್ರತಿಧ್ವನಿಯ ನಿನಾದವು ಹಾಗೆಯೇ ನಡೆದಿದ್ದಿತು. ಇಷ್ಟರಿಂದಲೇ ಕೌರವ ಸೈನ್ಯದಲ್ಲಿ ಗಲಭೆಯೆದ್ದಿತು. ॥ ೫೧ ॥ ಸಿಂಹವು ಸಹಜ ಲೀಲೆಯಿಂದ ಹೇಗೆ ಆನೆಗಳ ಸಮುದಾಯವನ್ನು ಸೀಳಿ ಹಾಕುತ್ತದೋ, ಅದರಂತೆಯೇ ಆ ಶಂಖಗಳ ನಾದದಿಂದ ಕೌರವರ ಹೃದಯವು ಒಡೆದು ಹೋಯಿತು ॥ ೫೨ ॥ ಆ ಧ್ವನಿಯನ್ನು ಕೇಳಿ ನಿಂತ ನಿಂತಲ್ಲಿ ಎಲ್ಲರೂ ಧೈರ್ಯಬಿಟ್ಟರು. ಮತ್ತು ಒಬ್ಬರಿಗೊಬ್ಬರು "ಎಚ್ಚರಿಕೆ, ಎಚ್ಚರಿಕೆ!" ಎಂದು ಹೇಳುತ್ತಿದ್ದರು. ॥ ೫೩ ॥

**ಅಥ ವ್ಯವಸ್ಥಿತಾನ್ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ॥**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥**

**[ ಅಥ ವ್ಯವಸ್ಥಿತಾನಿತಿ ]** ತೇಥ ಬಳಪ್ರೌಢೀ ಪುರತೇ । ಮಹಾರಥಿ ವೀರ ಹೋತೇ । ತಿಹೀ ಪುನರಪಿ ದಳಾತೇ । ಆವರಿಲೇ ॥ ೫೪ ॥ ಮಗ ಸರಿಸೆಪಣೆ ಉಠಾವಲೇ । ದುಣವಟೋನಿ ಉಚಲಲೇ । ತಯಾದಂಡೀ ಕ್ಷೋಭಲೇ । ಲೋಕತ್ರಯ ॥ ೫೫ ॥ ತೇಥ ಬಾಣವರೀ ಧನುರ್ಧರ । ವರ್ಷತಾತಿ ನಿರಂತರ ಜೈಸೇ ಪ್ರಳಯಾಂತ ಜಲಧರ । ಅನಿವಾರ ಕಾ ॥ ೫೬ ॥ ತೇ ದೇಖಿಲಿಯಾ ಅರ್ಜುನೇ । ಸಂತೋಷ ಘೇವೂನಿ ಮನೇ । ಮಗ ಸಂಭ್ರಮೆ ಸೇನೇ । ದಿಠೀ ಘಾಲೀತಸೇ ॥ ೫೭ ॥ ತವ ಸಂಗ್ರಾಮೀ ಸಜ್ಜ ಜಾಹಲೇ । ಸಕಳ ಕೌರವ ದೇಖಿಲೇ । ತವ ಲೀಲಾ ಧನುಷ್ಯ ಉಚಲಿಲೆ । ಪಾಂಡುಕುಮರೇ ॥ ೫೮ ॥

**ಅರ್ಥ—** ಆ ಸ್ಥಳದಲ್ಲಿ ಬಲದಿಂದಲೂ ಪುರುಷಾರ್ಥದಿಂದಲೂ • ಯುಕ್ತರಾದ ಮಹಾರಥಿಗಳು, ಸೈನಿಕರಿಗೆ ಪುನಃ ಧೈರ್ಯಕೊಟ್ಟು ಯುದ್ಧಕ್ಕೆ ನಿಲ್ಲಿಸಿದರು. ॥ ೫೪ ॥ ಆ ಮೇಲೆ ಅವರು ಒಳ್ಳೇ ತಯಾರಿಯಿಂದ ಯುದ್ಧಕ್ಕೆ ಸನ್ನದ್ಧರಾದರು. ಮತ್ತು ಅವರು ಬಹಳೇ ಆವೇಶದಿಂದ ನಡೆದುಬಂದರು. ಆ ವೇಗವಾಗಿ ಹೊರಟ ಸೈನ್ಯದ ಆವೇಶಕ್ಕೆ ಮೂರು ಲೋಕಗಳೂ ಹೆಚ್ಚಾಗಿ ಕ್ಷೋಭೆಗೊಂಡವು. ॥ ೫೫ ॥ ಆ ಧನುರ್ಧಾರಿಗಳಾದ ವೀರರು

ಒಂದೇಸವನೇ ಭಯಂಕರವಾದ ಬಾಣದ ಮಳೆಗಳನ್ನು ಕರೆದರು. ಅದರಿಂದ ಪ್ರಳಯ ಕಾಲದ ಭಯಂಕರ ವಾದ ಪರ್ಜನ್ಯ ವೃಷ್ಟಿಯೇ ಆಗುತ್ತಿದಿಯೋ ಎನೋ ಎಂಬಂತೆ ಭಾಸವಾಯಿತು. ॥ ೬೬ ॥ ಅದನ್ನು ನೋಡಿ ಅರ್ಜುನನ ಮನಸಿಗೆ ಬಹಳೇ ಸಂತೋಷವಾಯಿತು. ಅವನು ಒಳ್ಳೇ ಗಂಭೀರತನದಿಂದ ಸೈನ್ಯವೆಲ್ಲವನ್ನು ದಿಟ್ಟಿಸಿ ನೋಡಿದನು. ॥ ೬೭ ॥ ಆಗ್ಗೆ ಎಲ್ಲ ಕೌರವರೂ ಯುದ್ಧಕ್ಕೆ ಸಿದ್ಧರಾದದ್ದನ್ನು ನೋಡಿ ಪಾಂಡುಪುತ್ರನು ಸಹಜ ವಿನೋದದಿಂದ ಧನುಷ್ಯವನ್ನು ಎತ್ತಿದನು. ॥ ೬೮ ॥

**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

**ಅರ್ಜುನ ಉವಾಚ —**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯಮೇಽಚ್ಯುತ ॥ ೨೧ ॥**
**ಯಾವದೇತಾನ್ನಿರೀಕ್ಷ್ಯೇಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ರಣ ಸಮುದ್ಯಮೇ ॥ ೨೨ ॥**
**ಯೋತ್ಸ್ಯಮಾನಾನವೇಕ್ಷೇಹಂ ಯ ಏತೇತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩ ॥**

[ **ಹೃಷೀಕೇಶಮಿತಿ** ] ತೇವೇಳೀ ಅರ್ಜುನ ಮ್ಹಣತಸೆ ದೇವಾ । ಆತಾ ಝಡಕರಿ ರಥ ಪೇಲಾವಾ । ನೇವೂನಿ ಮಧ್ಯೆ ಘಾಲಾವಾ । ದೋಹೀದಳಾ ॥ ೬೯ ॥

[ **ಯಾವ ದೇತಾನಿತ್ಯರ್ಥ** ] ಜವ ಮೀ ನಾವೇಕ । ಹೇ ಸಕಳ ವೀರ ಸೈನಿಕ । ನ್ಯಾಹಾಳೀನ ಅಶೇಖ–ಝುಂಝುತೇ ಜೇ ॥ ೧೭೦ ॥ ಏಥ ಆಲೇ ಅಸತೀ ಆಘವೇ । ಪರೀ ಕವಣೇಸೀ ಮ್ಯಾ ಝುಂಜಾವೇ । ಹೇ ರಣೀ ಲಾಗೇ ಪಹಾವೆ । ಮ್ಹಣವೂನಿಯಾ ॥ ೧೭೧ ॥ ಬಹುತ ಕರೂನಿ ಕೌರವ । ಹೇ ಆತುರ ದುಃಸ್ವಭಾವ । ವಾಟಿವಾವೀಣ ಹಾವ । ಬಾಂಧಿತೀ ಝುಂಝೋ ॥ ೧೭೨ ॥ ಝುಂಝಾಚೀ ಆವಡೀ ಧರಿತೀ । ಪರೀ ಸಂಗ್ರಾಮೀ ಧೀರ ನವ್ಹತೀ ಹೇ ಸಾಂಗೋನಿ ರಾಯಾಪ್ರತೀ । ಕಾಯ ಸಂಜಯೋ ಮ್ಹಣೇ ॥ ೧೭೩ ॥

**ಅರ್ಥ**— ಆ ಸಮಯದಲ್ಲಿ ಅರ್ಜುನನು ಅನ್ನುತ್ತಾನೆ. "ದೇವಾ, ನನ್ನ ರಥವನ್ನು ತೀವ್ರವೇ ಒಯ್ದು ಎರಡೂ ಸೈನ್ಯದ ಮಧ್ಯದಲ್ಲಿ ಸಿಲ್ಲಿಸು. ॥ ೬೯ ॥ ಅಂದರೆ ಹೋರಾಟದ ಇಚ್ಛೆಯಿಂದ ಈ ಸಂಗ್ರಾಮದಲ್ಲಿ ನೆರೆದಿರುವ ವೀರರನ್ನು ಕ್ಷಣಹೊತ್ತು ಚನ್ನಾಗಿ ನೋಡುವೆನು. ॥ ೭೦ ॥ ಯಾಕಂದರೆ ಈ ರಣಾಂಗಣದಲ್ಲಿ ಎಲ್ಲ ಯುದ್ಧವಿಶಾರದರು ಕೂಡಿರುವರು ? ಯಾರ ಕೂಡ ಹೋರಾಡಬೇಕಾಗಿರುವುದು ಎಂಬುದನ್ನು ನಾನು ನೋಡಬೇಕಾಗಿರುವದು. ॥ ೭೧ ॥ ಈ ಚಪಲರೂ ದುಷ್ಟಬುದ್ಧಿಯವರೂ ಆದ ಕೌರವರು, ತಮ್ಮ ಮೈಯಲ್ಲಿ ಪರಾಕ್ರಮವಿಲ್ಲದೇ ಯುದ್ಧಮಾಡುವ ಬಿಂಕವನ್ನು ತೋರಿಸುತ್ತಲಿದ್ದಾರೆ. ॥ ೭೨ ॥ ಇವರಿಗೆ ಯುದ್ಧದ ಅಪೇಕ್ಷೆ ಇರುವುದೇನೋ ನಿಜ. ಆದರೆ ಇವರಲ್ಲಿ ರಣಭೂಮಿಯಲ್ಲಿ ಧೈರ್ಯದಿಂದ ಎದೆತಟ್ಟಿ ಸಿಲ್ಲುವ ಶೌರ್ಯವು ಇರುವದಿಲ್ಲವೆಂದೂ ಧೃತರಾಷ್ಟ್ರ ರಾಜನ ಮುಂದೆ ಹೇಳಿ ಸಂಜಯನು ಮತ್ತೆ ಮುಂದೆ ಮಾತನಾಡುತ್ತಾನೆ. ॥ ೭೩ ॥

**ಸಂಜಯ ಉವಾಚ**

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ॥ ೨೪ ॥**

**[ಏವಮಿತಿ]** ಆಇಕಾ ಅರ್ಜುನ ಇತುಕೇ ಬೋಲಿಲಾ । ತವ ಶ್ರೀಕೃಷ್ಣೇ ರಥ ಪೇಲಿಲಾ ।
ದೋಹೀ ಸೈನ್ಯಾಮಾಜಿ ಕೇಲಾ । ಉಭಾ ತೇಣೇ ॥ ೭೪ ॥

**ಅರ್ಥ**— ರಾಜನೇ ಕೇಳು. ಅರ್ಜುನನ ಈ ಭಾಷಣವನ್ನು ಕೇಳಿದ ಕೂಡಲೇ ಶ್ರೀಕೃಷ್ಣನು ರಥವನ್ನು ಒಯ್ದು ಎರಡೂ ಸೈನ್ಯದ ಮಧ್ಯದಲ್ಲಿ ನಿಲ್ಲಿಸಿದನು. ॥ ೭೪ ॥

**ಭೀಷ್ಮ ದ್ರೋಣ ಪ್ರಮುಖತಃ ಸರ್ವೇಷಾಂಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ಸಮವೇತಾನ್ಕುರುನಿತಿ ॥ ೨೫ ॥**
**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ ೨೬ ॥**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥ ೨೭ ॥**

**[ಭೀಷ್ಮೇತಿ]** ಜೇಥ ಭೀಷ್ಮ ದ್ರೋಣಾದಿಕ । ಜವಳಿಕೇಚಿ ಸನ್ಮುಖ । ಪೃಥಿವೀಪತಿ ಆಣಿಕ । ಬಹು ಆಹಾತೀ ॥ ೭೫ ॥ ತೇಥ ಸ್ಥಿರ ಕರೂನಿಯಾ ರಥ । ಅರ್ಜುನ ಅಸೇಪಾಹತ । ತೋ ದಳಭಾರ ಸಮಸ್ತ । ಸಂಭ್ರಮೇಸೀ ॥ ೭೬ ॥ ಮಗ ದೇವಾ ಮ್ಹಣೆ ದೇಖ ದೇಖ । ಹೇ ಗೋತ್ರಗುರು ಅಶೇಖ ತಪ ಕೃಷ್ಣಾಮನೋ ನಾವೇಕ । ವಿಸ್ಮೋ ಜಾಹಲಾ ॥ ೭೭ ॥ ತೋ ಆಪಣಯಾ ಆವಣ ಮ್ಹಣೇ । ಏಥ ಕಾಯೀ ಕವಣ ಜಾಣೇ । ಹೇ ಮನೀ ಧರಿಲೇ ಏಣೇ । ಪರೀ ಕಾಹೀ ಆಶ್ಚರ್ಯ ಅಸೇ ॥ ೭೮ ॥ ಐಸೀ ಪುಢೀಲ ಸೇಘೇತ । ತೋ ಸಹಜೇ ಜಾಣೇ ಹೃದಯಸ್ಥ । ಪರಿ ಉಗಾ ಅಸೇ- ಸಿವಾಂತ । ತಿಯೇ ವೇಳಿ ॥ ೭೯ ॥ ತವ ತೇಥ ಪಾರ್ಥ ಸಕಳ । ಪಿತೃ ಪಿತಾಮಹ ಕೇವಳ । ಗುರು ಬಂಧೂ ಮಾತುಳ । ದೇಖತಾ ಜಾಹಲಾ ॥ ೧೮೦ ॥ ಇಷ್ಟಮಿತ್ರ ಆಪುಲೆ । ಕುಮರಜನ ದೇಖಿಲೆ । ಹೇ ಸಕಳ ಅಸತಿ ಆಲೆ । ತಯಾಮಾಜೀ ॥ ೧೮೧ ॥ ಸುಹೃಜ್ಜನ ಸಾಸರೇ । ಆಣೀ ಕಹೀಸಖೇ ಸೋಯಿರೇ । ಕುಮರ ಪೌತ್ರ ಧನುರ್ಧರೇ । ದೇಖಿಲೇ ತೇಥ ॥ ೮೨ ॥ ಜಯಾ ಉಪಕಾರ ಹೋತೇ ಕೇಲೇ । ಕೀ ಅಪದೀ ಜೇ ರಕ್ಷಿಲೇ । ಹೇ ಆಸೋ ವಡಿಲ ಧಾಕುಲೆ । ಆದಿ ಕರುನೀ ॥ ೮೩ ॥ ಐಸೆ ಗೋತ್ರಚೀದೋಹೀದಳೀ । ಉದಿತಜಾಹಲೆ ಅಸೇಕಳೀ! ಹೇ ಅರ್ಜುನೆ ತಿಯೇವೇಳೀ । ಅವಲೋಕಿಲೆ ॥೮೪॥

**ಅರ್ಥ**— ಭೀಷ್ಮ ದ್ರೋಣ ಮೊದಲಾದ ಆಪ್ತೇಷ್ಟರು ನಿಂತಲ್ಲಿ ॥ ೭೫ ॥ ಶ್ರೀಕೃಷ್ಣನು. ರಥವನ್ನು ಸ್ಥಿರವಾಗಿ ನಿಲ್ಲಿಸಲು ಅರ್ಜುನನು ಆ ಸೈನಿಕರ ಕಡೆಗೆ ಗಂಭೀರ ಮುದ್ರೆಯಿಂದ ಪರೀಕ್ಷಿಸಿ ನೋಡಲನುವಾದನು. ॥ ೭೬ ॥ ಆ ಮೇಲೆ ( ಅರ್ಜುನನು ) ಅನ್ನುತ್ತಾನೆ "ದೇವಾ, ನೋಡು, ನೋಡು ಈ ಜನರೆಲ್ಲರೂ ನನ್ನ ಆಪ್ತವರ್ಗಕ್ಕಾಗಲಿ, ಗುರುವರ್ಗಕ್ಕಾಗಲಿ ಸೇರಿದವರಿದ್ದಾರೆ. ಇದನ್ನು ಕೇಳಿ ಶ್ರೀ ಕೃಷ್ಣನಿಗೆ ಕ್ಷಣಹೊತ್ತು ಆಶ್ಚರ್ಯವೆನಿಸಿತು. ॥ ೭೭ ॥ ಶ್ರೀಕೃಷ್ಣನು ಅನ್ನುತ್ತಾನೆ– "ಅರ್ಜುನನ ಮನಸಿನಲ್ಲಿ ಯಾವ ಸಂಶಯವು ಉದ್ಭವಿಸಿದೆಂಬುದನ್ನು ಯಾರು ಬಲ್ಲರು ? ಯಾವ ಕಾರಣದ ದೆಸೆಯಿಂದ ಹೀಗೆ ಅನ್ನುತ್ತಿರಬಹುದು ? ಇದರಲ್ಲಿ ಏನಾದರೂ ಚಮತ್ಕಾರವಾದ ಕಾರಣವಿರಬಹುದು." ॥ ೭೮ ॥ ಭಗವಾನ್ ಶ್ರೀಕೃಷ್ಣನು ಎರಡನೆಯವರ ಮನೋಗತವನ್ನು ಸಹಜವೇ ತಿಳಿಯುವಂಥವನಾದುದರಿಂದ, ಅವನು ಮುಂದಿನ ಭವಿಷ್ಯವನ್ನು ತಿಳಿದುಕೊಂಡನು. ಅದರೆ ಆ ಕಾಲಕ್ಕೆ ಏನೊಂದೂ ಮಾತನಾಡದೇ ಸ್ತಬ್ಧವಾಗಿದ್ದನು. ॥ ೭೯ ॥ ಆಗ ಅರ್ಜುನನು ತಮ್ಮ ಎಲ್ಲ ಹಿರಿಯರೂ, ಅಜ್ಜಂದಿರೂ, ಗುರುಗಳೂ, ಬಂಧು

ಗಳೂ, ಮಾವಂದಿರೂ, ಇವರೇ ಮೊದಲಾದವರನ್ನು ನೋಡಿದನು. ॥ ೧೮೦ ॥ ಮತ್ತು ತಮ್ಮ ಇಷ್ಟಮಿತ್ರರೂ, ಮಕ್ಕಳೂ ಆ ಸ್ಥಳದಲ್ಲಿ ಬಂದಿರುವದನ್ನು ನೋಡಿದನು. ॥ ೮೧ ॥ ಅದರಂತೆಯೇ ತನ್ನ ಜೀವದ ಗೆಳೆಯರೂ ಅಳಿಯಂದಿರೂ, ಆಪ್ತವರ್ಗದವರೂ ಮೊಮ್ಮಕ್ಕಳೂ ಇವರೆಲ್ಲರನ್ನು ಅರ್ಜುನನು ನೋಡಿದನು ॥ ೮೨ ॥ ತನ್ನ ಮೇಲೆ ಉಪಕಾರ ಮಾಡಿದವರೂ, ಸಂಕಟ ಸಮಯದಲ್ಲಿ ತನ್ನನ್ನು ರಕ್ಷಣಮಾಡಿದವರೂ ಹಿರಿಯರೂ ಕಿರಿಯರೂ ॥ ೮೩ ॥ ತನ್ನ ಗೋತ್ರಜರೂ ಬಂದು ಎರಡೂ ಸೈನ್ಯದಲ್ಲಿ ಯುದ್ಧೋತ್ಸಾಹದಿಂದ ಸಿದ್ಧರಾಗಿ ನಿಂತಂಥವರನ್ನು ಆ ಕಾಲ ದಲ್ಲಿ ನೋಡಿದನು ॥ ೮೪ ॥

**ಕೃಪಯಾ ಪರಯಾಽವಿಷ್ಟೋ ವಿಷೀದನ್ನಿದ ಮಬ್ರವೀತ್ ।**

**ಅರ್ಜುನ ಉವಾಚ—**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ ॥ ೨೮ ॥**
**ಸೀದಂತಿ ಮಮಗಾತ್ರಾಣಿ ಮುಖಂಚ ಪರಿ ಶುಷ್ಯತಿ ।**
**ವೇಪಥುಶ್ಚ ಶರೀರೇಮೇ ರೋಮ ಹರ್ಷಶ್ಚ ಜಾಯತೇ ॥ ೨೯ ॥**
**ಗಾಂಡೀವಂ ಸ್ರಂಸತೇ ಹಸ್ತಾತ್ತ್ವ ಕ್ಚೈವ ಪರಿದಹ್ಯತೇ ।**
**ನಚ ಶಕ್ನೋಮ್ಯವಸ್ಥಾತುಂ ಭ್ರಮತೀವಚಮೇ ಮನಃ ॥ ೩೦ ॥**

[ **ಕೃಪಯಾ ಪರಯಾವಿಷ್ಟಃ** ] ತೆಥವುನಿ ಗಜಬಜಜಾಹಲೀ । ಆಣಿ ಆಪೈಸಿ ಕ್ರಪಾಳುಪ ಜಲಿ । ತೇಣೆ ಅಪಮಾನೆ ನಿಘಾಲಿ । ವೀರವೃತ್ತಿ ॥ ೮೫ ॥ ಜೆಯಾ ಉತ್ತಮಕುಳೀ ಚಿಯಾಹೋತಿ । ಆಣಿ ಗುಣ ಲಾವಣ್ಯ ಅಥಿ । ತೀಯಾ ಆಣಿಕೀತೆ ನಸಾಹತಿ । ಸುತೇಜಪಣೆ ॥ ೮೬ ॥ ನವಿಯೇ ಅವಡಿಚೇನಿ ಭರೆ । ಕಾಮುಕ ನಿಜವನಿತಾ ವಿಸರೆ । ಮಗಪಾಡೆವಿಣ ಅನುಸರೆ । ಭ್ರಮಲಾ ಜೈಸಾ ॥ ೮೭ ॥ ಕೀತಪೋಬಳೆ ಋದ್ಧಿ । ಪಾತಲಿಯಾ ಭ್ರಂಶೆ ಬುದ್ಧಿ । ಮಗತಯಾ ವಿರಕ್ತತಾ ಸಿದ್ಧಿ । ನಾಠವೇತೀ ॥ ೮೮ ॥ ತೈಸೇ ಅರ್ಜುನಾ ತೆಥಜಾಹಲೇ । ಅಸತೇ ಪುರುಷತ್ವ ಗೇಲೆ । ಜೇ ಅಂತಃಕರಣ ದ್ರವಲೇ । ಕಾರುಣ್ಯಾಸಿ ॥ ೮೯ ॥ ದೇಖಾ ಮಂತ್ರಜ್ಞ ಬರಳ ಜಾಯ । ತೆಥಕಾ ಜೈಸಾ ಸಂಚಾರ ಹೋಯೆ । ತೈಸಾ ತೋ ಧನುರ್ಧರ ಮಹಾಮೋಹೆ । ಆ ಕಳಿಲಾ ॥ ೧೯೦ ॥ ಮ್ಹಣೋನಿ ಅಸತಾ ಧೀರ ಗೇಲಾ । ಹೃದಯಾ ದ್ರವ ಆಲಾ । ಜೈಸಾ ಚಂದ್ರಕರಿ ಸಿಂಪಿಲಾ । ಸೋಮಕಾಂತ ॥ ೯೧ ॥ ತಯಾ ಪರಿ ಪಾರ್ಥ । ಅತಿ ಸ್ನೇಹೆ ಮೋಹಿತ । ಮಗ ಸಖೇದ ಅಸೆ ಬೋಲತ । ಶ್ರೀ ಅಚ್ಯುತೇಸಿ ॥ ೯೨ ॥ ತೋ ಮ್ಹಣೆ ಅವಧಾರಿ ದೇವಾ । ಮ್ಯಾ ಪಾಹಿಲಾ ಹಾ ಮೇಳಾವಾ । ತಂವ ಗೋತ್ರವರ್ಗ ಆಘವಾ । ದೇಖಿಲಾ ಏಥ ॥ ೯೩ ॥ ಸಂಗ್ರಾಮಿ ಉದಿತ । ಜಾಹಲೇ ಅಸತೀ ಕೀರ ಸಮಸ್ತ । ಪಣ ಆಪಣ ಯಾ ಉಚಿತ । ಕೇವಿ ಹೋಯ ॥ ೯೪ ॥ ಏಣೇ ನಾವೇಂಚಿ ನೇಣೋಕಾಯಿ । ಮಜ ಆಪಣಪೇ ಸರ್ವಥಾ ನಾಹಿ । ಮನಬುದ್ಧಿ ಠಾಯೀ । ಸ್ಥಿರ ನೋ ಹೇ ॥ ೯೫ ॥ ದೇಖೇ ದೇಹ ಕಾಂಪತ । ತೋಂಡ ಅಸೇ ಕೋರಡೇ ಹೋತ । ವಿಕಳತಾ ಉಪಜತ । ಗಾತ್ರಾಸೀ ॥ ೯೬ ॥ ಸರ್ವಾಂಗಾ ಕಂಟಾಳಾ ಆಲಾ । ಅತಿಸಂತಾಪ ಉಪಜಲಾ । ತೇಥೆ ಬೆಂಬಳ ಹಾತ ಗಲಾ । ಗಾಂಡೀವಾಚಾ ॥ ೯೭ ॥ ತೇನ ಧರತಚಿ ನಿಸ್ಟಲೇ । ಪರಿ ನೇಣೇಚಿ ಹಾತೋನಿ ಪಡಿಲೇ । ಐಸೇ ಹೃದಯ ಅಸೇ ವ್ಯಾಪಿಲೇ । ಮೋಹೇ ಏಣೇ ॥ ೯೮ ॥ ಜೇ ವಜ್ರಾಪಾಸೂನಿ ಕಠಿಣ । ದುರ್ಧರ ಅತಿ ದಾರುಣ । ತಯಹೂನ ಅಸಾಧಾರಣ । ಹೇ ಸ್ನೇಹ ನವಲ ॥ ೯೯ ॥ ಜೇಣೇ ಸಂಗ್ರಾಮೀ ಹರ ಜಿಂತಿಲಾ । ನಿವಾತ ಕವಚಾಚಾ ಠಾವ ಫೇಡಿಲಾ । ತೋ ಅರ್ಜುನ ಮೋಹೇ ಕವಳಿಲಾ । ಕ್ಷಣಾ ಮಾಜಿ ॥ ೨೦೦ ॥ ಜೈಸೇ

ಭ್ರಮರ ಭೇದೀ ಕೋಡೇ । ಭಲತೈಸೇ ಕಾಷ್ಟ ಕೋರಡೇ । ಪರಿ ಕಳಿಕೇ ಮಾಜೀ ಸಾಂಪಡೇ । ಕೊವಳಿಯೆ ॥೨೦೧॥ ತೇಥ ಉತ್ತೀರ್ಣ ಹೋಯೀಲ ಪ್ರಾಣೇ । ಪರಿ ತೇ ಕಮಳದಳ ಚಿರೂನೇಣೆ । ತೈಸೇ ಕಠಿಣ ಕೋವಳೇ ಪಣೇ । ಸ್ನೇಹದೇಖಾ ॥೨॥ ಹೇ ಆದಿ ಪುರುಷಾಚೀ ಮಾಯಾ । ಬ್ರಹ್ಮೇಯಾಹಿ ನಯೇಚಿ ಆಯಾ । ಮ್ಹಣವೂನಿ ಭುಲವಿಲಾ ಐಕೇರಾಯಾ । ಸಂಜಯೋಮ್ಹಣೆ ॥ ೩ ॥ ಅವಧಾರಿ ಮಗತೋ ಅರ್ಜುನ । ದೇಖೋನಿಸಕಳ ಸ್ವಜನ । ವಿಸರಲಾ ಅಭಿಮಾನ । ಸಂಗ್ರಾಮೀಚಾ ॥ ೪ ॥ ಕೈಸೀ ನೇಣೋ ಸದಯತಾ । ಉಪನಲೀ ತೇಥ ಚಿತ್ತಾ । ಮಗ ಮ್ಹಣೇ ಕೃಷ್ಣ ಆತಾ । ನಸಿಜೇ ಯೇಥ ॥ ೫ ॥ ಮಾಝೆ ಅತಿಶಯ ಮನವ್ಯಾಕುಳ । ಹೋತಸೇ ವಾಚಾ ಬರಳ । ಜೇ ವಧಾವೆ ಹೇ ಸಕಳ । ಯೇಣೇ ನಾವೇ ॥ ೬ ॥

**ಅರ್ಥ**— ಅರ್ಜುನನು ಅನ್ನುತ್ತಾನೆ— ನನ್ನ ಮನಸ್ಸು ತಲ್ಲಣಗೊಂಡಿದೆ. ಅವನಲ್ಲಿ ತನ್ನಿಂದ ತಾನೇ ಅಂತಃಕರಣವು ಉದ್ಭವಿಸಿತು ಮತ್ತು ಆ ಅಪಮಾನದ ದೆಸೆಯಿಂದ ವೀರವೃತ್ತಿಯೇ ಅರ್ಜುನನ್ನು ಬಿಟ್ಟು ಹೊರಟು ಹೋಯಿತು ॥ ೮೫ ॥ ಯಾವ ಸ್ತ್ರೀಯು ಉತ್ತಮ ಕುಲದಲ್ಲಿ ಜನಿಸಿರುವಳೊ ಗುಣವತಿಯೂ ಸುಂದರ ರೂಪ ವತಿಯೂ ಇರುವಳೋ ಅವಳು ತನ್ನ ಉತ್ತಮವಾದಂಥ ತೇಜಸ್ವಿತನದ ದೆಸೆಯಿಂದ ಅನ್ಯ ಸ್ತ್ರೀಯರ ವರ್ಚಸ್ಸು ಸಹಿಸುವದಾಗುವದಿಲ್ಲ. ॥ ೮೬ ॥ ಹೊಸ ಸ್ತ್ರೀಯಳ ಮೇಲಿನ ಪ್ರೀತಿಯು ಭರದಲ್ಲಿ ಸ್ತ್ರೀಲಂಪಟನು ತನ್ನ ಸ್ವಸ್ತ್ರೀಯಳನ್ನು ಮರೆತು ಭ್ರಮಿಷ್ಠ ಮನುಷ್ಯನಂತೆ ತನ್ನ ಯೋಗ್ಯತೆಯನ್ನು ಕೂಡ ಮರೆತು ಅವಳ ವ್ಯಸನದಲ್ಲಿ ಮುಳುಗುತ್ತಾನೆ. ॥ ೮೭ ॥ ಅದರಂತೆಯೇ ತಪಶ್ಚರ್ಯದ ಯೋಗದಿಂದ ಅಷ್ಟ ಮಹಾಸಿದ್ಧಿಗಳು ಪ್ರಸನ್ನವಾಗಿರಲು ವೈರಾಗ್ಯಶೀಲ ಮನುಷ್ಯನ ಬುದ್ಧಿಗೆ ಭ್ರಮವುಂಟಾಗಿ ಅವನಿಗೆ ವೈರಾಗ್ಯದ ಸ್ಮರಣೆಯೇ ಉಳಿಯುವದಿಲ್ಲ. ॥ ೮೮ ॥ ಅದೇ ಪ್ರಕಾರ ಅರ್ಜುನನು ತನ್ನ ಅಂತಃಕರಣದಲ್ಲಿ ಕರುಣೆಗೆ ಆಶ್ರಯವನ್ನು ಕೊಟ್ಟು ಪೌರುಷವನ್ನು ಕಳೆದು ಕೊಂಡನು. ॥ ೮೯ ॥ ಮಾಂತ್ರಿಕನು ಮಂತ್ರೋಚ್ಚಾರವನ್ನು ಮಾಡಲು ತಪ್ಪಿದರೆ ಅವನಿಗೆ ಬಾಧೆ ಉಂಟಾಗು ತ್ತದೆ. ಅದರಂತೆಯೇ ಅರ್ಜುನನೂ ಮಹಾಮೋಹದಿಂದ ವ್ಯಾಕುಲಗೊಂಡನು. ॥ ೯೦ ॥ ಅನನ ಹೃದಯದಲ್ಲಿ ಅಂತಃಕರಣದ ಶಿಲೆಯು ಹೊರಟಿತು. ಯಾವ ಪ್ರಕಾರ ಚಂದ್ರಕಿರಣದ ಸ್ಪರ್ಶವಾದ ಕೂಡಲೇ ಚಂದ್ರಕಾಂತ ಮಣಿಗೆ ಶಿಲೆಯು ಹೊರಡುವದೋ ॥ ೯೧ ॥ ಅದೇ ಪ್ರಕಾರ ಅರ್ಜುನನು ಸ್ನೇಹದಿಂದ ಅತಿಶಯ ಮೋಹಿತ ನಾದನು. ಅನಂತರ ದುಃಖದಿಂದ ಕೂಡಿದ ಅಂತಃಕರಣದಿಂದ ಶ್ರೀಕೃಷ್ಣನ ಸಂಗಡ ಮಾತನಾಡಲಾರಂಭಿಸಿದನು ॥ ೯೨ ॥ ಅರ್ಜುನನು ಅನ್ನುತ್ತಾನೆ- ದೇವಾ ಇತ್ತಕಡಿಗೆ ಲಕ್ಷಕೊಡರಿ- ನಾವು ಈ ಸ್ಥಳದಲ್ಲಿ ಎಲ್ಲ ಸೈನಿಕರ ಸಮುದಾಯವನ್ನು ನೋಡಿದೆನು. ಅವರೆಲ್ಲರೂ ನನ್ನ ಗೋತ್ರಜರೇ. (ಬಾಂಧವರೇ.) ॥ ೯೩ ॥ ಇವರೆಲ್ಲರೂ ನಿಜವಾಗಿ ನಮ್ಮ ಕೂಡ ಹೋರಾಡುವ ಇಚ್ಛೆಯಿಂದ ಸಿದ್ಧರಾಗಿ ನಿಂತಿದ್ದಾರೆ. ಆದರೆ ಇವರ ಸಂಗಡ ಯುದ್ಧ ಮಾಡುವದು ನಮಗೆ ಅನುಚಿತವಾಗಿರುವದು. ॥ ೯೪ ॥ ಇವರ ಕೂಡ ಯುದ್ಧಮಾಡುವ ಮಾತು ತೆಗೆದಕೂಡಲೇ ನನಗೆ ಏನೂ ತಿಳಿಯದಂತಾಗುತ್ತದೆ. ನನ್ನ ಬುದ್ಧಿಯು ಭ್ರಂಶವಾಗಿ ಚಂಚಲವೃತ್ತಿಯನ್ನು ಹೊಂದಿ ಮನಸ್ಸಿಗೆ ನೆಮ್ಮದಿ ಇಲ್ಲವಂತೆ ಆಗಿದೆ. ॥ ೯೫ ॥ ಇದೋ ನೋಡಿ, ನನ್ನ ಶರೀರವು ಕಂಪಿಸುತ್ತಿದೆ, ಬಾಯಿಯು ಆರುತ್ತಲಿದೆ. ನನ್ನ ಅವಯವಗಳು ಶಿಥಿಲವಾಗಹತ್ತಿವೆ. ॥ ೯೬ ॥ ನನ್ನ ಮೈಮೇಲೆ ಮುಳ್ಳುಬರುತ್ತಲಿದೆ. ಹೀಗೆ ನನಗೆ ಬಹು ಕಷ್ಟವಾದುದರಿಂದ ನನ್ನ ಕೈಯಲ್ಲಿ ಹಿಡಿದ ಗಾಂಡೀವ ಧನುಷ್ಯವು ತನ್ನಿಂದ ತಾನೇ ಕಳಚಿಬೀಳಹತ್ತಿದೆ. ॥ ೯೭ ॥ ಮತ್ತು ಅದರಿಂದ ಆ ಗಾಂಡೀವ ಧನುಷ್ಯವು ನನ್ನ ಕೈಯಿಂದ ಕಳಚಿ ಯಾವಾಗಬಿದ್ದಿರುವುದೆಂಬ ಅರಿವೂ ನನಗಿಲ್ಲದಾಗಿದೆ. ಈ ಪ್ರಕಾರ ನನ್ನ ಮನಸ್ಸು ಭ್ರಮಿಷ್ಠವಾಗಿ, ನನ್ನ ಅಂತಃಕರಣವು ಅಪ್ಪವರ್ಗದ ಮೋಹದಿಂದ ವ್ಯಾಪ್ತ ವಾಗಿರುತ್ತದೆ. ॥ ೯೮ ॥ ನನ್ನ ಮನಸ್ಸು ವಜ್ರದಕಿಂತಲೂ ಕಠಿಣವಾದದ್ದೂ, ದುರ್ಧರವಾದದ್ದೂ, ಅತಿ ಭಯಂಕರ ವಾದದ್ದೂ ಆಗಿದ್ದರೂ ಅದರಕಿಂತಲೂ ಈ ಮೋಹವು ವಿಶೇಷವಾಗಿ ದುರ್ಧರವಾಗಿರುವನು. ಇನ್ನೊಂದು

ಮಹದಾಶ್ಚರ್ಯದ ಸಂಗತಿಯೇ ಆಗಿರುವದು. ॥ ೯೯ ॥ ಯಾವನು ಯುದ್ಧದಲ್ಲಿ ಶ್ರೀ ಶಂಕರನನ್ನು ಜಯಿಸಿದನೋ, ಮತ್ತು ನಿವಾತಕವಚ ರಾಕ್ಷಸರನ್ನು ನಿರ್ನಾಮಮಾಡಿದನೋ, ಆ ಮಹಾ ಪರಾಕ್ರಮಿ ಅರ್ಜುನನು ಮೋಹದಿಂದ ಒಂದೇ ಕ್ಷಣದಲ್ಲಿ ದಿಂಙ್ಮೂಢನಾಗಿದ್ದನು. ॥ ೨೦೦ ॥ ಭೃಂಗವು ಬೇಕಾದ ಜಾತಿಯ ಒಣಗಿದ ಕಟ್ಟಿಗೆಯನ್ನು ಸಹಜವಾಗಿ ಕೊರೆದು ಛಿದ್ರಮಾಡುವದು. ಆದರೆ ಕೋಮಲವಾದ ಕಮಲ ಪುಷ್ಪದ ಪರಾಗದಲ್ಲಿ ಪ್ರವೇಶಮಾಡಿದ ಕೂಡಲೇ ಬಂಧನದಲ್ಲಿ ಬೀಳುವದು. ॥ ೧ ॥ ಅದು ಆ ಸ್ಥಳದಲ್ಲಿ (ಕಮಲದಲ್ಲಿ) ಪ್ರಾಣವನ್ನಾದರೂ ಬಿಟ್ಟೀತು; ಆದರೆ ಕಮಲದಳವನ್ನು ಕೊರೆದು ಹೊರಗೆ ಬರುವದು. ಆ ಭ್ರಮರದ ಮನಸ್ಸಿನಲ್ಲಿಸಹ ಬರಲಾರದು. ಅದೇ ಪ್ರಕಾರ ಆಪ್ತವರ್ಗದ ಮೋಹ, ಮಮತೆಯನ್ನು ಬಿಟ್ಟುಬಿಡುವದು ಸುಲಭವಿದ್ದು ಅದು ಅರ್ಜುನನಿಗೆ ಬಹು ಕಷ್ಟ ಮತ್ತು ಅಸಾಧ್ಯವಿರುವದು. ॥ ೨ ॥ ಸಂಜಯನು ಧೃತರಾಷ್ಟ್ರ ರಾಜನಿಗೆ ಹೇಳುತ್ತಾನೆ. ಈ ಮೋಹವು ಆದಿಪುರುಷ ಭಗವಾನ್ ಶ್ರೀಹರಿಯ ಮಾಯೆಯೇ. ಈ ಮಾಯೆಯನ್ನು ಬ್ರಹ್ಮದೇವರಿಂದಲೂ ಕೂಡ ತಡೆಯುವದು ಅಸಾಧ್ಯವಾಗಿರುವದು. ಅಂತೆಯೇ ಅರ್ಜುನನು ಮೋಹದಿಂದ ವ್ಯಾಕುಲನಾದನು. ॥ ೩ ॥ ರಾಜನೇ ಕೇಳು, ಆ ಮೇಲೆ ಅರ್ಜುನನು ತನ್ನ ಯಾವತ್ತು ಸ್ವಜನರನ್ನು ನೋಡಿ ಅವನ ಹೃದಯದಲ್ಲಿ ಯುದ್ಧವಿಷಯದ ಅಭಿಮಾನವು ಸಂಪೂರ್ಣವಾಗಿ ಅಡಗಿಹೋಯಿತು. ॥ ೪ ॥ ಅರ್ಜುನನ ಚಿತ್ತದಲ್ಲಿ ಹೇಗೆ ಅಂತಃಕರಣವು ಉದ್ಭವಿಸಿತೋ ತಿಳಿಯುವದಿಲ್ಲ. ಆ ಮೇಲೆ ಅವನು ಶ್ರೀಕೃಷ್ಣನಿಗೆ ಅನ್ನುತ್ತಾನೆ— ದೇವಾ, ನನಗಿಲ್ಲಿ ನಿಲ್ಲುವದೇ ಬೇಸರವಾಗಿರುವದು. ಎಲ್ಲಿಗಾದರೂ ಹೊರಟು ಹೋಗುವದೇ ಒಳಿತು. ॥ ೫ ॥ ಈ ಎಲ್ಲ ಬಾಂಧವರನ್ನು ಕೊಲ್ಲಬೇಕೆಂಬ ಮಾತು ಮನಸ್ಸಿನಲ್ಲಿ ಬಂದ ಕೂಡಲೇ ನನ್ನ ಅಂತಃಕರಣವು ವ್ಯಾಕುಲವಾಗಿ ನನ್ನ ಮುಖದಿಂದ ಶಬ್ದಗಳೇ ಹೊರಡದಾಗಿವೆ. ॥ ೬ ॥

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನ ಮಾಹವೇ ॥ ೩೧ ॥**

**[ ನಿಮಿತ್ತಾನಿತಿ ]** ಯಾ ಕೌರವಾ ಜರೀ ವಧಾವೆ । ತರೀ ಯುಧಿಷ್ಠಿರಾದಿಕಾ ಕಾನವಧಾವೆ ।
ಹೇ ಏರ ಏರ ಆಘವೆ । ಗೋತ್ರಜ ಆಮುಚೆ ॥ ೭ ॥ ಮ್ಹಣೋನಿ ಜಳೋ ಹೇ ಝುಂಝು ।
ಪ್ರತ್ಯಯಾನಯೆಮಜ । ಯೇಣೆ ಕಾಯ ಕಾಜ । ಮಹಾಪಾಪೇ ॥ ೮ ॥ ದೇವಾಬಹುತಾಪರೀ
ಪಾಹತಾ । ಏಥ ಹೋಇಲ ಖಟೆ ಹೋಯಿಲ ಝುಂಝುತಾ । ವರೀ ಕಾಂಹೀ ಚುಕವಿತಾ ಲಾಭ ಆಥೀ ॥ ೯ ॥

**ಅರ್ಥ**— ಈ ನಮ್ಮ ಬಂಧುಗಳಾದ ಕೌರವರನ್ನು ಯುದ್ಧದಲ್ಲಿ ಸಂಹರಿಸುವದು ಯೋಗ್ಯವೆಂದು ತೋರಿದರೆ, ಧರ್ಮರಾಜ ಮೊದಲಾದವರನ್ನಾದರೂ ನಾವು ಯಾಕೆ ಸಂಹರಿಸಬಾರದು ? ಪರಸ್ಪರರು ನಮ್ಮ ಅಣ್ಣ ತಮ್ಮಂದಿರೂ ಗೋತ್ರಜರೂ ಇದ್ದಾರೆ. ॥ ೭ ॥ ಆದರೆ ದೇವ ದೇವೇಶನೆ ಈ ಯುದ್ಧಕ್ಕೆ ಬೆಂಕಿ ಹಚ್ಚು ( ಅದರ ಗೊಡವೆಯೇ ನಮಗೆ ಬೇಡ ) ಈ ಯುದ್ಧವು ನನಗೆ ಎಷ್ಟೂ ಯೋಗ್ಯವೆಂದು ತೋರುವದಿಲ್ಲ. ಇಂಥ ಮಹಾಪಾತಕವನ್ನು ಮಾಡಿ ನಾವು ಮುಂದೆ ಮಾಡತಕ್ಕದ್ದಾದರೂ ಏನು ? ॥ ೮ ॥ ದೇವಾ, ಅನೇಕ ಪ್ರಕಾರದಿಂದ ವಿಚಾರಮಾಡಿ ನೋಡಿದರೂ, ಯುದ್ಧಮಾಡುವದರಿಂದ ಅದರ ಪರಿಣಾಮವು ಅನಿಷ್ಟವೇ ಆದೀತೆಂದು ತೋರುತ್ತದೆ. ಅದರಿಂದ ನಾವು ಪರಾವೃತ್ತರಾದರೆ ( ವಿಮುಖರಾದರೆ ) ಮಾತ್ರ ಏನಾದರೂ ನಮ್ಮ ಕಲ್ಯಾಣವಾದೀತು. ॥ ೯ ॥

**ನ ಕಾಂಕ್ಷೇ ವಿಜಯಂ ಕೃಷ್ಣ ನಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥ ೩೨ ॥**
**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವಚ ಪಿತಾಮಹಾಃ।**
**ಮಾತುಲಾಃ ಶ್ವಶುರಾಃ ಪೌತ್ರಾಃಶ್ಯಾಲಾಃ ಸಂಬಂಧಿನಸ್ತಥಾ ॥ ೩೪ ॥**

**[ ನ ಕಾಂಕ್ಷೇ ವಿಜಯಂ ಕೃಷ್ಣೇತಿ ]** ತಯಾ ವಿಜಯ ವೃತ್ತೀ ಕಾಹೀ । ಮಜ ಸರ್ವಥಾ ಕಾಜ ನಾಹಿ । ಏಥ ರಾಜ್ಯ ತರೀ ಕಾಯೀ । ಪಾವೋನಿಯಾ ॥ ೨೧೦ ॥ ಯಾಸಕಳಾತೇ ವಧಾವೆ । ಮಗಜೇ ಭೋಗ ಭೋಗಾವೆ । ತೇ ಜಳೋತ ಆಘವೆ । ಪಾರ್ಥಮ್ಹಣೇ ॥ ೨೧೧ ॥ ತೇಣೇ ಸುಖೇವಿಣ ಹೋಯೀಲ । ತೇ ಭಲತ್ಯೆಸೆ ಸಾಹಿಜೇಲ । ವರೀ ಜೀವಿತಹೀ ವೇಂಚಿಜೇಲ । ಯಾಚಿಲಾಗೀ ॥ ೧೨ ॥ ಪರೀ ಯಾಸೀ ಘಾತುಕೀಜೇ । ಮಗ ಆಪಣ ರಾಜ್ಯಸುಖ ಭೋಗಿಜೇ । ಹೇ ಸ್ವಪ್ನಿಹಿ ಮನಮಾಝೀ । ಕರೂನ ಶಕೇ ॥ ೧೩ ॥ ತರೀ ಆಮ್ಹಿ ಕಾ ಜನ್ಮಾವೇ । ಕವಣಾ ಲಾಗೀ ಜೇ ಯಾವೇ । ಜರೀ ಒಡಿಲಾ ಯಾ ಚಿಂತಾವೇ । ವಿರುದ್ಧ ಮನೇ ॥ ೧೪ ॥ ಪುತ್ರಾತೆ ಇಚ್ಛೀ ಕುಳ । ತಯಾಚೆ ಕಾಯೀ ಹೇಚಿ ಫಳ । ಜೇ ನಿರ್ದಳಿಜೆ ಕೇವಳ । ಗೋತ್ರ ಆಪುಲೇ ॥ ೧೫ ॥ ಹೇ ಮನೀಚಿ ಕೇವಿ ಧರಿಜೇ । ಆಪಣ ವಜ್ರಾಚೇಯಾ ಹೋ ಈಜೇ । ವರೀ ಘಡೇ ತರೀ ಕೀಜೇ । ಭಲೇ ಇಯಾ ॥ ೧೬ ॥ ಆಮ್ಹೀ ಜೇ ಜೇ ಜೋಡಾವೆ । ತೇ ಸಮಸ್ತ ಇಹೀ ಭೋಗಾವೇ । ಹೇ ಜೀವಿತಹೀ ಉಪಕಾರಾವೇ । ಕಾಜೀ ಯಾಚ್ಯಾ ॥ ೧೭ ॥ ಆಮ್ಹಿ ದಿಗಂತೀಚೇ ಭೂಪಾಳ । ವಿಭಾಂಡುನಿ ಸಕಳ । ಮಗ ಸಂತೋಷವಿಜೇ ಕುಳ । ಆಪುಲೇಜೇ ॥ ೧೮ ॥ ತೇಚಿ ಹೇ ಸಮಸ್ತ । ಪರೀ ಕೈಸೇ ಕರ್ಮ ವಿಪರೀತ । ಜೇ ಜಹಾಲೇ ಅಸತೀ ಉದ್ಯತ । ಝುಂಜಾವಯಾ ॥ ೧೯ ॥ ಅಂತೋರಿಯಾ ಕುಮರೀ । ಸಾಂಡೋನಿಯಾ ಭಾಂಡಾರೇ । ಶಸ್ತ್ರಾಗ್ರೀ ಜಿವ್ಹಾರೇ । ಆರೋಪುನೀ ॥ ೨೨೦ ॥ ಐಸಿಯಾತೇ ಕೈಸೇನಿ ಮಾರೂ । ಕವಣಾವರಿ ಶಸ್ತ್ರ ಧರೂ । ನಿಜ ಹೃದಯಾ ಕರೂ । ಘಾತು ಕೇವೀ ॥ ೨೧ ॥ ಹೇ ನೆಣಸೀ ತೂ ಕವಣ । ಪರೀ ಪೈಲ ಭೀಷ್ಮ ದ್ರೋಣ । ಜಯಾಚೆ ಉಪಕಾರ ಅಸಾಧಾರಣ । ಆಮ್ಹಾ ಬಹುತ ॥ ೨೨ ॥ ಏಥ ಶಾಲಕ ಸಾಸರೇ ಮಾತುಳ । ಆಣಿ ಬಂಧುಕೀ ಹೇ ಸಕಳ । ಪುತ್ರ ನಾತೂ ಕೇವಳ । ಇಷ್ಟಹೀ ಅಸತೀ ॥ ೨೩ ॥ ಅವಧಾರೀ ಅತೀ ಜವಳಿಕೇಚೇ । ಹೇ ಸಕಳಹೀ ಸೋಯರೀ ಆಮುಜೇ । ಮ್ಹಣೋನಿ ದೋಷ ಆಥೀ ವಾಚೇ । ಬೋಲತಾಚಿ ॥ ೨೪ ॥

**ಅರ್ಥ—** ಇಂಥಾ ರೀತಿಯಿಂದ ಜಯುವನ್ನು ದೊರಕಿಸುವ ಇಚ್ಛೆಯು ನನ್ನಲ್ಲಿರುವದಿಲ್ಲ. ಈ ಪ್ರಕಾರದ ರಾಜ್ಯವನ್ನಾದರೂ ದೊರಕಿಸುವದರಿಂದ ಏನು ಪ್ರಯೋಜನ? ॥ ೧೦ ॥ ಅರ್ಜುನನು ಅನ್ನುತ್ತಾನೆ. "ಈ ಎಲ್ಲ ರನ್ನೂ ಕೊಂದು ಯಾವ ಭೋಗವನ್ನು ಭೋಗಿಸತಕ್ಕದ್ದೋ ಅಂತಹ ಆ ಭೋಗವೆಲ್ಲನನ್ನೂ ಸುಟ್ಟುಬಿಡುವದೇ ಒಳಿತು." ॥ ೧೧ ॥ ಈ ತರಹದ ಸುಖದಕಿಂತಲೂ ನಾವು ಬೇಕಾದಂತಹ ದುಃಖವನ್ನೂ ಭೋಗಿಸಬಹುದು. ನಮ್ಮ ಬಂಧುವರ್ಗದವರ ದೆಸೆಯಿಂದ ನಮ್ಮ ಪ್ರಾಣವನ್ನಾದರೂ ಕೊಡುವೆವು. ॥ ೧೨ ॥ ಆದರೆ ಇವರೆಲ್ಲರನ್ನೂ ಘಾತಿಸಿ ನಾನೇ ರಾಜ್ಯಸುಖವನ್ನು ಭೋಗಿಸುವ ಇಚ್ಛೆಯು ಸ್ವಪ್ನದಲ್ಲಿಯೂ ಸುಳಿಯಲಾರದು. ॥ ೧೩ ॥ ಒಂದು ಸಮಯ, ನಮ್ಮ ಹಿರಿಯರಿಗೇ ಅಹಿತವನ್ನು ಬಯಸುವದಾದರೆ ನಾವು ಜನ್ಮವನ್ನೆತ್ತಿದ ಫಲವೇನು? ಮತ್ತು ಬದುಕಿರುವದಾದರೂ ಯಾರ ಸಲುವಾಗಿ? ॥ ೧೪ ॥ ಗೋತ್ರಜರು ತಮ್ಮ ಕುಲದಲ್ಲಿ ಪುತ್ರಪ್ರಾಪ್ತಿಯು ಅಪೇಕ್ಷೆಯನ್ನೇನೋ ಮಾಡುತ್ತಾರೆ. ಆದರೆ ಆ ಮಗನು ಅವರ ವಂಶವನ್ನು ಸಮೂಲವಾಗಿ ನಿರ್ಮೂಲ ಮಾಡುವದೇ ಅದರ ಫಲಿತೆಯೇ? ॥ ೧೫ ॥ ನಮ್ಮ ಮನಸ್ಸನ್ನು ಗುರುಹಿರಿಯರ ವಿಷಯದಲ್ಲಿ ವಜ್ರದಂತೆ ಕಠೋರ (ಕಠಿಣ) ಮಾಡಿ ಅವರ ಅಹಿತವನ್ನು ಚಿಂತಿಸುವದನ್ನಾದರೂ ಮನಸಿನಲ್ಲಿ ಹೇಗೆ ತರಬೇಕು? ಅವರಿಗೆ ನಮ್ಮ ಕೈಯಿಂದಾದಷ್ಟು ಉಪಕಾರವನ್ನೇ ಮಾಡಬೇಕು. ॥ ೧೬ ॥ ನಾವು ಏನೇನು ದೊರಕಿಸುವೆವೋ ಆ ಎಲ್ಲ ಪದಾರ್ಥಗಳ ಉಪಭೋಗವನ್ನು ಅವರು ತೆಗೆದುಕೊಳ್ಳಬೇಕು. ಇಷ್ಟರಿಂದಲೇ ತೀರಿತೇನು? ಅವರ ಕಾರ್ಯದ ಸಲುವಾಗಿ

ನಾವು ನಮ್ಮ ಜೀವವನ್ನೂ ಕೊಡಬೇಕಾಗುವದು. ॥೧೭॥ ನಾವು ಪೃಥ್ವಿಯ ಮೇಲಿನ ಎಲ್ಲ ರಾಜರನ್ನು ಜಯಿಸಬೇಕು, ಆ ಆ ಯೋಗದಿಂದ ನಮ್ಮ ಗೋತ್ರಜರಿಗೆ ಸಂತೋಷವನ್ನುಂಟು ಮಾಡಬೇಕು. ॥೧೮॥ ಹೀಗಿದ್ದು, ಕರ್ಮದ ಗತಿಯು ಎಷ್ಟು ವಿಪರೀತವಾಗಿರುವುದೆಂಬುದನ್ನು ನೋಡಿದರೆ ನಮ್ಮ ಗೋತ್ರಜರೇ ನಮ್ಮ ಸಂಗಡ ಯುದ್ಧ ಮಾಡುವದಕ್ಕೆ ಉದ್ಯುಕ್ತರಾಗಿರುವರು. ॥೧೯॥ ಹೆಂಗಸರೂ, ಸಣ್ಣ ಹುಡುಗರೂ ಮತ್ತು ದ್ರವ್ಯವೂ, ಸಂಪತ್ತೂ, ಇದನ್ನೆಲ್ಲವನ್ನೂ ಬಿಟ್ಟು ತೀಕ್ಷ್ಣವಾದ ಶಸ್ತ್ರಾಸ್ತ್ರಗಳ ಆಧಾರದಿಂದ ಅವರು ತಮ್ಮ ಪ್ರಾಣವನ್ನು ಇಟ್ಟಿರುವರು. ॥೨೦॥ ಇಂಥವರನ್ನು ನಾನು ಹೊಡೆಯುವದಾದರೂ ಹೇಗೆ? ಯಾರ ಮೇಲೆ ನಾನು ಶಸ್ತ್ರವನ್ನು ಹಿಡಿಯಲಿ? ನನ್ನ ಪ್ರೀತಿಯ ಆಪ್ತರನ್ನು ಹೇಗೆ ಘಾತಮಾಡಲಿ? ॥೨೧॥ ಇವರಾರೆಂಬುದು ನಿನಗೆ ಗೊತ್ತಿಲ್ಲವೇ? ಆ ಕಡೆಗೆ ಭೀಷ್ಮ ಮತ್ತು ದ್ರೋಣರೂ ಇದ್ದಾರೆ. ಅವರು ನಮ್ಮ ಮೇಲೆ ಮಹತ್ವವಾದ ಉಪಕಾರವನ್ನು ಮಾಡಿದ್ದಾರೆ. ಈ ಸ್ಥಳದಲ್ಲಿ ಬೀಗರೂ, ಆಚಾರ್ಯರೂ, ಹಿರಿಯರೂ ಮಕ್ಕಳೂ, ಮೊಮ್ಮಕ್ಕಳೂ ಹಾಗೆಯೇ ಅಜ್ಜಂದಿರೂ, ಸೋದರ ಮಾವಂದಿರೂ, ಅಳಿಯಂದಿರೂ, ಆಪ್ತರೂ ಇದ್ದಾರೆ. ॥೨೩॥ ಶ್ರೀಕೃಷ್ಣನೇ, ಕೇಳು— ಈ ಎಲ್ಲರೂ ನಮ್ಮ ಸಮೀಪದ ಆಪ್ತರೇ ಇರುವರು. ಅಂದಬಳಿಕ ಇವರನ್ನು ಕೊಲ್ಲಬೇಕೆಂಬ ಉಚ್ಚಾರವು ನಮ್ಮ ಮುಖದಿಂದ ಹೊರಟರೆ ಅದೂ ಕೂಡ ದೋಷವೆಂದು ಗಣಿಸಲ್ಪಡುತ್ತದೆ. ॥೨೪॥

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯ ರಾಜ್ಯಸ್ಯ ಹೇತೋಃ ಕಿಂನುಮಹೀಕೃತೇ ॥ ೩೫ ॥**

**[ ಏತಾನ್ನೇತಿ ]** ಹೇ ವರೀ ಭಲತೇ ಕರಿತು । ಆತಾಚಿ ಎಥೆಮಾರಿತು । ವರೀ ಆಪಣ ಮನೇಂ ಘಾತು । ನ ಚಿಂತಾವಾ ॥ ೨೫ ॥ ತ್ರೈಲೋಕ್ಯೀಚೆ ಅನಕಳಿತ । ಜರೀ ರಾಜ್ಯ ಹೋಯಿಲ ಪ್ರಾಪ್ತ । ತರೀ ಹೇ ಅನುಚಿತ । ನಾಚರೇ ಮೀ ॥ ೨೬ ॥ ಜರೀ ಆಜಿ ಏಥ ಐಸೇ ಕೀಜೇ । ತರೀ ಕವಣಾಚ್ಯಾ ಮನೀ ಉರಿಜೇ । ಸಾಂಗೇ ಮುಖ ಕೇವಿ ಪಾಹಿಜೇ । ತುರ್ಝೇ ಕೃಷ್ಣಾ ॥ ೨೭ ।

**ಅರ್ಥ—** ನಮ್ಮ ವಿರುದ್ಧ ಪಕ್ಷದಿಂದ ಇವರು ನಮಗೆ ಬೇಕಾದ್ದು ಮಾಡಿದರೂ, ಇಲ್ಲವೇ ನಮ್ಮನ್ನು ಒಂದು ವೇಳೆ ಇಲ್ಲಿಯೇ ಕೊಂದರೂ, ನಾವು ಅವರ ಘಾತ ಮಾಡುವದನ್ನು ನಮ್ಮ ಮನಸ್ಸಿನಲ್ಲಿ ಸಹ ತರಬಾರದು ॥೨೫॥ ಹೆಚ್ಚೇನು, ನಿಷ್ಕಂಟವಾದ ಈ ತ್ರಿಭುವನದ ರಾಜ್ಯವೇ ದೊರೆತರೂ ನಾನು ಈ ಅನುಚಿತ ಕರ್ಮವನ್ನು ಮಾಡಲಾರೆನು. ॥೨೬॥ ಕೃಷ್ಣಾ ಒಂದು ಸಮಯ ನಾವು ಇವರನ್ನು ಇಲ್ಲಿಯೇ ಕೊಲ್ಲುವದಾದರೆ ನಮ್ಮ ಪಾಲಿಗೆ ಮಹಾ ಪಾಪವೇ ಬರುವದು. ಅಲ್ಲದೇ ನಮ್ಮ ವಿಷಯಕವಾಗಿ ಆದರ ಭಾವವನ್ನು ತಾಳುವವರಾರು? ಆಮೇಲೆ ನಿನ್ನ ದರ್ಶನವಾಗುವದಾದರೂ ಹೇಗೆ? ॥೨೭॥

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**

**[ ನಿಹತ್ಯೇತಿ ]** ಜರೀ ವಧ ಕರೀ ಗೋತ್ರಜಾಂಚಾ । ತರೀ ವಸೌಟಾ ಹೋವುನಿ ದೋಷಾಚಾ । ಮಜ ಜೋಡಲಾಸಿ ತೂ ಹಾತೀಚಾ । ದೂರ ಹೋಸಿ ॥ ೨೮ ॥ ಕುಲಹರಣೀ ಪಾತಕೇ । ತಿಯೇ ಆಂಗೀ ಜಡತೀ ಅಶೇಷೇ । ತಯೇ ವೇಳೀ ತೂ ಕವಣೇ ಕೇ । ದೇಖಾವಾಸೀ ॥ ೨೯ ॥ ಜೈಸಾ ಉದ್ಯಾನಾಮಾಜಿ ಅನಳ । ಸಂಚರಲಾ ದೇಖೋನಿ ಪ್ರಬಳ । ಮಗ ಕ್ಷಣಭರೀ ಕೋಕಿಳ । ಸ್ಥಿರನೋಹೇ ॥ ೩೦ ॥ ಕಾ ಸಕರ್ದಮ ಸರೋವರ । ಅವಲೋಕುನಿ ಚಕೋರ । ನ ಸೇವಿತ ಅವ್ವೇರ । ಕರೂನಿ ನಿಘೆ ॥ ೩೧ ॥ ತಯಾಪರೀ ತೂ ದೇವಾ । ಮಜ ಝುಕಲೂನ ನ ಯೇಸೀ ಮಾವಾ । ಜರೀ ಪುಣ್ಯಾಚಾ ಮೋಲಾವಾ । ನಾಶಿಜೈಲ ॥ ೩೨ ॥

**ಅರ್ಥ—** ಒಂದು ವೇಳೆ ನಾನು ಗೋತ್ರ ಜರ ವಧ ಮಾಡಿದರೆ ದೋಷದ ತವರು ಮನೆಯೇ ಆದೇನು. ಶ್ರೀ ಕೃಷ್ಣಾ, ಹೀಗಾಗುವದರಿಂದ ನೀನು ಕೂಡ ನನ್ನ ಕೈ ಬಿಟ್ಟು ಹೋಗಬಹುದು. ಮುಂದೆ ನಿನ್ನ ಪ್ರಾಪ್ತಿಯಾಗುವ ಬಗೆ ಹೇಗೆ ? ॥ ೨೮ ॥ ದೇವಾ, ಕುಲಕ್ಷಯ ಮಾಡುವದರಿಂದ ಅನಂತ ಪಾತಕಗಳು ತಗಲುತ್ತವೆ. ಆವಾಗ ನಿನ್ನನ್ನು ಎಲ್ಲಿ ಶೋಧ ಮಾಡಬೇಕು ? ಅದು ಯಾರಿಗೆ ಸಾಧ್ಯ ? ॥ ೨೯ ॥ ಉದ್ಯಾನದಲ್ಲಿ ಅಗ್ನಿಯು ಪ್ರಜ್ವಲಿತವಾದದ್ದನ್ನು ನೋಡಿ ಕೋಕಿಲೆಯು ಅಲ್ಲಿ ಕ್ಷಣಕಾಲವೂ ಕೂಡ ಹೇಗೆ ನಿಲ್ಲುವದಿಲ್ಲವೋ, ॥ ೨೩೦ ॥ ಕೆಸರಿನಿಂದ ಕಲಂಕಿತ (ತುಂಬಿದ) ಸರೋವರವನ್ನು ನೋಡಿ ಚಕೋರವು ಸೇವನವನ್ನು ಮಾಡದೇ ಹೇಗೆ ತಿರುಗಿ ಹೋಗುವದೋ, ॥ ೩೧ ॥ ಹಾಗೆಯೇ ದೇವಾ, ಒಂದು ವೇಳೆ ನನ್ನ ಪುಣ್ಯಾಂಶವು ಕಡಿಮೆಯಾದರೆ ನೀವು ನಿಮ್ಮ ಮಾಯೆಯಿಂದ ತಕ್ಕಿಸಿ ನನ್ನನ್ನು ಬಿಟ್ಟು ಹೊರಟು ಹೋಗುವಿರಿ. ॥ ೩೨ ॥

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**

**[ ತಸ್ಮಾನ್ನಾರ್ಹಾವಯಂ ಹಂತುಮಿತಿ ]** ಮ್ಹಣೋನಿ ಮೀ ಹೇ ನ ಕರೀ । ಇಯೇ ಸಂಗ್ರಾಮೀ ಶಸ್ತ್ರ ನ ಧರೀ । ಹೇ ಕಿಡಾಳ ಬಹುತೀ ಪರೀ । ದಿಸತಸೇ ॥ ೩೩ ॥ ತುಜಸೀ ಅಂತರಾಯ ಹೋಈಲ । ಮಗ ಸಾಂಗೇ ಆಮುಚೇ ಕಾಯ ಉರೇಲ । ತೇಣೇ ದುಖೇ ಹಿಯೇ ಫುಟೇಲ । ತುಜವೀಣ ಕೃಷ್ಣಾ ॥ ೩೪ ॥ ಮ್ಹಣೋನಿ ಕೌರವ ಹೇ ವಧಿಜತೀ । ಮಗ ಆಮ್ಹಿ ಭೋಗ ಭೋಗಿಜತೀ । ಹೇ ಅಸೋ ಮಾತ ಅಘಡತೀ । ಅರ್ಜುನ ಮ್ಹಣೇ ॥ ೩೫ ॥

**ಅರ್ಥ—** ಈ ಕಾರಣದ ದೆಸೆಯಿಂದ ಈ ಕಾರ್ಯವನ್ನು ನಾನೆಂದೂ ಮಾಡೆನು. ಮತ್ತು ಈ ಸಮರ ಭೂಮಿಯಲ್ಲಿ ನನ್ನ ಕೈಯಿಂದ ಶಸ್ತ್ರವನ್ನು ಎಂದೂ ಹಿಡಿಯಲಿಕ್ಕಿಲ್ಲ. ಯಾಕಂದರೆ ಈ ಕೆಲಸವು ಬಹಳೇ ರೀತಿಯಿಂದಲೂ ನಿಂದ್ಯಾಸ್ಪದಿರುವದೆಂದು ನನಗೆ ಕಾಣುತ್ತದೆ. ॥ ೩೩ ॥ ಕೃಷ್ಣಾ ನೀವು ನನ್ನನ್ನು ಬಿಟ್ಟುಹೋದರೆ ನಮ್ಮ ಗತಿ ಏನು ? ಆ ದುಃಖದಿಂದ ಧೈರ್ಯಗುಂದಿ ನಮ್ಮ ಹೃದಯವು ಒಡೆದು ಹೋಗುವದು ॥ ೩೪ ॥ ಅರ್ಜುನನು ಅನ್ನುತ್ತಾನೆ—ದೇವಾ, ಈ ಕೌರವರನ್ನು ಸಂಹಾರ ಮಾಡಿ, ಆ ಮೇಲೆ ನಾವು ರಾಜ್ಯದ ಉಪಭೋಗ ತೆಗೆದುಕೊಳ್ಳಬೇಕೆಂಬ ಮಾತು ನನ್ನಿಂದ ಸರ್ವಥಾ ಆಗಲರಿಯದು. ॥ ೩೫ ॥

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮ ॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ ।**
**ಕುಲಕ್ಷಯ ಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

**[ ಯದ್ಯಪ್ಯೇತೆ ಇತಿ ]** ಹೇ ಅಭಿಮಾನ ಮದೇ ಭುಲಲೇ । ಜರ್ಹಿ ಪಾ ಸಂಗ್ರಾಮಾ ಆಲೆ । ತರ್ಹಿ ಆಮ್ಹಿ ಹಿತ ಆಪುಲೆ । ಜಾಣಾವೆ ಲಾಗೇ ॥ ೩೬ ॥ ಹೆ ಐಸೇ ಕೈಸೇ ಕರಾವೆ । ಜೇ ಆಪುಲೆ ಆಪಣ ಮಾರಾವೆ । ಜಾಣತ ಜಾಣತಾಚಿ ಸೇವಾವೆ । ಕಾಳಕೂಟ ॥ ೩೭ ॥ ಹಾಂಚೇ ಮಾರ್ಗ ಚಾಲತಾ । ಪುಢಾ ಸಿಂಹ ಜಾಹಲಾ ಅವಚಿತಾ । ತೋತವ ಚುಕವಿತಾ । ಲಾಭ ಆಧಿ ॥ ೩೮ ॥ ಅಸತಾ ಪ್ರಕಾಶ ಸಾಂಡಾವಾ । ಮಗ ಅಂಧಕೂಪ ಆಶ್ರಾವಾ । ತರೀ ತೇಥ ಕವಣ ದೇವಾ । ಲಾಭ ಸಾಂಗೇ ॥ ೩೯ ॥ ಕಾ ಸಮೋರ ಅಗ್ನಿ ದೇಖೋನಿ । ಜರೀ ನ ವಂಚಿಜೆವೋ ಸಂಡೋನಿ । ತರೀ ಕ್ಷಣೇ ಏಕಾ ಕವಳುನೀ ಜಾಳೂ ಸಕೇ ॥ ೨೪೦ ॥ ತೈಸೇ ದೋಷ ಹೇ

ಮೂರ್ತ । ಅಂಗೀವಾಜೋ ಅಸತೀ ಸಾಹತ । ಹೇ ಜಾಣತಾಹಿ ಕೇವಿ ಏಥ । ಪ್ರವರ್ತಾವೆ ॥ ೪೧ ॥ ಐಸೇ ಪಾರ್ಥ ತಿಯೇ ಅವಸರೀ । ಮ್ಹಣೇ ದೇವಾ ಅವಧಾರೀ । ಯಾ ಕಲ್ಮಷಾಚೀ ಥೋರೀ । ಸಾಂಗೇನ ತುಜ ॥ ೪೨ ॥

**ಅರ್ಥ—** ಈ ಕೌರವರು ಅಭಿಮಾನದಿಂದ ಉನ್ಮತ್ತರಾಗಿ ಯುದ್ಧ ಮಾಡಲಿಕ್ಕೆ ಬಂದಿರುವರೇನೋ ನಿಜ. ಆದರೆ ನಮ್ಮ ಹಿತವು ಯಾವುದರಿಂದೆಂಬುದನ್ನು ನಾವು ನೋಡಲೇಬೇಕು. ॥ ೩೬ ॥ ನಮ್ಮ ಆಪ್ತರನ್ನು ನಾವೇ ಕೊಲೆ ಮಾಡುವ ಅನುಚಿತ ಕರ್ಮವನ್ನು ಹೇಗೆ ಮಾಡುವುದು ? ತಿಳಿದೂ ತಿಳಿದೂ ಕಾಳಕೂಟ ವಿಷವನ್ನು ಕುಡಿಯಬಹುದೇ ? ॥ ೩೭ ॥ ಹಾದೀ ಹಿಡಿದು ಹೋಗುವಾಗ ಒಂದು ಸಮಯ, ಸಿಂಹವು ಎದುರಿಸಿದರೆ ಅದನ್ನು ತಪ್ಪಿಸಿ ಹೋಗುವುದೇ ಲಾಭದಾಯಕವು. ॥ ೩೮ ॥ ದೇವಾ, ಅನಾಯಾಸವಾಗಿ ದೊರಕಿದ ಬೆಳಕನ್ನು ತೊರೆದು, ಅಂಧಕೂಪದಲ್ಲಿ ಸೇರುವದರಿಂದ ಆಗುವ ಲಾಭವೇನು ? ॥ ೩೯ ॥ ಎದುರಿಗೆ ಭಯಂಕರವಾಗಿ ಪ್ರಜ್ವಲಿತವಾಗಿರುವ ಅಗ್ನಿಜ್ವಾಲೆಯನ್ನು ನೋಡಿಯೇ ಅದನ್ನು ಬಿಟ್ಟು ಹೋಗದಿದ್ದಲ್ಲಿ ಅದು ನಮ್ಮನ್ನು ಕ್ಷಣದಲ್ಲಿಯೇ ಸುಟ್ಟು ಭಸ್ಮಮಾಡುವದು. ॥ ೪೦ ॥ ಅದೇ ಪ್ರಕಾರ ಈ ಮೂರ್ತಿಮಂತ ದೋಷವು ನಮ್ಮ ಬೆನ್ನು ಹತ್ತಿರುವುದೆಂಬುದನ್ನು ತಿಳಿದ ಮೇಲೂ, ಈ ಪಾಪಕರ್ಮವನ್ನು ಮಾಡಲಿಕ್ಕೆ ಹೇಗೆ ಪ್ರವರ್ತರಾಗಬೇಕು ॥ ೪೧ ॥ ಹೀಗೆ ಪಾರ್ಥನು ಆ ಸಮಯದಲ್ಲಿ ಅನ್ನುತ್ತಾನೆ—ದೇವಾ, ಈ ಪಾತಕದ ಮಹತ್ವವು ಎಷ್ಟಿರುವುದೆಂಬುದನ್ನು ಹೇಳುತ್ತೇನೆ ಕೇಳು. ॥ ೪೨ ॥

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನ ಮಧರ್ಮೋಽಭಿಭವತ್ಯುತ ॥ ೪೦ ॥**

[ **ಕುಲಕ್ಷಯೆ ಇತಿ** ] ಜೈಸೇ ಕಾಷ್ಠೆ ಕಾಷ್ಠ ಮಂಥಿಜೇ । ತೇಥವಹ್ನಿ ಏಕ ಉಪಜೇ । ತೇಣೇ ಕಾಷ್ಠ ಜಾತ ಜಾಳಿಜೇ । ಪ್ರಜ್ವಳಲೇಸಿ ॥ ೪೩ ॥ ತೈಸಾ ಗೋತ್ರೀಚ ಪರಸ್ಪರೆ । ಜರೀ ವಧ ಘಡೇ ಮತ್ಸರೇ । ತರೀ ತೇಣೆ ಮಹಾದೋಷೇ ಘೋರೇ । ಕುಳಚಿನಾಶೇ ॥ ೪೪ ॥ ಮ್ಹಣವೂನಿ ಏಣೆ ಪಾಪೇ । ವಂಶಜಧರ್ಮ ಲೋಪೇ । ಮಗ ಅಧರ್ಮಚೀ ಆರೋಪೇ । ಕುಳಾವಾಜಿ ॥ ೪೫ ॥

**ಅರ್ಥ—** ಕಟ್ಟಿಗೆಯು ಮೇಲೆ ಕಟ್ಟಿಗೆಯನ್ನಿಟ್ಟು ತಿಕ್ಕುವದರಿಂದ ಅಲ್ಲಿ ಅಗ್ನಿಯು ಉತ್ಪನ್ನವಾಗುತ್ತದೆ. ಮತ್ತು ಆ ಅಗ್ನಿಯು ಪ್ರಜ್ವಲಿತವಾದಮೇಲೆ ಎಲ್ಲ ಜಾತಿಯ ಕಟ್ಟಿಗೆಗಳೂ ಸುಟ್ಟು ಹೋಗುತ್ತವೆ. ॥ ೪೩ ॥ ಅದೇಪ್ರಕಾರ ತಮ್ಮ ಗೋತ್ರಜರಲ್ಲಿ ಒಂದುವೇಳೆ ಮತ್ಸರದಿಂದ ಒಬ್ಬರಿಗೊಬ್ಬರು ವಧಮಾಡುವದರಿಂದ ಆ ಮಹಾಘೋರವಾದ ದೋಷಾಗ್ನಿಯಿಂದ ಸರ್ವಕುಲದ ನಾಶವಾಗುತ್ತದೆ. ॥ ೪೪ ॥ ಕಾರಣ ಈ ಕುಲಕ್ಷಯದ ಪಾಪದಿಂದ ಕುಲಧರ್ಮದ ನಾಶವಾಗುತ್ತದೆ. ಮತ್ತು ಆ ಕುಲದಲ್ಲಿ ಅಧರ್ಮದ ಪ್ರವೇಶವಾಗುತ್ತದೆ. ॥ ೪೫ ॥

**ಅಧರ್ಮಾಭಿಭವಾತ್ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣ ಸಂಕರಃ ॥ ೪೧ ॥**

[ **ಅಧರ್ಮಾಭಿಭವಾದಿತಿ** ] ಏಥ ಸಾರಾಸಾರ ವಿಚಾರಾವೇ । ಕವಣೇಕಾಯ ಆಚರಾವೇ । ಆಣಿ ವಿಧಿನಿಷೇಧ ಆಘವೇ । ಪಾರುಷತೀ ॥ ೪೬ ॥ ಅಸತಾ ದೀಪ ದವಡಿಜೆ । ಮಗ ಅಂಧಕಾರೀ ರಹಾಟಿಜೇ । ತರೀ ಉಜೂಟ ಕಾ ಅಡಖುಳಿಜೇ । ಜಯಾಪರೀ ॥ ೪೭ ॥ ತೈಸಾ ಕುಳೀ ಕುಳಕ್ಷಯ ಹೋಯ । ತಯೇ ವೇಳೀತೋ ಆದ್ಯಧರ್ಮ ಜಾಯ । ಮಗ ಆನ ಕಾಹೀ ಆಹೇ । ಪಾಪಾವಾಂಚುನೀ ॥ ೪೮ ॥ ಜೈ ಯಮು ನಿಯಮು ಟಾಕತೀ । ತೇಥ ಇಂದ್ರಿಯೇ ಸ್ವೈರಾ ರಾಹಟತೀ ।

ಮ್ಹಣೋನಿ ವ್ಯಭಿಚಾರ ಘಡತೀ । ಕುಳಸ್ತ್ರಿಯಾ ॥ ೪೯ ॥ ಉತ್ತಮು ಅಧಮೀ ಸಂಚರತೀ । ಐಸೇ ವರ್ಣಾವರ್ಣ ಮಿಸಳತೀ । ತೇಥ ಸಮೂಳ ಉಪಡತೀ । ಜಾತಿಧರ್ಮ ॥ ೫೦ ॥ ಜೈಸೀ ಚೋಹಟಾಚಿಯೇ ಬಳೀ । ಪಾವಿಜೇ ಸೈರಾ ಕಾಉಳೀ । ತೈಸೀ ಮಹಾಪಾಪೇ ಕುಳೀ । ಸಂಚರತೀ ।೫೧॥

**ಅರ್ಥ**— ಅಧರ್ಮದ ಪ್ರಾಬಲ್ಯವಾಯಿತೆಂದರೆ ಈ ಸ್ಥಳದಲ್ಲಿ ಸಾರ, ( ಸತ್ಯ ) ಅಸಾರ ( ಅಸತ್ಯ ) ವಿಚಾರ ಯೋಗ್ಯಾ ಯೋಗ್ಯ ಆಚರಣ, ಮತ್ತು ಕರ್ತವ್ಯಾಕರ್ತವ್ಯ ಈ ಎಲ್ಲವೂ ನಾಶಹೊಂದುತ್ತವೆ. ॥೪೬॥ ಇದ್ದ ದೀವಿಗೆಯನ್ನು ಆರಿಸಿ ಕತ್ತಲೆಯಲ್ಲಿ ತಿರುಗಾಡಹತ್ತಿದರೆ ಯಾವಪ್ರಕಾರ ಮನುಷ್ಯನು ಸರಳವಾದ ಹಾದಿಯಲ್ಲಿಯೂ ಎಡವುತ್ತಾನೆಯೋ, ॥ ೪೭ ॥ ಅದರಂತೆಯೇ ಕುಲನಾಶಕವಾದ ಈ ಪಾಪದಿಂದ ಸನಾತನವಾದ ಕುಲಧರ್ಮಗಳು ಸಂಪೂರ್ಣವಾಗಿ ನಷ್ಟವಾದಮೇಲೆ ಆ ಕುಲದಲ್ಲಿ ಪಾಪದ ಸಂಚಯವಾಗುವದು. ಆ ಪಾಪದ ಫಲವನ್ನು ( ನರಕವನ್ನು ) ಭೋಗಿಸಬೇಕಾಗುವದಲ್ಲದೇ ಮತ್ತೇನು ? ॥ ೪೮ ॥ ಯಮ-ನಿಯಮವು ( ಯಮ=ಮನಸಿನ ನಿಗ್ರಹ; ನಿಯಮ=ಇಂದ್ರಿಯ ನಿಗ್ರಹ ) ಆಗದಂತೆ ಆದಕೂಡಲೇ ಇಂದ್ರಿಯಗಳು ಸ್ವೇಚ್ಛೆಯಿಂದ ವರ್ತನ ಮಾಡಲಿಕ್ಕೆ ಹತ್ತುತ್ತವೆ. ಆದುದರಿಂದ ಕುಲಸ್ತ್ರೀಯರ ಕಡೆಯಿಂದ ಪಾಪಾಚರಣೆಯು ಉಂಟಾಗುತ್ತದೆ. ॥ ೪೯ ॥ ಮತ್ತು ಉತ್ತಮ, ಅಧಮ ಇವರ ಸಮಾಗಮವಾಗಿ ಬ್ರಾಹ್ಮಣ ಶೂದ್ರಾದಿ ಪರಸ್ಪರ ವರ್ಣಗಳು ಕೂಡಿ ಹೋಗುತ್ತವೆ. ಆ ಯೋಗದಿಂದ ಎಲ್ಲ ಕುಲ ಧರ್ಮಗಳು ಸಂಪೂರ್ಣವಾಗಿ ನಾಶಹೊಂದುತ್ತವೆ. ॥ ೫೦ ॥ ನಾಲ್ಕೂ ಕಡೆಯ ಹಾದಿಗಳು ಕೂಡಿದ ಸ್ಥಳದಲ್ಲಿ ಇಟ್ಟ 'ಬಲಿ'ಯ ( ಅನ್ನದ ) ಮೇಲೆ ನಾಲ್ಕೂಕಡೆಯಿಂದ ಕಾಗೆಗಳು ಹೇಗೆ ಕೂಡುತ್ತವೆಯೋ, ಅದೇ ಪ್ರಕಾರಾ ಇಂಥ ವರ್ಣಸಂಕರವಾದ ಕುಲದಲ್ಲಿ ಮಹಾಪಾತಕಗಳ ಪ್ರವೇಶವು ಆಗುತ್ತದೆ. ॥ ೫೧ ॥

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**

[ **ಸಂಕರ ಇತಿ** ] ಮಗ ಕುಳಾ ತಯಾ ಅಸೇಖಾ । ಆಣಿ ಕುಳಘಾತಕಾ । ಯೇರ ಯೇರಾ ನರಕಾ । ಜಾಣೇ ಆಥಿ ॥ ೫೨ ॥ ದೇಖೇ ವಂಶವೃದ್ಧಿ ಸಮಸ್ತ । ಯಾಮಾ ಹೋಯ ಪತಿತ । ಮಗವೋವಾಂಡಿತಿ ಸ್ವರ್ಗಸ್ಥ । ಪೂರ್ವಪುರುಷ ॥ ೫೩ ॥ ಜೇಥ ನಿತ್ಯಾದಿ ಕ್ರಿಯಾ ಠಾಕೆ । ಆಣಿ ನೈಮಿತ್ತಿಕ ಕ್ರಿಯಾ ಪಾರುಖೆ । ತೇಥ, ಕವಣಾ ತಿಳೋದಕೇ । ಕವಣ ಅರ್ಪೀ ॥ ೫೪ ॥ ತರೀ ಪಿತರ ಕಾಯ ಕರಿತೀ । ಕೈಸೇನೀ ಸ್ವರ್ಗಿ ವಸತೀ । ಮ್ಹಣೋನಿ ತೇಹೀ ಯೇತೀ । ಕುಳಾಪಾಸೀ ॥೫೫॥ ಜೈಸಾ ನಖಾಗ್ರೀ ವ್ಯಾಳ ಲಾಗೇ । ತೋ ಶಿಖಾತ ವ್ಯಾಪೀ ವೇಗೆ । ತೇವೀ ಆ ಬ್ರಹ್ಮ ಕುಳ ಅವಘೇ । ಆಪ್ಲವಿಜೇ । ೫೬ ॥

**ಅರ್ಥ**— ಆ ಮೇಲೆ ಆ ಕುಲಕ್ಕೆ, ಆ ಕುಲದ ನಾಶಮಾಡುವವರಿಗೆ ಉಭಯತರಿಗೂ ನರಕ ಪ್ರಾಪ್ತಿಯಾಗುತ್ತದೆ. ॥ ೫೨ ॥ ಹೀಗೆ ನೋಡು ಇದೇ ಪ್ರಕಾರ ಎಲ್ಲ ವಂಶದ ( ವೃದ್ಧಿ ) ದೂಷಿತವಾಗಿ ಸ್ವರ್ಗಸ್ಥ ಪಿತರರು ( ಶ್ರಾದ್ಧಾದಿ ಪಿಂಡೋದಕಗಳಿಲ್ಲದೇ ) ತಮ್ಮಿಂದ ತಾವೇ ಪತನ ಹೊಂದುತ್ತಾರೆ. ॥ ೫೩ ॥ ಯಾವ ಕುಲದಲ್ಲಿ ನಿತ್ಯ ನೈಮಿತ್ತಿಕ ಕರ್ಮಗಳು ಲೋಪವಾಗಿರುವವೋ, ಆ ಸ್ಥಳದಲ್ಲಿ ಪಿತೃಗಳಿಗೆ ತಿಲೋದಕವನ್ನು ಕೊಡುವವರಾರು ? ॥೫೪॥ ಹೀಗೆ ಸ್ಥಿತಿಯು ಆದಮೇಲೆ ಆ ಪಿತೃಗಳು ಏನು ಮಾಡಬೇಕು, ಸ್ವರ್ಗದಲ್ಲಿ ಹೇಗೆ ಇರಬೇಕು ? ಅಂತಾ ಅವರಾದರೂ ತಮ್ಮ ಕುಲದ ಹತ್ತಿರ ಬರುತ್ತಾರೆ. ॥ ೫೫ ॥ ಯಾವ ಪ್ರಕಾರ ನಖಾಗ್ರಕ್ಕೆ ಸರ್ಪದಂಶವಾದಕೂಡಲೇ ಅದರ ವಿಷವು ತಲೆಯು ಕೂದಲವರೆಗೆ ಏರಿ ಶರೀರವನ್ನೆಲ್ಲ ವ್ಯಾಪಿಸಿ ಬಿಡುತ್ತದೆ. ಅದರಂತೆ ಆಪ್ತವರ್ಗದ ವಧ ಮಾಡುವದರಿಂದ ಉತ್ಪನ್ನವಾಗುವ ದೋಷವು ಈಗ ಜೀವಂತವಿರುವ ಕುಲದಿಂದ ಮೂಲ ಪುರುಷರವರೆಗೆ ಎಲ್ಲರನ್ನೂ ( ನರಕದಲ್ಲಿ ) ಹಾಕುತ್ತದೆ. ॥ ೫೬ ॥

**ದೋಷೈರೆತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**
**ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನು ಶುಶ್ರುಮ ॥ ೪೪ ॥**
**ಅಹೋಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ ।**
**ಯದ್ರಾಜ್ಯ ಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥**

**[ದೊಷೈರಿತಿ]** ದೇವಾ ಅವಧಾರೀ ಆಣೀಕ ಏಕ । ಏಥ ಘಡೇ ಮಹಾ ಪಾತಕ । ಜೇ ಸಂಗ ದೋಷೇ ಹಾ ಲೌಕಿಕ । ಭ್ರಂಶ ವಡೇ ॥ ೫೭ ॥ ಜೈಸಾ ಘರೀ ಆಪುಲಾ । ವಾನಿವಸೇ ಅಗ್ನಿ ಲಾಗಲಾ । ತೋ ಆಣಿ ಕಾಹಿ ಪ್ರಜ್ವಾಳಿಲಾ । ಜಾಳೂನಿ ಘಾಲೀ ॥ ೫೮ ॥ ತೈಸಿಯಾ ತಯಾ ಕುಳ ಸಂಗತೀ । ಜೇ ಜೇ ಲೋಕ ವರ್ತತೀ । ತೇಹೀ ಬಾಧಾ ಪಾವತೀ । ನಿಮಿತ್ತೇ ಏಣೇ ॥ ೫೯ ॥ ತೈಸೇ ನಾನಾ ದೋಷೇ ಸಕಳ । ಅರ್ಜುನ ಮ್ಹಣೇ ತೇ ಕುಳ । ಮಗ ಮಹಾ ಘೋರ ಕೇವಳ । ನಿರಯ ಭೋಗೀ ॥ ೬೦ ॥ ಪಡಿಲಿಯಾ ತಿಯೇ ಠಾಯೀ । ಮಗ ಕಲ್ಪಾಂತೀಹೀ ಉಕಲ ನಾಹೀ । ಯೇ ಸಣೇ ಪತನ ಕುಳಕ್ಷಯೀ । ಅರ್ಜುನ ಮ್ಹಣೇ ॥ ೬೧ ॥ ದೇವಾ ಹೇ ವಿವಿಧ ಕಾನೀ ಐಕಿಜೇ । ಪರೀ ಅಝೂನಿವರೀ ತ್ರಾಸ ನುಪಜೇ ! ಹೃದಯ ವಜ್ರಾಚೇ ಹೇ ಕಾಯ ಕೀಜೇ । ಅವಧಾರೀ ಪಾ ॥ ೬೨ ॥ ಅಪೇಕ್ಷಿಜೇ ರಾಜ್ಯಸುಖ । ಜಯಾ ಲಾಗೀ ತೇ ತನ ಕ್ಷಣಿಕ । ಐಸೇ ಜಾಣತಾಹೀ ದೋಖ । ಅವ್ಹೇರೂನಾ ॥ ೬೩ ॥ ಜೇ ಹೇ ವಡಿಲ ಸಕಳ ಆಪುಲೇ । ವಧಾವಯಾ ದಿಠೀ ಸೂದಲೇ । ಸಾಂಗ ಪಾ ಕಾಯ ಥೋಕುಲೇ । ಘಡಲೇ ಆಮ್ಹಾ ॥ ೬೪ ॥

**ಅರ್ಥ**— ದೇವಾ, ಕೇಳು. ಇಲ್ಲಿ ಇನ್ನೂ ಒಂದು ಮಹತ್ತ್ವವಾದ ಪಾತಕವು ಉಂಟಾಗುತ್ತದೆ. ಅದು ಯಾವುದೆಂದರೆ— ಈ ದುಸ್ಸಂಗತಿಯ ದೋಷದಿಂದ ಲೋಕಾಚಾರವು ಇಲ್ಲದಂತೆ ಆಗುತ್ತದೆ. ॥ ೫೭ ॥ ಯಾವ ಪ್ರಕಾರ ಮನೆಗೆ ಒಮ್ಮೆಂದೊಮ್ಮೆಲೇ ಬೆಂಕಿ ಹತ್ತಿ ಆ ಅಗ್ನಿಯು ಪ್ರಜ್ವಲಿತವಾದ ಕೂಡಲೇ ಮನೆಯ ಹೊಂದಿಗೆ ಇರುವ ಎರಡನೇ ಮನೆಗಳನ್ನು ಸಹ ಹೇಗೆ ಸುಡುತ್ತದೆಯೋ ॥ ೫೮ ॥ ಅದೇ ಪ್ರಕಾರ ಇಂಥ ಕುಲದ ಸಹವಾಸವು ಯಾವ ಜನರಿಗೆ ತಗಲುವದೋ ಅವರಿಗೂ, ಅವರ ಸಂಗತಿಯ ಯೋಗದಿಂದ ಪಾತಕವು ಹತ್ತುತ್ತದೆ. ॥ ೫೯ ॥ ಅರ್ಜುನನು ಅನ್ನುತಾನೆ — ದೇವಾ, ಅದೇ ಪ್ರಕಾರ ಆ ಕುಲದಲ್ಲಿ ನಾನಾಪ್ರಕಾರದ ದೋಷಗಳು ಬಂದೊದಗುವವರಿಂದ ಅವರು ಭಯಂಕರವಾದ ನರಕವಾಸವನ್ನು ಭೋಗಿಸಬೇಕಾಗುತ್ತದೆ. ॥ ೬೦ ॥ ಅರ್ಜುನನು ಮತ್ತೆ ಅನ್ನುತ್ತಾನೆ — ಆ ನರಕದಲ್ಲಿ ಅವರು ಬಿದ್ದ ಮೇಲೆ ಕಲ್ಪಾಂತರದವರೆಗೂ ಅವರಿಗೆ ಬಿಡುಗಡೆ ಯಾಗುವದಿಲ್ಲ. ಇಷ್ಟು ಈ ಕುಲಕ್ಷಯ ಪಾತಕದಿಂದ ನರಕವಾಸದಂಥ ಕಷ್ಟವನ್ನು ಭೋಗಿಸಬೇಕಾಗುತ್ತದೆ. ॥ ೬೧ ॥ ದೇವಾ, ಇಷ್ಟು ಕಾಲದವರೆಗೆ (ದೈನ್ಯಯುಕ್ತನಾಗಿ) ನಾನಾ ತರಹದ ಸಂಭಾಷಣವನ್ನು ಮಾಡಿದ್ದು ಕೇಳಿಯೂ ನಿಮಗೆ ಅದರಿಂದ ಸ್ವಲ್ಪಾದರೂ ತ್ರಾಸು ಆಗುವದಿಲ್ಲ. ಅಂದ ಬಳಿಕ ನೀವು ನಿಮ್ಮ ಮನಸ್ಸನ್ನು ಇಷ್ಟು ಕಠಿಣವನ್ನೇಕೆ ಮಾಡುವಿರಿ. ॥ ೬೨ ॥ ಯಾವ ನಶ್ವರವಾದ ಈ ಶರೀರದ ದೆಸೆಯಿಂದ ರಾಜ್ಯಸುಖದ ಅಪೇಕ್ಷೆಯನ್ನು ಮಾಡುತ್ತಿವೆಯೋ, ಆ ಶರೀರವು ಕ್ಷಣಭಂಗುರವಾದದ್ದೆಂಬುದು ತಿಳಿದಾಗ್ಯೂ ನಾವು ಕುಲಕ್ಷಯದ ದೋಷ ಮಾಡುವದನ್ನು ಬಿಟ್ಟುಬಿಡಬಾರದೇ ? ॥ ೬೩ ॥ ನಮ್ಮ ಅಜ್ಜಂದಿರೂ, ಗುರುಗಳೂ ಮುಂತಾದ ಎಲ್ಲ ಹಿರಿಯರೂ ಇಲ್ಲಿ ಕೂಡಿರುವರು. ಅವರನ್ನು ಸಂಹಾರ ಮಾಡಬೇಕೆಂಬ ಹೇತುವಿನಿಂದ ಅವರ ಕಡೆಗೆ ದೃಷ್ಟಿಯನ್ನಿಟ್ಟದ್ದು ನಮ್ಮ ಕಡೆಯಿಂದ ಸಾಮಾನ್ಯವಾದ ಪಾಪವೇ ಎಂಬುದನ್ನು ನೀವೇ ಹೇಳಿ ನೋಡುವಾ. ॥ ೬೪ ॥

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

**[ ಯದೀತಿ ]** ಆತಾ ಯಾವರೀ ಜೇ ಜಿಯಾವೇ । ತಯಾ ಪಾಸೂನಿ ಹೇ ಬರವೇ । ಜೇ ಶಸ್ತ್ರೇ ಸಾಂಡೂನಿ ಸಾಹಾವೇ । ಬಾಣಯಾಂಚೆ ॥ ೬೫ ॥ ತಯಾವರೀ ಹೋಯ ಜಿತುಕೇ । ತೇ ಮರಣಹೀ ವರೀ ನಿಕೇ । ಪರೀ ಯೇಣೇ ಕಲ್ಮಷೇ । ಚಾಡ ನಾಹೀ ॥ ೬೬ ॥ ಐಸೇ ದೇಖೂನ ಸಕಳ । ಅರ್ಜುನೇ ಆಪುಲೇ ಕುಳ । ಮಗ ಮ್ಹಣೇ ರಾಜ್ಯ ತೇ ಕೇವಳ । ನಿರಯ್ಭೋಗ ॥ ೬೭ ॥

**ಅರ್ಥ**— ಆದರೆ ಹೀಗೆ ಮಾಡಿ ರಾಜ್ಯಸುಖ ಲೋಭದಿಂದ ನಮ್ಮ ಬಾಂಧವರನ್ನು ಕೊಲ್ಲಲುದ್ಯುಕ್ತರಾಗಿ ಇಂಥ ಕುಲನಾಶಕವಾದ ಪಾಪಕರ್ಮವನ್ನು ಮಾಡುವದಕ್ಕಿಂತ ನಿಃಶಸ್ತ್ರನಾಗಿ ವಿರೋಧಿಸದೇ ವೈರಿಗಳ ಬಾಣಗಳನ್ನು ಸಹನ ಮಾಡಿ, ಅವರ ಬಾಣಗಳಿಂದ ಹತನಾದರೆ ಒಳಿತಾಗುವದು. ॥ ೬೫ ॥ ಹೀಗೆ ಮಾಡುವದರಿಂದ ನಮಗೆ ಒಂದು ವೇಳೆ ಮರಣ ಪ್ರಾಪ್ತವಾದರೂ ಬಹಳೇ ಒಳಿತಾಗುವದು. ಆದರೆ ಈ ಕೌರವರ ಸಂಹಾರ ಮಾಡಿ ಪಾಪದ ಸಂಗ್ರಹ ಮಾಡಿ ಕೊಳ್ಳುವ ಅಪೇಕ್ಷೆಯು ನನಗಿರುವದಿಲ್ಲ. ॥ ೬೬ ॥ ಈ ಪ್ರಕಾರ ಅರ್ಜುನನು ತನ್ನ ಎಲ್ಲ ಸ್ವಜನರನ್ನೂ, ಆಪ್ತರನ್ನೂ ನೋಡಿ ಅನ್ನುತ್ತಾನೆ— ಇವರ ವಧೆಯನ್ನು ಮಾಡಿ ರಾಜ್ಯ ದೊರಕಿಸುವದು ಅಂದರೆ ಕೇವಲ ನರಕ ಪ್ರಾಪ್ತಿ ಮಾಡಿ ಕೊಳ್ಳುವದೇ ಆಗಿರುವದು. ॥ ೬೭ ॥

**ಸಂಜಯ ಉವಾಚ—**

**ಏವ ಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕ ಸಂವಿಗ್ನ ಮಾನಸಃ ॥ ೪೭ ॥**

**ಇತಿ ಶ್ರೀ ಮದ್ಭಗವದ್ಗೀತಾ ಸೂಪ ನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗ ಶಾಸ್ತ್ರೇ**
**ಶ್ರೀ ಕೃಷ್ಣಾರ್ಜುನ ಸಂವಾದೇಽರ್ಜುನ ವಿಷಾದ ಯೋಗೋ ನಾಮ ಪ್ರಥಮೋಧ್ಯಾಯಃ ॥ ೧ ॥**

**[ ಏವ ಮುಕ್ತ್ವಾರ್ಜುನ ಇತೀ- ]** ಐಸೇ ತೀಯೇ ಅವಸರೀ । ಅರ್ಜುನ ಬೋಲಿಲಾ ಸಮರೀ । ಸಂಜಯು ಮ್ಹಣೇ ಅವಧಾರೀ । ಧೃತರಾಷ್ಟ್ರಾತೇ ॥ ೬೮ ॥ ಮಗ ಅತ್ಯಂತ ಉದ್ವೇಗಲಾ । ನ ಧರತ ಗಹಿವರೂ ಆಲಾ । ತೇಥ ಉಡೀ ಘಾತಲೀ ಖಾಲಾ । ರಥೌನಿಯಾ ॥ ೬೯ ॥ ಜೈಸಾ ರಾಜಕುಮರೂ ಪದಚ್ಯುತು । ಸರ್ವಥಾ ಹೋಯ ಉಪಹತು । ಕಾಂವಾ ರಾಹುಗ್ರಸ್ತು । ಪ್ರಭಾಹೀನು ॥ ೨೭೦ ॥ ನಾ ತರೀ ಮಹಾ ಸಿದ್ಧೀ ಸಂಭ್ರಮೇ । ಜಿಂತಿಲಾ ತಾಪಸ ಭ್ರಮೇ । ಮಗ ಆಕಳುನಿ ಕಾಮೇ । ದೀನುಕೀಜೇ ॥ ೭೧ ॥ ತೈಸಾತೋ ಧನುರ್ಧರು । ಅತ್ಯಂತ ದುಃಖೇ ಜರ್ಜರೂ । ದೀಸೇ ಜೇಥ ರಂಹವರು । ತ್ಯಜಿಲಾ ತೇಣೇ ॥ ೭೨ ॥ ಮಗ ಧನುಷ್ಯ ಬಾಣ ಸಾಂಡಿಲೇ । ನಧರತ ಅಶ್ರುಪಾತ ಆಲೇ । ಐಸೇ ಐಕರಾಯಾ ವರ್ತಲೇ । ಸಂಜಯೋ ಮ್ಹಣೇ ॥ ೭೩ ॥ ಆತಾ ಯಾವರೀ ತೋ ವೈಕುಂಠ ನಾಥೂ । ದೇಖೋನಿ ಸಖೇದ ಪಾರ್ಥು । ಕವಣೇ ಪರೀ ಪರಮಾರ್ಥೂ । ನಿರುಪಿಲ ॥ ೭೪ ॥ ತೇ ಸವಿಸ್ತರ ಪುಢಾರೀ ಕಥಾ ! ಅತಿ ಸಕೌತಕ ಐಕತಾ ಜ್ಞಾನದೇವೋ ಮ್ಹಣೇ ಆತಾ । ನಿವೃತ್ತಿದಾಸ ॥ ೭೫ ॥ ಇತೀ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥ ದೀಪಿಕಾಯಾಂ ಪ್ರಥಮೋಽಧ್ಯಾಯಃ ॥ ೧ ॥ ಶ್ಲೋಕ ೪೭, ಓವೀ ೨೭೫

**ಅರ್ಥ**— ಸಂಜಯನು ಅಂದದ್ದು- ರಾಜಾ ಧೃತರಾಷ್ಟ್ರನೇ ಕೇಳು, ಈ ಸಮಯಕ್ಕೆ ಸಮರಾಂಗಣದಲ್ಲಿ ನಿಂತಂಥ ಅರ್ಜುನನು ಹೀಗೆ ಮಾತಾಡಿದನು. ॥ ೬೮ ॥ ಆ ಮೇಲೆ ಉದಾಸೀನನಾಗಿ, ಹಿಡಿಯಲಸಾಧ್ಯವಾದ ದುಃಖದಿಂದ ರಥದಿಂದ ಕೆಳಗೆ ಹಾರಿಕೊಂಡನು. ॥ ೬೯ ॥ ಯಾವ ಪ್ರಕಾರ ಒಬ್ಬಾನೊಬ್ಬ ರಾಜಕುಮಾರನು ಪದಚ್ಯುತನಾಗಿರಲು

ಅವನಿಗೆ ಯಾರೂ ಮಾನ ಮರ್ಯಾದೆ ಮಾಡುವದಿಲ್ಲ; ಇಲ್ಲವೇ, ರಾಹುಗ್ರಸ್ತನಾದ ಸೂರ್ಯನು ಹೇಗೆ ನಿಸ್ತೇಜನಾಗುತ್ತಾನೆ. ॥ ೨೭೦ ॥ ಇಲ್ಲವೇ ತಪಸ್ವಿಯು ಮಹಾಸಿದ್ಧಿಯ ಪ್ರಾಪ್ತಿಯ ಭ್ರಮದಿಂದ ವ್ಯಾಪ್ತನಾದ ಕೂಡಲೇ ತಪಶ್ಚರ್ಯದ ತ್ಯಾಗಮಾಡಿ ಕಾಮಾಪೇಕ್ಷೆಯ ಬಲೆಯೊಳಗೆ ಶಿಕ್ಕು ನಿಂದೆಗೆ ಪಾತ್ರನಾಗುತ್ತಾನೋ, ॥ ೭೧ ॥ ಅದೇ ಪ್ರಕಾರ ಅರ್ಜುನನು ರಥದ ಕೆಳಗೆ ಇಳಿದಮೇಲೆ ಅತಿಶಯವಾದ ದುಃಖದಿಂದ ವ್ಯಾಪ್ತನಾಗಿರುವದು ಕಂಡುಬಂತು ॥೭೨॥ ಸಂಜಯನು ಅನ್ನುತ್ತಾನೆ– ಅರ್ಜುನನು ಧನುರ್ಬಾಣಗಳನ್ನು ಚಲ್ಲಿಕೊಟ್ಟನು. ಮತ್ತು ಅವನ ಕಣ್ಣಿನೊಳಗಿಂದ ಅಶ್ರುಧಾರೆಗಳು ಸುರಿಯುತ್ತಿದ್ದವು. ॥ ೭೩ ॥ ಆಗ ಅರ್ಜುನನಿಗೆ ದುಃಖವಾದದ್ದನ್ನು ನೋಡಿ ವೈಕುಂಠನಾಯಕ ಭಗವಾನ್ ಶ್ರೀ ಕೃಷ್ಣನು ಅವನಿಗೆ ಯಾವರೀತಿಯಿಂದ ತತ್ವಜ್ಞಾನೋಪದೇಶವನ್ನು ಮಾಡುವನು ॥ ೭೪ ॥ ಅದು ಮುಂದೆಬರುವ ವಿಸ್ತಾರವಾದ ಕಥೆಯನ್ನೂ ಉತ್ಸುಕತೆಯಿಂದ ಕೇಳಬೇಕೆಂದು ಶ್ರೀ ನಿವೃತ್ತಿ ನಾಥರ ಶಿಷ್ಯ ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ॥ ೨೭೫ ॥

**ಶ್ರೀ ಮದ್ಭಗವದ್ಗೀತೆಯ ಮತ್ತು ಜ್ಞಾನೇಶ್ವರಿಯ ಸರಲ, ಸುಲಭ**
**ಕನ್ನಡ ಭಾಷಾಂತರದ ಒಂದನೆಯ ಅಧ್ಯಾಯವು**

## ಸಮಾಪ್ತವು

## ಶ್ರೀ ಕೃಷ್ಣಾರ್ಪಣಮಸ್ತು



# ಜ್ಞಾನೇಶ್ವರಿ

## ೨ನೆಯ ಅಧ್ಯಾಯ

**ಸಂಜಯ ಉವಾಚ —**

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಂ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥ ೧ ॥**

**[ ಸಂಜಯ ಉವಾಚ– ]** ಮಗ ಸಂಜಯೊ ಮ್ಹಣೇ ರಾಯಾತೇ । ಆಇಕೆ ತೋ ಪಾರ್ಥ ತೇಥೇ । ಶೋಕಾಕುಳ ರುದನಾತೆ । ಕರೀತ ಅಸೇ ॥ ೧ ॥ ತೇ ಕುಳ ದೇಖೋನಿ ಸಮಸ್ತ । ಸ್ನೇಹ ಉಪನಲೆ ಅದ್ಭುತ । ತೆಣೇ ದ್ರವಲೇ ಅಸೇ ಚಿತ್ತ । ಕವಣೇಪರೀ ॥ ೨ ॥ ಜೈಸೇ ಲವಣ ಜಳೇ ಝುಳಂಬಲೇ । ನಾ ಅಭ್ರವಾತೇ ಹಾಲೇ । ತೈಸೇ ಸಧೀರ ಪರೀ ಪಿರ ಮಲೇ । ಹೃದಯ ತಯಾಚೇ ॥ ೩ ॥ ಮ್ಹಣೋನಿ ಕೃಪಾ ಆಕಳಿಲಾ ! ದಿಸತಸೇ ಅತಿ ಕೋಮಾ ಇಲಾ । ಜೈಸಾ ಕರ್ದಮೀ ರುಪಲಾ । ರಾಜಹಂಸ ॥ ೪ ॥ ತಯಾಪರೀ ತೋ ಪಾಂಡು ಕುಮರ । ಮಹಾಮೋಹೇ ಅತಿ ಜರ್ಜರ । ದೇಖೋನಿ ಶ್ರೀ ಶಾರ್ಙ್ಗಧರ । ಕಾಯ ಬೋಲೇ ॥ ೫ ॥

**ಅರ್ಥ—** ಆ ಮೇಲೆ ಸಂಜಯನು ಧೃತರಾಷ್ಟ್ರ ರಾಜನಿಗೆ ಅನ್ನುತ್ತಾನೆ– ರಾಜನೇ ಕೇಳು, ಅರ್ಜುನನು ಆ ರಣಾಂಗಣದಲ್ಲಿ ವ್ಯಾಕುಲವುಳ್ಳವನಾಗಿ ಶೋಕಿಸಹತ್ತಿದನು. ॥ ೧ ॥ ಅವನು ಆ ಎಲ್ಲ ಸ್ವಜನರನ್ನು ನೋಡಿ ಅತ್ಯಂತ ಕರುಣದಿಂದ ಹಣ್ಣಾಗಿ ಅವನ ಮನಸಿನಲ್ಲಿ ವಿಲಕ್ಷಣ ಮೋಹ ವುಂಟಾಯಿತು. ಆ ಯೋಗದಿಂದ ಅವನ ಅಂತಃಕರಣವು ಕರಗಿತು ॥ ೨ ॥ ನೀರಿನಿಂದ ಉಪ್ಪು ಕರಗಿಹೋಗುವಂತೆ, ಗಾಳಿಯಿಂದ ಮೋಡವು ಮಾಯವಾಗುವಂತೆ, ಅರ್ಜುನನ ಹೃದಯದಲ್ಲಿಯ ಧೈರ್ಯವು ಮೋಹದಿಂದ ಕರಗಿ ನೀರಾಯಿತು. ॥ ೩ ॥ ಕೆಸರಿನಲ್ಲಿ ಸಿಕ್ಕ ರಾಜಹಂಸದ ಮುಖವು ಬಾಡುವಂತೆ, ಮೋಹಪಂಕದಲ್ಲಿ ಸಿಕ್ಕು ಬಿದ್ದ ಅರ್ಜುನನ ಮುಖವು ಕಳವಳದಿಂದ ಬಾಡಿ ಬತ್ತಿ ಹೋಯಿತು. ॥ ೪ ॥ ಹೀಗೆ ಆ ಪಾಂಡುಪುತ್ರನು ಮಹಾಮೋಹದಿಂದ ಅತಿಶಯವಾಗಿ ಜರ್ಜರಿತವಾದದ್ದನ್ನು ನೋಡಿ ಭಗವಾನ್ ಶ್ರೀಕೃಷ್ಣನು ಅನ್ನುತ್ತಾನೆ ॥ ೫ ॥

**ಶ್ರೀ ಭಗವಾನುವಾಚ —**

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರ ಮರ್ಜುನ ॥ ೨ ॥**

**[ ಶ್ರೀ ಭಗವಾನುವಾಚೇತಿ ]** ಮ್ಹಣೇ ಅರ್ಜುನಾ ಆದಿ ಪಾಹೀ । ಹೇ ಉಚಿತ ಕಾಯ ಇಯೇ ಠಾಯೀ । ತೂ ಕವಣ ಹೇ ಕಾಯೀ । ಕರೀತ ಆಹಾಸೀ ॥ ೬ ॥ ತುಜ ಸಾಂಗೇ ಕಾಯ ಝಾಲೇ । ಕವಣ ಉಣೇ ಆಲೇ । ಕರಿತಾ ಕಾಯ ರೇಲೇ । ಖೇದ ಕಾಯಿಸಾ ॥ ೭ ॥ ತೂ ಅನುಚಿತಾ ಚಿತ್ತ ನೇದಿಸೀ । ಧೀರ ಕಹೀ ನ ಸಂಡಿಸೀ । ತುಝೋನಿ ನಾಮೇ ಅಪಯಶೀ । ದಿಶಾ ಲಂಘಿಜೇ ॥ ೮ ॥ ತೂ ಶೂರ ವೃತ್ತೀಚಾ ಠಾವೋ । ಕ್ಷತ್ರಿಯಾ ಮಾಜಿ ರಾವೋ । ತುಝಿಯಾ ಲಾಠೇಪಣಾಚಾ ಆವೋ । ತಿಹೀ ಲೋಕೀ ॥ ೯ ॥ ತುವಾ ಸಂಗ್ರಾಮೀ ಹರ ಜಿಂಕಿಲಾ । ನಿವಾತ ಕವಚಾಚಾ ಠಾಯ ಪೇಡಿಲಾ ।

ಪವಾಡಾ ತುವಾ ಕೇಲಾ । ಗಂಧರ್ವಾಸೀ ॥ ೧೦ ॥ ಪಾಹತಾ ತುಝ್ಯೋನಿ ಪಾಡೇ । ದಿಸೇ ತ್ರೈಲೋಕ್ಯಹೀ ಥೋಕಡೇ । ಐಸೇ ಪುರುಷತ್ವ ಚೋಖಡೇ । ಪಾರ್ಥಾ ತುಝ್ಯೇ ॥ ೧೧ ॥ ತೋ ತೂ ಕೀ ಆಜಿ ಯೇಥೇ । ಸಾಂಡೂನಿಯಾ ವೀರ ವೃತ್ತೀತೇ । ಅಧೋ ಮುಖ ರುದ ನಾತೇ । ಕರೀತ ಆಹಾಸೀ ॥ ೧೨ ॥ ವಿಚಾರೀ ತೂ ಅರ್ಜುನು । ಕೀ ಕಾರುಣ್ಯೇ ಕಿಜಸೀ ದೀನು । ಸಾಂಗ ಪಾ ಅಂಧಕಾರೇ ಭಾನು । ಗ್ರಾಸಿಲಾ ಆಥೀ ॥ ೧೩ ॥ ನಾ ತರೀ ಪವನು ಮೇಘಾಸಿ ಬಿಹೇ । ಕಿ ಅಮೃತಾಸಿ ಮರಣ ಆಹೇ । ಪಾಹೇ ಪಾ ಇಂಧನಾಚಿ ಗಿಳೋನಿ ಜಾಯೇ । ಪಾವ ಕಾತೆ ॥ ೧೪ ॥ ಕೀ ಲವಣೇಚಿ ಜಳ ವಿರೇ । ಸಂಸರ್ಗೆ ಕಾಳಕೂಟ ಮರೇ । ಸಾಂಗ ಪಾ ಮಹಾಫಣೀ ದರ್ದುರೆ । ಗಿಳಿಜೇ ಕಾಯೀ ॥ ೧೫ ॥ ಸಿಂಹಾಸಿ ಝೊಂಬಿ ಕೋಲ್ಹಾ । ಐಸಾ ಅಪಾಡ ಆಥಿ ಕೇ ಜಹಾಲಾ । ಪರೀ ತೋ ತ್ವಾ ಸಾಚ ಕೇಲಾ । ಆಜಿ ಏಥ ॥ ೧೬ ॥ ಮ್ಹಣೋನಿ ಅಝುನೀ ಅರ್ಜುನಾ । ಝಣೇ ಚಿತ್ತ ದೇಸೀ ಯಾ ಹೀನಾ । ವೇಗೀ ಧೀರ ಕರೂನಿಯಾ ಮನಾ । ಸಾವಧ ಹೋಯೀ ॥ ೧೭ ॥ ಸಾಂಡೀ ಹೇ ಮೂರ್ಖ ಪಣ । ಉಠೀ ಘೇ ಧನುಷ್ಯಬಾಣ । ಸಂಗ್ರಾಮೀ ಹೇ ಕವಣ । ಕಾರುಣ್ಯ ತುಝ್ಯೇ ॥ ೧೮ ॥ ಹಾ ಗಾ ತೂ ಜಾಣತಾ । ತರೀ ನ ವಿಚಾರಿಸೀ ಕಾ ಆತಾ । ಸಾಂಗೇ ಜುಂಝಾ ವೇಳೇ ಸದಯತಾ । ಉಚಿತ ಕಾಯೀ ॥ ೧೯ ॥ ಹೇ ಅಸತಿಯೇ ಕೀರ್ತೀಸೀ ನಾಶ । ಆಣಿ ಪಾರತ್ರಿಕಾಸಿ ಅಪಭ್ರಂಶ । ಮ್ಹಣೇ ಜಗನ್ನಿವಾಸ । ಅರ್ಜುನಾತೇ ॥ ೨೦ ॥

**ಅರ್ಥ—** ಎಲೋ ಅರ್ಜುನನೇ ಹೀಗೆ ನೋಡು. ಈ ಯುದ್ಧ ಸ್ಥಳದಲ್ಲಿ ಇದು ನಿನಗೆ ಉಚಿತವೇ ? ನೀನು ಯಾರಿರುವಿರಿ ? ಮತ್ತು ಇಲ್ಲಿ ಏನು ನಡೆಸಿರುವೆ ? ಮೊದಲು ಈ ಮಾತಿನ ವಿಚಾರವನ್ನು ಮಾಡು. ॥ ೬ ॥ ನಿನಗೆ ಏನು ಆಗಿರುವದು ? ಇದನ್ನಾದರೂ ಹೇಳು. ಯಾವುದು ಕಡಿಮೆಯಾಗಿರುವುದು ? ಏನು ಮಾಡುವದು ಉಳಿದಿರುವದು ? ಇಷ್ಟು ದುಃಖವು ಯಾವ ಕಾರಣದ ದೆಸೆಯಿಂದ ಉಂಟಾಗಿರುವುದು ? ॥ ೭ ॥ ನೀನು ಅನುಚಿತವಾದ ಮಾತಿನ ದೆಸೆಯಿಂದ ಎಂದೂ ಧೈರ್ಯ ಬಿಡುವವನಲ್ಲ. ಕೇವಲ ನಿನ್ನ ವಿಜಯವೆಂಬ ನಾಮವನ್ನು ಸ್ಮರಣ ಮಾಡುವದರಿಂದಲೇ ಅಪಜಯವು ದಿಕ್ಕುದಿಕ್ಕಿಗೆ ಓಡಿಹೋಗುತ್ತಿದೆ. ॥ ೮ ॥ ನೀನು ಕೇವಲ ಶೌರ್ಯದ ತವರುಮನೆ. ಮೇಲಾಗಿ ಕ್ಷತ್ರಿಯ ರಾಜರಲ್ಲಿ ಒಳ್ಳೇ ಶ್ರೇಷ್ಠನಾದ ವೀರನು. ನಿನ್ನ ಶೌರ್ಯದ ಪ್ರತಿಷ್ಠೆಯಾದರೂ ಮೂರು ಲೋಕಗಳಲ್ಲಿ ಪಸರಿಸಿರುವದು. ॥ ೯ ॥ ನೀನು ಯುದ್ಧದಲ್ಲಿ ಸಾಕ್ಷಾತ್ ಶ್ರೀ ಶಂಕರನನ್ನು ಜಯಿಸಿರುವಿ. ನಿವಾತ ಕವಚರನ್ನು ಸಂಪೂರ್ಣವಾಗಿ ನಿರ್ನಾಮ ( ನಾಶ ) ಮಾಡಿರುವಿ. ಮತ್ತೂ ನಿನ್ನ ಕೀರ್ತಿಗೀತೆಯನ್ನು ಗಂಧರ್ವರು ಹಾಡಿ ನಲಿಯುತ್ತಿರುವರು. ॥ ೧೦ ॥ ಅರ್ಜುನನೇ, ನಿನ್ನ ಪರಾಕ್ರಮದ ಮಹಾತ್ಮ್ಯವನ್ನು ತುಲನೆ ಮಾಡಿ ನೋಡಿದರೆ ತ್ರಿಭುವನವು ಸಹ ಕಡಿಮೆ ಬೀಳುತ್ತದೆ. ಹೀಗೆ ನಿನ್ನ ಪರಾಕ್ರಮವು ಇರಲು ॥ ೧೧ ॥ ನೀನು ಈ ಹೊತ್ತಿನ ದಿವಸ ಉದಗ್ರವಾದ ವೀರ ವೃತ್ತಿಯನ್ನು ಬಿಟ್ಟು (ಹೇಡಿಯಂತೆ) ಕೆಳಗೆ ಮೋರೆಯನ್ನು ಮಾಡಿ ಏಕೆ ಅಳುತ್ತ ಕುಳಿತಿರುವೆ ? ॥ ೧೨ ॥ ಅರ್ಜುನಾ ವಿಚಾರ ಮಾಡಿ ನೋಡು, ಅಂತಃಕರಣವು ನಿನ್ನನ್ನು ಇಷ್ಟು ದೀನನನ್ನಾಗಿ ಮಾಡಬೇಕೇ ? ಕತ್ತಲೆಯು ಎಂದಾದರೂ ಸೂರ್ಯನನ್ನು ನುಂಗಿರುವುದೇ ? ॥ ೧೩ ॥ ಗಾಳಿಗೆ ಮೇಘದ ಭಯವೆಂದಾದರೂ ಉಂಟಾಗಿರುವುದೇ ? ಅಥವಾ ಅಮೃತಕ್ಕೆ ಎಂದಾದರೂ ಮರಣಭಯವು ಉಂಟೇ ? ಕಟ್ಟಿಗೆಗಳು ಅಗ್ನಿಯನ್ನು ನುಂಗಬಹುದೇ ? ॥ ೧೪ ॥ ಅಥವಾ ಉಪ್ಪಿನಿಂದ ನೀರು ಎಂದಾದರೂ ಹೆರೆಯಬಹುದೋ ? ಇಲ್ಲವೇ ಕಾಳಕೂಟ ವಿಷವು ಅನ್ಯ ಪದಾರ್ಥದ ಸಂಸರ್ಗದಿಂದ ಎಂದಾದರೂ ಮೃತ್ಯುವನ್ನು ಹೊಂದಿರುವದೋ ? ಅಥವಾ ಬಹು ದೊಡ್ಡದಾದ ಭುಜಂಗವನ್ನು ಯಾವ ಕಾಲದಲ್ಲಿಯಾದರೂ ಕಪ್ಪೆಯು ನುಂಗುವದು ಸಾಧ್ಯವೋ ? ॥ ೧೫ ॥ ಒಳ್ಳೆಯದು, ಎಂದಾದರೂ ನರಿಯು ಸಿಂಹದ ಕೂಡ ಯುದ್ಧಕ್ಕೆ ಸನ್ನದ್ಧವಾಗಿ ಎದುರಿಸಬಲ್ಲದೋ ? ಇಂಥ ವಿಲಕ್ಷಣವಾದ ಮಾತುಗಳು ಎಂದಾದರೂ ಸಂಭವಿಸಿರು

ವವೇ ? ಆದರೆ ಆ ಅಸಂಭವನೀಯವಾದ ಮಾತುಗಳನ್ನು ನೀನು ಈ ಹೊತ್ತು ನಿಜವೆಂದು ಸಿದ್ಧಮಾಡಿ ತೋರಿಸಿದಿ. ॥೧೬॥ ಅರ್ಜುನಾ, ಇನ್ನಾದರೂ ಈ ಅಯೋಗ್ಯವಾದ ಮಾತಿನಕಡೆಗೆ ಲಕ್ಷ ಪೂರೈಸಬೇಡ ಕಂಡೆಯಾ ? ತೀವ್ರವಾಗಿ ಮನಸಿನಲ್ಲಿ ಧೈರ್ಯವನ್ನು ತಂದುಕೊಂಡು ಸಾವಧನಾಗಿರು. ॥ ೧೭ ॥ ಈ ಹುಚ್ಚುತನವನ್ನು ಬಿಟ್ಟುಬಿಡು. ಏಳು, ಏಳು ಧನುರ್ಬಾಣಗಳನ್ನು ನಿನ್ನ ಕೈಯಲ್ಲಿ ತೆಗೆದುಕೊಳ್ಳು. ಈ ರಣಭೂಮಿಯಲ್ಲಿ ನಿನ್ನ ಕಾರುಣ್ಯದ ಉಪಯೋಗ ವೇನು ? ( ನಿರರ್ಥಕವೇ ಸರಿ. ) ॥ ೧೮ ॥ ಎಲೋ ಅರ್ಜುನನೇ, ನೀನು ಜ್ಞಾನಿಯಲ್ಲವೇ ? ಈ ಕಾಲದಲ್ಲಿ ನೀನು ಚನ್ನಾಗಿ ವಿಚಾರವನ್ನೇಕೆ ಮಾಡುವದಿಲ್ಲ ? ಹೇಳು, ಈ ಯುದ್ಧ ಪ್ರಸಂಗದಲ್ಲಿ ದಯೆಯು ಯೋಗ್ಯವಾದುದೆ ? ॥೧೯॥ ಅರ್ಜುನಾ, ಈ ನಿನ್ನ ವರ್ತನವು ಈ ಹೊತ್ತಿನವರೆಗೆ ಸಂಪಾದನ ಮಾಡಿದ ಕೀರ್ತಿಯನ್ನೇ ನಾಶಗೊಳಿಸುವಂತಹದು. ಮತ್ತು ಪರಲೋಕ ಪ್ರಾಪ್ತಿಗೇ ವಿಘ್ನವನ್ನು ತರುವಂತಹದು.

**ಕ್ಲೈಬ್ಯಂ ಮಾಸ್ಮಗಮಃ ಪಾರ್ಥ ನೈತತ್ತ್ವಯ್ಯುಪ ಪದ್ಯತೆ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ । ೩ ॥**

[ **ಕ್ಲೈಬ್ಯಂ ಮಾಸ್ಮ ಇತಿ** ] ಮ್ಹಣೋನಿ ಶೋಕು ನಕರೀ । ತೂ ಪುರತಾಧಿರೂ ಧರೀ । ಹೇ ಶೋಚ್ಯತಾ ಅಪ್ಹೇರೀ । ಪಂಡು ಕುಮರಾ ॥ ೨೦ ॥ ತುಜನವ್ಹೇ ಹೇ ಉಚಿತ । ಯೇಣೇ ನಾಸೇಲ ಜೋಡಲೇ ಬಹುತ ತೂ ಅಝುನಿ ತರೀ ಹಿತ । ವಿಚಾರೀ ಪಾ ॥ ೨೧ ॥ ಯೇಣೇ ಸಂಗ್ರಾಮಾಚೇನೀ ಅವಸರೆ । ಏಥ ಕೃಪಾಳೂಪಣ ನುಪಕರೇ । ಹೇ ಅತಾಚಿ ಕಾಯ ಸೋಯರೆ । ಜಾಹಲೆ ತುಜ ॥ ೨೨ ॥ ತೂ ಆಧೀಚಿ ಕಾಯ ನೇಣಸೀ । ಕೀ ಹೇ ಗೋತ್ರಜ ನೋಳಖಸೀ । ವಾಯಾಚಿ ಕಾಯ ಕರಿಸೀ । ಅತಿಶೋ ಆತಾ ॥ ೨೩ ॥ ಆಜಿಚೇ ಹೇ ಝುಂಜ । ಕಾಯ ಜನ್ಮಾ ನವಲ ತುಜ ಹೇ ಪರಸ್ಪರೇ ತುಮ್ಹಾ ವ್ಯಾಜ ಸದಾಚಿ ಆಥೀ ॥ ೨೪ ॥ ತರೀ ಆತಾ ಕಾಯ ಜಾಹಲೆ । ಕಾಯಿ ಸ್ನೇಹ ಉಪನಲೇ ! ಹೇ ನೇಣಿಜೆ ಪರೀ ಕುಡೇ ಕೇಲೇ । ಅರ್ಜುನಾ ತುವಾ ॥ ೨೫ ॥ ಮೋಹ ಧರಿಲಿಯಾ ಐಸೇ ಹೋಯೀಲ । ಜೇ ಅಸತೀ ಪ್ರತಿಷ್ಠಾ ಜಾ ಈಲ । ಆಣಿ ಪರಲೋಕಹೀ ಅಂತರೇಲ । ಐಹಿಕೇಸೀ ॥ ೨೬ ॥ ಹೃದಯಾಚೆ ಢಿಲೇ ಪಣ । ಏಥ ನಿಕಯಾಸಿ ನವ್ಹೇ ಕಾರಣ । ಹೇ ಸಂಗ್ರಾಮೀ ಪತನ ಜಾಣ । ಕ್ಷತ್ರಿಯಾಸೀ ॥ ೨೭ ॥ ಐಸೇಸೀ ತೋ ಕೃಪಾವಂತ । ನಾನಾಪರೀ ಅಸೇ ಶಿಕವಿತ । ಹೇ ಏಕೋನಿ ಪಾಂಡುಸುತ । ಕಾಯ ಬೋಲೆ ॥ ೨೮ ॥

**ಅರ್ಥ—** ಕಾರಣ ಅರ್ಜುನನೇ, ದುಃಖಿಸಬೇಡ ಪೂರ್ಣವಾಗಿ ಧೈರ್ಯವನ್ನು ತಂದುಕೊಳ್ಳು. ಹೇಡಿಯಾಗ ಬೇಡ. ಕ್ಷುದ್ರ ಮನೋ ದೌರ್ಬಲ್ಯವನ್ನು ಒಸಾಟಬಿಡು. ॥ ೨೦ ॥ ಹೀಗೆ ದುಃಖಮಾಡುವದು ನಿನಗೆ ಅನುಚಿತ ವಾಗಿರುವದು. ನೀನು ಈ ಹೊತ್ತಿನವರೆಗೆ ಸಂಪಾದನಮಾಡಿದ ಕೀರ್ತಿಯು ಈ ದೌರ್ಬಲ್ಯದಿಂದ ನಾಶವಾದೀತು. ಆದುದರಿಂದ ನೀನು ನಿನ್ನ ಹಿತವೆಲ್ಲಿರುವುದೆಂಬುದನ್ನು ವಿಚಾರಮಾಡಿ ನೋಡು. ॥ ೨೧ ॥ ಇಂತಹ ಯುದ್ಧ ಪ್ರಸಂಗದಲ್ಲಿ ಮೃದುವಾದ ಅಂತಃಕರಣವು ಯೋಗ್ಯವಾದದ್ದಲ್ಲ. ಈ ಕೌರವರು ಇದೇ ಕಾಲಕ್ಕೆ ನಿನ್ನ ಆಪ್ತರಾಗಿರುವ ರೇನು ? ॥ ೨೨ ॥ ಪಾರ್ಥ, ಈ ಮಾತು ನಿನಗೆ ಪೂರ್ವದಲ್ಲಿಯೇ ಗೊತ್ತಾಗಿರುವದಿಲ್ಲವೇನು ? ಅರ್ಥಾತ್ ಇವರು ನನ್ನ ಆಪ್ತರು ಇರುವರೆಂಬದನ್ನು ಅರಿಯದಿದ್ದಿಯಾ ಹೇಗೆ ? ಆದರೆ ಈ ರಣಾಂಗಣದ ಸಂಕಟಸಮಯದಲ್ಲಿಯೇ ವ್ಯರ್ಥವಾಗಿ ಈ ರಗಳೆಯನ್ನು ಏಕೆ ಹಚ್ಚಿರುವಿ ? ॥ ೨೩ ॥ ಈ ಹೊತ್ತಿನದಿವಸ ನಡೆದ ಯುದ್ಧ ಪ್ರಸಂಗವು ನಿನ್ನ ಯಾವತ್ತೂ ಜನ್ಮದಲ್ಲಿ ಅಪೂರ್ವವಾದದ್ದು ಇದೆ. ಇಲ್ಲದೇ ಇದ್ದರೆ ನಿಮ್ಮ ಪರಸ್ಪರರಲ್ಲಿ ( ಕೌರವ ಪಾಂಡವರಲ್ಲಿ ) ಕಲಹದ ಕಾರಣಗಳು ಯಾವಾಗಲೂ ಇದ್ದೇ ಇರುತ್ತವೆ. ॥ ೨೪ ॥ ಅಂದಬಳಿಕ ಈ ಪ್ರಸಂಗದಲ್ಲಿ ನಿನಗೆ ಆಗಿರುವದಾದರೂ ಏನು ? ಈ ಮೋಹವು ನಿನಗೆ ಹೇಗೆ ಉತ್ಪನ್ನವಾಯಿತೆಂಬುದನ್ನು ಯಾರು ಬಲ್ಲರು ? (ಆಶ್ಚರ್ಯ)

ಆದರೆ ಅರ್ಜುನನೇ, ಈ ನೀಚ ಪ್ರವೃತ್ತಿಯು ನಿನಗೆ ಉಂಟಾಗಿರುವದನ್ನು ನೋಡಿದರೆ ಅದು ಹಾನಿಕರನಾದದ್ದೆಂದು ನನಗೆನಿಸುತ್ತದೆ. ॥ ೨೬ ॥ ನೀನು ಒಂದುವೇಳೆ ಈ ಮೋಹದಲ್ಲಿ ಸಿಲುಕಿ ಬಿದ್ದರೆ ಈ ಹೊತ್ತಿನವರೆಗೆ ದೊರಕಿಸಿದ ಲೌಕಿಕವು ಹಾಳಾಗಿ ಹೋಗಿ ಇಹ ಪರಲೋಕಗಳಲ್ಲಿಯೂ ನೀನು ಗತಿಗಾಣದೇ ಹೋಗುವೆ. ॥೨೭॥ ನಿನ್ನ ಅಂತಃಕರಣದಲ್ಲಿ ಉಂಟಾದ ಹೇಡಿತನವು ನಿನ್ನ ಕಲ್ಯಾಣಕ್ಕೆ ಕಾರಣವಾಗಲಾರದು ಅದು ಯುದ್ಧದಲ್ಲಿ ಕ್ಷತ್ರಿಯರಿಗೆ ದುರ್ಗತಿಗೆ ಕಾರಣವಾದೀತು. ॥ ೨೮ ॥ ಈ ಪ್ರಕಾರ ಆ ದಯಾಶಾಲಿಯಾದ ಭಗವಾನ್ ಶ್ರೀ ಕೃಷ್ಣ ಪರಮಾತ್ಮನು ಬಹಳೇ ರೀತಿಯಿಂದ ಮಾಡಿದ ಉಪದೇಶವನ್ನು ಕೇಳಿ ಅರ್ಜುನನು ಅನ್ನುತ್ತಾನೆ ॥ ೨೯ ॥

**ಅರ್ಜುನ ಉವಾಚ—**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**

**[ ಅರ್ಜುನ ಉವಾಚ-ಕಥಮಿತಿ ]** ದೇವಾ ಹೇ ಯೇತುಲೇವರೀ । ಬೋಲಾವೇ ನಲಗೇ ಅವಧಾರೀ । ಆಧೀ ತೂಚೀ ವಿಚಾರೀ । ಸಂಗ್ರಾಮು ಹಾ ॥ ೩೦ ॥ ಹೇ ಝುಂಜ ನವ್ಹೆ ಪ್ರಮಾದು । ಏಥ ಪ್ರವರ್ತಲಿಯಾ ದಿಸತಸೇ ಬಾಧು । ಹಾ ಉಘಡ ಲಿಂಗಭೇದು । ಪ್ರೋಢಮಲಾ ಅವ್ಹಾ ॥ ೩೧ ॥ ದೇಖೇ ಮಾತಾಪಿತರೇ ಅರ್ಚಿಜತೀ । ಸರ್ವಸ್ವೇ ತೋಷಪಾವವಿಜತೀ । ತಿಯೇಪಾಠೀ ಕೇವಿ ವಧಿಜತೀ । ಆಪುಲಿಯಾ ಹಾತೀ ॥ ೩೨ ॥ ದೇವಾ ಸಂತವೃಂದ ನಮಸ್ಕಾರಿಜೇ ಕಾ ಘಡೇ ತರಿ ಪೂಜಿಜೆ । ಹೇ ವಾಚೂನಿ ಕೇವೀ ನಿಂದಿಜೇ । ಸ್ವಯೇವಾಚಾ ॥ ೩೩ ॥ ತೈಸೇ ಗೋತ್ರ ಗುರೂ ಆಮುಚೆ । ಹೇ ಪೂಜನೀಯ ಆಮ್ಹಾ ನಿಯಮಾಚೆ । ಮಜ ಬಹುತ ಭೀಷ್ಮ ದ್ರೋಣಾಚೆ । ವರ್ತತಸೇ ॥ ೩೪ ॥ ಜಯಾಲಾಗೀ ಮನೇ ಪಿರೂ । ಆಮ್ಹೀ ಸ್ವಪ್ನೀಹೀ ನ ಶೋಕಧರೂ । ತಯಾ ಪ್ರತ್ಯಕ್ಷ ಕೇವೀ ಕರೂ । ಘಾತು ದೇವಾ ॥ ೩೫ ॥ ವರೀ ಜಳೋ ಹೇ ಜಿಯಾಲೆ । ಏಥ ಆಘವೇ ಯಾಸಿ ಹೇಂಚಿ ಕಾಯ ಜಾಹಲೆ । ಜೇ ಯಾಚ್ಯಾ ವಧೀ ಅಭ್ಯಾಸಿಲೇ । ಮಿರವಿಜೇ ಆಮ್ಹೀ ॥ ೩೬ ॥ ಮೀ ಪಾರ್ಥು ದ್ರೋಣಾಚಾ ಕೇಲಾ । ಯೇಣೇ ಧನುರ್ವೇದು ಮಜ ದಿಧಲಾ । ತೇಣೆ ಉಪಕಾರೇ ಕಾಯ ಆಭಾರೈಲಾ । ವಧೀ ತಯಾತೇ ॥೩೭॥ ಜೇಥೀಚಿಯಾ ಕೃಪಾ ಲಾಹಿಜೆವರೂ । ತೇಥೇಚಿ ಮನೇ ವ್ಯಭಿಚಾರೂ । ತರಿ ಕಾಯ ಮೀ ಭಸ್ಮಾಸುರೂ । ಅರ್ಜುನ ಮ್ಹಣೇ ॥ ೩೮ ॥

**ಅರ್ಥ**— ದೇವಾ ಬಹಳ ಮಾತಾಡುವದರ ಆವಶ್ಯಕತೆಯಿಲ್ಲ. ಈ ಯುದ್ಧದ ವಿಷಯದಲ್ಲಿ ಮೊದಲು ನೀವೇ ವಿಚಾರ ಮಾಡಿ ನೋಡಿರಿ. ॥ ೩೦ ॥ ಇದು ಯುದ್ಧವಲ್ಲ ಪೂಜ್ಯ ಜನರ ಅಮರ್ಯಾದೆಗಾಗಿ ನಾವು ಪ್ರಯತ್ನಪಡುವಂತಿದೆ. ಹೀಗೆ ಮಾಡಲು ಪ್ರವೃತ್ತರಾದುದು ದೋಷವಿರುತ್ತದೆ. ಇಷ್ಟೇ ಅಲ್ಲ. ಆದರೆ ನಾವು ಆರಾಧ್ಯ ದೈವತವನ್ನು ಅರ್ಥಾತ್ ಪೂಜ್ಯರನ್ನು ಬಹಿರಂಗವಾಗಿ ಅಪಮಾನ ಮಾಡುತ್ತಿರುತ್ತೇವೆ. ॥ ೩೧ ॥ ತನುಮನ ಧನಗಳಿಂದ ತಾಯಿತಂದೆಗಳ ಸೇವೆಯನ್ನು ಮಾಡಿ ಅವರಿಗೆ ಎಲ್ಲ ರೀತಿಯಿಂದಲೂ ಸಂತೋಷ ಪಡಿಸಿ ಅವರನ್ನೇ ನಾವು ನಮ್ಮ ಕೈಯಿಂದಲೇ ಹೇಗೆ ವಧಮಾಡಬೇಕು. ॥ ೩೨ ॥ ದೇವಾ ಸಂತ ಸಮುದಾಯವನ್ನು ಕಂಡರೆ ನಮಸ್ಕರಿಸಬೇಕು. ಸಾಧ್ಯವಾದರೆ ( ಫಲ ಪುಷ್ಪ ಗಂಧಾಕ್ಷತೆಗಳಿಂದ ) ಅವರನ್ನು ಪೂಜಿಸಬೇಕು. ಹೀಗೆ ಮಾಡದೆ ನಾವು ನಮ್ಮ ಮುಖದಿಂದಲೇ ಅವರ ನಿಂದೆಯನ್ನು ಮಾಡಬೇಕೇ ? ॥ ೩೩ ॥ ಇವರು ನಮ್ಮ ಕುಲಗುರುಗಳಿದ್ದು ನಮಗೆ ನಿತ್ಯ ನಿಯಮಗಳಿಂದ ಪೂಜ್ಯರಾಗಿದ್ದಾರೆ. ಅದರಲ್ಲಿಯೂ ಭೀಷ್ಮರ ಮತ್ತು ದ್ರೋಣರ ಉಪಕಾರವು ನಮ್ಮ ಮೇಲೆ ಬಹಳವಾಗಿರುತ್ತದೆ. ॥೩೪॥ ನಾನು ಅವರಿಗೆ ಋಣಿಯಾಗಿದ್ದೇನೆ. ದೇವಾ, ಯಾರ ವಿಷಯದಲ್ಲಿ ನಾವು ಸ್ವಪ್ನದಲ್ಲಿ ಕೂಡಾ ವೈರತ್ವವನ್ನು ಮಾಡಬಾರದೋ, ಅವರನ್ನು ಪ್ರತ್ಯಕ್ಷವಾಗಿ ನಾವು ಘಾತಿಸುವದು ಹೇಗೆ ? ॥ ೩೫ ॥ ಈ ಹೊತ್ತಿನ ದಿವಸ ಎಲ್ಲರ ಬುದ್ಧಿಯು

ಹೇಗೆ ಭ್ರಷ್ಟವಾಗಿರುವದೋ ತಿಳಿಯದು ! ಯಾವ ಶಸ್ತ್ರವಿದ್ಯದ ಅಭ್ಯಾಸವನ್ನು ನಾವು ಇವರ ಹತ್ತಿರ ಮಾಡಿ ಪ್ರವೀಣರಾಗಿರುವೆವೋ ಅದರ ಉಪಯೋಗವನ್ನು ಇವರನ್ನು ಕೊಲ್ಲುವದರಲ್ಲಿ ಮಾಡಿ ನಮ್ಮ ಪ್ರತಿಷ್ಠೆಯನ್ನು ಮೆರಿಸುವದಾದರೆ, ನಾವು ಬದುಕಿರುವದಕ್ಕಿಂತಲೂ ಈ ಜೀವಿತವನ್ನು ಸುಡುವದೇ ಲೇಸು. ॥ ೩೬ ॥ ನಾನು ಅರ್ಜುನನು, ದ್ರೋಣಾಚಾರ್ಯರ ಪಟ್ಟಶಿಷ್ಯನು ಅವರೇ ನನಗೆ ಧನುರ್ವಿದ್ಯೆಯನ್ನು ಕಲಿಸಿ ನನ್ನನ್ನು ಪ್ರವೀಣನನ್ನಾಗಿ ಮಾಡಿದರು. ಆದರೆ ಈಗ ಅವರ ಸಂಗಡ ಹೋರಾಡಿ ಅವರನ್ನು ಕೊಂದು ಅವರ ಉಪಕಾರವನ್ನು ತೀರಿಸಬೇಕೋ ಹೇಗೆ ! ॥ ೩೭ ॥ ಮತ್ತು ನಾನು ಯಾರ ಕೃಪೆಯನ್ನು ಸಂಪಾದಿಸಿ ವರಪ್ರಾಪ್ತಿಯನ್ನು ಪಡಕೊಳ್ಳಬೇಕೋ ಅವರ ವಿಷಯದಲ್ಲಿಯೇ ಕೃತಘ್ನರಾಗಿ ಅವರನ್ನು ಕೊಲ್ಲಲುದ್ಯುಕ್ತನಾದರೆ ನಾನು ಭಸ್ಮಾಸುರನಾದಂತೆಯೇ ಸರಿ ! ॥ ೩೮ ॥

**ಗುರೂನಹತ್ವಾ ಹಿ ಮಹಾನುಭಾವಾನ್ ।**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹಲೋಕೇ ॥**
**ಹತ್ವಾsರ್ಥ ಕಾಮಾಂಸ್ತು ಗುರೂನಿಹೈವ ।**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥**

[ **ಗುರೂನ ಹತ್ವಾ ಇತಿ** ] ದೇವಾ ಸಮುದ್ರ ಗಂಭೀರ ಆಇಕಿಜೆ । ವರೀ ತೋಹಿ ಆಪಾಚದೇಖಿಜೆ । ಪರೀಕ್ಷೋಭ ಮನೀ ನೇಣಿಜೆ । ದ್ರೋಣಾಚಿಯೇ ॥ ೩೯ ॥ ಹೇ ಅಪಾರ ಜೇಗಗನ । ವರೀ ತಯಾಹೀ ಹೋಈಲ ಮಾನ । ಪರೀ ಅಗಾಧ ಭಲೇ ಗಹನ । ಹೃದಯಯಾಚೆ ॥ ೪೦ ॥ ವರೀ ಅಮೃತಹೀ ವಿಟೇ । ಕೀ ಕಾಳವಶೇ ವಜ್ರಹೀ ಫುಟೇ । ಪರೀ ಮನೋಧರ್ಮ ನ ಲೋಟೆ । ವಿಕರವಿಲಾಹೀ ॥ ೪೧ ॥ ಸ್ನೇಹಾಲಾಗೇ ಮಾಯೇ । ಮ್ಹಣಿಪೇತೇ ಕೀರ ಹೋಯೆ । ಪರೀ ಕೃಪಾತೇ ಮೂರ್ತ ಆಹೇ । ದ್ರೋಣೀ ಇಯೆ ॥ ೪೨ ॥ ಹಾ ಕಾರುಣ್ಯಾಚೀ ಆದೀ ಸಕಲಗುಣಾಚಾ ನಿಧೀ ವಿದ್ಯಾಸಿಂಧು ನಿರವಧಿ । ಅರ್ಜುನ ಮ್ಹಣೆ ॥ ೪೩ ॥ ಹಾ ಯೇಣೇ ಮಾನೇ ಮಹಾಂತ । ವರೀ ಅಮ್ಹಾಲಾಗೀ ಕೃಪಾವಂತ । ಆತಾ ಸಾಂಗ ಪಾ ಯೇಥೆ ಘಾತ । ಚಿಂತೂಯೇಈಲ ॥ ೪೪ ॥ ಐಸೇ ಹೇ ರಣೀ ವಧಾವೇ । ಮಗ ಆಪಣ ಸುಖೇ ರಾಜ್ಯ ಭೋಗಾವೇ । ತೇ ಮನಾ ನಯೇ ಆಘವೇ । ಜೀವಿತೇಸೀ ॥ ೪೫ ॥ ಹೇ ಯೇಣೇ ಮಾನೇ ದುರ್ಧರ । ಜೇಯಾಹೀ ಹೂನಿ ಭೋಗ ಸಧರ । ತೇ ಅಸತು ಏಥವರ । ಭಿಕ್ಷಾ ಮಾಗತಾ ಭಲೀ ॥ ೪೬ ॥ ನಾತರೀ ದೇಶತ್ಯಾಗೇ ಜಾಇಜೆ ಕಾಗಿರಿ ಕಂದರ ಸೇವಿಜೆ । ಪರೀ ಶಸ್ತ್ರ ಆತಾ ನ ಧರಿಜೆ । ಇಯಾವರೀ ॥ ೪೭ ॥ ದೇವಾ ನವನಿಶಿತೀ ಶರೀ । ವಾವರೋನಿ ಯಾಚ್ಯಾಜಿವ್ಹಾರೀ । ಭೋಗಗಿವಸಾವೆ ರುಧಿರೀ । ಬುಡಾಲೇ ಜೇ ॥ ೪೮ ॥ ತೇ ಕಾಢೂನಿ ಕಾಯ ಕಿಜತೀ । ಲಿಪ್ತ ಕೇವಿ ಸೇವಿಜತೀ । ಮಜ ನಯೇ ಹೇ ಉಪಪತ್ತಿ । ಯಾಚಿಲಾಗೀ ॥ ೪೯ ॥ ಐಸೇ ಅರ್ಜುನ ತೇ ಅವಸರೀ । ಮ್ಹಣೇ ಶ್ರೀಕೃಷ್ಣ ಅವಧಾರೀ । ಪರೀ ತೇ ಮನಾ ನಯೇಚಿ ಮುರಾರೀ । ಆಇಕೋನಿಯಾ ॥ ೫೦ ॥ ಹೇ ಜಾಣೋನಿ ಪಾರ್ಥ ಭ್ಯಾಲಾ । ಮಗ ಪುನರಪಿ ಬೋಲೋ ಲಾಗಲಾ । ಮ್ಹಣೇ ದೇವೋ ಕಾ ಚಿತ್ತಯಾ ಬೋಲಾ । ದೇತೀಚಿ ನಾ ॥ ೫೧ ॥

**ಅರ್ಥ—** ದೇವಾ, ಸಮುದ್ರವು ಗಂಭೀರವೆಂದು ಕೇಳುತ್ತೇನೆ. ಆದರೆ ಅದು ಕ್ಷುಬ್ಧವಾಗುತ್ತದೆ. ಆದರೆ ದ್ರೋಣಾಚಾರ್ಯರಿಗೆ ಕ್ರೋಧವೆಂಬುವದು ಗೊತ್ತೇ ಇರುವದಿಲ್ಲ. ಅಂದ ಮೇಲೆ ಅವರ ಗಾಂಭೀರ್ಯವು ಸಮುದ್ರಕ್ಕಿಂತಲೂ ಮಿಗಿಲು ॥ ೩೯ ॥ ಆಕಾಶವು ಅಪಾರವಾಗಿರುವದು. ಆದರೂ ಅದರ ಅಳತೆಯನ್ನು ಮಾಡಲಿಕ್ಕೆ ಬರಬಹುದು. ಆದರೆ ದ್ರೋಣಾಚಾರ್ಯರ ಅಂತಃಕರಣದ ನೆಲೆಯು ತಿಳಿಯಲಸಾಧ್ಯವಾಗಿರುವದು ॥ ೪೦ ॥

ಒಂದು ವೇಳೆ ಅಮೃತವಾದರೂ ಕೆಡಬಹುದು. ಇಲ್ಲವೇ ಕಾಲಪರತ್ರದಿಂದ ವಜ್ರವೂ ಒಡೆಯಬಹುದು. ಆದರೆ ದ್ರೋಣಾಚಾರ್ಯರಿಗೆ ಕ್ಷೋಭ (ಕ್ರೋಧ) ಬರುವಂತೆ ಮಾಡಿದರೂ ಅವರ ಮನೋಧರ್ಮವು ಎಂದಿಗೂ ವಿಕಾರವಶವಾಗಲರಿಯದು ॥ ೪೧ ॥ ತಾಯಿಯ ಸಮಾನ ಪ್ರೇಮವುಳ್ಳವರು ಅನ್ಯರಾರೂ ಇರುವದಿಲ್ಲವೆಂಬ ರೂಢಿಯು ನಿಜ. ಆದರೆ ಈ ದ್ರೋಣಾಚಾರ್ಯರಲ್ಲಿ ಪ್ರೇಮವು ಮೂರ್ತಿಮಂತ ವಾಸವಾಗಿರುತ್ತದೆ. ॥ ೪೨ ॥ ಈ ಆಚಾರ್ಯರ ಹೃದಯವೆಂದರೆ ಅಂತಃಕರಣದ ಕೇವಲ ಜನಮಸ್ಥಾನವೇ ಆಗಿರುವದು. ಇವರು ಸಕಲ ಗುಣಗಳಿಗೆ ಖಣಿಯಾಗಿದ್ದು ಮತ್ತು ವಿದ್ಯೆಯ ಮಹಾನಿಧಿಗಳಾಗಿರುತ್ತಾರೆ. ॥ ೪೩ ॥ ಹೀಗೆ ಇವರು ಸರ್ವೋತ್ತಮರೂ ಸರ್ವ ಶ್ರೇಷ್ಠರೂ ಇದ್ದು ನಮ್ಮ ವಿಷಯದಲ್ಲಿಯಂತೂ ಸಂಪೂರ್ಣವಾಗಿ ಕೃಪಾಮೂರ್ತಿಗಳಾಗಿದ್ದಾರೆ. ಅಂದಬಳಿಕ ಇವರ ಘಾತವನ್ನು ಮಾಡಬೇಕೆಂಬ ವಿಚಾರವು ಮನಸ್ಸಿನಲ್ಲಿ ಬರುವ ಬಗೆಯಾದರೂ ಹೇಗೆ! ॥ ೪೪ ॥ ಇಂತಹ ಅಂತಃಕರಣದವರನ್ನು ರಣದಲ್ಲಿ ಕೊಂದು ಆ ಮೇಲೆ ನಾವು ರಾಜ್ಯಸುಖವನ್ನು ಭೋಗಿಸಬೇಕೆಂಬ ಮನಸ್ಸು ಜೀವ ಹೋದರೂ ನನಗಾಗಲಾರದು ॥ ೪೫ ॥ ರಾಜ್ಯಸುಖವನ್ನು ಭೋಗಿಸಬೇಕೆಂಬ ಅವಿಚಾರದ ಕಲ್ಪನೆಗಿಂತಲೂ ತಿರಿದು ತಿನ್ನುವದೇ ಲೇಸು ॥ ೪೬ ॥ ಇಲ್ಲವೇ ದೇಶತ್ಯಾಗವನ್ನೂ ಮಾಡಬಹುದು; ಗಿರಿಕಂದರಗಳನ್ನೂ ಸೇರಬಹುದು; ಆದರೆ ಇವರ ಮೇಲೆ ಶಸ್ತ್ರಗಳನ್ನು ಮಾತ್ರ ಎತ್ತುವದು ಅಸಾಧ್ಯವು. ॥ ೪೭ ॥ ದೇವಾ, ಹೊಸದಾಗಿ ಸಾಣೆ ಹಿಡಿದ ಬಾಣದ ಅಲಗಿನಿಂದ ಇವರ ಮರ್ಮಸ್ಥಾನಕ್ಕೆ ಪ್ರಹಾರ ಮಾಡಿ ರಕ್ತಪಾತ ಮಾಡಿದ ಮೇಲೆ ಅದೇ ಅಂತರ (ಒಳಗಿನ) ನೆತ್ತರದಿಂದ ತೊಯ್ದು ತರ್ತವವೆನ್ನುವ ರಾಜ್ಯಭೋಗಗಳನ್ನು ಭೋಗಿಸಲೆಳಿಸಿ ಕುಳಿತುಕೊಳ್ಳಲೇ? ॥ ೪೮ ॥ ಅದನ್ನು ಪ್ರಾಪ್ತಮಾಡಿಕೊಂಡು ಮಾಡುವದಾದರೂ ಏನು? ಮತ್ತು ರಕ್ತಮಯವಾದ ಆ ಭೋಗವನ್ನು ಉಪಭೋಗ ಮಾಡುವದಾದರೂ ಹೇಗೆ! ಆದಕಾರಣ ಈ ನೀಚವಾದ ಕೆಲಸವು ನನ್ನ ಮನಸಿಗೆ ಬರುವದಿಲ್ಲ. ॥ ೪೯ ॥ ಎಂದು ಅರ್ಜುನನು ಮಾತನಾಡಲು ಕೃಷ್ಣನಿಗೆ ಅವನ ಮಾತು ಸರಿದೋರಲಿಲ್ಲ. ॥ ೫೦ ॥ ಅದನ್ನು ಕಂಡು ತನ್ನ ಮನಸ್ಸಿನಲ್ಲಿ ಭಯಗ್ರಸ್ತನಾಗಿ ಅರ್ಜುನನು ಪುನಃ ಬೇಡಿಕೊಳ್ಳುತ್ತಾನೆ. ದೇವಾ, ನನ್ನ ಮಾತಿನ ಕಡೆಗೆ ನೀನು ಲಕ್ಷವನ್ನೇಕೆ ಕೊಡಲೊಲ್ಲೆ? ಇವರ ಕಾರಣವಂತೂ ತಿಳಿಯದಾಗಿದೆ. ॥ ೫೧ ॥

**ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ**
**ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನಜಿಜೀವಿಷಾಮಸ್ತೇಽವಸ್ಥಿತಾಃ ಪ್ರಮುಖೇ**
**ಧಾರ್ತರಾಷ್ಟ್ರಾಃ ॥ ೬ ॥**

[**ನ ಚೈತದ್ವಿದ್ಮ ಇತಿ**] ಯೇಣ್ಹವೀ ಮಾಝ್ಯಾ ಚಿತ್ತೀ ಜೇ ಹೋತೇ । ತೇ ಮೀ ವಿವರೂನಿ ಬೋಲಿಲೋ ಏಥೆ । ಪರೀನಿಕೇ ಕಾಯ ಯಾಪರೌತೇ । ತೇ ತುಮ್ಹೀ ಜಾಣಾ ॥ ೫೨ ॥ ಪೈವಿರೂ ಜಯಾಸಿ ಐಕಿಜೆ । ಆಣಿ ಯಾ ಬೋಲೀಚೀ ಪ್ರಾಣ ಸಾಂಡಿಜೆ । ತೇ ಏಥ ಸಂಗ್ರಾಮವ್ಯಾಜೆ । ಉಭೇ ಆಹಾತೀ । ೫೩ ॥ ಆತಾ ಐಸೇ ಯಾತೆ ವಧಾವೆ । ಕೀ ಅವ್ಹೇರೂನಿಯಾ ನಿಘಾವೆ । ಯಾ ದೋಹೀ ಮಾಜಿ ಬರವೇ । ತೇ ನೇಣೋ ಆಮ್ಹಿ ॥ ೫೪ ॥

**ಅರ್ಥ**— ನನ್ನ ಮನಸಿನಲ್ಲಿ ಇದ್ದದ್ದನ್ನೆಲ್ಲ ವಿಸ್ತಾರವಾಗಿ ನಿಮ್ಮ ಮುಂದೆ ವಿವರಿಸಿದ್ದೇನೆ ಆದರೆ ಇದರಲ್ಲಿ ಯಾವದು ವಿಹಿತವೆಂಬುದು ನಿಮಗೇ ಗೊತ್ತು. ॥ ೫೨ ॥ ಯಾರ ಸಂಗಡ ನಮ್ಮ ವೈರತ್ವವಿರುವದೆಂಬ ಮಾತನ್ನು ಕೇಳಿದ ಕೂಡಲೇ ನಾವು ಪ್ರಾಣವನ್ನು ತ್ಯಜಿಸಬೇಕೋ ಅವರೆಲ್ಲರೂ ಈ ರಣಭೂಮಿಯಲ್ಲಿ ಯುದ್ಧಸನ್ನದ್ಧರಾಗಿ ನಿಂತಿರುವರು. ॥ ೫೩ ॥ ಆದರೆ ಈ ಕೌರವರ ಸಂಗಡ ಹೋರಾಡಿ ಹೊಡೆಯಬೇಕೇ? ಇಲ್ಲವೇ ಬಿಟ್ಟುಕೊಟ್ಟು ಹೊರಟು ಹೋಗಬೇಕೇ? ಈ ಎರಡರಲ್ಲಿ ಉತ್ತಮವಾದ ಕಾರ್ಯವು ಯಾವುದೆಂಬುದು ನನಗೆ ತಿಳಿಯದಾಗಿದೆ ॥ ೫೪ ॥

**ಕಾರ್ಪಣ್ಯ ದೋಷೋಪಹತ ಸ್ವಭಾವಃ ।**
**ಪೃಚ್ಛಾಮಿ ತ್ವಾಂ ಧರ್ಮ ಸಂಮೂಢಚೇತಾಃ ॥**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ।**
**ಶಿಷ್ಯಸ್ತೇಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ॥ ೭ ॥**

**[ ಕಾರ್ಪಣ್ಯ ದೋಷೋಪಹತೇ ತಿ ]** ಆಮ್ಹಾ ಕಾಯ ಉಚಿತ । ತೇ ಪಾಹತಾ ನ ಸ್ಫುರೇ ಯೇಥ ಜೇ ಮೋಹೇ ಯೇಣೆ ಚಿತ್ತ । ವ್ಯಾಕುಳ ಮಾಝೆ ॥ ೫೫ ॥ ತಿಮಿರಾವರುದ್ಧ ಜೈಸೇ । ದೃಷ್ಟೀಚೆ ತೇಜ ಭ್ರಂಶೇ ಮಗ ಪಾಸೀಚ ಅಸತಾ ನ ದಿಸೆ । ವಸ್ತುಜಾತ ॥ ೫೬ ॥ ದೇವಾ ತೈಸೇ ಮಜ ಜಾಹಲೆ । ಜೇ ಮನ ಹೇ ಭ್ರಾಂತೀ ಗ್ರಾಸಿಲೇ । ಆತಾ ಕಾಯ ಹಿತ ಆಪುಲೆ । ತೇಹೀ ನೆಣೇ ॥ ೫೭ ॥ ತರೀ ಶ್ರೀಕೃಷ್ಣ ತುವಾ ಜಾಣಾವೆ । ನಿಕೇ ತೇ ಆಮ್ಹಾ ಸಾಂಗಾವೆ । ಜೇ ಸಖಾ ಸರ್ವಸ್ವ ಆಘವೇ । ಆಮ್ಹಾಸಿ ತೂ ॥೫೮॥ ತೂ ಗುರೂ ಬಂಧು ಪಿತಾ । ತು ಆಮುಚೀ ಇಷ್ಟದೇವತಾ । ತೂಚಿ ಸದಾ ರಕ್ಷಿತಾ । ಆಪದೀ ಆಮುತೆ ॥ ೫೯ ॥ ಜೈಸಾ ಶಿಷ್ಯಾತೆ ಗುರೂ । ಸರ್ವಥಾ ನೆಣೇ ಅವ್ಹೇರೂ । ಕೀ ಸರಿತಾತೇ ಸಾಗರೂ । ತ್ಯಜೀ ಕೇವೀ ॥ ೬೦ ॥ ನಾತರೀ ಅಪತ್ಯಾತೇ ಮಾಯೇ । ಸಾಂಡೂನಿ ಜರೀ ಜಾಯೇ । ತರೀ ಕೈಸೇನಿ ಜಿಯೇ । ಐಕೇ ಕೃಷ್ಣಾ ॥ ೬೧ ॥ ತೈಸಾ ಸರ್ವಾಪರೀ ಆಮ್ಹಾಸೀ । ದೇವಾ ತೂಚಿ ಏಕ ಆಹಾಸೀ । ಆಣಿ ಬೋಲಿಲೇ ಜರೀ ನ ಮಸಿಸೀ ಮಾಗೀಲ ಮಾಝೆ । ೬೨ ॥ ತರೀ ಉಚಿತ ಕಾಯ ಆಮ್ಹಾ । ಜೇ ವ್ಯಭಿಚರೇನಾ ಧರ್ಮಾ । ತೇ ಝಡಕರೀ ಪುರುಷೋತ್ತಮಾ । ಸಾಂಗಾ ಆತಾ ॥ ೬೩ ॥

**ಅರ್ಥ—** ನಮಗೆ ಯಾವುದು ವಿಹಿತವಾಗಿರುವುದೆಂಬುದು ಎಷ್ಟು ವಿಚಾರಿಸಿದರೂ ತಿಳಿಯದಾಗಿದೆ. ಆದುದರಿಂದ ಈ ಮೋಹದಿಂದ ನನ್ನ ಮನಸ್ಸು ತಳಮಳಗೊಂಡಿರುವದು. ॥ ೫೫ ॥ ಯಾವ ಪ್ರಕಾರ ಕತ್ತಲೆಯಿಂದ ಕಣ್ಣಿನ ಕಾಂತಿಯು ನಾಶಹೊಂದಿ ಸಮೀಪದ ವಸ್ತುವೂ ಕಾಣಬಾರದೋ, ॥ ೫೬ ॥ ಅದೇಪ್ರಕಾರ ನನ್ನ ಸ್ಥಿತಿಯೂ ಆಗಿರುವದು. ನನ್ನ ಮನನು ಭ್ರಾಂತಿಯಿಂದ ಗ್ರಸ್ತವಾಗಿದ್ದು ನನ್ನ ಹಿತವು ಯಾತರಲ್ಲಿರುವುವೆಂಬುದು ಕೂಡ ನನಗೆ ತಿಳಿಯದಂತಾಗಿದೆ. ॥ ೫೭ ॥ ಆದರೆ ಶ್ರೀ ಕೃಷ್ಣಾ, ವಿಚಾರಮಾಡಿ ನಿಜವಾದದ್ದಾವುದೆಂಬುದನ್ನು ಹೇಳು. ಯಾಕಂದರೆ ನನ್ನ ಪ್ರೀತಿಯ ಮಿತ್ರನೂ, ಆಪ್ತನೂ, ಸರ್ವಸ್ವವೂ ನೀನೇ ಆಗಿರುವಿ. ॥ ೫೮ ॥ ನಮ್ಮ ಗುರುಗಳೂ, ಬಂಧುಬಳಗವೂ, ತಂದೆಯೂ, ಕುಲದೈವತವೂ ನಿನೇ ಆಗಿರುವಿ. ಮತ್ತು ಯಾವಾಗಲೂ ನಮಗೆ ಸಂಕಟ ಸಮಯದಲ್ಲಿ ರಕ್ಷಣ ಮಾಡುವವನು ನಿನೇ ಆಗಿರುವಿ. ॥ ೫೯ ॥ ಯಾವ ಪ್ರಕಾರ ಗುರುಗಳು ಶಿಷ್ಯರನ್ನು ನಿರಾಕರಿಸುವದಿಲ್ಲವೋ, ಸಮುದ್ರವು ನದಿಗಳನ್ನು ಹೇಗೆ ನಿರಾಕರಿಸುವದಿಲ್ಲವೋ ॥ ೬೦ ॥ ಶ್ರೀ ಕೃಷ್ಣನೇ ನೀನೇ ಹೇಳು ತಾಯಿಯು ತನ್ನ ಕೂಸನ್ನು ಬಿಟ್ಟು ಹೋದರೆ ಆ ಕೂಸು ಹೇಗೆ ಬದಕುವದು ? ॥ ೬೧ ॥ ಅದೇ ಪ್ರಕಾರ ಸರ್ವರೀತಿಯಿಂದಲೂ ನಮ್ಮನ್ನು ಬಿಡದೆ ನೀವೇ ಸಂರಕ್ಷಕರಾಗಿರುವಿರಿ. (ಆಶ್ರಯಸ್ಥಾನರಾಗಿರುವಿರಿ.) ಮತ್ತು ಇಷ್ಟು ಹೊತ್ತಿನವರೆಗೆ ನಿಮ್ಮಮುಂದೆ ನಾನು ಹೇಳಿದುದು ನಿಮಗೆ ಯೋಗ್ಯವೆಂದು ಕಾಣದಿದ್ದರೆ, ॥ ೬೨ ॥ ಪುರುಷೋತ್ತಮನೇ, ಯಾವ ಮಾತು ನಮಗೆ ಉಚಿತವಾಗಿದ್ದು, ಧರ್ಮಕ್ಕೆ ವಿರುದ್ಧವಾಗಿರುವಾಗಿರುವದಿಲ್ಲವೋ (ಮಾತ್ರ) ಅದನ್ನು ತೀವ್ರವಾಗಿ ನನ್ನ ಮುಂದೆ ಹೇಳಬೇಕು. ॥ ೬೩ ॥

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್ ।**
**ಯಚ್ಛೋಕ ಮುಚ್ಛೋಷಣ ಮಿನ್ದ್ರಿಯಾಣಾಂ ॥**
**ಅವಾಪ್ಯ ಭೂಮಾವಸಪತ್ನಮೃದ್ಧಂ ।**
**ರಾಜ್ಯಂ ಸುರಾಣಾಮಪಿಚಾಧಿ ಪತ್ಯಂ ॥ ೮ ॥**

**[ ನ ಹಿಂತಿ ]** ಹೇ ಸಕಳ ಕುಳ ದೇಖೋನಿ ಜೋ ಶೋಕು ಉಪನಲಾಸೇ ಮನೀ। ತೋ ತುಝಿಯಾ ವಾಕ್ಯಾ ವಾಚುನೀ । ನಜಾಯ ಆಣಿಕೇ ॥ ೬೪ ॥ ಏಥ ಪ್ರಥಿವೀ ತಳ ಆಪು ಹೋಈಲ। ಹೇ ಮಹೇಂದ್ರ ಪದಹೀ ಪಾವಿಜೇಲ। ಪರಿ ಮೋಹ ಹಾನ ಫಿಟೇಲ । ಮಾನಸೀಚಾ ॥ ೬೫ ॥ ಜೈಸೀ ಸರ್ವಥಾ ಬೀಜೇ ಆಹಾಳಲೀ। ತಿ ಸುಕ್ಷೇತ್ರೀ ಜರ್‍ಹೀ ಪೇರಲೀ ತರೀ ನ ವಿರೂಢತೀ ಸಿಂಚಲೀ । ಆವಡೇ ತೈಸೀ ॥ ೬೬ ॥ ನಾತರೀ ಆಯುಷ್ಯ ಪುರಲೇ ಆಹೆ । ತರೀ ಔಷಧೇ ಕಾಹೀ ನೋಹೇ। ಏಥ ಏಕಚೀ ಉಪೇಗಾ ಜಾಯೇ । ಪರಮಾಮೃತ ॥ ೬೭ ॥ ತೈಸೇ ರಾಜ್ಯಭೋಗ ಸಮೃದ್ಧಿ। ಉಜ್ಜೀವನ ನೋಹೇ ಇಯೇ ಬುದ್ಧಿ । ಏಥ ಜಿವ್ಹಾಳಾ ಕೃಪಾನಿಧಿ । ಕಾರುಣ್ಯ ತುಝೆ ॥ ೬೮ ॥ ಐಸೇ ಅರ್ಜುನ ತೇಥ ಬೋಲಿಲಾ। ತವ ಕ್ಷಣಏಕ ಭ್ರಾಂತಿ ಸಾಂಡಿಲಾ । ಮಗ ಪುನರಪಿ ವ್ಯಾಪಿಲಾ। ಉರ್ಮಿ ತೇಣೇ ॥ ೬೯ ॥ ಕೀಮಜ ಪಾಹತಾ ಉರ್ಮಿ ನೋಹೇ। ಹೇ ಅನಾರಿಸೇ ಗಮತ ಆಹೇ। ತೋ ಗ್ರಾಸಿಲಾ ಮಹಾ ಮೋಹೇ ಕಾಳಸರ್ಪೇ ॥ ೭೦ ॥ ಸವರ್ಮ ಹೃದಯ ಕಲ್ಹಾರೀ। ತೇಥ ಕಾರುಣ್ಯ ವೇಳೇಚಾ ಭರೀ। ಲಾಗಲಾ ಮ್ಹಣೋನಿ ಲಹರೀ । ಭಾಜೇಚಿ ನಾ ॥ ೭೧ ॥ ಹೇ ಜಾಣೋನಿ ಐಸೀ ಪ್ರೌಢೀ। ಜೋ ದೃಷ್ಟಿ ಸವೇಚಿ ವಿಷ ಫೇಡೀ । ತೋ ಧಾಪಯಾ ಶ್ರೀಹರೀ ಗಾರುಡೀ । ಪಾತಲಾ ಕೀ ॥ ೭೨ ॥ ತೈಸಿಯಾ ಪಂಡು ಕುಮಾರಾ ವ್ಯಾಕುಳಾ । ಮಿರವತಸೇ ಶ್ರೀ ಕೃಷ್ಣ ಜವಳಾ। ತೋ ಕೃಪಾವಶೇ ಅವಲೀಳಾ। ರಕ್ಷೀಲ ಆತಾ ॥ ೭೩ ॥ ಮ್ಹಣೋನಿ ತೋ ಪಾರ್ಥು । ಮೋಹಫಣಿಗ್ರಸ್ತು। ಮ್ಯಾ ಮ್ಹಣಿತಲಾ ಹಾ ಹೇತು । ಜಾಣೋನಿಯಾ ॥ ೭೪ ॥ ಮಗ ದೇಖಾ ತೇಥ ಫಾಲ್ಗುನು । ಘೇತಲಾ ಅಸೇ ಭ್ರಾಂತೀ ಕವಳೂನು। ಜೈಸಾ ಘನ ಪಡಳೀ ಭಾನೂ। ಆಚ್ಛಾದಿಜೆ ॥ ೭೫ ॥ ತಯಾಪರೀ ತೋ ಧನುರ್ಧರೂ। ಜಾಹಲಾಸೇ ದುಃಖೇ ಜರ್ಜರೂ। ಜೈಸೇ ಗ್ರೀಷ್ಮ ಕಾಳೀ ಗಿರಿವರೂ । ವಣವಲಾ ಕಾ ॥ ೭೬ ॥ ಮ್ಹಣೋನಿ ಸಹಜೇ ಸುನೀಳು । ಕೃಪಾಮೃತೇ ಸಜಳು। ತೋ ವೋಳಲಾ ಶ್ರೀ ಗೋಪಾಳು । ಮಹಾಮೇಘು ॥ ೭೭ ॥ ತೇಥ ಸುದಶನಾಚಿ ದ್ಯುತಿ। ತೇಚಿ ವಿದ್ಯುಲ್ಲತಾ ಝುಳಕತೀ। ಗಂಭೀರ ವಾಚಾ ತೇ ಆಯತೀ। ಗರ್ಜನೇಚೀ ॥ ೭೮ ॥ ಆತಾ ತೋ ಉದಾರ ಕೈಸಾ ವರ್ಷೇಲ। ತೇಣೆ ಅರ್ಜುನಾಚಳು ನಿವೇಲ । ಮಗ ನವೀ ವಿರೂಢೀ ಫುಟೇಲ। ಉನ್ಮೇಷಾಚೀ ॥ ೭೯ ॥ ತೇ ಕಥಾ ಆಇಕಾ। ಮನಾಚಿಯಾ ಆರಾಣುಕಾ। ಜ್ಞಾನದೇವೋ ಮ್ಹಣೇ ದೇಖಾ। ನಿವೃತ್ತಿದಾಸು ॥ ೮೦ ॥

**ಅರ್ಥ**— ಈ ಸರ್ವಗೋತ್ರಜರನ್ನೂ ನೋಡಿ ನನ್ನ ಮನಸಿನಲ್ಲಿ ಉಂಟಾದ ದುಃಖವು ನಿಮ್ಮ ಉಪದೇಶದ ಹೊರ್ತು ಮತ್ತಿನ್ನಾರ ಉಪದೇಶದಿಂದಲೂ ಇಲ್ಲದಂತೆ ಆಗಲಾರದು. ॥ ೬೪ ॥ ಈ ಸ್ಥಳದಲ್ಲಿ ಈ ಭೂಮಿಯ ಸಾರ್ವಭೌಮತ್ವವು ದೊರಕಿದರೂ, ಅಥವಾ ಸ್ವರ್ಗ ಸಾಮ್ರಾಜ್ಯವು ( ಇಂದ್ರಪದವು ) ಸಿಕ್ಕರೂ ಇಂದ್ರಿಯಗಳನ್ನು ಶೋಷಿಸುತ್ತಿರುವ ಈ ಮೋಹವನ್ನು ( ಶೋಕವನ್ನು ) ಕಳೆಯುವ ಉಪಾಯವನ್ನು ನಾನು ಕಾಣೆನು. ॥ ೬೫ ॥ ಹುರಿದ ಬೀಜವನ್ನು ಫಲವತ್ತಾದ ಭೂಮಿಯಲ್ಲಿ ಬಿತ್ತಿ ಸಾಕಷ್ಟು ನೀರನ್ನು ಹಣಿಸಿದರೂ ಅದು ಅಂಕುರಿಸಲಾರದು. ॥ ೬೬ ॥ ಆಯುಷ್ಯವು ಮುಗಿದಿರುವಾಗ ಯಾವ ಔಷಧಗಳೂ ಉಪಯೋಗಕ್ಕೆ ಬಾರವು. ಆದರೆ ಅಲ್ಲಿ ಪರಮಾಮೃತವೊಂದೇ ಉಪಯೋಗ ಬೀಳುವದು. ॥ ೬೭ ॥ ಅದೇ ಪ್ರಕಾರ ನನಗೆ ಸರ್ವ ರಾಜ್ಯಭೋಗವೂ, ಐಶ್ವರ್ಯಾದಿಗಳೂ ಪ್ರಾಪ್ತವಾದಾಗ್ಯೂ ಈ ಮೋಹ ( ದುಃಖ ) ದಿಂದ ಮುಕ್ತನಾಗಲಿಕ್ಕೆ ಆ ಸುಖೋಪಭೋಗಗಳು ಎಂದಿಗೂ ಉಪಕಾರಿಯಾಗಲಾರವು. ಆದರೆ ದೇವಾ ಕೃಪಾನಿಧೇ ನಿನ್ನ ಕೃಪಾಮೃತ ಪಾನವೇ ನನ್ನ ದುಃಖವನ್ನು ಕಳೆಯುವದಕ್ಕೆ ಸಮರ್ಥವಾಗಿರುವದು. ॥ ೬೮ ॥ ಹೀಗೆ ಕ್ಷಣಹೊತ್ತು ಭ್ರಾಂತಿಯಿಲ್ಲದಂತಾದುದರಿಂದಲೇ ಅವನು ಅಲ್ಲಿ ಮಾತನಾಡಿದನು. ಆದರೆ ಉಪಯೋಗವೇನು ? ಅವನಿಗೆ ಅಷ್ಟರಲ್ಲಿಯೇ ಪುನಃ ಮೋಹವು ಮುಸುಕಿತು. ॥ ೬೯ ॥

ಅರ್ಜುನನ ಈ ಸ್ಥಿತಿಯನ್ನು ನೋಡಿ ಶ್ರೀ ಜ್ಞಾನೇಶ್ವರ ಮಹಾರಾಜರು ರೂಪಕ ಮಾಡಿ ಹೇಳುವದೇನೆಂದರೆ "ಅರ್ಜುನನು ಮೋಹದಿಂದ ಗ್ರಸ್ತನಾಗಿರದೇ ಮಹಾ ಮೋಹರೂಪೀ ಕಾಲಸರ್ಪದಿಂದ ದಷ್ಟನಾಗಿದ್ದಾನೆ. ॥೨೦॥ ಮತ್ತು ಅವನ ಅಂತಃಕರಣವು ಕರಗಿ ನೀರಾಗಿರುವ ಸಂಧಿಯನ್ನು ಸಾಧಿಸಿ ಮರ್ಮಸ್ಥಾನದಲ್ಲಿ ಆ ಮೋಹರೂಪೀ ಹಾವು ಕಚ್ಚಿದ್ದರಿಂದ ಅದರ ವಿಷದ ವೇಗವು ಅವನಿಗೆ ಸಹಿಸಲಾರದಾಗಿದೆ. ॥ ೨೧ ॥ ಇಂತಹ ಪ್ರಸಂಗದಲ್ಲಿ ಕೇವಲ ದೃಷ್ಟಿಯಿಂದಲೇ ವಿಷವನ್ನು ಹೋಗಲಾಡಿಸುವ ಸಾಮರ್ಥ್ಯವುಳ್ಳ ಮಹಾಮಹಿಮನಾದ ಶ್ರೀಕೃಷ್ಣರೂಪವಾದ ಗಾರುಡಿಯು ಅರ್ಜುನನ್ನು ಸಂರಕ್ಷಿಸುವದಕ್ಕಾಗಿ ಓಡಿ ಬಂದನು. ॥ ೨೨ ॥ ಆಗ್ಗೆ ಅರ್ಜುನನು ಶ್ರೀಕೃಷ್ಣನ ಹತ್ತಿರ ಮೋಹದಿಂದ ವ್ಯಾಕುಲಪಟ್ಟು ಭ್ರಮಿಷ್ಠನಂತೆ ಕಾಣುತ್ತಿದ್ದನು. ಅವನನ್ನು ಶ್ರೀಕೃಷ್ಣಪರಮಾತ್ಮನು ಇನ್ನು ಮೇಲೆ ತನ್ನ ಕೃಪಾದೃಷ್ಟಿಯಿಂದ ಸಹಜವಾಗಿಯೇ ರಕ್ಷಿಸುವನು. ॥ ೨೩ ॥ ಮೋಹವೆಂಬ ಕಾಳಸರ್ಪವು ಪಾರ್ಥನನ್ನು ಕಚ್ಚಿರುವದೆಂಬ ಕಲ್ಪನೆಯನ್ನು ಮನಸಿನಲ್ಲಿ ತಂದು ನಾನು ಇಲ್ಲಿ ಈ ರೂಪಕವನ್ನು ಮಾಡಿರುವೆನು." ॥ ೨೪ ॥ ಮೋಡದಿಂದ ಸೂರ್ಯನು ಆಚ್ಛಾದಿತನಾಗುವಂತೆ, ಅರ್ಜುನನು ಆ ಸಮಯದಲ್ಲಿ ಭ್ರಾಂತಿಯಿಂದ ಆವರಿಸಲ್ಪಟ್ಟಿದ್ದನು. ॥ ೨೫ ॥ ಬೇಸಿಗೆಯಲ್ಲಿ ಗುಡ್ಡವು ಅಗ್ನಿಯಿಂದ ಪ್ರದೀಪ್ತವಾಗುವಂತೆ ಅರ್ಜುನನು ದುಃಖದಿಂದ ಅತಿಶಯವಾಗಿ ಜರ್ಜರಿತನಾಗಿದ್ದನು. ॥ ೨೬ ॥ ಅಗ್ನಿಯು ಪ್ರಜ್ವಲಿತವಾಗಿ ವನವನ್ನು ಸುಡುತ್ತಿರಲು, ನೀರಿನಿಂದ ತುಂಬಿದ ನೀಲ ಮೇಘಗಳು ಮಳೆಗರೆದು ಬೆಂಕಿಯನ್ನು ಆರಿಸುವಂತೆ, ನೀಲವರ್ಣನಾದ ಆ ಮಹಾಮೇಘರೂಪೀ ಶ್ರೀಕೃಷ್ಣನು ಕೃಪಾಮೃತ ಜಲವನ್ನು ಅರ್ಜುನನ ಮೇಲೆ ಸಿಂಪಡಿಸಿ ಅನುಗ್ರಹ ಮಾಡಿದನು. ॥ ೨೭ ॥ ಆ ಶ್ರೀಕೃಷ್ಣರೂಪೀ ಮೇಘದಲ್ಲಿ, ಶ್ಯಾಮಸುಂದರನಾದ ಶ್ರೀಹರಿಯ ಥಳ ಥಳ ಹೊಳೆಯುವ ಹಲ್ಲುಗಳ ಕಾಂತಿಯೇ ಮಿಂಚಿನಂತೆಯೂ ಗಂಭೀರವಾದ ಭಾಷಣವೇ ಗರ್ಜನೆಯಂತೆಯೂ ಶೋಭಿಸುತಲಿದ್ದವು. ॥ ೨೮ ॥ ಭಗವಾನ್ ಅನಂತರೂಪೀ ಉದಾರ ಮೇಘವು ಕೃಪಾದೃಷ್ಟಿಯನ್ನು ಕರೆದು ಅರ್ಜುನರೂಪಿಯಾದ ಸುಡುವ ಅರಣ್ಯವನ್ನು ಹೇಗೆ ಶಾಂತಮಾಡಿತು ಮತ್ತು ಅವನಲ್ಲಿ ಜ್ಞಾನದ ಅಂಕುರವು ಹೇಗೆ ಹುಟ್ಟಿತು, ॥ ೨೯ ॥ ಇದೇ ಮೊದಲಾದ ಕಥೆಯನ್ನು ಸಾವಧಾನ ಚಿತ್ತದಿಂದ ಕೇಳಬೇಕೆಂದು ಶ್ರೋತೃಗಳಿಗೆ ಶ್ರೀ ನಿವೃತ್ತಿದಾಸರಾದ ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ॥ ೩೦ ॥

**ಸಂಜಯ ಉವಾಚ—**

**ಏವಮುಕ್ತ್ವಾ ಹೃಷೀಕೇಶಃ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥**

[ **ಸಂಜಯ-ಉವಾಚ-ಏವಮಿತಿ** ] ಐಸೇ ಸಂಜಯ ಅಸೇ ಸಾಂಗತ । ಮ್ಹಣೇ ರಾಯಾ ತೋ ಪಾರ್ಥ । ಪುನರಪಿ ಶೋಕಾಕುಳಿತ । ಕಾಯಬೋಲೇ ॥ ೩೧ ॥ ಆಇಕೇ ಸಖೇದ ಬೋಲೇ ಶ್ರೀಕೃಷ್ಣಾತೇ । ಆತಾ ನಾಳವಾವೆ ತುಮ್ಹೀಮಾತೇ । ಮೀ ಸರ್ವಥಾ ನಜುಂಝೋ ಏಥೇ । ಭರವಸೇನಿ ॥ ೩೨ ॥ ಐಸೇ ಯೇಕಿಹೇಳಾ ಬೋಲಿಲಾ । ಮಗ ಮೌನ ಧರೂನಿ ಠೇಲಾ । ತೇಥ ಶ್ರೀ ಕೃಷ್ಣ ವಿಸ್ಮಯೋ ಪಾವಲಾ । ದೇಖೋನಿ ತಯಾತೇ ॥ ೩೩ ॥

**ಅರ್ಥ—** ಈ ಪ್ರಕಾರ ಧೃತರಾಷ್ಟ್ರ ರಾಜನಿಗೆ ಹೇಳಿ ಸಂಜಯನು ಮತ್ತೆ ಹೀಗೆ ಅನ್ನುತ್ತಾನೆ— ರಾಜನೇ, ಪುನಃ ಪಾರ್ಥನು ದುಃಖದಿಂದ ಕೂಡಿದ ಅಂತಃಕರಣವುಳ್ಳವನಾಗಿ ಏನು ಹೇಳಿದನು. ॥ ೩೧ ॥ ಅದನ್ನು ಕೇಳು ಅವನು ದುಃಖದಿಂದ ಶ್ರೀ ಕೃಷ್ಣನಿಗೆ ಅನ್ನುತ್ತಾನೆ ದೇವಾ, ನೀವು ಯುದ್ಧಮಾಡುವ ವಿಷಯದಲ್ಲಿ ನನಗೆ ಯಾವ ಪ್ರಕಾರದಿಂದಲೂ ಆಗ್ರಹ ಮಾಡಬಾರದು. ಈ ರಣಾಂಗಣದಲ್ಲಿ ನಾನು ನಿಸ್ಸಂದೇಹವಾಗಿ ಯುದ್ಧವನ್ನು ಮಾಡುವದಿಲ್ಲ. ॥೩೨॥ ಹೀಗೆ ಒಂದೇವೇಳೆ ಮಾತನಾಡಿ ಆ ಮೇಲೆ ಏನೂ ಮಾತನಾಡದೇ ಅವನು ಸ್ತಬ್ಧನಾಗಿ ನಿಂತುಬಿಟ್ಟನು. ಇಂಥ ಸ್ಥಿತಿಯಲ್ಲಿ ಅರ್ಜುನನ್ನು ನೋಡಿ ಭಗವಂತನಿಗೆ ಬಹಳೇ ಆಶ್ಚರ್ಯವೆನಿಸಿತು. ॥ ೩೩ ॥

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂವಚಃ ॥ ೧೦ ॥**

**[ ತಮುವಾಚೇತಿ ]** ಮಗ ಆಪುಲಾ ಚಿತ್ತೀ ವ್ಹಣೆ । ಏಥ ಹೇಕಾಯಿ ಆದರಿಲೇಯೇಣೇ ॥ ಅರ್ಜುನ ಸರ್ವಥಾ ಕಾಹೀ ನೇಣೇ । ಕಾಯಕೀಜೇ ॥ ೮೪ ॥ ಹಾ ಉಮಜೇ ಆತಾ ಕವಣೇ ಪರೀ । ಕೈಸೇನಿ ಧೀರ ಸ್ವೀಕಾರೀ । ಜೈಸಾ ಗ್ರಹಾತೇ ಪಂಚಾಕ್ಷರೀ । ಅನುಮಾನೀ ಕಾ ॥ ೮೫ ॥ ನಾ ತರೀ ಅಸಾಧ್ಯದೇಖೋನಿ ವ್ಯಾಧಿ ! ಅಮೃತಾಸಮ ದಿವ್ಯ ಔಷಧೀ । ವೈದ್ಯ ಸೂಚೀ ನಿರವಧಿ । ನಿದಾನೀಚೀ ॥ ೮೬ ॥ ತೈಸೇ ವಿವರೀತ ಅಸೇ ಶ್ರೀ ಅನಂತ । ತಯಾ ದೋಹೀ ಸೈನ್ಯಾ ಆಂತ । ಜಯಾ ಪರೀ ಪಾರ್ಥ । ಭ್ರಾಂತಿ ಸಾಂಡೀ ॥ ೮೭ ॥ ತೇ ಕಾರಣ ಮನೇ ಧರಿಲೇ । ಮಗ ಸರೋಷ ಬೋಲೋ ಆದರಿಲೇ । ಜೈಸೇ ಮಾತೇಚ್ಯಾ ಕೋಪೀ ಥೋಕಲೆ । ಸ್ನೇಹ ಆಥೀ ॥ ೮೮ ॥ ಕೀ ಔಷ ಧಾಚಿಯಾ ಕಡವಟಪಣೀ । ಜೈಸೀ ಅಮೃತಾಚೀ ಪುರವಣೀ । ತೇ ಆಹಾಚ ನದಿಸೆ ಪರಿ ಗುಣೀ । ಪ್ರಕಟಹೋಯ ॥ ೮೯ ॥ ತೈಸೀ ವರೀ ವಂ ಪಾಹತಾ ಉದಾಸೇ । ಆತ ತರೀ ಅತಿ ಸುರಸೇ । ತಿಯೇ ವಾಕ್ಯೇ ಹೃಷೀ ಕೇಶೇ ಬೋಲೋ ಆದರಿಲೀ ॥ ೯೦ ॥

**ಅರ್ಥ**— ಶ್ರೀ ಕೃಷ್ಣನು ತನ್ನ ಮನಸಿನಲ್ಲಿ ಅನ್ನುತ್ತಾನೆ- ಈ ಪ್ರಸಂಗದಲ್ಲಿ ಅರ್ಜುನನ ಮನಸಿನಲ್ಲಿ ಉದ್ಭವಿಸಿದು ದಾರೂ ಏನೆಂಬುದು ಯಾರಿಗೆ ಗೊತ್ತು ? ಇವನಿಗೆ ಏನೂ ತಿಳಿಯುವದಿಲ್ಲವಲ್ಲ ! ಇದಕ್ಕೆ ಉಪಾಯವೇನು ? ॥ ೮೪ ॥ ಇವನಿಗೆ ಯಾವ ಉಪಾಯದಿಂದ ತಿಳುವಳಿಕೆಯು ಉಂಟಾದೀತು ? ಏನು ಉಪಾಯವನ್ನು ಮಾಡುವದರಿಂದ ಇವನಿಗೆ ಧೈರ್ಯ ಉಂಟಾದೀತು ? " ಪಂಚಾಕ್ಷರಿಯು ಭೂತ ಬಾಧೆಯನ್ನು ಹೊಡೆದೋಡಿಸಲು ವಿಚಾರಮಾಡುವಂತೆ ॥೮೫॥ ಅಸಾಧ್ಯರೋಗವನ್ನು ನೆಟ್ಟಗೆ ಮಾಡಲು ವೈದ್ಯನು ಗುಣದಾಯಕವಾದ ಅಮೃತತುಲ್ಯವಾದ ದಿವ್ಯೌಷಧಿಯನ್ನು ತತಕ್ಷಣವೇ ಉಪಯೋಗಿಸುವಂತೆ, ॥ ೮೬ ॥ ಆ ಎರಡೂ ಸೈನ್ಯಗಳ ಮಧ್ಯದಲ್ಲಿ ನಿಂತಿರುವ ಭಗವಾನ್ ಶ್ರೀ ಕೃಷ್ಣ ಪರಮಾತ್ಮನು ಅರ್ಜುನನ ಮೋಹವನ್ನು ದೂಡಲು ವಿಚಾರಮಾಡುತ್ತಿದ್ದನು. ಅದು ಹೇಗೆಂದರೆ- ಯಾವ ಕಾರಣ ದಿಂದ ಇಷ್ಟು ಮೋಹವು ( ದುಃಖವು ) ಇವನಲ್ಲಿ ಉತ್ಪನ್ನವಾಗಿರುವದು ಮತ್ತು ಆ ಭ್ರಾಂತಿಯನ್ನು ಹೇಗೆ ಬಿಡಿಸುವದು ? ॥ ೮೭ ॥ ಅಜ್ಞಾನವೇ ಭ್ರಾಂತಿಯ ಕಾರಣವೆಂಬುದನ್ನು ಮನಸಿನಲ್ಲಿ ತಂದು ಆ ಮೇಲೆ ಶ್ರೀ ಕೃಷ್ಣನು ಕ್ರೋಧವುಳ್ಳವನಾಗಿ ಭಾಷಣಮಾಡಲಾರಂಭಿಸಿದನು. ಮೇಲೆ ತೋರದಿದ್ದರೂ ತಾಯಿಯ ಕ್ರೋಧದಲ್ಲಿ ಗುಪ್ತರೂಪ ದಿಂದ ಸ್ನೇಹವು ತುಂಬಿರುವಂತೆ ॥ ೮೮ ॥ ಕಹಿಯಾದ ಔಷಧದಲ್ಲಿ ಪೂರ್ಣವಾಗಿ ಗುಣಹೊಂದುವ ಅಮೃತವಿ ರುವಂತೆ ಮೇಲಿಂದಲೇ ನೋಡಿದರೆ ಆ ಔಷಧದಲ್ಲಿ ಏನೂ ಕಾಣದೇ ಇದ್ದರೂ, ಪರಿಣಾಮದಲ್ಲಿ ಗುಣಕೊಡುವಂಥಾ ದ್ದೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ॥ ೮೯ ॥ ಅದರಂತೆ ಬಹಿರಂಗವಾಗಿ ನೋಡಿದರೆ ಕ್ರೋಧಯುಕ್ತನಂತೆ ತೋರಿದರೂ ಅಂತರಂಗದಲ್ಲಿ ಶ್ರೀಕೃಷ್ಣನ ಕ್ರೋಧದೋಳ್ ಪ್ರೇಮಪೂರ್ಣತೆಯಿದ್ದಿತು. ಹೀಗೆ ಒಳಗೆ ಅತಿ ಪ್ರೀತಿ ಯನ್ನು ತುಂಬಿಕೊಂಡಿರುವ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಮಾಡಲಾರಂಭಿಸಿದನು. ॥ ೯೦ ॥

**ಶ್ರೀ ಭಗವಾನುವಾಚ —**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ॥ ೧೧ ॥**

**[ ಶ್ರೀ ಭಗವಾನುವಾಚ ]** ಮಗ ಅರ್ಜುನಾತೆ ವ್ಹಣಿತಲೇ । ಆಮ್ಹೀ ಆಜೀ ಹೇ ನವಲ ದೇಖಿಲೆ । ಜೇ ತೂವಾ ಏಥ ಆದರಿಲೇ । ಮಾಝಾರೀಚಿ ॥ ೯೧ ॥ ತೂ ಜಾಣತಾ ತರೀ ಮ್ಹಣ ವಿಸೀ । ಪರೀ ನೇಣಿವೇತೇ ನ ಸಾಂಡಿಸೀ । ಆಣಿ ಶಿಕವೂ ಮ್ಹಣೋತರೀ ಬೋಲಸೀ । ಬಹು

ಸಾಲ ನೀತಿ ॥ ೯೨ ॥ ಜಾತ್ಯಂಧಾ ಲಾಗೇ ಪಿಸೇ । ಮಗ ತೇ ಸೈರಾ ಧಾವೇ ಜೈಸೇ । ತುಝೇ ಶಾಹಣಪಣ ತೈಸೇ । ದಿಸತಸೇ ॥ ೯೩ ॥ ತೂ ಆಪಣಾಪೇ ತರೀ ನೇಣಸೀ । ಪರೀಯಾ ಕೌರವಾತೇ ಶೋಚೂ ಪಾಹಾಸೀ । ಹಾ ಬಹು ವಿಸ್ಮಯು ಆಮ್ಹಾಸೀ ಪುಢತಪುಢತೀ ॥ ೯೪ ॥ ತರೀ ಸಾಂಗ ಪಾ ಅರ್ಜುನಾ । ತುಜ ಪಾಸೂನಿ ಸ್ಥಿತೀಯಾ ತ್ರಿಭುವನಾ । ಹೇ ಅನಾದಿ ವಿಶ್ವರಚನಾ । ತೇ ಲಟಿಕೇ ಕಾಯೀ ॥ ೯೫ ॥ ಏಕ ಸಮರ್ಥ ಏಕ ಆಥೀ । ತಯಾಪಾಸೂನಿ ಭೂತೇ ಹೋತೀ । ತರೀ ಹೇ ವಾಯಾಂಚಿ ಕಾಯ ಬೋಲತೀ । ಜಗಾ ಮಾಜೀ ॥ ೯೬ ॥ ಹೋಕಾ ಸಾಂಪ್ರತ ಐಸೇ ಜಾಹಾಲೇ । ಜೇ ಹೇ ಜನ್ಮಮ್ರುತ್ಯೂ ತುವಾ ಸೃಜಿಲೇ । ಆಣಿ ನಾಶ ಪಾವೇ ನಾಶಿಲೇ । ತುಝೇನಿ ಕಾಯೀ । ೯೭ ॥ ತೂಭ್ರಮಲೇ ಪಣೇ ಅಹಂಕೃತೀ । ಯಾಸೀ ಘಾತ ನ ಧರಿಸೀ ಚಿತ್ತೀ । ತರೀ ಸಾಂಗೇ ಕಾಯೀ ಹೇ ಹೋತೀ । ಚಿರಂತನ ॥ ೯೮ ॥ ಕೀ ತೂ ಏಕ ವಧಿತಾ । ಆಣಿ ಸಕಳ ಲೋಕ ಹಾಮರತಾ । ಐಸೀ ಭ್ರಾಂತೀ ಝಣೇ ಚಿತ್ತಾ । ಯೇವೋ ದೇಸೀ ॥ ೯೯ ॥ ಅನಾದಿ ಸಿದ್ಧ ಹೇ ಆಘವೇ । ಹೋತ ಜಾತ ಸ್ವಭಾವೇ । ತರೀ ತುವಾಕಾ ಶೋಚಾವೆ । ಸಾಂಗೇ ಮಜ ॥ ೧೦೦ ॥ ಪರೀ ಮೂರ್ಖಪಣೇ ನೇಣಸೀ । ನ ಚಿಂತಾವೇ ತೇ ಚಿಂತಿಸೀ । ಆಣಿ ತೂಚಿ ನೀತಿ ಸಾಂಗಸೀ ಆಮ್ಹಾಪ್ರತಿ ॥ ೧೦೧ ॥ ದೇಖೇ ವಿವೇಕೀ ಜೇ ಹೋತೀ । ತೇ ದೋಹೀ ತೇಹೀ ನ ಶೋಚಿತೀ ಜೇ ಹೋಯ ಜಾಯ ಹೇ ಭ್ರಾಂತೀ । ಮ್ಹಣವೂನಿಯಾ ॥ ೧೦೨ ॥

**ಅರ್ಥ—** ಶ್ರೀಕೃಷ್ಣನು ಅರ್ಜುನನಿಗೆ ಅನ್ನುತ್ತಾನೆ—ಈ ಯುದ್ಧಸಮಯದಲ್ಲಿ ನೀನು ನಡುವೆ ಇದನ್ನೇನು ಪ್ರಾರಂಭಿಸಿದೆ? ಈ ದಿವಸ ಇದೊಂದು ಆಶ್ಚರ್ಯವೇ ನನ್ನ ದೃಷ್ಟಿಗೆ ಬಿದ್ದಿದೆ. ॥ ೯೧ ॥ ಪಾರ್ಥಾ, ನಿನ್ನೊಳಗೇ ನೀನು ಒಳ್ಳೇ ಜ್ಞಾನಿಯೆಂದು ತಿಳಿದಿರುವಿ. ಆದರೆ ಅಜ್ಞಾನವನ್ನು ಬಿಡಲೊಲ್ಲೆ. ಒಳ್ಳೆಯದು ಯಾವದಾದರೂ ಒಂದು ಮಾತು ನಿನಗೆ ಕಲಿಸಬೇಕೆಂದು ಯೋಚಿಸಿದರೆ ನೀನು ನನಗೇ ಜಾಣತನದ ಮಾತನ್ನು ಸೂಚಿಸುತ್ತಿರುವಿ. ॥ ೯೨ ॥ ಹುಟ್ಟುಗುರುಡನಿಗೆ ಹುಚ್ಚು ಹಿಡಿದ ಮೇಲೆ ಅವನು ಹೇಗೆ ದಿಕ್ಕು ತಪ್ಪಿ ಓಡಾಡುತ್ತಾನೆಯೋ, ಅದರಂತೇ ನಿನ್ನ ಪಾಂಡಿತ್ಯದ ಸ್ಥಿತಿಯೂ ಆಗಿದೆ. ॥ ೯೩ ॥ ನೀನು ನಿನ್ನ ಸ್ವರೂಪವನ್ನು ತಿಳಿದುಕೊಳ್ಳದೇ ಕೌರವರ ದೆಸೆಯಿಂದ ಶೋಕ ಮಾಡುತ್ತ ಕುಳಿತಿರುವಿ. ಈ ವಿಷಯವಾಗಿ ನಮಗೆ ಮೇಲಿಂದ ಮೇಲೆ ಆಶ್ಚರ್ಯವೆನಿಸುತ್ತದೆ. ॥ ೯೪ ॥ ಆದರೆ ಅರ್ಜುನಾ ನೀನೇ ಹೇಳು ನೋಡುವಾ, ಈ ಅನಾದಿ ಸಿದ್ಧವಾದ ವಿಶ್ವರಚನೆಯು ಅಸತ್ಯವೋ? ಈ ಮೂರು ಲೋಕದ ಪಾಲನಕರ್ತನು ನೀನೇ ಇರುವೆಯಾ ಹೇಗೆ? ॥ ೯೫ ॥ ಈ ಜಗತ್ತಿನಲ್ಲಿ ಯಾವನೋ ಒಬ್ಬ ಸಮರ್ಥ ಈಶ್ವರನಿದ್ದಾನೆ. ಅವನಿಂದಲೇ ಪ್ರಾಣಿಮಾತ್ರದ ಮತ್ತು ಪೃಥ್ವಿ, ಆಪ, ತೇಜ, ವಾಯು, ಆಕಾಶ ಇವುಗಳ ಉತ್ಪತ್ತಿಯಾಗುತ್ತದೆ, ಎಂದು ಜಗತ್ತು ಕೂಗುವ ಮಾತೂ ಅಸತ್ಯವೆನ್ನುವೆಯಾ? ॥ ೯೬ ॥ ಜನ್ಮಮೃತ್ಯುಗಳೂ ನಿನ್ನಿಂದಲೇ ಉತ್ಪನ್ನವಾಗಿರುವವೇ? ನಿನ್ನ ಚಿತ್ತಮಾತ್ರದಿಂದಲೇ ಅವೆಲ್ಲವೂ ನಾಶವಾಗುವವೆಂದು ತಿಳಿದಿರುವೆಯಾ? ಸಾಂಪ್ರತ ಈ ಎಲ್ಲ ಕಾರ್ಯಗಳು ನಿನ್ನಿಂದಲೆ ಆಗುತ್ತಿರುವವೆಂಬದನ್ನು ನೀನು ಸಿದ್ಧ ಮಾಡಿದಂತಾಯಿತು. ॥ ೯೭ ॥ ನೀನು ಭ್ರಮೆಯಿಂದ ಅಹಂಕಾರಯುಕ್ತನಾಗಿ ಕೌರವರ ನಾಶಮಾಡುವದಕ್ಕೆ ನಿನ್ನ ಮನಸು ಒಪ್ಪದಿದ್ದರೂ ಈ ಕೌರವರು ಚಿರಂಜೀವಿಗಳಾಗುವರೇನು ಹೇಳು ನೋಡುವಾ? ॥ ೯೮ ॥ "ನಾನೇ ಒಬ್ಬನು ಕೊಲ್ಲುವವನು. ಉಳಿದವರೆಲ್ಲರೂ ಮಾತ್ರ ಸಾಯುವವರು" ಎಂಬ ಭ್ರಾಂತಿಯನ್ನು ನಿನ್ನ ಚಿತ್ತದಲ್ಲಿ ತರಬೇಡ ಕಂಡೆಯಾ? ॥ ೯೯ ॥ ಪಾರ್ಥಾ, ಈ ಅನಾದಿಸಿದ್ಧವಾದ ಮಾತು ತನ್ನಿಂದ ತಾನೇ ಉಂಟಾಗುತ್ತಿರುತ್ತದೆ. ಆ ವಿಷಯದಲ್ಲಿ ನೀನು ವ್ಯರ್ಥವಾಗಿ ದುಃಖಿಸುವ ಕಾರಣ ವೇನು? ನನಗೆ ಹೇಳು. ॥೧೦೦॥ ಆದರೆ ಮೂರ್ಖತನದ ಮೂಲಕವಾಗಿ ನಿನಗೆ ಇದು ತಿಳಿಯುವದಿಲ್ಲ. ನೀನು ಯಾವ ಮಾತಿನ ಚಿಂತೆಯನ್ನು

ಮಾಡಬಾರದೋ ಆ ಮಾತಿನ ಬಗ್ಗೆ ಚಿಂತೆಯನ್ನು ಮಾಡಿ ವ್ಯರ್ಥವಾಗಿ ದುಃಖಿಸುತ್ತಿರುವಿ. ಅಲ್ಲದೇ ಮತ್ತೆ ನಮಗೇ ಪಂಡಿತತನದ ಉಪದೇಶವನ್ನು ಮಾಡುತ್ತಿರುವೆ. ॥ ೧೦೧ ॥ ಹೀಗೆ ನೋಡು ವಿಚಾರವಂತರಿರುವವರು ಜನ್ಮ-ಮೃತ್ಯುಗಳು ಭ್ರಾಂತಿಯೆಂದು ತಿಳಿದು ಎರಡೂ ಮಾತಿನ ಬಗ್ಗೆ ದುಃಖವನ್ನು ಪಡಲಾರರು ॥ ೧೦೨ ॥

**ನ ತ್ವೇವಾಹಂ ಜಾತು ನಾಸಂ ನತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ ॥ ೧೨ ॥**

**[ ನತ್ವೇವಾಹಮಿತಿ ]** ಅರ್ಜುನಾ ಸಾಂಗೇನ ಆಇಕ । ಏಥ ಆಮ್ಹಿ ತುಮ್ಹೀ ದೇಖ । ಆಣಿ ಹೇ ಭೂಪತಿ ಅಶೇಖ । ಆದಿ ಕರೂನೀ ॥ ೩ ॥ ನಿತ್ಯತಾ ಐಸೇಚಿ ಅಸೋನಿ । ನಾತರೀ ನಿಶ್ಚಿತ ಕ್ಷಯಾ ಜಾವೂನಿ । ಹೇ ಭ್ರಾಂತಿ ವೇಗಳೀ ಕರೂನಿ । ದೋನ್ಹೀ ನಾಹೀ ॥ ೪ ಹೇ ಉಪಜೇ ಆಣಿ ನಾಶೇ । ತೇ ಮಾಯಾ ವಶೇ ದಿಸೇ । ಯೇರ್ಹವೀ ತತ್ವತಾ ವಸ್ತುಜೇ ಅಸೇ । ತೇ ಅವಿನಾಶಚಿ ॥ ೫ ॥ ಜೈಸೇ ಪವನೇ ತೋಯ ಹಾಲವಿಲೇ । ಆಣಿ ತರಂಗಾಕಾರ ಜಾಹಾಲೆ । ತರೀ ಕವಣ ಕೇ ಜನ್ಮಲೇ । ಮ್ಹಣೋಯೇ ತೆಥ ॥ ೬ ॥ ತೇಚಿ ವಾಯೂಚೆ ಸ್ಫುರಣ ರೇಲೇ । ಆಣಿ ಉದಕ ಸಹಜ ಸಪಾಟ ಜಾಹಾಲೇ । ತರೀ ಆತಾ ಕಾಯ ನಿಮಾಲೇ । ವಿಚಾರೀ ಪಾ ॥ ೭ ॥

**ಅರ್ಥ**— ಪಾರ್ಥಾ, ಇನ್ನೂ ಹೇಳುತ್ತೇನೆ ಕೇಳು. ನೀವೂ ನಾವೂ ಮತ್ತು ಎಲ್ಲರಾಜರೂ ಈ ಸ್ಥಳದಲ್ಲಿ ಕೂಡಿದವರೆಲ್ಲರೂ ॥ ೩ ॥ ಹೀಗೆ ಶಾಶ್ವತವಾಗಿ ಇರುವರು ಇಲ್ಲವೇ ನಾಶಹೊಂದುವರೆಂಬ ಭ್ರಮೆಯನ್ನು ಬಿಟ್ಟು ಬಿಟ್ಟರೆ ಈ ಎರಡೂ ಮಾತುಗಳು ನಿಜವಾದವು ಇರುವದಿಲ್ಲ. ॥ ೪ ॥ ಯಾಕೆಂದರೆ 'ಉತ್ಪತ್ತಿ, ಅಥವಾ ನಾಶ' ಇವುಗಳು ನಮ್ಮ ಕಣ್ಣಿಗೆ ಕಾಣುತ್ತಿರುವದೇನೋ ನಿಜ ಆದರೆ ಅವೆಲ್ಲವುಗಳೂ ಮಾಯಾ ಯೋಗದಿಂದಲೇ ಹಾಗೆ ಕಾಣುವವು. ನಿಜವಾಗಿ ನೋಡಿದರೆ ಆತ್ಮವು ಅವಿನಾಶಯಾಗಿರುತ್ತದೆ. ॥ ೫ ॥ ಗಾಳಿಯಿಂದ ನೀರು ಅಲ್ಲಾಡಿ ತೆರೆಗಳು ಉತ್ಪನ್ನವಾಗುವವು, ಆದರೆ ಅಲ್ಲಿ ಏನು ಹುಟ್ಟಿದವೆಂದು ತಿಳಿಯಬೇಕು ? ॥ ೬ ॥ ಇಲ್ಲವೇ ಗಾಳಿಯು ಸ್ತಬ್ಧವಾದ ಮೇಲೆ ನೀರು ಸ್ಥಿರವಾಗಿ ನಿಂತರೆ ಆ ಸ್ಥಳದಲ್ಲಿ ಯಾವುದು ನಾಶವಾಗಿರುವದು ? ಇದರ ವಿಚಾರವನ್ನು ಮಾಡು. ॥ ೭ ॥

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥ ೧೩ ॥**

**[ ದೇಹಿನ ಇತಿ ]** ಆ ಇಕೇ ಶರೀರತರೀ ಏಕ । ಪರೀ ವಯಸಾಭೇದೇ ಅನೇಕ । ಹೇ ಪ್ರತ್ಯಕ್ಷಚಿ ದೇಖ । ಪ್ರಮಾಣತೂ ॥ ೮ ॥ ಏಥ ಕೌಮಾರತ್ವೇದಿಸೇ । ಮಗ ತಾರುಣ್ಯೀ ತೇ ಭ್ರಂಶೇ । ಪರೀ ದೇಹಚೀ ನ ನಾಶೇ । ಏಕೇಕಾಸವೆ ॥ ೯ ॥ ತೈಸೀ ಚೈತನ್ಯಾಚ್ಯಾ ಠಾಯೀ । ಇಯೇ ಶರೀರಾಂತರೇ ಹೋತೀ ಜಾತೀ ಪಾಹೀ । ಐಸೇ ಜಾಣೇ ತಯಾನಾಹೀ । ವ್ಯಾಮೋಹ ದುಃಖ ॥೧೧೦॥

**ಅರ್ಥ**— ಪಾರ್ಥಾ, ಹೀಗೆನೋಡು. ಶರೀರವು ಒಂದೇ ಆಗಿರುವದು. ಆದರೆ ವಯಪರತ್ವದಿಂದ ಅದರಲ್ಲಿಯೂ ಸಹ ಭೇದವು ದೃಷ್ಟಿಗೆ ಬೀಳುವದೆಂಬುವದು ಪ್ರತ್ಯಕ್ಷ ಪ್ರಮಾಣವಾಗಿರುವದು. ॥ ೮ ॥ ಅದೇ ಶರೀರಕ್ಕೆ ಬಾಲ್ಯವು ಪ್ರಾಪ್ತವಾದದ್ದನ್ನು ಕಾಣುತ್ತೇವೆ. ಅದೇ ಬಾಲ್ಯವೂ ಬರಬರುತ್ತ ಕುಮಾರ ಭಾವದಲ್ಲಿ ಪರಿಣಮಿಸುತ್ತದೆ. ಬಾಲ್ಯವು ಹೋಗಿ ಯೌವನವು ಪ್ರಾಪ್ತವಾಗುತ್ತದೆ. ಯೌವನವು ಕಳೆದನಂತರ ವೃದ್ಧಾಪ್ಯವು ಬರುತ್ತದೆ. ಆದರೆ ಪ್ರತಿಯೊಂದು ಅವಸ್ಥಾತ್ರಯದೊಡನೆ ಶರೀರವು ಇಲ್ಲದಂತಾಗುವದಿಲ್ಲ. ॥ ೯ ॥ ಅದೇ ಪ್ರಕಾರ ಆತ್ಮದ ಸ್ಥಳದಲ್ಲಿ ಅನಂತ ಶರೀರಗಳು ಆಗುತ್ತವೆ ಹೋಗುತ್ತವೆ. ಹೀಗೆ ತಿಳಿಯುವ ಜ್ಞಾನಿಗಳಿಗೆ ನಿನ್ನಂತೆ ಮೋಹದಿಂದ ದುಃಖವು ಉಂಟಾಗುವದಿಲ್ಲ. ॥ ೧೧೦ ॥

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣ ಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥**

**[ ಮಾತ್ರಾಸ್ಪರ್ಶಾ ಇತಿ ]** ಏಥ ನೇಣವಯಾ ಹೇಚಿ ಕಾರಣ । ಜೇ ಇಂದ್ರಿಯಾ ಆಧೀನ ಪಣ । ತಿಹೀ ಆಕಳಿಜೆ ಅಂತಃಕರಣ । ಮ್ಹಣಊನಿ ಭ್ರಮೇ ॥೧೧॥ ಇಂದ್ರಿಯೇ ವಿಷಯ ಸೇವಿತೀ । ತೇಥ ಹರ್ಷಶೋಕ ಉಪಜತೀ । ತೇ ಅಂತರ ಆಪ್ಲವಿತೀ । ಸಂಗೇಯೋಣೇ ॥೧೨॥ ಜಯಾ ವಿಷಯಾಚ್ಯಾ ಠಾಯೀ । ಏಕ ನಿಶ್ಚಿತಾ ಕಹೀ ನಾಹೀ । ತೇಥ ದುಃಖ ಆಣಿ ಕಾಹೀ । ಸುಖಹೀ ದಿಸೇ ॥೧೩॥ ದೇಖೇ ಶಬ್ದಾಚೀ ವ್ಯಾಪ್ತಿ । ನಿಂದಾ ಆಣಿ ಸ್ತುತಿ । ತೇಥ ದ್ವೇಷಾದ್ವೇಷ ಉಪಜತೀ । ಶ್ರವಣ ದ್ವಾರೇ ॥೧೪॥ ಮೃದು ಆಣಿ ಕಠಿಣ । ಹೇ ಸ್ಪರ್ಶಾಚೆ ದೋನೀ ಗುಣ । ಜೇ ವಪೂಚೇನಿ ಸಂಗೇ ಕಾರಣ । ಸಂತೋಷ ಖೇದಾ ॥೧೫॥ ಭ್ಯಾಸುರ ಆಣಿ ಸುರೇಖ । ಹೇ ರೂಪಾಚೆ ಸ್ವರೂಪ ದೇಖ । ಜೇ ಉಪಜವೀ ಸುಖದುಃಖ । ನೇತ್ರದ್ವಾರೇ ॥೧೬॥ ಸುಗಂಧು ಆಣಿ ದುರ್ಗಂಧು । ಹಾ ಪರಿಮಳಾ ಚಾ ಭೇದು । ಜೋ ಘ್ರಾಣಸಂಗೇ ವಿಷಾದು । ತೋಷು ದೇತಾ ॥೧೭॥ ತೈಸಾಚಿ ದ್ವಿವಿಧರಸು । ಉಪಜವೀ ಪ್ರೀತಿ ತ್ರಾಸು । ಮ್ಹಣಊನಿ ಹಾ ಅಪಭ್ರಂಶು । ವಿಷಯಸಂಗು ॥೧೮॥ ದೇಖೇ ಇಂದ್ರಿಯಾ ಆಧೀನ ಹೋಇಜೆ । ತೈ ಶಿತೋಷ್ಣಾ ತೇ ಪಾವಿಜೆ । ಆಣಿ ಸುಖದುಃಖೀ ಆಕಳಿಜೇ । ಆಪಣಪೇ ॥೧೯॥ ಯಾ ವಿಷಯಾ ವಾಚೂನಿ ಕಾಹೀ । ಆಣೀಕ ಸರ್ವಥಾ ರಮ್ಯ ನಾಹೀ । ಐಸಾ ಸ್ವಭಾವಚಿ ಪಾಹೀ । ಇಂದ್ರಿಯಾಚಾ ॥೨೦॥ ಹೇ ವಿಷಯ ತರೀ ಕೈಸೇ । ರೋಹಿಣೀಚೆ ಜಳಜೈಸೇ । ಕಾ ಸ್ವಪ್ನೀಚಾ ಆಭಾಸೇ । ಭದ್ರಜಾತಿ ॥೨೧॥ ದೇಖೇ ಅನಿತ್ಯ ತೇ ಯಾಪರೀ । ಮ್ಹಣವೂನಿ ತೂ ಅವ್ಹೇರೀ । ಹಾ ಸರ್ವಥಾ ಸಂಗುನಧರೀ । ಧನುರ್ಧರಾ ॥೨೨॥

**ಅರ್ಥ—** ಮನುಷ್ಯನು ಇಂದ್ರಿಯುಗಳ ಆಧೀನವಾಮುದರಿಂದ ಅವನಿಗೆ ಇದೇನೂ ತಿಳಿಯುವದಿಲ್ಲ. ಇಂದ್ರಿಯುಗಳು ಮನುಷ್ಯನ ಅಂತಃಕರಣವನ್ನು ವಿಷಯದ ಕಡೆಗೇ ಜಗ್ಗುತ್ತವೆ. ಆಮುದರಿಂದ ಹೀಗೆ ಭ್ರಮೆಯುಂಟಾಗುತ್ತದೆ. ॥೧೧॥ ಇಂದ್ರಿಯುಗಳು ವಿಷಯ ಸೇವನೆಮಾಡುವದರಿಂದ ಸುಖದುಃಖಗಳು ಉಂಟಾಗುತ್ತವೆ. ಆ ಕಾರಣದ ದೆಸೆಯಿಂದ ಅಂತಃಕರಣವು ಸುಖದುಃಖದಲ್ಲಿ ಅಂಟಿಕೊಳ್ಳುತ್ತದೆ. ॥೧೨॥ ಶಬ್ದಾದಿಕ ವಿಷಯದಲ್ಲಿ ಒಂದೇ ಸ್ಥಿತಿಯು ಎಂದೂ ಇರುವದಿಲ್ಲ. ಅಲ್ಲಿ ಕಾಲಾನುಸಾರವಾಗಿ ಸುಖ ಮತ್ತು ದುಃಖ ಎರಡೂ ಭಾಸವಾಗುತ್ತವೆ. ॥೧೩॥ ಇನ್ನು ಮೇಲೆ ಶಬ್ದ ಮುಂತಾದ ವಿಷಯಗಳ ವ್ಯಾಪ್ತಿಯನ್ನು ನೋಡಿರಿ. ಒಂದುವೇಳೆ ಕಿವಿಯಿಂದ ನಿಂದೆಯನ್ನು ಕೇಳಿದರೆ ವೈರತ್ವವು ಉದ್ಭವಿಸುತ್ತದೆ. ಸ್ತುತಿಯನ್ನು ಕೇಳಿದ ಕೂಡಲೇ ಸಮಾಧಾನವಾಗುತ್ತದೆ. ॥೧೪॥ ಸ್ಪರ್ಶ ವಿಷಯದಲ್ಲಿ ಮೃದು ಮತ್ತು ಕಠಿಣ ಎಂಬ ಎರಡು ಭೇದಗಳಿರುತ್ತವೆ. ಆದರೆ ಅವು ತ್ವಚೆಯ ಸ್ಥಳದಲ್ಲಿ ಭಾಸವಾದ ಕೂಡಲೆ ಸುಖ ದುಃಖಗಳು ಉಂಟಾಗುತ್ತವೆ ॥೧೫॥ ಅದರಂತೆ ಕುರೂಪ ಮತ್ತು ಸುರೂಪವೂ ಎಂಬ ಈ ಎರಡು ಭೇದಗಳು ರೂಪದ ವಿಷಯದಲ್ಲಿ ಇರುತ್ತವೆ. ಆದರೆ ಆ ರೂಪಗಳನ್ನು ಕಣ್ಣಿನಿಂದ ನೋಡಿದ ಕೂಡಲೆ ಸುಖದುಃಖಗಳು ಉತ್ಪನ್ನವಾಗುತ್ತವೆ. ॥೧೬॥ ಅದೇ ಪ್ರಕಾರ ಗಂಧ ವಿಷಯದಲ್ಲಿ ಸುಗಂಧ ದುರ್ಗಂಧಗಳೆಂದು ಎರಡು ಭೇದಗಳಿರುತ್ತವೆ. ಇವುಗಳು ಘ್ರಾಣೇಂದ್ರಿಯದ ದ್ವಾರದಿಂದ ಸಂತೋಷ ಮತ್ತು ಅಸಂತೋಷಗಳನ್ನು ಉಂಟುಮಾಡುತ್ತವೆ. ॥೧೭॥ ಹಾಗೆಯೇ ರಸದಲ್ಲಿಯೂ ಎರಡು ಭೇದಗಳು ಒಂದರಿಂದ ಪ್ರೀತಿಯೂ ಮತ್ತೊಂದರಿಂದ ಅಪ್ರೀತಿಯೂ ಉಂಟಾಗುತ್ತದೆ. ಆದುದರಿಂದ ಈ ವಿಷಯಾಸಕ್ತಿಯು ಮುಖ್ಯವಾಗಿ ಮನುಷ್ಯನನ್ನು ಆತ್ಮ ಸ್ವರೂಪದಿಂದ ಭ್ರಷ್ಟನನ್ನಾಗಿ ಮಾಡಿ ಬಿಡುವಂತಹದು ॥೧೮॥ ನೋಡಿರಿ. ಇಂದ್ರಿಯಾಧೀನರಾದವರೆಲ್ಲರೂ ಶೀತೋಷ್ಣದ ಬಾಧೆಗೊಳಪಟ್ಟು ಅವರು ತಮ್ಮಿಂದ ತಾವೇ ( ಆತ್ಮ ಘಾತಕಿಗಳಾಗಿ ) ಸುಖದುಃಖದ ಆಧೀನರಾಗುತ್ತಾರೆ. ॥೧೯॥ ಇಂದ್ರಿಯುಗಳ ದುಶ್ಚೇಷ್ಟಿತವು ಭಯಂಕರ ಚಮತ್ಕಾರವಾದದ್ದಿರುತ್ತದೆ. ಅವರಿಗೆ ಈ ವಿಷಯದ

ಹೊರ್ತು ಈ ಜಗತ್ತಿನಲ್ಲಿ ರಮ್ಯವಾದ ಎರಡನೆಯ ಶ್ರೇಷ್ಠವಾದ ವಸ್ತುವು ದೊರಕಿದರೂ ಅದು ತುಚ್ಛವಾಗಿ ತೋರುತ್ತದೆ ॥ ೧೨೦ ॥ ಈ ವಿಷಯದ ಸ್ವರೂಪವನ್ನು ವಿಚಾರಿಸಿ ನೋಡಿದರೆ ಮೃಗಜಲದಂತೆ ಇಲ್ಲವೆ ಸ್ವಪ್ನದಲ್ಲಿಯ ಐಶ್ವರ್ಯದಂತೆ ಅದು ಭಾಸವಾಗುತ್ತದೆ. ॥ ೨೧ ॥ ಈ ವಿಷಯವು ಅಶಾಶ್ವತವಾಗಿರುತ್ತದೆಂದು ನಿಶ್ಚಯವಾಗಿ ತಿಳಿದುಕೊಳ್ಳು. ಆದುದರಿಂದ ಅರ್ಜುನನೇ ! ಆ ವಿಷಯಗಳ ಸಂಗತಿಯನ್ನು ಸ್ವಲ್ಪವಾದರೂ ಮಾಡದೆ ನೀನು ಅವುಗಳನ್ನು ತ್ಯಾಗಮಾಡು ॥ ೨೨ ॥

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

ಹೇ ವಿಷಯ ಜಯಾತೇ ನಾಕಳಿತೀ । ತಯಾ ಸುಖದುಃಖೇ ದೋನೀ ನ ಪವತೀ । ಆಣಿ ಗರ್ಭ ವಾಸುಸಂಗತೀ । ನಾಹೀ ತಯಾ ॥ ೨೩ ॥ ತೋ ನಿತ್ಯರೂಪಾ ಪಾರ್ಥಾ । ಓಳಖಾವಾ ಸರ್ವಥಾ । ಜೋ ಯಾ ಇಂದ್ರಿಯಾರ್ಥಾ । ನಾಗವೇಚಿ ॥ ೨೪ ॥

**ಅರ್ಥ—** ಯಾವ ಪುರುಷನು ಈ ವಿಷಯಗಳ ಸ್ವಾಧೀನವಾಗುವದಿಲ್ಲವೋ ಅವನು ಸುಖದುಃಖಗಳಿಂದ ಅಲಿಪ್ತನಾಗುವನು. ಮತ್ತು ಅವನಿಗೆ ಗರ್ಭವಾಸದ ಸಂಗತಿಯು ದೊರಕುವದಿಲ್ಲ. ॥ ೨೩ ॥ ಅರ್ಜುನನೇ, ಯಾವನು ಈ ವಿಷಯದ ಬಲೆಯಲ್ಲಿ ಸಿಗುವದಿಲ್ಲವೋ ಅವನೇ ನಾಶರಹಿತನೆಂದು ತಿಳಿ. ॥ ೨೪ ॥

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಸ್ತತ್ತ್ವದರ್ಶಿಭಿಃ ॥ ೧೬ ॥**

ಆತಾ ಅರ್ಜುನಾ ಕಾಹೀ ಏಕ । ಸಾಂಗೇ ನ ಮೀ ಆಇಕ । ಜೇ ವಿಚಾರಪರ ಲೋಕ ವೋಳಖತೀ ॥ ೨೫ ॥ ಯಾ ಉಪಾಧಿ ಮಾಜೀ ಗುಪ್ತ । ಚೈತನ್ಯ ಅಸೆ ಸರ್ವಗತ । ತೇ ತತ್ತ್ವಜ್ಞ ಸಂತ । ಸ್ವೀಕಾರಿತೀ ॥ ೨೬ ॥ ಸಲಿಲೀ ಪಯ ಜೈಸೇ । ಏಕ ಹೋವುನಿ ಮೀನಲೇ ಅಸೇ । ಪರೀ ನಿವಡೂನಿ ರಾಜಹಂಸೇ । ವೇಗಳೇ ಕೀಜೆ ॥ ೨೭ ॥ ಕೀ ಅಗ್ನಿಮುಖೇ ಕಿಡಾಳ । ತೊಡೋನಿಯಾ ಚೋಖಾಳ । ನಿವಡಿತೀ ಕೇವಳ । ಬುದ್ಧಿಮಂತ ॥ ೨೮ ॥ ನಾ ತರಿ ಜಾಣಿ ವೇಚ್ಯಾ ಆಯಣೀ । ಕರಿತಾ ದಧಿ ಕಡಸಣೀ । ಮಗ ನವನೀತ ನಿರ್ವಾಣೀ । ದಿಸೇ ಜೈಸೇ ॥ ೨೯ ॥ ಕೀ ಭೂಸ ಬೀಜ ಏಕವಟ । ಉಪಣಿತಾ ರಾಹೇ ಘನವಟ । ತೇಥ ಉಡೇ ತೇ ಫಲಕಟ । ಜಾಣೋ ಆಲೇ ॥ ೧೩೦ ॥ ತೈಸೇ ವಿಚಾರಿತಾ ನಿರಸಲೇ । ತೇ ಪ್ರಪಂಚು ಸಹಜೇ ಸಾಂಡವಲೇ । ಮಗ ತತ್ತ್ವತಾ ತತ್ತ್ವ ಉರಲೇ । ಜ್ಞಾನಿಯಾಸೀ ॥ ೩೧ ॥ ಮ್ಹಣೋನಿ ಅನಿತ್ಯಾಚ್ಯಾ ಠಾಯೀ । ತಯಾ ಆಸ್ತಿಕ್ಯ ಬುದ್ಧಿ ನಾಹೀ । ನಿಷ್ಕರ್ಷು ದೋಹೀಹೀ । ದೇಖಿಲಾ ಅಸೇ ॥ ೩೨ ॥

**ಅರ್ಥ—** ಅರ್ಜುನನೇ, ಇನ್ನೂ ಒಂದು ಮಾತು ಹೇಳುತ್ತೇನೆ ವಿಚಾರವಂತರಿಗೆ ಮಾತ್ರ ಅದು ತಿಳಿಯುವಂತಹದು. ॥ ೨೫ ॥ ಈ ಜಗತ್ತಿನಲ್ಲಿ ಎಲ್ಲ ಕಡೆಗೂ ವ್ಯಾಪಕವಾದ ಒಂದು ಗುಪ್ತ ಚೈತನ್ಯವು ಇರುತ್ತದೆ. ಅದನ್ನು ತತ್ತ್ವಜ್ಞರು ( ಬ್ರಹ್ಮಸ್ವರೂಪವನ್ನು ತಿಳಿದುಕೊಂಡ ಯಥಾರ್ಥ ಜ್ಞಾನಿಗಳು ) ಯಾವಾಗಲೂ ಸ್ವೀಕಾರಮಾಡುತ್ತಾರೆ. ॥ ೨೬ ॥ ಹಾಲು ಮತ್ತು ನೀರು ಒತ್ತಟ್ಟಿಗೆ ಕೂಡಿಸಿದರೂ ರಾಜಹಂಸಪಕ್ಷಿಯು ಅದನ್ನು ಬೇರೆ ಬೇರೆಯಾಗಿ ಹೇಗೆ ವಿಂಗಡಿಸುತ್ತದೋ, ॥ ೨೭ ॥ ಅಥವಾ ಬುದ್ಧಿವಂತರು ಹೀನ ಬಂಗಾರವನ್ನು ಅಗ್ನಿಯಲ್ಲಿ ಪುಟಪಾಕಿ ಕರಗಿಸಿ ಹೇಗೆ ಶುದ್ಧವಾದ ಚಿನ್ನವನ್ನು ತಯಾರಿಸುವರೋ, ॥ ೨೮ ॥ ಇಲ್ಲವೇ ಚಾತುರ್ಯದಿಂದ ಮೊಸರು ಕಡೆದರೆ ಬೆಣ್ಣೆಯನ್ನು ಹೇಗೆ ಸಿದ್ಧಪಡಿಸಿಕೊಳ್ಳುವರೋ ॥ ೨೯ ॥ ಅಥವಾ ಹೊಟ್ಟು ಮತ್ತು ಧಾನ್ಯ ಒಂದೇ ಕಡೆಗೆ ಕೂಡಿರುವದನ್ನು

ಗಾಳಿಯು ತೂರಿ ಅಸಾರವಾದ ಹೊಟ್ಟನ್ನು ಹಾರಿಸಿ ಸಾರವಾದ ಧಾನ್ಯವನ್ನು ಹೇಗೆ ತಳದಲ್ಲಿ ಉಳಿಸುವದೋ, ॥೧೩೦॥ ಅದೇ ಪ್ರಕಾರ ವಿಚಾರಾಂತ್ಯದಲ್ಲಿ ಜ್ಞಾನಿಯಾದ ಮನುಷ್ಯನು ಪ್ರಪಂಚದ ಸಾರಾಸಾರಗಳನ್ನು ವಿಚಾರಿಸಿ ನೋಡಲು ಅವನಿಗೆ ಪ್ರಪಂಚವು ಸಹಜವಾಗಿಯೇ ಭ್ರಮೆಯೆಂದು ಗೊತ್ತಾಗುತ್ತದೆ. ಮತ್ತು ನಿರ್ಮಲವಾದ ತತ್ವವೊಂದೇ ಅರ್ಥಾತ್ ಬ್ರಹ್ಮವೇ ಉಳಿಯುತ್ತದೆಂಬ ಮಾತು ಅನುಭವಸಿದ್ಧವಾಗುತ್ತದೆ. ॥ ೩೧ ॥ ಆದುದರಿಂದಲೇ ಅಸಾರವಾದ ಸಂಸಾರ ವಿಷಯದಲ್ಲಿ ಈತನಿಗೆ ( ಜ್ಞಾನಿಗೆ ) ಆಸ್ತಿಕ ಬುದ್ಧಿಯು ಇರುವದಿಲ್ಲ. ಕಾರಣ, ಸತ್ ಮತ್ತು ಅಸತ್ ಈ ಎರಡೂ ವಿಷಯಗಳ ಪರಿಣಾಮವು ಅವನಿಗೆ ಗೊತ್ತಾಗಿರುತ್ತದೆ. ॥ ೩೨ ॥

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

ದೇಖೇ ಸಾರಾಸಾರ ವಿಚಾರಿತಾ । ಭ್ರಾಂತಿ ತೇ ಪಾಹೀ ಅಸಾರತಾ । ತರೀ ಸಾರ ತೇ ಸ್ವಭಾವತಾ । ನಿತ್ಯ ಜಾಣೇ ॥ ೩೩ ॥ ಹಾಲೋಕತ್ರಯಾ ಕಾರೂ । ತೋ ಜಯಾಚಾ ವಿಸ್ತಾರೂ । ತೇಥ ನಾಮವರ್ಣ ಆಕಾರೂ । ಚಿನ್ಹ ನಾಹೀ ॥ ೩೪ ॥ ಜೋ ಸರ್ವದಾ ಸರ್ವಗತು । ಜನ್ಮ ಕ್ಷಯಾ ಅತೀತು । ತಯಾ ಕೇಲಿಯಾಹಿ ಘಾತು । ಕದಾ ನೋಹೇ ॥ ೩೫ ॥

**ಅರ್ಥ—** ಸತ್ಯ-ಅಸತ್ಯಗಳ ವಿಷಯದಲ್ಲಿ ಒಂದು ವೇಳೆ ವಿಚಾರಿಸಿ ನೋಡಿದರೆ, ಸಹಜವೇ ಭ್ರಾಂತಿಯು ನಿಸ್ಸಾರವಾದದ್ದಿರುತ್ತದೆ. ಮತ್ತು ಸಾರವಾದರೊ ಸ್ವಭಾವತಃ ಅವಿನಾಶಿಯಾದದ್ದೆಂಬುದನ್ನು ಲಕ್ಷದಲ್ಲಿಡು. ॥ ೩೩ ॥ ಯಾರಿಂದ ಈ ಮೂರು ಲೋಕಗಳು ಉತ್ಪನ್ನವಾಗಿರುವವೋ ಅವನಿಗೆ ನಾಮ-ರೂಪ-ರಂಗ ಮೊದಲಾದ ಯಾವ ಚಿಹ್ನಗಳೂ ಇರುವದಿಲ್ಲ. ॥ ೩೪ ॥ ಅವನು ಯಾವಾಗಲೂ ಸರ್ವವ್ಯಾಪಕನಾಗಿದ್ದು ಜನನ ಮರಣ ವಿರಹಿತನಾಗಿದ್ದಾನೆ. ಅವನ ಘಾತವನ್ನು ( ನಾಶವನ್ನು ) ಮಾಡುವದು ಯಾರಿಗೂ ಸಾಧ್ಯವಾಗಲರಿಯದು. ॥ ೩೫ ॥

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**

ಆಣಿ ಶರೀರ ಜಾತ ಆಘವೇ । ಹೇ ನಾಶವಂತ ಸ್ವಭಾವೇ । ಮ್ಹಣೋನಿ ತುವಾ ಝುಂಜಾವೇ । ಪಂಡುಕುಮರಾ ॥ ೩೬ ॥

**ಅರ್ಥ—** ಅರ್ಜುನಾ, ಶರೀರಧಾರಿಗಳಾದ ( ಅರ್ಥಾತ್ ಆಕಾರಕ್ಕೆ ಬಂದ ಸರ್ವ ) ಪ್ರಾಣಿಮಾತ್ರಗಳು ಸ್ವಭಾವಿಕವಾಗಿಯೇ ನಾಶವಂತವಾದವುಗಳು. ಆದಕಾರಣವೇ ನೀನು ಯುದ್ಧ ಮಾಡು. ॥ ೩೬ ॥

**ಯ ಎನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಂ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

ತೂ ಧರೂನಿ ದೇಹಾಭಿಮಾನಾತೇ । ದಿಠೀ ಸೂನಿ ಶರೀರಾತೇ । ಮೀ ಮಾರಿತಾ ಹೇ ಮರತೇ । ಮ್ಹಣತ ಆಹಾಸೀ ॥ ೩೭ ॥ ತರೀ ಅರ್ಜುನಾ ತೂ ಹೇ ನೇಣಸೀ । ಜರೀ ತತ್ವತಾ ವಿಚಾರಿಸೀ । ತರೀ ವಧಿತಾ ತೂ ನವ್ಹಸೀ । ತೇ ವಧ್ಯ ನವ್ಹತೀ ॥ ೩೮ ॥

**ಅರ್ಥ—** ನೀನು ದೇಹದ ಅಭಿಮಾನವನ್ನು ಹಿಡಿದು ಮತ್ತು ಶರೀರದ ಮೇಲೆ ದೃಷ್ಟಿಯನ್ನಿಟ್ಟು ನಾನು ಕೊಲ್ಲುವವನು, ಈ ಕೌರವರು ಸಾಯುವವರು ಎಂದು ಭಾವಿಸಿರುವಿ. ॥ ೩೭ ॥ ಆದರೆ ಅರ್ಜುನಾ, ಅದರೊಳಗಿನ ತತ್ವಾರ್ಥವು ನಿನಗೆ ತಿಳಿದಿಲ್ಲ. ನಿಜವಾಗಿ ವಿಚಾರ ಮಾಡಿ ನೋಡಿದರೆ ನೀನು ಕೊಲ್ಲುವವನೂ ಅಲ್ಲ, ಅವರು ಸಾಯುವವರೂ ಅಲ್ಲ. ॥ ೩೮ ॥

**ನ ಜಾಯತೇ ವ್ರಿಯತೇ ವಾ ಕದಾಚಿ ।**
**ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ॥**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ।**
**ನ ಹನ್ಯತೇ ಹನ್ಯಮಾನೇಶರೀರೇ ॥ ೨೦ ॥**

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ ।**
**ಕಥಂ ಸ ಪುರುಷಃ ಪಾರ್ಥ ಕಂಘಾತಯತಿ ಹಂತಿ ಕಂ ॥ ೨೧ ॥**

**[ ವೇದಾವಿನಾಶಿನಮಿತಿ ]** ಜೈಸೇ ಸ್ವಪ್ನ ಮಾಜೀ ದೇಖಿಜೇ । ತೇ ಸ್ವಪ್ನಿಚಿ ಸಾಚ ಅಪಜೇ । ಮಗ ಚೇಊನಿಯಾ ಪಾಹಿಜೇ । ತವ ಕಾಹೀ ನಾಹೀ ॥ ೩೯ ॥ ತೈಸೀ ಹೇ ಜಾಣಮಾಯಾ । ತೂ ಭ್ರಮುತ ಆಹಾಸಿ ವಾಯಾ । ಶಸ್ತ್ರೇ ಹಾಣಿತಲಿಯಾ ಛಾಯಾ । ಜೈಸೀ ಅಂಗೀ ನರೂಪೇ ॥೧೪೦॥ ಕಾ ಪೂರ್ಣ ಕುಂಭ ಉಲಂಡಲಾ । ತೇಥ ಬಿಂಬಾಕಾರ ದಿಸೇ ಭ್ರಂಶಲಾ । ಪರೀ ಭಾನು ನಾಹೀ ನಾಸಲಾ । ತಯಾಸವೇ ॥ ೪೧ ॥ ನಾತರೀ ಮಠೀ ಆಕಾಶ ಜೈಸೇ । ಮಠಾಕೃತಿ ಅವತರಲೇ ಅಸೇ । ತೋ ಭಂಗಲಿಯಾ ಆಸೈಸೇ । ಸ್ವರೂಪಚೀ ॥ ೪೨ ॥ ತೈಸೇ ಶರೀರಾಚ್ಯಾ ಲೋಪೀ । ಸರ್ವಥಾ ನಾಶನಾಹೀ ಸ್ವರೂಪೀ । ಮ್ಹಣವೂನಿ ತೂ ಹೆ ನಾರೋಪೀ । ಭ್ರಾಂತಿ ಬಾಪಾ ॥ ೪೩ ॥

**ಅರ್ಥ—** ಹೇಗೆ ಸ್ವಪ್ನದೊಳಗಿನ ವಿಷಯುಗಳು ಸ್ವಪ್ನವಲ್ಲಿಯೇ ನಿಜವೆಂದು ತೋರಿ, ಜಾಗ್ರತವಾದಮೇಲೆ ಸುಳ್ಳಾಗುವವೋ । ೩೯ ॥ ಅದರಂತೆಯೇ ಈ ಸರ್ವ ಪ್ರಪಂಚವು ಮಾಯಾಮಯುವಾದದ್ದು ಇದ್ದು ಅದರ ವಿಷಯುದಲ್ಲಿ ನೀನು ವ್ಯರ್ಥವಾಗಿ ಭ್ರಮೆಯಲ್ಲಿ ಬಿದ್ದಿರುವಿ. ಮನುಷ್ಯನು ನೆರಳಿನಮೇಲೆ ಶಸ್ತ್ರಪ್ರಯೋಗ ಮಾಡಿದರೆ ಅದರಿಂದ ಮನುಷ್ಯನಿಗೇನೂ ಗಾಯವಾಗಲಾರದು, ॥ ೧೪೦ ॥ ನೀರಿನಿಂದ ತುಂಬಿದ ಕೊಡವು ಬೋಕ್ಕಬೋರಲು ಬಿದ್ದರೆ ಅದರೊಳಗಿನ ಸೂರ್ಯಬಿಂಬವು ಕಾಣದಂತಾದರೂ ನಿಜವಾದ ಸೂರ್ಯನು ನಾಶ ಹೊಂದಲಾರನು. ॥ ೪೧ ॥ ಅಥವಾ ಮನೆಯಲ್ಲಿಯ ಆಕಾಶವು ಮನೆಯ ರೂಪವನ್ನು ಧರಿಸಿದ್ದರೂ ಮನೆಯು ನಾಶ ಹೊಂದಲು, ಅಲ್ಲಿಯ ಆಕಾಶವು ನಾಶಹೊಂದದೇ ತನ್ನ ವಿಸ್ತೃತವಾದ ಮೂಲರೂಪದಲ್ಲಿ ಬೆರೆತುಕೊಳ್ಳುವುದು. ॥ ೪೨ ॥ ಅದೇ ಪ್ರಕಾರ (ಹಾಗೆಯೇ) ಶರೀರವು ನಾಶಹೊಂದಿದರೂ ಅದರೊಳಗಿರುವ ಆತ್ಮದ ನಾಶವು ಮಾತ್ರ ಎಂದಿಗೂ ಆಗಲಾರದು. ಆದ್ದರಿಂದ ಅಯ್ಯಾ ಅರ್ಜುನನೇ, ನೀನು ಇಲ್ಲದ ಸಲ್ಲದ ಭ್ರಾಂತಿಯಿಂದ ಕೂಡಿದವನಾಗಿ ಕುಳಿತುಕೊಳ್ಳಬೇಡ. ॥ ೪೩ ॥

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ।**
**ನವಾನಿ ಗೃಹ್ಣಾತಿ ನರೋಽಪರಾಣಿ ॥**
**ತಥಾ ಶರೀರಾಣಿ ವಿಹಾಯ ಜೀರ್ಣಾ ।**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

**[ ವಾಸಾಂಸೀತಿ- ]** ಜೈಸೇ ಜೀರ್ಣ ವಸ್ತ್ರ ಸಾಂಡಿಜೇ । ಮಗ ನೂತನ ವೇಢಿಜೇ । ತೈಸೇ ದೇಹಾಂತರಾತೇ ಸ್ವಿಕಾರಿಜೇ । ಚೈತನ್ಯ ನಾಥೇ ॥ ೪೪ ॥

**ಅರ್ಥ—** ಮನುಷ್ಯನು ಜೀರ್ಣವಾದ ವಸ್ತ್ರಗಳನ್ನು ಬಿಟ್ಟು ಹೊಸ ವಸ್ತ್ರಗಳನ್ನು ಉಡುವಂತೆ ಆತ್ಮನು ಜೀರ್ಣ ದೇಹವನ್ನು ಬಿಟ್ಟು ಮತ್ತೊಂದು ಹೊಸ ದೇಹವನ್ನು ಪ್ರವೇಶಿಸುವನು. ॥ ೪೪ ॥

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥**

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥**

**[ ನೈನಂ ಛಿಂದ ತೀತಿ ]** ಹೇ ಅನಾದಿ ನಿತ್ಯ ಸಿದ್ಧ । ನಿರೂಪಾಧಿ ವಿಶುದ್ಧ । ಮ್ಹಣವೂನಿ ಶಸ್ತ್ರಾದಿಕೀ ಛೇದ । ನ ಘಡೇ ಯಯಾ ॥ ೪೫ ॥ ಹಾ ಪ್ರಳಯೋದಕೇ ನಾಪ್ಲವೇ । ಅಗ್ನಿದಾಹೋ ನ ಸಂಭವೇ । ಏಥ ಮಹಾಶೋಷ ನ ಪ್ರಭವೇ । ಮಾರುತಾಚಾ ॥ ೪೬ ॥ ಅರ್ಜುನಾ ಹಾ ನಿತ್ಯ । ಅಚಳ ಹಾ ಶಾಶ್ವತ । ಸರ್ವತ್ರ ಸದೋದಿತ । ಪರಿಪೂರ್ಣ ಹಾ ॥ ೪೭ ॥

**ಅರ್ಥ** ಆತ್ಮನು ಜನನ ಮರಣ ರಹಿತನೂ, ನಿತ್ಯಸಿದ್ಧನೂ, ಮಾಯಾ-ವರ್ಣಾದಿ ಉಪಾಧಿರಹಿತನೂ ಆಗಿರುವದರಿಂದ ಶಸ್ತ್ರಗಳು ಇವನನ್ನು ಕಡಿಯಲಾರವು. ॥ ೪೫ ॥ ಆತ್ಮನು ಪ್ರಳಯಕಾಲದ ನೀರಿನಲ್ಲಿ ಸಹ ಮುಳುಗಲಾರನು. ಬೆಂಕಿಯು ಅವನನ್ನು ಸುಡಲಾರದು. ಅದರಂತೆಯೇ ಗಾಳಿಯು ಅವನನ್ನು ಒಣಗಿಸಲಾರದು. ॥ ೪೬ ॥ ಆದುದರಿಂದ ಅರ್ಜುನಾ, ಇವನು ( ಆತ್ಮನು ) ಕಾಲತ್ರಯದಲ್ಲಿಯೂ ಅಬಾಧ್ಯನು; ಮತ್ತು ಶಾಶ್ವತನು; ( ಸ್ಥಿರನು ) ವ್ಯಾಪಕನು. ಮತ್ತು ಸರ್ವ ಸ್ಥಳದಲ್ಲಿಯೂ ತುಂಬಿಕೊಂಡಿರುವವನು. ॥ ೪೭ ॥

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥**

**[ ಅವಕ್ತೋಽಯ ಮಿತಿ- ]** ಹಾ ತರ್ಕಾಚಿಯೆ ದಿಟೀ । ಗೋಚರ ನೋಹೇ ಕಿರೀಟೀ । ಧ್ಯಾನ ಯಾಚಿಯೇ ಭೇಟೀ । ಉತ್ಕಾಂಠಾ ವಾಹೇ ॥ ೪೮ ॥ ಹಾ ಸದಾ ದುರ್ಲಭು ಮನಾ । ಆಪು ನೋಹೇ ಸಾಧನಾ । ನಿ:ಸೀಮು ಹಾ ಅರ್ಜುನಾ । ಪುರುಷೋತ್ತಮು ॥ ೪೯ ॥ ಹಾ ಗುಣತ್ರಯಾ ರಹಿತು । ಅನಾದಿ ಅವಿಕೃತು । ವ್ಯಕ್ತೀಸಿ ಅತೀತು । ಸರ್ವರೂಪ ॥ ೧೫೦ ॥ ಅರ್ಜುನಾ ಐಸಾ ಹಾ ಜಾಣಾವಾ । ಸಕಳಾತ್ಮಕು ದೇಖಾವಾ । ಮಗ ಸಹಜೇ ಶೋಕು ಆಘವಾ । ಹರೇಲ ತುಝಾ ॥ ೫೧ ॥

**ಅರ್ಥ**— ಪಾರ್ಥಾ, ತರ್ಕಶಾಸ್ತ್ರ ದೃಷ್ಟಿಯಿಂದ ಆತ್ಮನು ಕಾಣದವನು. ಯೋಗಿಗಳ ಧ್ಯಾನವು ಉತ್ಕಟೇಚ್ಛೆಯಿಂದ ಇವನ ಬೆಟ್ಟಿಯಾಗಲು ಇಚ್ಛಿಸುವದು. ॥ ೪೮ ॥ ಅರ್ಜುನಾ, ಇವನು ಮನಸಿಗೆ ಯಾವಾಗಲೂ ನಿಲುಕದವನೂ, ಸಾಧನಗಳಿಗೆ ದೊರಕದೇ ಇದ್ದವನೂ, ಅನಂತನೂ, ಜೀವ ಮಾತ್ರಗಳಲ್ಲಿ ಶ್ರೇಷ್ಠನೂ ಇದ್ದಾನೆ. ॥ ೪೯ ॥ ಇವನು ಗುಣತ್ರಯದಿಂದ ಅಲಿಪ್ತನು. ಅನಾದಿಯು ವಿಕಾರ ರಹಿತನು. ಆಕಾರದ ಆಚೆಯ ಕಡೆಯವನು. ಮತ್ತು ವಸ್ತು ಮಾತ್ರ ಸ್ಥೂಳ ಸ್ವರೂಪಗಳಲ್ಲಿ ಪೂರ್ಣವಾಗಿ ತುಂಬಿಕೊಂಡಿರುವನು. ॥ ೫೦ ॥ ಆದುದರಿಂದ ಅರ್ಜುನಾ, ಆತ್ಮನು ಸರ್ವವ್ಯಾಪಿಯೂ, ಭೂತಾಂತರಾತ್ಮನೂ ಎಂಬುದನ್ನು ಅರಿತೆಯಾದರೆ ಸಹಜವಾಗಿಯೇ ನಿನ್ನ ದು:ಖವು ಇಲ್ಲದಂತಾಗುವದು. ॥ ೫೧ ॥

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತು ಮರ್ಹಸಿ ॥ ೨೬ ॥**

**[ ಅಥ ಚೈನಮಿತಿ ]** ಅಥವಾ ಐಸಾ ನೇಣಸೀ । ತೂ ಅಂತವಂತಚಿ ಮಾನಿಸೀ । ತರ್ಹೀ ಶೋಚೂನ ಪವಸೀ । ಪಂಡುಕುಮರಾ ॥ ೫೨ ॥ ಜೋ ಆದಿ ಸ್ಥಿತಿ ಅಂತ । ಹಾ ನಿರಂತರ ಅಸೇ ನಿತ್ಯ ।

ಜೈಸಾ ಪ್ರವಾಹ ಅನುಸ್ಯೂತ । ಗಂಗಾಜಳಾಚಾ ॥ ೫೩ ॥ ತೇ ಆದಿನಾಹೀ ಖುಂಡಲೇ । ಸಮುದ್ರೀ ತರೀ ಅಸೇ ಮಿನಲೇ । ಆಣಿ ಜಾತಾಂಚಿ ಮಧ್ಯೆ ಉರಲೇ । ದಿಸೇ ಜೈಸೇ ॥ ೫೪ ॥ ಇಯೇ ತೀನ್ಹೀ ತಯಾಪರೀ । ಸರಸೀಂಚ ಸದಾ ಅವಧಾರೀ । ಭೂತಾಸೀ ಕವಣೇ ಅವಸರೀ । ಠಾಕತೀ ನಾ ॥ ೫೫ ॥ ವ್ಹಣೋನಿ ಹೇ ಆಘವೇ । ಏಥ ತುಜ ನಲಗೇ ಶೋಚಾವೇ । ಜೇ ಸ್ಥಿತಿಚೀ ಹೇ ಸ್ವಭಾವೇ । ಅನಾದಿ ಐಸೀ ॥ ೫೬ ॥ ನಾತರೀ ಹೇ ಅರ್ಜುನಾ । ನಯೇಚಿ ತುಝಿಯಾ ಮನಾ । ಜೇ ದೇಖೋನಿ ಲೋಕ ಅಧೀನಾ । ಜನ್ಮಕ್ಷಯಾ ॥ ೫೭ ॥ ತರೀ ಏಥೇ ಕಾಹೀ । ತುಜ ಶೋಕಾಸೀ ಕಾರಣ ನಾಹೀ । ಹೇ ಜನ್ಮ ಮೃತ್ಯೂಪಾಹೀ । ಅಪರಿಹರ ॥ ೫೮ ॥

**ಅರ್ಥ—** ಅಥವಾ ಹೀಗೆ ಆತ್ಮನನ್ನರಿತುಕೊಳ್ಳದೇ ಇವನು ನಾಶವಂತನಾಗಿರುವನೆಂದು ತಿಳಿದರೂ ಸಹ ನೀನು ದುಃಖಪಡುವ ಕಾರಣವಿಲ್ಲ. ॥ ೫೨ ॥ ಗಂಗಾನದಿಯ ನೀರಿನ ಓಘವು ಅಖಂಡವಾಗಿರುವಂತೆ ಉತ್ಪತ್ತಿ-ಸ್ಥಿತಿ-ಲಯಗಳಾದರೂ ಒಂದೇ ಸವನೆ ಅಬಾಧಿತವಾಗಿ ನಡೆದಿರುತ್ತವೆ. ॥ ೫೩ ॥ ಆ ಗಂಗಾನದಿಯ ನೀರು ಉಗಮಸ್ಥಾನದಲ್ಲಿ ಉತ್ಪನ್ನವಾಗುತ್ತದೆ; ಮತ್ತು ಮಧ್ಯದಲ್ಲಿ ಪ್ರವಾಹವಾಗಿ ಹರಿಯುತ್ತದೆ, ಕಡೆಗೆ ಸಮುದ್ರವನ್ನು ಸೇರುತ್ತದೆ. ॥ ೫೪ ॥ ಆ ಆತ್ಮನಿಗೆ ಈ ಮೂರೂ ಅವಸ್ಥೆಗಳು ಸಮಾನವಾಗಿರುತ್ತವೆ. ಪ್ರಾಣಿಮಾತ್ರಗಳಿಗೆ ಈ ಮೂರು ಅವಸ್ಥೆಗಳು ಯಾವ ಕಾಲವಲ್ಲಾದರೂ ಬಿಡಲಾರವೆಂಬುದನ್ನು ನಿಶ್ಚಯವೆಂದು ತಿಳಿ ॥ ೫೫ ॥ ಆದ್ದರಿಂದ ನೀನು ಇವರೆಲ್ಲರ ದೆಸೆಯಿಂದ ಶೋಕ ಮಾಡುವ ಕಾರಣವಿಲ್ಲ. ಸೃಷ್ಟಿಯ ಈ ಎಲ್ಲ ಕ್ರಮವೂ ಸ್ವಭಾವತಃ ಅನಾದಿ ಕಾಲದಿಂದ ನಡೆದುಬಂದಿರುತ್ತದೆ. ॥ ೫೬ ॥ ಇದು ನಿನ್ನ ಮನಸಿಗೆ ಬಾರದಿದ್ದರೂ ಪ್ರಾಣಿಮಾತ್ರಗಳು ಜನನ ಮರಣಾಧೀನವಾಗಿರುವುದು ನಿಶ್ಚಯವಾದದ್ದು. ॥ ೫೭ ॥ ಆದರೆ ಈ ಜನನ ಮರಣವನ್ನು ತಪ್ಪಿಸುವದು ಅಪರಿಹಾರ್ಯವಾಗಿರುವದು. ಆದ್ದರಿಂದ ನೀನು ದುಃಖಪಡುವ ಕಾರಣವಿಲ್ಲ. ॥ ೫೮ ॥

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

[ **ಜಾತಸ್ಯ ಹಿ ಧ್ರುವೋ ಮೃತ್ಯುರಿತಿ** ] ಉಪಜೇ ತೇ ನಾಶೇ । ನಾಶಲೇ ಪುನರಪಿ ದಿಸೇ । ಹೇ ಘಟಿಕಾ ಯಂತ್ರ ತೈಸೇ । ಪರಿಭ್ರಮೇಗಾ ॥ ೫೯ ॥ ನಾತರೀ ಉದೋ ಅಸ್ತು ಆಪೈಸೇ । ಅಖಂಡಿತ ಹೋತ ಜಾತ ಜೈಸೇ । ಹೇ ಜನ್ಮ ಮರಣ ತೈಸೇ । ಅನಿವಾರ ಜಗೀ ॥ ೬೦ ॥ ಮಹಾಪ್ರಳಯ ಅವಸರೇ । ಹೇ ತ್ರೈಲೋಕ್ಯಹೀ ಸಂಹರೇ । ವ್ಹಣೋನಿ ಹಾನಪರಿಹರೇ । ಆದಿ ಅಂತ ॥ ೬೧ ॥ ತೂಜರೀ ಹೇ ಐಸೇ ಮಾನಿಸೀ । ತರೀ ಖೇದಕಾ ಕರಿಸೀ । ಕಾಯ ಜಾಣತಚಿ ನೇಣಸೀ । ಧನುರ್ಧರಾ ॥ ೬೨ ॥ ಏಥ ಅಣಿಕಹೀ ಪಾರ್ಥಾ । ತುಜ ಬಹುತೀಪರೀ ಪಾಹತಾ । ದುಃಖ ಕರಾವಯಾ ಸರ್ವಥಾ । ವಿಷೋ ನಾಹೀ ॥ ೬೩ ॥

**ಅರ್ಥ—** ಹುಟ್ಟಿದವನಿಗೆ ಸಾವೂ, ಸತ್ತವನಿಗೆ ಹುಟ್ಟೂ ಕಟ್ಟಿಟ್ಟಂತೆ ಹೀಗೆ ಇವೆರಡೂ ಘಟಿಕಾಯಂತ್ರದಂತೆ ( ಹೊತ್ತು ತಿಳಿಯುವದರ ದೆಸೆಯಿಂದ ಮಾಡಿಸಿದ ಉಸುಕಿನ ಗಡಿಯಾರದಂತೆ ಅಥವಾ ರಾಹಟ ಗಾಡಿಗೆಯ ಯಂತ್ರದಂತೆ ) ಅವ್ಯಾಹತವಾಗಿ ನಡೆದಿರುತ್ತವೆ. ॥ ೫೯ ॥ ಅಥವಾ ಸೂರ್ಯನ ಉದಯಾಸ್ತಗಳು ತಮ್ಮಿಂದತಾವೇ ತಪ್ಪದೇ ನಡೆದಿರುವಂತೆ ಈ ಜಗತ್ತಿನಲ್ಲಿ ಜನನ ಮರಣಗಳು ಅನಿವಾರವಾದದ್ದಿರುತ್ತವೆ. ॥ ೬೦ ॥ ಮಹಾಪ್ರಳಯ ಕಾಲದಲ್ಲಿ ಈ ಮೂರು ಲೋಕಗಳೂ ಕೂಡ ನಾಶವಾಗುತ್ತವೆ. ಅಂದಬಳಿಕ ಜನನ ಮತ್ತು ಮರಣ ಈ ಎರಡೂ ಅಪರಿಹಾರ್ಯವಾಗಿರುತ್ತವೆ. ॥ ೬೧ ॥ ಹೀಗೆ ನಿನ್ನ ತಿಳುವಳಿಕೆ ಇದ್ದದ್ದಾದರೆ ಅರ್ಜುನನೇ, ದುಃಖಿಸುವ ಕಾರಣವೇನು ? ಮತ್ತು ತಿಳಿದೂ ತಿಳಿದೂ ಅರಿಯದ ಹುಚ್ಚನಂತೆ ಹೀಗೇಕೆ ಮಾಡುವಿ ? ॥ ೬೨ ॥ ಪಾರ್ಥಾ, ಇನ್ನೂ ಒಂದು ರೀತಿ ತಿಳಿದು ನೋಡಿದರೂ ಜನನ ಮತ್ತು ಮರಣಗಳು ತಪ್ಪಿಸಲಿಕ್ಕೆ ಬರದಂಥವುಗಳು ಆದುದರಿಂದ ನೀನು ಶೋಕಿಸುವ ಕಾರಣವಿಲ್ಲ. ॥ ೬೩ ॥

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತ ನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

**[ ಅವ್ಯಕ್ತಾದೀನೀತಿ ]** ಜಿಯೇ ಸಮಸ್ತೇ ಇಯೇ ಭೂತೇ । ಜನ್ಮಾ ಆದಿ ಅಮೂರ್ತೇ । ಮಗ ಪಾತಲೀ ವ್ಯಕ್ತೀತೇ । ಜನ್ಮಲೇಯಾ ॥ ೬೪ ॥ ತಿಯೇ ಕ್ಷಯಾಸೀ ಜೇಥ ಜಾತೀ । ತೆಥ ನಿಭ್ರಾಂತ ಆನೇ ನವ್ಹತೀ । ದೇಖೇ ಪೂರ್ವ ಸ್ಥಿತೀಚ ಯೇತೀ । ಆಪುಲಿಯೇ ॥ ೬೫ ॥ ಯೇರ ಮಧ್ಯೆ ಜೇ ಪ್ರತಿಭಾಸೇ । ತೇ ನಿದ್ರಿತಾ ಸ್ವಪ್ನ ಜೈಸೇ । ತೈಸಾ ಆಕಾರ ಹಾ ಮಾಯಾ ವಶೇ । ಸತ್ಸ್ವರೂಪೀ ॥ ೬೬ ॥ ನಾತರೀ ಪವನೇ ಸ್ಪರ್ಶಿಲೇ ನೀರ । ಪಡಿಯಾಸೇ ತರಂಗಾಕಾರ । ಕಾಪರಾಪೇಕ್ಷಾ ಅಳಂಕಾರ । ವ್ಯಕ್ತೀ ಕನಕೀ ॥ ೬೭ ॥ ತೈಸೇ ಸಕಳ ಹೇ ಮೂರ್ತ । ಜಾಣಪಾ ಮಾಯಾಕಾರಿತ । ಜೈಸೇ ಆಕಾಶೀ ಬಿಂಬತ । ಅಭ್ರಪಟಳ ॥ ೬೮ ॥ ತೈ ಸೇ ಆದೀಚಿ ಜೇ ನಾಹೀ । ತಯಾಲಾಗೀ ತೂ ರುದಸಿ ಕಾಯೀ । ತೂ ಅವೀಟ ತೇ ಪಾಹೀ । ಚೈತನ್ಯ ಏಕ ॥ ೬೯ ॥ ಜಯಾಚೀ ಆರ್ತೀಚಿ ಭೋಗಿತ । ವಿಷಯೀ ತ್ಯಜಿಲೇ ಸಂತ । ಜಯಾಲಾಗೀ ವಿರಕ್ತ । ವನವಾಸಿಯೇ ॥ ೧೭೦ ॥ ದಿಟೀ ಸೂನಿ ಜಯಾತೇ । ಬ್ರಹ್ಮ ಚರ್ಯಾದಿವ್ರತೇ । ಮುನೀಶ್ವರತಪಾತೇ । ಆಚರತಾತಿ ॥ ೧೭೧ ॥

**ಅರ್ಥ—** ಈ ಭೂತಗಳು ಆರಂಭದಲ್ಲಿ ( ಉತ್ಪತ್ತಿ ಪೂರ್ವದಲ್ಲಿ ) ನಿರಾಕಾರವಿದ್ದು ಮಧ್ಯದಲ್ಲಿ ಜನ್ಮಕ್ಕೆ ಬಂದಮೇಲೆ ಆಕಾರಕ್ಕೆ ಬರುವವು. ॥ ೬೪ ॥ ಅವುಗಳು ಅಂತ್ಯದಲ್ಲಿ ಲಯ ಹೊಂದಿದಮೇಲೆ ಅಲ್ಲಿ ಅವು ನಿಃಸಂಶಯವಾಗಿ ಅನ್ಯಸ್ಥಿತಿಯನ್ನು ಹೊಂದವು. ತಮ್ಮ ಆರಂಭದ ಸ್ಥಿತಿಯನ್ನು ಅಂದರೆ ಅವ್ಯಕ್ತ ಸ್ವರೂಪವನ್ನೇ ಹೊಂದುವವು. ॥ ೬೫ ॥ ನಿದ್ರೆಯಿಂದ ಮಲಗಿದ ಮನುಷ್ಯನಿಗೆ ಯಾವ ಪ್ರಕಾರ ಸ್ವಪ್ನವು ಕಾಣುತ್ತಿರುವದೋ, ಅದೇ ಪ್ರಕಾರ ಜನ್ಮ ಮೃತ್ಯುಗಳೆರಡರಲ್ಲಿಯೂ ಕಾಣುವ ಆಕಾರವು ಮಾಯಾ ಯೋಗದಿಂದುಂಟಾಗಿದ್ದು, ಅದು ಬ್ರಹ್ಮ ಸ್ವರೂಪದಮೇಲೆ ಭಾಸವಾಗುತ್ತದೆ. ॥ ೬೬ ॥ ಇಲ್ಲವೇ ನೀರಿಗೆ ಗಾಳಿಯು ಸ್ಪರ್ಶವಾದ ಕೂಡಲೇ ಅದರ ಮೇಲೆ ಬೇರೆ ಬೇರೆ ತೆರೆಗಳೇಳುವಂತೆ ಬಂಗಾರವು ಜನರ ಅಪೇಕ್ಷೆಯಂತೆ ನಾನಾತರಹದ ಅಲಂಕಾರಗಳಲ್ಲಿ ರೂಪಗೊಳ್ಳುವಂತೆ ॥ ೬೭॥ ಎಲ್ಲ ಪ್ರಾಣಿಗಳು ಮಾಯೆಯಿಂದಲೇ ಬೇರೆ ಬೇರೆ ರೂಪಗಳನ್ನು ಹೊಂದಿ ಉದ್ಭವಿಸಿರುವವೆಂದು ತಿಳಿ. ಆಕಾಶದಲ್ಲಿ ಮೋಡಗಳು ಹುಟ್ಟಿ ನಾಶವಾಗುವಂತೆ ॥ ೬೮ ॥ ಮೂಲತಃ ನಾಶವಂತವಾಗಿರುವಂಥ ವಸ್ತುವಿನ ಬಗ್ಗೆ ನೀನೇಕೆ ದುಃಖಿಸುವೆ. ಆದ್ದರಿಂದ ಅಕ್ಷಯವಾದ ಬ್ರಹ್ಮಸ್ವರೂಪದ ಕಡೆಗೆ ಲಕ್ಷಗೊಡು. ॥ ೬೯ ॥ ಸಾಧುಗಳಲ್ಲಿ ಆ ಪರಬ್ರಹ್ಮನ ಬಗ್ಗೆ ಪ್ರೇಮವು ಉದ್ಭವಿಸಿದ ಕೂಡಲೆ ಅವರು ವಿಷಯ ಸುಖದಿಂದ ನಿವೃತ್ತರಾಗುತ್ತಾರೆ. ಮತ್ತು ಆ ಪರಮಾತ್ಮಾ-ಪರಬ್ರಹ್ಮ ಶ್ರೀ ಹರಿಯ ಪ್ರೇಮದ ದೆಸೆಯಿಂದ ಅವರು ವನವಾಸಿಗಳಾಗಲಿ ವೈರಾಗ್ಯ ಸಂಪನ್ನರಾಗಲಿ ಆಗುತ್ತಾರೆ. ॥ ೧೭೦ ॥ ಮತ್ತು ಆ ಪರಬ್ರಹ್ಮನಮೇಲೆ ದೃಷ್ಟಿ ( ಅಂತಃಕರಣ ) ಯಿಟ್ಟು ಬ್ರಹ್ಮಚರ್ಯ ಮುಂತಾದ ವ್ರತಗಳನ್ನೂ, ತಪಶ್ಚರ್ಯಾದಿಗಳನ್ನೂ, ಮಾಡುತ್ತಾರೆ. ॥ ೧೭೧ ॥

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮ್ । ಆಶ್ಚರ್ಯವದ್ವದತಿ ತಥೈವ ಚಾನ್ಯಃ ॥**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ । ಶ್ರುತ್ವಾಪ್ಯೇನಂ ವೇದನ ಚೈವಕಶ್ಚಿತ್॥ ೨೯ ॥**

**[ ಆಶ್ಚರ್ಯ ವತ್ಪಶ್ಯತೀತಿ ]** ಏಕ ಅಂತರೀ ನಿಶ್ಚಳ । ಜೇ ನಿಹಾಳಿತಾ ಕೇವಳ । ವಿಸರಲೇ ಸಕಳ । ಸಂಸಾರ ಜಾತ ॥ ೭೨ ॥ ಏಕಾ ಗುಣಾನುವಾದ ಕರಿತಾ । ಉಪರತೀ ಹೋವೂನಿ ಚಿತ್ತಾ । ನಿರವಧಿ ತಲ್ಲೀನತಾ । ನಿರಂತರ ॥ ೭೩ ॥ ಏಕ ಐಕತಾಂಚಿ ನಿವಾಲೇ । ತೇ ದೇಹಭಾವೀ ಸಾಂಡಿಲೇ ।

ಏಕ ಅನುಭವೇ ಪಾತಲೇ । ತದ್ರೂಪತಾ ॥ ೭೪ ॥ ಜೈಸೇ ಸರಿತಾ ಓಘು ಸಮಸ್ತ । ಸಮುದ್ರಾ ಮಾಜೀ ಮಿಳತ । ಪರೀ ಮಾಘೌತೇ ನ ಸಮಾತ । ಪರತಲೇ ನಾಹೀ ॥ ೭೫ ॥ ತೈಸೀಯಾ ಯೋಗೀಶ್ವರಾಂಚಿಯಾ ಮತೀ । ಮಿಳಣೀಸವೇ ಏಕವಟತೀ । ಪರೀಚೇ ವಿಚಾರೂನಿ ಪುನರಾವೃತ್ತೀ । ಭಜತೀಚಿ ನಾ ॥ ೭೬ ॥

**ಅರ್ಥ**— ಏಕಾಗ್ರವಾದ ಅಂತಃಕರಣದಿಂದ ಆ ಪರಬ್ರಹ್ಮನ ಕಡೆಗೆ ನೋಡುತ್ತ ಎಷ್ಟೋ ಜನರು ಅಂತರಂಗದಲ್ಲಿ ಧೃಡವಾದ ಪ್ರೇಮವನ್ನಿಟ್ಟು ಎಲ್ಲ ಸಂಸಾರವನ್ನು ಮರೆತು ಬಿಟ್ಟಿರುವರು. ॥ ೭೨ ॥ ಹಲಕೆಲವರು ಆ ಪರಬ್ರಹ್ಮನ ಗುಣ ಮಹಿಮೆಗಳನ್ನು ಹೊಗಳುತ್ತ ಚಿತ್ತದಲ್ಲಿ ವಿಷಯ ನಿವೃತ್ತಿಯನ್ನು ಹೊಂದಿ ನಿಸ್ಸೀಮ ಭಕ್ತಿಯಿಂದ ಕಡೆಗೆ ಆ ಪರಬ್ರಹ್ಮನಲ್ಲೇ ಯಾವಾಗಲೂ ಮಗ್ನರಾಗಿ ಲೀನರಾಗಿ ಹೋಗುತ್ತಾರೆ. ॥ ೭೩ ॥ ಒಬ್ಬರು ಅವನ ಸ್ವರೂಪವನ್ನು ಕೇಳಿದ ಕೂಡಲೇ ಶಾಂತರಾಗಿ ದೇಹಾಭಿಮಾನವನ್ನು ಬಿಟ್ಟುಬಿಟ್ಟಿರುತ್ತಾರೆ. ಹಲವರು ಅನುಭವದಿಂದ ಪರಮಾತ್ಮನಂತೆ ರೂಪವನ್ನು ಧರಿಸಿರುತ್ತಾರೆ. ॥ ೭೪ ॥ ನದಿಗಳ ಪ್ರವಾಹವು ಸಮುದ್ರಕ್ಕೆ ಕೂಡುವದೆನೋ ನಿಜ. ಆದರೆ ಸಮುದ್ರದಲ್ಲಿ ಸ್ಥಳವಿಲ್ಲವೆಂದು ಹಿಂತಿರುಗಿರುವದಿಲ್ಲ. ॥ ೭೫ ॥ ಅದರಂತೆಯೇ ಮಹಾತ್ಮರಾದ ಯೋಗಿಗಳ ಬುದ್ಧಿಯು ಬ್ರಹ್ಮ ಸಾಕ್ಷಾತ್ಕಾರದ ಸಂಗಡವೇ ತದಾಕಾರವಾಗಿ ಹೋಗುತ್ತದೆ. ಆದರೆ ಇಂಥ ರೀತಿಯಿಂದ ವಿಚಾರ ಮಾಡಿ ತದ್ರೂಪರಾದಂಥ ಪುರುಷರು ಪುನಃ ಸಂಸಾರಕ್ಕೆ ಬರುವದಿಲ್ಲ. । ೭೬ ॥

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

[ **ದೇಹೀತಿ** ] ಜೇ ಸರ್ವತ್ರ ಸರ್ವ ಹೀ ದೇಹೀ । ಜಯಾ ಕರಿತಾಹೀ ಘಾತ ನಾಹೀ । ತೇ ವಿಶ್ವಾತ್ಮಕ ತೂ ಪಾಹೀ । ಚೈತನ್ಯ ಏಕ ॥ ೭೭ ॥ ಇಯಾಚೇನಿ ಸ್ವಭಾವೇ । ಹೇ ಹೋತ ಜಾತ **ಆಘವೇ** । ತರೀ ಸಾಂಗ **ಕಾಯ** **ಶೋಚಾವೇ** । ಏಥ ತುವಾ ॥ ೭೮ ॥ ಏರ್ಹವೀ ತರೀ ಪಾರ್ಥಾ । ತುಜಕಾನೇಣೋನ ಮನೇ **ಚಿತ್ತಾ** । ಪರೀ ಕಿಡಾಳ ಹೇ **ಶೋಚಿ** **ತಾ** । ಬಹುತಾ ಪರೀ ॥ ೭೯ ॥

**ಅರ್ಥ**— ಅರ್ಜುನನೇ, ಎಲ್ಲ ಸ್ಥಳದಲ್ಲಿಯೂ ಸರ್ವ ದೇಹಗಳಲ್ಲಿಯೂ ಸರ್ವ **ಭೂತಾಂತರಾತ್ಮನಾದ** ಪರಬ್ರಹ್ಮನು ವ್ಯಾಪ್ತನಾಗಿರುವದರಿಂದ ಅವನನ್ನು ಕೊಲ್ಲುವದು ಸಾಧ್ಯವಾಗದು. ಇಂತಹ ಒಂದು ಚೈತನ್ಯವೇ ಜಗದ್ರೂಪವಾಗಿದೆಯೆಂಬದನ್ನು ಲಕ್ಷದಲ್ಲಿಡು. ॥ ೭೭ ॥ ಚೈತನ್ಯದಲ್ಲಿ ಸ್ವಾಭಾವಿಕವಾಗಿ ನಡೆದು ಹೋಗುವ ಸಂಗತಿಗಳಿಗಾಗಿ ನೀನು ಏಕೆ ದುಃಖಿಸುವಿ ? ॥ ೭೮ ॥ ಪಾರ್ಥಾ, ಈ ಮಾತು ನಿನ್ನ ಮನಸಿನಲ್ಲೇ ಏಕೆ ಬರುವದಿಲ್ಲ ? ಇದು ನನಗೆ ತಿಳಿಯದಾಗಿದೆ. ಒಟ್ಟಿನ ಮೇಲೆ ಈ ದುಃಖವು ನಿಂದನೀಯವಾಗಿದೆ. ॥ ೭೯ ॥

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥ ೩೧ ॥**

[ **ಸ್ವಧರ್ಮ ಮಿತಿ** ] ತು ಅಝುನಿೀ ಕಾ ನ ವಿಚಾರಿಸೀ । ಕಾಯ ಹೇ ಚಿಂತಿತ ಅಹಾಸಿ । ಸ್ವಧರ್ಮ ತೋ ವಿಸರಲಾಸೀ । ತರಾವೇ ಜೇಣೇ ॥ ೮೦ ॥ ಯಾ ಕೌರವಾ ಭಲತೇ ಜಾಹಾಲೇ । ಅಥವಾ ತುಜಚಿ ಕಾಹೀ ಪಾತಲೆ । ಕೀ ಯುಗಾಚಿ ಹೇ ಬುಡಾಲೇ । ಜರ್ಹೀ ಏಥ ॥ ೮೧ ॥ ತರೀ ಸ್ವಧರ್ಮ ಏಕ ಆಹೆ । ತೋ ಸರ್ವಥಾ ತ್ಯಾಜ್ಯ ನೋಹೇ । ಮಗ ತರೀ ಜೇಲಕಾಯ ಪಾಹೇ । **ಕೃಪಾಳೂಪಣೇ** ॥ ೮೨ ॥ ಅರ್ಜುನಾ ತುಝೆ ಚಿತ್ತ ಜರ್ಹೀ ಜಾಹಲೇ ದ್ರುವೀ ಭೂತ । ತರ್ಹೀ

ಹೇ ಅನುಚಿತ । ಸಂಗ್ರಾಮು ಸಮಯೀ ॥ ೮೩ ॥ ಅಗಾ ಗೋಕ್ಷೀರ ಜರೀ ಜಾಹಾಲೇ । ತರೀ ಪಥ್ಯಾಸೀ ನಾಹೀ ಘೇತಲೇ । ಐಸೇನಿಹೀ ವಿಷಹೋಯ ಸುದಲೇ । ನವಜ್ವರೀ ದೇತಾ ॥ ೮೪ ॥ ತೈಸೇ ಆನೀ ಆನ ಕರಿತಾ । ನಾಶ ಹೋಈಲ ಸ್ವಹಿತಾ । ಮ್ಹಣವೂನಿ ತೂ ಆತಾ ಸಾವಧ ಹೋಈ ॥ ೮೫ ॥ ವಾಯಾಚಿ ವ್ಯಾಕುಳ ಕಾಯೀ । ಆಪುಲಾ ನಿಜ ಧರ್ಮು ಪಾಹೀ । ಜೋ ಆಚರಿತಾ ಬಾಧ ನಾಹೀ । ಕವಣೇ ಕಾಳೀ ॥ ೮೬ ॥ ಜೈಸೇ ಮಾರ್ಗೇ ಚಿ ಚಾಲತಾ ॥ ಅಪಾಯೋ ನ ಪವೇ ಸರ್ವಥಾ । ಕಾದೀಪಾಧಾರೆ ವರ್ತತಾ । ನಾ ಡಳಿಜೆ ॥ ೮೭ ॥ ತಯಾಪರೀ ಪಾರ್ಥಾ । ಸ್ವಧರ್ಮೇ ರಾಹಾಟತಾ । ಸಕಳ ಕಾಮ ಪೂರ್ಣತಾ । ಸಹಜೇ ಹೋಯ ॥ ೮೮ ॥ ಮ್ಹಣೋನಿ ಯಾ ಲಾಗೀ ಪಾಹೀ । ತುಮ್ಹಾ ಕ್ಷತ್ರಿಯಾ ಆಣಿಕ ಕಾಹೀ । ಸಂಗ್ರಾಮಾ ವಾಚೂನಿ ನಾಹೀ । ಉಚಿತ ಜಾಣೇ ॥ ೮೯ ॥ ನಿಷ್ಕಪಟ ಹೋವಾವೇ । ಉಸಿಣಾ ಘಾಈ ಜುಂಝಾವೇ । ಹೇ ಅಸೋ ಕಾಯ ಸಾಂಗಾವೇ । ಪ್ರತ್ಯಕ್ಷಾವರೀ ॥ ೧೯೦ ॥

**ಅರ್ಥ**—ಇನ್ನೂ ವರೆಗೆ ನೀನು ವಿಚಾರವನ್ನೇಕೆ ಮಾಡುವದಿಲ್ಲ? ನೀನು ಮನಸಿನಲ್ಲಿ ಏನು ಚಿಂತಿಸುತ್ತಿರುವಿ? ಸ್ವಧರ್ಮವನ್ನು ಮರೆತುಬಿಟ್ಟಿರುವಿ. ಅಂದಮೇಲೆ ನಿನ್ನ ತರುಣೋಪಾಯವು ಆಗುವ ಬಗೆಯಾದರೂ ಹೇಗೆ? ॥ ೧೮೦ ॥ ಈ ಕೌರವರಿಗೆ ಏನಾವರೂ ಘಾತವಾದರೆ ಇಲ್ಲವೇ ನಿನಗೇನಾದರೂ ಹೆಚ್ಚುಕಡಿಮೆಯಾದರೆ ಅರ್ಥಾತ್ ಎಲ್ಲ ಜಗತ್ತೂ ಇಲ್ಲದಂತಾದರೆ ॥ ೮೧ ॥ ಸ್ವಧರ್ಮವನ್ನು ಮಾತ್ರ ನೀನು ಎಂದಿಗೂ ಬಿಡಕೂಡದು. ಅದನ್ನು ತ್ಯಾಗ ಮಾಡಿದ ಮೇಲೆ ನಿನ್ನ ಮನಸಿನಲ್ಲಿ ಉದ್ಭವಿಸಿದ ಈ ಕಾರುಣ್ಯದಿಂದ ನಿನ್ನ ತರಣೋಪಾಯವಾದೀತೇ ಹೇಗೆ? ॥ ೮೨ ॥ ಅರ್ಜುನಾ, ನಿನ್ನ ಚಿತ್ತವು ಸ್ನೇಹಮಯವಾಗಿದ್ದು ಅಂತಃಕರಣವು ಕರಗಿ ಹೋಗಿದೆ. ಆದುದರಿಂದ ನಿನ್ನಲ್ಲಿ ದಯೆಯು ಉತ್ಪನ್ನವಾಗಿರುವದು. ಆದರೆ ಆ ದಯೆಯು ಈ ಯುದ್ಧ ಪ್ರಸಂಗದಲ್ಲಿ ಅಯೋಗ್ಯವಾದದ್ದು । ೮೩ । ಎಲೈ ಅರ್ಜುನನೇ, ಹೀಗೆ ನೋಡು—ಆಕಳ ಹಾಲು ಶ್ರೇಷ್ಠವಾಗಿರುವದು. ಆದರೂ ವಿಷಮ ಜ್ವರದಿಂದ ಪೀಡಿತನಾದ ಮನುಷ್ಯನಿಗೆ, ಅದು ಅಪಥ್ಯವಿದ್ದುದರಿಂದ ವಿಷಪ್ರಾಯವಾಗಿರುವದು. ॥ ೮೪ ॥ ಅದೇ ಪ್ರಕಾರ ಬ್ರಾಹ್ಮಣನು ಕ್ಷತ್ರಿಯರ ಕರ್ಮಮಾಡುವದರಿಂದ ಇಲ್ಲವೇ ಕ್ಷತ್ರಿಯರು ಬ್ರಾಹ್ಮಣ ಮುಂತಾದವರ ಧರ್ಮವನ್ನು ಆಚರಿಸುವದರಿಂದ ಅವರು ಸ್ವಹಿತದಿಂದ ಮುಕ್ತರಾಗುವರು. ಆದುದರಿಂದ ನೀನು ಎಚ್ಚರುಳ್ಳವನಾಗಿರು ಕಂಡೆಯಾ? ॥ ೮೫ ॥ ವ್ಯರ್ಥವಾಗಿ ಶೋಕಿಸಬೇಡ. ಸ್ವಧರ್ಮವನ್ನು ಅಂದರೆ ಕ್ಷಾತ್ರಧರ್ಮವನ್ನು ನೀನು ಸ್ವೀಕರಿಸುವದರಿಂದ ಯಾವ ಕಾಲದಲ್ಲಿಯೂ ನಿನಗೆ ದೋಷವು ತಗಲುವದಿಲ್ಲ. ॥ ೮೬ ॥ ಸರಳವಾದ ಮಾರ್ಗದಿಂದ ನಡೆಯುವವರಿಗೆ ಸರ್ವಥಾ ಅಪಾಯ ವುಂಟಾಗುವದಿಲ್ಲ. ಇಲ್ಲವೇ ದೀವಿಗೆಯ ಆಶ್ರಯದಿಂದ ನಡೆಯುವವರು ಎಡಹುವದಿಲ್ಲ. ॥ ೮೭ ॥ ಅದರಂತೆಯೇ ಅರ್ಜುನಾ, ಸ್ವಧರ್ಮದಿಂದ ನಡೆಯುವವನಿಗೆ ತೊಂದರೆಗಳು ತಪ್ಪಿ ಅವನ ಎಲ್ಲ ಮನೋರಥಗಳು ಸಹಜವಾಗಿಯೇ ಪೂರ್ಣವಾಗುತ್ತವೆ ॥ ೮೮ ॥ ಆದ್ದರಿಂದ ಕ್ಷತ್ರಿಯರಾದ ನಿಮಗೆ ಸಂಗ್ರಾಮದ ಹೊರತು ಮತ್ತೊಂದಾವುದೂ ಉಚಿತವಾದ ಕರ್ಮವಿರುವದಿಲ್ಲ. ॥ ೮೯ ॥ ನಿಷ್ಕಪಟ ಮನಸಿನಿಂದ ಎದುರಾಗಿ ನಿಂತು ಒಬ್ಬರೊಬ್ಬರು ಶತ್ರುಗಳ ಸಂಗಡ ಹೋರಾಡಿ ಯುದ್ಧಮಾಡಿ ಅವರ ಮುಯ್ಯಕ್ಕೆ ಮುಯ್ಯ ತೀರಿಸಬೇಕೆಂಬುವದು ನಿನಗೆ ಚನ್ನಾಗಿ ಗೊತ್ತಿದೆ. ಇದನ್ನು ನಾವು ಬೇರೆ ಹೇಳುವ ಕಾರಣವಿಲ್ಲ. ॥ ೧೯೦ ॥

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರ ಮಪಾವೃತಂ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಂ ॥ ೩೨ ॥**

**[ ಯದೃಚ್ಛಯಾ ಚೋಪಪನ್ನಮಿತಿ ]** ಅರ್ಜುನಾ ಜುಂಝು ದೇಖ ಆತಾಚೆ । ಹೇ ಹೋ ಕಾ ದೈವ ತುಮಚೆ । ಕೀ ನಿಧಾನ ಸಕಳ ಧರ್ಮಾಚೆ । ಪ್ರಕಟಲೇ ಅಸೇ ॥ ೯೧ ॥ ಹಾ ಸಂಗ್ರಾಮು

ಕಾಯ ಮ್ಹಣಿಪೇ । ಕೀ ಸ್ವರ್ಗಚಿಯೇಣೇ ರೂಪೇ । ಮೂರ್ತ ಕಾ ಪ್ರತಾಪೆ! । ಉದಯು ಕೇಲಾ ॥ ೯೨ ॥ ನಾತರೀ ಗುಣಾಚೇನಿ ಪತಿಕರೇ । ಆರ್ತೀಚೇನಿ ಪಡಿಭರೇ । ಹೇಕಿರ್ತೀಚಿ ಸ್ವಯಂವರೇ । ಆಲೀ ತುಜ ॥ ೯೩ ॥ ಕ್ಷತ್ರಿಯೇ ಬಹುತ ಪುಣ್ಯಕೀಜೆ । ತೈಜುಂರ್ಝು ಐಸೇ ಲಾಹಿಜೇ । ಜೈಸೇ ಮಾರ್ಗೀ ಜಾತಾ ಆಡಳಿಜೇ । ಚಿಂತಾಮಣೀ ॥ ೯೪ ॥ ನಾತರೀ ಜಾಂಭಯಾ ಪಸರೀ ಮುಖ । ತೇಥ ಅವಚಟೇ ಪಡೇ ಪೀಯೂಖ । ತೈಸಾ ಹಾಸಂಗ್ರಾಮುದೇಖ । ಪಾತಲಾ ಅಸೇ ॥೯೫॥

**ಅರ್ಥ**— ಅರ್ಜುನಾ, ಈ ಯುದ್ಧವೆಂದರೆ ನಿನ್ನ ಪೂರ್ವಜನ್ಮದ ಭಾಗ್ಯೋದಯವೆಂದೇ ತಿಳಿ. ಅಥವಾ ಸರ್ವಧರ್ಮದ ನಿಕ್ಷೇಪವೇ ಪ್ರಕಟವಾಗಿರುವದು. ॥ ೯೧ ॥ ಎಲೋ ಪಾರ್ಥಾ, ಇದು ಸಂಗ್ರಾಮವಲ್ಲ. ನಿಮ್ಮ ಪ್ರತಾಪದಿಂದ ಮೂರ್ತಿಮಂತ ಸ್ವರ್ಗವೇ ಸಂಗ್ರಾಮದ ರೂಪವಾಗಿ ಪರಿಣಮಿಸಿದೆಯೆಂದು ತಿಳಿ. ॥ ೯೨ ॥ ಇಲ್ಲವೇ ನಿನ್ನ ಗುಣದ ಲೌಕಿಕವನ್ನು ಕೇಳಿ ಕೀರ್ತಿಕಾಂತೆಯು ಮೋಹಿತಳಾಗಿ ನಿನ್ನನ್ನು ವರಿಸಲೋಸುಗ ಬಂದಿರುವಳೆಂಬಂತೆ ಕಾಣುತ್ತದೆ. ॥ ೯೩ ॥ ಇಂತಹ ಪ್ರಕಾರದ ಯುದ್ಧವು ಸಹಜವೇ ಪ್ರಾಪ್ತವಾಗಲಾರದು. ಕ್ಷತ್ರಿಯರು ಪುಣ್ಯಮಾಡಿದ್ದರೆ ಮಾತ್ರ ಇಂತಹ ಯುದ್ಧದ ಪ್ರಸಂಗವು ಪ್ರಾಪ್ತವಾಗುತ್ತದೆ. ಹಾದೀ ಹೋಗುವಾಗ ಇಚ್ಛಿತವಾದದ್ದನ್ನು ಕೊಡುವಂಥ ಚಿಂತಾಮಣಿಯು ದಾರಿಕಾರನಿಗೆ ಸಿಕ್ಕಂತೆ ॥ ೯೪ ॥ ಇಲ್ಲವೇ ಆಕಳಿಸಬೇಕೆಂದು ಬಾಯಿ ತೆರೆದಾಗ ಆಕಸ್ಮಾತ್ ಅದರಲ್ಲಿ ಅಮೃತ ಬಿದ್ದಂತೆ ಈ ಯುದ್ಧ ಪ್ರಸಂಗವು ನಿನಗೆ ದೈವ ಯೋಗದಿಂದ ಪ್ರಾಪ್ತವಾಗಿರುವದು ॥೯೫॥

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**

[ **ಅಥಿತಿ** ] ಆತಾ ಹಾ ಐಸಾ ಅವ್ಹೇರಿಜೇ । ಮಗನಾಥಿಲೇ ಶೋಚೂ ಬೈಸಿಜೇ । ತರೀ ಆಪಣ ಆಪಣಾ ಹೋ ಇಜೇ : ಆಪಣಪೇಯಾ ॥ ೯೬ ॥ ಪೂರ್ವ ಜಾಚೆ ಜೋಡಲೇ । ಆಪಣಚಿ ಹೋಯ ಥಾಡಿಲೇ । ಜರೀ ಆಜೀ ಶಸ್ತ್ರ ಸಾಂಡಿಲೇ । ರಣೀ ಇಯೇ ॥ ೯೭ ॥ ತರೀ ಅಸತೀ ಕೀರ್ತಿ ಜಾಈಲ । ಜಗಾಚಿ ಅಭಿಶಾಪ ದೇಈಲ । ಆಣಿ ಗಿವಸಿತ ಪಾವತೀಲ । ಮಹಾದೋಷ ॥ ೯೮ ॥ ಜೈಸೀ ಭರ್ತಾರ ರೇಹೀನ ವನಿತಾ । ಉಪಹತೀ ಪಾವೇ ಸರ್ವಥಾ । ಮಗ ತೈಸೀ ದಶಾಜೀವಿತಾ ಸ್ವಧರ್ಮೇ ವೀಣ ॥ ೯೯ ॥ ನಾತರೀ ರಣೀ ಶವಸಾಂಡಿಜೇ । ತೇ ಚೌಮೇರೀ ಗಿಧೀ ವಿದಾರಿಜೇ । ತೈಸೇ ಸ್ವಧರ್ಮ ಹೀನಾ ಅಭಿಭವಿಜೇ । ಮಹಾದೋಷೀ ॥ ೧೦೦ ॥

**ಅರ್ಥ** - ಇಂತಹ ಯುದ್ಧವನ್ನು ಬಿಟ್ಟು ವ್ಯರ್ಥವಾದ ಮಾತಿನ ದೆಸೆಯಿಂದ ದುಃಖಿಸುತ್ತ ಕುಳಿತಿರುವದರಿಂದ ನಿನ್ನ ಘಾತವನ್ನು ನೀನೇ ಮಾಡಿಕೊಳ್ಳುತ್ತಿರುವಿ, ॥ ೯೬ ॥ ಈ ರಣಾಂಗಣದಲ್ಲಿ ಒಂದುವೇಳೆ ಇಂದು ನೀನು ಶಸ್ತ್ರವನ್ನು ಚಲ್ಲಿಕೊಟ್ಟರೆ ಪೂರ್ವಜರು ದೊರಕಿಸಿದ ಕೀರ್ತಿಯನ್ನು ನೀನೇ ಹಾಳುಮಾಡಿದಂತಾಗುವದು. ॥ ೯೭ ॥ ಇಷ್ಟೇ ಅಲ್ಲ. ಇದ್ದಂತಹ ನಿನ್ನ ಕೀರ್ತಿಯೂ ನಾಶವಾಗುವದು. ಎಲ್ಲ ಜಗತ್ತಿನ ಜನರೂ ನಿಂದಿಸುವರು. ಆ ಮೇಲೆ ನಿನ್ನಲ್ಲಿ ವಾಸಮಾಡಲು ಮಹಾದೋಷಗಳು ಓಡಿ ಬರುವವು. ॥ ೯೮ ॥ ಪತಿವಿರಹಿತ ಸ್ತ್ರೀಯು ಎಲ್ಲರಿಂದ ತಿರಸ್ಕಾರವನ್ನು ಹೊಂದುವಂತೆ ಸ್ವಧರ್ಮತ್ಯಾಗ ಮಾಡುವವರು ತಿರಸ್ಕಾರವನ್ನು ಹೊಂದುವರು. ಅವರ ಅವಸ್ಥೆಯು ಅಂಥ ಸ್ತ್ರೀಯರ ಅವಸ್ಥೆಯಂತೆ ಹೀನವಾಗುವದು. ॥ ೯೯ ॥ ಅಥವಾ ರಣದಲ್ಲಿ ಹೆಣಗಳು ಬಿದ್ದಕೂಡಲೇ ನಾಲ್ಕೂ ಕಡೆಯಿಂದ ಹದ್ದುಗಳು ಬಂದು ಹೆಣಗಳನ್ನು ಹರಿದು ತಿನ್ನುವಂತೆ ಸ್ವಧರ್ಮಹೀನನಾದ ಮನುಷ್ಯನನ್ನು ಮಹಾದೋಷಗಳು ಮುತ್ತಿಕೊಂಡು ನಾಶಮಾಡುತ್ತವೆ. ॥ ೧೦೦ ॥

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಂ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

**[ ಅಕೀರ್ತಿ ಮಿತಿ ]** ಮ್ಹಣೋನಿ ಸ್ವಧರ್ಮು ಹಾ ಸಾಂಡಸೀಲ । ತರೀ ಪಾಪಾ ವರಪಡಾ ಹೋಸೀಲ । ಆಣಿ ಅಪೇಶ ತೇನ ವಚೇಲ । ಕಲ್ಪಾಂತವರೀ ॥ ೧ ॥ ಜಾಣತೇನಿ ತವಚಿ ಜಿಯಾವೇ । ಜವ ಅಪಕೀರ್ತಿ ಆಂಗಾ ನ ಪವೇ । ಆಣಿ ಸಾಂಗಪಾ ಕೇವಿ ನಿಗಾವೇ । ಏಥೋನಿಯಾ ॥ ೨ ॥ ತೂ ನಿರ್ಮತ್ಸರ ಸದಯತಾ । ಏಥೂನೀ ನಿಘಸೀಲ ಕೀರ ಮಾಘೌತಾ । ಪರೀ ತೇ ಗತಿ ಸಮಸ್ತಾ । ನ ಮನೇಲ ಯಯಾ ॥ ೩ ॥ ಹೇ ಚಹೂ ಕಡೂನಿ ಕವಳಿತೀಲ । ಬಾಣವರೀ ಘೇತೀಲ । ಯೇಥ ಪಾರ್ಥಾ ನ ಸುಟಜೇಲ । ಕೃಪಾಳೂಪಣೇ ॥ ೪ ॥ ಐಸೇ ನಿಹಿ ಪ್ರಾಣ ಸಂಕಟೇ । ಜರೀ ವಿಪಾಯೇ ಪಾ ನಿಘಣೇ ಘಟೇ । ತರೀ ತೇ ಜಿಯಾಲೇ ವೋಖಟೇ । ಮರಣಾಹುನಿ ॥ ೫ ॥

**ಅರ್ಥ—** ಇಷ್ಟರ ದೆಸೆಯಿಂದಲೇ ಒಂದು ವೇಳೆ ಪ್ರಸ್ತುತ ಪ್ರಾಪ್ತವಾದ ಕ್ಷತ್ರಿಯ ಧರ್ಮವನ್ನು ತ್ಯಾಗ ಮಾಡಿದರೆ ನಿನಗೆ ಪಾಪವು ಬರುವದು. ಮತ್ತು ಕಲ್ಪಾಂತದ ವರೆಗೆ ನಿನ್ನ ಈ ಅಪಕೀರ್ತಿಯು ಕಲಂಕವು ಅಳಿಯದೆ ಉಳಿಯುವದು. ಎಲ್ಲಿಯ ವರೆಗೆ ಅಪಕೀರ್ತಿಯುಂಟಾಗಿರುವದಿಲ್ಲವೋ, ಅಲ್ಲಿಯ ವರೆಗೆ ಜ್ಞಾನಿಯು ಬದುಕಿರಬೇಕು. (ಅಪಕೀರ್ತಿಯು ಸಂಭಾವಿತನಿಗೆ ಸಾವಿಗಿಂತ ಹೆಚ್ಚು.) ಹೀಗಿರಲು ಈ ರಣಭೂಮಿಯನ್ನು ಬಿಟ್ಟು ವಿಮುಖನಾಗಿ ಹೇಗೆ ಹೋಗುವೆ? ॥ ೨ ॥ ಸದಯಾಂತಃಕರಣದಿಂದ ಮತ್ಸರರಹಿತನಾಗಿ ನೀನು ಹಿಂದಕ್ಕೆ ತಿರುಗಬಹುದು. ಇದು ನಿಜ. ಆದರೆ ಈ ಎಲ್ಲ ದುಷ್ಟರಿಗೆ ಆ ಮಾತು ಸರಿದೋರಲಾರದು. ಮತ್ತು ಅವರು ನಿಜವೆಂದೂ ನಂಬಲಾರರು. ॥ ೩ ॥ ನೀನು ಬಿಟ್ಟರೂ ಈ ಕೌರವರು ನಾಲ್ಕೂ ಕಡೆಯಿಂದ ನಿನ್ನನ್ನು ಮುತ್ತಿ ನಿನ್ನ ಮೇಲೆ ಬಾಣದ ಮಳೆಗಳನ್ನೂ ಸುರಿಸುವರು. ಹೀಗಿದ್ದ ಮೇಲೆ ಈ ಪ್ರಸಂಗದಲ್ಲಿ ನಿನ್ನ ಕಾರುಣ್ಯದಿಂದ ನಿನ್ನ ಬಿಡುಗಡೆಯು ಎಂದಿಗೂ ಆಗಲರಿಯದು. ॥ ೪ ॥ ಇಷ್ಟು ಮಾಡಿದರೂ ಅಕಸ್ಮಾತ್ ಬಹಳ ಕಷ್ಟದಿಂದ ನಿನ್ನ ಬಿಡುಗಡೆಯಾದರೆ, ಆ ನಿನ್ನ ಬದುಕಿರೋಣವು ಮರಣದಕಿಂತಲೂ ಕಷ್ಟಪ್ರದವಾದುದು. ॥ ೫ ॥

**ಭಯಾದ್ರಣಾದು ಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ॥ ೩೫ ॥**

**[ ಭಯಾದಿತಿ ]** ತೂ ಆಣಿ ಕಹೀ ಏಕ ನ ವಿಚಾರಿಸೀ । ಏಥ ಸಂಭ್ರಮೇ ಜುಂಝೋ ಆಲಾಸೀ । ಆಣಿ ಸಕಣವ ಪಣೆ ನಿಘಾಲಾಸೀ । ಮಾಗುತಾ ಜರೀ ॥ ೬ ॥ ತರೀ ತುಝೆ ತೇ ಅರ್ಜುನಾ । ಯಾ ವೈರಿ ಯಾ ದುರ್ಜನಾ । ಕಾ ಪ್ರತ್ಯಯಾ ಯೇಈಲ ಮನಾ । ಸಾಂಗೇಮಜ ॥ ೭ ॥

**ಅರ್ಥ—** ನೀನು ಇನ್ನೂ ಒಂದು ಮಾತಿನ ವಿಚಾರ ಮಾಡಿರುವದಿಲ್ಲ. ನೀನು ಈ ಸ್ಥಳದಲ್ಲಿ ಒಳ್ಳೇ ಆವೇಶದಿಂದ ಯುದ್ಧಕ್ಕೆ ಸನ್ನದ್ಧನಾಗಿ ಬಂದು ಈಗ ಸದಯಾಂತಃಕರಣದಿಂದ ಹಿಂತಿರುಗಲು ಸಿದ್ಧನಾದರೆ, ॥ ೬ ॥ ರಣದಿಂದ ಅಂಜಿಹೋದನೆಂದು ಮಹಾರಥಿಗಳೆಲ್ಲರೂ ನಿನ್ನನ್ನು ಹೀಯಾಳಿಸದೇ ಬಿಡರು. ಅರ್ಜುನಾ ನಿನ್ನ ಪ್ರತ್ಯಕ್ಷ ಶತ್ರುಗಳೂ, ದುರ್ಜನರೂ ಆದ ಕೌರವರಿಗೆ ಈ ಮಾತು ನಿಜವೆಂದು ಕಂಡುಬರುವದೇ? ॥ ೭ ॥

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।**
**ನಿಂದಂತಸ್ತವ ಸಾಮರ್ಥ್ಯಂ ತತೋದುಃಖತರಂ ನುಕಿಂ ॥ ೩೬ ॥**

**[ ಅವಾಚ್ಯ ವಾದಾನಿತಿ ]** ಹೇ ಮ್ಹಣತೀ ಗೇಲಾ ರೇ ಗೇಲಾ । ಅರ್ಜುನ ಆಮ್ಹಾಬಿಹಾಲಾ । ಹಾ ಸಾಂಗೇ ಬೋಲ ಉರಲಾ । ನಿಕಾ ಕಾಯೀ ॥ ೮ ॥ ಲೋಕ ಸಾಯಾಸೇ ಕರೂನಿ ಬಹುತೇ । ವೇಚಿತೀ ಆಪುಲೀ । ಜೀವಿತೇ । ಪರೀ ವಾಢವಿತೀ ಕೀರ್ತಿತೇ । ಧನುರ್ಧರಾ ॥ ೯ ॥ ತೇ ತುಜ ಅನಾ

ಯಾಸೇ । ಅನಕಳಿತ ಜೋಡಿಲೀ ಅಸೇ । ಹೇ ಅದ್ವಿತೀಯ ಜೈಸೇ । ಗಗನ ಆಹೇ ॥ ೨೧೦ ॥ ತೈಸೀ ಕೀರ್ತಿ ನಿಃಸ್ಸೀಮ । ತುರ್ಝ್ಯಾ ಠಾಯೀಂ ನಿರುಪಮ । ತುರ್ಝೆ ಗುಣ ಉತ್ತಮ । ತಿಹಿಲೋಕೀಂ ॥ ೧೧ ॥ ದಿಗಂತೀಚೆ ಭೂಪತಿ । ಭಾಟ ಹೋವೂನಿ ವಾಖಾಣಿತೀ । ಜೇ ಐಕಿಲಿಯಾ ದಚಕತೀ । ಕೃತಾಂತಾದಿಕ ॥ ೧೨ ॥ ಐಕ ಐಸೀ ಮಹಿಮಾ ಘನವಟ । ಗಂಗಾ ತೈಸೀ ಚೋಖಟ । ಜಿಯಾ ದೇಖೀ ಜಗೀ ಸುಭಟ । ವಾಂತ ಜಾಹಾಲೇ ॥ ೧೩ ॥ ತೇ ಪೌರುಷ ತುರ್ಝೇ ಅದ್ಭುತ । ಆ ಇಕೋನಿಯಾ ಹೇ ಸಮಸ್ತ । ಜಾಲೇ ಅತಿವಿರಕ್ತ । ಜೀವಿತೇಸೀ ॥ ೧೪ ॥ ಜೈಸಾ ಸಿಂಹಾಚಿಯಾ ಹಾಂಕಾ । ಯುಗಾಂತ ಹೋಯ ಮದ ಮುಖಾ । ತೈಸಾ ಕೌರವಾ ಅಶೇಖಾ । ಧಾಕ ತುರ್ಝಾ ॥ ೧೫ ॥ ಜೈಸೇ ಪರ್ವತ ವಜ್ರಾತೇ । ನಾತರೀ ಸರ್ಪಗರುಡಾತೇ । ತೈಸೇ ಅರ್ಜುನಾ ಹೇ ತೂತೇ । ಮಾನಿತೀ ಸದಾ ॥ ೧೬ ॥ ತೇ ಅಗಾಧ ಪಣ ಜಾಯಿಲ । ಮಗ ಹೀನತ್ವ ಅಂಗಾ ಯೇಈಲ । ಜರೀ ಮಾಗುತಾ ನಿಘ ಸೀಲ । ನ ಜುಂಝುತಚಿ ॥ ೧೭ ॥ ಆಣಿ ಹೇ ಪಳತಾ ಪಳ, ನೇದಿತೀ । ಧರೂನಿ ಅವಕಳಾ ಕರಿತೀ । ನ ಗಣಿತ ಕುಟೀ ಬೋಲತೀ । ಆ ಇಕತಾ ತುಜ ॥೧೮॥ ಮಗ ತೇ ವೇಳೀ ಹಿಯೇ ಫುಟಾವೇ । ಆತಾ ಲಾಠೇವಣೇ ಕಾ ನ ಜುಂಝಾವೇ। ಹೇ ಜಿಂತಲೇ ತರೀ ಭೋಗಾವೇ । ಮಹೀತಳ ॥ ೧೯ ॥

**ಅರ್ಥ—** ನಿನ್ನ ಶತ್ರುಗಳು "ಅದೋ, ಓಡಿದನು. ಓಡಿದುನು. ಇಂದು ಅರ್ಜುನನು ನಮಗೆ ಹೆದರಿ ಭೀತಿಯಿಂದ ಪಲಾಯನಮಾಡಿದನು." ಎಂದು ಕೂಗುವರು. ಅರ್ಜುನಾ ಈ ತರಹದ ದೋಷವು ನಿನಗೆ ಬರುವದು ಒಳ್ಳೆಯದೇ ? ॥ ೮ ॥ ಬೇಕಾದಷ್ಟು ಕಷ್ಟಬಟ್ಟು, ಇಲ್ಲವೇ ಪ್ರಾಣವನ್ನಾದರೂ ತ್ಯಜಿಸಿ ಜನರು ಆಕಾಶದಂತೆ ಅನುಪಮೇಯವಾದುದೂ ನಿಷ್ಪ್ರತಿಬಂಧವಾದುದೂ ಆದ ಯಾವ ಕೀರ್ತಿಯನ್ನು ಸಂಪಾದನ ಮಾಡುತ್ತಾರೋ, ॥ ೯ ॥ ಅದನ್ನು ಸಂಪಾದನಮಾಡುವ ಪ್ರಸಂಗವು ಅನಾಯಾಸವಾಗಿಯೇ ಪ್ರಾಪ್ತವಾಗಿರುತ್ತದೆ. ॥ ೨೧೦ ॥ ನಿನ್ನ ಕೀರ್ತಿಯು ಅಮರ್ಯಾದಿತವಿದ್ದು ನಿನ್ನ ಗುಣವಾದರೂ ಅದ್ವಿತೀಯವಾಗಿರುವದು. ಹೀಗೆ ಮೂರು ಲೋಕಗಳಲ್ಲಿ ನಿನ್ನ ಪ್ರಖ್ಯಾತಿಯು ಹಬ್ಬಿದೆ. ॥ ೧೧ ॥ ದೇಶದೇಶಗಳ ರಾಜರು ಸ್ತುತಿಪಾಠಕರಾಗಿ ನಿನ್ನ ಕೀರ್ತಿಯನ್ನು ಹಾಡುತ್ತಾರೆ. ಅದನ್ನು ಕೇಳಿ ಯಮ ಮೊದಲಾದವರೂ ಭಯಪಡುತ್ತಾರೆ. ॥ ೧೨ ॥ ಆ ನಿನ್ನ ಕೀರ್ತಿಯ ಮಹಿಮೆಯು ಗಂಗಾನದಿಯ ನೀರಿನಂತೆ ನಿರ್ಮಲವೂ, ಆಗಾಧವೂ ಆಗಿರುತ್ತದೆ. ಅದನ್ನು ಕೇಳಿ ಮಹಾರಥಿಗಳ ಕೀರ್ತಿಯೂ ಅಡಗಿ ಹೋಗಿರುವದು ॥೧೩॥ ಇಂಥ ನಿನ್ನ ಅದ್ಭುತ ಶೌರ್ಯದ ಮಹಿಮೆಯನ್ನು ಕೇಳಿ ಈ ಸರ್ವ ಕೌರವರು ತಮ್ಮ ಪ್ರಾಣದ ಮೇಲೆ ಉದಾರರಾಗಿರುವರು. ॥ ೧೪ ॥ ಸಿಂಹದ ಗರ್ಜನೆಯನ್ನು ಕೇಳಿದ ಕೂಡಲೇ ಮದೋನ್ಮತ್ತವಾದ ಆನೆಗೆ ಪ್ರಳಯಕಾಲದ ಭಾಸವಾಗುವಂತೆ ಈ ಎಲ್ಲ ಕೌರವರಿಗೆ ನಿನ್ನ ಕೀರ್ತಿಯನ್ನು ಕೇಳಿದೊಡನೆ ಭಯವುಂಟಾಗಿದೆ. ॥ ೧೫ ॥ ಪರ್ವತವು ವಜ್ರಕ್ಕೆ, ಹಾವು ಗರುಡನಿಗೆ ಭಯಪಡುವಂತೆ ಈ ಕೌರವರು ನಿನಗೆ ಅಂಜುತ್ತಾರೆ. ॥ ೧೬ ॥ ಅಂದಮೇಲೆ ಯುದ್ಧ ಮಾಡದೇ ಒಂದು ವೇಳೆ ಹಿಂದೆ ತಿರುಗಿದರೆ ನಿನ್ನ ದೊಡ್ಡಸ್ತಿಕೆಯು ಇಲ್ಲದಂತಾಗಿ ನಿನಗೆ ಹೀನತ್ವವು ( ನೀಚತನವು ) ಪ್ರಾಪ್ತವಾಗುವದು. ॥ ೧೭ ॥ ಒಳ್ಳೇದು ಓಡಿ ಹೋಗಬೇಕೆಂದರೂ ಇವರು ಹೋಗಗೊಡುವದಿಲ್ಲ. ನಿನ್ನನ್ನು ಹಿಡಿದು ತಂದು ನಿನ್ನ ಅವಮಾನವನ್ನು ಮಾಡುವರು. ದುಷ್ಟ ಶಬ್ದಗಳನ್ನಾಡುವರು. ॥ ೧೮ ॥ ಆ ಮರ್ಮಭೇದಕ ಶಬ್ದಗಳನ್ನು ಕೇಳಿ ನಿನ್ನ ಅಂತಃಕರಣವು ಒಡೆದು ಹೋಗಬಹುದು. ಅಂದಬಳಿಕ ಶೂರತನದಿಂದ ಯುದ್ಧವನ್ನೇಕೆ ಮಾಡಬಾರದು ? ಒಂದು ವೇಳೆ ಇವರನ್ನು ಜಯಿಸಿದರೆ ಪೃಥ್ವಿಯ ರಾಜ್ಯಸುಖವನ್ನು ಭೋಗಿಸುವಿ. ॥ ೧೯ ॥

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ ।**
**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

**[ ಹತ ಇತಿ ]** ನಾತರೀ ರಣೀ ಏಥ । ಜುಂಝುತಾ ವೇಚಲೇ ಜೀವಿತ । ತರೀ ಸ್ವರ್ಗಸುಖ ಅನಕಳಿತ । ಪಾವಸೀಲ ॥ ೨೨೦ ॥ ಮ್ಹಣೋನಿಯೇ ಗೋಷ್ಟೀ । ವಿಚಾರ ನಕರೀ ಕಿರೀಟೀ । ಆತಾ

ಧನುಷ್ಯ ಘೇವೂನಿ ಉಠೀ । ಜುಂಝುವೇಗೀ ॥ ೨೧ ॥ ದೇಖೇ ಸ್ವಧರ್ಮು ಹಾ ಆಚರತಾ । ದೋಷ ನಾಶೇ ಅಸತಾ । ತುಜ ಭ್ರಾಂತಿ ಹೇ ಕವಣಚಿತ್ತಾ । ಪಾತಕಾಚೀ ॥ ೨೨ ॥ ಸಾಂಗೇ ಪ್ಲವೇಚಿ ಕಾಯ ಬುಡಿಜೇ । ಕಾ ಮಾರ್ಗೀ ಜಾತಾ ಆಡಳಿಜೇ । ಪರೀ ವಿಪಾಯೇ ಚಾಲೋ ನೇಣಿಜೇ । ತರೀ ತೇಹೀ ಘಡೇ ॥ ೨೩ ॥ ಅಮೃತೇ ತರೀಚಿ ಮರಿಜೇ । ಜರೀ ವಿಷೇಸೀ ಸೇವಿಜೇ । ತೈಸಾ ಸ್ವಧರ್ಮೀ ದೋಷ ಪಾವಿಜೆ । ಹೇತು ಕಪಣೇ ॥ ೨೪ ॥ ಮ್ಹಣೋನಿಯಾ ಪಾರ್ಥಾ । ಹೇತು ಸಾಂಡೂನಿ ಸರ್ವಥಾ । ತುಜ ಕ್ಷಾತ್ರವೃತ್ತೀ ಜುಂಝತಾ । ಪಾಪನಾಹೀ ॥ ೨೫ ॥

**ಅರ್ಥ**— ಇಲ್ಲವೇ ರಣಾಂಗಣದಲ್ಲಿ ಹೋರಾಡುವಾಗ ನಿನಗೆ ಮರಣವಾದರೆ ಸಹಜವೇ ಸ್ವರ್ಗಸುಖವನ್ನು ಭೋಗಿಸುವಿ. ॥ ೨೧೦ ॥ ಆದ್ದರಿಂದ ಅರ್ಜುನನೇ ಈ ವಿಷಯವಾಗಿ ವಿಚಾರಮಾಡುತ್ತ ಕುಳಿತುಕೊಳ್ಳುವದು ಯೋಗ್ಯವಲ್ಲ. ಆದರೆ ಇನ್ನುಮೇಲೆ ಎದ್ದೇಳು. ಕೈಯಲ್ಲಿ ಧನುರ್ಬಾಣಗಳನ್ನು ತೆಗೆದುಕೊಂಡು ಯುದ್ಧಕ್ಕೆ ಸಿದ್ಧನಾಗು. ॥ ೨೧ ॥ ಹೀಗೆ ನೋಡು- ಸ್ವಧರ್ಮದ ಆಚರಣ ಮಾಡುವದರಿಂದ ಇದ್ದ ದೋಷಗಳು ನಾಶಹೊಂದುತ್ತವೆ. ಹೀಗಿದ್ದೂ ಸ್ವಧರ್ಮಾಚರಣೆಯನ್ನು ತ್ಯಜಿಸಿ, ಪಾಪಮಯವಾದ ಈ ಭ್ರಮೆಗೆ ನಿನ್ನ ಅಂತಃಕರಣದಲ್ಲಿ ಹೇಗೆ ನೀನೆಡೆಯನ್ನು ಕೊಟ್ಟೆ ॥ ೨೨ ॥ ನೀನೇ ಹೇಳು- ನಾವಿನಲ್ಲಿ ಕುಳಿತುಕೊಳ್ಳುವವನಿಗೆ ಎಂದಾದರೂ ನೀರಿನಲ್ಲಿ ಮುಳುಗುವ ಭಯವುಂಟೇ ? ರಾಜಮಾರ್ಗದಿಂದ ನಡೆಯುವವನೆಂದಾದರೂ ಎಡವಿ ಬೀಳಬಹುದೇ ? ನಡೆಯಲಿಕ್ಕೆ ಬರದವನು ಮಾತ್ರ ಎಡವಿಬೀಳಬಲ್ಲನು. ॥ ೨೩ ॥ ಹಾಲು ಕುಡಿಯುವದರಿಂದ ಮರಣವು ಬರುವದಿಲ್ಲ. ಆದರೆ ವಿಷವನ್ನು ಕೂಡಿಸಿ ಕುಡಿಯುವದರಿಂದ ಸಾವು ನಿಶ್ಚಯವು. ಅದೇ ಪ್ರಕಾರ ಫಲಾಶೆಯಿಂದ ಸ್ವಧರ್ಮಾಚರಣೆಯನ್ನು ಮಾಡುವವನಿಗೆ ಮಾತ್ರ ದೋಷವುಂಟಾಗುವದು. ॥ ೨೪ ॥ ಆದ್ದರಿಂದ ಅರ್ಜುನಾ ಫಲಾಪೇಕ್ಷೆಯನ್ನು ಬಿಟ್ಟುಕೊಟ್ಟು ಕ್ಷತ್ರಿಯ ಧರ್ಮದಿಂದ ಯುದ್ಧಮಾಡು. ಅಂದರೆ ಪಾತಕದ ಲೇಶವೂ ನಿನಗೆ ತಗುಲಲಾರದು. ॥ ೨೫ ॥

**ಸುಖದುಃಖೇ ಸಮೇ ಕೃತ್ವಾ ಲಾಭಾ ಲಾಭೌ ಜಯಾ ಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥**

**[ ಸುಖದುಃಖೇ ಇತಿ ]** ಸುಖೀ ಸಂತೋಷಾ ನಯಾವೇ । ದುಃಖೀ ವಿಷಾದಾ ನ ಭಜಾವೇ । ಆಣಿ ಲಾಭಾ ಲಾಭ ನ ಧರಾವೇ । ಮನಾ ಮಾಜೀ ॥ ೨೬ ॥ ಏಥ ವಿಜಯ ಪಣ ಹೋಈಲ ಕೀ ಸರ್ವಥಾ ದೇಹ ಜಾಈಲ । ಹೇ ಆಧೀಚಿ ಕಾಹೀ ಪುಢೀಲ । ಚಿಂತಾವೇ ನಾ ॥ ೨೭ ॥ ಆಪಣಯಾ ಉಚಿತಾ । ಸ್ವಧರ್ಮೇ ರಾಹಾಟತಾ । ಜೇ ಪಾವೇ ತೇ ನಿವಾಂತಾ । ಸಾಹೋನಿ ಜಾವೇ ॥ ೨೮ ॥ ಐಸೇಯಾ ಮನೇ ಹೋ ಆವೇ । ತರೀ ದೋಷ ನಘಡೇ ಸ್ವಭಾವೇ । ಮ್ಹಣೋನಿ ಆತಾ ಜುಂಝಾವೇ । ನಿಭ್ರಾಂತ ತುವಾ ॥ ೨೯ ॥

**ಅರ್ಥ**— ಸುಖವಾದರೆ ಹಿಗ್ಗಬಾರದು. ದುಃಖವಾದರೆ ಕುಗ್ಗಬಾರದು. ಮನಸಿನಲ್ಲಿ ಲಾಭ ಹಾನಿಗಳನ್ನು ಸಮವೆಂದು ಭಾವಿಸಬೇಕು. ॥ ೨೬ ॥ ಈ ಯುದ್ಧ ಭೂಮಿಯಲ್ಲಿ ತನಗೆ ಜಯವು ದೊರಕೀತು ಇಲ್ಲವೇ ತಾನು ಸೋತು ಸಾಯಬಹುದು. ಮುಂದೆ ಆಗುವ ಮಾತಿನ ವಿಚಾರವನ್ನು ಮೊದಲೇ ಮಾಡುತ್ತ ಕುಳಿತುಕೊಳ್ಳಬಾರದು. ॥ ೨೭ ॥ ನಾವು ಸ್ವಧರ್ಮದಿಂದ ನಡೆಯುತ್ತಿರಲು ಸುಖ ದುಃಖಗಳು ಪ್ರಾಪ್ತವಾದರೆ ಅವುಗಳನ್ನು ಸ್ವಸ್ಥ ಚಿತ್ತದಿಂದ ಸಹನ ಮಾಡಿಕೊಳ್ಳಬೇಕು. ॥ ೨೮ ॥ ಹೀಗೆ ಮನಸಿನ ದೃಢನಿಶ್ಚಯಮಾಡುವದರಿಂದ ಸಹಜವೇ ನಿನಗೆ ಪಾಪವು ತಗಲಲಾರದು. ಆದುದರಿಂದ ನೀನು ಯುದ್ಧಕ್ಕೆ ಪ್ರಾರಂಭಮಾಡು. ॥ ೨೯ ॥

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ ೩೯ ॥**

**[ ಏಷೇತಿ ]** ಹೇ ಸಾಂಖ್ಯ ಸ್ಥಿತಿ ಮುಕುಳಿತ । ಸಾಂಗಿತಲೀ ತುಜ ಏಥ । ಆತಾ ಬುದ್ಧಿ ಯೋಗ ನಿಶ್ಚಿತ । ಅವಧಾರೀ ಪಾ ॥ ೨೩೦ ॥ ಜಯಾ ಬುದ್ಧಿ ಯುಕ್ತಾ । ಜಾಲಿಯಾ ಪಾರ್ಥಾ । ಕರ್ಮಬಂಧ ಸರ್ವಥಾ । ಬಾಂಧೂ ನ ಪವೇ ॥ ೨೩೧ ॥ ಜೈಸೇ ವಜ್ರಕವಚಲೇಇಜೇ । ಮಗ ಶಸ್ತ್ರಾಂಚಾ ವರ್ಷಾವ ಸಾಹಿಜೇ । ಪರೀ ಜೈತೇಸೀ ಉರಿಜೇ । ಅಚುಂಬಿತ ॥ ೩೨ ॥

**ಅರ್ಥ—** ಇಲ್ಲಿಯ ವರೆಗೆ ಈ ಸಾಂಖ್ಯ ಶಾಸ್ತ್ರಕ್ಕೆ ಅನುಸರಿಸಿ ನಿನಗೆ ಜ್ಞಾನಯೋಗವನ್ನು ಸಂಕ್ಷಿಪ್ತವಾಗಿ ಹೇಳಿದೆನು. ಇನ್ನು ಮೇಲೆ (ಯಾವ ಜ್ಞಾನವನ್ನಾಶ್ರಯಿಸಲಾಗಿ ಬುದ್ಧಿಗೆ ಸ್ವರೂಪದ ಪ್ರತ್ಯಕ್ಷ ಅನುಭವವಾಗತ್ತದೋ) ಆ ಬುದ್ಧಿಯೋಗವನ್ನು ಹೇಳುವೆನು ಕೇಳು. ॥ ೨೩೦ ॥ ಪುರುಷನಿಗೆ ಬುದ್ಧಿಯೋಗವು ಪ್ರಾಪ್ತವಾದ ಕೂಡಲೇ ಅವನಿಗೆ ಮೂಲತಃ ಕರ್ಮಬಂಧದ ಬಾಧೆಯು ಆಗುವದಿಲ್ಲ ॥ ೨೩೧ ॥ ಮೈಯಲ್ಲಿ ವಜ್ರಕವಚವನ್ನು ಹಾಕಿದ ಕೂಡಲೇ ಶಸ್ತ್ರಾಸ್ತ್ರಗಳ ಗಾಯ ತಪ್ಪಿ ಜಯವು ದೊರಕಿಸುವದಕ್ಕೆ ಎಡೆಯಾಗುವಂತೆ ॥ ೨೩೨ ॥

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦ ॥**

**[ ನೇಹಾಭಿಕ್ರಮ ಇತಿ ]** ತೈಸೇ ಆಹಿಕ ತರೀ ನ ನಶೇ । ಆಣಿ ಮೋಕ್ಷ ತೋ ಉರಲಾ ಅಸೇ । ಜೇಥ ಪೂರ್ವಾನುಕ್ರಮದಿಸೇ । ಚೋಖಾಳತ ॥ ೩೩ ॥ ಕರ್ಮಾಧಾರೀ ರಾಹಾಟಿಜೇ । ಪರೀ ಕರ್ಮ ಫಳಾನ ಸಿರೀಕ್ಷಿಜೇ । ಜೈಸಾ ಮಂತ್ರಜ್ಞ ನ ಬಾಧಿಜೆ । ಭೂತ ಬಾಧಾ ॥ ೩೪ ॥ ತಿಯಾಪರೀ ಜೇ ಸುಬುದ್ಧಿ । ಆಪು ಜಾಲಿಯಾ ನಿರವಧಿ । ಹಾ ಅಸತಾಚಿ ಉಪಾಧಿ । ಆಕಳೂ ನಸಕೇ ॥ ೩೫ ॥ ಜೇಥ ನ ಸಂಚರೇ ಪುಣ್ಯ ಪಾಪ । ಜೇ ಸೂಕ್ಷ್ಮ ಅತಿ ನಿಷ್ಕಂಪ । ಗುಣತ್ರಯಾದಿಲೇಪ । ನ ಲಗತೀ ಜೇಥ ॥ ೩೬ ॥ ಅರ್ಜುನಾ ತೇ ಪುಣ್ಯವಶೇ । ಜರೀ ಅಲ್ಪ ಚೀ ಹೃದಯೀ ಬುದ್ಧೀ ಪ್ರಕಾಶೇ । ತರೀ ಅಶೇಷ ಹೀ ನಾಶೇ । ಸಂಸಾರ ಭಯ ॥ ೩೭ ॥

**ಅರ್ಥ—** ಬುದ್ಧಿಯೋಗದಿಂದ ಮನುಷ್ಯನಿಗೆ ಇಹಲೋಕದ ಸುಖವು ಪ್ರಾಪ್ತವಾಗುವದಲ್ಲದೆ ಮೋಕ್ಷವು ದೊರಕುವದು. ಈ ಕರ್ಮಯೋಗ ಮಾರ್ಗಕ್ಕನುಸರಿಸಿ ಒಮ್ಮೆ ಆರಂಭಿಸಿದ ಕ್ರಮವು ಮುಂದೆ ನಿಂತು ಹೋದರೂ ನಷ್ಟವಾಗಲಾರದು. ॥ ೩೩ ॥ ಕರ್ಮದ ಆಧಾರದಿಂದ ವರ್ತನವನ್ನು ಇಡಬೇಕು. ಆದರೆ ಆ ಕರ್ಮದಿಂದ ಆಗತಕ್ಕಂಥ ಫಲಾಪೇಕ್ಷೆಯನ್ನು ಹಿಡಿಯಬಾರದು. ಮಂತ್ರಜ್ಞನು ಭೂತ ಬಾಧೆಯಿಂದ ಪೀಡಿತ ನಾಗದಂತೆ ॥ ೩೪ ॥ ನಿರಾಭಿಮಾನ ಬುದ್ಧಿಯಿಂದ ಕರ್ಮ ಮಾಡುವವನಿಗೆ ಪೀಡೆಯಾಗುವದಿಲ್ಲ. ಫಲಾಭಿ ಸಂಧಿ ರಹಿತವಾಗಿ ಕರ್ಮ ಮಾಡುವದೇ ಸದ್ಬುದ್ಧಿಯು. ಇದು ಪ್ರಾಪ್ತವಾಗಿರುವ ಜನರಿಗೆ ಜನ್ಮ ಮರಣದ ಉಪಾಧಿಯು ಎಂದಿಗೂ ಆಗಲಾರದು. ॥ ೩೫ ॥ ಯಾವ ಬುದ್ಧಿಗೆ ಪಾಪ ಪುಣ್ಯದ ಬಾಧೆಯು ಆಗುವದಿಲ್ಲವೊ ಮತ್ತು ಯಾವದು ಅತಿಶಯ ಸೂಕ್ಷ್ಮವಿದ್ದು ನಿಶ್ಚಲವಾಗಿರುವದೋ ಅಂಥ ಬುದ್ಧಿಯನ್ನು ಸತ್ವ, ರಜ, ತಮ ಈ ಮೂರೂ ಗುಣಗಳು ಎಂದೂ ಪೀಡಿಸಲಾರವು ॥ ೩೬ ॥ ಅರ್ಜುನಾ ಇಂಥ ಸದ್ಬುದ್ಧಿಯು ಸುಕೃತದಿಂದ ಸ್ವಲ್ಪವಾದರೂ ಪ್ರಾಪ್ತವಾದರೆ ಸಾಕು. ಅದು ಸಂಸಾರದ ಭಯವನ್ನು ನಾಶಪಡಿಸುತ್ತದೆ. ॥ ೩೭ ॥

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ ೪೧ ॥**

**[ ವ್ಯವಸಾಯೇತಿ** ಜೈಸೀ ದೀಪ ಕಳಿಕಾ ಧಾಕುಟೀ । ಪರೀ ಬಹು ತೇಜಾತೇ ಪ್ರಗಟೀ । ತೈಸೀ ಸದ್ಬುದ್ಧೀ ಹೇ ಥೋಂಕುಟೀ । ಮ್ಹಣೋ ನಯೇ ॥ ೩೮ ॥ ಪಾರ್ಥಾ ಬಹುತೀ ಪರೀ । ಹೇ ಅಪೇಕ್ಷಿಜೇ ವಿಚಾರ ಶೂರೀ । ಜೇ ದುರ್ಲಭಾ ಚರಾಚರೀ । ಸದ್ವಾಸನಾ ॥೩೯॥

ಆಣಿಕಾ ಸಾರಿಖಾ ಬಹುವಸ । ಜೈಸಾನ ಜೋಡೇ ಪರಿಸ । ಕಾ ಅಮೃತಾಚಾ ಲೇಶ । ದೈವ ಗುಣೇ ॥ ೨೪೦ ॥ ತೈಸೀ ದುರ್ಲಭ ಸದ್ ಬುದ್ಧಿ । ಜಿಯೇ ಪರಮಾತ್ಮಾಚಿ ಅವಧಿ । ಜೈಸಾ ಗಂಗೇಸೀ ಉದಧಿ । ನಿರಂತರ ॥ ೪೧ ॥ ತೈಸೇ ಈಶ್ವರಾವಾಚುನಿ ಕಾಹೀ । ಜಿಯೇ ಆಣಿಕ ಲಾಣೀ ನಾಹೀ । ತೇ ಏಕಚಿ ಬುದ್ಧಿ ಪಾಹೀ । ಅರ್ಜುನಾ ಜನೀ ॥ ೪೨ ॥ ಯೇರ ತೇ ದುರ್ಮತೀ । ಜೇ ಬಹುಧಾ ಅಸೇ ವಿಕರತೀ । ತೇಥ ನಿರಂತರ ರಮತೀ । ಅವಿವೇಕಿಯೇ ॥ ೪೩ ॥ ಮ್ಹಣೋನಿ ತಯಾ ಪಾರ್ಥಾ । ಸ್ವರ್ಗ ಸಂಸಾರ ನರಕಾವಸ್ಥಾ । ಆತ್ಮ ಸುಖ ಸರ್ವಥಾ । ದೃಷ್ಟ ನಾಹೀ ॥ ೪೪ ॥

**ಅರ್ಥ—** ದೀಪದ ಬೆಳಕು ಸಣ್ಣದಿದ್ದಾಗ್ಯಾದರೂ ಅದರ ಪ್ರಕಾಶವು ದೊಡ್ಡದಾಗಿ (ವಿಸ್ತಾರವಾಗಿ ಮನೆ ತುಂಬಾ) ಬೀಳುತ್ತದೆ. ಅದರಂತೆ ಸದ್‌ಬುದ್ದಿಯು ಅಲ್ಪವಿದ್ದಾಗ್ಯಾದರೂ ಅದು ಸಣ್ಣದಿರುವದೆಂದು ತಿಳಿಯ ಬಾರದು ॥ ೩೮ ॥ ಅರ್ಜುನಾ ಜ್ಞಾನಿಗಳು ಬಹಳವಾಡಿ ಸದ್ಬುದ್ಧಿಯ ಅಪೇಕ್ಷೆಯನ್ನು ಮಾಡುತ್ತಾರೆ. ಆದರೆ ಅದು ಈ ಜಗತ್ತಿನಲ್ಲಿ ಬಹಳೇ ದುರ್ಲಭವಾಗಿರುತ್ತದೆ. ॥ ೩೯ ॥ ಬೇರೆ ಕಲ್ಲುಗಳಂತೆ ಸ್ಪರ್ಶಶಿಲೆಯು ಎಲ್ಲಿ ಬೇಕಾದಲ್ಲಿ ದೊರಿಯುವದಿಲ್ಲ. ಒಂದು ಹನಿ ಅಮೃತವು ಪ್ರಾಪ್ತವಾಗಬೇಕಾದರೆ ದೈವವು ಬಲವತ್ತರವಾಗಿರ ಬೇಕಾಗುತ್ತದೆ. ॥ ೪೦ ॥ ಗಂಗಾನದಿಯ ಪ್ರವಾಹವು ಸಮುದ್ರದಲ್ಲಿ ಪರ್ಯವಸಿತವಾಗುವಂತೆ, ಪರಮಾತ್ಮನಲ್ಲಿ ಪರಿಣತವಾಗುವ ಸಪ್ಬುದ್ಧಿಯು ಬಹಳ ದುರ್ಲಭವು. ॥ ೪೧ ॥ ಆದುದರಿಂದ ಅರ್ಜುನಾ ಈಶ್ವರ ಪ್ರಾಪ್ತಿಯು ಅಂತಿಮ ಧ್ಯೇಯವಾಗಿರುವ ಜಗತ್ತಿನಲ್ಲಿಯ ಒಂದೇ ಶ್ರೇಷ್ಠವಾದ ಬುದ್ಧಿಯು. ॥ ೪೨ ॥ ಇದರ ಹೊರತು ಅನ್ಯ ಬುದ್ಧಿಗಳು (ನಿಶ್ಚಯವಿಲ್ಲದವರ ಬುದ್ಧಿಗಳು ಬಗೆಬಗೆಯಾಗಿ ಹರಿದಾಡುವವು) ಇದೇ ದುರ್ಬುದ್ಧಿಯು. ಇವರಲ್ಲಿ ವಿಕಾರಗಳು ಉದ್ಭವಿಸುವದರಿಂದ ಅವಿಚಾರಿ ಜನರು ಯಾವಾಗಲೂ ಅದರಲ್ಲಿ ಪ್ರೇಮವನ್ನಿಡುತ್ತಾರೆ. ॥ ೪೩ ॥ ಆದ್ದರಿಂದ ಅರ್ಜುನನೇ ಆ ಜನರಿಗೆ ಸ್ವರ್ಗ ಸಂಸಾರಗಳ ಮತ್ತು ನರಕದ ಪ್ರಾಪ್ತಿಯು ಆಗುತ್ತದೆ. ಆದರೆ ಆತ್ಮಸುಖವು ಅವರಿಗೆ ಕನಸಿನಲ್ಲಿ ಕೂಡ ಸಿಕ್ಕುವದಿಲ್ಲ. ॥ ೪೪ ॥

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ॥ ೪೨ ॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾ ವಿಶೇಷ ಬಹುಲಾಂ ಭೋಗೈಶ್ವರ್ಯ ಗತಿಂ ಪ್ರತಿ ॥ ೪೩ ॥**

**ಭೋಗೈಶ್ವರ್ಯ ಪ್ರಸಕ್ತಾನಾಂ ತಯಾಪಹೃತ ಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌನ ವಿಧೀಯತೇ ॥ ೪೪ ॥**

**[ ಯಾಮಿಮಾ ಮಿತಿ ]** ವೇದಾಧಾರೇ ಬೋಲತೀ । ಕೇವಳ ಕರ್ಮ ಪ್ರತಿಷ್ಠಿತೀ । ಪರೀ ಕರ್ಮ ಫಳೀ ಆಸಕ್ತೀ । ಧರೂನಿಯಾ ॥ ೪೫ ॥ ಮ್ಹಣತೀ ಸಂಸಾರೀ ಜನ್ಮಿಜೇ । ಯಜ್ಞಾದಿಕ ಕರ್ಮ ಕೀಜೆ । ಮಗ ಸ್ವರ್ಗಸುಖ ಭೋಗಿಜೇ । ಮನೋಹರ ॥ ೪೬ ॥ ಏಥ ಹೇವಾಚೂನಿ ಕಾಹೀ । ಆಣಿಕ ಸರ್ವಥಾ ಸುಖಚಿ ನಾಹೀ । ಐಸೇ ಅರ್ಜುನಾ ಬೋಲತೀ ಪಾಹೀ । ದುರ್ಬುದ್ಧೀತೇ ॥ ೪೭ ॥ ದೇಖೇ ಕಾಮನಾ ಅಭಿಭೂತ । ಹೋವುನಿ ಕರ್ಮೇ ಆಚರತ । ತೇ ಕೇವಳ ಭೋಗೀ ಚಿತ್ತ । ದೇವೂನಿಯಾ ॥ ೪೮ ॥ ಕ್ರಿಯಾ ವಿಶೇಷೇ ಬಹುತೇ । ನ ಲೋಪಿತೀ ವಿಧೀತೇ । ನಿಪುಣ ಹೋವುನಿ ಧರ್ಮಾತೇ । ಅನುಷ್ಠಿತೀ ॥ ೪೯ ॥ ಪರೀ ಏಕಚಿ ಕುಡೇ ಕರಿತೀ । ಜೇ ಸ್ವರ್ಗಕಾಮ ಮನಿ ಧರಿತೀ । ಯಜ್ಞ ಪುರುಷಾ ಚುಕತೀ । ಭೋಕ್ತ್ಯಾಜೋ ॥ ೫೦ ॥

**ಜೈಸಾ ಕರ್ಪೂರಾಚಾ ರಾಶಿ ಕೀಜೇ । ಮಗ ಅಗ್ನಿ ಲಾವೂನಿ ದೀಜೇ । ಕಾಮಿಷ್ಟಾನ್ನೀ ಸಂಚರ ವಿಜೇ । ಕಾಳಕೂಟ ॥ ೫೧ ॥ ದೈವೇ ಅಮೃತಕುಂಭ ಜೋಡಲಾ । ತೋ ಪಾಯೇ ಹಾಣೋನಿ ಉಲಂಡಿಲಾ । ತೈಸಾ ನಾಸಿತೀ ಧರ್ಮು ನಿಪಜಲಾ । ಹೇತುಕಪಣೇ ॥ ೫೨ ॥ ಸಾಯಾಸೇ ಪುಣ್ಯ ಅರ್ಜಿಜೇ । ಮಗ ಸಂಸಾರ ಕಾ ಅಪೇಕ್ಷಿಜೇ । ಪರಿ ನೇಣತೀ ತೇ ಕಾಯ ಕೀಜೆ । ಅಪ್ರಾಪ್ತ ದೇಖೇ ॥ ೫೩ ॥ ಜೈಸೀ ರಾಂಧವಣೀ ರಸಸೋಯ ನಿಕೀ । ಕರೂನಿಯಾ ಮೋಲೇ ವಿಕೀ । ತೈಸಾ ಭೋಗಾ ಸಾಠೀ ಅವಿವೇಕೀ । ಧಾಡಿತೀ ಧರ್ಮು ॥ ೫೪ ॥ ಮ್ಹಣೋನಿ ಹೇ ಪಾರ್ಥಾ । ದುರ್ಬುದ್ಧಿ ದೇಖ ಸರ್ವಥಾ । ತಯಾ ವೇದವಾದರತಾ ಮನೀವಸೇ ॥ ೫೫ ॥**

**ಅರ್ಥ—** ವೇದಾಧಾರದಿಂದ ಸಂಭಾಷಣಮಾಡಿ ಕೇವಲ ಕರ್ಮಕಾಂಡದ ಶ್ರೇಷ್ಠತ್ವವನ್ನು ಸ್ಥಾಪನೆಮಾಡುತ್ತಾರೆ. ಆದರೆ ಆ ಕರ್ಮದ ಫಲಾಪೇಕ್ಷೆಯಮೇಲೆ ಪ್ರೀತಿಯನ್ನಿಡುತ್ತಾರೆ. ॥ ೪೫ ॥ ಮೃತ್ಯುಲೋಕದಲ್ಲಿ ಜನ್ಮ ತೆಗೆದುಕೊಂಡು ಯಜ್ಞಾದಿ ಕರ್ಮಗಳನ್ನು ಆಚರಿಸಬೇಕು. ಮತ್ತು ಮನೋಹರವಾದ ಸ್ವರ್ಗಸುಖವನ್ನು ಭೋಗಿಸಬೇಕೆಂದು ಬಯಸುತ್ತಾರೆ. ॥ ೪೬ ॥ ಅರ್ಜುನಾ, ಆ ದುರ್ಬುದ್ಧಿಗಳು (ಇಂಥ ಯಜ್ಞಾದಿ ಕರ್ಮವಂನಾಚರಿಸಿ ಸ್ವರ್ಗಸುಖವನ್ನು ದೊರಕಿಸದ ಹೊರ್ತು) ನಿರಂತರ ಸುಖಕೊಡುವಂಥ ಅನ್ಯಸುಖವೇ ಇರುವದಿಲ್ಲವೆಂದು ಹೇಳುತ್ತಾರೆ. ॥ ೪೭ ॥ ಅವರು ಕೇವಲ ಭೋಗದಲ್ಲಿ ಆಸಕ್ತವುಳ್ಳವರಾಗಿ ಕರ್ಮಫಲದಮೇಲೆ ದೃಷ್ಟಿಯನ್ನಿಟ್ಟು ಸಕಾಮ ಕರ್ಮವನ್ನು ಮಾಡುತ್ತಾರೆ. ॥ ೪೮ ॥ ಮತ್ತು ಅನೇಕ ಪ್ರಕಾರದ ಅನುಷ್ಠಾನಗಳನ್ನು ವಿಧಿಯುಕ್ತವಾಗಿ ಮಾಡಿ ಅವುಗಳನ್ನು ಪೂರ್ಣಮಾಡುವದರ ದೆಸೆಯಿಂದ ಬಹು ಎಚ್ಚರಿಕೆಯಿಂದ ದರ್ಮಾಚರಣೆಯನ್ನು ಮಾಡುತ್ತಾರೆ. ॥೪೯॥ ಆದರೆ ಅವರು ಒಂದು ಕೆಟ್ಟ ಕೆಲಸವನ್ನು ಮಾಡುತ್ತಾರೆ. ಅದು ಯಾವುದೆಂದರೆ ಅರ್ಜುನಾ, ಅವರು ತಮ್ಮ ಮನಸಿನಲ್ಲಿ ಸ್ವರ್ಗಸುಖದ ಅಪೇಕ್ಷೆಯನ್ನಿಟ್ಟುಕೊಂಡು ಯುಜ್ಞಭೋಕ್ತೃವಾದ ಪರಮಾತ್ಮನನ್ನೇ ಮರೆತು ಬಿಡುತ್ತಾರೆ ॥ ೫೦ ॥ ಶುಭ್ರವಾದ ಕರ್ಪುರದ ರಾಶಿಗೆ ಬೆಂಕಿಯನ್ನು ಹಚ್ಚಿ ಅದನ್ನು ವ್ಯರ್ಥವಾಗಿ ಸುಟ್ಟುಬಿಡುವಂತೆ ಅಥವಾ ಮೃಷ್ಟಾನ್ನದಲ್ಲಿ ಕಾಲಕೂಟ ವಿಷವನ್ನು ಕೂಡಿಸಿ ಕೆಡಿಸುವಂತೆ ॥ ೫೧ ॥ ಇಲ್ಲವೇ ದೈವಯೋಗದಿಂದ ದೊರಕಿದ ಅಮೃತದ ಕೊಡವನ್ನು ಕಾಲಿನಿಂದ ಒದ್ದು ಉರುಳಿಸಿ ಬಿಡುವಂತೆ ಜನರು ಫಲಾಪೇಕ್ಷೆಯ ಆಶೆಯಿಂದ ಗಳಿಸಿದ ಧರ್ಮವನ್ನು ವ್ಯರ್ಥವಮಾಡಿ ಬಿಡುತ್ತಾರೆ. ॥ ೫೨ ॥ ಬಹಳೇ ಶ್ರಮಬಟ್ಟು ಪುಣ್ಯ ಸಂಪಾದನೆ ಮಾಡಿದಮೇಲೆ ಸಂಸಾರದ ಅಪೇಕ್ಷೆಯನ್ನೇಕೆ ಮಾಡಬೇಕು ? ಆದರೆ ಮಾಡುವದೇನು ? ಅಜ್ಞಾನಿಗಳಾದ ಆ ಜನರಿಗೆ ಇದು ತಿಳಿಯುವದಿಲ್ಲ. ॥ ೫೩ ॥ ಉತ್ತಮವಾದ ಅಡಿಗೆಯವಳು ಉತ್ತಮ ಅಡಿಗೆಯನ್ನು ತಯಾರಿಸಿ ಬೇರೆ ಬೇರೆ ಪಕ್ವಾನ್ನಗಳನ್ನು ದ್ರವ್ಯದ ಆಶೆಯಿಂದ ಮಾರುತ್ತಾಳೆ. ಅದರಂತೆ ಅವಿಚಾರಿಗಳಾದ ಜನರು ಸುಖೋಪಭೋಗದದೆಶೆಯಿಂದ ಪ್ರಯತ್ನಪಟ್ಟು ಗಳಿಸಿದ ಧರ್ಮವನ್ನು ಕಳೆದುಕೊಳ್ಳುತ್ತಾರೆ. ॥೫೪॥ ಆದ್ದರಿಂದ ಪಾರ್ಥಾ, ವೇದದೊಳಗೆ ಅರ್ಥವಾದದಲ್ಲಿ ಮಗ್ನರಾದ ಜನರ ಮನಸಿನಲ್ಲಿ ಯಾವಾಗಲೂ ದುರ್ಬುದ್ಧಿಯೇ ತುಂಬಿಕೊಂಡಿರುತ್ತದೆ. ಇದು ನಿನ್ನ ಲಕ್ಷದಲ್ಲಿರಲಿ. ॥ ೫೫ ॥

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವಂದ್ವೋ ನಿತ್ಯ ಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ ೪೫ ॥**

**[ ತ್ರೈಗುಣ್ಯ ವಿಷಯಾ ಇತಿ ]** ತಿಹೀ ಗುಣೀ ಆವೃತ್ತ । ಹೇ ವೇದ ಜಾಣ ನಿಭ್ರಾಂತ । ಮ್ಹಣೋನಿ ಉಪ ನಿಷದಾದಿ ಸಮಸ್ತ । ಸಾತ್ವಿಕತೇ ॥ ೫೬ ॥ ಯೇರ ರಜತಮಾತ್ಮಕ । ಜೇಥ ನಿರೂಪಿಜೇ ಕರ್ಮಾದಿಕ । ಜೇ ಕೇವಲ ಸ್ವರ್ಗಸೂಚಕ । ಧನುರ್ಧರಾ ॥ ೫೭ ॥ ಮ್ಹಣೋನಿ ತೂ ಜಾಣ । ಹೇ ಸುಖದುಃಖಾಸೀಚ ಕಾರಣ । ಏಥ ಝಣೇ ಅಂತಃಕರಣ । ರಿಘೋ ದೇಸೀ ॥ ೫೮ ॥ ತೂ ಗುಣತ್ರಯಾತೇ ಅವ್ಹೇರೀ । ಮೀ ಮಾಝೇ ಹೇ ನಕರೀ । ಏಕ ಆತ್ಮಸುಖ ಅಂತರೀ । ನಿಸಂಬಝಣೇ ॥ ೫೯ ॥

**ಅರ್ಥ—** ವೇದಗಳು ಸತ್ವ-ರಜ-ತಮೋ ಗುಣಗಳಿಂದ ತುಂಬಿರುವವು; ಆದ್ದರಿಂದ ಎಲ್ಲ ಉಪನಿಷತ್ತುಗಳನ್ನು ಸತ್ವಗುಣದಲ್ಲಿಯೇ ಎಣಿಸಿದ್ದಾರೆ. ॥ ೫೬ ॥ ಇನ್ನುಳಿದ ಕೆಲುವುಗಳಲ್ಲಿ ಕರ್ಮ ಉಪಾಸನಾ ಮೊದಲಾದವುಗಳ ನಿರೂಪಣವಿದ್ದರೂ ಅವೆಲ್ಲವುಗಳೂ ರಜತಮೋಗುಣಗಳಿಂದಯುಕ್ತವಾಗಿದ್ದು ಕೇವಲ ಸ್ವರ್ಗ ಸೂಚಕಗಳಾಗಿರುತ್ತವೆ. ॥ ೫೭ ॥ ಆದುದರಿಂದ ಇವುಗಳು ಸುಖದುಃಖಕ್ಕೆ ಕಾರಣವಾಗಿರುತ್ತವೆನ್ನುವದನ್ನು ನಿಶ್ಚಯವಾಗಿ ನಂಬು. ಈ ಕಾರಣದ ದೆಸೆಯಿಂದ ನಿನ್ನ ಅಂತಃಕರಣದಲ್ಲಿ ಅವುಗಳಿಗೆ ಪ್ರವೇಶಮಾಡಕೊಡಬೇಡ. ॥ ೫೮ ॥ ನೀನು ಈ ಗುಣತ್ರಯುಗಳನ್ನು ಬಿಟ್ಟು ಬಿಡು. ನಾನು ನನ್ನದು ಎನ್ನುವ ಭ್ರಾಂತಿಯನ್ನು ಬಿಟ್ಟು ಅಂತಃಕರಣದಲ್ಲಿ ಆತ್ಮಸುಖದ ಸ್ಮರಣೆಯನ್ನು ಯಾವಾಗಲೂ ಮಾಡು. ॥ ೫೯ ॥

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥**

**[ ಯಾವಾನಿತಿ ]** ಜರೀ ವೇದೇ ಬಹುತ ಬೋಲಿಲೇ । ವಿವಿಧ ಭೇದ ಸೂಚಿಲೇ । ತರ್ಹೀ ಆಪಣ ಹಿತ ಆಪುಲೇ । ತೇಚಿ ಘೇಪೇ ॥ ೨೬೦ ॥ ಜೈಸಾ ಪ್ರಗಟಲಿಯಾ ಗಭಸ್ತೀ । ಅಶೇಷಹೀ ಮಾರ್ಗ ದಿಸತೀ । ತರೀ ತೇತು ಲೇಹೀ ಕಾಯ ಚಾಲಿಜತೀ । ಸಾಂಗೇ ಮಜ ॥ ೨೬೧ ॥ ಕಾ ಉದಕಮಯ ಸಕಳ । ಜರ್ಹೀ ಜಾಹಲೇ ಅಸೇ ಮಹೀತಳ । ತರೀ ಆಪಣ ಘೇಪೇ ಕೇವಳ । ಆರ್ತಿಚ ಜೋಗೇ ॥೨೬೨॥ ತೈಸೇ ಜ್ಞಾನೀ ಜೇ ಹೋತೀ । ತೇ ವೇದಾರ್ಥಾತೇ ವಿವಂತೀ । ಮಗ ಅಪೇಕ್ಷಿತ ತೇ ಸ್ವೀಕಾರಿತೀ । ಶಾಶ್ವತ ಜೇ ॥ ೨೬೩ ॥

**ಅರ್ಥ—** ವೇದಗಳಲ್ಲಿ ಅದೆಷ್ಟೋ ಮಾತುಗಳನ್ನು ಹೇಳಿದ್ದರೂ ನಾನಾ ಪ್ರಕಾರದ ಭೇದಗಳನ್ನು ಸೂಚಿಸಿದ್ದರೂ ನಾವು ಮಾತ್ರ ಉಚಿತವಾದವುಗಳನ್ನೇ ಸ್ವೀಕರಿಸಬೇಕು. ॥ ೨೬೦ ॥ ಸೂರ್ಯೋದಯವಾದಮೇಲೆ ಅನೇಕ ಮಾರ್ಗಗಳು ದೃಷ್ಟಿಗೆ ಬೀಳುತ್ತವೆ ಅವೆಲ್ಲ ಹಾದಿಗಳಿಂದ ನಡೆಯಲು ನಮಗೆ ಸಾಧ್ಯವೇ ಹೇಗೆ ? ಹೇಳು ನೋಡುವಾ ! ॥ ೬೧ ॥ ( ಮತ್ತೊಂದು ಉದಾಹರಣೆಯನ್ನು ತೆಗೆದುಕೊಳ್ಳುವಾ ) ಸರ್ವ ಜಗತ್ತೇ ನೀರಿನಿಂದ ತುಂಬಿ ತುಳುಕುತ್ತಿದ್ದರೂ ನಮಗೆ ಬೇಕಾದಷ್ಟು ನೀರನ್ನು ತೆಗೆದುಕೊಳ್ಳಬೇಕಷ್ಟೇ ? ॥ ೬೨ ॥ ಅದರಂತೆಯೇ ಜ್ಞಾನಿಗಳಾದವರು ಆ ವೇದಾರ್ಥದ ವಿಚಾರವನ್ನು ಮಾಡಿ, ಅಪೇಕ್ಷಿತವಾದ ಶಾಶ್ವತ ( ಅಖಂಡ ಕಲ್ಯಾಣಕರವಾದ ) ಬ್ರಹ್ಮವನ್ನಷ್ಟೇ ಸ್ವೀಕಾರ ಮಾಡುತ್ತಾರೆ. ॥ ೬೩ ॥

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮ ಫಲಹೇತುರ್ಭೂರ್ಮಾತೇ ಸಂಗೋಽಸ್ತ್ವಕರ್ಮಣಿ ॥ ೪೭ ॥**

**[ಕರ್ಮಣ್ಯೇ ವಾಧಿಕಾರಸ್ತೇ ಇತಿ]** ಮ್ಹಣೋನಿ ಆ ಇಕೇ ಪಾರ್ಥಾ । ಯಾಚಿಪರೀ ಪಾಹತಾ। ತುಜ ಉಚಿತ ಹೋಯ ಆತಾ । ಸ್ವಕರ್ಮ ಹೇ ॥ ೬೪ ॥ ಆಮ್ಹೀ ಸಮಸ್ತಹೀ ವಿಚಾರಿಲೇ । ತವ ಐಸೇಚಿ ಹೇ ಮನಾ ಆಲೇ । ಜೇ ನ ಸಾಂಡಿಜೇ ತುವಾ ಆಪುಲೇ । ವಿಹಿತ ಕರ್ಮ ॥ ೬೫ ॥ ಪರೀ ಕರ್ಮಫಳೀ ಆಸ ನ ಕರಾವೀ । ಆಣಿ ಅಕರ್ಮೀ ಸಂಗತೀ ನ ವ್ಹಾವೀ । ಹೇ ಸತ್ಕ್ರಿಯಾಚಿ ಆಚರಾವೀ । ಹೇತೂವಿಣ ॥ ೬೬ ॥

**ಅರ್ಥ—** ಆದುದರಿಂದ ಪಾರ್ಥಾ ಕೇಳು—ಈ ಸರ್ವಮಾತಿನ ವಿಚಾರ ಮಾಡಿ ನೋಡಿದರೆ ನಿನಗೆ ಸ್ವಧರ್ಮವೇ ಉಚಿತವಾದದ್ದಿರುತ್ತದೆ. ॥ ೬೪ ॥ ನಾವು ಎಲ್ಲ ಮಾತಿನ ವಿಚಾರಮಾಡಿ ನೋಡಿದ ಮೇಲೆ ‘ ನಮ್ಮ ಕರ್ತವ್ಯವನ್ನು ಬಿಡಲಾರದೆಂದೇ ’ ನಮ್ಮ ಮನಸಿಗೆ ಹೊಳೆಯುವದು. ॥ ೬೫ ॥ ಕರ್ಮಫಲದ ಅಪೇಕ್ಷೆಯನ್ನು ಬಿಟ್ಟು ನಿಷಿದ್ಧಕರ್ಮದ ಅಂಗೀಕಾರವನ್ನು ತೊರೆದು ಸತ್ಕರ್ಮಗಳನ್ನೇ ನಿಷ್ಕಾಮ ಬುದ್ಧಿಯಿಂದ ಆಚರಿಸಬೇಕು. ॥ ೬೬ ॥

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿಧ್ಯ ಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥ ೪೮ ॥**

**[ಯೋಗಸ್ಥ ಇತಿ]** ತೂ ಯೋಗಯುಕ್ತ ಹೋವುನೀ । ಫಳಾಚಾ ಸಂಗ ಟಾಕುನೀ । ಮಗ ಅರ್ಜುನಾಚಿತ್ತ ದೇವುನೀ । ಕರೀ ಕರ್ಮೇ ।. ೧೬೭ ॥ ಪರೀ ಆದರಿಲೇ ಕರ್ಮ ದೈವೇ । ಜರೀ ಸಮಾಪ್ತೀತೇ ಪಾವೇ । ತರೀ ವಿಶೇಷೇ ತೇಥ ತೋಷಾವೇ । ಹೇ ಓ ನಕೋ ॥ ೧೬೮ ॥ ಕೀ ನಿಮಿತ್ತೇ ಕೋಣೇ ಏಕೇ । ತೇ ಸಿದ್ಧೀ ನ ವಚತ ರಾಕೇ । ತರೀ ತೇಥಿಚೇನಿ ಅಪರಿತೋಖೇ । ಕ್ಷೋಭಾ ವೇನಾ ॥ ೨೬೯ ॥ ಆಚರತಾ ಸಿದ್ಧೀ ಗೇಲೇ । ತರೀ ಕಾಜಾಚಿ ಕೀರ ಆಲೆ । ವರೀ ಠೇಲಿಯಾ ಹೀ ಸಗುಣಜಾಹಲೇ । ಐಸೇ ಚಿ ಮಾಸೀ ॥ ೨೭೦ ॥ ದೇಖೇ ಜೇತುಲಾಲೇ ಕರ್ಮ ನಿಪಜೇ । ತೇ ತುಲೇ ಆದಿಪುರುಷೀ ಸಮರ್ಪಿಜೇ । ತರೀ ಪರಿಪೂರ್ಣ ಸಹಜೇ । ಜಾಹಲೇ ಜಾಣೇ ॥ ೭೧ ॥ ದೇಖೇ ಸತಾಸತ ಕರ್ಮೀ । ಹೇ ಜೇ ನರಸೇಪಣ ಮನೋಧರ್ಮೀ । ತೇಚಿ ಯೋಗಸ್ಥಿತೀ ಉತ್ತಮೀ । ಪ್ರಶಂಸಿಜೇ ।೭೨॥

**ಅರ್ಥ**— ಅರ್ಜುನಾ, ನೀನು ಯೋಗಯುಕ್ತನಾಗಿ ಫಲದ ಅಪೇಕ್ಷೆಯನ್ನು ಬಿಟ್ಟು ಮನಃಪೂರ್ವಕವಾಗಿ ಕರ್ಮಾಚರಣೆಯನ್ನು ಮಾಡಬೇಕು. ॥ ೬೭ ॥ ಆದರೆ ಆರಂಭಮಾಡಿದ ಕರ್ಮವು ದೈವಯೋಗದಿಂದ ಪೂರ್ಣವಾದರೂ ಅದರ ಬಗ್ಗೆ ಸಂತೋಷ ಹಚ್ಚಿಕೊಳ್ಳಬಾರದು. ॥ ೬೮ ॥ ಇಲ್ಲವೇ ಯಾವದಾದರೊಂದು ಕಾರಣದಿಂದ ಆ ಕರ್ಮವು ಸಿದ್ಧಿಗೆ ಹೋಗದೇ ಹಾಗೇ ನಿಂತು ಬಿಟ್ಟರೆ ಆ ಬಗ್ಗೆ ಮನಸಿನಲ್ಲಿ ಅಸಂತೋಷವನ್ನು ಪಡಲಾರದು ॥೬೯॥ ಕರ್ಮಮಾಡುವಾಗ್ಗೆ ಒಂದುವೇಳೆ ಪೂರ್ಣವಾದರೆ ನಿಜವಾಗಿ ಅದು ಉಪಯೋಗವೇ ಆಗುವದು. ಆದರೆ ಒಂದು ವೇಳೆ ವಿಘ್ನ ಬಂದು ಅಪೂರ್ತಿಯಾಗಿ ಉಳಿದರೆ ಒಳಿತೇ ಆಯಿತೆಂದು ತಿಳಿದುಕೊಳ್ಳಬೇಕು. ॥ ೨೭೦ ॥ ಆದ ಕರ್ಮವನ್ನೆಲ್ಲ ಆದಿ ಪುರುಷನಾದ ಶ್ರೀಹರಿಗೆ ಸಮರ್ಪಿಸಬೇಕು. ಅಂದರೆ ಸಹಜವೇ ಆ ಕರ್ಮವು ಪರಿಪೂರ್ಣವಾಗುವದು. ॥ ೭೧ ॥ ಸಿದ್ಧಿ ಅಸಿದ್ಧಿಗಳಲ್ಲಿ ಮನಸಿನ ಸಮತ್ವವಾಗಿರುವದೇ ನಿಜವಾದಯೋಗವೆಂದು (ನಿಷ್ಕಾಮ ಕರ್ಮಯೋಗ ಜ್ಞಾನಿ ಪುರುಷರು ಪ್ರಶಂಶಿಸುತ್ತಾರೆ. ॥ ೭೨ ॥

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುಧ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**
**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತ ·ದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವಯೋಗಃ ಕರ್ಮಸು ಕೌಶಲಂ ॥ ೫೦ ॥**

**[ದೂರೇಣೇತಿ]** ಅರ್ಜುನಾ ಸಮತ್ವ ಚಿತ್ತಾಚೆ । ತೇಚಿಸಾರ ಜಾಣ ಯೋಗಾಚೆ । ಜೇಥ ಮನ ಆಣಿ ಬುದ್ಧೀಚೆ । ಐಕ್ಯ ಅಥಿ ॥ ೭೩ ॥ ತೋ ಬುದ್ಧಿಯೋಗ ಪಿವರಿತಾ । ಬಹುತೇ ಪಾಡೇ ಪಾರ್ಥಾ । ದಿಸೇಹಾ ಅರುತಾ । ಕರ್ಮಯೋಗ ॥ ೭೪ ॥ ಪರೀ ತೋಚಿ ಕರ್ಮ ಆಚರಿಜೆ । ತರೀಚ ಹಾ ಯೋಗ ಪಾವಿಜೆ । ಜೇ ಕರ್ಮಶೇಷ ಸಹಜೇ । ಯೋಗಸ್ಥಿತೀ ॥ ೭೫ ॥ ಮ್ಹಣೋನಿ ಬುದ್ಧಿಯೋಗ ಸಧರ । ತೇಥ ಅರ್ಜುನಾ ಹೋ ಈ ಸ್ಥಿರ । ಮನೇ ಕರೀ ಅಪ್ಹೇರ । ಫಳ ಹೇತೂಚಾ ॥ ೭೬ ॥ ಜೇ ಬುದ್ಧಿಯೋಗಾ ಯೋಜಿಲೇ । ತೇಚಿ ಪಾರಂಗತ ಜಾಹಲೇ । ಇಹೀ ಉಭಯ ಸಂಬಂಧೀ ಸಾಂಡಿಲೇ । ಪಾಪ ಪುಣ್ಯೇ ॥ ೭೭ ॥

**ಅರ್ಥ** ·· ಅರ್ಜುನಾ ಬುದ್ಧಿಮನಸ್ಸುಗಳ ಐಕ್ಯವಿರುವಲ್ಲಿಯೇ ಚಿತ್ತದ ಸಮದೃಷ್ಟಿಯೂ ಇರುತ್ತದೆ. ಮತ್ತು ಅದೇ ಯೋಗದ ಸಾರವೂ ಆಗಿರುವದು. ॥ ೭೩ ॥ ಪಾರ್ಥಾ, ವಿಚಾರಾಂತ್ಯದಲ್ಲಿ ಬುದ್ಧಿಯೋಗದ ಮತ್ತು ಕರ್ಮಯೋಗದ ತುಲನೆ ಮಾಡುವದರಿಂದ (ಅಹಂಕಾರಯುಕ್ತ ಫಲಾಪೇಕ್ಷೆಯಿಂದ ಮಾಡಿದ) ಕ

ಯೋಗವು ಕಡಿಮೆ ಯೋಗ್ಯತೆಯುದಾಗುತ್ತದೆ. ॥ ೭೪ ॥ ಆದರೆ ಫಲದ ಅಪೇಕ್ಷೆಯನ್ನುಳಿದು ಆ ಕರ್ಮದ ಆಚರಣೆ ಮಾಡುವದರಿಂದಲೇ ಬುದ್ಧಿಯೋಗವು ಸಾಧ್ಯವಾಗುತ್ತದೆ. ಮತ್ತು ಈ ಪ್ರಕಾರ ಕರ್ಮಸಿದ್ಧಿಯಾದರೆ ಅದಕ್ಕೆ ಯೋಗಸ್ಥಿತಿಯೆನ್ನುತ್ತಾರೆ. ॥ ೭೫ ॥ ಆದ್ದರಿಂದ ಅರ್ಜುನಾ ಬುದ್ಧಿಯೋಗವೇ ಯೋಗ್ಯವಾದುದಾಗಿರುವದರಿಂದ ಅಲ್ಲಿಯೇ ನೀನು ನಿನ್ನ ಮನಸ್ಸನ್ನು ಧೃಡವಾಗಿ ನಿಲ್ಲಿಸು. ಆದರೆ ಮನಸ್ಸಿನಲ್ಲಿ ಫಲಪ್ರಾಪ್ತಿಯ ವಿಷಯದಲ್ಲಿ ಆಶೆಯನ್ನಿಡಬೇಡ. ॥ ೭೬ ॥ ಬುದ್ಧಿಯೋಗದ ಕಡೆಗೆ ಪ್ರವೃತ್ತಿಯಿರುವವರೇ ಮುಕ್ತರಾಗಿ ಪಾಪ ಪುಣ್ಯಗಳ ಬಂಧನಗಳಿಂದ ಬಿಡುಗಡೆ ಹೊಂದುತ್ತಾರೆ. ॥ ೭೭ ॥

**ಕರ್ಮಜಂ ಬುದ್ಧಿಯುಕ್ತಾಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧ ವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಂ ॥ ೫೧ ॥**

**[ ಕರ್ಮ ಜಮಿತಿ ]** ತೇ ಕರ್ಮೀ ತರೀ ವರ್ತತೀ । ಪರೀ ಕರ್ಮ ಫಳಾ ನಾತಳತೀ । ಆಣೀ ಯಾತಾಯಾತೀನ ಲೋಪತೀ । ಅರ್ಜುನಾ ತಯಾ ॥ ೭೮ ॥ ಮಗ ನಿರಾಮಯ ಭರಿತ । ಪಾವತೀ ಪದ ಅಚ್ಯುತ । ತೇ ಬುದ್ಧಿಯೋಗ ಯುಕ್ತ । ಧನುರ್ಧರಾ ॥ ೭೯ ॥

**ಅರ್ಥ—** ಅರ್ಜುನಾ, ಕರ್ಮವನ್ನು ಮಾಡಿಯೂ ಆ ಕರ್ಮದ ಫಲಾಪೇಕ್ಷೆಯನ್ನು ಬಯಸದಿರುವವನು ಜನನ ಮರಣಗಳ ಬಾಧೆಯಿಂದ ಮುಕ್ತನಾಗುತ್ತಾನೆ. ॥ ೭೮ ॥ ಧನುರ್ಧರಾ, ಆಮೇಲೆ ಅವರು ಬುದ್ಧಿಯೋಗಯುಕ್ತರಾಗಿ ಬ್ರಹ್ಮಾನಂದದ ಸುಖದಿಂದ ತುಂಬಿದ, ನಾಶರಹಿತವಾದ ಪದವನ್ನು ಹೊಂದುತ್ತಾರೆ. ॥ ೭೯ ॥

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯಚ ॥ ೫೨ ॥**

**[ ಯದಾ ತೇ ಮೋಹೇತಿ ]** ತೂ ಐಸಾ ತೈ ಹೋಸೀ । ಜೈಮೋಹಾತೇ ಯಯಾ ಸಾಂಡಿಸೀ । ಆಣಿ ವೈರಾಗ್ಯ ಮಾನಸೀ । ಸಂಚರೇಲ ॥ ೮೦ ॥ ಮಗ ನಿಷ್ಕಳಂಕ ಗಹನ । ಉಪಜೇಲ ಆತ್ಮಜ್ಞಾನ । ತೇಣೇ ನಿಚಾಡ ಹೋಈಲ ಮನ । ಆಪೈಸೇ ತುಝೆ ॥ ೮೧ ॥ ತೇಥ ಆಣಿಕ ಕಾಹೀ ಜಾಣಾವೇ । ಕಾ ಮಾಗೀಲ ತೇಸ್ಮರಾವೇ । ಹೇ ಅರ್ಜುನಾ ಆಘವೇ । ಪಾರುಷೇಲ ॥ ೮೨ ॥

**ಅರ್ಥ—** ನೀನು ಈ ಮೋಹದ ತ್ಯಾಗವನ್ನು ಮಾಡಿದೊಡನೆ ನಿನ್ನ ಮನಸಿನಲ್ಲಿ ವೈರಾಗ್ಯದ ಪ್ರವೇಶವಾಗುವದು. ॥ ೮೦ ॥ ಆ ಯೋಗದಿಂದ ನಿರ್ದುಷ್ಟವಾದ ಮತ್ತು ಅಗಾಧವಾದ ಆತ್ಮಜ್ಞಾನವು ಉದ್ಭವಿಸಿ ನಿನ್ನ ಅಂತಃಕರಣವು ಸರ್ವ ಪ್ರಕಾರದಿಂದಲೂ ನಿರಿಚ್ಛವಾಗುವದು. ಆಗ ನಿನಗೆ ಚ್ಯುತವಾಗದ ಶಾಶ್ವತವಾದ ಪರಮಪದವು ಪ್ರಾಪ್ತವಾಗುವದು. ॥ ೮೧ ॥ ಈ ಪರಮಪದ ಪ್ರಾಪ್ತವಾದ ಮೇಲೆ ಭೂತಭವಿಷ್ಯಗಳೆಲ್ಲ ಅಲ್ಲಿಂದಲ್ಲಿಯೇ ಅಡಗಿ ಹೋಗುವವು. ॥ ೮೨ ॥

**ಶ್ರುತಿ ವಿಪ್ರತಿ ಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವ ಚಲಾ ಬುದ್ಧಿಸ್ತದಾಯೋಗ ಮವಾಪ್ಸ್ಯಸಿ ॥ ೫೩ ॥**

**[ ಶ್ರುತೀತಿ ]** ಇಂದ್ರಿಯಾಂಚಿಯಾ ಸಂಗತೀ । ಜಿಯೇ ಪಸರ ಹೋತಸೇ ಮತೀ । ತೇ ಸ್ಥಿರ ಹೋಈಲ ಮಾಗುತೀ । ಆತ್ಮಸ್ವರೂಪೀ ॥ ೮೩ ॥ ಸಮಾಧಿ ಸುಖೀ ಕೇವಳ । ಜೈ ಬುದ್ಧಿ ಹೋಈಲ ನಿಶ್ಚಳ । ತೈಪಾವಸೀ ತೂ ಸಕಳ । ಯೋಗಸ್ಥಿತಿ ॥ ೮೪ ॥

**ಅರ್ಥ—** ಇಂದ್ರಿಯಗಳ ಸಂಗತಿಯಿಂದ ಚಂಚಲ ವೃತ್ತಿಯನ್ನು ಹೊಂದಿದ ಬುದ್ಧಿಯು ಪುನ್ಹಾ ಆತ್ಮ ಸ್ವರೂಪದಲ್ಲಿ ಸ್ಥಿರವಾದೀತು. ॥ ೮೩ ॥ ಆಗ್ಗೆ ನಿನ್ನ ಬುದ್ಧಿಯು ನಿಶ್ಚಲವಾಗಿ ಸಮಾಧಿ ಸುಖದಲ್ಲಿ ( ಆತ್ಮಸುಖದಲ್ಲಿ ) ಸ್ಥಿರವಾಗುವದು. ಅದೇಕಾಲಕ್ಕೆ ನಿನಗೆ ಸರ್ವಯೋಗ ಸ್ಥಿತಿಯು ಪ್ರಾಪ್ತವಾಗುವದು. ॥ ೮೪ ॥

**ಅರ್ಜುನ ಉವಾಚ—**

**ಸ್ಥಿತ ಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ॥ ೫೪ ॥**

**[ ಅರ್ಜುನ ಉವಾಚ ]** ತೇಥ ಅರ್ಜುನ ಮ್ಹಣೇ ದೇವಾ । ಹಾಚಿ ಅಭಿಪ್ರಾವೋ ಆಘವಾ । ಮೀ ಪುಸೇನ ಆತಾಸಾಂಗಾವಾ । ಕೃಪಾನಿಧಿ ॥ ೮೫ ॥ ಮಗ ಅಚ್ಯುತ ಮ್ಹಣೇಸುಖೇ ಜೇ ಕಿರೀಟೀ ತುಜ ನಿಕೇ । ತೇ ಪೂಸ ಪಾ ಉನ್ಮೇಖೇ । ಮನಾಚೇನಿ ॥ ೮೬ ॥ ಯಾ ಬೋಲಾ ಪಾರ್ಥೇ । ಮ್ಹಣೀತಲೇ ಸಾಂಗ ಪಾ ಶ್ರೀಕೃಷ್ಣಾತೇ । ಕಾಯ ಮ್ಹಣಿಪೇಸ್ಥಿತ ಪ್ರಜ್ಞಾತೇ । ವೋಳಖೋಕೇವೀ ॥೮೭॥ ಆಣಿ ಸ್ಥಿರಬುದ್ಧಿ ಜೋ ಮ್ಹಣಿಜೇ । ತೋ ಕೈಸಿಯಾ ಚಿನ್ಹೀ ಜಾಣಿಜೇ । ಜೋ ಸಮಾಧಿಸುಖ ಭುಂಜೇ । ಅಖಂಡಿತ ॥೮೮॥ ತೋ ಕವಣೇ ಸ್ಥಿತೀ ಅಸೇ । ಕೈಸೇನಿ ರೂಪೀ ವಿಲಸೇ । ದೇವಾ ಸಾಂಗಾವೇ ಹೇ ಐಸೇ । ಲಕ್ಷ್ಮೀಪತೀ ॥ ೮೯ ॥ ತವ ಪರಬ್ರಹ್ಮ ಅವತರಣ । ಜೋಷಡ್ ಗುಣಾಧಿ ಕರಣ । ತೋಕಾಯ ತೇಥ ಶ್ರೀ ನಾರಾಯಣ । ಬೋಲತ ಅಸೇ ॥ ೯೦ ॥

**ಅರ್ಥ—** ಆ ಸಮಯದಲ್ಲಿ ಅರ್ಜುನನು ಅನ್ನುತ್ತಾನೆ- ದೇವಾ, ಈ ವಿಷಯವಾಗಿ ನಾನು ಸ್ಪಷ್ಟವಾಗಿ ಯಾವ ಮಾತಿನಬಗ್ಗೆ ಕೇಳುತ್ತೇನೆ, ಅದನ್ನು ಕೃಪೆಯಿಂದ ನನಗೆ ಹೇಳಬೇಕು. ॥ ೮೫ ॥ ಆ ಮೇಲೆ ಶ್ರೀ ಕೃಷ್ಣನು ಅನ್ನುತ್ತಾನೆ- ಅರ್ಜುನಾ, ನಿನಗೆ ಯೋಗ್ಯಕಂಡದ್ದನ್ನು ಸಂತೋಷದಿಂದ ಕೇಳು ॥ ೮೬ ॥ ಹೀಗೆ ಅಂದಮೇಲೆ ಅರ್ಜುನನು ಶ್ರೀಕೃಷ್ಣನಿಗೆ ಅನ್ನುತ್ತಾನೆ- ಸ್ಥಿತ ಪ್ರಜ್ಞ (ಸ್ಥಿರಬುದ್ಧಿ) ನೆಂದು ಯಾರಿಗೆ ಅನ್ನಬೇಕು ? ಅವನನ್ನು ಹೇಗೆ ಗುರುತಿಸಬೇಕು ? ಇದನ್ನು ಒಡೆದು ಕಾಣುವಂತೆ ನೀನು ನನಗೆ ಸ್ಪಷ್ಟವಾಗಿ ಹೇಳು. ॥ ೮೭ ॥ ಯಾವನಿಗೆ ಸ್ಥಿರಬುದ್ಧಿಯುಳ್ಳವನೆಂದೆನ್ನುತ್ತಾರೆಯೋ ಮತ್ತು ಯಾವನು ನಿರಂತರ ಸಮಾಧಿ ಸುಖವನ್ನು ಅನುಭವಿಸುತ್ತಾನೆಯೋ ಅವನನ್ನು ಯಾವ ಚಿಹ್ನದಿಂದ ಗುರುತಿಸಬೇಕು ? ॥ ೮೮ ॥ ದೇವಾ, ಲಕ್ಷ್ಮೀಪತಿಯೇ, ಅವನಿರುವ ಸ್ಥಿತಿ ಹೇಗೆ ? ಅವನ ರೂಪವು ಹೇಗೆ ? ಅವನು ವರ್ತನ ಮಾಡುವ ರೀತಿಯು ಹೇಗೆಂಬುದನ್ನು ಕೃಪಾಮಾಡಿ ನನಗೆ ಹೇಳಬೇಕು.॥೮೯॥ ಆಗ್ಗೆ ಷಡ್ಗುಣೈಶ್ವರ್ಯ ಸಂಪನ್ನನೂ ಸರ್ವಗುಣದ ಅಧಿಷ್ಠಾನನೂ ಪರಬ್ರಹ್ಮಾವತಾರನೂ ಆದ ಭಗವಾನ ಶ್ರೀಕೃಷ್ಣ ಪರಮಾತ್ಮನು ಮಾತನಾಡಲಾರಂಭಿಸಿದನು. ॥ ೨೯೦ ॥

**ಶ್ರೀ ಭಗವಾನುವಾಚ—**

**ಪ್ರಜಹಾತಿ ಯದಾ ಕಾಮಾನ್ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

**[ ಶ್ರೀ ಭಗವಾನುವಾಚ ಇತಿ ]** ಮ್ಹಣೇ ಅರ್ಜುನಾ ಪರಿಯೇಸೀ । ಜೋ ಹಾ ಅಭಿಲಾಷ ಪ್ರೌಢ ಮಾನಸೀ । ತೋ ಅಂತರಾಯ ಸ್ವ ಸುಖೇಸೀ । ಕರೀತ ಅಸೇ ॥ ೯೧ ॥ ಜೋ ಸರ್ವದಾನಿತ್ಯ ತೃಪ್ತ । ಅಂತಃಕರಣ ಭರಿತ । ಪರೀ ವಿಷಯಾ ಮಾಜೀ ಪತಿತ । ಜೇಣೇ ಸಂಗೇ ಕೀಜೇ ॥ ೯೨ ॥ ತೋ ಕಾಮ ಸರ್ವಥಾ ಜಾಯೇ । ಜಯಾಚ ಆತ್ಮಸಂತೋಷೀ ಮನ ರಾಹೇ । ತೋಚಿ ಸ್ಥಿತಪ್ರಜ್ಞ ಹೋಯೇ । ಪುರುಷ ಜಾಣೇ ॥ ೯೩ ॥

**ಅರ್ಥ** ಶ್ರೀಕೃಷ್ಣನು ಅನ್ನುತ್ತಾನೆ:— ಅರ್ಜುನನೇ ಕೇಳು; ಮನಸ್ಸಿನಲ್ಲಿ ಬಲವತ್ತರವಾದ ವಿಷಯಾಸಕ್ತಿ ಉಂಟಾದರೆ ಅದು ಆತ್ಮಸುಖದಲ್ಲಿ ವಿಘ್ನವನ್ನುಂಟು ಮಾಡುತ್ತದೆ. ೯೧॥ ಸದಾ ತೃಪ್ತನಿರುವವನ ಅಂತಃಕರಣವು (ಯಾವಾಗಲೂ ಆನಂದದಿಂದ) ತುಂಬಿಕೊಂಡಿರುತ್ತದೆ. ಇಂಥ ಆತ್ಮಜ್ಞಾನಿಯು ಕೂಡಾ (ಕಾಮದ) ಸಂಗತಿಯಿಂದ ವಿಷಯದಲ್ಲಿ ಪತನ ಹೊಂದುತ್ತಾನೆ. ॥ ೯೨ ॥ ನಿತ್ಯತೃಪ್ತನೂ, ಆತ್ಮಜ್ಞಾನಿಯೂ, ಕಾಮನಾನಿವೃತ್ತನೂ ಸ್ವಾನಂದರತನೂ ಆದ ಮನುಷ್ಯನೇ "ಸ್ಥಿತಪ್ರಜ್ಞ"ನು ಅವನೇ ಸ್ಥಿರಬುದ್ಧಿಯುಳ್ಳವನು. ॥ ೯೩ ॥

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥**

[ **ದುಃಖೇಷ್ವಿತಿ** ] ನಾನಾ ದುಃಖೀ ಪ್ರಾಪ್ತೀ । ಜಯಾ ಉದ್ವೇಗ ನಾಹೀ ಚಿತ್ತೀ । ಆಣಿ ಸುಖಾಚಿಯಾ ಆರ್ತೀ । ಅಡಪೈಚಿ ಜೇನಾ ॥ ೯೪ ॥ ಅರ್ಜುನಾ ತಯಾಚ್ಯಾ ಠಾಯೀ । ಕಾಮ ಕ್ರೋಧ ಸಹಜೇ ನಾಹೀ । ಆಣಿ ಭಯಾತೇ ನೇಣೇ ಕಹೀ । ಪರಿಪೂರ್ಣತೋ ॥ ೯೫ ॥ ಐಸಾ ಜೋ ನಿರವಧಿ । ಜಾಣಪಾ ಸ್ಥಿರಬುದ್ಧೀ । ಜೋ ನಿರಸೂನಿ ಉಪಾಧೀ । ಭೇದ ರಹಿತ ॥ ೯೬ ॥

**ಅರ್ಥ**— ನಾನಾ ಪ್ರಕಾರದ ದುಃಖಗಳು ಪ್ರಾಪ್ತವಾಗುವದರಿಂದ ಯಾವನ ಮನಸ್ಸಿಗೆ ಕಷ್ಟವಾಗುವದಿಲ್ಲವೋ ಮತ್ತು ಯಾವನು ಸುಖದ ಅಪೇಕ್ಷೆಯಿಂದ ಬದ್ಧನಾಗುವದಿಲ್ಲವೋ ॥ ೯೪ ॥ ಅರ್ಜುನಾ ಆ ಸತ್ಪುರುಷನ ಅಂತಃಕರಣದಲ್ಲಿ ಸಹಜವೇ ಕಾಮಕ್ರೋಧಗಳು ಇಲ್ಲದಂತೆ ಆಗಿರುತ್ತವೆ. ಮತ್ತು ಆ ಪೂರ್ಣಾವಸ್ಥೆಗೆ ಮುಟ್ಟಿದ ಪುರುಷನಿಗೆ ಭಯದ ಅಂಜಿಕೆಯು ಲೇಶಮಾತ್ರವೂ ಇರುವದಿಲ್ಲ. ॥ ೯೫ ॥ ಈ ಪ್ರಕಾರ ಸಂಸಾರವನ್ನು ಬಿಟ್ಟುಕೊಟ್ಟು ಯಾವನು ಕೇವಲ ಭೇದ (ದ್ವೇಷ) ರಹಿತನಾಗಿರುವನೋ ಅದೇ ಪುರುಷನು ಸ್ಥಿರಬುದ್ಧಿಯುಳ್ಳವನೆಂದು ತಿಳಿಯಬೇಕು. ॥ ೯೬ ॥

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಂ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

[ **ಯಃ ಸರ್ವತ್ರಾ ನಭಿ ಸ್ನೇಹ ಇತಿ** ] ಜೋ ಸರ್ವತ್ರ ಸದಾ ಸರಿಸಾ । ಪರಿಪೂರ್ಣ ಚಂದ್ರಕಾ ಜೈಸಾ । ಅಧಮೋತ್ತಮ ಪ್ರಕಾಶಾ । ಮಾಜಿ ನ ಮ್ಹಣೇ ॥ ೯೭ ॥ ಐಸೀ ಅನವಚ್ಛಿನ್ನ ಸಮತಾ । ಭೂತ ಮಾತ್ರೀ ಸದಯತಾ । ಆಣಿ ಪಾಲಟೂ ನಾಹೀ ಚಿತ್ತಾ । ಕವಣೇ ವೇಳೀ ॥ ೯೮ ॥ ಗೋಮಟೇ ಕಾಹೀ ಪಾವೇ । ತರೀ ಸಂತೋಷೇ ತೇಣೇ ನಾಭಿಭವೇ । ಜೋ ಓಖಟೇನಿ ನಾಗವೇ । ವಿಷಾದಾಸೀ ॥ ೯೯ ॥ ಐಸಾ ಹರಿಖಶೋಕರಹಿತ । ಜೋ ಆತ್ಮಬೋಧ ಭರಿತ । ತೋ ಜಾಣ ಪಾ ಪ್ರಜ್ಞಾಯುಕ್ತ । ಧನುರ್ಧರಾ ॥ ೧೦೦ ॥

**ಅರ್ಥ**— ಹುಣ್ಣಿಮೆಯ ಚಂದ್ರನು ಉತ್ತಮ–ಅಧಮ ಜನರಿಗೆ ಕೂಡ ಸಮನಾಗಿ ಬೆಳಕನ್ನು ಹೇಗೆ ದಯಪಾಲಿಸುವಂತೆ ॥ ೯೭ ॥ ಅವನು ಸರ್ವರ ಮೇಲೂ ಸಮನಾದ ಭಾವವನ್ನಿಟ್ಟಿರುತ್ತಾನೆ. ಪ್ರಾಣಿಮಾತ್ರಗಳ ವಿಷಯದಲ್ಲಿ ಅಂತಃಕರಣವುಳ್ಳವನಾಗಿ ಅವನು ತನ್ನ ಚಿತ್ತದಲ್ಲಿ ಹೆಚ್ಚು ಕಡಿಮೆ ಎಂದೂ ಮಾಡುವದಿಲ್ಲ. ॥ ೯೮ ॥ ಉತ್ತಮವಾದ ಲಾಭವಾದರೆ ಅವನು ಸಂತೋಷದಿಂದ ಗರ್ವವನ್ನು ವಹಿಸುವದಿಲ್ಲ. ಹಾನಿಯುಂಟಾದರೆ ವ್ಯಥೆ ಪಡುವದಿಲ್ಲ. ॥ ೯೯ ॥ ಹೀಗೆ ಹರ್ಷ ಶೋಕ ರಹಿತನಾಗಿದ್ದು ಯಾವಾಗಲೂ ಆತ್ಮವಿಚಾರದಲ್ಲಿ ಮಗ್ನನಾಗಿರುವವನೇ ಸ್ಥಿತಪ್ರಜ್ಞ (ಸ್ಥಿರ ಬುದ್ಧಿ) ನೆಂದು ಕಂಡು ಹಿಡಿ. ॥ ೧೦೦ ॥

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

**[ ಯದೇತಿ ]** ಕಾ, ಕೂರ್ಮಾಚಿಯಾ ಪರೀ । ಉವಾಇಲಾ ಅವೇವ ಪಸರೀ । ನಾತರೀ ಇಚ್ಛಾವಶೇ ಆವರೀ ಆಪುಲೇ ಆವಣ ॥ ೧ ॥ ತೈಸೀ ಇಂದ್ರಿಯೇ ಆಪೈತೀ ಹೋತೀ । ಜಯಾಚಿ ಮ್ಹಣಿತಲೇ ಕರಿತೀ । ತಯಾಚೀ ಪ್ರಜ್ಞಾ ಜಾಣಸ್ಥಿತಿ । ಪಾತಲೀ ಅಸೇ ॥ ೨ ॥

**ಅರ್ಥ—** ಆಮೆಯು ಆನಂದದಲ್ಲಿರುವಾಗ್ಗೆ ತನ್ನ ಕೈಕಾಲುಗಳನ್ನು ಪಸರಿಸುತ್ತದೆ. ಬೇಡಾಗಿದ್ದರೆ ತನ್ನ ಅವಯವಗಳನ್ನು ಮುಚ್ಚಿಕೊಳ್ಳುತ್ತದೆ. ॥ ೧ ॥ ಅದೇ ಪ್ರಕಾರ ಇಂದ್ರಿಯಗಳು ಸ್ವಾಧೀನವುಳ್ಳವುಗಳಾಗಿ ಯಾವನ ಆಧೀನದಲ್ಲಿದ್ದು ಅವನು ಹೇಳಿದಂತೆ ವರ್ತಿಸುತ್ತವೆಯೋ ಅವನ ಬುದ್ಧಿಯು ಸ್ಥಿರವಾಗಿರುವದೆಂದು ತಿಳಿ. ॥೨॥

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂದೃಷ್ಟ್ವಾ ನಿವರ್ತತೇ ॥ ೫೯ ॥**

**[ ವಿಷಯಾಇತಿ ]** ಅರ್ಜುನಾ ಆಣಿಕಹೀ ಏಕ । ಸಾಂಗೇನ ಐಕೇ ಕವತಿಕ । ಯಾ ವಿಷಯಾತೇ ಸಾಧಕ । ತ್ಯಜಿತೀ ನಿಯಮೇ ॥ ೩ ॥ ಶ್ರೋತ್ರಾದಿ ಇಂದ್ರಿಯೇ ಆವರಿತೀ । ವರೀ ರಸನೇ ನಿಯಮು ನ ಕರಿತೀ । ತೇ ಸಹಸ್ರಧಾ ಕವಳಿಜತೀ । ವಿಷಯೀ ಇಹೀ ॥ ೪ ॥ ಜೈಸೀ ವರಿವರೀ ಪಾಲವೀ ಖುಡಿಜೇ । ಆಣಿ ಮುಳೀ ಉದಕ ಘಾಲಿಜೇ । ತರೀ ಕೈಸೇನಿ ನಾಶು ನಿಪಜೇ । ತಯಾ ವೃಕ್ಷಾ ॥ ೫ ॥ ತೋ ಉದಕಾಚೇನಿ ಬಳೇ ಅಧಿಕೇ । ಜೈಸೇ ಆಡವೇನಿ ಅಂಗೇ ಥಾಂಕೇ । ತೈಸಾ ಮಾನಸೀ ವಿಷೋ ಪೋಖೆ । ರಸನಾ ದ್ವಾರೇ ॥ ೬ ॥ ಯೇರಾ ಇಂದ್ರಿಯಾ ವಿಷಯು ತುಟೇ । ತೈಸಾ ನಿಯಮೂ ನಯೇ ರಸಹಟೇ । ಜೇ ಜೀವನ ಹೇ ನ ಘುಟೇ । ಯೇಣೇ ವಿಣ ॥ ೭ ॥ ಮಗ ಅರ್ಜುನಾ ಸ್ವಭಾವೇ । ಐಸಿಹೀ ನಿಯಮಾ ತೇ ಪಾವೇ । ಜೈ ಪರಬ್ರಹ್ಮ ಅನುಭವೇ । ಹೋವೂನಿ ಜಾಇಜೇ ॥ ೮ ॥ ತೈ ಶರೀರ ಭಾವ ನಾಸತೀ । ಇಂದ್ರಿಯೇ ವಿಷಯು ವಿಸರತೀ । ಜೈ ಸೋಽಹಂಭಾವ ಪ್ರತೀತೀ । ಪ್ರಗಟ ಹೋಯ ॥ ೯ ॥

**ಅರ್ಥ—** ಅರ್ಜುನಾ ಮತ್ತೂ ಒಂದು ವಿನೋದಪರವಾದ ಸಂಗತಿಯನ್ನು ಹೇಳುತ್ತೇನೆ ಕೇಳು. ಯಾವ ಸಾಧಕರು ಈ ವಿಷಯಗಳನ್ನು ನಿಯಮದಿಂದ ತ್ಯಾಗಮಾಡಿ ॥ ೩ ॥ ಶ್ರೋತ್ರಾದಿ ಇಂದ್ರಿಯಗಳನ್ನು ನಿಯಮಿಸಿ ನಾಲಿಗೆಯ ನಿಗ್ರಹವನ್ನು ಮಾತ್ರ ಮಾಡುವದಿಲ್ಲವೋ, ಅವರು ನಾನಾತರದಿಂದ ವಿಷಯದ ಬಲೆಯಲ್ಲಿ ತೊಡಕಿಕೊಳ್ಳುತ್ತಾರೆ. ॥ ೪ ॥ ಒಂದು ವೃಕ್ಷದ ಮೇಲಿನ ಭಾಗದ ಟೊಂಗೆಗಳನ್ನಷ್ಟೇ ಕಡಿದು ಗಿಡದ ಬೊಡ್ಡಿಗೆ ನೀರು ಹಾಕಿದರೆ ಆ ಗಿಡದ ನಾಶವು ಹೇಗೆ ಆದೀತು ? ॥ ೫ ॥ ಅದು ನೀರಿನ ಬಲದಿಂದ ಅಡ್ಡ ಬೆಳೆಯುವಂತೆ ರಸನೇಂದ್ರಿಯದ ದ್ವಾರದಿಂದ ಅಂತಃಕರಣದಲ್ಲಿ ವಿಷಯವು ಹೆಚ್ಚು ಹೆಚ್ಚು ಪುಷ್ಟಿಯನ್ನು ಹೊಂದುತ್ತದೆ. ॥ ೬ ॥ ಅನ್ಯವಿಷಯಗಳ ವಿಷಯವನ್ನು ಕಡಿಮೆಮಾಡುವದರಿಂದ ಅವುಗಳು ಕಡಿಮೆಯಾಗುತ್ತವೆ. ಆದರೆ ಅದೇ ಪ್ರಮಾಣದಿಂದ ರಸನೇಂದ್ರಿಯದ ವಿಷಯವನ್ನು ಹಟದಿಂದ ಕಡಿಮೆಮಾಡಲಿಕ್ಕೆ ಬರುವದಿಲ್ಲ. ಕಾರಣವೇನಂದರೆ ನಾಲಿಗೆಯು ಜೀವನದ ಆಧಾರವಾಗಿರುತ್ತದೆ. ಅದಿಲ್ಲದೆ ಈ ಶರೀರವು ನಡೆಯುವದಿಲ್ಲ ॥ ೭ ॥ ಆದರೆ ಅರ್ಜುನಾ ಸಾಧಕರು ಯಾವಾಗ್ಗೆ ಪರಬ್ರಹ್ಮ ಪರಮಾತ್ಮನ ಅನುಭವವನ್ನು ತೆಗೆದುಕೊಳ್ಳುತ್ತಾರೆಯೋ ಆಗ ರಸನೇಂದ್ರಿಯವು ಸಹಜವಾಗಿಯೇ ನಿಯಮಿತವಾಗುತ್ತದೆ. ॥ ೮ ॥ ದೇಹಭಾವವು ಇಲ್ಲದಂತಾಗಲು ಇಂದ್ರಿಯಗಳು ವಿಷಯವನ್ನು ಮರೆಯುತ್ತವೆ. ಆ ಮೇಲೆ ತಾನೇ ಬ್ರಹ್ಮಸ್ವರೂಪನಿರುವೆನೆಂಬ ಅನುಭವವು ಉಂಟಾಗುತ್ತದೆ. ॥ ೯ ॥

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥**

**[ ಯತತ ಇತಿ ]** ಯೇರ್ಹವೀ ತರೀ ಅರ್ಜುನಾ । ಹೇ ಆಯಾ ನ ಯೇ ಸಾಧನಾ । ಜೇ ರಾಹಾಟತಾತಿ ಜತನಾ । ನಿರಂತರ ॥ ೧೦ ॥ ಜಯಾತೇ ಅಭ್ಯಾಸಾಚೀ ಘುರಟೀ । ಯಮನಿಯ ಮಾಂಚೀತಾಟ । ಜೇ ಮನಾತೇ ಸದಾ ಮುಠೀ । ಧರೂನಿ ಆಹಾತೀ ॥ ೧೧ ॥ ತೇಹೀ ಕಿಜತೀ ಕಾಸಾವಿಸೀ । ಯಾ ಇಂದ್ರಿಯಾಂಚೀ ಪ್ರೌಢೀ ಐಸೀ । ಜೈಸೀ ಮಂತ್ರಜ್ಞಾತೇ ವಿವಸೀ । ಭುಲವೀ ಕಾ ॥ ೧೨ ॥ ದೇಖೇ ವಿಷಯ ಹೇ ತೈಸೇ । ಪಾವತೀ ಋದ್ಧಿಸಿದ್ಧಿ ಚೇನಿ ಮಿಷೇ । ಮಗ ಆಕಳತೀ ಸ್ಪರ್ಶೇ । ಇಂದ್ರಿಯಾಂಚೇನೀ ॥ ೧೩ ॥ ತಿಯೇ ಸಂಧೀಮನ ಜಾಯೇ । ಮಗ ಅಭ್ಯಾಸೀ ಥೋಟಾವಲೇ ಠಾಯೇ । ಐಸೇ ಬಳಕಟಪಣ ಆಹೇ । ಇಂದ್ರಿಯಾಂಚೆ ॥ ೧೪ ॥

**ಅರ್ಥ—** ಅರ್ಜುನಾ, ಇಂದ್ರಿಯಗಳನ್ನು ಜಯಸುವದರ ದೆಸೆಯಿಂದ ಯಾರು ನಿರಂತರ ಪ್ರಯತ್ನಪಡುವರೋ, ಅವರಿಗೆ ಸಹ ಇಂದ್ರಿಯಗಳು ಸ್ವಾಧೀನವಾಗುವದಿಲ್ಲ. ॥ ೩೧೦ ॥ ಯಾರು ತಮ್ಮ ಸುತ್ತಲೂ ಅಭ್ಯಾಸದ ಕಾವಲನ್ನಿಟ್ಟು ಯಮನಿಯಮದ ಮುಳ್ಳುಬೇಲಿಯನ್ನು ಹಚ್ಚುತ್ತಾರೆಯೋ ಯಾರು ತಮ್ಮ ಮನಸನ್ನು ತಮ್ಮ ಮುಷ್ಟಿಯಲ್ಲಿ ಹಿಡಿದಿರುತ್ತಾರೆಯೋ ॥ ೧೧ ॥ ಅವರನ್ನು ಸಹ ಇಂದ್ರಿಯಗಳು ವ್ಯಾಕುಲಪಡಿಸುತ್ತವೆ. ಅಷ್ಟೊಂದು ಈ ಇಂದ್ರಿಯಗಳ ಸಾಮರ್ಥ್ಯವಿದೆ. ಮಂತ್ರಜ್ಞನಿಗೆ ಭೂತವು ಭ್ರಮೆಯನ್ನುಂಟುಮಾಡುವಂತೆ, ॥ ೧೨ ॥ ಈ ವಿಷಯಗಳು ಋದ್ಧಿ ಸಿದ್ಧಿ ರೂಪದಿಂದ ಯೋಗಿಗಳಿಗೆ ಗಂಟುಬಿದ್ದು ಇಂದ್ರಿಯದ್ವಾರದಿಂದ ಅವರ ಮನಸ್ಸನ್ನು ಭ್ರಷ್ಟಮಾಡುತ್ತವೆ. ॥ ೧೩ ॥ ಇಂಥ ತೊಡಕಿನಲ್ಲಿ ಮನಸು ಸಿಲುಕಿದರೆ ಸಾಧಕರ ಅಭ್ಯಾಸವು ಅಲ್ಲಿಂದಲ್ಲೇ ನಿಂತುಬಿಡುತ್ತದೆ. ಅಹಾ! ಇಂದ್ರಿಯಗಳ ಸಾಮರ್ಥ್ಯವೆಷ್ಟಿದೆಂಬುದನ್ನು ನೋಡು. ॥ ೧೪ ॥

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

**[ ತಾನಿ ಸರ್ವಾಣೀತಿ ]** ಮ್ಹಣೋನಿ ಆ ಇಕೇ ಪಾರ್ಥಾ । ಯಾತೇ ಜಿರ್ಣಿ ಜೋ ಸರ್ವಥಾ। ಸರ್ವವಿಷಯೀ ಆಸ್ಥಾ । ಸಾಂಡೂನಿಯಾ ॥ ೧೫ ॥ ತೋಚಿ ತೂ ಜಾಣ । ಯೋಗನಿಷ್ಠೇಸಿ ಕಾರಣ । ಜಯಾಚೆ ವಿಷಯ ಸುಖೇ ಅಂತಃಕರಣ । ಝುಕವೇನಾ ॥ ೧೬ ॥ ಜೋ ಆತ್ಮಬೋಧಯುಕ್ತ । ಹೋವೂನಿ ಅಸೇ ಸತತ । ಜೋ ಮಾತೇ ಹೃದಯಾ ಆಂತ । ವಿಸಂಬೇನಾ ॥ ೧೭ ॥ ಯೇರ್ಹವೀ ಬಾಹ್ಯ ವಿಷಯ ತರೀ ನಾಹೀ । ಪರೀ ಮಾನಸೀ ಹೋಈಲ ಜರೀ ಕಾಹೀ । ತರೀ ಸಾದ್ಯಂತಚಿ ಪಾಹೀ । ಸಂಸಾರ ಅಸೇ ॥ ೧೮ ॥ ಜೈಸಾ ಕಾ ವಿಷಾಚಾ ಲೇಶ । ಘೇತಲಿಯಾ ಹೋಯ ಬಹುವಸ । ಮಗ ನಿಭ್ರಾಂತ ಕರೀ ನಾಶ । ಜೀವಿತಾಸೀ ॥ ೧೯ ॥ ತೈಸೀ ವಿಷಯಾಚೀ ಶಂಕಾ । ಮನೀ ವಸತೀ ದೇಖಾ । ಘಾತ ಕರೀ ಅಶೇಖಾ । ವಿವೇಕ ಜಾತಾ ॥ ೩೨೦ ॥

**ಅರ್ಥ—** ಆದುದರಿಂದ ಪಾರ್ಥಾ, ಸರ್ವ ವಿಷಯಗಳ ಅಪೇಕ್ಷೆಯನ್ನು ಬಿಟ್ಟು ಇಂದ್ರಿಯಗಳನ್ನು ಯಾರು ಜಯಸುತ್ತಾರೆಯೋ, ॥ ೧೫ ॥ ಇಲ್ಲವೇ ಯಾರ ಅಂತಃಕರಣವು ವಿಷಯಸುಖದಿಂದ ಭ್ರಮಿಷ್ಟವಾಗುವದಿಲ್ಲವೋ, ಅವರೇ ಯೋಗನಿಷ್ಠೆಯನ್ನು ಪಡೆಯಲು ಯೋಗ್ಯರೆಂದು ತಿಳಿ. ॥ ೧೬ ॥ ಕಾರಣವೇನಂದರೆ ಅವರು ಯಾವಾಗಲೂ ಆತ್ಮಬೋಧದಿಂದ ಯುಕ್ತರಾಗಿರುತ್ತಾರೆ. ಮತ್ತು ಅವರು ಅಂತಃಕರಣದಲ್ಲಿ ನನ್ನನ್ನು ಎಂದಿಗೂ ಮರೆಯುವದಿಲ್ಲ. ॥ ೧೭ ॥ ಯಾರಾದರೂ ಹೊರಗಿನ ವಿಷಯಗಳನ್ನು ಬಿಟ್ಟು ಕರ್ಮೇಂದ್ರಿಯಗಳನ್ನು ನಿರ್ಬಂಧಿಸಿ ಸ್ವಸ್ಥಚಿತ್ತರಾಗಿ ಕುಳಿತರೂ, ಅವರ ಮನಸಿನಲ್ಲಿ ವಿಷಯದ ಅಪೇಕ್ಷೆಯು ಉಂಟಾದಲ್ಲಿ ಅವರು, ಜನನ ಮರಣಗಳಿಂದ ಬಿಡುಗಡೆ ಹೊಂದಿದವರೆಂದು ಅನ್ನಲು ಬರುವದಿಲ್ಲ. ॥ ೧೮ ॥ ವಿಷವನ್ನು ಸೇವನ ಮಾಡುವ ಸಮಯದಲ್ಲಿ ಅದು

ಅತಿ ಸ್ವಲ್ಪವಿದ್ದರೂ ಮುಂದೆ ಶರೀರದಲ್ಲಿ ವ್ಯಾಪಿಸಿ ನಿಃಸಂಶಯವಾಗಿ ಪ್ರಾಣಹರಣ ಮಾಡುತ್ತದೆ. ॥ ೧೯ ॥ ಅದರಂತೆಯೇ ಮನಸಿನಲ್ಲಿ ವಿಷಯ ಸುಖದ ಅಪೇಕ್ಷೆಯು ಸ್ವಲ್ಪೇ ಉಳಿದಾಗ್ಯಾದರೂ ಅದು ಎಲ್ಲ ಶುದ್ಧ ವಿಚಾರಗಳನ್ನೂ ನಾಶಮಾಡಿ ಬಿಡುತ್ತದೆ. ॥ ೩೨೦ ॥

**ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿಜಾಯತೇ ॥ ೬೨ ॥**
**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ಸ್ಮೃತಿ ವಿಭ್ರಮಃ ।**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ॥ ೬೩ ॥**

**[ ಧ್ಯಾಯತ ಇತಿ ]** ಜರೀ ಹೃದಯೀ ವಿಷಯ ಸ್ಮೃತಿ । ತರೀ ನಿಃಸಂಗಾಹೀ ಆಪಜೇ ಸಂಗತೀ । ಸಂಗೇ ಪ್ರಗಟೇ ಮೂರ್ತಿ । ಅಭಿಲಾಷಾಚೀ ॥ ೨೧ ॥ ಜೇಥ ಕಾಮ ಉಪಜಲಾ । ತೇಥ ಕ್ರೋಧ ಆಧೀಂಚಿ ಆಲಾ । ಕ್ರೋಧೀ ಅಸೇ ಠೇವಿಲಾ । ಸಂಮೋಹ ಜಾಣೇ ॥ ೨೨ ॥ ಸಂಮೋಹಾ ಜಾಲಿಯಾ ವ್ಯಕ್ತೀ । ತರೀ ನಾಶ ಪಾವೇ ಸ್ಮೃತೀ । ಚಂಡವಾತೇ ಜ್ಯೋತೀ । ಹತ ಜೈಸೀ ॥ ೨೩ ॥ ಕಾ ಅಸ್ತಮಾನೀ ನಿಶೀ । ಜೈಸೀ ಸೂರ್ಯತೇಜಾತೇ ಗ್ರಾಸೀ । ತೈಸೀ ದಶಾಸ್ಮೃತಿ ಭ್ರಂಶೀ । ಪ್ರಾಣಿಯಾಸೀ ॥ ೨೪ ॥ ಮಗ ಅಜ್ಞಾನಾಂಧ ಕೇವಳ । ತೇಣೇ ಆಪ್ಲವಿಜೇ ಸಕಳ । ತೇಥ ಬುದ್ಧಿ ಹೋಯ ವ್ಯಾಕುಳ । ಹೃದಯಾ ಮಾಜೀ ॥ ೨೫ ॥ ಜೈಸೇ ಜಾತ್ಯಂಧಾ ಪಳಣೇ ಪಾವೇ । ಮಗ ತೇ ಕಾಕುಳತೀ ಸೈರಾ ಧಾವೇ । ತೈಸೀ ಬುದ್ಧೀಸೀ ಹೋತೀ ಭವೇ । ಧನುರ್ಧರಾ ॥ ೨೬ ॥ ಐಸಾ ಸ್ಮೃತಿಭ್ರಂಶ ಘಡೇ । ಮಗ ಸರ್ವಥಾ ಬುದ್ಧಿ ಅವಘಡೇ । ತೇಥ ಸಮೂಳ ಹೇ ಉಪಡೇ । ಜ್ಞಾನಜಾತ ॥ ೨೭ ॥ ಚೈತನ್ಯಾಚ್ಯಾ ಭ್ರಂಶೀ । ಶರೀರಾದಶಾ ಜೈಸೀ । ತೈಸೇ ಪುರುಷಾ ಬುದ್ಧಿ ನಾಶೀ । ಹೋಯ ದೇಖೇ ॥ ೨೮ ॥ ಮ್ಹಣೋನಿ ಆಇಕೇ ಅರ್ಜುನಾ । ಜೈಸಾ ವಿಸ್ಫುಲಿಂಗ ಲಾಗೇ ಇಂಧನಾ । ಮಗ ತೋ ಪ್ರೌಢ ಜಾಲಿಯಾ ತ್ರಿಭುವನಾ । ಪುರೋ ಶಕೇ ॥ ೨೯ ॥ ತೈಸೇ ವಿಷಯಾಂಚೆ ಧ್ಯಾನ । ಜರೀ ವಿಪಾಯೇ ವಾಹೇ ಮನ । ತರೀ ಯೇಸಣೇ ಹೇ ಪತನ । ಗಿವಸೀತ ಪಾವೇ ॥ ೩೩೦ ॥

**ಅರ್ಥ**— ಅಂತಃಕರಣದಲ್ಲಿ ವಿಷಯ ಸುಖದ ಸ್ಮರಣವಾದ ಕೂಡಲೇ ವಿರಕ್ತನಿಗೆ ಕೂಡಾ ಆ ವಿಷಯ ಸುಖದ ಅಪೇಕ್ಷೆಯು ಅಂದರೆ ಕಾಮ ಉಂಟಾಗುತ್ತದೆ. ॥ ೨೧ ॥ ಕಾಮ ಉಂಟಾದ ಕೂಡಲೇ ಮೊದಲು ಕ್ರೋಧವು ಉದ್ಭವಿಸುತ್ತದೆ. ಆ ಕ್ರೋಧದಿಂದ ಅವಿಚಾರವು ಬರುತ್ತದೆ. ॥ ೨೨ ॥ ಅವಿಚಾರದ ಜೊತೆಯಲ್ಲಿ ಸಮ್ಮೋಹವುಂಟಾಗುತ್ತದೆ. ದೀಪದ ಪ್ರಕಾಶವು ಬಿರುಗಾಳಿಯಿಂದ ನಾಶಹೊಂದುವಂತೆ, ॥ ೨೩ ॥ ಸಾಯಂಕಾಲವಾದ ಕೂಡಲೇ ರಾತ್ರಿಯು ಸೂರ್ಯತೇಜವನ್ನು ನುಂಗಿಬಿಡುವಂತೆ, ಸ್ಮೃತಿ ಭ್ರಂಶವು ಮನುಷ್ಯನ ಬುದ್ಧಿಯನ್ನು ನುಂಗಿಬಿಡುತ್ತದೆ. ॥ ೨೪ ॥ ಆಮೇಲೆ ಅಜ್ಞಾನವುಂಟಾಗಿ ಅವನ ಬುದ್ಧಿಯು ಕೇವಲ ಅಂಧತ್ವವನ್ನು ಹೊಂದುತ್ತದೆ. ಅವನು ಎಲ್ಲದರಿಂದಲೂ ಕೇಡಿಗೀಡಾಗುತ್ತಾನೆ. ಮತ್ತು ಅವನಿಗೆ ಏನೂ ತಿಳಿಯದಾಗುತ್ತದೆ. ॥ ೨೫ ॥ ಹುಟ್ಟುಗುರುಡನಿಗೆ ಓಡಿ ಹೋಗುವ ಪ್ರಸಂಗ ಬಂದರೆ ಅವನು ದೈನ್ಯಉಳ್ಳವನಾಗಿ ದಿಕ್ಕುದಪ್ಪಿ ( ಎಡಹುತ್ತ, ಮುಗ್ಗುತ್ತ ) ಓಡುತ್ತಿರುತ್ತಾನೆ. ಅದರಂತೆಯೇ ಅರ್ಜುನಾ, ಬುದ್ಧಿಗೆ ಭ್ರಮೆಯು ಉಂಟಾಗುತ್ತದೆ. ॥ ೨೬ ॥ ಈ ರೀತಿಯಿಂದ ಬುದ್ಧಿಯು ಕೆಟ್ಟ ಮೇಲೆ ಬುದ್ಧಿಯು ಗೊಂದಲದಲ್ಲಿ ಬೀಳುತ್ತದೆ. ಆ ಮೇಲೆ ಸರ್ವ ಜ್ಞಾನವೂ ನಷ್ಟವಾಗುತ್ತವೆ. ॥ ೨೭ ॥ ಶರೀರದೊಳಗಿನ ಪ್ರಾಣವು ಹೊರಟುಹೋದ ಮೇಲೆ ದೇಹವು ಪ್ರೇತರೂಪವಾಗುವಂತೆ, ಬುದ್ಧಿಯು ನಾಶಹೊಂದಿದ ಜೀವದ ಸ್ಥಿತಿಯೂ ಆಗುತ್ತದೆ. ॥ ೨೮ ॥ ಆದ್ದರಿಂದ ಅರ್ಜುನಾ, ಒಂದೇ

ಬೆಂಕಿಯ ಕಿಡಿಯು ಹುಲ್ಲಿನಲ್ಲಿ ಬೀಳುವದರಿಂದ ಅದು ಪ್ರಜ್ವಲಿತವಾಗಿ ಮೂರು ಲೋಕಗಳನ್ನೂ ಸುಟ್ಟು ಬಿಡುವಂತೆ, ॥ ೨೯ ॥ ಅಂತಃಕರಣದಲ್ಲಿ ಲೇಶಮಾತ್ರ ವಿಷಯದ ಸ್ಮರಣೆಯಾದರೆ ಅದು ಸರ್ವತಃ ಅನರ್ಥವನ್ನುಂಟುಮಾಡುತ್ತದೆ. ॥ ೩೩೦ ॥

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

**[ ರಾಗದ್ವೇಷೇತಿ ]** ಮ್ಹಣೋನಿ ವಿಷಯ ಹೇ ಆಘವೇ । ಸರ್ವಥಾ ಮನೌನಿ ಸಾಂಡಾವೇ । ಮಗ ರಾಗ ದ್ವೇಷ ಸ್ವಭಾವೇ । ನಾಶತೀಲ ॥ ೩೧ ॥ ಪಾರ್ಥಾ ಆಣಿಕಹೀ ಏಕ । ಜರೀ ನಾಶಲೇ ಹೇ ರಾಗ ದ್ವೇಷ । ತರೀ ಇಂದ್ರಿಯಾ ವಿಷಯೀ ಬಾಧಕ । ರಮತಾ ನಾಹೀ ॥ ೩೨ ॥ ಜೈಸಾ ಸೂರ್ಯ ಆಕಾಶಗತ ರಶ್ಮಿಕರೀ ಜಗಾತೇ ಸ್ಪರ್ಶತ । ತರೀ ಸಂಗದೋಷೇ ಕಾಯ ಲಿಂಪತ । ತೇಥೀಂಚೇನಿ ೩೩ ॥ ತೈಸಾ ಇಂದ್ರಿಯಾರ್ಥೀ ಉದಾಸೀನ । ಆತ್ಮರಸೇಚಿ ನಿರ್ಭಿನ್ನ । ಜೋ ಕಾಮ ಕ್ರೋಧ ವಿಹೀನ । ಹೋವೂನಿ ಅಸೇ ॥ ೩೪ ॥ ತರೀ ವಿಷಯಾಂತಹೀ ಕಾಹೀ । ಆಪಣಪೇ ವಾಂಚೂನಿ ನಾಹೀ । ಮಗ ವಿಷಯ ಕವಣಕಾಯೀ । ಬಾಧಿತೀಲ ಕವಣ ॥ ೩೫ ॥ ಜರೀ ಉದಕೀ ಉದಕೇ ಬುಡಿಜೇ । ಕಾ ಅಗ್ನಿ ಆಗೀ ಪೋಳಿಜೇ । ತರೀ ವಿಷಯ ಸಂಗೇ ಆಪ್ಲವಿಜೇ । ಪರಿಪೂರ್ಣ ತೋ ॥ ೩೬ ॥ ಐಸಾ ಆಪಣಚಿ ಕೇವಳ । ಹೋವೂನಿ ಅಸೇ ನಿಖಿಳ । ತಯಾಚೀ ಪ್ರಜ್ಞಾ ಅಚಳ । ನಿಭ್ರಾಂತ ಮಾನೀ ॥ ೩೭ ॥

**ಅರ್ಥ**— ಆದುದರಿಂದ ಮನಸ್ಸಿನಲ್ಲಿಯು ಸರ್ವ ವಿಷಯುಗಳನ್ನು ಬಿಟ್ಟುಬಿಡಬೇಕು. ಅಂದರೆ ರಾಗ (ಪ್ರೀತಿ) ದ್ವೇಷ (ಅಪ್ರೀತಿ) ಇವುಗಳು ತಮ್ಮಿಂದ ತಾವೇ ಇಲ್ಲದಂತಾಗುತ್ತವೆ. ॥ ೩೧ ॥ ಪಾರ್ಥಾ, ಮತ್ತೂ ಒಂದು ಮಾತನ್ನು ನಿನಗೆ ಹೇಳುತ್ತೇನೆ.— ರಾಗದ್ವೇಷಗಳು ಇಲ್ಲದಂತಾದ ಮೇಲೆ ಇಂದ್ರಿಯುಗಳು ವಿಷಯದಲ್ಲಿ ರಮಿಸಿದಾಗ್ಯೂ ಆ ವಿಷಯುಗಳು ಬಾಧಕಗಳಾಗುವದಿಲ್ಲ ॥ ೩೨ ॥ ಆಕಾಶದೊಳಗಿಂದ ಸೂರ್ಯನು ತನ್ನ ಕಿರಣರೂಪೀ ಕೈಗಳಿಂದ ಜಗತ್ತಿನೊಳಗಿನ ಪದಾರ್ಥಗಳನ್ನು ಸ್ಪರ್ಶಮಾಡುತ್ತಾನೆ. ಆದರೆ ಅವುಗಳ ಸಂಸರ್ಗದೋಷದಿಂದ ಲಿಪ್ತನಾಗುವನೇನು? ಇಲ್ಲ. ॥ ೩೩ ॥ ಅದೇ ಪ್ರಕಾರ ಅವನು ವಿಷಯುದ ಸ್ಥಳದಲ್ಲಿ ಉದಾಸೀನನೂ, ಆತ್ಮಸ್ವರೂಪದಲ್ಲಿ ಮಗ್ನನೂ ಕಾಮ ಕ್ರೋಧಗಳಿಂದ ಅಲಿಪ್ತನೂ ಆಗಿರುವನು ॥ ೩೪ ॥ ಮತ್ತು ಅರ್ಜುನಾ, ಯಾವನು ವಿಷಯದಲ್ಲಿ ತನ್ನ ಸ್ವರೂಪದ ಹೊರತು ಅನ್ಯವಸ್ತುಗಳನ್ನು ನೋಡುವದೇ ಇಲ್ಲವೋ ಅವನಿಗೆ ವಿಷಯುವೆಂದರೇನು ? ಎಂಬುದು ಕೂಡಾ ಗೊತ್ತಿರುವದಿಲ್ಲ. ಅಂದಬಳಿಕ ಆ ವಿಷಯುವು ಇವನನ್ನು ಬಾಧಿಸುವ ಬಗೆ ಹೇಗೆ ? ॥ ೩೫ ॥ ಒಂದು ವೇಳೆ ನೀರಿನಲ್ಲಿ ನೀರು ಮುಳಿಗಿದರೆ, ಅಗ್ನಿಯಿಂದ ಅಗ್ನಿಯು ಸುಟ್ಟರೆ ಮಾತ್ರ ಆ ಪರಿಪೂರ್ಣನಾದ ಪುರುಷನು ವಿಷಯದಲ್ಲಿ ಮುಳುಗಬಹುದು. ॥ ೩೬ ॥ ಹೀಗೆ ಯಾವನು ಸರ್ವಭೂತಮಾತ್ರಗಳು ತನ್ನ ಸ್ವರೂಪವೇ (ತನ್ನಂತೇ) ಎಂದು ತಿಳಿಯುತ್ತಾನೋ ಅವನೇ ಅಚಲ ಪ್ರಜ್ಞ (ಸ್ಥಿರಬುದ್ಧಿ) ನೆಂದು ನಿಃಸಂಶಯವಾಗಿ ತಿಳಿದುಕೊಳ್ಳು. ॥ ೩೭ ॥

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶುಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

**[ ಪ್ರಸಾದೇ ಇತಿ ]** ದೇಖೇ ಅಖಂಡಿತ ಪ್ರಸನ್ನತಾ । ಆಥೀ ಜೇಥ ಚಿತ್ತಾ । ತೇಥ ರಿಗಣೇ ನಾಹೀ ಸಮಸ್ತಾ । ಸಂಸಾರ ದುಃಖಾ ॥ ೩೮ ॥ ಜೈಸಾ ಅಮೃತಾಚಾ ನಿರ್ಝರ । ಪ್ರಸವೇ ಜಯಾಚಾ ಜಠರ । ತಯಾ ಕ್ಷುಧೇ ತೃಷೇಚಾ ಅಡದರ । ಕಾಹೀಂಚಿ ನಾಹೀ ॥ ೩೯ ॥ ತೈಸೇ ಹೃದಯ ಪ್ರಸನ್ನ ಹೋಯೇ । ತರಿ ದುಃಖ ಕೈಂಚೇಕೇ ಆಹೇ । ತೇಥ ಆಪೈಸೀ ಬುದ್ಧಿ ರಾಹೇ । ಪರಮಾತ್ಮರೂಪೀ ॥ ೩೪೦ ॥ ಜೈಸಾ ನಿರ್ವಾತೀಂಚಾ ದೀಪ । ಸರ್ವಥಾ ನೇಣೇ ಕಂಪ । ತೈಸಾ ಸ್ಥಿರಬುದ್ಧಿ ಸ್ವಸ್ವರೂಪ । ಯೋಗಯುಕ್ತ ॥ ೩೪೧ ॥

**ಅರ್ಥ** - ಹೀಗೆ ನೋಡು, ಮನಸಿನ ಪೂರ್ಣ ಶಾಂತತೆಯು ಇರುವಲ್ಲಿ ಈ ಸರ್ವಸಂಸಾರದ ದುಃಖವು ಪ್ರವೇಶಿಸಲಾರದು. ॥ ೩೮ ॥ ಯಾವನ ಉದರದಲ್ಲಿಯೇ ಅಮೃತದ ಸೆಲೆಯು ಹೊರಟಿರುವದೋ ಅವನಿಗೆ ಹಸಿವೆ ನೀರಡಿಕೆಯ ಬಾಧೆಯು ಎಂದಿಗೂ ಉಂಟಾಗುವದಿಲ್ಲ. ॥ ೩೯ ॥ ಅದರಂತೆಯೇ ಪ್ರಸನ್ನವಾದ ಹೃದಯವುಳ್ಳ ಮನುಷ್ಯನಿಗೆ ದುಃಖವೆಲ್ಲಿಂದ ಬರಬೇಕು? ಅವನ ಬುದ್ಧಿಯು ತನ್ನಿಂದ ತಾನೇ ಪರಮಾತ್ಮಸ್ವರೂಪದಲ್ಲಿ ಕೂಡಿ ಹೋಗಿರುತ್ತದೆ. ॥ ೩೪೦ ॥ ಗಾಳಿಯಿಲ್ಲದ ಸ್ಥಳದಲ್ಲಿಟ್ಟ ದೀಪವು ಅಲ್ಲಾಡದೆ ಸ್ಥಿರವಿರುವಂತೆ ಸ್ಥಿರಬುದ್ಧಿಯುಳ್ಳವನಾದರೂ ಆತ್ಮಸ್ವರೂಪದ ಸಮಾಧಿಯಲ್ಲಿ ಲೀನನಾಗಿ ನಿಶ್ಚಲನಾಗಿರುತ್ತಾನೆ. ॥ ೩೪೧ ॥

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಂ ॥ ೬೬ ॥**

**[ ನಾಸ್ತಿ ಬುದ್ಧಿರಿತಿ ]** ಯೇ ಯುಕ್ತೀಚಿ ಕಡಸಣೀ । ನಾಹೀ ಜಯಾಚ್ಯಾ ಅಂತಃಕರಣೀ । ತೋ ಆಕಳಿಲಾ ಜಾಣ ಗುಣೀ । ವಿಷಯಾದಿಕೀ ॥ ೪೨ ॥ ತಯಾ ಸ್ಥಿರಬುದ್ಧಿ ಪಾರ್ಥಾ । ಕಹೀ ನಾಹೀ ಸರ್ವಥಾ । ಆಣಿ ಸ್ಥೈರ್ಯಾಚೀ ಆಸ್ಥಾ । ತೇಹೀ ನುಪಜೇ ॥ ೪೩ ॥ ನಿಶ್ಚಳತ್ವಾಚೀ ಭಾವನಾ । ಜರೀ ನಸ್ಫೋಚೀ ದೇಖೇ ಮನಾ । ತರೀ ಶಾಂತಿ ಕೇವೀ ಅರ್ಜುನಾ । ಆಪು ಹೋಯ ॥ ೪೪ ॥ ಜೇಥ ಶಾಂತೀಚಾ ಜಿವ್ಹಾಳಾ ನಾಹೀ । ತೇಥ ಸುಖಪಿಸರೋನಿ ನರಿಘೇ ಕಾಹೀ । ಜೈಸಾ ಪಾಪಿಯಾಚ್ಯಾ ಠಾಯೀ । ಮೋಕ್ಷ ನವಸೇ ॥ ೪೫ ॥ ದೇಖೇ ಅಗ್ನಿ ಮಾಜೀ ಘಾಪತೀ । ತೀಯೇ ಬೀಜೇ ಜರೀ ವಿರೂಢತೀ । ತರೀ ಅಶಾಂತಾ ಸುಖಪ್ರಾಪ್ತೀ । ಘಡೋ ಶಕೇ ॥ ೪೬ ॥ ಮ್ಹಣೋನಿ ಅಯುಕ್ತಪಣ ಮನಾಚೆ । ತೇಚಿ ಸರ್ವಸ್ವ ದುಃಖಾಚೆ । ಯಾ ಕಾರಣೇ ಇಂದ್ರಿಯಾಂಚೆ ದಮನ ಕೀಜೇ ॥ ೪೭ ॥

**ಅರ್ಥ**— ಈ ಯೋಗಯುಕ್ತಿಯ ವಿಚಾರವು ಯಾವನ ಅಂತಃಕರಣದಲ್ಲಿ ಬರುವದಿಲ್ಲವೋ ಅವನನ್ನು ಶಬ್ದಾದಿಕ ವಿಷಯುಗಳು ತಮ್ಮ ಬಲಿಯಲ್ಲಿ ತೊಡಕಿಸಿಕೊಳ್ಳುತ್ತವೆ. ॥ ೪೨ ॥ ಪಾರ್ಥಾ, ಅವನ ಬುದ್ಧಿಗೆ ಎಂದಿಗೂ ಸ್ಥಿರತೆಯಿರುವದಿಲ್ಲ. ಮತ್ತು ಆ ಸ್ಥಿರ ಬುದ್ಧಿ ಪ್ರಾಪ್ತಿಯ ವಿಷಯದಲ್ಲಿ ಅವನ ಅಂತಃಕರಣದಲ್ಲಿ ಇಚ್ಛೆಯಾದರೂ ಉಂಟಾಗುವದಿಲ್ಲ. ॥ ೪೩ ॥ ಅರ್ಜುನಾ, ಸ್ಥಿರವಾದಂಥ ಭಾವನೆಯು ಅವನ ಅಂತಃಕರಣದಲ್ಲಿ ಮೂಲತಃ ಉದ್ಭವಿಸುವದಿಲ್ಲ. ಅಂದಬಳಿಕ ಅವನಿಗೆ ಶಾಂತಿಯು ಹೇಗೆ ಪ್ರಾಪ್ತವಾಗುವದು? ॥ ೪೪ ॥ ಪಾಪಾತ್ಮ ಮನುಷ್ಯನ ಕಡೆಗೆ ಮೋಕ್ಷವು ಹಣಿಕಿಸಹ ನೋಡುವದಿಲ್ಲ. ಹಾಗೆಯೇ ಸ್ವಲ್ಪಾದರೂ ಶಾಂತಿಯಿಲ್ಲದ ಸ್ಥಳದಲ್ಲಿ ಸುಖವು ಮರೆತು ಸಹ ಹೋಗುವದಿಲ್ಲ. ॥ ೪೫ ॥ ಹೀಗೆ ನೋಡು, ಬೆಂಕಿಯಲ್ಲಿ ಹಾಕಿದ ಧಾನ್ಯದ ಬೀಜಗಳು ಮೊಳೆತಂದು ಶಾಂತಿಹೀನ ಮನುಷ್ಯನಿಗೆ ಸುಖಪ್ರಾಪ್ತಿಯಾಗಬಹುದು. ॥ ೪೬ ॥ ಆದ್ದರಿಂದ ಮನಸ್ಸಿನ ಅನಿಯಮಿತತನವೇ ದುಃಖಕ್ಕೆ ಕಾರಣವಾಗಿರುವದು. ಇದಕ್ಕಾಗಿ ಇಂದ್ರಿಯನಿಗ್ರಹ ಮಾಡುವದೇ ಉತ್ತಮವು. ॥ ೪೭ ॥

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**

**[ ಇಂದ್ರಿಯಾಣಾಮಿತಿ ]** ಇಂದ್ರಿಯೇ ಜೇ ಜೇ ಮ್ಹಣತೀ । ತೇ ತೇಚಿ ಜೇ ಪುರುಷ ಕರಿತೀ । ತೇ ತರಲೇಚಿ ನ ತರತೀ । ವಿಷಯ ಸಿಂಧು ॥ ೪೮ ॥ ಜೈಸೀ ನಾವ ಥಡಿಯೇ ಠಾಕಿತಾ । ಜರೀ ವರಪಡೀ ಹೋಯ ದುರ್ವಾತಾ । ತರೀ ಚುಕಲಾಹೀ ಮಾಗೌತಾ । ಅಪಾವೋ ಪಾವೆ ॥ ೪೯ ॥ ತೈಸೀ ಪ್ರಾಪ್ತೇಹೀ ಪುರುಷೇ । ಇಂದ್ರಿಯೇ ಲಾಳಿಲೀ ಜರೀ ಕೌತುಕೇ । ತರೀ ಆಕ್ರಮಿಲಾ ಜಾಣ ದುಃಖೇ । ಸಂಸಾರಿಕೇ ॥ ೩೫೦ ॥

**ಅರ್ಥ**— ಇಂದ್ರಿಯಗಳ ಇಚ್ಛೆಯಂತೆ ನಡೆಯುವ ಮನುಷ್ಯನು ಸಂಸಾರಸಾಗರದಿಂದ ತಾನು ದಾಟಿದೆನೆಂದು ಭಾವಿಸಿದರೂ ಅವನು ನಿಜವಾಗಿ ಮುಕ್ತನಾಗಿರುವದಿಲ್ಲ. ॥ ೪೮ ॥ ನಾವು (ನೌಕೆಯು) ಪಾರಾಗಿ ದಂಡೆಗೆ ಹತ್ತುವಷ್ಟರಲ್ಲಿಯೇ ಬಿರುಗಾಳಿಯು ಉತ್ಪನ್ನವಾದರೆ ಅದು ಗಂಡಾಂತರದಲ್ಲಿ ಬೀಳುವದು. ॥ ೪೯ ॥ ಅದರಂತೆಯೇ ಕೃತಾರ್ಥನಾಗುವ ಸಮಯವು ಬಂದೊದಗಿರಲು ವಿನೋದಾರ್ಥವಾಗಿಯೇ ಆಗಲಿ ಇಂದ್ರಿಯ ಲಾಲನೆಗೆ ಮನುಷ್ಯನು ಸಿಲುಕಿದರೆ ಸಾಕು. ಅವನನ್ನು ಸಂಸಾರದುಃಖವು ಆವರಿಸಿಯೇ ತೀರುವದು. ॥ ೩೫೦ ॥

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

**[ ತಸ್ಮಾದಿತಿ ]** ಮ್ಹಣೋನಿ ಆಪುಲೀ ಆಪಣಪಯಾ । ಜರೀ ಇಂದ್ರಿಯೇ ಯೇತೀ ಆಯಾ । ತರೀ ಅಧಿಕ ಕಾಂಹೀ ಧನಂಜಯಾ । ಸಾರ್ಥಕ ಅಸೇ ॥ ೫೧ ॥ ದೇಖೇ ಕೂರ್ಮು ಜಿಯಾಪರೀ । ಉವಾಇಲಾ ಅವಯವ ಪಸರೀ । ನಾತರೀ ಇಚ್ಛಾವಶೇ ಆವರೀ । ಆಪಣಪೇಚಿ ॥ ೫೨ ॥ ತೈಸೀ ಇಂದ್ರಿಯೇ ಅಪೈತೀ ಹೋತಿ । ಜಯಾಚೇ ಮ್ಹಣೀತಲೇ ಕರಿತೀ । ತಯಾಚೀ ಪ್ರಜ್ಞಾ ಜಾಣ ಸ್ಥಿತೀ । ಪಾತಲೀ ಅಸೇ ॥ ೫೩ ॥ ಆತಾ ಆಣಿಕ ಏಕ ಗಹನ । ಪೂರ್ಣಾಚೆ ಚಿನ್ಹ । ಅರ್ಜುನಾ ತುಜ ಸಾಂಗೇನ-ಪರಿಸಪಾ ॥ ೫೪ ॥

**ಅರ್ಥ**— ಆದ್ದರಿಂದ ಧನಂಜಯಾ ಇಂದ್ರಿಯಗಳು ಸ್ವಾಧೀನವಾದ ಮೇಲೆ ಅದರಕಿಂತಲೂ ಹೆಚ್ಚಿನ ಸಾರ್ಥಕತೆ ಎಲ್ಲಿರುವದು ? ॥ ೫೧ ॥ ಹೀಗೆ ನೋಡು— ಆಮೆಯು ಹೇಗೆ ವಿಸ್ತರಿಸಿದ ತನ್ನ ಅವಯವಗಳನ್ನು ಸ್ವೇಚ್ಛೆಯಿಂದ ಅಡಗಿಸಿಕೊಳ್ಳುತ್ತಿರುವದೋ, ॥ ೫೨ ॥ ಹಾಗೆಯೇ ಯಾವನು ಇಂದ್ರಿಯಗಳನ್ನು ತನ್ನ ಸ್ವಾಧೀನದಲ್ಲಿಟ್ಟುಕೊಂಡು ಅವುಗಳ ನಿಯಮನವನ್ನು ಮಾಡುತ್ತಾನೆಯೋ ಅವನೇ ಸ್ಥಿರಬುದ್ಧಿಯುಳ್ಳವನು. ॥ ೫೩ ॥ ಅರ್ಜುನನೇ, ಜ್ಞಾನೀ ಮನುಷ್ಯನ ಸೂಕ್ಷ್ಮವಾದ ಗಹನವಾದ ಇನ್ನೂ ಒಂದು ಲಕ್ಷಣವನ್ನು ಹೇಳುತ್ತೇನೆ ಕೇಳು. ॥ ೫೪ ॥

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥ ೬೯ ॥**

**[ ಯಾ ನಿಶೇತಿ ]** ದೇಖೇ ಭೂತ ಜಾತ ನಿದೇಲೇ । ತೇಥೇಂಚಿ ಜಯಾ ಪಾಹಲೇ । ಆಣಿ ಜೀವ ಜೇಥ ಚೇಇಲೇ । ತೇಥ ನಿದ್ರಿತ ಜೋ ॥ ೫೫ ॥ ತೋಚಿ ತೋ ನಿರುಪಾಧಿ । ಅರ್ಜುನಾ ತೋ ಸ್ಥಿರಬುದ್ಧಿ । ತೋಚಿ ಜಾಣೇ ನಿರವಧಿ । ಮುನೀಶ್ವರ ॥ ೫೬ ॥

**ಅರ್ಥ**— ಸರ್ವಪ್ರಾಣಿಗಳಿಗೆ ತಿಳಿಯದ ಆತ್ಮಸ್ವರೂಪದ ವಿಷಯವು ಯಾವನಿಗೆ ಪೂರ್ಣವಾಗಿ ತಿಳಿದಿರುವದೋ ಮತ್ತು ಪ್ರಾಣಿಮಾತ್ರಗಳೆಲ್ಲ ಎಚ್ಚತ್ತಿರುವ ವಿಷಯಗಳಲ್ಲಿ ಯಾವನು ನಿದ್ರಿತನಾಗಿರುತ್ತಾನೆಯೋ, ಅವನೇ ನಿಜವಾದ ಸಂಯಮಿಯು. ॥ ೫೫ ॥ ಅರ್ಜುನನೇ, ಅವನೇ ಉಪಾಧಿರಹಿತನು. ಸ್ಥಿರಬುದ್ಧಿಯು. ಗಂಭೀರನು ಮತ್ತು ಮುನಿಗಳಲ್ಲಿ ಅಂದರೆ ಮನನಶೀಲರಲ್ಲಿ ಅವನೇ ಶ್ರೇಷ್ಠವಾದ ಜ್ಞಾನಿಯು. ॥ ೫೬ ॥

**ಅಪೂರ್ಯಮಾಣಮಚಲಪ್ರತಿಷ್ಠಂ । ಸಮುದ್ರ ಮಾಪಃ ಪ್ರವಿಶಂತಿ ಯದ್ವತ್- ॥**
**ತದ್ವತ್ಕಾಮಾಯಂ ಪ್ರವಿಶಂತಿ ಸರ್ವೇ। ಸ ಶಾಂತಿಮಾಪ್ನೋತಿನಕಾಮಕಾಮೀ ॥೭೦॥**

**[ ಅಪೂರ್ಯಮಾಣಾಮಿತಿ ]** ಪಾರ್ಥಾ ಆಣಿಕ ಹೀ ಪರೀ । ತೋ ಜಾಣೋ ಯೇಈಲ ಅವಧಾರೀ । ಜೈಸೀ ಅಕ್ಷೋಭತಾ ಸಾಗರೀ । ಅಖಂಡಿತ ॥ ೫೭ ॥ ಜರ್ಹೀ ಸರಿತಾವೋಘ ಸಮಸ್ತ । ಪರಿಪೂರ್ಣ ಹೋವೂನಿ ಮಿಳತ । ತರ್ಹೀ ಅಧಿಕ ನೋಹೇ ಈಷತ । ಮರ್ಯಾದಾ ನ ಸಾಂಡೀ ॥ ೫೮ ॥

ನಾತರೀ ಗ್ರೀಷ್ಮ ಕಾಳೀ ಸರಿತಾ । ಶೋಷೂನಿ ಜಾತೀ ಸಮಸ್ತಾ । ಪರೀ ನ್ಯೂನ ನಷ್ಹೇ ಪಾರ್ಥಾ ಸಮುದ್ರ ಜೈಸಾ ॥ ೫೯ ॥ ತೈಸಾ ಪ್ರಾಪ್ತೀ ಋದ್ಧಿ ಸಿದ್ಧಿ । ತಯಾಸಿ ಕ್ಷೋಭ ನಾಹೀ ಬುದ್ಧೀ । ಆಣಿ ನ ಪಾವತಾ ನ ಬಾಧೀ । ಅಧೃತಿ ತಯಾತೇ ॥ ೬೦ ॥ ಸಾಂಗೇ ಸೂರ್ಯಾಚ್ಯಾ ಘರೀ । ಪ್ರಕಾಶ ಕಾಯ ವಾತಿವೇರ್ಥ್ಹೀ । ಕಾ, ನ, ಲಾವಿಜೇ ತರೀ ಅಂಧಕಾರೀ । ಕೋಂಡೇಲತೋ ॥ ೬೧ ॥ ದೇಖೇ ಋದ್ಧಿ ಸಿದ್ಧಿ ತಯಾಪರೀ । ಆಲೀ ಗೇಲಿ ಸೇನಕರೀ । ತೋಚಿ ಗುಂತಲಾ ಅಸೇ ಅಂತರೀ । ಮಹಾಸುಖೀ ॥ ೬೨ ॥ ಜೋ ಆಪುಲೇನಿ ನಾಗರಪಣೇ । ಇಂದ್ರಭುವನಾತೇ ಪಾಬಳೀ ವ್ಹಣೇ । ತೋ ಕೇವೀ ರಂಜೇ ಪಾಲವಣೇ । ಭಿಲ್ಲಾಂಚೇನಿ ॥ ೬೩ ॥ ಜೋ ಅಮೃತಾತೇ ಠೀ ಠೇವೀ । ತೋ ಜೈಸಾ ಕಾಂಜೀ ನ ಸೇವೀ । ತೈಸಾ ಸ್ವಸುಖಾನುಭವೀ । ನ ಭೋಗೀ ಋದ್ಧಿ ॥ ೬೪ ॥ ಪಾರ್ಥಾ ನವಲಹೇ ಪಾಹೀ । ಜೇಥ ಸ್ವರ್ಗ, ಸುಖ ಲೇಖಣೇ ನಾಹೀ । ತೇಥ ಋದ್ಧಿ ಸಿದ್ಧಿ ಕಾಯೀ । ಪ್ರಾಕೃತಾ ಹೋತೀ ॥ ೬೫ ॥

**ಅರ್ಥ—** ಪಾರ್ಥಾ, ಇನ್ನೂ ಒಂದು ಪರ್ಯಾಯದಿಂದ ಆ, ಸ್ಥಿತ ಪ್ರಜ್ಞನಾದ ಮನುಷ್ಯನನ್ನು ಗುರುತಿಸಲು ಬರುತ್ತದೆ. ಸಮುದ್ರವು ನಿರಂತರವಾಗಿ ಪರಿಪೂರ್ಣವಾಗಿರುವಂತೆ ಆ ಪುರುಷನಾದರೂ ಪರಿಪೂರ್ಣನಿರುತ್ತಾನೆ. ॥ ೫೭ ॥ ಮಳೆಗಾಲದಲ್ಲಿ ನದಿಗಳ ಪ್ರವಾಹವು ಸಂಪೂರ್ಣ ತುಂಬಿ ಹೋಗಿ ಸಮುದ್ರಕ್ಕೆ ಕೂಡಿದರೂ ಅದು ಸ್ವಲ್ಪವಾದರೂ ತನ್ನ ಮರ್ಯಾದೆಯನ್ನು ಉಲ್ಲಂಘಿಸುವದಿಲ್ಲ. ॥ ೫೮ ॥ ಇಲ್ಲವೇ ಬೇಸಿಗೆಯ ಕಾಲದಲ್ಲಿ ಎಲ್ಲ ನೀರು ಅಟ್ಟಿಸಿ ಒಣಗಿ ಹೋದರೂ, ಆ ಸಮುದ್ರವು ಲೇಶ ಮಾತ್ರವೂ ಕಡಿಮೆಯಾಗುವದಿಲ್ಲ. ॥ ೫೯ ॥ ಹಾಗೆಯೇ ಋದ್ಧಿ ಸಿದ್ಧಿಗಳು ಪ್ರಸನ್ನವಾಗುವದರಿಂದ ಆ ಪುರುಷನಿಗೆ ಸಂತೋಷವಿಲ್ಲ. ಮತ್ತು ಪ್ರಸನ್ನವಾಗದಿದ್ದರೆ ಅಸಂತುಷ್ಟಿಯಿಲ್ಲ. ॥ ೬೦ ॥ ಹೀಗೆ ನೋಡು— ಸೂರ್ಯನ ಮನೆಯಲ್ಲಿ ದೀವಿಗೆಯನ್ನು ಹಚ್ಚಿದರೇ ಪ್ರಕಾಶವುಂಟಾಗುವದೇ ? ಹಚ್ಚದಿದ್ದರೆ ಅವನಿಗೆ ಕತ್ತಲೆಯಲ್ಲಿ ಕುಳ್ಳಿರಬೇಕಾಗುವದೇ ಹೇಗೆ ? ॥ ೬೧ ॥ ಹೀಗೆ ನೋಡಲು ಆ ಪುರುಷನ ಮನೆಯಲ್ಲಿ ಋದ್ಧಿಸಿದ್ಧಿಗಳು ಬಂದರೇನು ? ಬಾರದಿದ್ದರೇನು ? ಅವುಗಳ ಸ್ಮರಣೆಸಹ ಅವನಿಗಿರುವದಿಲ್ಲ. ಕಾರಣ ಅವನ ಅಂತಃಕರಣವು ಪರಮಾತ್ಮನಾದ ಶ್ರೀಹರಿಯ ಎಡೆಯಲ್ಲಿ ರಮಿಸುತಲಿರುತ್ತದೆ. ॥ ೬೨ ॥ ಯಾವನು ತನ್ನ ಮನೆಯ ಸೌಂದರ್ಯದ ಮುಂದೆ ಇಂದ್ರಭುವನವೂ ಕೂಡ ತುಚ್ಛನೆಂದು ತಿಳಿಯುವನೋ ಅವನಿಗೆ ಭಿಲ್ಲರ ಗುಡಸಲಿನಿಂದ ಹೇಗೆ ಸಮಾಧಾನ ವಾಗುವದು ? ॥ ೬೩ ॥ ಯಾವನು ಅಮೃತಕ್ಕೆ ಹೆಸರಿಡುತ್ತಾನೋ ಅವನು ಗಂಜಿಯನ್ನು ಕುಡಿಯುವ ಬಗೆ ಹೇಗೆ ? ಹೀಗೆ ಆತ್ಮಾನಂದದಿಂದ ತೃಪ್ತನಾದ ಪುರುಷನು ಕ್ಷುದ್ರವಾದ ಋದ್ಧಿ ಸಿದ್ಧಿಗಳ ಉಪಭೋಗವನ್ನು ತೆಗೆದುಕೊಳ್ಳುವನೇ ? ॥ ೬೪ ॥ ಅರ್ಜುನಾ, ಇವೆಂತಹ ಆಶ್ಚರ್ಯವೆಂಬುದನ್ನು ಪರೀಕ್ಷಿಸು—ಯಾವ ಪುರುಷ ನಿಗೆ ಸ್ವರ್ಗಸುಖದಂತಹ ಭೋಗದ ಪರಿವೆ ಇರುವದಿಲ್ಲವೋ ಅವನಿಗೆ ಕ್ಷುದ್ರವಾದ ಋದ್ಧಿ ಸಿದ್ಧಿಗಳ ಪಾಡೇನು? ಹೀಗೆ ಇರಲೂ ಅವರಿಗೆ ಋದ್ಧಿ ಸಿದ್ಧಿಗಳ ಆವಶ್ಯಕತೆ ಯಿರುವದೆಂದು ಅನ್ನುತ್ತಾರೆ. ಇವೆಂತಹ ಆಶ್ಚರ್ಯವು ! ॥ ೬೫ ॥

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸಶಾಂತಿಮಧಿಗಚ್ಛತಿ ॥ ೭೧ ॥**

**[ ವಿಹಾಯೇತಿ ]** ಐಸಾ ಆತ್ಮಬೋಧೇ ತೋಷಲಾ । ಜೋ ಪರಮಾನಂದೇ ಪೋಖಲಾ । ತೋಚಿ ಸ್ಥಿರ ಪ್ರಜ್ಞ ಭಲಾ । ವೋಳಖ ತೂ ॥ ೬೬ ॥ ತೋ ಅಹಂಕಾರಾತೇ ದವಡುನೀ । ಸಕಳ ಕಾಮ ಸಾಂಡುನೀ । ವಿಚರೇ ವಿಶ್ವ ಹೋಉನೀ । ವಿಶ್ವಾಮಾಜೀ ॥ ೬೭ ॥

**ಅರ್ಥ—** ಹೀಗೆ ಆತ್ಮಬೋಧೆಯಿಂದ ಸಂತೋಷಹೊಂದಿ ಪರಮಾನಂದದಲ್ಲಿ ಮಗ್ನನಾದವನೇ ನಿಜವಾದ ಸ್ಥಿರಬುದ್ಧಿಯುಳ್ಳವನು ಅಥವಾ ಸ್ಥಿತಪ್ರಜ್ಞನು. ॥ ೬೬ ॥ ಅವನು ಅಹಂಕಾರವನ್ನು ದಂಡಿಸಿ (ಬಿಟ್ಟುಕೊಟ್ಟು) ಸರ್ವ ವಿಷಯ ಸುಖೋಪಭೋಗವನ್ನು ತ್ಯಜಿಸಿ ಜಗದಾಕಾರವಾಗಿ ಜಗತ್ತಿನಲ್ಲಿ ಸಂಚಾರ ಮಾಡುತ್ತಾನೆ. ॥ ೬೭ ॥

**ಏಷಾಬ್ರಾಹ್ಮೀ ಸ್ಥಿತಿಃ ಪಾರ್ಥನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಪಿಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥**

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ
ಶ್ರೀಕೃಷ್ಣಾರ್ಜುನಸಂವಾದೇ ಸಾಂಖ್ಯಯೋಗೋ ನಾಮ ದ್ವಿತಿಯೋಽಧ್ಯಾಯಃ ॥೨॥

**[ ಏಷೇತಿ ]** ಹೇ ಬ್ರಹ್ಮಸ್ಥಿತಿ ನಿಃಸೀಮ । ಜೇ ಅನುಭವಿತೀ ನಿಷ್ಕಾಮ । ತೆ ಪಾವಲೇ ಪರಬ್ರಹ್ಮ । ಅನಾಯಾಸೇ ॥ ೬೮ ॥ ಜೇ ಚಿದ್ರೂಪೀ ಮಿಳತಾಂ । ದೇಹಾಂತೀಚೀ ವ್ಯಾಕುಳತಾ । ಆಡ ಠಾಕೋ ನ ಸಕೇ ಚಿತ್ತಾ । ಪ್ರಾಜ್ಞಾ ಜಯಾ ॥ ೬೯ ॥ ತೇಚಿ ಹೇ ಸ್ಥಿತಿ । ಸ್ವಮುಖೆ ಶ್ರೀಪತಿ । ಸಾಂಗತ ಅರ್ಜುನಾಪ್ರತಿ । ಸಂಜಯೋ ಮ್ಹಣೇ ॥ ೩೭೦ ॥ ಐಸೇ ಕೃಷ್ಣವಾಕ್ಯ ಐಕಿಲೇ । ತೇಥ ಅರ್ಜುನೇ ಮನೀ ಮ್ಹಣಿತಲೇ । ಆತಾ ಆಮುಚಿಯಾ ಕಾಜಾ ಆಲೇ । ಉಪಪತ್ತೀ ಇಯಾ ॥ ೭೧॥ ಜೇ ಕರ್ಮ ಜಾತ ಆಘವೇ । ಏಥ ನಿರಾಕಾರಿಲೇ ದೇವೇ । ತರೀ ಪಾರುಷಲೇ ಮ್ಯಾ ಝುಂಝಾವೇ । ಮ್ಹಣಊನಿಯಾ ॥ ೭೨ ॥ ಐಸಾ ಶ್ರೀ ಅಚ್ಯುತಾಚಿಯಾ ಬೋಲಾ । ಚಿತ್ತೀ ಧನುರ್ಧರ ಉವಾಯಿಲಾ । ಆತಾ ಪ್ರಶ್ನ ಕರೀಲ ಭಲಾ । ಆಶಂಕೋನಿ ॥ ೭೩ ॥ ತೋ ಪ್ರಸಂಗ ಅಸೇ ನಾಗರ । ಜೋ ಸಕಳ ಧರ್ಮಾಸಿ ಆಗರ । ಕೀ ವಿವೇಕಾಮೃತ ಸಾಗರ । ಪ್ರಾಂತಹೀನ ॥ ೭೪ ॥ ಜೋ ಆಪಣ ಸರ್ವಜ್ಞ ನಾಥ । ನಿರೂಪಿತಾ ಹೋಈಲ ಶ್ರೀ ಅನಂತ । ಜ್ಞಾನದೇವ ಸಾಂಗೇಲ ಮಾತ । ನಿವೃತ್ತಿದಾಸ ॥೩೭೫॥

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ದ್ವಿತಿಯೋಽಧ್ಯಾಯಃ ॥ ೨ ॥ ಶ್ಲೋಕ ೭೨ ; ಓವೀ ೩೭೫.

**ಅರ್ಥ**— ಇಂಥ ನಿಸ್ಸೀಮ ಅಂದರೆ ಅಪರ್ಯಾದಿತವಾದ ಬ್ರಹ್ಮ ಸ್ಥಿತಿಯಲ್ಲಿರುವ ನಿಷ್ಕಾಮ ಪುರುಷನು ಅನುಭವ ತೆಗೆದುಕೊಳ್ಳುವದರಿಂದ ಅವನು ಅನಾಯಾಸವಾಗಿ ಪರಬ್ರಹ್ಮನಲ್ಲಿ ಬೆರೆಯುತ್ತಾನೆ. ॥ ೬೮ ॥ ಜ್ಞಾನ ಸ್ವರೂಪನಾದ ಭಗವಾನ್ ಶ್ರೀ ಹರಿಯನ್ನು ಕೂಡಿಕೊಂಡ ಮೇಲೆ ಬ್ರಹ್ಮಸ್ಥಿತಿಯಿಂದ ದೇಹಾಂತ್ಯದಲ್ಲಿ ಆಗುವ ಕಷ್ಟವು ಅವರ ಮನಸ್ಸಿನಲ್ಲಿ ಕೂಡ ಬರುವದಿಲ್ಲ ॥ ೬೯ ॥ ಸಂಜಯನು ಧೃತರಾಷ್ಟ್ರ ರಾಜನಿಗೆ ಅನ್ನುತ್ತಾನೆ— ಅದೇ ಈ ಸ್ಥಿತಿಯ ಸ್ವರೂಪವನ್ನು ಶ್ರೀಕೃಷ್ಣನು ಸ್ವತಃ ಅರ್ಜುನನಿಗೆ ಹೇಳಿದನು. ॥ ೩೭೦ ॥ ಹೀಗೆ ಶ್ರೀ ಕೃಷ್ಣನ ಭಾಷಣವನ್ನು ಕೇಳಿದಮೇಲೆ ಅರ್ಜುನನು ತನ್ನ ಮನಸ್ಸಿನಲ್ಲಿ ಅಂದದ್ದೇನಂದರೆ- ಈ ಯುಕ್ತಿಯು ಇನ್ನುಮೇಲೆ ನಮಗೆ ಒಳ್ಳೇ ಉಪಯೋಗವಾಯಿತು. ॥ ೭೧ ॥ ಸರ್ವ ಕರ್ಮಸಮುದಾಯವನ್ನೂ ಈ ಸ್ಥಳದಲ್ಲಿ ನಿಷೇಧ ಮಾಡಿದನೇನೋ ಸರಿ; ಆದರೆ ನಾನು ಯುದ್ಧ ಮಾಡಬೇಕೆನ್ನುವ ವಿಷಯವೇ ಬೇರೆ ಉಳಿದು ಹೋಯಿತಲ್ಲ ! ॥ ೭೨ ॥ ಈ ಪ್ರಕಾರ ಶ್ರೀ ಕೃಷ್ಣನ ಭಾಷಣವನ್ನು ಕೇಳಿ ಅರ್ಜುನನು ತನ್ನ ಮನಸ್ಸಿನಲ್ಲಿ ಬಹಳೇ ಹರ್ಷಿತನಾದನು. ಆ ಮೇಲೆ ಅವನು ಸಂಶಯವನ್ನು ತೆಗೆದು ಮುಂದೆ ಗಹನವಾದ ( ಆಶ್ಚರ್ಯಕರವಾದ ) ಪ್ರಶ್ನೆಯನ್ನು ಮಾಡುವನು. ॥ ೭೩ ॥ ಆ ಸಂವಾದವು ಬಹಳೇ ಸುರಸವಾಗಿದ್ದು ಸರ್ವಧರ್ಮದ ಉತ್ಪತ್ತಿ ಸ್ಥಾನವೂ ಅರ್ಥಾತ್ ನಿರವಧಿಯಾದ ವಿಚಾರಾಮೃತದ ಸಮುದ್ರವೇ ಆಗಿರುವದು. ॥ ೭೪ ॥ ಆ ಸಂವಾದದ ವ್ಯಾಖ್ಯಾನವನ್ನು ಜಗದೀಶ್ವರನಾದ ಶ್ರೀ ಕೃಷ್ಣ ಪರಮಾತ್ಮನು ಸ್ವತಃ ಮಾಡುವನು. ಎಂಬುದಾಗಿ ಶ್ರೀ ನಿವೃತ್ತಿ ದಾಸನಾದ ಜ್ಞಾನದೇವನು ಹೇಳುವನು. ॥ ೩೭೫ ॥

**ಶ್ರೀಮದ್ಭಗವದ್ಗೀತೆಯ ಮತ್ತು ಜ್ಞಾನೇಶ್ವರಿಯ ಸರಲ, ಸುಲಭ,**
**ಕನ್ನಡ ಭಾಷಾಂತರದ ಎರಡನೆಯ ಅಧ್ಯಾಯವು**

## ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**

# ಜ್ಞಾನೇಶ್ವರಿ

## ಮೂರನೆಯ ಅಧ್ಯಾಯವು

**ಅರ್ಜುನ ಉವಾಚ—**

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥**

[ **ಜ್ಯಾಯಸೀತಿ** ] ಮಗ ಆಇಕಾ ಅರ್ಜುನೇ ಮ್ಹಣಿತಲೇ । ದೇವಾ ತುಮ್ಹಿ ಜೇವಾಕ್ಯ ಬೋಲಿಲೇ । ತೇ ಮ್ಯಾನಿಕೇ ಪರಿಸಿಲೇ । ಕೃಪಾನಿಧಿ ॥ ೧ ॥ ತೇಥ ಕರ್ಮ ಆಣಿಕರ್ತಾ । ಉರೇಚಿನಾ ಪಾಹತಾ । ಐಸೇ ಮತ ತುಝೇ ಶ್ರೀ ಅನಂತಾ । ನಿಶ್ಚಿತ ಜರೀ ॥ ೨ ॥ ತರೀ ಮಾತೇ ಕೇವೀ ಶ್ರೀಹರೀ । ಮ್ಹಣಸೀ ಪಾರ್ಥಾ ಸಂಗ್ರಾಮು ಕರೀ । ಇಯೇ ಲಾಜಸೀನಾ ಮಹಾಘೋರೀ । ಕರ್ಮೀ ಸುತಾ ॥ ೩ ॥ ಹಾ ಗಾ ಕರ್ಮ ತೂಚಿ ಅಶೇಷ । ನಿರಾಕರಿಸೀ ನಿಃಶೇಷ । ತರೀ ಮಜಕರವೀ ಹೇ ಹಿಂಸಕ । ಕಾ ಕರಿವಿಸೀ ॥ ೪ ॥ ತರೀ ಹೇಚಿ ವಿಚಾರೀ ಶ್ರೀಹೃಷೀಕೇಶಾ । ತೂ ಮಾನುನೇದಸಿ ಕರ್ಮಲೇಶಾ । ಆಣಿ ಯೇಸಣೀ ಹೇ ಹಿಂಸಾ । ಕರವೀತ ಆಹಾಸೀ ॥ ೫ ॥

**ಅರ್ಥ**— ಆ ಮೇಲೆ ಅರ್ಜುನನು ಅನ್ನುತ್ತಾನೆ- ದೇವಾ, ನೀವು ಯಾವ ಮಾತನ್ನು ಆಡಿದಿರೋ ಅದನ್ನು ಲಕ್ಷಪೂರ್ವಕವಾಗಿ ಕೇಳಿದೆನು. ॥ ೧ ॥ ವಿಚಾರಮಾಡಿ ನೋಡಿದರೆ ಆತ್ಮಸ್ವರೂಪದಲ್ಲಿ ಕರ್ಮ ಮತ್ತು ಕರ್ತಾ ಇವು ಉಳಿಯುವದೇ ಇಲ್ಲ. ಶ್ರೀ ಅನಂತಾ, ಇದೇ ನಿನ್ನ ನಿಶ್ಚಯವಾದ ಅಭಿಪ್ರಾಯವು ಇದ್ದರೆ. ॥ ೨ ॥ ಶ್ರೀ ಕೃಷ್ಣಾ ನೀನು ನನಗೆ "ಪಾರ್ಥಾ, ಯುದ್ಧಮಾಡು" ಎಂದು ಏಕೆ ಹೇಳುತ್ತಿರುವಿ? ಈ ಭಯಂಕರವಾದ ಕರ್ಮದಲ್ಲಿ ನನ್ನನ್ನು ಏಕೆ ವ್ಯರ್ಥವಾಗಿ ದೂಡುತ್ತಿರುವಿರಿ? ನಿಮಗೆ ಈ ವಿಷಯವಾಗಿ ಸ್ವಲ್ಪಾದರೂ ಸಂಕೋಚವು ಹೇಗೆ ಉತ್ಪನ್ನವಾಗುವದಿಲ್ಲ. ॥ ೩ ॥ ಇ ಸರ್ವಕರ್ಮಗಳನ್ನು ನೀವು ನಿಷೇಧಿಸುತ್ತಿರುವಿರಿ. ಅಂದಬಳಿಕ ನನ್ನ ಕಡೆಯಿಂದ ಇಂಥ ಹಿಂಸಾತ್ಮಕವಾದ ಘೋರ ಪಾಪಕರ್ಮವನ್ನೇಕೆ ಮಾಡಿಸುತ್ತಿರುವಿರಿ? ॥ ೪ ॥ ಆದರೆ ಹೃಷಿಕೇಶಾ, ಇದರ ವಿಚಾರವನ್ನು ನೀವೇ ಮಾಡಿರಿ. ನೀವು ಕರ್ಮಮಾರ್ಗಕ್ಕೆ ಇಷ್ಟು ಮಾನವನ್ನು ಕೊಟ್ಟು ನನ್ನ ಕೈಯಿಂದ ಈ ಹಿಂಸಾರೂಪವಾದ ಪಾತಕವನ್ನೇಕೆ ಮಾಡಿಸುತ್ತಿರುವಿರಿ. ॥ ೫ ॥

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ॥**
**ತದೇಕಂ ವದನಿಶ್ಚಿತ್ಯಯೇನ ಶ್ರೇಯೋಽಹಮಾಪ್ನುಯಾಂ ॥ ೨ ॥**

[ **ವ್ಯಾಮಿಶ್ರೇಣೇತಿ** ] ದೇವಾ ತುವಾಂಚಿ ಐಸೇ ಬೋಲಾವೇ । ತರೀ ಆಮ್ಹೀ ನೇಣತೀ ಕಾಯಕರಾವೇ । ಆತಾ ಸಂಪಲೇ ಮ್ಹಣೋ ಪಾ ಆಘವೇ । ವಿವೇಕಾಚೇ ॥ ೬ ॥ ಹಾ ಗಾ ಉಪದೇಶ ಜರೀ ಐಸಾ । ತರೀ ಅಪಭ್ರಂಶ ತೋ ಕೈಸಾ । ಆತಾಪುರಲಾ ಆಮ್ಹಾ ಧಿಂವಸಾ । ಆತ್ಮಬೋಧಾಚಾ ॥ ೭ ॥ ವೈದ್ಯಪಥ್ಯ ವಾರುನಿ ಜಾಯೇ । ಮಗ ಜರೀ ಆಪಣಚಿ ವಿಷಸುಯೇ । ತರೀ ರೋಗಿಯಾ ಕೈಸೇನಿ ಜಿಯೇ । ಸಾಂಗೇ ಮಜ ॥ ೮ ॥ ಜೈಸೇ ಆಂಧಳೇ ಸುಇಜೇ ಅವ್ಹಾಂಟಾ । ಕಾ, ಮಾಜವಣ ದೀಜೇ ಮರ್ಕಟಾ । ತೈಸಾ ಉಪದೇಶ ಹಾ, ಗೋಮಟಾ ಪೋಢವಲಾ ಆಮ್ಹಾ ॥ ೯ ॥ ಮೀ ಆಧೀಚಿ ಕಾಹೀ ನೇಣೇ । ವರೀ ಕವಳಿಲೋ ಮೋಹೇ ಯೇಣೇ । ಶ್ರೀಕೃಷ್ಣಾ ವಿವೇಕ ಯಾ ಕಾರಣೇ । ಪುಸಿಲಾ

ತುಜ ॥ ೧೦ ॥ ತವ ತುಝೀ ಏಕೇಕ ನವಾ ಈ । ಏಥ ಉಪದೇಶಾ ಮಾಜೀ ಗೋವಾ ಈ । ತರೀ ಅನುಸರಲಿಯಾ ಕಾಈ । ಐಸೇ ಕೀಜೇ ॥ ೧೧ ॥ ಆಮ್ಹೀ ತನುಮನ ಜೀವೇ । ತುಝಿಯಾ ಬೋಲಾವೋತಂಗಾವೇ । ಆಣಿ ತುವಾಂಚಿ ಐಸೇ ಕರಾವೇ । ತರೀ ಸರಲೇ ಮ್ಹಣೇ ॥ ೧೨ ॥ ಆತಾ ಐಸಿಯಾ ಪರೀ ಬೋಧಿಸೀ । ತರೀ ನಿಕೇ ಆಮ್ಹಾ ಕರಿಸೀ । ಏಥ ಜ್ಞಾನಾಚೀ ಆಸ ಕಾಯಸೀ । ಅರ್ಜುನ ಮ್ಹಣೇ ॥ ೧೩ ॥ ತರೀ ಯೇ ಜಾಣಿವೇಚೇ ಕೀರ ಸರಲೇ । ಪರೀ ಆಣೀಕ ಏಕ ಅಸೇ ಜಾಹಲೇ । ಜೇಥಿತೇ ಡಹುಳಲೇ । ಮಾನಸ ಮಾಝೇ ॥ ೧೪ ॥ ತೇವೀಚಿ ಶ್ರೀಕೃಷ್ಣಾ ಹೇ ತುಝೇ । ಚರಿತ್ರ ಕಾಹೀ ನೇಣಿಜೇ । ಜರೀ ಚಿತ್ತ ಪಾಹಸೀ ಮಾಝೇ । ಯೇಣೇ ಮಿಷೆ ॥ ೧೫ ॥ ನಾತರೀ ಝಕವೀತ ಆಹಾಸೀ ಮಾತೇ । ಕೀ ತತ್ವಚಿ ಕಥಿಸೀ ಧ್ವನಿತೇ । ಹೇ ಅವಗಮಿತಾನಿರುತೇ । ಜಾಣವೇನಾ ॥ ೧೬ ॥ ಮ್ಹಣೋನಿ ಆಇಕೇ ದೇವಾ । ಹಾ ಭಾವಾರ್ಥ ಆತಾ ನ ಬೋಲಾವಾ । ಮಜ ವಿವೇಕ ಸಾಂಗಾವಾ । ಮರ್‍ಹಾಟಾ ಜೀ ॥ ೧೭ ॥ ಮೀ ಅತ್ಯಂತ ಜಡ ಅಸೇ । ಪರೀ ಐಸಾಹೀ ನಿಕೇ ಪರಿಯೇಸೇ । ಶ್ರೀಕೃಷ್ಣಾ ಬೋಲಾವೇ ತುವಾ ತೈಸೇ । ಏಕನಿಷ್ಠ ॥ ೧೮ ॥ ದೇಖೇ ರೋಗಾತೇ ಜಿಣಾವೇ । ಔಷಧ ತರೀ ದೇಯಾವೇ । ಪರೀ ತೇ ಅತಿರುಚ್ಯ ವ್ಹಾವೇ । ಮಧುರ ಜೈಸೇ ॥ ೧೯ ॥ ತೈಸೇ ಸಕಳಾರ್ಥ ಭರಿತ । ತತ್ವ ಸಾಂಗಾವೇ ಉಚಿತ । ಪರೀ ಬೋಧೇ ಮಾಝೇ ಚಿತ್ತ । ಜಯಾಪರೀ ॥ ೨೦ ॥ ದೇವಾ ತುಜ ಐಸಾ ನಿಜಗುರೂ । ಆಜಿ ಆರ್ತಿ ಧಣೀಕಾ, ನ, ಕರೂ । ಏಥಭೀಡ ಕವಣಾಚೀ ಧರೂ । ತೂ ಮಾಯ ಆಮುಚೀ ॥ ೨೧ ॥ ಹಾ, ಗಾ ಕಾಮಧೇನೂ ಚೇ ದುಭತೇ । ದೈವೇ ಜಾಹಲೇ ಆಪೈತೇ । ತರೀ ಕಾಮನೇಚೀ ಕಾ, ತೇಥೇ । ವಾಣಿ ಕೀಜೇ ॥ ೨೨ ॥ ಜರೀ ಚಿಂತಾ ಮಣೀ ಹಾತಾಚಢೇ । ತರೀ ವಾಂಛೇಚೇ ಕವಣ ಸಾಂಕಡೇ । ಕಾ ಆಪುಲೇನಿ ಸುರವಾಡೇ । ಇಚ್ಛಾವೇ ನಾ ॥ ೨೩ ॥ ದೇಖೇ ಅಮೃತ ಸಿಂಧೂತೇ ಠಾಕಾವೇ । ಮಗ ತಾಹಾನಾಚಿ ಜರೀ ಫುಟಾವೇ । ತರೀ ಸಾಯಾಸ ಕಾ ಕರಾವೇ । ಮಾಗೀಲತೇ ॥ ೨೪ ॥ ತೈಸಾ ಜನ್ಮಾಂತರೀ ಬಹುತೀ । ಉಪಾಸಿತಾ ಶ್ರೀ ಕಮಳಾಪತೀ । ತೋ ತೂ ದೈವೇ ಆಜೀ ಹಾತೀ । ಜಾಹಲಾಸೀ ಜರೀ ॥ ೨೫ ॥ ತರೀ ಆಪುಲೇಯಾ ಸವೇಸಾ । ಕಾ, ನ ಮಾಗಾವಾಸಿ ಪರೇಶಾ । ದೇವಾ ಸುಕಾಳಹಾ ಮಾನಸಾ । ಪಾಹಲಾ ಅಸೇ ॥ ೨೬ ॥ ದೇಖಿ ಸಕಳಾರ್ಥೀಚೇ ಜಿಯಾಲೇ । ಆಜೇ ಪುಣ್ಯ ಯಶಾಸಿ ಆಲೇ । ಹೇ ಮನೋರಥ ಜಾಹಾಲೇ । ವಿಜಯೀ ಮಾಝೇ ॥ ೨೭ ॥ ಜೀಜೀ ಪರಮ ಮಂಗಳ ಧಾಮಾ । ಸಕಳ ದೇವ ದೇವೋತ್ತಮಾ । ತೂ ಸ್ವಾಧೀನ ಆಜೀ ಆಮ್ಹಾ । ಮ್ಹಣವೂನಿಯಾ ॥ ೨೮ ॥ ಜೈಸೇ ಮಾತೇಚ್ಯಾಠಾಯೀ । ಅಪತ್ಯಾ ಅನವಸರ ನಾಹೀ । ಸ್ತನ್ಯಾ ಲಾಗೂನಿ ಪಾಹೀ । ಜಿಯಾಪರೀ ॥ ೨೯ ॥ ತೈಸೆದೇವಾ ತೂತೇ । ಪುಸಿ ಜತಸೇ ಆವಡೇ ತೇ । ಆಪುಲೇನಿ ಆರ್ತೆ । ಕೃಪಾನಿಧಿ ॥ ೩೦ ॥ ತರೀ ಪಾರತ್ರಿಕೀ ಹಿತ । ಆಣಿ ಆಚರಿತಾ ತರೀ ಉಚಿತ । ತೇ ಸಾಂಗೇ ಏಕ ನಿಶ್ಚಿತ । ಪಾರ್ಥಮ್ಹಣೇ ॥ ೩೧ ॥

**ಅರ್ಥ**— ದೇವಾ, ನೀವೇ ಹೀಗೆ ಮಾತನಾಡಲುದ್ಯುಕ್ತರಾದರೆ ಅಜ್ಞಜನರಾದ ನಾವೇನು ಮಾಡಬೇಕು ? ಈಗ ಎಲ್ಲ ವಿವೇಕವಿಚಾರವೇ ಮುಗಿದುಹೋಗಿದೆಯೆಂದು ತಿಳಿಯಬೇಕು. ॥ ೬ ॥ ಅಜ್ಞಾನವನ್ನು ಹೋಗಲಾಡಿಸುವದರ ದೆಸೆಯಿಂದ ಇಂಥ ಸಂದಿಗ್ಧ ಉಪದೇಶವನ್ನು ಮಾಡಿದರೆ ಅದರಕಿಂತಲೂ ಹೆಚ್ಚಿನ ಭ್ರಮೆಯಾದರೂ ಯಾವುದು ? ಎಂಬುದನ್ನು ನೀನೇ ಹೇಳು ನಿಮ್ಮ ಕಡೆಯಿಂದ ಆತ್ಮಬೋಧೆಯು ಜ್ಞಾನವನ್ನು ಪ್ರಾಪ್ತಮಾಡಿಕೊಳ್ಳಬೇಕೆಂಬ ನನ್ನ ಮನೋಬಯಕೆಯು ಈ ಉಪದೇಶದಿಂದ ಪೂರ್ಣವಾಯಿತೇ ? ॥ ೭ ॥ ವೈದ್ಯನು ರೋಗಿಯ ಪ್ರಕೃತಿಯನ್ನು ಪರೀಕ್ಷಿಸಿ ಪಥ್ಯವನ್ನು ಹೇಳಿಹೋದ ಮೇಲೆ ತಾನಾಗಿಯೇ ಔಷಧದಲ್ಲಿ ವಿಷವನ್ನು ಹಾಕಿಹೋದರೆ, ರೋಗಿಯು ಬದುಕುವ ಬಗೆ ಹೇಗೆ ? ॥ ೮ ॥ ಕುರುಡನಿಗೆ ಅಡ್ಡಹಾದಿ ಹಿಡಿಸಬೇಕು ಇಲ್ಲವೇ ಮರ್ಕಟಕ್ಕೆ ಸುರಾಪಾನ ಮಾಡಿಸಬೇಕು ಇದ

ರಂತೆಯೇ ನಿಮ್ಮ ಉತ್ತಮವಾದ ಉಪದೇಶವು ನಮಗೆ ಚನ್ನಾಗಿ ಫಲದ್ರೂಪವಾಯಿತು !? ॥ ೯ ॥ ಮೊದಲಿಗೇ ನನಗೆ ಏನೂ ತಿಳಿಯುವದಿಲ್ಲ. ಅದರಲ್ಲಿ ಈಗ ನಾನು ಮೋಹದಿಂದ ಭ್ರಮಿಷ್ಟನಾಗಿದ್ದೇನೆ. ಆದ್ದರಿಂದ ಶ್ರೀಕೃಷ್ಣಾ, ನಿನಗೆ ವಿವೇಕದ ಸಲಹೆಯನ್ನು ಕೇಳಿದೆನು. ॥ ೧೦ ॥ ಆದರೆ ನಿಮ್ಮ ಮಾತಿನಲ್ಲಿ ಒಂದೊಂದು ಚಮತ್ಕಾರವೇ ! ನಿಮ್ಮ ಉಪದೇಶದಲ್ಲಿಯೂ ಒಂದುತರಹದ ಗೊಂದಲವೇ (!) ಕಂಡುಬರುತ್ತದೆ. ನಿನ್ನನ್ನೇ ಆಶ್ರಯಿಸಿ ನಿನಗೆ ಶರಣುಬಂದ ಸದ್ಭಕ್ತರಿಗೆ ನೀನು ಹೀಗೆ ಮಾಡುವದು ಸರಿಯೇ ? ॥ ೧೧ ॥ ನಾವು ಕಾಯಾ-ವಾಚಾ-ಮನಸಿಂದ ನಿಮ್ಮ ಮಾತಿನ ಮೇಲೆ ವಿಶ್ವಾಸವನ್ನಿಡಬೇಕು; ನೀವು ಮಾತ್ರ ಹೀಗೆ ವರ್ತಿಸಬೇಕು ! ಹೀಗೆ ಮಾಡಿದರೆ ನಮ್ಮ ಅವಸ್ಥೆಯೇ ಮುಗಿದಂತಾಯಿತು ! ॥ ೧೨ ॥ ಅರ್ಜುನನು ಅನ್ನುತ್ತಾನೆ— ಆದರೆ, ಈಗ ಇಂಥ ಪ್ರಕಾರದ ಬೋಧವನ್ನು ಮಾಡಹತ್ತಿದರೆ ನಾವು ನಿಶ್ಚಯವಾಗಿ ತೊಡಕಿನಲ್ಲಿ ಶಿಲುಕುತ್ತೇವೆ. ಇದರಿಂದ ನಮಗೆ ಜ್ಞಾನಪ್ರಾಪ್ತಿಯ ಆಶೆಯಾದರೂ ಹೇಗೆ ಹುಟ್ಟಬೇಕು ॥ ೧೩ ॥ ಇನ್ನು ಇಲ್ಲಿ ಜ್ಞಾನದ ಆಶೆಯಂತೂ ಇಲ್ಲದಂತಾಯಿತು. ಇಷ್ಟೇ ಅಲ್ಲ ನನ್ನ ಮನಸ್ಸಿನಲ್ಲಿ ಸ್ಥಿರತೆಯೇ ಇಲ್ಲದಂತಾಗಿ ಮತ್ತೆ ಮತ್ತೆ ತೊಡಕಿನಲ್ಲಿಯೇ ಬೀಳುತ್ತಿದ್ದೇನೆ. ॥ ೧೪ ॥ ಅದೇ ಪ್ರಕಾರ ಶ್ರೀಕೃಷ್ಣಾ, ನಿನ್ನ ಲೀಲೆಯು ನಮಗೆ ತಿಳಿಯಲಸಾಧ್ಯವಾಗಿರುವದು. ಈ ಉಪದೇಶದ ನಿಮಿತ್ಯದಿಂದ ನನ್ನ ಮನಸನ್ನು ಪರೀಕ್ಷಿಸಬೇಕೆಂದಿರಬಹುದು. ಇದು ಯಾರಿಗೆ ತಿಳಿಯಬೇಕು ? ॥ ೧೫ ॥ ಇಲ್ಲವೇ ನನ್ನನ್ನು ವಂಚಿಸುತ್ತಿರಬಹುದು. ಅಥವಾ ಗೂಢಾರ್ಥದಿಂದ ಬ್ರಹ್ಮಸ್ವರೂಪವನ್ನು ಹೇಳುತ್ತಿರಬಹುದು. ವಿಚಾರಿಸಲು ಇದರಲ್ಲಿ ನಿಜವಾದದ್ದಾವುದೆಂಬುದೇ ನನಗೆ ತಿಳಿಯದಂತಾಗಿದೆ. ॥ ೧೬ ॥ ಆದುದರಿಂದ ದೇವಾ ಕೇಳು,— ಈ ಗೂಢಾರ್ಥವನ್ನು ನನಗೆ ಹೇಳದೇ ನಿಶ್ಚಿತವಾದ ನಿಮ್ಮ ವಿವೇಕದ ಮಾತು ಯಾವುದೆಂಬುದನ್ನು ನನಗೆ ಹೇಳಬೇಕು. ಆ ಮಾತು ಅವಿಚಾರೀ, ಅಜ್ಞಾನೀ, ಮೂರ್ಖನಿಗೂ ಸಹ ತಿಳಿಯುವಂತೆ ಸ್ಪಷ್ಟವಾಗಿ ಹೇಳಬೇಕು. ॥ ೧೭ ॥ ಶ್ರೀಕೃಷ್ಣಾ, ನಾನು ಅತಿ ಮಂದಬುದ್ಧಿಯುಳ್ಳವನಾಗಿದ್ದೇನೆ. ಕಾರಣ ಇಂಥ ಮಂದಮತಿಗೂ ಕೂಡ ತಿಳಿಯುವಂತೆ ಒಂದೇ ನಿಶ್ಚಯಾತ್ಮಕ ಉಪದೇಶವನ್ನು ನನಗೆ ಮಾಡಬೇಕು. ॥ ೧೮ ॥ ಹೀಗೆ ನೋಡಿ, ಔಷಧ ತೆಗೆದುಕೊಂಡು ರೋಗನಿವಾರಣೆಯೂ ಆಗಬೇಕು, ಔಷಧವು ಮಧುರವೂ ರುಚಿಕರವೂ ಆಗಿರಬೇಕು. ॥ ೧೯ ॥ ಅದೇ ಪ್ರಕಾರ ಎಲ್ಲ ಅರ್ಥದಿಂದ ಪರಿಪೂರ್ಣವಾದದ್ದೂ, ಆಚರಣ ಮಾಡಲಿಕ್ಕೆ ಯೋಗ್ಯವಾದದ್ದೂ ಆದ ತತ್ವವನ್ನು ನನಗೆ ಉಪದೇಶಿಸಬೇಕು. ಆದರೆ ಯಾವ ರೀತಿಯಿಂದ ನನ್ನ ಮನಸ್ಸಿನಲ್ಲಿ ಸಂಶಯವು ಹೋಗಿ ಪೂರ್ಣಬೋಧವಾದೀತು, ಆ ರೀತಿಯಿಂದ ಉಪದೇಶಿಸು. ॥ ೨೦ । ದೇವಾ, ನಿಮ್ಮಂಥ ನಿಜವಾದ ಗುರುವು ನನಗೆ ದೊರಕಿರಲು ಇಂದು ನಾನು ನನ್ನ ಮನೋಬಯಕೆಯನ್ನು ಏಕೆ ಪೂರ್ಣಮಾಡಿಕೊಳ್ಳದಿರಲಿ ? ನನ್ನ ಮಾತೃಸ್ವರೂಪನಾದ ನೀನು ಇಲ್ಲಿರಲು ನಾನು ನಾಚಿಕೊಳ್ಳುವದಾದರೂ ಯಾರ ಸಲುವಾಗಿ ? ॥ ೨೧ ॥ ದೈವಯೋಗದಿಂದ ಕಾಮಧೇನುವು ಪ್ರಾಪ್ತವಾಗಿರಲು ತನ್ನ ಅಪೇಕ್ಷೆಯಾದದ್ದನ್ನು ಬೇಡಲು ಕಡಿಮೆಯಾಕೆ ಮಾಡಬೇಕು ? ॥ ೨೨ ॥ ಇಲ್ಲವೇ ಚಿಂತಾಮಣಿಯು ಹಸ್ತಗತವಾದ ಮೇಲೆ ಮನೋಬಯಕೆಯ ಪದಾರ್ಥವನ್ನು ತರಲು ಕಷ್ಟವನ್ನೇಕೆ ಪಡಬೇಕು ? ತನಗೆ ಅಪೇಕ್ಷೆಯಾದದ್ದೆಲ್ಲವನ್ನು ಬೇಡಬಾರದೇಕೆ ? ॥ ೨೩ ॥ ನೋಡಿರಿ— ಅಮೃತಸಿಂಧುವಿನ ದಂಡೆಯಲ್ಲಿ ನಿಂತು ಅದನ್ನು ಸೇವಿಸದೇ ನೀರಡಿಕೆಯಿಂದ ಬಳಲಹತ್ತಿದರೆ ಅಲ್ಲಿಯ ವರೆಗೆ ಹೋಗುವ ಶ್ರಮವನ್ನಾದರೂ ಏಕೆ ವಹಿಸಬೇಕು. ॥ ೨೪ ॥ ಅದೇ ಪ್ರಕಾರ ಶ್ರೀಲಕ್ಷ್ಮೀಪತೇ, ಜನ್ಮಜನ್ಮಾಂತರದಲ್ಲಿ ನಿನ್ನ ಉಪಾಸನೆಯನ್ನು ಬಹಳರೀತಿಯಿಂದ ಮಾಡಿದ ಮೇಲೆ ದೈವಯೋಗದಿಂದ ನೀನು ನಮಗೆ ದೊರಕಿರುವಿ. ॥ ೨೫ ॥ ಅಂದ ಮೇಲೆ ಪರಮೇಶ್ವರಾ, ನಮ್ಮ ಇಚ್ಛೆಯಾದಂತೆ ನಮಗೆ ಬೇಕಾದುದೆಲ್ಲವನ್ನೂ ನಿನ್ನನ್ನೇಕೆ ಬೇಡಿಕೊಳ್ಳಬಾರದು ? ದೇವಾ, ಈಹೊತ್ತಿನ ದಿವಸ ಮನಸಿನಲ್ಲಿಯ ಅಪೇಕ್ಷೆಯು ಪೂರ್ಣವಾಗುವ ಭಾಗ್ಯವು ಉದಯವಾಗಿರುತ್ತದೆ. ॥ ೨೬ ॥ ಹೀಗೆ ನೋಡು ಈ ಹೊತ್ತೇ ನನ್ನ ಸಕಲ ಮನೋರಥವು ಪರಿಪೂರ್ಣವಾಗಿ ನನ್ನ ಪೂರ್ವಪುಣ್ಯ ಫಲದ್ರೂಪವಾದುದರಿಂದ ಸರ್ವಮನೋರಥಗಳೂ ಕೈಗೂಡಿರುವವು. ॥ ೨೭ ॥ ಕಾರಣ ಪರಮಕಲ್ಯಾಣದ ಜನ್ಮಸ್ಥಾನ, ಸಕಲ ದೇವತೆಗಳಲ್ಲಿ ಶ್ರೇಷ್ಠ ಸರ್ವೋತ್ತಮನಾದ ಶ್ರೀಕೃಷ್ಣಾ, ನೀನು ಈ ಹೊತ್ತಿನ ದಿವಸ ನಮ್ಮ ಅಧೀನನಾಗಿರುವಿ ॥ ೨೮ ॥

ತಾಯಿಯ ಸ್ತನಪಾನ ಮಾಡಲಿಕ್ಕೆ ಕೂಸಿಗೆ ಹೇಗೆ ಯೋಗ್ಯ ಮತ್ತು ಅಯೋಗ್ಯಕಾಲವೆಂಬ ತೊಂದರೆಯು ಇರುವದಿಲ್ಲವೋ, ॥ ೨೯ ॥ ಅದೇ ಪ್ರಕಾರ ದೇವಾ, ಕೃಪಾನಿಧೇ, ನನ್ನ ಇಚ್ಛೆಯು ಅನುಗುಣವಾಗಿ ಬೇಕಾದದ್ದನ್ನು ಕೇಳಿಕೊಳ್ಳುತ್ತೇನೆ. ॥ ೩೦ ॥ ದೇವಾ, ಇಹಲೋಕದಲ್ಲಿ ಆಚರಣಮಾಡಲಿಕ್ಕೆ ಯೋಗ್ಯ ಮತ್ತು ಪರಲೋಕದಲ್ಲಿ ಹಿತಕರವಾದ, ನಿಶ್ಚಿತವಾದ ಒಂದು ಮಾತನ್ನು ನನಗೆ ಹೇಳು. ॥ ೩೧ ॥

**ಶ್ರೀ ಭಗವಾನುವಾಚ—**

**ಲೋಕೇಽಸ್ಮಿನ್ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥ ೩ ॥**

[ **ಲೋಕೇಽಸ್ಮಿನ್ನಿತಿ** ] ಯಾ ಬೋಲಾ ಶ್ರೀ ಅಚ್ಯುತ । ಮ್ಹಣತ ಅಸೇ ವಿಸ್ಮಿತ । ಅರ್ಜುನಾ ಹಾ ಧ್ವನಿತ । ಅಭಿಪ್ರಾಯೋ ॥ ೩೨ ॥ ಜೇ ಬುದ್ಧಿಯೋಗ ಸಾಂಗತಾ । ಸಾಂಖ್ಯಮತ ಸಂಸ್ಥಾ । ಪ್ರಕಟಲೀ ಸ್ವಭಾವತಾ । ಪ್ರಸಂಗೇ ಆಮ್ಹೀ ॥ ೩೩ ॥ ತೋ ಉದ್ದೇಶ ತೂ ನೇಣಸೀಚಿ । ಮ್ಹಣೋನಿ ಶಿಣಲಾಸಿ ವಾಯಾಂಚಿ । ತರೀ ಆತಾ ಜಾಣೇ ಮೀಚಿ । ಉಕ್ತದೋನ್ಹೀ ॥ ೩೪ ॥ ಅವಧಾರೀ ವೀರಶ್ರೇಷ್ಠಾ । ಯೇ ಲೋಕೀ ಯಾ ದೋನೀ ನಿಷ್ಠಾ । ಮಜಚಿ ಪಾಸೂನಿ ಪ್ರಗಟಾ । ಅನಾದಿ ಸಿದ್ಧ ॥ ೩೫ ॥ ಏಕ ಜ್ಞಾನಯೋಗ ಮ್ಹಣಿಜೆ । ಜೋ ಸಾಂಖ್ಯೀ ಅನುಷ್ಠಿಜೇ । ಜೇಥ ಓಳಖೀಸವೇ ಪಾವಿಜೇ । ತದ್ರೂಪತಾ ॥ ೩೬ ॥ ಏಕ ಕರ್ಮಯೋಗ ಜಾಣ । ಜೇಥ ಸಾಧಕ ಜನ ನಿಪುಣ । ಹೋಊನಿಯಾ ನಿರ್ವಾಣ । ಪಾವತೀ ವೇಳೇ ॥ ೩೭ ॥ ಹೇ ಮಾರ್ಗ ತರೀ ದೋನೀ । ಪರೀ ಏಕವಟತೀ ನಿದಾನೀ । ಜೈಸೀ ಸಿದ್ಧ ಸಾಧ್ಯ ಭೋಜನೀ । ತೃಪ್ತಿ ಏಕ ॥ ೩೮ ॥ ಕಾ ಪೂರ್ವಾಪರ ಸರಿತಾ । ಭಿನ್ನ ದಿಸತೀ ವಾಹತಾ । ಮಗ ಸಿಂಧೂ ಮಿಳಣೀ ಐಕ್ಯ ತಾ । ಪಾವತೀ ಶೇಖೀ ॥ ೩೯ ॥ ತೈಸೀ ದೋನೀಹೀ ಮತೇ । ಸೂಚಿತೀ ಏಕಾ ಕಾರಣಾತೇ । ಪರೀ ಉಪಾಸ್ತಿತೇ ಯೋಗ್ಯತೇ । ಅಧೀನ ಅಸೇ ॥ ೪೦ ॥ ದೇಖೇ ಉತ್ಪ್ಲವನಾ ಸರಿಸಾ । ಪಕ್ಷೀ ಫಳಾಸೀ ಝೊಂಬೇ ಜೈಸಾ । ಸಾಂಗೇ ನರ ಕೇವೀ ತೈಸಾ । ಪಾವೇ ವೇಗಾ ॥ ೪೧ ॥ ತೋ ಹಳೂ ಹಳೂ ಢಾಳೇ ಢಾಳೇ । ಕೇತುಲೇನಿ ಏಕೇ ವೇಳೇ । ಮಾರ್ಗಾಚೇನಿ ಬಳೇ । ನಿಶ್ಚಿತ ಠಾಕೀ ॥ ೪೨ ॥ ತೈಸೇ ದೇಖ ಪಾ ವಿಹಂಗ ಮಮತೇ । ಆಧಿಷ್ಠೂನಿ ಜ್ಞಾನಾತೇ । ಸಾಂಖ್ಯ ಸದ್ಯ ಮೋಕ್ಷಾತೇ । ಆಕಳಿತೀ ॥ ೪೩ ॥ ಯೇರ ಯೋಗಿಯೇ ಕರ್ಮಾಧಾರೇ । ವಿಹಿತೇಚಿ ನಿಜಾಚಾರೇ । ಪೂರ್ಣತಾ ಅವಸರೇ । ಪಾವತೇ ಹೋತೀ ॥ ೪೪ ॥

**ಅರ್ಥ**-- ಈ ಮಾತನ್ನು ಕೇಳಿ ಶ್ರೀ ಅಚ್ಯುತನು ಆಶ್ಚರ್ಯಚಕಿತನಾಗಿ ಅನ್ನುತ್ತಾನೆ— ಅರ್ಜುನನೇ ನಿನಗೆ ಯಾವ ಮಾತು ಹೇಳಿದೆನು. ಅದು ಸಾಂಕೇತಿಕ ಗೂಢವಾದ ಅರ್ಥವು ಇದೆ. ॥ ೩೨ ॥ ಈಶ್ವರಾರ್ಪಣ ಕರ್ಮಮಾರ್ಗವನ್ನು ಹೇಳುವಾಗ ಪ್ರಸಂಗಾನುಸಾರವಾಗಿ ಯಾವ ಆತ್ಮಾನಾತ್ಮ ವಿಚಾರದ ಅರ್ಥಾತ್ ಜ್ಞಾನ ಯೋಗದ ಮಹಿಮೆಯನ್ನು ನಾವು ಹೇಳಿ ಬಿಟ್ಟೆವು. ॥ ೩೩ ॥ ನಮ್ಮ ಆ ಉದ್ದೇಶವು ನಿನಗೆ ತಿಳಿಯಲಿಲ್ಲ. ಆದ್ದರಿಂದ ವ್ಯರ್ಥವಾಗಿ ನಿನಗೆ ಕ್ಷೋಭೆಯುಂಟಾಯಿತು. ಆವರೆ ಇನ್ನಾದರೂ ಹೇಳುತ್ತೇನೆ ಕೇಳು—ಜ್ಞಾನ ಯೋಗ ಮತ್ತು ಕರ್ಮಯೋಗ ಈ ಎರಡೂ ಮಾರ್ಗಗಳು ಯೋಗ್ಯವಾದವುಗಳೆಂದು ನಾನೇ ಹೇಳಿದ್ದೇನೆ. । ೩೪ ಎಲೋ ವೀರ ಶ್ರೇಷ್ಠ, ಅರ್ಜುನನೇ ಕೇಳು, ಈ ಪೃಥ್ವಿಯಲ್ಲಿ ನಿಶ್ಚಿತವಾದ ಈ ಎರಡೂ ಮಾರ್ಗಗಳೂ ನನ್ನಿಂದಲೇ ಪೂರ್ವಪರಂಪರೆಯಿಂದ ಪ್ರಸಿದ್ಧ ಹೊಂದಿರುವವು ॥ ೩೫ ॥ ಜ್ಞಾನಯೋಗವೆಂದರೆ ಸಾಂಖ್ಯರು ಆಚರಣ ಮಾಡುತ್ತಾರೆ. ಆ ಜ್ಞಾನಯೋಗದಿಂದ ಬ್ರಹ್ಮಸ್ವರೂಪದ ಪರಿಚಯವಾದ ಕೂಡಲೇ ಅವರು ಮದ್ರೂಪ

ವನ್ನೇ ಹೊಂದುತ್ತಾರೆ ॥ ೩೬ ॥ ಒಂದು ಕರ್ಮಯೋಗವು ಅಲ್ಲಿ ಸಾಧಕರು (ಮುಮುಕ್ಷುಗಳು) ಕುಶಲರಾಗಿ ಕೆಲವು ಕಾಲದ ನಂತರ (ಅವಕಾಶದಿಂದ) ಮೋಕ್ಷವನ್ನು ಹೊಂದುತ್ತಾರೆ. ॥ ೩೭ ॥ ಈ ಮಾರ್ಗಗಳು ಎರಡು ಇದ್ದಾಗ್ಯಾದರೂ ಕಡೆಗೆ ಒಂದನ್ನೇ ಕೂಡುತ್ತವೆ. ಹೇಗೆಂದರೆ, ಸಿದ್ಧಪಡಿಸಿದ ಅನ್ನವನ್ನು ಭುಂಜಿಸಿದರೂ ಅಥವಾ ತಾನೇ ಕಷ್ಟಬಟ್ಟು ತಯಾರ ಮಾಡಿದ ಅನ್ನವನ್ನುಂಡರೂ, ತೃಪ್ತಿಯು ಮಾತ್ರ ಸಮಾನವಾಗಿರುವದು. ಅದರಂತೇ ಜ್ಞಾನ ಮತ್ತು ಕರ್ಮಯೋಗಗಳ ಕಡೆಯ ಪರಿಣಾಮವು ಒಂದೇ ಆಗಿರುವದು. ॥ ೩೮ ॥ ಅಥವಾ ಪೂರ್ವಪಶ್ಚಿಮ ದಿಕ್ಕಿನ ಮಾರ್ಗವಾಗಿ ನದಿಗಳು ಹರಿಯುವಾಗ ಅವು ಬೇರೆಯಾಗಿ ಕಂಡರೂ ಕಡೆಗೆ ಒಂದೇ ಕಡೆಗೆ ಬಂದು ಸಮುದ್ರವನ್ನೇ ಸೇರುತ್ತವೆ. ॥ ೩೯ ॥ ಅದರಂತೆಯೇ ಈ ಎರಡೂ ಮತಗಳೂ ಒಂದೇ ತತ್ತ್ವವನ್ನೇ ತೋರಿಸುತ್ತವೆ. ಆದರೆ ಆ ಉಪಾಸನೆಯು ಉಪಾಸನೆಯನ್ನು ಮಾಡುವವರ ಯೋಗ್ಯತೆಯ ಮೇಲೆ ಅವಲಂಬನವಾಗಿರುತ್ತದೆ. ॥ ೪೦ ॥ ಹೀಗೆ ನೋಡು, ಪಕ್ಷಿಯು ಒಂದೇ ಹಾರಿಕೆಯಲ್ಲಿ ವೃಕ್ಷದ ಮೇಲಿನ ಹಣ್ಣನ್ನು ತೆಗೆದುಕೊಳ್ಳುತ್ತದೆ. ಆದರೆ ಅದೇ ವೇಗದಿಂದ ಮನುಷ್ಯನಿಗೆ ಆ ಹಣ್ಣನ್ನು ತೆಗೆದುಕೊಳ್ಳಲು ಹೇಗೆ ಸಾಧ್ಯವಾಗಬೇಕು! ॥ ೪೧ ॥ ಅವನು ಮೆಲ್ಲಮೆಲ್ಲನೆ ಟೊಂಗೆಗಳಿಂದ ಟೊಂಗೆಗಳ ಮೇಲೇರಿ ಮಾರ್ಗಕ್ರಮಿಸುತ್ತ ಕೆಲವು ಹೊತ್ತಿನ ಮೇಲೆ ಆ ಹಣ್ಣಿನ ಹತ್ತಿರ ಹೋಗಿ ಮುಟ್ಟುವನು. ॥ ೪೨ ॥ ಅದೇ ಪ್ರಕಾರ ವಿಹಂಗಮ ಮಾರ್ಗದಿಂದ ಜ್ಞಾನಿಗಳು ತೀವ್ರವೇ ಮೋಕ್ಷಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾರೆ. ॥ ೪೩ ॥ ಮಿಕ್ಕಾದ ಯೋಗಿಗಳು ಕರ್ಮಮಾರ್ಗವನ್ನಾಶ್ರಯಿಸಿ (ಪಿಪ್ಪಿಲಿಕ ಮಾರ್ಗದಿಂದ) ವಿಹಿತವಾದ ವರ್ಣಾಶ್ರಮ ಧರ್ಮದ ಆಚರಣೆಯನ್ನು ಮಾಡಿ ಪರಂಪರೆಯಿಂದ ಮೋಕ್ಷ ಪ್ರಾಪ್ತಿಯನ್ನು ಮಾಡಿಕೊಳ್ಳುತ್ತಾರೆ. ॥ ೪೪ ॥

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

[ **ನ ಕರ್ಮಣಾಮಿತಿ** ] ವಾಚೋನಿ ಕರ್ಮಾರಂಭ ಉಚಿತ । ನ ಕರಿತಾ ಸಿದ್ಧವತ । ಕರ್ಮಹೀನಾ ನಿಶ್ಚಿತ । ಹೋಇಜೇನಾ ॥ ೪೫ ॥ ಕೀ ಪ್ರಾಪ್ತ ಕರ್ಮ ಸಾಂಡಿ ಜೇ । ಯೇ ತು ಲೇನಿ ನೈಷ್ಕರ್ಮ್ಯ ಹೋಇಜೇ । ಹೇ ಅರ್ಜುನಾ ವಾಯಾ ಬೋಲಿ ಜೇ । ಮೂರ್ಖಪಣೆ ॥ ೪೬ ॥ ಸಾಂಗೇ ಪೈಲ ತೀರಾ ಜಾವೇ । ಐಸೇ ವ್ಯಸನ ಕಾಜೇಥ ಪಾವೇ । ತೇಥ ನಾವೇ ತೇ ತ್ಯಜಾವೇ । ಘಡೇ ಕೇವೀ ॥ ೪೭ ॥ ನಾ ತರೀ ತೃಪ್ತಿ ಇಚ್ಛಿ ಜೇ । ತರೀ ಕೈಸೆ ನೀ ಪಾಕ ನ ಕೀ ಜೇ । ಕೀ ಸಿದ್ಧಹೀ ನ ಸೇವಿಜೇ । ಕೇವೀ ಸಾಂಗೇ ॥ ೪೮ ॥ ಜವ ನಿರಾರ್ತ ತಾ ನಾಹೀ । ತವ ವ್ಯಾಪಾರ ಅಸೇ ಪಾಹೀ । ಮಗ ಸಂತುಷ್ಟೀಚ್ಯಾ ಠಾಯೀ । ಕುಂಠೇ ಸಹ ಜೇ ॥ ೪೯ ॥ ಮ್ಹಣೋನಿ ಆಇಕೇ ಪಾರ್ಥಾ । ಜಯಾ ನೈಷ್ಕರ್ಮ್ಯ ಪದೀ ಆಸ್ಥಾ । ತಯಾ ಉಚಿತ ಕರ್ಮ ಸರ್ವಥಾ । ತ್ಯಾಜ್ಯ ನೋಹೇ ॥ ೫೦ ॥ ಆಣಿ ಆಪುಲಾಲಿಯೇ ಚಾಡೆ । ಆಪಾದಿಲೇ ಹೇ ಮಾಂಡೇ । ಕೀ ತ್ಯಜಿಲೇ ಕರ್ಮ ಸಾಂಡೇ । ಐಸೇ ಆಹೇ ॥ ೫೧ ॥ ಹೇ ವಾಯಾಚಿ ಸೈರಾ ಬೋಲಿಜೇ । ಉಕಲ ತರೀ ದೇಖೋನಿ ಪಾಹಿಜೇ । ಪರೀ ತ್ಯಜಿತಾ ಕರ್ಮ ನ ತ್ಯಜೇ । ನಿಭ್ರಾಂತ ಮಾನೀ ॥ ೫೨ ॥

**ಅರ್ಥ** — ಇದರ ಹೊರ್ತು ಆರಂಭದಿಂದ ಉಚಿತ ಕರ್ಮವನ್ನು ಬಿಟ್ಟುಕೊಟ್ಟು ಜ್ಞಾನೀ ಪುರುಷನಂತೆ ಸಿದ್ಧವತ್ ಆಚರಣೆ ಮಾಡುವ ಕರ್ಮಹೀನನಿಗೆ ನೈಷ್ಕರ್ಮ್ಯ ಸ್ಥಿತಿಯು ಅವನಿಗೆ ಎಂದಿಗೂ ಬರಲಾರದು. ॥ ೪೫ ॥ ಇಲ್ಲವೇ ತಾನು ಮಾಡಬೇಕಾದ ವಿಹಿತ ಕರ್ಮವನ್ನು ಬಿಡುವದರಿಂದಲೇ ನಾನು ಕೃತಾರ್ಥನಾಗುವೆನೆಂದು ನಂಬುವದು ಕೇವಲ ಮೂರ್ಖತನವೇ ಆಗಿದೆ. ॥ ೪೬ ॥ ಮಹಾಪೂರು ಬಂದಿರುವ ನದಿಯನ್ನು ದಾಟಿ ಹೋಗುವ ಸಂಕಟ ಬಂದಿರಲು, ನೌಕೆಯನ್ನು ಬಿಟ್ಟು ಬೇರೆಯಾಗಿ ಹೇಗೆ ಹೋಗಲು ಬರುವದು? ಇದನ್ನು ನೀನೇ ಹೇಳು ನೋಡುವಾ. ॥ ೪೭ ॥

ಭೋಜನದಿಂದ ತೃಪ್ತಿಹೊಂದಬೇಕೆಂದು ಇಚ್ಛೆಯೇನೋ ಉಂಟು. ಆದರೆ ಅಡಿಗೆಯನ್ನೂ ಮಾಡದೇ, ಅಥವಾ ಮಾಡಿದ ಅಡಿಗೆಯನ್ನೂ ಉಣ್ಣದೇ ಅವನ ಇಚ್ಛೆಯು ಪೂರ್ತಿಯಾಗಬಹುದೇ ? ॥ ೪೮ ॥ ಎಲ್ಲಿಯವರೆಗೆ ನಿರಿಚ್ಛೆತೆಯು ಪ್ರಾಪ್ತ ವಾಗುವದಿಲ್ಲವೋ ಅಲ್ಲಿಯವರೆಗೆ ಪ್ರಯತ್ನವನ್ನು ಮಾಡಲಿಕ್ಕೇಬೇಕು. ಅದು ಪ್ರಾಪ್ತವಾದರೆ ಆತ್ಮ ಸಂತೋಷವುಂಟಾಗಿ ಎಲ್ಲ ವ್ಯಾಪಾರಗಳೂ ಸಹಜವೇ ನಿಂತುಬಿಡುತ್ತವೆ. ॥ ೪೯ ॥ ಆದುದರಿಂದ ಪಾರ್ಥಾ, ಯಾವನಿಗೆ ಪರಮಾತ್ಮಪ್ರಾಪ್ತಿಯ ಇಚ್ಛೆಯು ಉಂಟಾಗಿರುವದೋ ಅವನು ವಿಹಿತ ಕರ್ಮಾಚರಣೆಯನ್ನು ಎಂದಿಗೂ ಬಿಡಲಿಕ್ಕೆ ಬರುವದಿಲ್ಲ. ॥ ೫೦ ॥ ಮತ್ತೂ ತಮ್ಮ ಇಚ್ಛಾ ಪ್ರಕಾರವೇ ಕರ್ಮದ ಸ್ವೀಕಾರ ಮತ್ತು ತ್ಯಾಗ ಮಾಡಬೇಕೆನ್ನುವದು ಸಾಧ್ಯವೇನು ? ॥ ೫೧ ॥ ಈ ಸ್ವಚ್ಛಂದವಾದ ಭಾಷಣವು ವ್ಯರ್ಥವಾದದ್ದದೆ. ಅನುಭವದಿಂದ ಚನ್ನಾಗಿ ವಿಚಾರಮಾಡಿ ನೋಡಿದರೆ ಕರ್ಮಗಳನ್ನು ಬಿಡಬೇಕೆಂದರೆ ಅವುಗಳ ತ್ಯಾಗವು ಎಂದೂ ಆಗಲಾರದೆಂಬವನ್ನು ಧೃಢವಾಗಿ ನಂಬು. ॥ ೫೨ ॥

**ನ ಹಿ ಕಶ್ಚಿತ್ಕ್ಷಣ ಮಪಿ ಜಾತು ತಿಷ್ಠತ್ಯ ಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

**[ ನ ಹಿ ಕಶ್ಚಿದಿತಿ ]** ಜವ ಪ್ರಕೃತೀಚೆ ಅಧಿಷ್ಠಾನ । ತವ ಸಾಂಡೀ ಮಾಂಡೀ ಹೇ ಅಜ್ಞಾನ । ಜೇ ಚೇಷ್ಟಾ ತೇ ಗುಣಾಧೀನ । ಆಪೈಸೀ ಅಸೇ ॥ ೫೩ ॥ ದೇಖೇ ವಿಹಿತ ಕರ್ಮ ಜೇತುಲೇ । ತೇ ಸಗಳೇ ಜರೀ ವೋಸಂಡಿಲೇ । ತರೀ ಸ್ವಭಾವ ಕಾಯ ನಿ ಮಾಲೇ । ಇಂದ್ರಿಯಾಂಚೆ ॥ ೫೪ ॥ ಸಾಂಗೇ ಶ್ರವಣೀ ಐಕಾವೇ ಠೇಲೇ । ಕೀ ನೇತ್ರೀಚೇ ತೇಜಗೇಲೆ । ಹೇ ನಾಸಾರಂಧ್ರ ಬುಝಾಲೇ । ಪರಿಮಳ ನೇಘೆ ॥ ೫೫ ॥ ನಾ ತರೀ ಪ್ರಾಣಾಪಾನಗತಿ । ಕೀ ನಿರ್ವಿಕಲ್ಪ ಜಾಹಾಲೀ ಮತಿ । ಕೀ ಕ್ಷುದಾ ತೃಷಾದಿ ಆರ್ತಿ । ಖುಂಟಲಿಯಾ ॥ ೫೬ ॥ ಹೇ ಸ್ವಪ್ನಾವ ಬೋಧ ರೇಲೇ । ಕೀ ಚರಣ ಚಾಲೋ ವಿಸರಲೇ । ಹೇ ಅಸೋ ಕಾಯ ನಿಮಾಲೇ । ಜನ್ಮ ಮೃತ್ಯೂ ॥ ೫೭ ॥ ಹೇ ನ ಠಕೇಚೀ ಜರೀ ಕಾಹೀ । ತರೀ ಸಾಂಡಿಲೆ ತೇ ಕಾಯೀ । ಮ್ಹಣೋನಿ ಕರ್ಮತ್ಯಾಗ ನಾಹೀ । ಪ್ರಕೃತಿಮಂತಾ ॥ ೫೮ ॥ ಕರ್ಮ ಪರಾಧೀನ ಪಣೇ । ನಿಪಜತ ಅಸೇ ಪ್ರಕೃತಿ ಗುಣೇ । ಯೇರವೀ ಧರೀ ಮೊಕಳೀ ಅಂತಃಕರಣೇ । ವಾಹಿಜೇ ವಾಯಾ ॥ ೫೯ ॥ ದೇಖೇ ರಥೀ ಆರೂಥಿ ಜೇ । ಮಗ ಜರೀ ನಿಶ್ಚಳ ಬೈಸಿ ಜೇ । ತರೀ ಚಳ ಹೋವೂನಿ ಹಿಂಡಿ ಜೇ । ಪರ ತಂತ್ರಾ ॥ ೬೦ ॥ ಕಾ ಉಚಲಿಲೇ ವಾಯು ವಶೇ । ಚಳೇ ಶುಷ್ಕ ಪತ್ರ ಜೈಸೇ । ನಿಚೇಷ್ಟ ಆಕಾಶೇ ಪರಿಭ್ರಮೇ ॥ ೬೧ ॥ ತೈಸೇ ಪ್ರಕೃತಿ ಆಧಾರೇ । ಕರ್ಮೇಂದ್ರಿಯವಿಕಾರೇ । ನಿಷ್ಕರ್ಮ ಹೀ ವ್ಯಾಪಾರೇ । ನಿರಂತರ ॥ ೬೨ ॥ ಮ್ಹಣವೂನಿ ಸಂಗ ಜಂವ ಪ್ರಕೃತೀಚಾ । ತಂವ ತ್ಯಾಗ ನ ಘಡೇ ಕರ್ಮಾಚಾ । ಐಸಿಯಾಹಿ ಕರೂ ಮ್ಹಣತೀ ತಯಾಂಚಾ । ಆಗ್ರಹಚಿ ಉರೇ ॥ ೬೩ ॥

**ಅರ್ಥ—** ಎಲ್ಲಿಯವರೆಗೆ ಪ್ರಕೃತಿಯ ಆಶ್ರಯವು ಉಂಟಾಗಿರುವದೋ ಅಲ್ಲಿಯವರೆಗೆ ಕರ್ಮವನ್ನು ಸ್ವೀಕರಿಸುವದು ಅಥವಾ ತ್ಯಾಗಮಾಡುವದು ಈ ವಿಷಯವಾಗಿ ಮಾತನಾಡುವದು ಅಜ್ಞಾನವೇ ಸರಿ. ಯಾಕಂದರೆ ಪ್ರಕೃತಿಯ ಚೇಷ್ಟೆಯು ( ವರ್ತನವು ) ತನ್ನಿಂದ ತಾನೇ ಸತ್ವಾದಿ ಗುಣದ ಆಧೀನವಾಗಿರುತ್ತದೆ. ॥ ೫೩ ॥ ಅರ್ಜುನಾ ನೋಡು— ವಿಹಿತ ಕರ್ಮಗಳನ್ನಷ್ಟೇ ಬಿಟ್ಟುಬಿಟ್ಟರೆ ಇಂದ್ರಿಯುಗಳ ಸ್ವಾಭಾವಿಕವಾದ ಗುಣವು ನಾಶವಾಗುವದೇ ? ॥ ೫೪ ॥ ವಿಹಿತ ಕರ್ಮ ತ್ಯಾಗ ಮಾಡುವದರಿಂದ ಕಿವಿಯಿಂದ ಕೇಳುವದು ನಿಂತು ಹೋಗಿರುವದೇನು ? ಇಲ್ಲವೇ ಕಣ್ಣು ಕಾಣದಂತೆ ಆಗಿರುವುದೇನು ? ಇಲ್ಲವೇ ಮೂಗಿನ ರಂಧ್ರಗಳು ಮುಚ್ಚಿಹೋಗಿ ಸುಗಂಧ ದುರ್ಗಂಧಗಳ ವಾಸನೆಯು ತಿಳಿಯದಂತಾಗಿರುವುದೇನು ? ॥ ೫೫ ॥ ಇಲ್ಲವೇ ಪ್ರಾಣಾಪಾನ ವಾಯುವಿನ ಗತಿಯು ಬಂದಾಗಿರುವದೇ ? ಅಥವಾ ಸಂಕಲ್ಪ-ವಿಕಲ್ಪಾತ್ಮಕವಾದ ಈ ಮನಸು ಕಲ್ಪನಾರಹಿತವಾಗಿರುವದೇನು ? ಇಲ್ಲವೇ ಹಸಿವೆ ನೀರಡಿಕೆಗಳ ಮೇಲಿನ ಅಪೇಕ್ಷೆಯು ಇಲ್ಲದಂತಾಗಿರುವದೇನು ? ॥ ೫೬ ॥ ಅಥವಾ ಸ್ವಪ್ನ, ಜಾಗ್ರತೆ ಈ ಅವಸ್ಥೆಗಳು ನಾಶಹೊಂದಿರುವವೇನು ? ಮತ್ತು ಕಾಲುಗಳು ನಡೆಯುವದನ್ನು ಮರೆತಿರುವವೇನು? ಇವುಗಳಂತೂ ಹಾಗೇ ಇರಲಿ; ಜನನ-ಮರಣಗಳು ಇಲ್ಲದಂತೆ

ಆಗಿರುವವೇ ಹೇಗೆ ? ॥ ೨೭ ॥ ಆದರೆ ಈ ಇಂದ್ರಿಯಗಳ ವ್ಯಾಪಾರವು ನಿಲ್ಲುವದಿಲ್ಲ. ಅಂದ ಬಳಿಕ ನೀನು ಯಾವುದನ್ನು ಬಿಟ್ಟುರುವಿ ? ಆದುದರಿಂದ ದೇಹಾಭಿಮಾನಿಗಳ ಕಡೆಯಿಂದ ಕರ್ಮತ್ಯಾಗ ಮಾಡುವದು ಎಂದಿಗೂ ಆಗಲಾರದು. ॥ ೫೮ ॥ ಕರ್ಮವು ಪರಾಧೀನವಾಗಿದ್ದು ಅಂದರೆ ಪ್ರಕೃತಿ ಗುಣಾಧೀನವಾಗಿ ಹುಟ್ಟುವದರಿಂದ ನಾನು ಕರ್ಮ ಮಾಡುವೆನು ಇಲ್ಲವೇ ಬಿಡುವೆನು ಎಂದು ತಿಳಿಯುವದು ವ್ಯರ್ಥವಾದದ್ದೇ ಆಗಿರುವದು. ॥ ೫೯ ॥ ನೋಡು ರಥದಲ್ಲಿ ಕುಳಿತಮೇಲೆ ಸುಮ್ಮನೇ ಕುಳಿತುಕೊಂಡರೂ ಅವನು ರಥದ ಆಧೀನನಾಗಿರುವದರಿಂದ, ರಥವು ಯಾವ ಕಡೆಗೆ ಹೋಗುವದೋ ಅತ್ತಕಡೆಗೇ ಹೋಗಬೇಕಾಗುವದು. ॥ ೬೦ ॥ ಇಲ್ಲವೇ ಒಣಗಿದ ಎಲೆಯು ನಿಶ್ಚೇಷ್ಟವಾಗಿದ್ದರೂ ಸಹ, ಗಾಳಿ ಬೀಸುವದರಿಂದ ಹಾರಿಹೋಗಿ ಆಕಾಶದಲ್ಲಿ ಹೇಗೆ ಭ್ರಮಣಮಾಡುವದೋ, ॥ ೬೧ ॥ ಹಾಗೆಯೇ ಪ್ರಕೃತಿಯ ಆಶ್ರಯದಿಂದ ಕರ್ಮೇಂದ್ರಿಯಗಳ ವಿಕಾರ ಉಂಟಾಗುವದರಿಂದ ನಿಷ್ಕಾಮ ಸ್ಥಿತಿಗೆ ಮುಟ್ಟಿದ ಮನುಷ್ಯನು ಕೂಡ ಯಾವಾಗಲೂ ಶಾರೀರಿಕ ಕರ್ಮಗಳನ್ನು ಮಾಡುತ್ತಾನೆ. ॥ ೬೨ ॥ ಆದ್ದರಿಂದ ಎಲ್ಲಿಯವರೆಗೆ ಪ್ರಕೃತಿಯ ಸಂಬಂಧವಿದೆಯೋ ಅಲ್ಲಿಯವರೆಗೆ ಕರ್ಮತ್ಯಾಗವು ಎಂದಿಗೂ ಸಂಭವಿಸಲಾರದು. ಹೀಗಿದ್ದಾಗ್ಯೂ ಯಾರು ಕರ್ಮವನ್ನು ಬಿಟ್ಟುಬಿಡುತ್ತೇವೆಂದು ಅನ್ನುವರೋ ಅವರದು ವ್ಯರ್ಥವಾದ ಹಟವು ಮಾತ್ರ ಉಳಿದಿರುತ್ತದೆ. ॥ ೬೩ ॥

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

**[ ಕರ್ಮೇಂದ್ರಿಯಾಣೀತಿ ]** ಜೇ ಉಚಿತ ಕರ್ಮ ಸಾಂಡಿತೀ । ಮಗ ನೈಷ್ಕರ್ಮ್ಯ ಹೋಪಾಹತೀ । ಪರೀ ಕರ್ಮೇಂದ್ರಿಯ ಪ್ರವೃತ್ತೀ । ನಿರೋ ಧುನೀ ॥ ೬೪ ॥ ತಯಾ ಕರ್ಮತ್ಯಾಗ ನ ಘಡೇ । ಜೇ ಕರ್ತವ್ಯ ಮನೀ ಸಾಂಪಡೆ । ವರೀ ನಟತೀ ತೇ ಫುಡೇ । ದರಿದ್ರ ಜಾಣ ॥ ೬೫ ॥ ಐಸೇ ತೇ ಪಾರ್ಥಾ । ವಿಷಯಾಸಕ್ತ ಸರ್ವಥಾ । ವೋಳಖಾವೇ ತತ್ವತಾ । ಭ್ರಾಂತಿ ನಾಹೀ ॥ ೬೬ ॥ ಆತಾ ದೇ ಈ ಅವಧಾನ । ಪ್ರಸಂಗೇ ತುಜ ಸಾಂಗೇನ । ಯಾ ನೈರಾಶ್ಯಾಚೇ ಚಿನ್ಹ । ಧನುರ್ಧರಾ ॥ ೬೭ ॥

**ಅರ್ಥ** - ವಿಹಿತ ಕರ್ಮದ ( ಶಾಸ್ತ್ರೋಕ್ತ ಕರ್ಮದ ) ತ್ಯಾಗ ಮಾಡಿ ಕರ್ಮೇಂದ್ರಿಯಗಳ ನಿಗ್ರಹ ಮಾಡಿ ಇಷ್ಟರಿಂದಲೇ ಕರ್ಮಾತೀತನಾಗಲಿಕ್ಕೆ ಇಚ್ಛಿಸುತ್ತಾನೆ, ॥ ೬೪ ॥ ಅವನಿಗೆ ಕರ್ಮ ತ್ಯಾಗವು ಉಂಟಾಗುವದಿಲ್ಲ. ಕಾರಣ ಅವನ ಮನಸಿನಲ್ಲಿ ಕರ್ತವ್ಯ ಶೇಷವು ಉಳಿದು, ಕರ್ಮಾತೀತನಾದವನಂತೆ ಮೇಲಿಂದಲೇ ನಟಿಸುತ್ತಿರುತ್ತಾನೆ. ಆದರೆ ಮನಸಿನಲ್ಲಿ ಮಾತ್ರ ವಿಷಯಗಳನ್ನು ಸ್ಮರಿಸುತ್ತಿರುವ ಮೂಢನು ನಿಜವಾದ ಮಿಥ್ಯಾಚಾರಿಯೆಂದು ಅನಿಸಿಕೊಳ್ಳುತ್ತಾನೆ. ಇಂಥವನೇ ದರಿದ್ರನು. ॥ ೬೫ ॥ ಪಾರ್ಥಾ, ಹೀಗೆ ಈ ಪ್ರಾಣಿಗಳು ವಿಷಯಾಸಕ್ತರಾಗಿರುತ್ತಾರೆಂಬುದನ್ನು ನಿಃಸಂಶಯವಾಗಿ ನಂಬು. ॥ ೬೬ ॥ ಇನ್ನು ಮೇಲೆ ಅರ್ಜುನಾ, ಪ್ರಸಂಗಾನುಸಾರವಾಗಿ ನಿಜವಾದ ನಿರೀಚ್ಛ ಮನುಷ್ಯರ ಲಕ್ಷಣಗಳನ್ನು ಹೇಳುತ್ತೇನೆ. ಅದನ್ನು ಲಕ್ಷಪೂರ್ವಕವಾಗಿ ಕೇಳು. ॥ ೬೭ ॥

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥**

**[ ಯಸ್ತ್ವಿತಿ ]** ಜೋ ಅಂತರೀ ದೃಢ । ಪರಮಾತ್ಮರೂಪೀ ಗೂಢ । ಬಾಹ್ಯ ತರೀ ರೂಢ । ಲೌಕಿಕ ಜೈಸಾ ॥ ೬೮ ॥ ತೋ ಇಂದ್ರಿಯಾ ಆಜ್ಞಾ ನ ಕರೀ । ವಿಷಯಾಚೆ ಭಯ ನ ಧರೀ । ಪ್ರಾಪ್ತ ಕರ್ಮ ನವ್ಹೇರೀ । ಉಚಿತ ಜೇ ಜೇ ॥ ೬೯ ॥ ತೋ ಕರ್ಮೇಂದ್ರಿಯೆ ಕರ್ಮೀ । ರಾಹಟತಾ ತರೀ ನ ನಿಯಮೀ । ಪರೀ ತೇಥೀ ಚೇನಿ ಊರ್ಮೀ । ಝಾಂಕೋಳೇನಾ ॥ ೭೦ ॥ ತೋ ಕಾಮನಾಮಾತ್ರೇ ನ ಘೇಪೇ । ಮೋಹ ಮಳೇ ನಲಿಂಪೇ । ಜೈಸೇ ಜಳೀ ಜಳೇ ನ ಶಿಂಪೇ । ಪದ್ಮಪತ್ರ ॥ ೭೧ ॥ ತೈಸಾ ಸಂಸರ್ಗಾ ಮಾಜೀ ಅಸೇ । ಸಕಳಾ

ಸಾರಿಖಾ ದಿಸೇ । ಜೈಸೇ ತೋಯ ಸಂಗೇ ಆಭಾಸೇ । ಭಾನು ಬಿಂಬ ॥ ೭೨ ॥ ತೈಸೇ ಸಾಮಾನ್ಯತ್ವೇ ಪಾಹಿಜೇ । ತರೀ ಸಾಧಾರಣಾಚಿ ದೇಖಿಜೆ । ಯೇರವೀ ನಿರ್ಧಾರಿತಾ ನೇಣಿಜೇ । ಸೋಯ ಜಯಾಚೀ ॥ ೭೩ ॥ ಐಸಾ ಚಿನ್ಹೀ ಚಿನ್ಹಿತ । ದೇಖಸಿ ತೋಚಿ ಮುಕ್ತ । ಆಶಾ ಪಾಶ ರಹಿತ । ವೋಳಖ ಪಾ ॥ ೭೪ ॥ ಅರ್ಜುನಾ ತೋಚಿ ಯೋಗೀ । ವಿಶೇಷಿಜೇ ಜೋ ಜಗೀ । ಮ್ಹಣೋನಿ ಐಸಾ ಹೋಯ ಯಾಲಾಗೀ । ಮ್ಹಣಿಪೇ ತೂತೇ ॥ ೭೫ ॥ ತೂ ಮಾನಸಾ ನಿಯಮು ಕರೀ । ನಿಶ್ಚಳ ಹೋಯೇ ಅಂತರೀ । ಮಗ ಕರ್ಮೇಂದ್ರಿಯೇ ವ್ಯಾಪಾರೀ । ವರ್ತತು ಸುಖೇ ॥೭೬॥

**ಅರ್ಥ**— ಯಾವನು ಅಂತರಂಗದಲ್ಲಿ ದೃಢಮನಸ್ಸಿನಿಂದ ಪರಮಾತ್ಮನಲ್ಲಿ ನಿಮಗ್ನನಾಗಿದ್ದೂ, ಬಹಿರಂಗದಲ್ಲಿ ಲೋಕಾಚಾರಕ್ಕೆ ಸರಿಯಾಗಿ ನಡೆಯುವನೋ ॥ ೬೮ ॥ ಅವನು ಇಂದ್ರಿಯಗಳಿಗೆ ಏನೂ ಹೇಳುವದಿಲ್ಲ. ವಿಷಯದ ಭಯವನ್ನೂ ಹಿಡಿಯುವದಿಲ್ಲ. ಕಾಲಾನುಸಾರವಾಗಿ ಮಾಡತಕ್ಕ ಆಯಾಯ ವಿಹಿತಕರ್ಮಗಳನ್ನು ಎಂದಿಗೂ ಬಿಡುವದಿಲ್ಲ. ॥ ೬೯ ॥ ಕರ್ಮೇಂದ್ರಿಯಗಳ ಕಡೆಯಿಂದ ಕರ್ಮಗಳು ಉಂಟಾಗುವ ಕಾಲದಲ್ಲಿ ಅವನು ಅವುಗಳನ್ನು ನಿರ್ಬಂಧಿಸುವದಿಲ್ಲ. ಮತ್ತು ಅವುಗಳ ವಿಕಾರದಲ್ಲಿ ಅಧೀನನಾಗಿರುವದಿಲ್ಲ. ॥ ೭೦ ॥ ಅವನು ಕಾಮವಾಸನೆಯಿಂದ ಲಿಪ್ತನಾಗುವದಿಲ್ಲ. ಮತ್ತು ಅವನ ಮನಸಿಗೆ ಮೋಹದ ಬಾಧೆಯು ಉಂಟಾಗುವದಿಲ್ಲ. ಕಮಲಪತ್ರಗಳು ಹಗಲು ರಾತ್ರಿ ಸಹ ನೀರಿನಲ್ಲಿದ್ದಾಗ್ಯೂ ಹೇಗೆ ಅವು ನೀರಿನಿಂದ ತೊಯ್ಯಲ್ಪಡುವದಿಲ್ಲವೋ, ॥ ೭೧ ॥ ಹಾಗೆಯೇ ಸಂಸಾರ ದಲ್ಲಿದ್ದು ಅವನು ಎಲ್ಲ ಜನರಂತೇ ಕಾಣಿಸುತ್ತಾನೆ. ಯಾವ ಪ್ರಕಾರ ನೀರಿನ ಸಂಗತಿಯಿಂದ ಸೂರ್ಯಬಿಂಬವು ನೀರಿನಲ್ಲಿ ಕಾಣುವದೋ, ॥ ೭೨ ॥ ಅದೇ ಪ್ರಕಾರ ಬಹಿರಂಗವಾಗಿ ನೋಡಲು ಅವನು ಸಾಮಾನ್ಯನಂತೆ ಕಾಣುತ್ತಾನೆ. ಆದರೆ ನಿಶ್ಚಯದಿಂದ ಅವನ ಆತ್ಮಸ್ಥಿತಿಯನ್ನು ಪರೀಕ್ಷಿಸಿ ನೋಡಲು ಸಾಧ್ಯವಿರುವದಿಲ್ಲ. ॥ ೭೩ ॥ ಇಂಥ ಗುಣದಿಂದ ಯಾವನು ಪರಿಪೂರ್ಣನಾಗಿರುವನೋ, ಯಾವನು ನಿರಿಚ್ಛನಿರುವನೋ ಅವನೇ ಮುಕ್ತನಿರುವನೆಂದು ತಿಳಿ. ॥ ೭೪ ॥ ಅರ್ಜುನಾ, ಅವನೇ ಯೋಗಿ. ಅವನೇ ಜಗತ್ತಿನಲ್ಲಿ ಸ್ತುತಿಮಾಡಿಸಿಕೊಳ್ಳಲಿಕ್ಕೆ ಪಾತ್ರನಿರುತ್ತಾನೆ. ಆದುದರಿಂದ ನೀನು ಯೋಗಿಯಾಗೆಂದು ನಾನು ನಿನಗೆ ಹೇಳುತ್ತೇನೆ. ॥ ೭೫ ॥ ನೀನು ಮನೋನಿಗ್ರಹವನ್ನು ಮಾಡು. ಮತ್ತು ಅಂತರ್ಯಾಮೀ ಸ್ಥಿರಬುದ್ಧಿಯುಳ್ಳವನಾಗು. (ಆ ಮೇಲೆ ಕರ್ಮೇಂದ್ರಿಯಗಳು ಸಂತೋಷದಿಂದ ತಮ್ಮ ತಮ್ಮ ವ್ಯಾಪಾರವನ್ನು ಮಾಡಲಿ.) ॥ ೭೬ ॥

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

**[ ನಿಯತಮಿತಿ ]** ಮ್ಹಣೋನಿ ನೈಷ್ಕರ್ಮ್ಯ ಹೋಆವೇ । ತರೀ ಏಥ ತೇನ ಸಂಭವೇ । ಆಣಿ ನಿಷಿದ್ಧ ಕೇವೀ ರಾಹಾಟಾವೇ । ವಿಚಾರೀ ಪಾ ॥ ೭೭ ॥ ಮ್ಹಣೋನಿ ಜೇ ಜೇ ಉಚಿತ । ಆಣಿ ಅವಸರೇ ಕರೂನಿ ಪ್ರಾಪ್ತ । ತೇ ಕರ್ಮ ಹೇತು ರಹಿತ । ಆಚರೇ ತೂ ॥ ೭೮ ॥ ಪಾರ್ಥಾ ಆಣೀಕಹೀ ಏಕ । ನೇಣಸೀ ತೂ ಹೇ ಕವತಿಕ । ಜೇ ಐಸೇ ಕರ್ಮ ಮೋಚಕ । ಆಪೈಸೇ ಅಸೇ ॥ ೭೯ ॥ ದೇಖೇ ಅನುಕ್ರಮಾ ಧಾರೇ । ಸ್ವಧರ್ಮ ಜೋ ಆಚರೇ । ತೋ ಮೋಕ್ಷ ತೇಣೇ ವ್ಯಾಪಾರೇ । ನಿಶ್ಚಿತ ಪಾವೇ ॥ ೮೦ ॥

**ಅರ್ಥ**— ಈ ಸಂಸಾರದಲ್ಲಿ ಕರ್ಮರಹಿತನಾಗುವದು ಅಸಂಭವನೀಯವಾಗಿರುತ್ತದೆ. ಅಂದಬಳಿಕ ಶಾಸ್ತ್ರ ವಿರುದ್ಧವಾದ ಆಚರಣೆಯನ್ನೇಕೆಮಾಡಬೇಕು ? ಈ ವಿಷಯವಾಗಿ ವಿಚಾರಮಾಡು. ॥ ೭೭ ॥ ಆದುದರಿಂದ ಯಾವ ಯಾವದು ವಿಹಿತ ಮತ್ತು ಯೋಗ್ಯ ಸಮಯಾನುಸಾರ ಪ್ರಾಪ್ತವಾದ ಎಲ್ಲ ಕರ್ಮಗಳನ್ನೂ ನೀನು ನಿಷ್ಕಾಮ ಬುದ್ಧಿ ಯಿಂದ ಮಾಡು. ॥ ೭೮ ॥ ಅರ್ಜುನನೇ, ಇನ್ನೂ ಒಂದು ಆಶ್ಚರ್ಯವು ನಿನಗೆ ಗೊತ್ತಿರುವದಿಲ್ಲ. ನಿಷ್ಕಾಮ

ಬುದ್ಧಿಯಿಂದ ಮಾಡಿದ ಕರ್ಮಗಳು ಸಂಸಾರದೊಳಗಿಂದ ಮುಕ್ತಮಾಡಲಿಕ್ಕೆ ಸಮರ್ಥವಾಗಿರುತ್ತವೆ. ॥ ೭೯ ॥ ಅಧಿಕಾರಾನುಸಾರವಾಗಿ ಸ್ವಧರ್ಮದ ಆಚರಣೆಯನ್ನು ಯಾವನು ಮಾಡುವನೋ ಅವನೇ ಆ ಸ್ವಧರ್ಮಾಚರಣೆಯಿಂದಲೇ ನಿಜವಾಗಿ ಮೋಕ್ಷವನ್ನು ಪ್ರಾಪ್ತಮಾಡಿಕೊಳ್ಳುತ್ತಾನೆ. ॥ ೮೦ ॥

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥**

**[ ಯಜ್ಞಾರ್ಥಾತ್ಕರ್ಮಣ ಇತಿ ]** ಸ್ವಧರ್ಮ ಜೋಬಾಪಾ । ತೋಚಿ ನಿತ್ಯಯಜ್ಞ ಜಾಣಪಾ । ಮ್ಹಣೋನಿ ವರ್ತತಾ ತೇಥ ಪಾಪಾ । ಸಂಚಾರ ನಾಹೀ ॥ ೮೧ ॥ ಹಾ ನಿಜಧರ್ಮ ಜೈಸಾಂಡೇ । ಆಣಿ ಕುಕರ್ಮೀ ರತಿಘಡೇ । ತೈಂಚಿಬಂಧ ಪಡೇ । ಸಾಂಸಾರಿಕ ॥ ೮೨ ॥ ಮ್ಹಣೋನಿ ಸ್ವಧರ್ಮಾನುಷ್ಠಾನ । ತೇ ಅಖಂಡ ಯಜ್ಞಯಾಜನ । ಜೋ ಕರೀ ತಯಾ ಬಂಧನ । ಕಹೀಚ ನ ಘಡೇ ॥ ೮೩ ॥ ಹಾ ಲೋಕ ಕರ್ಮೇಬಾಂಧಿಲಾ । ಜೋ ಪರತಂತ್ರಾ ಭುಲಲಾ । ತೋ ನಿತ್ಯಯಜ್ಞಾತೇ ಚುಕಲಾ । ಮ್ಹಣೋನಿಯಾ ॥ ೮೪ ॥ ಆತಾ ಯೇಚೀ ವಿಷಯೀ ಪಾರ್ಥಾ । ತುಜ ಸಾಂಗೇನ ಏಕ ಮೀ ಕಥಾ । ಜೈಸೃಷ್ಟ್ಯಾದಿ ಸಂಸ್ಥಾ । ಬ್ರಹ್ಮೇನೇ ಕೇಲಿ ॥ ೮೫ ॥

**ಅರ್ಥ—** ಅಯ್ಯಾ, ಅರ್ಜುನನೇ ಸ್ವಧರ್ಮದಂತೆ ಆಚರಣೆ ಮಾಡುವದೇ ನಿತ್ಯಯಜ್ಞವಾಗಿರುವದು. ಆದುದರಿಂದ ಆ ಪ್ರಕಾರ ವರ್ತನ ಮಾಡುವದರಿಂದ ಅವರಲ್ಲಿ ಪಾಪದ ಪ್ರವೇಶವಾಗುವದಿಲ್ಲ. ॥ ೮೧ ॥ ಪ್ರಾಣಿಗಳು ಯಾವಾಗ್ಗೆ ತಮ್ಮ ಧರ್ಮವನ್ನು ಬಿಟ್ಟು ಬಿಡುತ್ತಾರೋ ಮತ್ತು ಕುಕರ್ಮ ( ವೇದ ಬಾಹ್ಯವಾದ ಕೆಟ್ಟ ಕರ್ಮ ) ಗಳಲ್ಲಿ ಆಸಕ್ತರಾಗುತ್ತಾರೆ. ಆಗ್ಗೇನೇ ಅವರು ಜನನ ಮರಣಗಳ ಬಂಧನದಲ್ಲಿ ಬೀಳುತ್ತಾರೆ. ॥ ೮೨ ॥ ಆದುದರಿಂದಾ, ಸ್ವಧರ್ಮದಂತೆ ಆಚರಿಸುವದೇ ಅಖಂಡ ಯಜ್ಞವೆಂದು ತಿಳಿ. ಮತ್ತು ಯಾವ ಪುರುಷನು ಯಜ್ಞವನ್ನು ಮಾಡುವನೋ, ಅವನಿಗೆ ಸಂಸಾರ ಬಂಧನವು ಎಂದಿಗೂ ಉಂಟಾಗುವದಿಲ್ಲ. ॥ ೮೩ ॥ ಎಲ್ಲರೂ ಸ್ವಧರ್ಮ ಕರ್ಮವನ್ನು ಬಿಟ್ಟದ್ದರಿಂದಲೇ ಈ ಸರ್ವ ಜಗತ್ತು ಕರ್ಮ ಬಂಧನದಲ್ಲಿ ಕಟ್ಟಲ್ಪಟ್ಟಿರುವದು. ಅವರು ಪರತಂತ್ರರಾಗಿರುವರು. ॥ ೮೪ ॥ ಪಾರ್ಥಾ, ಇದೇ ವಿಷಯದಲ್ಲಿ ಒಂದು ಕಥೆಯನ್ನು ನಾನು ನಿನಗೆ ಹೇಳುತ್ತೇನೆ. ಬ್ರಹ್ಮದೇವನು ಯಾವಾಗ ಸೃಷ್ಟಿನಿರ್ಮಾಣ ಮಾಡಿದನೋ, ॥ ೮೫ ॥

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**

**[ ಸಹಯಜ್ಞಾಃ ಪ್ರಜಾಃ ಇತಿ ]** ತೈ ನಿತ್ಯಯಾಗ ಸಹಿತೇ । ಸೃಜಿಲೀ ಭೂತೇ ಸಮಸ್ತೇ । ಪರೀ ನೇಣತೀಚಿ ತೀಯೇ ಯಜ್ಞಾತೇ । ಸೂಕ್ಷ್ಮ ಮ್ಹಣವುನೀ ॥ ೮೬ ॥ ತೇ ವೇಳೀ ಪ್ರಜೀ ವಿನವಿಲಾ ಬ್ರಹ್ಮಾ । ದೇವಾ ಕಾಯ ಆಶ್ರಯೋ ಏಥ ಆಮ್ಹಾ । ತವ ಮ್ಹಣೇ ತೋ ಕಮಳಜನ್ಮಾ । ಭೂತಾಪ್ರತೀ ॥ ೮೭ ॥ ತುಮ್ಹಾ ವರ್ಣ ವಿಶೇಷವಶೇ । ಆಮ್ಹೀ ಹಾ ಸ್ವಧರ್ಮ ವಿಹಿಲಾ ಅಸೇ । ಯಾತೇ ಉಪಾಸಾ ಮಗ ಆಪೈಸೇ । ಪುರತೀ ಕಾಮ ॥ ೮೮ ॥ ತುಮ್ಹೀ ವ್ರತನಿಯಮು ನ ಕರಾವೇ । ಶರೀರಾತೇ ನ ಪೀಡಾವೇ । ದೂರೀ ಕೇಹೀ ನ ವಚಾವೇ । ತೀರ್ಥಾಸೀಗಾ ॥ ೮೯ ॥ ಯೋಗಾದಿಕೇ ಸಾಧನೇ । ಸಾಕಾಂಕ್ಷ ಆರಾಧನೇ । ಮಂತ್ರಯಂತ್ರ ವಿಧಾನೇ । ಝುಣೀಕರಾ ॥ ೯೦ ॥ ದೇವತಾಂತರಾ ನ ಭಜಾವೇ । ಹೇ ಸರ್ವಥಾ ಕಾಹೀ ನ ಕರಾವೇ । ತುಮ್ಹೀ ಸ್ವಧರ್ಮಯಜ್ಞೀಯ ಜಾವೇ । ಅನಾಯಾಸೇ ॥ ೯೧ ॥ ಅಹೇತುಕೇ ಚಿತ್ತೇ । ಅನುಷ್ಠಾಪಾ ಯಾತೇ । ಪತಿವ್ರತಾ ಪತೀತೇ । ಜಿಯಾಪರೀ ॥ ೯೨ ॥ ತೈಸಾ ಸ್ವಧರ್ಮರೂಪ ಮಖ । ಹಾಚಿ

ಸೇವ್ಯ ತುಮ್ಹಾ ಏಕ । ಐಸೇ ಸತ್ಯಲೋಕನಾಯಕ । ಬೋಲತಾ ಜಾಹಲಾ ॥ ೯೩ ॥ ದೇಖಾ ಸ್ವಧರ್ಮಾತೇ ಭಜಾಲ । ತರೀ ಕಾಮಧೇನು ಹಾ ಹೋಈಲ । ಮಗ ಪ್ರಜಾಹೋ ನ ಸಂಡೀಲ । ತುಮತೇ ಕದಾ ॥ ೯೪ ॥

**ಅರ್ಥ—** ಆ ಕಾಲದಲ್ಲಿ ಪ್ರಾಣಿಗಳನ್ನೂ ಮತ್ತು ಅವರು ನಿತ್ಯ ಆಚರಣಮಾಡುವ ಧರ್ಮಗಳನ್ನೂ ಒಂದೇ ಕಾಲಕ್ಕೆ ನಿರ್ಮಾಣಮಾಡಿದನು. ಆದರೆ ಅದು ಗಹನವಾದುದರಿಂದ ಪ್ರಾಣಿಗಳಿಗೆ ತಿಳಿಯಲಿಲ್ಲ. ॥ ೮೬ ॥ ಆಗ್ಗೆ ಪ್ರಜಗಳು ಬ್ರಹ್ಮನನ್ನು ಕುರಿತು ಹೀಗೆ ಬೇಡಿಕೊಂಡರು— "ದೇವಾ, ಇಲ್ಲಿ ನಮಗೆ ತರಣೋಪಾಯವಾಗಲಿಕ್ಕೆ ಯಾವ ಆಧಾರವಿರುವದೆಂದು ಕೇಳಲು, ಕಮಲೋದ್ಭವ (ಬ್ರಹ್ಮ ನು ಅನ್ನುತ್ತಾನೆ- ॥ ೮೭ ॥ ನಿಮಗೆ ನಿಮ್ಮ ವರ್ಣಾಶ್ರಮದ ಪ್ರಕಾರ ನಾವು ಮೊದಲಿಗೇನೇ ಧರ್ಮನಿಯಮವನ್ನು ಮಾಡಿಕೊಟ್ಟದ್ದೇವೆ. ಆ ಪ್ರಕಾರಾ ನೀವು ವರ್ಣಾಶ್ರಮಕ್ಕೆ ಉಚಿತವಾದ ಆಚರಣೆ ಮಾಡಿದರೆ ನಿಮ್ಮ ಮನೋರಥವು ಸಿದ್ಧಿಗೆ ಹೋಗುವದು. ॥ ೮೮ ॥ ನೀವು ವ್ರತನಿಯಮಗಳನ್ನು ಮಾಡಬಾರದು. ಶರೀರವನ್ನು ಉಪವಾಸ ಮುಂತಾದವುಗಳಿಂದ ಕಷ್ಟಬಡಿಸಬೇಡಿರಿ. ಮತ್ತು ತೀರ್ಥಯಾತ್ರೆಯುಸಲುವಾಗಿ ದೂರ ಎಲ್ಲಿಗೂ ಹೋಗುವ ಶ್ರಮವನ್ನು ವಹಿಸಬೇಡಿರಿ. ॥ ೮೯ ॥ ಯೋಗ ಮುಂತಾದ ಸಾಧನಗಳೂ, ಕಾಮನಾಯುಕ್ತವಾದ ಆರಾಧನೆಗಳೂ ಮತ್ತು ಮಂತ್ರ ತಂತ್ರ ಮುಂತಾದ ಅನುಷ್ಠಾನಗಳೂ ಮಾಡುವ ವ್ಯಸನಗಳಲ್ಲಿ ಬೀಳಬೇಡಿರಿ. ೯೦ ॥ ಅದರಂತೆಯೇ ಅನ್ಯದೇವತೆಗಳನ್ನು ಭಜಿಸಬೇಕಾಗಿರುವದಿಲ್ಲ. ಈ ಯಾವದನ್ನೂ ನೀವು ಮಾಡುವ ಕಾರಣವಿಲ್ಲ. ನೀವು ನಿಮ್ಮ ವರ್ಣಾಶ್ರಮದ ಪ್ರಕಾರ ಉಚಿತವಾದ ಕರ್ಮವನ್ನು ಸಂತೋಷದಿಂದ ಆಚರಣೆ ಮಾಡಬೇಕು. ॥ ೯೧ ॥ ಯಾವ ಪ್ರಕಾರ ಪತಿವ್ರತಾ ಸ್ತ್ರೀಯು ತನ್ನ ಪತಿಯ ಸೇವೆಯನ್ನು ನಿಷ್ಕಾಮ ಬುದ್ಧಿಯಿಂದ ಮಾಡುತ್ತಾಳೋ ಅದೇ ಪ್ರಕಾರ ನೀವು ನಿಮ್ಮ ಸ್ವಧರ್ಮವನ್ನು ನಿಷ್ಕಾಮ ಬುದ್ಧಿಯಿಂದಆಚರಿಸಬೇಕು ॥ ೯೨ ॥ ಸ್ವಧರ್ಮ ಆಚರಣವು ಇದೇ ಒಂದು ನಿಮಗೆ ಯಜ್ಞವಾಗಿರುವದು. ಕಾರಣ ಅದರ ಆಚರಣೆಯನ್ನು ಮಾಡಬೇಕೆಂದು ಸತ್ಯಲೋಕನಾಯಕನಾದ ಬ್ರಹ್ಮದೇವನು ಹೇಳುತ್ತಾನೆ. ॥೯೩॥ ಪ್ರಾಣಿಗಳಿರಾ, ಹೀಗೆ ನೋಡಿರಿ ನೀವು ಸ್ವಧರ್ಮದಿಂದ ನಡೆದರೆ ಅದು ಕಾಮಧೇನುವಿನಂತೆ ನಿಶ್ಚಯವಾಗಿ ಫಲ ವನ್ನು ಕೊಡುವಂಥಾದ್ದಾಗುವದು ಆಮೇಲೆ ಅದು ನಿಮ್ಮನ್ನು ಯಾವಾಗ್ಯೂ ಬಿಡಲಾರದು. ॥ ೯೪ ॥

**ದೇವಾನ್ಭಾವಯತಾನೇನ ತೇ ದೇವಾ ಭಾವಯಂತು ವಃ ।**
**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**

**[ ದೇವಾನಿತಿ ]** ಜೈ ಯೇಣೇ ಕರೂನಿ ಸಮಸ್ತಾ । ಪರಿತೋಷ ಹೊಈಲ ದೇವತಾ । ಮಗ ತೇ ತುಮ್ಹಾ ಈಪ್ಸಿತಾ । ಅರ್ಥಾತೇ ದೇತೀ ॥ ೯೫ ॥ ಯಾ ಸ್ವಧರ್ಮ ಪೂಜಾ ಪೂಜಿತಾ । ದೇವತಾಗಣಾ ಸಮಸ್ತಾ । ಯೋಗಕ್ಷೇಮ ನಿಶ್ಚಿತಾ । ಕರಿತೀ ತುಮಚಾ ॥ ೯೬ ॥ ತುಮ್ಹೀ ದೇವಾತೇ ಭಜಾಲ । ದೇವ ತುಮ್ಹಾ ತುಷ್ಟತೀಲ । ಐಸೀ ಪರಸ್ಪರೇ ಘಡೇಲ । ಪ್ರೀತಿ ಜೇಥ ॥ ೯೭ ॥ ತೇಥ ತುಮ್ಹಿ ಜೇ ಕರೂ ಮ್ಹಣಾಲ । ತೇ ಆಪೈಸೇ ಸಿದ್ಧೀ ಜಾಈಲ । ವಾಂಛಿತ ಹೀ ಪುರೇಲ । ಮಾನಸೀಚೆ ॥ ೯೮ ॥ ವಾಚಾ ಸಿದ್ಧೀ ಪಾವಾಲ । ಆಜ್ಞಾಪಕ ಹೋಆಲ । ಮ್ಹಣಿಯೇ ತುಮತೇ ಮಾಗತೀಲ । ಮಹಾ ಋದ್ಧಿ ॥ ೯೯ ॥ ಜೈಸೇ ಋತು ಪತೀಚೇ ದ್ವಾರ । ವನಶ್ರೀ ನಿರಂತರ । ವೋಳಗೇ ಫಳಭಾರ । ಲಾವಣ್ಯೇಸೀ ॥ ೧೦೦ ॥

**ಅರ್ಥ—** ಈ ಸ್ವಧರ್ಮಾಚರಣೆಯಿಂದ ಸರ್ವದೇವತಾಗಣಗಳು ಸಂತೋಷ ಹೊಂದುತ್ತವೆ. ಆ ಮೇಲೆ ಆ ದೇವತೆಗಳು ನಿಮಗೆ ಇಚ್ಛಿಸಿದ ಫಲಗಳನ್ನು ಕೊಡುವವು. ॥ ೯೫ ॥ ಈ ಸ್ವಧರ್ಮಾಚರಣರೂಪೀ ಪೂಜೆ ಯಿಂದ ಸರ್ವದಾ ಸರ್ವದೇವತಾಗಣಗಳ ಆರಾಧನೆಯಿಂದ ನಿಮಗೆ ಆ ದೇವತೆಗಳು ಅಪ್ರಾಪ್ಯವಸ್ತುವಿನ

ಪ್ರಾಪ್ತಿ ಮಾಡಿಕೊಟ್ಟು ಪ್ರಾಪ್ತವಸ್ತುವಿನ ಸಂರಕ್ಷಣೆಯನ್ನು ನಿಶ್ಚಯವಾಗಿ ಮಾಡುವವು. ॥ ೯೬ ॥ ನೀವು ದೇವರನ್ನು ಭಜಿಸಿದರೆ ದೇವರಾದರೂ ನಿಮ್ಮ ಮೇಲೆ ಸಂತುಷ್ಟನಾಗುವನು. ಹೀಗೆ ಒಬ್ಬರೊಬ್ಬರಲ್ಲಿ ಯಾವಾಗ ಪ್ರೇಮ ವುಂಟಾಗುವದೋ, ॥ ೯೭ ॥ ಆವಾಗ ನೀವು ಏನು ಮಾಡಬೇಕೆನ್ನುವಿರೋ ಅದು ಸಹಜವೇ ಸಿದ್ಧಿ ಹೊಂದುವದು. ಮತ್ತು ನಿಮ್ಮ ಮನಸಿನೊಳಗಿನ ಸರ್ವ ವಾಸನೆಗಳೂ ಪೂರ್ಣವಾಗುವವು. ॥ ೯೮ ॥ ನಿಮ್ಮ ಮುಖದಿಂದ ಮಾತನಾಡಿದುದೆಲ್ಲವೂ ಸಿದ್ಧಿ ಹೊಂದುವದು. ಮತ್ತು ನೀವು ಎರಡನೇದವರಿಗೆ ಆಜ್ಞೆಮಾಡುವಷ್ಟು ಯೋಗ್ಯತೆಯುಳ್ಳವರಾಗುವಿರಿ ಮತ್ತು ಅಷ್ಟಮಹಾಸಿದ್ಧಿಗಳು ಯಾವಾಗಲೂ ನಿಮ್ಮ ಆಜ್ಞೆಯಲ್ಲಿದ್ದು "ಸೇವಾ ತೆಗೆದು ಕೊಳ್ಳಿರಿ" ಎಂದು ನಿಮ್ಮ ಮುಂದೆ ನಿಲ್ಲುವವು. ॥ ೯೯ ॥ ವಸಂತಋತುವಿನ ದ್ವಾರದಲ್ಲಿ ಯಾವ ಪ್ರಕಾರ ವನಶೋಭೆಯು ತನ್ನ ಫಲಪುಷ್ಪಗಳ ಭಾರದಿಂದ ಸೌಂದರ್ಯಉಳ್ಳದ್ದಾಗಿ ನಿರಂತರವಾಸಮಾಡುತ್ತದೊ, ॥ ೧೦೦ ॥

**ಇಷ್ಟಾನ್ಭೋಗಾನ್ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ॥**
**ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨ ॥**

**[ ಇಷ್ಟಾನಿತಿ ]** ತೈಸೇ ಸರ್ವ ಸುಖೇ ಸಹಿತ । ದೈವಚಿ ಮೂರ್ತಿಮಂತ । ಯೇಈಲ ದೇಖಾ ಕಾಢತ । ತುಮ್ಹಾ ಪಾಶೀ ॥ ೧ ॥ ಐಸೇ ಸಮಸ್ತ ಭೋಗ ಭರಿತ । ಹೋಆಲ ತುಮ್ಹೀ ಅನಾರ್ತ । ಜರೀ ಸ್ವಧರ್ಮೈಕನಿರತ । ವರ್ತಾಲ ಬಾಪಾ ॥ ೨ ॥ ಕೀ ಜಾಲಿಯಾ ಸಕಳ ಸಂಪದಾ । ಜೋ ಅನುಸರೇಲ ಇಂದ್ರಿಯಮದಾ । ಲುಬ್ಧ ಹೋವೂನಿಯಾ ಸ್ವಾದಾ । ವಿಷಯಾಚಿಯಾ ॥ ೩ ॥ ತಿಹೀ ಯಜ್ಞ ಭಾವಿತೀ ಸುರೀ । ಜೇಹೇ ಸಂಪತ್ತಿ ದಿಧಲೀ ಪುರೀ । ತಯಾ ಸ್ವಧರ್ಮಿ ಸರ್ವೇಶ್ವರೀ । ನ ಭಜೇಲ ಜೋ ॥ ೪ ॥ ಅಗ್ನಿಮುಖೀ ಹವನ । ನಕರೀಲ ದೇವತಾ ಪೂಜನ । ಪ್ರಾಪ್ತವೇಳೇ ಭೋಜನ । ಬ್ರಾಹ್ಮಣಾಚೇ ॥ ೫ ॥ ವಿಮುಖ ಹೋಈಲ ಗುರುಭಕ್ತೀ । ಆದರ ನ ಕರೀಲ ಅತಿಥೀ । ಸಂತೋಷ ನೇದೀಲ ಜ್ಞಾತೀ । ಆಪುಲಿಯೇ ॥ ೬ ॥ ಐಸಾ ಸ್ವಧರ್ಮ ಕ್ರಿಯಾ ರಹಿತ । ಆಥಿಲೇಪಣೇ ಗರ್ವಿತ । ಕೇವಳ ಭೋಗಾಸಕ್ತ । ಹೋಈಲ ಜೋ ॥ ೭ ॥ ತಯಾ ಮಗ ಅಪಾವೋ ಥೋರ ಆಹೇ । ಜೇಣೇ ತೇ ಹಾತೀಚೇ ಸಕಳ ಜಾಯೇ । ದೇಖಾ ಪ್ರಾಪ್ತಹೀನ ಲಾಹೇ । ಭೋಗ ಭೋಗೂ ॥ ೮ ॥ ಜೈಸೇ ಗತಾಯು ಶರೀರೀ । ಚೈತನ್ಯ ವಾಸ ನ ಕರೀ । ಕಾ ನಿದೈವಾಚ್ಯಾ ಘರೀ । ನ ರಾಹೇ ಲಕ್ಷ್ಮೀ ॥ ೯ ॥ ತೈಸಾ ಸ್ವಧರ್ಮ ಜರೀ ಲೋಪಲಾ । ತರೀ ಸರ್ವ ಸುಖಾಚಾ ಥಾರಾ ಮೋಡಲಾ । ಜೈಸಾ ದೀಪಾಸವೇ ಹರಪಲಾ । ಪ್ರಕಾಶ ಜಾಯ ॥ ೧೦ ॥ ತೈಸೀ ನಿಜವೃತ್ತಿ ಜೇಥ ಸಾಂಡೇ । ತೇಥ ಸ್ವತಂತ್ರತೇ ವಸ್ತೀ ನಘಡೇ । ಆಇಕಾ ಪ್ರಜಾ ಹೋಘಡೇ । ವಿರಂಚಿ ಮ್ಹಣೇ ॥ ೧೧ ॥ ಮ್ಹಣವೂನಿ ಸ್ವಧರ್ಮ ಜೋ ಸಾಂಡೀಲ । ತಯಾತೇ ಕಾಳ ದಂಡೀಲ । ಚೋರ ಮ್ಹಣೂನಿ ಹರೀಲ । ಸರ್ವಸ್ವ ತಯಾಚೇ ॥ ೧೨ ॥ ಮಗ ಸಕಳ ದೋಷ ಭವತೇ । ಗಿವಸೋನಿ ಘೇತೀ ತಯಾತೇ । ರಾತ್ರಿ ಸಮಯೀ ಶ್ಮಶಾನಾತೇ । ಭೂತೇ ಜೈಸೀ ॥ ೧೩ ॥ ತೈಸೀ ತ್ರಿಭುವನೀಚೀ ದುಃಖೇ । ಆಣಿ ನಾನಾ ವಿಧೆ ಪಾತಕೇ । ದೈನ್ಯ ಜಾತ ತಿತುಕೇ । ತೇಥೇಚಿ ವಸೇ ॥ ೧೪ ॥ ಐಸೇ ಹೋಯ ತಯಾ ಉನ್ಮತ್ತಾ । ಮಗ ನ ಸುಟೇ ಬಾಪಾ ರುದತಾ । ಕಲ್ಪಾಂತೀಹೀ ಸರ್ವಥಾ । ಪ್ರಾಣಿಗಣ ಹೋ ॥ ೧೫ ॥ ಮ್ಹಣವೂನಿ ನಿಜವೃತ್ತಿ ಹೇನ ಸಾಂಡಾವೀ । ಇಂದ್ರಿಯೇ ಬರಳೋ ನೇದಾವೀ । ಐಸೇ ಪ್ರಜಾತೇ ಶಿಕವೀ । ಚತುರಾನನ ॥ ೧೬ ॥ ಜೈಸೇ ಜಳಚರಾ ಜಳ ಸಾಂಡೇ । ಮಗ ತತ್ಕ್ಷಣೀ ಮರಣ ಮಾಂಡೇ । ಹಾ ಸ್ವಧರ್ಮ ತೇಣೇ ಪಾಡೇ । ವಿಸಂಬೋ ನಯೇ ॥ ೧೭ ॥ ಮ್ಹಣೋನಿ ತುಮ್ಹೀ ಸಮಸ್ತೀ । ಆಪುಲಾಲಿಯಾ ಕರ್ಮಿ ಉಚಿತೀ । ನಿರತ ವ್ಹಾವೇ ಪುಢತ ಪುಢತೀ । ಮ್ಹಣಿಪತ ಅಸೇ ॥ ೧೮ ॥

ವೆಚ್ಚಮಾಡಿ ಉಳಿದದ್ದನ್ನು ಸಂತೋಷದಿಂದ ಭೋಗಿಸಬೇಕು. ॥ ೨೫ ॥ ಇದರ ಹೊರತು ಮನುಷ್ಯನು ಅನ್ಯ ಮಾರ್ಗವನ್ನು ಅವಲಂಬನ ಮಾಡಿ ನಡೆಯಬಾರದೆಂಬ ಈ ಪುರಾತನ ಕಥೆಯನ್ನು ಆ ಮುರವೈರಿಯಾದ ಶ್ರೀ ಕೃಷ್ಣಪರಮಾತ್ಮನು ಅರ್ಜುನನ ಮುಂದೆ ಹೇಳಿದನು. ॥ ೨೬ ॥ ಯಾವನು ಈ ಶರೀರವೇ ಆತ್ಮವೆಂದು ಭಾವಿಸುವನೋ ಮತ್ತು ವಿಷಯ ಭೋಗವೇ ಭೋಗ್ಯವೆಂದು ತಿಳಿಯುವನೋ ಮತ್ತು ಇದನ್ನುಳಿದು ಅನ್ಯಯಾವುದನ್ನೂ ಸ್ಮರಣೆಗೆ ತರುವದಿಲ್ಲವೋ, ॥ ೨೭ ॥ ಮತ್ತು ಯಾವನು ಈ ಎಲ್ಲವೂ ಯಜ್ಞ ಸಾಮಗ್ರಿಗಳಿರುವವೆಂದು ತಿಳಿಯದೇ ಅಜ್ಞಾನದಿಂದ ಕೂಡಿದವನಾಗಿ ಭ್ರಾಂತಿಷ್ಟನಾಗಿರುತ್ತಾನೋ ಮತ್ತು ಯಾವನು ಅಹಂಕಾರ ಬುದ್ಧಿಯಿಂದ ಕೇವಲ ವಿಷಯೋಪಭೋಗವನ್ನು ಭೋಗಿಸುವದರ ಕಡೆಗೆಯೇ ದೃಷ್ಟಿಯನ್ನಿಡುತ್ತಾನೋ, ॥ ೨೮ ॥ ಮತ್ತು ಯಾವನು ಇಂದ್ರಿಯಗಳ ರುಚಿಯಂತೆ ತನಗೆ ಪ್ರೀಯವಾದ ಉತ್ತಮೋತ್ತಮವಾದ ಪಕ್ವಾನ್ನಗಳನ್ನು ಸಿದ್ಧಪಡಿಸಿ ತಾನೇ ಉಣ್ಣುವನೋ, ಇಂತಹ ಪಾಪಿಯು ಪಾಪವನ್ನೇ ಭುಂಜಿಸುತ್ತಾನೆಂದು ತಿಳಿ. ॥ ೨೯ ॥ ಈ ಸರ್ವಸಂಪತ್ತು ಸ್ವಧರ್ಮರೂಪಿ ಯಜ್ಞದ ಹವನದ್ರವ್ಯವಾಗಿರುತ್ತದೆಂದು ತಿಳಿದು ಸ್ವಧರ್ಮ ಯಜ್ಞದಿಂದಲೇ ಆದಿಪುರುಷ ಭಗವಂತನಿಗೆ ಅರ್ಪಣ ಮಾಡಬೇಕು. ॥ ೧೩೦ ॥ ಇದನ್ನೆಲ್ಲವನ್ನು ಬಿಟ್ಟು ಮೂರ್ಖ ಜನರು ತಮ್ಮ ಸ್ವಂತದ ದೆಸೆಯಿಂದಲೇ ತರತರದ ಪದಾರ್ಥಗಳನ್ನು ಅಡಿಗೆ ಮಾಡಿಸುತ್ತಾರೆ. ॥ ೩೧ ॥ ಯಾವ ಅನ್ನದಿಂದ ಯಜ್ಞ ಸಿದ್ಧವಾಗುತ್ತದೋ, ಮತ್ತು ಭಗವಾನ್ ಪರಮೇಶ್ವರನು ಸಂತೋಷಉಳ್ಳವನಾಗುತ್ತಾನೋ, ಆ ಅನ್ನವು ಸಾಮಾನ್ಯವಾದದ್ದಲ್ಲ. ಆದ್ದರಿಂದ ॥ ೩೨ ॥ ಈ ಅನ್ನಕ್ಕೆ ಸಾಮಾನ್ಯವೆಂದು ತಿಳಿಯದೇ ಅದು ಬ್ರಹ್ಮ ಸ್ವರೂಪವಾಗಿರುವದೆಂದು ತಿಳಿ. ಕಾರಣ ಇದು ಸರ್ವ ಜಗತ್ತಿನ ಜೀವನಾಧಾರವೇ ಆಗಿರುತ್ತದೆ. ॥ ೩೩ ॥

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನ ಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರ ಸಮುದ್ಭವಂ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫ ॥**

**[ ಅನ್ನಾದಿತಿ ]** ಅನ್ನಾಸ್ತವ ಭೂತೇ । ಪ್ರರೋಹ ಪಾವತೀ ಸಮಸ್ತೇ । ಮಗ ಪರ್ಜನ್ಯ ಯ ಅನ್ನಾತೇ । ಸರ್ವತ್ರ ಪ್ರಸವೇ ॥ ೩೪ ॥ ತಯಾ ಪರ್ಜನ್ಯಾ ಯಜ್ಞೀ ಜನ್ಮ । ಯಜ್ಞಾತೇ ಪ್ರಗಟೀ ಕರ್ಮ । ಕರ್ಮಾಸಿ ಆದಿಬ್ರಹ್ಮ । ವೇದರೂಪ ॥ ೩೫ ॥ ಮಗ ವೇದಾಂತೇ ಪರಾತ್ಪರ । ಪ್ರಸವತಸೇ ಅಕ್ಷರ । ಮ್ಹಣವುನಿ ಹೇ ಚರಾಚರ । ಬ್ರಹ್ಮ ಬದ್ಧ ॥ ೩೬ ॥ ಪರೀ ಕರ್ಮಾಚಿ ಯೇ ಮೂರ್ತಿ । ಯಜ್ಞೀ ಅಧಿವಾಸ ಶ್ರುತಿ ! । ಐಕೇ ಸುಭದ್ರಾಪತಿ । ಅಖಂಡ ಗಾ ॥ ೩೭ ॥

**ಅರ್ಥ—** ಅನ್ನದಿಂದ ಪ್ರಾಣಿಮಾತ್ರಗಳ ಉತ್ಪತ್ತಿಯಾಗುತ್ತದೆ. ಮತ್ತು ಪರ್ಜನ್ಯದಿಂದ ಸರ್ವಸ್ಥಳದಲ್ಲಿ ಅನ್ನವು ಉತ್ಪನ್ನವಾಗುತ್ತದೆ. ॥ ೩೪ ॥ ಆ ಪರ್ಜನ್ಯದ ಉತ್ಪತ್ತಿಯು ಯಜ್ಞದಿಂದ ಉಂಟಾಗಿ ಯಜ್ಞದ ಉತ್ಪತ್ತಿಯು ಕರ್ಮದಿಂದ ಆಗುತ್ತದೆ. ಕರ್ಮದ ಉದ್ಭವವು ವೇದರೂಪ ಬ್ರಹ್ಮನಿಂದ ಆಗುತ್ತದೆ. ॥ ೩೫ ॥ ಮತ್ತು ಆ ವೇದದ ಉತ್ಪತ್ತಿಯು ಪರಮಾತ್ಮನಿಂದ ಆಗುತ್ತದೆ. ಆದುದರಿಂದ ಈ ಸರ್ವ ಜಗತ್ತು ಪರಮಾತ್ಮನಿಂದ ಉತ್ಪನ್ನವಾಗಿರುತ್ತದೆ. ॥ ೩೬ ॥ ಆದರೆ ಹೇ ಸುಭದ್ರಾಪತಿಯಾದ ಅರ್ಜುನನೇ ಕೇಳು. ಕರ್ಮರೂಪೀಯಜ್ಞದಲ್ಲಿ ಮೂರ್ತಿಮಂತ ವೇದಸ್ವರೂಪನಾದ ಬ್ರಹ್ಮನು ನಿರಂತರ ವಾಸಮಾಡುತ್ತಾನೆ. ॥ ೩೭ ॥

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋಮೋಘಂ ಪಾರ್ಥ ಸಜೀವತಿ ॥ ೧೬ ॥**

**[ ಏವಂ ಪ್ರವರ್ತಿತಮಿತಿ ]** ಐಸೀ ಹೇ ಆದೀ ಪರಂಪರಾ । ಸಂಕ್ಷೇಪೇ ತುಜ ಧನುರ್ಧರಾ । ಸಾಂಗಿತಲೀ ಯಾ ಅಧ್ವರಾ । ಲಾಗೂನಿಯಾ ॥ ೩೮ ॥ ಮ್ಹಣೂನಿ ಸಮೂಳ ಹಾ ಉಚಿತು । ಸ್ವಧರ್ಮ

ರೂಪ ಕ್ರತು । ನಾನುಷ್ಠೀ ಜೋ ಮತ್ತ । ಲೋಕೀ ಇಯೇ ॥ ೩೯ ॥ ತೋ ಪಾತಕಾಚೀ ರಾಶೀ । ಜಾಣ ಭಾರ ಭೂಮೀಸೀ । ಜೊ ಕುಕರ್ಮೇ ಇಂದ್ರಿಯಾಸೀ । ಉಪೇಗಾ ಗೇಲಾ ॥ ೧೪೦ ॥ ತೇ ಜನ್ಮ ಕರ್ಮ ಸಕಳ । ಅರ್ಜುನಾ ಅತಿ ನಿಷ್ಫಳ । ಜೈಸೇ ಕೀ ಅಭ್ರಪಟಳ । ಅಕಾಳೀಚೆ ॥ ೪೧ ॥ ಕಾ ಗಳಾ ಸ್ತನ ಅಜೇಚೇ । ತೈಸೇ ಜಿಯಾಲೇ ದೇಖೇ ತಯಾಚೇ । ಜಯಾ ಅನುಷ್ಠಾನ ಸ್ವಧರ್ಮಾಚೇ । ಘಡೇಚಿನಾ ॥ ೪೨ ॥ ಮ್ಹಣೋನಿ ಐಕೇ ಪಾಂಡವಾ । ಹಾ ಸ್ವಧರ್ಮು ಕವಣೇ ನ ಸಂಡಾವಾ । ಸರ್ವಭಾವೇ ಭಜಾವಾ । ಹಾಚಿ ಏಕ ॥ ೪೩ ॥ ಹಾ ಗಾ ಶರೀರ ಜರೀ ಜಾಹಲೇ । ತರೀ ಕರ್ತವ್ಯ ವೋಘೇ ಆಲೇ । ಮಗ ಉಚಿತ ಕಾ ಆಪಲೇ । ವೋಸಂಡಾವೇ ॥ ೪೪ ॥ ಪರಿಸ ಪಾ ಸವ್ಯಸಾಚೀ । ಮೂರ್ತಿ ಲಾಹೋನಿ ದೇಹಾಚೀ । ಖಂತೀ ಕರಿತೀ ಕರ್ಮಾಚೀ । ತೇ ಗಾವಢೇಗಾ ॥ ೪೫ ॥

**ಅರ್ಥ**— ಹೀಗೆ ಈ ಪೂರ್ವಪರಂಪರೆಯಿಂದ ನಡೆದುಬಂದ ಸ್ವಧರ್ಮರೂಪೀ ಯಜ್ಞದ ಮೂಲ ಪೀಠಿಕೆಯನ್ನು ಧನುರ್ಧರನೇ ನಿನಗೆ ಸಂಕ್ಷೇಪವಾಗಿ ಹೇಳಿದ್ದೇನೆ. ॥ ೩೮ ॥ ಆದ್ದರಿಂದ ಉಚಿತವಾದೀ ಸ್ವಧರ್ಮರೂಪೀ ಯಜ್ಞವನ್ನು ಈ ಲೋಕದಲ್ಲಿ ಯಾವ ಉನ್ಮತ್ತ ಮನುಷ್ಯನು ಆಚರಣೆಯನ್ನು ಮಾಡುವದಿಲ್ಲವೋ, ॥ ೩೯ ॥ ಯಾವನು ಶಾಸ್ತ್ರವಿರುದ್ಧವಾದ ಕುಕರ್ಮದಲ್ಲಿ ಇಂದ್ರಿಯಗಳನ್ನು ಉಪಯೋಗಮಾಡಿ ಆ ಇಂದ್ರಿಯಗಳಿಗೆ ಮನಬಂದಂತೆ ವಿಷಯಸುಖವನ್ನು ಪೂರೈಸುವದರಲ್ಲಿಯೇ ತನ್ನ ಕಾಲವನ್ನು ಕಳೆಯುತ್ತಾನೋ ಆ ದುರಾಚಾರಿಯು ಪಾತಕದ ರಾಶಿಯೇ ಆಗಿರುವನು. ಮತ್ತು ಭೂಮಿಗೆ ಭಾರವಾಗಿರುವನು. ॥ ೧೪೦ ॥ ಅಕಾಲದಲ್ಲಿ ಆಕಾಶದಲ್ಲಿ ಉತ್ಪನ್ನವಾದ ಮೋಡಗಳು ನಿರರ್ಥಕವಾಗಿರುವವು. ಅದರಂತೆಯೇ ಅರ್ಜುನನೇ, ಆ ಉನ್ಮತ್ತ ಮನುಷ್ಯನು ಜನ್ಮದಾರಭ್ಯ ಮಾಡಿದ ಕರ್ಮಗಳು ನಿಷ್ಫಲಹೊಂದುತ್ತವೆ. ॥ ೧೪೧ ॥ ಯಾವನ ಸ್ವಧರ್ಮದ ಅನುಷ್ಠಾನವು ಲೇಶಮಾತ್ರವೂ ಸಾಧಿಸುವದಿಲ್ಲವೋ ಅವನ ಜೀವಿತವು ಆಡಿನ ಕೊಳಮಲಿಯಂತೆ ವ್ಯರ್ಥವಾಗಿರುವದು. ॥ ೪೨ ॥ ಆದ್ದರಿಂದ ಪಾಂಡುನಂದನನೇ ಕೇಳು ಸ್ವಧರ್ಮವನ್ನು ಯಾರೂ ಬಿಡಬಾರದು. ಮತ್ತು ಇದರಲ್ಲಿಯೇ ಸಂಪೂರ್ಣವಾಗಿ ಪ್ರೀತಿಯನ್ನಿಟ್ಟು ಇದನ್ನೇ ಆಚರಣೆಮಾಡಬೇಕು. ॥ ೪೩ ॥ ಹೀಗೆ ನೋಡು, ನಮಗೆ ಶರೀರವು ಪ್ರಾಪ್ತವಾಗಿರಲು ಪೂರ್ವ ಕರ್ತವ್ಯಕರ್ಮ ಇದು ಓಘದಿಂದ ಬಂದೇ ಅದೆ. ಹೀಗಿದ್ದ ಬಳಿಕ ಶಾಸ್ತ್ರಸಮ್ಮತವಾದ ವಿಹಿತಕರ್ಮವನ್ನು ಯಾಕೆ ಬಿಡಬೇಕು? ॥ ೪೪ ॥ ಎಲೋ ಸವ್ಯಸಾಚಿಯೇ, ಈ ಮನುಷ್ಯದೇಹವು ಪ್ರಾಪ್ತವಾಗಿರಲು ಉಚಿತಕರ್ಮವನ್ನು ಮಾಡಲು ಯಾವನು ಬೇಸರಗೊಳ್ಳುವನೋ ಅವನು ಮೂರ್ಖನೆಂದು ತಿಳಿ ॥ ೪೫ ॥

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

[ **ಯಸ್ತ್ವಿತಿ** ] ದೇಖೇ ಅಸತೇನಿ ದೇಹಧರ್ಮೇ । ಏಥ ತೋಚಿ ಏಕ ನ ಲಿಂಪೇ ಕರ್ಮೇ । ಜೋ ಅಖಂಡಿತ ರಮೇ । ಆಪಣಪೇ ॥ ೪೬ ॥ ಜೇ ತೋ ಆತ್ಮಬೋಧೇ ತೋಷಲಾ । ತರೀ ಕೃತಕಾರ್ಯ ದೇಖ ಜಾಹಲಾ । ಮ್ಹಣೋನಿ ಸಹಜೇ ಸಾಂಡವಲಾ । ಕರ್ಮಸಂಗಾ ॥ ೪೭ ॥

**ಅರ್ಥ**— ಹೀಗೆ ನೋಡು, ಯಾವ ಪುರುಷನು ಆತ್ಮಸ್ವರೂಪದಲ್ಲಿ ನಿಮಗ್ನನಾಗಿರುವನೋ ಅವನ ದೇಹವ್ಯಾಪಾರವು ನಡೆಯುತ್ತಿದ್ದಾಗ್ಯೂ ಅವನು ಕರ್ಮದಿಂದ ಲಿಪ್ತನಾಗುವದಿಲ್ಲ. ॥ ೪೬ ॥ ಕಾರಣ ಅವನು ಆತ್ಮಬೋಧೆಯಿಂದ ಆತ್ಮರತನೂ, ಆತ್ಮತೃಪ್ತನೂ, ಆತ್ಮಸಂತುಷ್ಟನೂ ಆಗಿರುವನು. ಆದುದರಿಂದ ಅವನು ಕೃತಕಾರ್ಯನೇ ಆಗಿರುತ್ತಾನೆ. ಆ ಮೇಲೆ ಅವನಿಗೆ ಕರ್ತವ್ಯವೆಂಬುದು ಉಳಿಯುವದೇ ಇಲ್ಲ. ಸಹಜವೇ ಅವನು ಕರ್ಮಸಂಗದಿಂದ ಮುಕ್ತನಾಗುತ್ತಾನೆ. ॥ ೪೭ ॥

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವ ಭೂತೇಷು ಕಶ್ಚಿದರ್ಥ ವ್ಯಪಾಶ್ರಯಃ ॥ ೧೮ ॥**

**[ ನೈವ ತಸ್ಯೇತಿ ]** ತೃಪ್ತಿ ಜಾಲಿಯಾ ಜೈಸೀ । ಸಾಧನೇ ಸರತೀ ಆಪೈಸೀ । ದೇಖೇ ಆತ್ಮತುಷ್ಟೀ ತೈಸೀ । ಕರ್ಮ ನಾಹೀ ॥ ೪೮ ॥ ಜಂವವರೀ ಅರ್ಜುನಾ । ತೋ ಬೋಧ ಭೇಟೇನಾ ಮನಾ । ತವಚಿ ಯಾ ಸಾಧನಾ । ಭಜಾವೇ ಲಾಗೇ ॥ ೪೯ ॥

**ಅರ್ಥ**— ಯಾವ ಪ್ರಕಾರ ಹೊಟ್ಟೆತುಂಬಿ ತೃಪ್ತಿಯಾದ ಮೇಲೆ ಅದರ ಸಾಧನಗಳಾದರೂ (ಅಡಿಗೆ ಮುತಾದ್ದು ಮಾಡಿ ಕಷ್ಟಪಡುವದು) ತಮ್ಮಿಂದ ತಾವೇ ನಿಂತುಹೋಗುತ್ತವೆ. ಅದೇ ಪ್ರಕಾರ ಸ್ವಸ್ವರೂಪಾನಂದದಲ್ಲಿ ಮಗ್ನರಾದ ಮೇಲೆ ಕರ್ಮಗಳನ್ನು ಮಾಡುವ ಕಷ್ಟವು (ಸಹಜವೇ) ಮುಗಿಯುತ್ತದೆ. ॥ ೪೮ ॥ ಅರ್ಜುನಾ, ಎಲ್ಲಿಯುವರೆಗೆ ಈ ತರಹದ ಆತ್ಮಜ್ಞಾನವು ಉಂಟಾಗಿರುವದಿಲ್ಲವೋ ಅಲ್ಲಿಯ ವರೆಗೆ ಈ ಸಾಧನಗಳ ಆಚರಣೆಯನ್ನು ಮಾಡಲೇ ಬೇಕಾಗುತ್ತದೆ. ॥ ೪೯ ॥

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚಾರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

**[ ತಸ್ಮಾದಿತಿ ]** ಮ್ಹಣವೂನಿ ತೂ ನಿಯತ । ಸಕಳ ಕಾಮನಾರಹಿತ । ಹೋವೂನಿಯಾ ಉಚಿತ । ಸ್ವಧರ್ಮ ರಾಹಾಟೇ ॥ ೧೫೦ ॥ ಜೇ ಸ್ವಧರ್ಮೇ ನಿಷ್ಕಾಮತಾ ಅನುಸರಲೇ ಪಾರ್ಥಾ । ತೇ ಕೈವಲ್ಯ ಪದ ತತ್ತ್ವತಾ । ಪಾವಲೇ ಜಗೀ ॥ ೫೧ ॥

**ಅರ್ಥ**— ಆದುದರಿಂದ (ನಿನ್ನ ಸ್ಥಿತಿಯು ಹಾಗಿಲ್ಲದರಿಂದ) ನೀನು ಯಾವಾಗಲೂ ಫಲಾಪೇಕ್ಷೆಯನ್ನು ಬಿಟ್ಟು ಅನಾಸಕ್ತನಾಗಿ ಉಚಿತವಾದ ನಿನ್ನ ಧರ್ಮದ ಆಚರಣೆಯನ್ನು ಮಾಡು. ॥ ೧೫೦ ॥ ಪಾರ್ಥಾ, ಈ ಜಗತ್ತಿನಲ್ಲಿ ಯಾವನು ನಿಜವಾಗಿ ಸ್ವಧರ್ಮದ ಆಚರಣೆಯನ್ನು ನಿಷ್ಕಾಮಬುದ್ಧಿಯಿಂದ ಮಾಡುವನೋ ಅವನು ಪರಮಪದವನ್ನು (ಮೋಕ್ಷವನ್ನು) ಪಡೆಯುತ್ತಾನೆ. ॥ ೧೫೧ ॥

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

**[ ಕರ್ಮಣೈವೇತಿ ]** ದೇಖಪಾ ಜನಕಾದಿಕ । ಕರ್ಮಜಾತ ಅಶೇಖ । ನ ಸಾಂಡಿತಾ ಮೋಕ್ಷಸುಖ । ಪಾವತೇ ಜಾಹಲೇ ॥ ೫೨ ॥ ಯಾ ಕಾರಣೇ ಪಾರ್ಥಾ । ಹೋಆವೀ ಕರ್ಮೀ ಆಸ್ಥಾ । ಹೇ ಆಣಿ ಕಾಹೀ ಏಕಾ ಅರ್ಥಾ । ಉಪಕಾರೇಲ । ೫೩ ॥ ಜೇ ಆಚರತಾ ಆಪಣಪಯಾ । ದೇಖೀ ಲಾಗೇಲ ಲೋಕಾಯಯಾ । ತರೀ ಚುಕೇಲ ಹಾ ಅಪಾಯಾ । ಪ್ರಸಂಗೇಚಿ ॥ ೫೪ ॥ ದೇಖೇ ಪ್ರಾಪ್ತಾರ್ಥ ಜಾಹಲೇ । ಜೇ ನಿಷ್ಕಾಮತಾ ಪಾವಲೇ । ತಯಾಹೀ ಕರ್ತವ್ಯ ಅಸೇ ಉರಲೇ । ಲೋಕಾಲಾಗೀ ॥ ೫೫ ॥ ಮಾರ್ಗೀ ಅಂಧಾ ಸರಿಸಾ । ಪುಢೇ ದೇಖಣಾಹೀ ಚಾಲೇ ಜೈಸಾ । ಅಜ್ಞಾನಾ ಪ್ರಕಟಾವಾ ಧರ್ಮ ತೈಸಾ । ಆಚರೋನೀ ॥ ೫೬ ॥ ಹಾಗಾ ಐಸೇ ಜರೀ ನ ಕೀಜೇ । ತರೀ ಅಜ್ಞಾನಾ ಕಾಯ ಉಮಜೇ । ತಿಹೀ ಕವಣೇ ಪರೀ ಜಾಣಿ ಜೇ । ಮಾರ್ಗಾತೇಯಾ ॥ ೫೭ ॥

**ಅರ್ಥ**— ಹೀಗೆ ನೋಡು ಜನಕಾದಿ ರಾಜರು ಕರ್ಮವನ್ನು ತ್ಯಾಗಮಾಡದೇ ಮೋಕ್ಷಸುಖವನ್ನು ಪಡೆದರು. ॥ ೫೨ ॥ ಈ ಕಾರಣದ ದೆಸೆಯಿಂದ ಪಾರ್ಥಾ, ಕರ್ಮಮಾಡುವದರಲ್ಲಿ ನೀನು ಆಸಕ್ತಿಯುಳ್ಳವನಾಗು. ಕಾರಣ ವೇನಂದರೆ ಅದರಿಂದ ಇನ್ನೂ ಒಂದು ಉಪಯೋಗವಾಗತಕ್ಕದ್ದಿದೆ. ॥ ೫೩ ॥ ಅದರಂತೆಯೇ ಆ ಕರ್ಮಾಚರಣೆಯು ನಮ್ಮ ಕಡೆಯಿಂದ ಆಗುವದರಿಂದ ಜನರಿಗೆ ಸ್ವಧರ್ಮಮಾರ್ಗವು ದೊರಕುವದು. ಮತ್ತು ಅದರಿಂದಲೇ ಅವರ ದುಃಖಗಳು ಅನಾಯಾಸವಾಗಿ ಇಲ್ಲದಂತೆ ಆಗುವವು. ॥ ೫೪ ॥ ಹೀಗೆ ನೋಡು— ಯಾರು ಕೃತಾರ್ಥರಾಗಿ

ನಿಷ್ಠೆಯುವುಳ್ಳವರಾಗಿರುವರೋ ಅವರು ಸಹ ಜನರ ಹಿತದ ಕಡೆಗೆ ಅನುಲಕ್ಷಿಸಿ ಪರರಿಗೆ ಉಪಕಾರವಮಾಡುವ ಕರ್ತವ್ಯವನ್ನು ವಹಿಸಲೇಬೇಕಾಗುತ್ತದೆ. ॥ ೫೫ ॥ ಕುರುಡರ ಸಾಲಿನಲ್ಲಿ ಮುಂದೆ ಹಾದಿತೋರಿಸುವ ಮುಖ್ಯ ಮನುಷ್ಯನ ಕಣ್ಣು ಕಾಣುತ್ತಿದ್ದಾಗ್ಯಾದರೂ ಅವನು ಆ ಕುರುಡರಂತೆ ಹಾದೀನಡೆಯುತ್ತಾನೆ. ಅದೇ ಪ್ರಕಾರ ಜ್ಞಾನಿಗಳು ಸ್ವತಃ ಧರ್ಮಾಚರಣೆಯನ್ನು ಮಾಡಿ ಅಜ್ಞಾನೀ ಜನರನ್ನು ಧರ್ಮದ ಮಾರ್ಗಕ್ಕೆ ಹಚ್ಚಬೇಕಾಗುತ್ತದೆ. ॥ ೫೬ ॥ ಎಲೋ ಅರ್ಜುನನೇ ! ಜ್ಞಾನಿಗಳು ಈ ಪ್ರಕಾರದ ಆಚರಣೆಯನ್ನು ಮಾಡದಿದ್ದರೆ ಅಜ್ಞಾನೀ ಜನರಿಗೆ ಕರ್ಮಾಚರಣದ ಮಾರ್ಗವು ಹೇಗೆ ದೊರಕೀತು ? ಮತ್ತು ಅವರಿಗೆ ಈ ಕರ್ಮಮಾರ್ಗದ ಮಾದರಿಯು ಯಾವ ಉಪಾಯದಿಂದ ತಿಳಿದೀತು. ॥ ೫೭ ॥

**ಯದ್ಯದಾಚರತಿ ಶ್ರೇಷ್ಠಸ್ತತ್ತ ದೇವೇತರೋಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

**[ ಯದ್ಯದಿತಿ ]** ಏಥ ವಡೀಲ ಜೇ ಜೇ ಕರಿತೀ । ತಯಾ ನಾಮ ಧರ್ಮ ಠೇವಿತೀ । ತೇಚಿ ಯೇರ ಅನುಷ್ಠಿತೀ । ಸಾಮಾನ್ಯ ಸಕಳ ॥ ೫೮ ॥ ಹೇ ಐಸೇ ಅಸೇ ಸ್ವಭಾವೇ । ಮ್ಹಣೋನಿ ಕರ್ಮ ನ ಸಂಡಾವೇ । ವಿಶೇಷೇ ಆಚರಾವೇ । ಲಾಗೇ ಸಂತೀ ॥ ೫೯ ॥

**ಅರ್ಥ—** ಈ ಜಗತ್ತಿನಲ್ಲಿ ಶ್ರೇಷ್ಠ ಜನರು ( ಸಾಧು ಸಂತರು ) ಪ್ರಮಾಣವೆಂದು ಮಾಡುವ ಆಚರಣ ಮೇಲುಪಙ್ಕ್ತಿಯನ್ನೇ ಧರ್ಮವೆಂದು ಹೆಸರಿಟ್ಟು ಮಿಕ್ಕುಳಿದ ಸರ್ವಜನರು ಅದೇ ಆಚರಣವನ್ನೇ ಅನುಸರಿಸುತ್ತಾರೆ. ॥ ೫೮ ॥ ಈ ಮಾತು ಸ್ವಾಭಾವಿಕವಾಗಿರುವದರಿಂದ ಕರ್ಮಾಚರಣದ ತ್ಯಾಗಮಾಡಲಿಕ್ಕೆ ಬರುವದಿಲ್ಲ. ಮತ್ತು ಸಾಧುಸಂತರಂತೂ ಕರ್ಮಾಚರಣೆಯನ್ನು ಅವಶ್ಯವಾಗಿ ಮಾಡಲೇ ಬೇಕಾಗಿರುತ್ತದೆ. ॥ ೫೯ ॥

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವಚ ಕರ್ಮಣಿ ॥ ೨೨ ॥**

**[ ನ ಮೇ ಪಾರ್ಥೇತಿ ]** ಆತಾ ಆಣಿಕಾಚಿಯಾ ಗೋಠೀ । ಕಾಯಶಾ ಸಾಂಗೋ ಕಿರೀಟೀ । ದೇಖೇ ಮೀಚಿ ಇಯೇ ರಾಹಾಟೀ । ವರ್ತತ ಅಸೇ ॥ ೧೬೦ ॥ ಕಾಯ ಸಾಂಕಡೇ ಕಾಹೀ ಮಾತೇ । ಕೀ ಕವಣೇ ಏಕೇ ಆರ್ತೇ । ಆಚರೇ ಮೀ ಧರ್ಮಾತೇ । ಮ್ಹಣಸಿ ಜರೀ ॥ ೬೧ ॥ ತರೀ ಪುರತೇ ಪಣಾಲಾಗೀ । ಆಣಿಕದುಸರಾ ನಾಹೀ ಜಗೀ ! ಐಸೀ ಸಾಮುಗ್ರೀ ಮಾಝ್ಯಾ ಆಂಗೀ । ಜಾಣಸೀ ತೂ ॥ ೬೨ ॥ ಮೃತ ಗುರುಪುತ್ರ ಆಣಿಲಾ । ತೋತುವಾ ಪವಾಡಾ ದೇಖಿಲಾ । ತೋಹೀ ಮೀ ಉಗಲಾ । ಕರ್ಮಿ ವರ್ತೇ ॥ ೬೩ ॥

**ಅರ್ಥ—** ಪಾರ್ಥಾ, ಇನ್ನುಮೇಲೆ ಬಹಳ ದೂರಿನದಾದ ಎರಡನೇದವರ ಮಾತು ಏಕೆ ಹೇಳುತ್ತ ಕುಳಿತು ಕೊಳ್ಳಲಿ ? ನಾನೇ ಧರ್ಮಾಚರಣೆಯಂತೆ ವರ್ತಿಸುತ್ತೇನೆ. ॥ ೧೬೦ ॥ ಆದರೆ ನನಗೆ ಏನಾದರೂ ಒಂದು ಸಂಕಟ ಬಂದಿರಬೇಕು. ಅಥವಾ ಯಾವದಾದರೊಂದು ಅಪೇಕ್ಷೆಯು ನನ್ನಲ್ಲಿ ಉಂಟಾಗಿರಬಹುದು. ಅಂತೆಯೇ ನಾನು ಸ್ವಧರ್ಮಾಚರಣೆಯನ್ನು ಮಾಡುತ್ತಿರಬಹುದೆಂದು ನೀನು ಊಹಿಸಬಹುದು. ॥ ೧೬೧ ॥ ಆದರೆ ಈ ಜಗತ್ತಿನಲ್ಲಿ ನನ್ನಂಥ ಸದ್ಗುಣಿಗಳೂ, ಐಶ್ವರ್ಯವಾನರೂ, ಮತ್ತು ಸಂಪನ್ನರೂ ಎರಡನೇಯವರಾದೂ ಇರುವದಿಲ್ಲ. ಈ ನನ್ನ ಸಾಮರ್ಥ್ಯವನ್ನು ನೀನು ಅರಿತವನೇ ಇರುವಿ. ॥ ೧೬೨ ॥ ಸಂದೀಪನ ಋಷಿಗಳ ಗುರುದಕ್ಷಿಣೆಗಾಗಿ ಅವರ ಮೃತ ಪುತ್ರರನ್ನು ತಂದುಕೊಟ್ಟೆನು. ಆ ಪರಾಕ್ರಮವನ್ನು ನೀನೇ ಪ್ರತ್ಯಕ್ಷವಾಗಿ ನೋಡಿರುವಿ. ಆದರೂ ಇಂಥ ನೀಚ್ಛನಾದ ನಾನು ಕೂಡ ಸುಮ್ಮನೇ ಕರ್ಮಮಾರ್ಗದ ಆಚರಣೆಯನ್ನು ಮಾಡುತ್ತಲೇ ಇರುವೆನು. ॥ ೧೬೩ ॥

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**

**[ ಯದೀತಿ ]** ಪರೀ ಸ್ವಧರ್ಮೀ ವರ್ತೇ ಕೈಸಾ । ಸಾಕಾಂಕ್ಷ ಕಾಹೋಯ ಜೈಸಾ । ತಯಾಚಿ ಏಕಾ ಉದ್ದೇಶಾ । ಲಾಗೋನಿಯಾ ॥ ೬೪ ॥ ಜೇ ಭೂತ ಜಾತ ಸಕಳ ಅಸೇ ಅಮ್ಹಾ ಅಧೀನ ಚಿ ಕೇವಳ । ತರೀ ನವ್ಹಾವೇ ಬರಳ । ಮ್ಹಣೋನಿಯಾ ॥ ೬೫ ॥

**ಅರ್ಥ—** ಆದರೆ ಲೋಕ ಕಲ್ಯಾಣದ ಉದ್ದೇಶದಿಂದ ಸಕಾಮಯುಕ್ತ ಪುರುಷನಂತೆ ನಾನು ಸ್ವಧರ್ಮದ ಆಚರಣೆಯನ್ನು ಮಾಡುತ್ತೇನೆ. ॥ ೬೪ ॥ ಕಾರಣವೇನಂದರೆ ಸರ್ವ ಪ್ರಾಣಿಗಳು ನಮ್ಮ ಮೇಲೆಯೇ ಅವಲಂಬಿಸಿರುತ್ತವೆ. ಆದುದರಿಂದ ಅವರು ಕರ್ಮಭ್ರಷ್ಟರಾಗಬಾರದೆಂಬ ಸದುದ್ದೇಶದಿಂದಲೇ, ॥ ೬೫ ॥

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

**[ ಉತ್ಸೀದೇ ಯುರಿತಿ ]** ಆಮ್ಹೀ ಪೂರ್ಣ ಕಾಮ ಹೋವುನೀ । ಜರೀ ಆತ್ಮಸ್ಥಿತೀ ರಾಹುನೀ । ತರೀ ಪ್ರಜಾಹೇ ಕೈಸೇನೀ । ನಿಸ್ತರೇಲ ॥ ೬೬ ॥ ಇಹೀ ಆಮುಚೀ ವಾಸ ಪಾಹಾವೀ। ಮಗ ವರ್ತತೀ ಪರೀ ಜಾಣಾವೀ । ತೇ ಲೋಕ ಸ್ಥಿತೀ ಆಘವೀ । ನಾಸಿಲೀ ಹೋಈಲ ॥ ೬೭ ॥ ಮ್ಹಣೋನಿ ಸಮರ್ಥ ಜೋ ಏಥೆ । ಆಥಿಲಾ ಸರ್ವಜ್ಞತೇ । ತೇಣೇ ವಿಶೇಷೇ ಕರ್ಮಾತೇ । ತ್ಯಜಾವೇನಾ ॥ ೬೮ ॥

**ಅರ್ಥ—**ನಾವು ನಿಷ್ಕಾಮಉಳ್ಳವರಾಗಿ ಆತ್ಮಾನಂದದಲ್ಲಿಯೇ ಮಗ್ನರಾಗಿ ಕುಳಿತರೆ ಮತ್ತು ಧರ್ಮಾಚರಣೆಯನ್ನು ಮಾಡದಿದ್ದರೆ ಈ ಪ್ರಜರ ತರಣೋಪಾಯವು ಹೇಗೆ ಆಗುವದು ? ॥ ೬೬ ॥ ಜನರು ನಮ್ಮ ವರ್ತನವನ್ನು ನೋಡಿ ಧರ್ಮಾಚರಣದಿಂದ ನಡೆಯುವ ಮಾರ್ಗವನ್ನು ತಿಳಿದುಕೊಳ್ಳಬೇಕು. ಹೀಗೆ ಈ ಜನರ ನಡತೆ ಇದ್ದು ನಿಜವಾಗಿ ಸಾಂಪ್ರದಾಯವಾದರೂ ಹೀಗೆಯೇ ಇರುತ್ತದೆ. ಅಂದಬಳಿಕ ನಾವು ಕರ್ಮಾಚರಣೆಯನ್ನು ಮಾಡದಿದ್ದರೆ ಜನರು ದುರ್ಮಾರ್ಗಿಗಳಾಗುವರು. ॥ ೬೭ ॥ ಆದುದರಿಂದ ಯಾರು ಸಮರ್ಥರೂ, ಸರ್ವಜ್ಞಾನ ಸಂಪನ್ನರೂ ಇರುವರೊ, ಅವರು ವಿಶೇಷವಾಗಿ ಯಾವಾಗ್ಯೂ ಕರ್ಮತ್ಯಾಗವನ್ನು ಮಾಡಬಾರದು. ॥೬೮॥

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಽಸಕ್ತಶ್ಚಿಕೀರ್ಷುರ್ಲೋಕಸಂಗ್ರಹಂ ॥ ೨೫ ॥**

**[ ಸಕ್ತಾಃ ಕರ್ಮಣೀತಿ ]** ದೇಖೇ ಫಳಾಚಿಯಾ ಆಶಾ । ಆಚರೇ ಕಾಮುಕ ಜೈಸಾ । ಕರ್ಮೀ ಭರ ಹೋ ಆವಾ ತೈಸಾ । ನಿರಾಶಾ ಹೀ ॥ ೬೯ ॥ ಜೇ ಪುಢತ ಪುಢತೀ ಪಾರ್ಥಾ । ಹೇ ಸಕಳ ಲೋಕ ಸಂಸ್ಥಾ । ರಕ್ಷಣೀಯ ಸರ್ವಥಾ । ಮ್ಹಣವೂನಿಯಾ ॥ ೧೭೦ ॥ ಮಾರ್ಗಾಧಾರೇ ವರ್ತಾವೇ । ವಿಶ್ವ ಹೇ ಮೋಹರೇ ಲಾವಾವೇ । ಅಲೌಕಿಕ ನೋಹಾವೇ । ಲೋಕಾಪ್ರತಿ ॥೭೧॥

**ಅರ್ಥ—** ಫಲದ ಅಪೇಕ್ಷೆಯನ್ನು ಮಾಡುವ ಪುರುಷನು ಯಾವ ಪ್ರಕಾರ ಕರ್ಮಾಚರಣೆಯನ್ನು ಮಾಡುತ್ತಾನೋ ಅದೇ ಪ್ರಕಾರ ಜ್ಞಾನಸಂಪನ್ನನೂ, ಕೂಡ ಕರ್ಮಾಚರಣದಲ್ಲಿ ಆದರವನ್ನಿಡಬೇಕು. ॥ ೬೯ ॥ ಕಾರಣ ಪಾರ್ಥಾ, ಮುಂದೆ ಆಗತಕ್ಕಂಥ ಲೋಕಸಮುದಾಯದ ಸಂರಕ್ಷಣೆಯನ್ನು ಮಾಡುವದು ಅವಶ್ಯವಾಗಿರುವದು. ಅದ್ದರಿಂದ, ॥ ೧೭೦ ॥ ಮಹಾತ್ಮರು ಸನ್ಮಾರ್ಗದಿಂದ ನಡೆದು ಜನರಿಗೆ ಧರ್ಮಾಚರಣದ ಮಾರ್ಗವನ್ನು ತೋರಿಸಬೇಕು. ಆದರೆ ತಾವು ಸ್ವರ್ಗಾದಿ ಲೋಕಗಳ ಪ್ರಾಪ್ತಿಯ ವಿಷಯದಲ್ಲಿ ಆಸಕ್ತಿಯನ್ನಿಡಬಾರದು. ॥೭೧॥

**ನ ಬುದ್ಧಿಭೇದಮ್ ಜನಯೇದಜ್ಞಾನಾಂ ಕರ್ಮಸಂಗಿನಾಂ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥ ೨೬ ॥**

**[ನ ಬುದ್ಧಿ ಭೇದಮಿತಿ]** ಜೇ ಸಾಯಾಸೇ ಸ್ತನ ಸೇವೀ । ತೇ ಪಕ್ವಾನ್ನೇ ಕೇವೀ ಜೇವೀ । ಮ್ಹಣೋನಿ ಬಾಳಕಾ ಜೈಸೀ ನೇದಾವೀ । ಧನುರ್ಧರಾ ॥ ೭೨ ॥ ತೈಸೀ ಕರ್ಮೀ ಜಯಾ ಅಯೋಗ್ಯತಾ । ತಯಾಪ್ರತಿ ನೈಷ್ಕರ್ಮ್ಯತಾ । ನ ಪ್ರಗಟಾವೀ ಖೇಳತಾ । ಆದಿ ಕರುನೀ ॥ ೭೩ ॥ ತೇಥೆ ಸತ್ಕ್ರಿಯಾಚಿ ಲಾವಾವೀ । ತೇಚಿ ಏಕೀ ಪ್ರಶಂಸಾವೀ । ನಿಷ್ಕರ್ಮೀಹೀ ದಾವಾವೀ । ಆಚರೋನೀ ॥ ೭೪ ॥ ತಯಾ ಲೋಕ ಸಂಗ್ರಹಾ ಲಾಗೀ । ವರ್ತತಾ ಕರ್ಮ ಸಂಗೀ । ತೋ ಕರ್ಮಬಂಧ ಆಂಗೀ । ವಾಜೇಲನಾ ॥ ೭೫ ॥ ಜೈಸೀ ಬಹುರೂಪಿಯಾಂಚೀ ರಾವೋ ರಾಣೀ । ಸ್ತ್ರೀ ಪುರುಷ ಭಾವೋ ನಾಹೀ ಮನೀ । ಪರೀ ಲೋಕ ಸಂಪಾದಣೀ । ತೈಸೀಚ ಕರಿತೀ ॥ ೭೬ ॥

**ಅರ್ಥ**— ಯಾವ ಕೂಸಿಗೆ ಸ್ತನಪಾನವನ್ನು ಮಾಡಲಿಕ್ಕೆ ಸಹ ಬರುವದಿಲ್ಲವೋ, ಆ ಕೂಸು ಪಕ್ವಾನ್ನವನ್ನು ಹೇಗೆ ತಿನ್ನುವದು ಹೇಳು ನೋಡುವಾ ? ಆದುದರಿಂದ ಆ ಕೂಸಿಗೆ ಪಕ್ವಾನ್ನಗಳನ್ನು ತಿನ್ನಲಿಕ್ಕೆ ಕೊಡಬಾರದು. ॥೭೨॥ ಅದೇ ಪ್ರಕಾರ ಕರ್ಮಾಚರಣೆಯನ್ನು ಮಾಡಲಿಕ್ಕೆ ಸಹ ಯಾರು ಅನಧಿಕಾರಿಯಾಗಿರುವರೋ, ಅವರಿಗೆ ಜ್ಞಾನಮಾರ್ಗದ ಮಹತ್ವವಾದ ಉಪದೇಶವನ್ನು ವಿನೋದಾರ್ಥವಾಗಿ ಸಹ ಮಾಡಬಾರದು. ॥ ೭೩ ॥ ಅವರಿಗೆ ಸತ್ಕರ್ಮದ ಆಚರಣೆ ಯನ್ನೇ ಮಾಡಲಿಕ್ಕೆ ಹಚ್ಚಬೇಕು. ಸತ್ಕರ್ಮದ ಪ್ರಶಂಸೆಯನ್ನೇ ಮಾಡಬೇಕು. ಮತ್ತು ನಿಷ್ಕಾಮನಾದ ಪುರುಷನು ಸಹ ಸತ್ಕರ್ಮದ ಆಚರಣೆಯನ್ನು ಮಾಡಿ ತೋರಿಸಬೇಕು. ॥ ೭೪ ॥ ವರ್ಣಾಶ್ರಮ ಧರ್ಮದ ರಕ್ಷಣೆ ಮಾಡುವದರ ದೆಸೆಯಿಂದ ಕರ್ಮಮಾರ್ಗದ ಆಚರಣೆಯನ್ನು ಮಾಡುತ್ತಿರಲಿಕ್ಕಾಗಿ ಅವನಿಗೆ ಕರ್ಮಬಂಧವನ್ನು ಭೋಗಿಸುವ ಕಾರಣವಿರುವದಿಲ್ಲ. ॥ ೭೫ ॥ ಬಹುರೂಪಿಯು (ಸೋಗುಗಾರನು) ರಾಜಾರಾಣಿಗಳ ಸೋಗು ಹಾಕಿದಾಗ್ಯೂ ಅವನ ಮನಸಿನಲ್ಲಿ ಸ್ತ್ರೀ ಪುರುಷ ಭಾವನೆಯು ಇರುವದೇ ಇಲ್ಲ. ಆದರೆ ಜನರಿಗೆ ತೋರಿಸುವದರ ದೆಸೆಯಿಂದ ಮಾತ್ರ ಅವರಂತೆಯೇ ನಟಿಸುತ್ತಾನೆ. ॥ ೭೬ ॥

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾऽಹಮಿತಿ ಮನ್ಯತೇ ॥ ೨೭ ॥**

**[ಪ್ರಕೃತೇರಿತಿ]** ದೇಖೇ ಪುಢಿಲಾಚೇ ವೋಝೆ । ಜರೀ ಆಪುಲಾ ಮಾಥಾ ಘೇ ಇಜೇ । ತರೀ ಸಾಂಗೇ ಕಾ ನ ದಾಟಿಜೇ । ಧನುರ್ಧರಾ ॥ ೭೭ ॥ ತೈಸೀ ಶುಭಾಶುಭೇ ಕರ್ಮೇ । ಜಿಯೇ ನಿಪಜತೀ ಪ್ರಕೃತಿಧರ್ಮೇ । ತಿಯೇ ಮೂರ್ಖ ಮತಿಭ್ರಮೇ । ಮೀ ಕರ್ತಾ ಮ್ಹಣೇ ॥ ೭೮ ॥ ಐಸಾ ಅಹಂ ಕಾರಾರೂಢ । ಏಕದೇಶೀ ಮೂಢ । ತಯಾ ಹಾ ಪರಮಾರ್ಥ ಗೂಢ । ಪ್ರಗಟಾವಾನಾ ॥ ೭೯ ॥ ಹೇ ಅಸೋ ಪ್ರಸ್ತುತ । ಸಾಂಗಿಜೇಲ ತುಜ ಹಿತ । ತೇ ಅರ್ಜುನಾ ದೇವೂನಿ ಚಿತ್ತ । ಅವಧಾರೀಪಾ ॥೮೦॥

**ಅರ್ಥ**-- ಅರ್ಜುನಾ, ಹೀಗೆ ನೋಡು— ಎರಡನೇದವರ ಭಾರವನ್ನು ತನ್ನ ತಲೆಯ ಮೇಲೆಯೇ ಹೊತ್ತು ಕೊಂಡರೆ ತನ್ನ ನಡವು ನೋಯಿಸಲಾರದೋ ? ॥ ೭೭ ॥ ಅದರಂತೆಯೇ ಪ್ರಕೃತಿ ಗುಣದಿಂದ ಶುಭಾಶುಭ ಕರ್ಮ ಗಳು ಉಂಟಾಗುತ್ತವೆ. ಬುದ್ಧಿಭ್ರಂಶದಿಂದ ಮನುಷ್ಯನು ಮೂರ್ಖನಾಗಿ ಆ ಕರ್ಮಗಳನ್ನು ನಾನೇ (ಕರ್ತಾ) ಮಾಡುತ್ತೇನೆಂದು ಅನ್ನುತ್ತಾನೆ. ॥ ೭೮ ॥ ಇಂಥ ರೀತಿಯಿಂದ ಮೂರೂವರೆ ಮೊಳ ದೇಹದಲ್ಲಿ ಕರ್ತೃತ್ವಾಭಿಮಾನ ವನ್ನು ಧಾರಣಮಾಡುವ ಪುರುಷನಿಗೆ ಈ ನೈಷ್ಕರ್ಮ್ಯ ಸ್ಥಿತಿಯ ಪಾರಮಾರ್ಥ ರಹಸ್ಯವನ್ನು ಉಪದೇಶ ಮಾಡ

ಬಾರದು. ॥ ೭೯ ॥ ಕಾರಣವೇನೆಂದರೆ, ಅನಧಿಕಾರಿಯಾದ ಆ ಪುರುಷನಿಗೆ ಪಾರಮಾರ್ಥ ತತ್ವವು ತಿಳಿಯಲಿಕ್ಕಿಲ್ಲ. ಮತ್ತು ಸ್ವಧರ್ಮ ಕರ್ಮದಿಂದಲೂ ಭ್ರಷ್ಟನಾಗಿ ಹೋಗುವನು. ಇದಂತೂ ಇರಲಿ, ಪ್ರಸ್ತುತ ಅರ್ಜುನಾ, ನಿನ್ನ ಹಿತವು ಯಾವುದರಲ್ಲಿರುವದೆಂಬುದನ್ನು ನಿನಗೆ ಹೇಳುತ್ತೇನೆ ಲಕ್ಷಪೂರ್ವಕವಾಗಿ ಕೇಳು. ॥ ೧೮೦ ॥

**ತತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ॥ ೨೮ ॥**

**[ ತತ್ವವಿದಿತಿ ]** ಜೇ ತತ್ವಜ್ಞಾನಿಯಾಚ್ಯಾ ರಾಯೀ । ತೋ ಪ್ರಕೃತಿ ಭಾವ ನಾಹೀ । ಜೇಥ ಕರ್ಮಜಾತ ಪಾಹೀ । ನಿಪಜತ ಅಸೇ ॥ ೮೧ ॥ ತೇ ದೇಹಾಭಿಮಾನ ಸಾಂಡುನೀ । ಗುಣಕರ್ಮೇ ವೋಲಾಂಡುನೀ । ಸಾಕ್ಷೀಭೂತ ಹೋವುನಿ । ವರ್ತತೀ ದೇಹೀ ॥ ೮೨ ॥ ಮ್ಹಣೋನಿ ಶರೀರೀ ಜರೀ ಹೋತೀ । ತರೀ ಕರ್ಮಬಂಧಾ ನಾಕಳತೀ । ಜೈಸಾ ಕಾ ಭೂತ ಚೇಷ್ಟಾ ಗಭಸ್ತೀ । ಘೇಪವೇನಾ ॥೮೩॥

**ಅರ್ಥ—** ಯಾವ ಪ್ರಕೃತಿಯ ಗುಣದಿಂದ ಸರ್ವ ಕರ್ಮಗಳು ಉದ್ಭವಿಸುತ್ತಿವೆಯೋ ಆ ಪ್ರಕೃತಿಯ ವಿಕಾರವು ಜ್ಞಾನಿಗಳಲ್ಲಿ ಮೂಲತಃ ಇರುವದಿಲ್ಲ. ॥ ೮೧ ॥ ಆ ಜ್ಞಾನಿಯು ದೇಹಾಭಿಮಾನವನ್ನು ಬಿಟ್ಟು ಗುಣಕರ್ಮಗಳಿಗೆ ಅತೀತನಾಗಿ ದೇಹದಲ್ಲಿ ಮಾತ್ರ ಸಾಕ್ಷೀಭೂತನಾಗಿರುತ್ತಾನೆ. ॥ ೮೨ ॥ ಸೂರ್ಯನು ಜಗತ್ತಿನಲ್ಲಿ ಪ್ರಕಾಶಮಾಡುತ್ತಿದ್ದಾಗ್ಯಾದರೂ ಜಗತ್ತಿನ ಕರ್ಮದಿಂದ ಲಿಪ್ತನಾಗುವದಿಲ್ಲ. ಅದೇಪ್ರಕಾರ ಜ್ಞಾನಿಯು ಒಂದುವೇಳೆ ದೇಹಧಾರಣ ಮಾಡಿದಾಗ್ಯಾದರೂ ದೇಹಕರ್ಮದಿಂದ ಬದ್ಧನಾಗಿರುವದಿಲ್ಲ. ॥ ೮೩ ॥

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯ ॥**

**[ ಪ್ರಕೃತೇರಿತಿ ]** ಏಥ ಕರ್ಮೀ ತೋಚಿ ಲಿಂಪೇ । ಜೋ ಗುಣಸಂಭ್ರಮೇ ಘೇಪೇ । ಪ್ರಕೃತಿಚೇನಿ ಆಟೋಪೇ । ವರ್ತತ ಅಸೇ ॥ ೮೪ ॥ ಇಂದ್ರಿಯೇ ಗುಣಾಧಾರೇ । ರಾಹಾಟತೀ ನಿಜವ್ಯಾಪಾರೇ । ತೇ ಪರಕರ್ಮ ಬಲಾತ್ಕಾರೇ । ಆಪಾದೀ ಜೋ ॥ ೮೫ ॥

**ಅರ್ಥ—** ಪ್ರಕೃತಿಯ ಆಧೀನನಾಗಿ ಯಾವನು ನಡೆಯುತ್ತಾನೋ ಅವನು ಗುಣಕರ್ಮದ ಬಂಧನದಲ್ಲಿ ಸಿಲುಕುತ್ತಾನೆ. ಅವನೇ ಕರ್ಮದಿಂದ ಲಿಪ್ತನಾಗಿರುತ್ತಾನೆ. ॥ ೮೪ ॥ ಇಂದ್ರಿಯಗಳು ಗುಣದ ಆಧೀನ ಉಳ್ಳವುಗಳಾಗಿ ತಮ್ಮ ತಮ್ಮ ವ್ಯಾಪಾರದಲ್ಲಿಯೇ ವರ್ತಿಸುತ್ತಿದ್ದು, ಅವು ಎರಡನೇದವರ ಕರ್ಮಗಳನ್ನು 'ಅಹಂಕರ್ತೃತ್ವ' ಅಭಿಮಾನದಿಂದ ಬುಧ್ಯಾ ತಮ್ಮ ಮೈಮೇಲೆಯೇ ತೆಗೆದುಕೊಳ್ಳುತ್ತವೆ. ॥ ೮೫ ॥

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

**[ ಮಯೀತಿ ]** ತರೀ ಉಚಿತೇ ಕರ್ಮೇ ಆಘವೀ । ತುವಾ ಆಚರೋನಿ ಮಜ ಅರ್ಪಾವೀ । ಪರೀ ಚಿತ್ತವೃತ್ತಿ ನ್ಯಾಸಾವೀ । ಆತ್ಮರೂಪೀ ॥ ೮೬ ॥ ಆಣಿ ಹೇ ಕರ್ಮ ಮೀ ಕರ್ತಾ । ಕಾ ಆಚರೇನಯಾ ಅರ್ಥಾ । ಐಸಾ ಅಭಿಮಾನ ಝಣೇ ಚಿತ್ತಾ । ರಿಘೋದೇಸೀ ॥ ೮೭ ॥ ತುವಾ ಶರೀರಪರಾ ನೋಹಾವೇ । ಕಾಮನಾಜಾತ ಸಾಂಡಾವೇ । ಮಗ ಅವಸರೋಚಿತ ಭೋಗಾವೇ ! ಭೋಗ ಸಕಳ ॥ ೮೮ ॥ ಆತಾ ಕೋದಂಡ ಘೇವೂನಿ ಹಾತೀ । ಆರೂಢ ಪಾ ಇಯೇ ರಥೀ । ದೇಈ ಆಲಿಂಗನ ವೀರವೃತ್ತೀ । ಸಮಾಧಾನೇ ॥ ೮೯ ॥ ಜಗೀ ಕೀರ್ತಿ ರೂಢವೀ । ಸ್ವಧರ್ಮಾಚಾ ಮಾನ ವಾಢವೀ । ಇಯಾ ಭಾರಾಪಾಸೋನಿ ಸೋಡವೀ । ಮೇದಿನೀಹೇ ॥ ೧೯೦ ॥ ಆತಾ ಪಾರ್ಥಾ ನಿಃಶಂಕ ಹೋಈ । ಯಾ ಸಂಗ್ರಾಮಾ ಚಿತ್ತ ದೇಈ । ಏಥಹೇ ವಾಂಚೂನಿ ಕಾಂಹೀ । ಬೋಲೋ ನಯೇ ॥ ೧೯೧ ॥

**ಅರ್ಥ—** ಆದುದರಿಂದ ಸರ್ವವಿಹಿತ ಕರ್ಮದ ಆಚರಣಮಾಡಿ ನೀನು ಆ ಕರ್ಮಗಳನ್ನು ನನಗೆ ಅರ್ಪಣ ಮಾಡು. ಆದರೆ ಚಿತ್ತವೃತ್ತಿಯನ್ನು ಮಾತ್ರ ಯಾವಾಗಲೂ ಆತ್ಮಸ್ವರೂಪದಲ್ಲಿ ನೆಲೆಗೊಳ್ಳಿಸಬೇಕು. ॥ ೮೬ ॥ ಈ ಕರ್ಮದ ಕರ್ತೃವು ನಾನೇ ಇದ್ದೇನೆ. ಮತ್ತು ಯಾವದಾದರೊಂದು ಫಲಾಪೇಕ್ಷೆಯಿಂದ ಈ ಕರ್ಮವನ್ನು ನಾನು ಮಾಡುತ್ತೇನೆ, ಎಂಬ ಈ ತರಹದ ಅಭಿಮಾನವನ್ನು ಅಂಕುರಿಸಗೊಡಬೇಡ. ॥ ೮೭ ॥ ನೀನು ಶರೀರದ ಸ್ವಾಧೀನನಾಗದೇ ಎಲ್ಲ ಅಪೇಕ್ಷೆಯನ್ನೂ ಬಿಟ್ಟುಬಿಡು. ಆ ಮೇಲೆ ಸಕಲ ಭೋಗಗಳನ್ನು ಯೋಗ್ಯಕಾಲದಲ್ಲಿಯೇ ಭೋಗಿಸುವವನಾಗು ॥ ೮೮ ॥ ಅರ್ಜುನಾ ! ಕೈಯಲ್ಲಿ ಕೋದಂಡ ( ಧನುಷ್ಯ ) ಧಾರಣಮಾಡಿ ಈ ರಥದಲ್ಲಿ ಆರೂಢನಾಗು. ಮತ್ತು ಆನಂದದಿಂದ ವೀರವೃತ್ತಿಯನ್ನು ಸ್ವೀಕಾರಮಾಡು. ॥ ೮೯ ॥ ಜಗತ್ತಿನಲ್ಲಿ ನೀನು ನಿನ್ನ ಕೀರ್ತಿಯನ್ನು ಪಸರಿಸು. ಸ್ವಧರ್ಮದ ಮಹತ್ವವನ್ನು ಬೆಳಿಸು ಮತ್ತು ದುರ್ಯೋಧನಾದಿ ದುಷ್ಟರ ಭಾರದಿಂದ ಈ ಪೃಥ್ವಿಯನ್ನು ಮುಕ್ತಮಾಡು. ॥ ೧೯೦ ॥ ಪಾರ್ಥಾ, ಈಗ ನೀನು ಸಂಶಯವನ್ನು ಬಿಟ್ಟು ಬಿಡು. ಈ ಯುದ್ಧದಲ್ಲಿಯೇ ಲಕ್ಷವನ್ನಿಡು. ಈ ಸ್ಥಳದಲ್ಲಿ ಸಂಗ್ರಾಮವನ್ನುಳಿದು ಇನ್ನೊಂದು ಮಾತನ್ನೂ ಆಡಬೇಡ. ॥ ೧೯೧ ॥

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ ೩೧ ॥**

**[ ಯೇ ಮೇ ಇತಿ ]** ಹೇ ಅನುಪರೋಧ ಮತ ಮಾಝೆ । ಜೇಹೀ ಪರಮಾದರೇ ಸ್ವೀಕಾರಿ ಜೇ । ಶ್ರದ್ಧಾಪೂರ್ವಕ ಅನುಷ್ಠಿಜೇ । ಧನುರ್ಧರಾ ॥ ೯೨ ॥ ತೇಹಿ ಸಕಳ ಕರ್ಮೀ ವರ್ತತ । ಜಾಣ ಪಾ ಕರ್ಮ ರಹಿತ । ಮ್ಹಣೋನಿ ಹೇ ನಿಶ್ಚಿತ । ಕರಣೀಯ ಗಾ ॥ ೯೩ ॥

**ಅರ್ಥ —** ಅರ್ಜುನಾ, ನನ್ನ ಈ ಅಬಾಧಿತವಾದ ಮತವನ್ನು ಯಾವನು ಬಹು ಆದರದಿಂದ ಸ್ವೀಕಾರ ಮಾಡಿ ಅದನ್ನು ಶ್ರದ್ಧಾಪೂರ್ವಕ ಆಚರಣೆ ಮಾಡುವನೋ, ॥ ೧೯೨ ॥ ಅವನು ಸಕಲ ಕರ್ಮಗಳ ಆಚರಣೆ ಮಾಡಿಯೂ ಕರ್ಮರಹಿತನಾಗಿರುವನೆಂದು ತಿಳಿ. ಆದುದರಿಂದ ಈ ನನ್ನ ಮತವು ನಿಶ್ಚಯದಿಂದ ಆಚರಣ ಮಾಡಲು ಯೋಗ್ಯವಾದದ್ದಿದೆ. ॥ ೧೯೩ ॥

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಂ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ ೩೨ ॥**

**[ ಯೇ ತ್ವಿತಿ ]** ನಾತರೀ ಪ್ರಕೃತಿ ಮಂತ ಹೋವುನೀ । ಇಂದ್ರಿಯಾ ಲಳಾ ದೇವುನೀ । ಜೇಹೀ ಮಾಝೇ ಮತ ಅವ್ಹೇರುನೀ । ಮೋಸಂಡಿತೀ ॥ ೯೪ ॥ ಜೇ ಸಾಮಾನ್ಯತ್ವೇ ಲೇಖಿತೀ । ಅವಜ್ಞಾ ಕರೂನಿ ದೇಖಿತೀ । ಕಾ ಹಾ ಅರ್ಥವಾದ ಮ್ಹಣತೀ । ವಾಚಾಳ ಪಣೇ ॥ ೯೫ ॥ ತೇ ಮೋಹ ಮದಿರಾ ಭುಲಲೇ । ವಿಷಯ ವಿಷೇ ಘೇರಿಲೇ । ಅಜ್ಞಾನ ಪಂಕೀ ಬುಡಾಲೇ । ನಿಭ್ರಾಂತ ಮಾನೀ ॥ ೯೬ ॥ ದೇಖೇ ಶವಾಚ್ಯಾಹಾತೀ ದಿಧಲೇ । ಜೈಸೇಕಾ ರತ್ನ ವಾಯಾ ಗೇಲೇ । ನಾತರೀ ಜಾತ್ಯಂಧಾ ಪಾಹಲೇ । ಪ್ರಮಾಣ ನೋಹೇ ॥ ೯೭ ॥ ಕಾ ಚಂದ್ರಾಚಾ ಉದಯ ಜೈಸಾ । ಉಪಯೋಗಾ ನವಚೆ ವಾಯಸಾ । ಮೂರ್ಖಾ ವಿವೇಕ ಹಾ ತೈಸಾ । ರುಚೇಲನಾ ॥ ೯೮ ॥ ತೈಸೇ ಜೇ ಪಾರ್ಥಾ । ವಿಮುಖ ಯಾ ಪರಮಾರ್ಥಾ । ತಯಾಸೀ ಭಾಷಣ ಸರ್ವಥಾ । ಕರಾವೇನಾ ॥ ೯೯ ॥ ಮ್ಹಣೋನಿ ತೇ ನ ಮಾನಿತೀ । ಆಣಿ ನಿಂದಾಹೀ ಕರೂ ಲಾಗತೀ । ಸಾಂಗೇ ಪತಂಗ ಕಾಯ ಸಾಹಾತೀ । ಪ್ರಕಾಶಾತೇ ॥ ೨೦೦ ॥ ಪತಂಗಾ ದೀಪೀ ಆಲಿಂಗನ । ತೇಥ ತ್ಯಾಸಿ ಅಚುಕ ಮರಣ । ತೇವೀ ವಿಷಯಾಚರಣ । ಆತ್ಮಘಾತಾ ॥ ೧ ॥

**ಅರ್ಥ—** ಇಲ್ಲದಿದ್ದರೆ ಪ್ರಕೃತಿಯ ಆಧೀನರಾಗಿ ಇಂದ್ರಿಯಗಳ ಮನೋಭಿಷ್ಟವನ್ನು ಪೂರೈಸಿ ಯಾರು ನನ್ನ ಮತದ ಅನಾದರ ಮಾಡಿ ಅದನ್ನು ಬಿಟ್ಟುಕೊಡುತ್ತಾರೋ. ॥ ೯೪ ॥ ಯಾರು ನನ್ನ ಮತವನ್ನು ಸಾಮಾನ್ಯವೆಂದು ತಿಳಿಯುತ್ತಾರೋ, ಮತ್ತು ಆ ವಿಷಯವನ್ನು ಹಾಸ್ಯಮಾಡಿ ನಿಂದಿಸುತ್ತಾರೋ, ಆ ಬಾಯಿಬಡುಕರು ಇದು ಅರ್ಥವಾದವೆಂದು ತಿಳಿಯುತ್ತಾರೆ. ॥ ೯೫ ॥ ಅವರು ಮೋಹರೂಪೀ ಮದ್ಯಪಾನವನ್ನು ಮಾಡಿ ಭ್ರಮಿಷ್ಟರಾಗಿರುವರು. ಮತ್ತು ವಿಷಯರೂಪೀ ವಿಷದಿಂದ ವ್ಯಾಪ್ತರಾಗಿರುವರು. ಅಜ್ಞಾನರೂಪೀ ಕೆಸರಿನಲ್ಲಿ ಮುಳುಗಿ ಹೋಗಿರುವರು. ಎಂದು ನಿಶ್ಚಯವಾಗಿ ನಂಬು. ॥ ೯೬ ॥ ಅರ್ಜುನಾ, ಹೀಗೆ ನೋಡು— ಪ್ರೇತದ ಕೈಯಲ್ಲಿ ಪರೀಕ್ಷೆಮಾಡಲೋಸುಗ ಕೊಟ್ಟ ರತ್ನವು ಹೇಗೆ ವ್ಯರ್ಥವೋ, ಇಲ್ಲವೇ ಯಾವನು ಜನ್ಮಾಂಧ (ಹುಟ್ಟುಕುರುಡ) ನಿರುವನೋ, ಅವನಿಗೆ ಸೂರ್ಯೋದಯದಿಂದ ಉಪಯೋಗವೇನು ? (ವ್ಯರ್ಥವೇ ಸರಿ.) ॥ ೯೭ ॥ ಅಥವಾ ಚಂದ್ರಪ್ರಕಾಶವು ಕಾಗೆಗಳಿಗೆ ಹೇಗೆ ಉಪಯೋಗ ಬೀಳುವದಿಲ್ಲವೋ ಅದೇ ಪ್ರಕಾರ ಯಾರು ಮೂರ್ಖರಿರುವರೋ, ಅವರಿಗೆ ಈ ನನ್ನ ವಿಚಾರವು ರುಚಿಸುವದಿಲ್ಲ. ॥ ೯೮ ॥ ಅದರಂತೆಯೇ ಪಾರ್ಥಾ, ಯಾವ ಜನರು ಈ ಪಾರಮಾರ್ಥ ವಿಷಯದಲ್ಲಿ ವಿಮುಖರಾಗಿರುವರೋ, ಅವರ ಸಂಗಡ ಸಂಭಾಷಣೆಯನ್ನು ಸಹ ಮಾಡಕೂಡದು. ॥ ೯೯ ॥ ಕಾರಣ ಯಾವ ಪ್ರಕಾರ ಪತಂಗವು ದೀಪದ ಕೂಡ ಮತ್ಸರ ಮಾಡುವದೋ, ಅದೇ ಪ್ರಕಾರ ಆ ದುಷ್ಟಜನರು ಈ ನನ್ನ ವಿಚಾರದ ಮೇಲೆ ವಿಶ್ವಾಸವನ್ನಿಡುವದಿಲ್ಲ. ಅದರ ವಿರುದ್ಧವಾಗಿ ನಿಂದೆಯನ್ನೇ ಮಾಡುತ್ತಾರೆ. ॥ ೨೦೦ ॥ ಪತಂಗವು ದೀವಿಗೆಗೆ ಆಲಿಂಗನ ಕೊಡುವದರಿಂದ ಅಲ್ಲಿಯೇ ತಪ್ಪದೇ ಅದರ ಮರಣವಾಗುವದು. ಅದರಂತೆಯೇ ವಿಷಯಾಚರಣ ಮಾಡುವದರಲ್ಲಿಯೇ ಪ್ರಾಣಹಾನಿ (ಆತ್ಮಘಾತ) ಇರುವದು. ॥ ೧ ॥

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

**[ ಸದೃಶಂ ಚೇಷ್ಟತೇ ಇತಿ ]** ಮ್ಹಣೋನಿ ಇಂದ್ರಿಯೇ ಏಕೇ । ಜಾಣ ತೇನಿ ಪುರುಖೇ । ಲಾಳಾವೀನಾ ಕೌತುಕೇ । ಆದಿಕರುನೀ ॥ ೨ ॥ ಹಾಗಾ ಸರ್ಪೈಸೀ ಖೇಳೋ ಯೇಈಲ । ಕೀ ವ್ಯಾಘ್ರ ಸಂಸರ್ಗ ಸಿದ್ಧಿ ಜಾಈಲ । ಸಾಂಗೇ ಹಾಲಾಹಲ ಜಿರೇಲ । ಸೇವಿಲಿಯಾ ಕಾಯೀ ॥ ೩ ॥ ದೇಖೇ ಖೇಳತಾ ಅಗ್ನಿ ಲಾಗಲಾ । ಮಗತೋ, ನ ಸಾವರೇ ಜೈಸಾ ಉಧವಲಾ । ತೈಸಾ ಇಂದ್ರಿಯಾ ಲಳಾದಿಧಲಾ । ಭಲಾನೋಹೇ ॥ ೪ ॥ ಯೇರವೀ ತರೀ ಅರ್ಜುನಾ । ಯಾ ಶರೀರಾ ಪರಾಧೀನಾ । ಕಾ ನಾನಾ ಭೋಗರಚನಾ । ಮೇಳವಾವೀ ॥ ೫ ॥ ಆಪಣ ಸಾಯಾಸೇ ಕರೂನಿ ಬಹುತೇ । ಸಕಳಹೀ ಸಮೃದ್ಧಿ ಜಾತೇ । ಉಬೋ ಅಸ್ತುಯಾದೇಹಾತೇ । ಪ್ರತಿಪಾಳಾವೇ ಕಾ ॥ ೬ ॥ ಸರ್ವಸ್ವೇ ಶಿಣೋನಿ ಏಥೆ । ಆರ್ಜವಾವೀ ಸಂಪತ್ತಿ ಜಾತೇ । ತೇಣೇ ಸ್ವಧರ್ಮು ಸಾಂಡೂನಿ ದೇಹಾತೇ । ಪೋಖಾವೇ ಕಾ ಈ ॥ ೭ ॥ ಮಗ ಹೇ ತವ ಪಾಂಚಮೇಳಾವಾ । ಶೇಖೀ ಅನುಸರೇಲ ಪಂಚತ್ವಾ । ತೇ ವೇಳೀ ಕೇಲಾ ಕೇ ಗಿವಸಾವಾ । ಶೀಣ ಆಪುಲಾ ॥ ೮ ॥ ಮ್ಹಣೂನಿ ಕೇವಳ ದೇಹಭರಣ । ತೇ ಜಾಣೇ ಉಘಡೀ ನಾಗವಣ । ಯಾಲಾಗೀ ಏಥ ಅಂತಃಕರಣ । ದೇಯಾವೇನಾ ॥ ೯ ॥

**ಅರ್ಥ—** ಆದುದರಿಂದ ವಿಚಾರಶೀಲ ಮನುಷ್ಯನು ಈ ಇಂದ್ರಿಯಗಳ ಇಚ್ಛೆಯನ್ನು ವಿನೋದಾರ್ಥವಾಗಿ ಯಾದರೂ ಪೂರ್ಣಮಾಡಬಾರದು. ॥ ೨ ॥ ಅರ್ಜುನಾ, ಹೀಗೆ ನೋಡು— ಸರ್ಪದ ಸಂಗಡ ಆಡಲಿಕ್ಕೆ ಬರುವದೇ ಹೇಗೆ ? ಇಲ್ಲವೇ ಹುಲಿಯ ಕೂಡ ಸ್ನೇಹವು ಸಾಧಿಸುವದೇನು ? ಅಥವಾ ಹಾಲಾಹಲ ವಿಷವನ್ನು ಕುಡಿಯುವದರಿಂದ ಅದು ಪಚನವಾದೀತೇನು ? ॥ ೩ ॥ ಹೀಗೆ ನೋಡು - ಬುದ್ಧಿಪೂರ್ವಕವಾಗಿಯಿಲ್ಲದಿದ್ದರೂ ಸಹಜ ಆಡುತ್ತಾಡುತ್ತ ವಿನೋದವೆಂದು ಬೆಂಕಿಯನ್ನು ಹಚ್ಚಿದರೆ ಅದು ಪ್ರಜ್ವಲಿತವಾಗಿ ಹೇಗೆ ನಮಗೆ ಅಸಾಧ್ಯವಾಗುವದೋ ( ಅಸಕೊಳ್ಳುವ

ಲ್ಲವೋ, ) ಅದರಂತೆಯೇ ಸಹಜವೇ ಇಂದ್ರಿಯಗಳ ಮನೋರಥವನ್ನು ಪೂರ್ಣಮಾಡುವದು ಸಹ ಒಳ್ಳೇದಲ್ಲ. ॥ ೪ ॥ ರ್ಜುನಾ, ನಿಜವಾಗಿ ನೋಡಿದರೆ ಈ ಶರೀರವು ಪರಾಧೀನ ( ಗುಣಾಧೀನ ) ವಾಗಿರುತ್ತದೆ. ಅಂದಬಳಿಕ ಅವರ ೆಸೆಯಿಂದ ಪ್ರಯತ್ನಪೂರ್ವಕವಾಗಿ ವಿಷಯೋಪಭೋಗ ಸಾಮಗ್ರಿಗಳನ್ನು ದೊರಕಿಸುವ ಶ್ರಮವನ್ನು ಏಕೆ ತೆಗೆದು ೊಳ್ಳಬೇಕು ? ॥ ೫ । ನಾವು ಬಹಳೇ ಸಾಹಸಮಾಡಿ ಯಾವುದಕ್ಕೂ ಕೊರತೆ ಬೀಳದಂತೆ ಎಲ್ಲ ಮಾತಿನಿಂದಲೂ ಮೃದ್ಧಿಪಡಿಸಿ ರಾತ್ರಿ- ಹಗಲೂ ಈ ದೇಹವನ್ನು ನಾನಾಪರಿಯಿಂದ ಏಕೆ ಜೋಕೆಮಾಡಬೇಕು ? ॥ ೬ ॥ ಈ ಸ್ಥಳದಲ್ಲಿ ರ್ವರಿಂದಲೂ ಶ್ರಮಬಟ್ಟು ಬಹಳೇ ಸಂಪತ್ತಿಯನ್ನು ದೊರಕಿಸಿ ಸ್ವಧರ್ಮತ್ಯಾಗ ಮಾಡಿ ಕೇವಲ ದೇಹದ ಪೋಷಣೆ ುನ್ನೇ ಏಕೆ ಮಾಡಬೇಕು ? ॥ ೭ । ಆ ಮೇಲೆ ಪಂಚತತ್ವದಿಂದ ಆದ ಈ ಶರೀರವು ಕೊನೆಗೆ (ಪಂಚತ್ವ)ವನ್ನು ಹೊಂದಿ ಪಂಚತತ್ವದಲ್ಲಿಯೇ ಹೋಗಿ ಕೂಡಿದಮೇಲೆ ಆ ಸಮಯದಲ್ಲಿ ತಾನು ಪಟ್ಟ ಶ್ರಮವನ್ನು ಎಲ್ಲಿ ಹುಡುಕಬೇಕು? ॥ ೮ ॥ ಆದುದರಿಂದ ಕೇವಲ ಶರೀರ ಪೋಷಣಮಾಡುವದು ಅಂದರೆ ಅದು ಪ್ರತ್ಯಕ್ಷ ಘಾತುಕವಾದದ್ದು ಅದೆ. ಹೀಗೆ ಳಿದು ಇದರ ದೆಸೆಯಿಂದಲೇ ನೀನು ಅದೇ ವಿಚಾರದಲ್ಲಿ ನಿನ್ನ ಅಂತಃಕರಣವನ್ನು ಪ್ರವೇಶ ಮಾಡಗೊಡಬೇಡ. ॥ ೯ ॥

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ॥ ೩೪ ॥**

[ **ಇಂದ್ರಿಯಸ್ಯೇತಿ** ] ಯೇರ್ಹವೀ ಇಂದ್ರಿಯಾಂಚಿಯಾ ಅರ್ಥಾ । ಸಾರಿಖಾ ವಿಷಯ ಪೋಷಿತಾ । ಸಂತೋಷ ಕೀರಚಿತ್ತಾ । ಆಪಜೇಲ ॥ ೨೧೦ ॥ ಪರೀ ತೋ ಸಂವಚೋರಾಚಾ ಸಾಂಗಾತ । ಜೈಸಾ ನಾವೇಕ ಸ್ವಸ್ಥ । ಜಂವ ನಗರಾಚಾ ಪ್ರಾಂತ । ಸಾಂಡಿಜೇನಾ ॥ ೧೧ ॥ ಬಾಪಾ ವಿಷಾಚೀ ಮಧುರತಾ । ಝಣೀ ಆವಡೀ ಉಪಜೇ ಚಿತ್ತಾ । ತೋ ಪರಿಣಾಮ ವಿಚಾರಿತಾ । ಪ್ರಾಣಹರೀ ॥೧೨॥ ದೇಖೇ ಇಂದ್ರಿಯೀ ಕಾಮು ಅಶೇ । ತೋ ಲಾವೀ ಸುಖ ದುರಾಶೇ । ಜೈಸಾ ಗಳೀಮೀನ ಆಮಿಷೇ । ಭುಲವಿಜೇಗಾ ॥ ೧೩ ॥ ಪರೀ ತಯಾಮಾಜೀಗಳು ಆಹೆ । ಜೋ ಪ್ರಾಣಾತೇ ಘೇವುನಿ ಜಾಯೇ । ತೋ ಜೈಸಾ ಠಾಉವಾ ನೋಹೇ । ಝಾಂಕಲೇ ಪಣೇ ॥ ೧೪ ॥ ತೈಸೇ ಅಭಿಲಾಷೇ ಯೇಣೇ ಕೀಜೇಲ । ವಿಷಯಾಚೀ ಆಶಾ ಧರಿಜೇಲ । ತರೀ ವರಪಡಾ ಹೋಇಜೇಲ । ಕ್ರೋಧಾನಳಾ ॥ ೧೫ ॥ ಜೈಸಾ ಕವಳೋನಿಯಾ ಪಾರಧೀ । ಘಾತೇಚಿಯೇ ಸಂಧೀ । ಆಣಿ ಮೃಗಾತೇ ಬುದ್ಧೀ । ಸಾಧಾ ವಯಾ ॥ ೧೬ ॥ ಏಥ ತೈಸೀಚಿ ಪರೀ ಆಹೆ । ಮ್ಹಣೂನಿ ಸಂಗ ಹಾ ತುಜ ನೋಹೇ । ಪಾರ್ಥಾ ದೊನ್ಹೀ ಕಾಮು ಕ್ರೋಧ ಹೇ । ಘಾತಕ ಜಾಣೇ ॥ ೧೭ ॥ ಮ್ಹಣವೂನಿ ಹಾ ಆಶ್ರಯೋಚಿ ನ ಕರಾವಾ । ಮನೇ ಹೀ ಆಠವೋ, ನ ಧರಾವಾ । ಏಕ ನಿಜವೃತ್ತೀಚಾ ಮೋಲಾವಾ ನಾಸೋನೇದೀ ॥ ೧೮ ॥

**ಅರ್ಥ**— ವಿಷಯ ಸೇವನೆಯಿಂದ ಪ್ರತ್ಯಕ್ಷ ಸುಖಪ್ರಾಪ್ತಿಯಾಗುತ್ತಿರಲು ಅದರಲ್ಲಿ ಸುಖವಿರುವದಿಲ್ಲ ವೆಂದು ಅನ್ನುವದು ಸರಿಯಾದುದಲ್ಲ. ಹೀಗೆ ನಿನಗೆ ಅನಿಸುತ್ತಿದ್ದರೆ ಇಂದ್ರಿಯಗಳು ಪ್ರೀತ್ಯಾಸ್ಪದವಾದ ವಿಷಯ ವನ್ನೇ ಸೇವನೆ ಮಾಡುವದರಿಂದ ಅಂತಃಕರಣದಲ್ಲಿ ಸಮಾಧಾನವಾಗುವದೇನೋ ನಿಜ. ॥ ೨೧೦ ॥ ಆದರೆ ಕ್ಷಣಿಕ ವಾದ ಆ ಸಮಾಧಾನವು ಅಂದರೆ ತೋರಿಕೆಗೆ ಸಂಭಾವಿತನಂತೆ ನಟಿಸುವ ವಿಶ್ವಾಸಘಾತುಕಿಯಾದ ಕಳ್ಳನ ಸಂಗತಿ ಯಂತೆ ಇರುವದು. ಅವನು ಪಟ್ಟಣದ ಸೀಮೆಯನ್ನು ದಾಟುವ ವರೆಗೆ ಕ್ಷಣ ಹೊತ್ತು ಸುಮ್ಮನೇ ಇದ್ದು ಆ ಮೇಲೆ ಘೋರವಾದ ಅರಣ್ಯದಲ್ಲಿ ಪ್ರವೇಶವಾಗುವದೊಂದೇ ತಡ ಅಲ್ಲಿ ಯಾರೂ ಇಲ್ಲದ ಸಂಧಿಯನ್ನು ಸಾಧಿಸಿ ಹೇಗೆ ಸರ್ವಸ್ವವನ್ನು ಹರಣ ಮಾಡುವನೋ, ಮತ್ತು ಆ ಕಳ್ಳನು ಪ್ರಾಣವನ್ನು ಸೆಗೆದುಕೊಳ್ಳಲಿಕ್ಕೆ ಸಹ ಹೇಗೆ ಹಿಂದುಮುಂದು ನೋಡುವದಿಲ್ಲವೋ, ಹಾಗೆಯೇ ಈ ಕ್ಷಣಿಕವಾದ ವಿಷಯ ಸುಖವೂ ಇರುವದು. ॥ ೨೧೧ ॥ ಅಪ್ಪಾ ಅರ್ಜುನಾ, ಬಚನಾಗವೆಂಬ ವಿಷದ ಬೇರು ತಿನ್ನುವಾಗ ರುಚಿಯಾಗಿ ತೋರುತ್ತದೆ. ವಿಚಾರ

ಮಾಡಿ ನೋಡಿದರೆ ಅದನ್ನು ಸೇವನೆ ಮಾಡುವದರಿಂದ ಕೊನೆಯ ಪರಿಣಾಮವು ಪ್ರಾಣವಿನಾಶವೇ ಆಗಿರುವದು. ಅದೇ ಪ್ರಕಾರ, ॥ ೧೨ ॥ ಇಂದ್ರಿಯ ಸ್ಥಳದಲ್ಲಿ ಇರುವ ಕಾಮವು ವಿಷಯ ಸುಖದ ದುರಾಶೆಯು ಕಡೆಗೆ ಹತ್ತುತ್ತದೆ. ಗಾಣಕ್ಕೆ ಹಚ್ಚಲ್ಪಟ್ಟ ಅಮಿಷ (ಮಾಂಸ) ದ ರುಚಿಗೆ ಮೀನವು ಭ್ರಮಿಸುತ್ತದೆ. ॥ ೧೩ ॥ ಆದರೆ ಅಮಿಷದೊಳಗೆ ಗಾಣವು ಅಡಗಿರುವದೆಂಬುದೂ, ಮತ್ತು ಅದು ತನ್ನ ಪ್ರಾಣ ತೆಗೆದುಕೊಳ್ಳುತ್ತದೆಂಬುದನ್ನು ಆ ಮೀನವು ತಿಳಿಯುವದಿಲ್ಲ. ॥ ೧೪ ॥ ಅದೇ ಪ್ರಕಾರ ವಿಷಯ ಸುಖದ ಅಭಿಲಾಷೆಯಿಂದ ಯಾವನು ವಿಷಯಾಭಿಲಾಷೆಯನ್ನು ಮಾಡುವನೋ, ಅವನು ಕ್ರೋಧಾಗ್ನಿಯಲ್ಲಿ ಬೀಳುವನು. ॥ ೧೫ ॥ ಯಾವ ಪ್ರಕಾರ ಪಾರಧಿಯು (ಬೇಟೆಗಾರನು) ಮೃಗವನ್ನು ಘಾತ ಮಾಡುವ ಸಂಧಿಯನ್ನು ಸಾಧಿಸಿ ನಾಲ್ಕೂ ದಿಕ್ಕಿನಿಂದಲೂ ಅದನ್ನು ಅಟ್ಟಿಕೊಂಡು ಬರುತ್ತಾನೋ, ॥ ೧೬ ॥ ಅದೇ ಪ್ರಕಾರ ಆ ವಿಷಯ ಸುಖದ ರೀತಿಯೂ ಅದೆ. ಕಾರಣ ಪಾರ್ಥಾ, ಕಾಮಕ್ರೋಧಗಳು ಘಾತುಕವಾದವುಗಳೆಂದು ತಿಳಿದು ಅವುಗಳ ಸಂಗತಿಯನ್ನು ನೀನು ಸರ್ವಥಾ ಮಾಡಬೇಡ. ॥ ೧೭ ॥ ಮತ್ತು ಈ ವಿಷಯುಗಳಿಗೆ ಆಸ್ಪದ ಕೊಡದೇ ಮನಸಿನಲ್ಲಿ ಅದರ ಸ್ಮರಣೆಯನ್ನು ಸಹ ಆಗಗೊಡಬೇಡ. ಮತ್ತು ಆತ್ಮಜ್ಞಾನದ ಹಸಿಯನ್ನು ಆರಗೊಡಬೇಡ ॥ ೧೮ ॥

**ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋಭಯಾವಹಃ ॥ ೩೫ ॥**

**[ಶ್ರೇಯಾನ್ಸ್ವಧರ್ಮೋ ವಿಗುಣಃ ಇತಿ]** ಅಗಾ ಸ್ವಧರ್ಮು ಹಾ ಆಪುಲಾ। ಜರೀ ಕಾ ಕಠಿಣ ಜಾಹಲಾ। ತರೀ ಹಾಚಿ ಅನುಷ್ಠಿಲಾ। ಭಲಾದೇಖೆ ॥ ೧೯ ॥ ಯೆರೂ ಆಚಾರ ಜೋ ಪರಾವಾ। ತೋ ದೇಖತಾ ಕೀರ ಬರವಾ। ಪರೀ ಆಚರತೇನಿ ಆಚರಾವಾ। ಆಪುಲಾಚಿ ॥ ೨೨೦ ॥ ಸಾಂಗೇ ಶೂದ್ರಘರೀ ಆಘವೀ। ಪಕ್ವಾನ್ನೇ ಆಹಾತಿ ಬರವೀ। ತೀ ದ್ವಿಜೇ ಕೇವೀ ಸೇವಾವೀ। ದುರ್ಬಳ ಜರೀ ಜಾಹಲಾ ॥ ೨೧ ॥ ಹೇ ಅನುಚಿತ ಕೈಸೇನಿ ಕೀಜೇ। ಅಗ್ರಾಹ್ಯ ಕೇವೀ ಇಚ್ಛಿಜೇ। ಅಥವಾ ಇಚ್ಛಿಲೇಹೀ ಪಾವಿಜೇ। ವಿಚಾರೀ ಪಾ ॥ ೨೨ ॥ ತರೀ ಲೋಕಾಚೀ ಧವಳಾರೇ। ದೇಖೋನಿಯಾ ಮನೋಹರೇ। ಅಸತೀ ಆಪುಲೀ ತಣಾರೇ। ಮೋಡಾವೀ ಕೇವೀ ॥ ೨೩ ॥ ಹೇ ಅಸೋ ವನಿತಾ ಆಪುಲೀ। ಕುರೂಪ ಜರೀ ಜಾಹಲೀ। ತರ್ಹೀ ಭೋಗಿತಾ ತೇಚಿ ಭಲೀ। ಜಿಯಾಪರೀ। ೨೪ ತೇವೀ ಆವಡೇ ತೈಸಾ ಸಾಂಕಡ। ಆಚರತಾ ಜರ್ಹೀ ದುವಾಡ। ತರ್ಹೀ ಸ್ವಧರ್ಮುಚಿ ಸುರವಾಡ। ಪರತ್ರೀಚಾ ॥೨೫॥ ಹಾ।ಗಾ ಸಾಕರ ಆಣಿ ದೂಧ। ಹೇ ಗೌಳ್ಯೇ ಕೀರ ಪ್ರಸಿದ್ಧ। ಪರೀ ಕೃಮಿದೋಷೀ ವಿರುದ್ಧ। ಘೆಪೇ ಕೇವೀ ॥ ೨೬ ॥ ಐಸೇನಿಹೀ ಜರೀ ಸೇವಿಜೇಲ। ತರೀ ತೇ ಆಳುಕೀಚಿ ಉರೇಲ। ಜೇ ತೇ ಪರಿಣಾಮೀ ಪಥ್ಯ ನವ್ಹೇಲ। ಧನುರ್ಧರಾ ॥ ೨೭ ॥ ಮ್ಹಣೋನಿ ಆಣಿಕಾಸೀ ಜೇ ವಿಹಿತ। ಆಣಿ ಆಪಣ ಪೇಯಾ ಅನುಚಿತ। ನಾಚರಾವೇ ಜರೀ ಹಿತ। ವಿಚಾರಿಜೇ ॥ ೨೮ ॥ ಯಾ ಸ್ವಧರ್ಮಾತೇ ಅನುಷ್ಠಿತಾ। ವೇಚು ಹೋಈಲ ಜೀವಿತಾ। ತೋಹಿ ನಿಕಾ ವರ ಉಭಯತಾ। ದಿಸತ ಅಸೇ ॥ ೨೯ ॥ ಐಸೇ ಸಮಸ್ತ ಸುರ ಶಿರೋಮಣೀ। ಬೋಲಿಜೇ ಜೇಥ ಶ್ರೀ ಶಾರ್ಙಪಾಣೀ। ತೇಥ ಅರ್ಜುನ ಮ್ಹಣೇ ವಿನವಣೀ। ಅಸೇ ದೇವಾ ॥ ೨೩೦ ॥ ಹೇ ಜೇ ತುಮ್ಹೀ ಸಾಂಗಿತಲೇ। ತೇ ಸಕಳ ಕೀರ ಮ್ಯಾಪರಿಸಿಲೇ। ತರೀ ಆತಾ ಪುಸೇನ ಕಾಹೀ ಆಪುಲೇ। ಅಪೇಕ್ಷಿತ ॥ ೩೧ ॥

**ಅರ್ಥ—** ಎಲೋ, ನಮ್ಮ ಸ್ವಧರ್ಮವು ಆಚರಣ ಮಾಡಲಿಕ್ಕೆ ಕಠಿಣವಿದ್ದಾಗ್ಯೂ ಅದನ್ನೇ ಆಚರಣ ಮಾಡುವದು ಶ್ರೇಷ್ಠವದೆ. ॥ ೧೯ ॥ ಎರಡನೇದವರ ಧರ್ಮವು ನಿಜವಾಗಿ ನೋಡಲಿಕ್ಕೆ ಶ್ರೇಷ್ಠವೆಂದು ತೋರಿದರೂ ಆಚರಣ ಮಾಡುವವನು ತಮ್ಮ ಧರ್ಮವನ್ನೇ ಆಚರಿಸುವದು ಯೋಗ್ಯವದೆ. ॥ ೨೨೦ ॥ ಬ್ರಾಹ್ಮಣನು ದರಿದ್ರನಾಗಿದ್ದರೂ ಅವನು ಶೂದ್ರನ ಮನೆಯಲ್ಲಿಯ ಉತ್ತಮವಾದ ಪಕ್ವಾನ್ನವನ್ನು ಹೇಗೆ ಸೇವಿಸಬೇಕು ? ॥೨೧॥

ಇಂಥ ಅನುಚಿತ ಕರ್ಮವನ್ನು ಹೇಗೆ ಮಾಡಬೇಕು? ಮತ್ತು ಯಾವದು ಅಗ್ರಾಹ್ಯವಾಗಿರುವದೋ ಅದನ್ನು ಹೇಗೆ ಇಚ್ಛಾ ಮಾಡಬೇಕು? ಒಂದುವೇಳೆ ಇಚ್ಛಾ ಮಾಡಿದುದು ದೊರಕಿದರೂ ಅದನ್ನು ತೆಗೆದುಕೊಳ್ಳಬೇಕೇ? ಈ ಮಾತಿನ ವಿಚಾರ ಮಾಡಿ ನೋಡು. ॥ ೨೨ ॥ ಜನರ ಮೇಲುಪ್ಪರಿಗೆಯ ದೊಡ್ಡ ದೊಡ್ಡ ಸುಂದರವಾದ ಮನೆಗಳನ್ನು ನೋಡಿ ತಮ್ಮ ಹುಲ್ಲಿನ ಗುಡಿಸಲುಗಳನ್ನು ಕಿತ್ತು ಹಾಕಬಹುದೇ? ॥ ೨೩ ॥ ಇದಂತೂ ಇರಲಿ ತಮ್ಮ ಹೆಂಡತಿಯು ಕುರೂಪಿ ಇದ್ದಾಗ್ಯಾದರೂ ಅವಳ ಭೋಗವನ್ನೇ ತೆಗೆದುಕೊಳ್ಳುವದು ಹೇಗೆ ಯೋಗ್ಯವಾಗಿರುವದೋ, ॥ ೨೪ ॥ ಅದರಂತೆಯೇ ಬೇಕಾದಷ್ಟು ಕಠಿಣ ಮತ್ತು ಆಚರಣ ಮಾಡಲಿಕ್ಕೆ ದುರ್ಘಟವಾದ ಸ್ವಧರ್ಮವಿದ್ದಾಗ್ಯಾದರೂ ಅದೇ ಪರಲೋಕದಲ್ಲಿ ಗತಿ ಕೊಡುವಂಥಾದ್ದಾಗಿರುವದು. ॥ ೨೫ ॥ ಹೀಗೆ ನೋಡು ಹಾಲು ಮತ್ತು ಸಕ್ಕರಿ ಈ ಎರಡು ಪದಾರ್ಥಗಳು ಆರೋಗ್ಯ ಮತ್ತು ರುಚಿಕರವಾಗಿರುವವೆಂಬುದು ಪ್ರಸಿದ್ಧವಿರುವದು ಆದರೆ ಯಾವನಿಗೆ ಕ್ರಿಮಿದೋಷ (ಹೊಟ್ಟೆಯಲ್ಲಿ ಜಂತುಗಳು) ಉಂಟಾಗಿರುವವೊ ಅವನಿಗೆ ಅವು ವಿರುದ್ಧ (ಅಪಥ್ಯ) ವಾಗಿರುವವು. ಅವನು ಅವುಗಳನ್ನು ಹೇಗೆ ಸೇವಿಸಬೇಕು? ॥ ೨೬ ॥ ಹೀಗಿದ್ದಾಗ್ಯೂ ರೋಗಿಯು ಹಟದಿಂದ ಸೇವನೆ ಮಾಡಿದರೆ, ಧನುರ್ಧರಾ! ಪರಿಣಾಮದಲ್ಲಿ ಅದು ಅವನಿಗೆ ಹಿತಕರವಾಗಲಾರದು. ॥ ೨೭ ॥ ಆದುದರಿಂದ ನಿನಗೆ ಹಿತವಾಗಬೇಕೆಂದಿದ್ದರೆ ಅನ್ಯರಿಗೆ ಉಚಿತವಾದದ್ದಿದ್ದಾಗ್ಯಾದರೂ ಅದು ನಮಗೆ ಅನುಚಿತವಾಗಿರುವದರಿಂದ ಪರಧರ್ಮದ ಆಚರಣೆಯನ್ನು ಎಂದಿಗೂ ಮಾಡಬಾರದು. ॥ ೨೮ ॥ ಸ್ವಧರ್ಮದ ಆಚರಣೆಯನ್ನು ಮಾಡುತ್ತಿರಲಿಕ್ಕಾಗಿ ಒಂದು ವೇಳೆ ತಮ್ಮ ಪ್ರಾಣ ಹೋದರೂ ಚಿಂತೆಯಿಲ್ಲ. ಅದು ಇಹಪರ ಲೋಕಗಳಲ್ಲಿ ನಿಜವಾಗಿ ಶ್ರೇಷ್ಠವೆಂದು ತಿಳಿಯುತ್ತಾರೆ. ॥ ೨೯ ॥ ಹೀಗೆ, ಸಕಲ ದೇವದೇವತೆಗಳಲ್ಲಿ ಶಿರೋಮಣಿಯಾದ ಶಾರ್ಙ್ಗಪಾಣಿ ಭಗವಾನ್ ಶ್ರೀಕೃಷ್ಣ ಪರಮಾತ್ಮನ ಈ ಭಾಷಣವನ್ನು ಕೇಳಿ ಅರ್ಜುನನು ಅನ್ನುತ್ತಾನೆ—ದೇವಾ! ನನ್ನದೊಂದು ವಿನಂತಿ ಅದೆ. ॥ ೩೦ ॥ ನೀವು ಈಗ ನನಗೆ ಯಾವ ಮಾತು ಹೇಳಿದಿರೋ ಅದನ್ನು ನಾನು ಚನ್ನಾಗಿ ಲಕ್ಷಗೊಟ್ಟು ಕೇಳಿದೆನು. ಇನ್ನು ಮೇಲೆ ನನಗೆ ಯಾವದು ಬೇಕಾಗಿರುವದೋ, ಅದನ್ನು ನಾನು ಕೇಳುತ್ತೇನೆ. ॥ ೩೧ ॥

**ಅರ್ಜುನ ಉವಾಚ—**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

**[ ಅಥೇತಿ ]** ತರೀ ದೇವಾ ಹೇ ಐಸೇ ಕೈಸೇ । ಜೇ ಜ್ಞಾನಿಯಾಂಚಿ ಹೀ ಸ್ಥಿತೀ ಭ್ರಂಶೇ । ಮಾರ್ಗ ಸಾಂಡೂನಿ ಅನಾರಿಸೇ । ಚಾಲತದೇಖೋ ॥ ೩೨ ॥ ಸರ್ವಜ್ಞಹೀ ಜೇ ಹೋತೀ । ಹೇ ಉಪಾಯಹೀ ಜಾಣತೀ । ತೇಹೀ ಪರಧರ್ಮೇ ವ್ಯಭಿಚರತೀ । ಕವಣೇ ಗುಣೇ ॥ ೩೩ ॥ ಬೀಜಾ ಆಣಿ ಭುಸಾ । ಅಂಧ ನಿವಾಡ ನೇಣೇ ಜೈಸಾ । ನಾವೇಕ ದೇಖಣಾಹೀ ತೈಸಾ । ಬರಳೇ ಕಾ ಪಾ ॥ ೩೪ ॥ ಜೇ ಅಸತಾ ಸಂಗ ಸಾಂಡಿತೀ । ತೇಚಿ ಸಂಸರ್ಗ ಕರಿತಾ ನ ಧಾತೀ । ವನವಾಸೀ ಹೀ ಸೇವಿತೀ । ಜನಪದಾತೇ ॥ ೩೫ ॥ ಆಪಣ ತರೀ ಲಪತೀ । ಸರ್ವಸ್ವೇ ಪಾಪ ಚುಕವಿತೀ । ಪರೀ ಬಲಾತ್ಕಾರೇ ಸುಇಜತೀ । ತಯಾಚಿ ಮಾಜೀ ॥ ೩೬ ॥ ಜಯಾಚೀ ಜೀವೇ ಘೇತೀ ವಿವಸೀ । ತೇಚಿ ಜಡೋನಿ ಠಾಕೇ ಜೀವೇಸೀ । ಚುಕವಿತಾ ತೇ ಗಿವಸೀ । ತಯಾತೇಚಿ ॥ ೩೭ ॥ ಐಸಾ ಬಲಾತ್ಕಾರೂ ಏಕ ದಿಸೇ । ತೋ ಕವಣಾಚಾ ಏಥ ಆಗ್ರಹೋ ಅಸೇ । ಹೇ ಬೋಲಾವೇ ಹೃಷಿಕೇಶೇ । ಪಾರ್ಥ ಮ್ಹಣೇ ॥ ೩೮ ॥

**ಅರ್ಥ—** ದೇವಾ! ಜ್ಞಾನಿಗಳ ಸ್ಥಿತಿಸಹಿತ ಭ್ರಷ್ಟವಾಗಿ ಅವರು ಕೆಟ್ಟಮಾರ್ಗವನ್ನು ಆಚರಿಸುತ್ತಾರೆ. ಇದರ ಕಾರಣವೇನು? ॥ ೩೨ ॥ ಅವರು ಸರ್ವಜ್ಞರಿದ್ದು ತ್ಯಾಜ್ಯ ಯಾವುದು? ಗ್ರಾಹ್ಯಯಾವುದು? ಎಂಬುದನ್ನೂ

ಅವರು ಬಲ್ಲರು. ಅವರು ಪರಧರ್ಮದ ಆಚರಣೆಯನ್ನು ಯಾಕೆ ಮಾಡುತ್ತಾರೆ? ॥ ೩೩ ॥ ಕುರುಡ ಮನುಷ್ಯನಿಗೆ ಹೇಗೆ ಧಾನ್ಯ ಮತ್ತು ಹೊಟ್ಟು ಬೇರೆ ಮಾಡಲಿಕ್ಕೆ ಬರುವದಿಲ್ಲವೋ ಹಾಗೆಯೇ ಕ್ಷಣಹೊತ್ತು ಕಣ್ಣಿದ್ದವನಿಗೂ ಕೂಡ ಹೀಗೇಕೆ ಆಗಬೇಕು? ॥ ೩೪ ॥ ಯಾರು ಇದ್ದಂಥ ಸಂಗವನ್ನು ಬಿಟ್ಟುಬಿಡುತ್ತಾರೊ ಅವರೇ ಪುನಃ ಆ ಸಂಗತಿಯಲ್ಲಿ ಸೇರಿಯೂ ತೃಪ್ತರಾಗುವದಿಲ್ಲ. ಮತ್ತು ವನವಾಸದಲ್ಲಿದ್ದಂಥವರು ಕೂಡ ವ್ಯವಹಾರಿಕ ಜನರ ಆಚರಣೆಯನ್ನು ಮಾಡುತ್ತಾರೆ. ॥ ೩೫ ॥ ನಿಜವಾಗಿ ಅವರು ಪಾಪದಿಂದ ಅಲಿಪ್ತರಿರುತ್ತಾರೆ. ಮತ್ತು ಪಾಪವು ತನ್ನ ಕಡೆಯಿಂದ ಘಟಿಸಬಾರದೆಂದು ಇಚ್ಛೆಮಾಡುತ್ತಾರೆ. ಆದರೆ ಅವರಿಗೆ ಯಾರಾದರೂ ಬಲಾತ್ಕಾರ ಮಾಡಿ ಅವರನ್ನು ಪಾಪದಲ್ಲಿ ನೂಕಿದಂತೆ ಪ್ರತೀತಿಗೆ ಬರುತ್ತದೆ. ॥ ೩೬ ॥ ಯಾವ ವಿಷಯದ ದೆಸೆಯಿಂದ ಅವರು ಮನಃಪೂರ್ವಕವಾಗಿ ಭಯ ಪಡುತ್ತಾರೋ ಅದೇ ವಿಷಯವು ಅವರ ಜೀವಕ್ಕೆ ಅಂಟಿಕೊಳ್ಳುತ್ತದೆ. ಅದನ್ನು ತಪ್ಪಿಸುವದರ ದೆಸೆಯಿಂದ ಪ್ರಯತ್ನ ಪಟ್ಟರೂ ಮತ್ತೆ ಅದೇ ತೊಡಕಿನಲ್ಲಿಯೇ ಶಿಲುಕಿಬೀಳುತ್ತಾರೆ. ॥ ೩೭ ॥ ಹೀಗೆ ಒಂದು ಬಲತ್ಕಾರವು ಕಂಡು ಬರುತ್ತದೆ ಅದು ಜ್ಞಾನಿಪುರುಷರು ಸಹ ಯಾವ ಬಲಾತ್ಕಾರದಿಂದ ಮತ್ತು ಆಗ್ರಹದಿಂದ ವಿಷಯಸೇವನೆಮಾಡುವದರಲ್ಲಿ ಆಸಕ್ತರಾಗಿರುವರೆಂಬುದನ್ನು ನೀವು ಕೃಪೆಮಾಡಿ ಹೇಳಬೇಕೆಂದು ಅರ್ಜುನನು ಅನ್ನುತ್ತಾನೆ. ॥ ೩೮ ॥

**ಶ್ರೀಭಗವಾನುವಾಚ—**

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥ ೩೭ ॥**

**[ ಕಾಮ ಇತಿ ]** ತವ ಹೃದಯಕಮಳ ಆರಾಮು । ಜೋ ಯೋಗಿಯಾಂಚಾ ನಿಷ್ಕಾಮು ಕಾಮು । ತೋ ಮ್ಹಣತಸೇ ಪುರುಷೋತ್ತಮು । ಸಾಂಗೇನ ಆಇಕ ॥ ೫೯ ॥ ತರೀ ಹೇ ಕಾಮುಕ್ರೋಧ ಪಾಹೀ । ಜಯಾತೇ ಕೃಪೇಚೀ ಸಾಂರವಣ ನಾಹೀ । ಹೇ ಕೃತಾಂತಾಚ್ಯಾ ಠಾಯೀ । ಮಾನಿಜತೀ ॥ ೨೪೦ ॥ ಹೇ ಜ್ಞಾನ ನಿಧೀಚೇ ಭುಜಂಗ । ವಿಷಯದರೀಚೇ ವಾಘ । ಭಜನಮಾರ್ಗೀಚೇ ಮಾಂಗ । ಮಾರಕ ಜೇ ॥ ೪೧ ॥ ಹೇ ದೇಹ ದುರ್ಗೀಚೆ ಧೋಂಡ । ಇಂದ್ರಿಯ ಗ್ರಾಮೀಂಚೆ ಕೋಂಡ । ಯಾಂಚೆ ವ್ಯಾಮೋಹಾದಿಕ ಬಂಡ । ಜಗಾವರೀ ॥ ೪೨ ॥ ಹೇ ರಜೋಗುಣ ಮಾನಸಾಚೇ । ಸಮೂಳ ಆಸುರಿಯೇಚೇ । ಧಾಯಪಣ ಯಯಾಂಚೇ । ಅವಿದ್ಯಾಕೇಲೇ ॥ ೪೩ । ಹೇ ರಜಾಚೇಕೀರ ಜಾಹಲೇ । ಪರೀ ತಮಾಸೀ ಪಢಿಯಂತೇ ಭಲೇ । ತೇಣೇ ನಿಜಪದ ಯಾ ದೀಧಲೇ । ಪ್ರಮಾಧ ಮೋಹ ॥ ೪೪ ॥ ಹೇ ಮೃತ್ಯೂಚ್ಯಾ ನಗರೀ । ಮಾನಿಜತೇ ನಿಕಿಯಾಪರೀ । ಜೇ ಜೀವಿತಾಚೇ ವೈರೀ । ಮ್ಹಣವೂನಿಯಾ ॥ ೪೫ ॥ ಜಯಾಸೀ ಭುಕೇಲಿಯಾ ಆಮಿಷಾ । ಹೇ ವಿಶ್ವ ನ ಪುರೇಚಿ ಘಾಸಾ । ಕುಳವಾಡೀ ಯಾಂಚೀ ಆಶಾ । ಚಾಳೀತ ಅಸೇ ॥ ೪೬ ॥ ಕೌತುಕೇ ಕವಳಿತಾ ಮುಠೀ । ಜಿಯೇ ಚವದಾ ಭುವನೇ ಥೇಕುಟೀ । ತಿಯೇ ಭ್ರಾಂತಿ ಹೀ ಧಾಕುಟೀ । ವಾಲ್ಹೀ ದುಲ್ಹೀ ॥ ೪೭ ॥ ಜೇ ಲೋಕತ್ರಯಾಂಚೇ ಭಾತುಕೇ । ಖೇಳತಾಂಚಿಖಾಯ ಕವತಿಕೇ । ತಿಚ್ಯಾ ದಾಸೀಪಣಾಚೇನಿ ಬಿಕೇ । ತೃಷ್ಣಾ ಜಿಯೇ ॥ ೪೮ ॥ ಹೇ ಅಸೋ ಮೋಹೇ ಮಾನಿಜೇ । ಯಾಂತೇ ಅಹಂಕಾರೇ ಘೇಪೇ ದೀಜೇ । ಜೇಣೇ ಜಗ ಆಪುಲಿಯಾ ಭೋಜೇ । ನಾಚವೀತ ಅಸೇ ॥ ೪೯ ॥ ಜೇಣೇ ಸತ್ಯಾಚಾ ಭೋಕಸಾ ಕಾಢಿಲಾ । ಮಗ ಅಸತ್ಯ ತೃಣಕುಟಾ ಭರಿಲಾ । ತೋ ದಂಭ ರೂಢವಿಲಾ । ಜಗೀ ಇಂಹೀ ॥ ೨೫೦ ॥ ಸಾಧ್ವಿ ಶಾಂತಿ ನಾಗವಿಲೀ । ಮಗ ಮಾಯಾ ಮಾಂಗೀ ಶೃಂಗಾರಿಲೀ । ತಿಯೇ ಕರವೀ ವಿಟಾಳವಿಲೀ । ಸಾಧುವೃಂದೇ ॥ ೫೧ ॥ ಇಂಹೀ ವಿವೇಕಾಂಚಿ ತ್ರಾಯಫೇಡಿಲೀ । ವೈರಾಗ್ಯಾಚೀ ಸಾಲ ಕಾಢಿಲೀ । ಜಿತಯಾ ಮಾನ ಮೋಡಿಲೀ । ಉಪಶಮಾಚೀ ॥ ೫೨ ॥ ಇಂಹೀ ಸಂತೋಷ ವನ ಖಾಂಡಿಲೇ । ಧೈರ್ಯದುರ್ಗ ಪಾಡಿಲೇ । ಆನಂದ ರೋಪ

**ಸಾಂಡಿಲೇ । ಉಪಡೂನಿಯಾ ॥ ೫೩ ॥ ಇಂಹೀ ಬೋಧಾಚೀ ರೋಪೇಲುಂಚಿಲೀ । ಸುಖಾಚೀ ಲಿಪಿ ಹೀ ಪುಸಿಲೀ । ಜಿವ್ಹಾರೀ ಆಗಿ ಸೂದಲೀ । ತಾಪತ್ರಯಾಚೀ । ೫೪ ॥ ಹೇ ಆಂಗಾ ತವ ಘಡಲೇ । ಜೀವೀಂಚಿ ಆಥಿ ಜಡಲೇ । ಪರೀ ನಾ ತುಡತೀ ಗಿಂವಸಿಲೇ । ಬ್ರಹ್ಮಾದಿಕಾ ॥ ೫೫ ॥ ಹೇ ಚೈತನ್ಯಾಚೇ ಶೇಜಾರೀ । ಬಸತೀ ಜ್ಞಾನಾಚ್ಯಾ ಏಕಾಹಾರೀ । ಮ್ಹಣೋನೀ ಪ್ರವರ್ತತೀ ಮಹಾಮಾರೀ । ಸಾಂಪರತೀನಾ ॥ ೫೬ ॥ ಹೇ ಜಳೇವೀಣ ಬುಡವಿತೀ । ಆಗೀ ವೀಣ ಜಾಳಿತೀ । ನ ಬೋಲತಾ ಕವಳಿತೀ । ಪ್ರಾಣಿಯಾಂತೇ ॥೫೭॥ ಹೇ ಶಸ್ತ್ರೇವೀಣ ಸಾಧಿತೀ । ದೋರೇವೀಣ ಬಾಂಧಿತೀ । ಜ್ಞಾನಿಯಾಸೀ ತರೀ ವಧಿತೀ । ಪೈಜ ಘೇವುನೀ । ೫೮ ॥ ಹೇ ಚಿಖಲೇವೀಣ ರೋವಿತೀ । ಪಾಶೇವೀಣ ಗೋವಿತೀ । ಹೇ ಕವಣಾಜೋಗೇ ನ ಹೋತೀ । ಅಂತುವಟಿಪಣೇ ॥ ೫೯ ॥**

**ಅರ್ಥ**— ಆಗ್ನೆ ಹೃದಯ ಮಂದಿರದಲ್ಲಿ ರಮಿಸುವಂಥ ಶ್ರೀರಾಮನು ಮತ್ತು ಯೋಗೀ ಜನರು ನಿಷ್ಕಾಮದಿಂದ ಯಾವನ ದರ್ಶನಾಪೇಕ್ಷೆಯನ್ನು ಮಾಡುವರೋ ಆ ಪುರುಷೋತ್ತಮನು ಅನ್ನುತ್ತಾನೆ- ಹೇಳುತ್ತೇನೆ ಕೇಳು. ॥ ೩೯ ॥ ಹೃದಯಾರವಿಂದದಲ್ಲಿ ವಾಸಮಾಡುವ ಕಾಮ ಮತ್ತು ಕ್ರೋಧಗಳು ಇವೇ ಮನುಷ್ಯರನ್ನು ಪಾಪದಲ್ಲಿ ಪ್ರವೃತ್ತಿಮಾಡು ವಂಥವು ಇರುತ್ತವೆ. ಕಾರಣವೇನೆಂದರೆ, ಈ ಕಾಮಕ್ರೋಧಗಳಲ್ಲಿ ದಯೆಯು ಲೇಶಮಾತ್ರವೂ ಇರುವದಿಲ್ಲ. ಇವುಗಳ ಹೃದಯವು ಕಠೋರವಾದದ್ದು ಎರಡನೇದವರ ಘಾತಮಾಡುವದರಲ್ಲಿ ಪ್ರತ್ಯಕ್ಷ ಕೃತಾಂತನಂತೆ ಸಾಮರ್ಥ್ಯ ಉಳ್ಳವುಗಳು ಆಗಿರುತ್ತವೆ. ॥ ೪೦ ॥ ಏನು ಹೇಳಲಿ ಈ ಕಾಮಕ್ರೋಧಗಳು ಜ್ಞಾನರೂಪನಿಧಿಯ ಮೇಲಿನ ಕ್ರೂರ-ಸರ್ಪವೂ, ವಿಷಯರೂಪೀ ಗವಿಯೊಳಗಿನ ಹುಲಿಯೂ, ಮತ್ತು ಭಜನ ಮಾರ್ಗದೊಳಗಿನ ಕೊಲೆಗಡಕ ಹೊಲೆಯನೂ, ಆಗಿರುವವು. ॥ ೪೧ ॥ ಮತ್ತು ದೇಹರೂಪೀ ಕಿಲ್ಲೆಯ ಮೇಲಿನ ದೊಡ್ಡ ಬಂಡೆಗಲ್ಲೂ, ಇಂದ್ರಿಯ ರೂಪೀ ಗ್ರಾಮದೊಳಗಿನ ದನಗಳನ್ನು ಹಾಕುವ ದೊಡ್ಡಿಯೂ ಇರುತ್ತವೆ. ಭ್ರಾಂತಿ ಮುಂತಾದುದನ್ನು ಹುಟ್ಟಿಸುವ ದಕ್ಕೆ ಈ ಜಗತ್ತಿನಲ್ಲಿ ಈ ಕಾಮಕ್ರೋಧಗಳ ದರ್ಪವು ಭಯಪ್ರದವಾಗಿದೆ. ॥ ೪೨ ॥ ಇವು ಮನಸಿನ ಸ್ಥಳದಲ್ಲಿ ಭಾಸಮಾನ ಮಾಡುವಂಥವು. ಮೂಲತಃ ಆಸುರೀ ಸಂಪತ್ತಿಯೊಳಗಿನವು ಇದ್ದು ರಜೋಗುಣದ ಕಾರ್ಯ ವಿರುವದು. ಇವುಗಳ ತೃಪ್ತಿಯು ಅವಿದ್ಯದ ಕಡೆಯಿಂದ ಆಗುತ್ತದೆ. ॥ ೪೩ ॥ ಇವು ರಜೋಗುಣದಿಂದ ಆಗಿರುವ ವೇನೋ ನಿಜ. ಆದರೂ ಇವುಗಳ ಮೇಲೆ ತಮೋಗುಣದ ಪ್ರೇಮವು ವಿಶೇಷವಾಗಿರುವದರಿಂದ ಅದು ತನ್ನ ಸರ್ವ ಸಂಪತ್ತನ್ನು ಅಂದರೆ ಅಹಂಕಾರವನ್ನೂ, ಅಜ್ಞಾನವನ್ನೂ ಇದಕ್ಕೆ ಕೊಟ್ಟಿರುತ್ತದೆ. ॥ ೪೪ ॥ ಇವುಗಳು ಜೀವಿತದ ಶತ್ರುಗಳಾಗಿರುತ್ತವೆ. ಅಂತೆಯೇ ಮೃತ್ಯುಲೋಕದಲ್ಲಿ ಇವುಗಳಿಗೆ ಶ್ರೇಷ್ಠವಾದ ಮರ್ಯಾದೆಯು ದೊರಕುತ್ತದೆ. ॥೪೫॥ ಅರ್ಜುನಾ, ಏನು ಚಮತ್ಕಾರ ಹೇಳಲಿ ? ಇವುಗಳಿಗೆ ಸಹಜವಾಗಿ ಹಸಿವೆಯ ಅಪೇಕ್ಷೆಯುಂಟಾದರೆ ಈ ವಿಶ್ವವೆಲ್ಲವೂ ಒಂದು ತುತ್ತಿಗೆ ಸಹ ಸಾಲದೇ ಹೋಗುತ್ತದೆ. ಮತ್ತು ಹೀಗೆ ಇವುಗಳ ವ್ಯಾಸಾರವು ಬೆಳೆಯುತ್ತಾ ಹೋಗುತ್ತದೆ.॥೪೬॥ ಇವುಗಳು ಸಹಜವೇ ತಮ್ಮ ಮುಷ್ಟಿಯನ್ನು ತೆರೆದರೆ ಅದರಲ್ಲಿ ಹದಿನಾಲ್ಕು ಲೋಕಗಳೂ ಹಿಡಿಯುತ್ತವೆ. ಇಂಥ ತರದ ಈ ಭ್ರಾಂತಿ ಎಂಬುವಳು ಆಶಾ ಇವಳಿಗೆ ತಂಗಿಯಾಗಬೇಕು. ॥ ೪೭ ॥ ಯಾವ ಈ ಭ್ರಾಂತಿಯು ಕೇವಲ ಆಡುತ್ತ ಆಡುತ್ತ ಸಹಜವೇ ಮೂರು ಲೋಕಗಳನ್ನು ನುಂಗಿ ಬಿಡುತ್ತಾಳೆ. ಇವಳ ದಾಸ್ಯತ್ವದ ಬಲದಮೇಲೆ ತೃಷ್ಣೆ ಎಂಬುವಳು ಪುಷ್ಟಿ ಹೊಂದುತ್ತಾಳೆ. ॥ ೪೮ ॥ ಇದು ಇರಲಿ; ಆದರೆ ಈ ಕಾಮಕ್ರೋಧಗಳಿಗೆ ಮೋಹದ ಮನೆಯಲ್ಲಿ ಒಳ್ಳೇ ಪ್ರತಿಷ್ಠೆ ಇದೆ. ಮತ್ತು ಯಾವ ಅಹಂಕಾರವು ಸರ್ವ ಜಗತ್ತನ್ನು ಕುಣಿಸುತ್ತಿರುವದೋ ಆ ಅಹಂಕಾರದ ಸಂಗಡ ಈ ಕಾಮಕ್ರೋಧಗಳ ಕೊಡತೊಗೊಂಬುವ ವ್ಯವಹಾರವು ನಡೆಯುತ್ತದೆ. ॥ ೪೯ ॥ ಯಾವ ದಂಭವು ಸತ್ಯದ ಥರವನ್ನು ಬಿಚ್ಚಿ ಅದರಲ್ಲಿ ದುಷ್ಕೃತ್ಯದ ಭರಿಯನ್ನು ತುಂಬಿ ಆ ಅಹಂಕಾರವನ್ನು ಜಗತ್ತಿನಲ್ಲಿ ಇದೇ ಪ್ರಸಿದ್ಧಿಗೆ ತಂದಿರುವದು. ॥ ೫೦ ॥ ಈ ಧಂಭವು ಪತಿವೃತಾರೂಪೀ ಶಾಂತಿಯನ್ನು ತಕ್ಕೈಸಿ ಮಾಯಾ ರೂಪೀ ಹೊಲೆಯಳನ್ನು ಶೃಂಗರಿಸಿ ಅವಳ ಕಡೆಯಿಂದ ಸಾಧು ಸಮುದಾಯವನ್ನು ಭ್ರಷ್ಟಮಾಡಿಸಿದಳು. ॥ ೫೧ ॥ ಇವಳು ವಿವೇಕದ ಸ್ಥಳವನ್ನು ಇಲ್ಲ

ದಂತೆ ಮಾಡಿದಳು. ವೈರಾಗ್ಯದ ಸೊಕ್ಕು ಮುರಿದುಬಿಟ್ಟಳು. ಉಪಶಮದ ಕುತ್ತಿಗೆಯನ್ನು ಕೊಯ್ದು ಅವಳ ಪ್ರಾಣಹರಣ ಮಾಡಿದಳು. ॥ ೫೨ ॥ ಇವಳು ಸಂತೋಷರೂಪೀ ವನವನ್ನು ಕಡಿದು ಹಾಳುಮಾಡಿದಳು. ಧೈರ್ಯ ರೂಪೀ ಕಿಲ್ಲೆಯನ್ನು ನೆಲಸಮ ಮಾಡಿದಳು. ಮತ್ತು ಆನಂದ ರೂಪೀ ಅಗಿಗಳನ್ನು ಕಿತ್ತೊಗೆದಳು. ॥ ೫೩ ॥ ಇವಳು ಜ್ಞಾನದ ಅಗಿಗಳನ್ನು ಬೇರು ಸಹಿತ ಅಗಿದು ತೆಗೆದಳು. ಸುಖದ ಹೆಸರು ಸಹ ಇಲ್ಲದಂತೆ ಮಾಡಿದಳು. ಮತ್ತು ಪ್ರಾಣಿ ಮಾತ್ರಗಳ ಹೃದಯದಲ್ಲಿ ತ್ರಿವಿಧ ತಾಪದ ಜ್ವಾಲೆಯನ್ನು ಉತ್ಪನ್ನಮಾಡಿದಳು. ॥ ೫೪ ॥ ಇವಳು ಶರೀರದ ಸಂಗಡ ಕೂಡಿ ಹೋಗಿರುತ್ತಾಳೆ. ಆದರೆ ಶೋಧಮಾಡಲಿಕ್ಕೆ ಹೋದರೆ ದೊರಕುವದಿಲ್ಲ. ॥ ೫೫ ॥ ಇವಳು ಬ್ರಹ್ಮ ಸ್ವರೂಪದ ಸಮೀಪ ಮತ್ತು ಜ್ಞಾನದ ಪಂಙ್ತಿಯಲ್ಲಿ ವಾಸಮಾಡುತ್ತಾಳೆ. ಆದುದರಿಂದ ಜಗತ್ತಿನ ಮಹಾಪ್ರಳಯ ಮಾಡಲಿಕ್ಕೆ ಪ್ರವರ್ತಳಾಗಿ ಇವಳು ಯಾರಿಗೂ ಅಸುಕೊಳ್ಳುವದಿಲ್ಲ ॥ ೫೬ ॥ ನೀರಿನ ಹೊರ್ತು ಮುಳುಗಿಸುತ್ತಾಳೆ. ಬೆಂಕಿಯಿಲ್ಲದೇ ಸುಡುತ್ತಾಳೆ. ಮತ್ತು ಪ್ರಾಣಿಗಳಿಗೆ ತಿಳಿಯಗೊಡದೇ ನುಂಗುತ್ತಾಳೆ. ॥ ೫೭ ಇವಳು ಶಸ್ತ್ರದ ವಿನಃ ಕಡಿದು ಕೊಲ್ಲುತ್ತಾಳೆ. ಹಗ್ಗವಿಲ್ಲದೇ ಬಂಧಿಸುತ್ತಾಳೆ. ಮತ್ತು ತತ್ವಜ್ಞಾನಿಗಳಿಗೆ ಜಿದ್ದುಕಟ್ಟಿ ತನ್ನ ಆಧೀನ ಮಾಡಿಕೊಳ್ಳುತ್ತಾಳೆ. ॥ ೫೮ ॥ ಇವಳು ಕೆಸರಿಲ್ಲದೇ ಹೂಳುತ್ತಾಳೆ. ಮತ್ತು ಬಲಿಯಿಲ್ಲದೇ ಜನರನ್ನು ನಿರ್ಬಂಧಿಸುತ್ತಾಳೆ. ಇವಳು ಈ ಶರೀರದಲ್ಲಿ ಇಷ್ಟು ಅಂತರ್ಯಾಮೀ ಪ್ರವೇಶಮಾಡಿದ್ದರಿಂದ ಇವಳ ಸಮಾನರಾದ ಶತ್ರುಗಳು ಯಾರೂ ಇರುವದಿಲ್ಲ. ॥ ೫೯ ॥

**ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋಗರ್ಭಸ್ತಥಾ ತೇನೇದಮಾವೃತಂ ॥ ೩೮ ॥**

**[ ಧೂಮೇ ನೇತಿ ]** ಜೈಸೀ ಚಂದನಾಚೀ ಮುಳೀ । ಗಿವಸೋನಿ ಘೇಪೇ ವ್ಯಾಳೀ । ನಾತರೀ ಉಲ್ಬಾಚೀ ಚೋಳೀ । ಗರ್ಭಸ್ಥಾ ಜೈಸೀ ॥ ೨೬೦ ॥ ಕಾ ಪ್ರಭಾವೀಣ ಭಾನು । ಧೂಮೇವೀಣ ಹುತಾಶನು । ಜೈಸಾ ದರ್ಪಣ ಮಳಹೀನು । ಕಹೀಂಚ ನಸೇ ॥ ೬೧ ॥ ತೈಸೇ ಇಂಹೀವೀಣ ಏಕಲೇ । ಆಮ್ಹೀ ಜ್ಞಾನ ನಾಹೀ ದೇಖಿಲೇ । ಜೈಸೇ ಕೋಂಡೇನಿ ಪಾ ಗುತಲೇ । ಬೀಜ ನಿಪಜೇ ॥ ೬೨ ॥

**ಅರ್ಥ—** ಹೇಗೆ ಚಂದನ ವೃಕ್ಷದ ಬೇರಿಗೆ ಹಾವುಗಳು ಮುತ್ತಿಕೊಂಡಿರುವವೋ, ಇಲ್ಲವೇ ಗರ್ಭವೇಷ್ಟಣವು ಹೇಗೆ ಗರ್ಭವನ್ನು ಆಚ್ಛಾದಿಸಿರುವದೋ, ॥ ೨೬೦ ॥ ಅಥವಾ ಪ್ರಕಾಶದ ವಿನಃ ಸೂರ್ಯನೂ, ಹೊಗೆಯ ಹೊರ್ತಾಗಿ ಅಗ್ನಿಯೂ ಇಲ್ಲವೇ ಮಲಹೀನ ಕನ್ನಡಿಯು ಹೇಗೆ ದೊರಕಲಾರವೋ, ॥ ೬೧ ॥ ಹಾಗೆಯೇ ಕಾಮ ಕ್ರೋಧದ ಹೊರ್ತು ಶುದ್ಧ ಜ್ಞಾನವು ನಮ್ಮ ದೃಷ್ಟಿಗೆ ಎಂದೂ ಬಿದ್ದಿರುವದೇ ಇಲ್ಲ. ॥ ೬೨ ॥

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾಽನಲೇನ ಚ ॥ ೩೯ ॥**

**[ ಆವೃತಂ ಜ್ಞಾನಮಿತಿ ]** ತೈಸೇ ಜ್ಞಾನ ತರೀ ಶುದ್ಧ । ಪರೀ ಇಂಹೀ ಅಸೇ ಪ್ರರುದ್ಧ । ಮ್ಹಣೋನಿ ತೇ ಅಗಾಧ । ಹೋವೂನಿ ಠೇಲೇ ॥ ೬೩ ॥ ಆಧೀಯಾಂತೇ ಜಿಣಾವೇ । ಮಗ ತೇ ಜ್ಞಾನ ಪಾವಾವೇ । ತವ ಪರಾಭವೋ ನ ಸಂಭವೇ । ರಾಗದ್ವೇಷಾ ॥ ೬೪ ॥ ಯಾಂತೇ ಸಾಧಾವಯಾ ಲಾಗೀ । ಜೇ ಬಳ ಆಣಿಜೇ ಆಂಗೀ । ತೇ ಇಂಧನೇ ಜೈಸೀ ಆಗೀ । ಸಾವಾವೋ ಹೋಯ ॥ ೬೫ ॥

**ಅರ್ಥ—** ಅದರಂತೆಯೇ ಒಂದುವೇಳೆ ಜ್ಞಾನವು ಸ್ವತಃ ಶುದ್ಧವಿರುತ್ತದಾದರೂ ಕಾಮ ಕ್ರೋಧಗಳಿಂದ ಆಚ್ಛಾದಿತವಾಗಿರುತ್ತದೆ. ಅಂತೆಯೇ ಅದು ಮಹಾ ಬಲಾಢ್ಯವಾಗಿರುತ್ತದೆ. ॥ ೬೩ ॥ ಮೊದಲಿಗೇ ಕಾಮ ಕ್ರೋಧಗಳನ್ನು ಜಯಿಸಬೇಕು. ಆ ಮೇಲೆ ಜ್ಞಾನ ಪ್ರಾಪ್ತಿಯಾಗುವದು. ಆದರೆ ಆ ಕಾಮ ಕ್ರೋಧಗಳನ್ನು ಜಯಿಸುವದು

ಮೊದಲಿಗೇ ಕಠಿಣವಾಗಿರುವದು. ॥ ೬೪ ॥ ಕಾರಣ, ಇವುಗಳನ್ನು ಜಯಸುವದರ ದೆಸೆಯಿಂದ ಯಾವ ಯಾವ ಸಾಧನಗಳನ್ನು ಯೋಜಿಸಿದರೂ ಆ ಎಲ್ಲ ಸಾಧನಗಳು ವಿರುದ್ಧವಾಗಿ ಕಾಮ ಕ್ರೋಧಾದಿಗಳಿಗೇ ಸಹಾಯವಾಗುತ್ತವೆ. ಯಾವ ಪ್ರಕಾರ ಅಗ್ನಿಯನ್ನು ಆರಿಸುವದರ ದೆಸೆಯಿಂದ ಅದರಲ್ಲಿ ಕಟ್ಟಿಗೆಗಳನ್ನು ಚಲ್ಲುವದರಿಂದ ಅದಕ್ಕೇ ಸಹಾಯ ವಾಗುವಂತೆ, ॥ ೬೫ ॥

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನ ಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥ ೪೦ ॥**

**[ ಇಂದ್ರಿಯಾಣೀತಿ ]** ತೈಸೇ ಉಪಾಯ ಕೀಜತೀ ಜೇ ಜೇ । ತೇ ಯಾಂಸೀಚ ಹೋತೀ ವಿರಜೇ । ಮ್ಹಣೋನಿ ಹಟಿಯಾತೇ ಜಿಣಿಜೇ । ಇಂಹೀಚಿ ಜಗೀ ॥ ೬೬ ॥ ಐಸಿಯಾಹೀ ಸಾಂಕಡಾ ಬೋಲಾ। ಏಕ ಉಪಾಯ ಆಹೇ ಭಲಾ। ತೋ ಕರಿತಾ ಜರೀ ಆಂಗವಲಾ । ತರೀ ಸಾಂಗೇನ ತುಜ ॥೬೭॥

**ಅರ್ಥ**— ಯಾವ ಯಾವ ಉಪಾಯಗಳನ್ನು ಮಾಡಬೇಕೋ ಆ ಎಲ್ಲ ಉಪಾಯಗಳೂ ಇವುಗಳಿಗೇ (ಕಾಮ-ಕ್ರೋಧಗಳಿಗೆ) ಸಹಕಾರಿಯಾಗುತ್ತವೆ. ಆದ್ದರಿಂದ ಈ ಜಗತ್ತಿನಲ್ಲಿ ಹಟಯೋಗಿಗಳನ್ನು ಸಹ ಇವು ಜಯಿಸುತ್ತವೆ. ॥ ೬೬ ॥ ಅಂದ ಬಳಿಕ ಕಾಮ ಕ್ರೋಧಗಳು ದುರ್ಜಯವಾದವುಗಳೆಂದು ನಿನಗೆ ಕಾಣಬಹುದು. ಆದರೆ ಹಾಗೆ ಮಾತ್ರ ಇರುವದಿಲ್ಲ. ಅರ್ಜುನಾ, ಇಂಥ ಸಂಕಟದೊಳಗಿಂದಲೂ ಪಾರಾಗಲಿಕ್ಕೆ ಒಂದು ಉತ್ತಮವಾದ ಉಪಾಯವಿರುತ್ತದೆ. ಅದು ನಿನಗೆ ಸಾಧಿಸುವಂತಿದ್ದರೆ ಹೇಳುತ್ತೇನೆ. ॥ ೬೭ ॥

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥ ೪೧ ॥**
**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

**[ ತಸ್ಮಾದಿತಿ ]** ಇಯಾಂಚಾ ಪಹಿಲಾ ಕುರುಠಾ ಇಂದ್ರಿಯೇ । ಏಥೂನಿ ಪ್ರವೃತ್ತಿ ಕರ್ಮಾತೇ ವಿಯೇ । ಆಧೀ ನಿರ್ದಳೂ ಘಾಲೀ ತಿಯೇ । ಸರ್ವಥೈವ ॥ ೬೮ ॥ ಮಗ ಮನಾಚೀ ಧಾಂವಪಾರು ಹೇಲ । ಆಣಿ ಬುದ್ಧೀಚೀ ಸೋಡವಣ ಹೋಈಲ । ಇತು ಕೇನಿ ಥಾರಾ ಮೋಡೇಲ । ಯಾ ಪಾಪಿ ಯಾಂಚಾ ॥ ೬೯ ॥

**ಅರ್ಥ**— ಇವುಗಳ ಮೂಲ ವಾಸ್ತವ್ಯವು ಇಂದ್ರಿಯಗಳಲ್ಲಿಯೇ ಇರುತ್ತದೆ. ಮತ್ತು ಇಂದ್ರಿಯಗಳಿಂದ ಕರ್ಮದ ಪ್ರವೃತ್ತಿಯು ಆಗುತ್ತದೆ. ಆದುದರಿಂದ ಈ ಇಂದ್ರಿಯಗಳನ್ನು ಮೊದಲಿಗೇ ಜಯಸುವವನಾಗು. ॥ ೬೮ ॥ ಹೀಗಾಗುವದರಿಂದ ಮನೋಧಾವನೆಯು ಕುಂಠಿತವಾಗಿ ಬಂಧನದಲ್ಲಿ ಶಿಲುಕಿದ ಬುದ್ಧಿಯು ಬಿಡುಗಡೆ ಹೊಂದೀತು. ಮತ್ತು ಆ ಮೇಲೆ ಈ ಪಾಪಿಷ್ಟ ಕಾಮಕ್ರೋಧಗಳ ವಸ್ತಿಯು ನಾಶಹೊಂದುವದು. ॥ ೬೯ ॥

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ॥ ೪೩ ॥**

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ 'ಕರ್ಮಯೋಗೋ' ನಾಮ ತೃತೀಯೋಧ್ಯಾಯ. ॥ ೩ ॥**

**[ ಏವಂ ಬುದ್ಧೇಃ ಪರಮಿತಿ ]** ಹೇ ಅಂತರೀ ಹೂನಿ ಜರೀಘಿಟಲೇ । ತರೀ ನಿಭ್ರಾಂತ ಜಾಣ ನಿವಟಲೇ । ಜೈಸೇ ರಶ್ಮಿವೀಣ ಉರಲೇ । ಮೃಗಜಳ ನಾಹೀಂ ॥ ೨೭೦ ॥ ತೈಸೇ ರಾಗದ್ವೇಷ ಜರೀ

ನಿಮಾಲೇ । ತರೀ ಬ್ರಹ್ಮೀಂಚೇ ಸ್ವರಾಜ್ಯ ಆಲೇ । ಮಗ ತೋಭೋಗಿ ಸುಖ ಆಪುಲೇ । ಆಪಣಾಚಿ ॥೭೧॥ ತೇ ಗುರುಶಿಷ್ಯಾಂಚೀ ಗೋಠೀ । ಪಿಂಡಾಪದಾಚೀ ಗಾಂಠೀ । ತೇಥ ಸ್ಥಿರ ರಾಹೋನಿ ನುಠೀ । ಕವಣೇ ಕಾಳೀ ॥ ೭೨ ॥ ಐಸೇ ಸಕಳ ಸಿದ್ಧಾಚಾ ರಾವೋ । ದೇವೀ ಲಕ್ಷ್ಮೀಯೇಚಾ ನಾಹೋ । ರಾಯಾ ಐಕೇ ದೇವದೇವೋ । ಬೋಲತಾ ಜಾಹಲಾ ॥ ೭೩ ॥ ಆತಾ ಪುನರಪಿ ತೋ ಅನಂತ । ಆದ್ಯ ಏಕೀ ಮಾತ । ಸಾಂಗೇಲ ತೇಥ ಪಾಂಡುಸುತ । ಪ್ರಶ್ನಕರೀಲ ॥ ೭೪ ॥ ತಯಾಬೋಲಾಚಾ ಹನಪಾಡ । ಕೀ ರಸವೃತ್ತೀಚಾ ನಿವಾಡ । ಯೇಣೇ ಶ್ರೋತಯಾ ಹೋ‌ಈಲ ಸುರವಾಡ । ಶ್ರವಣ ಸುಖಾಚಾ ॥೭೫॥ ಜ್ಞಾನ ದೇವೋ ಮ್ಹಣೇ ನೀವೃತ್ತೀಚಾ । ಚಾಂಗ ಉಠಾವಾ ಕರೂನಿ ಉನ್ಮೇಷಾಚಾ । ಮಗ ಸಂವಾದ ಶ್ರೀಹರಿ ಪಾರ್ಥಾಚಾ । ಭೋಗಾವಾ ಬಾಪಾ ॥ ೨೭೬ ॥

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ, ಭಾವಾರ್ಥ ದೀಪಿಕಾಯಾಂ, ತೃತೀಯೋ-ಽಧ್ಯಾಯಃ ॥ ೩ ॥
ಶ್ಲೋಕ- ೪೩ ಓವೀ- ೨೭೬

**ಅರ್ಥ**— ಈ ಪ್ರಕಾರ ಈ ಕಾಮಕ್ರೋಧಗಳ ವಸ್ತಿಯು ಮನುಷ್ಯನ ಅಂತಃಕರಣದಲ್ಲಿ ಇಲ್ಲದಂತಾದಮೇಲೆ ಈ ಶತ್ರುಗಳು ನಿರ್ಮೂಲವಾದವೆಂದು ತಿಳಿ. ಯಾವಪ್ರಕಾರ ಸೂರ್ಯಕಿರಣದ ಹೊರ್ತು ಮೃಗಜಲವು ದೃಷ್ಟಿಗೆ ಬೀಳುವದಿಲ್ಲವೋ, ॥ ೨೭೦ ॥ ಅದೇ ಪ್ರಕಾರ ರಾಗ-ದ್ವೇಷಗಳು ನಾಶಹೊಂದಿದರೆ ಬ್ರಹ್ಮರೂಪೀ ಸ್ವರಾಜ್ಯವು ಕೈಸೇರುವದೆಂದು ನಂಬು. ಆ ಮೇಲೆ ಅವನು ತನ್ನಲ್ಲಿರುವ ಆತ್ಮಾನಂದ ಸುಖವನ್ನೇ ತಾನು ಭೋಗಿಸುವನು, ।೭೧॥ ಇದೇ ಗುರುಶಿಷ್ಯನ ಗುಪ್ತ ಸಂಭಾಷಣವು। ಇದೇ ಜೀವ ಬ್ರಹ್ಮದ ಐಕ್ಯವು! ಅಲ್ಲಿ ನೀನು ಸ್ಥಿರ ಸೇವಕನಾಗಿ ಅಲ್ಲಿಂದ ಎಂದಿಗೂ ಬಿಡುಗಡೆ ಹೊಂದಬೇಡ. ॥ ೭೨ ॥ ಸಂಜಯನು ಅನ್ನುತ್ತಾನೆ- ರಾಜನೇ ಕೇಳು, ಸಕಲಸಿದ್ಧ ಮುಕುಟ ಮಣಿಯಾದ ಲಕ್ಷ್ಮೀಪತಿ ಶ್ರೀಕೃಷ್ಣ ಪರಮಾತ್ಮನು ಈ ಪ್ರಕಾರ ಮಾತನಾಡಿದನು. ॥ ೭೩ ॥ ಇನ್ನು ಮುಂದೆ ಶ್ರೀಕೃಷ್ಣ ಪರಮಾತ್ಮನು ಒಂದು ಪುರಾತನ ಕಥೆಯನ್ನು ಹೇಳುವನು ಅದನ್ನು ಕೇಳಿ ಪಂಡುನಂದನನೂ ಒಂದು ಪ್ರಶ್ನೆಯನ್ನು ಮಾಡುವನು. ॥ ೭೪ ॥ ಆ ಕಥೆಯ ಯೋಗ್ಯತೆಯನ್ನೂ, ಮತ್ತು ರಸಸ್ಯವನ್ನೂ, ಕೇಳಿ ಶ್ರೋತೃಗಳಿಗೆ ಶ್ರವಣಸುಖದ ಸುಕಾಲವಾದೀತು. ॥ ೭೫ ॥ ನಿವೃತ್ತಿದಾಸರಾದ ಜ್ಞಾನದೇವರು ಅನ್ನುತ್ತಾರೆ- ಅಪ್ಪಗಳಿರಾ ! ಆತ್ಮಜ್ಞಾನ ಪ್ರಾಪ್ತಿಯ ಉತ್ತಮ ಸಿದ್ಧತೆಯಿಂದ ನೀವು ಕೃಷ್ಣಾರ್ಜುನರ ಸಂಪಾದವನ್ನು ಕೇಳಿರಿ. ॥ ೭೬ ॥

**ಶ್ರೀ ಮದ್ಭಗವದ್ಗೀತೆಯ ಮತ್ತು ಜ್ಞಾನೇಶ್ವರಿಯ ಸರಲ, ಸುಲಭ ಕನ್ನಡ ಭಾಷಾಂತರದ ಮೂರನೆಯ ಅಧ್ಯಾಯವು**

## ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**



# ಜ್ಞಾ ನೇ ಶ್ವ ರಿ

## ನಾಲ್ಕನೆಯ ಅಧ್ಯಾಯವು

ಆಜಿ ಶ್ರವಣೇಂದ್ರಿಯಾ ಪಾಹಲೇ । ಜೇ ಯೇಣೇ ಗೀತಾನಿಧಾನ್ನ ದೇಖಿಲೇ । ಆತಾ ಸ್ವಪ್ನಚಿ ಹೇ ತುಕಲೇ । ಸಾಚಾಸರಿಸೇ ॥ ೧ ॥ ಆಧೀಚಿ ವಿವೇಕಾಚೀ ಗೋಠೀ । ವರೀ ಪ್ರತಿಪಾದೀ ಶ್ರೀಕೃಷ್ಣ ಜಗಜೇಠೀ । ಆಣಿ ಭಕ್ತರಾಜ ಕಿರೀಟೀ । ಪರಿಸತ ಅಸೇ ॥ ೨ ॥ ಜೈಸಾ ಪಂಚಮಾಲಾಪ ಸುಗಂಧ । ಕೀ ಪರಿಮಳ ಆಣಿ ಸುಸ್ವಾದ । ಭಲಾ ಜಾಹಲಾ ವಿನೋದ । ಕಥೇಚಾ ಇಯೇ ॥ ೩ ॥ ಕೈಸೀ ಆಗಳಿಕ ದೈವಾಚೀ । ಜೇ ಗಂಗಾ ಜೋಡಿಲೀ ಅಮೃತಾಚೀ । ಹೋ ಕಾ ಜಪ ತಪೇ ಶ್ರೋತಯಾಂಚೀ । ಫಳಾ ಆಲೀ ॥ ೪ ॥ ಆತಾ ಇಂದ್ರಿಯ ಜಾತಆಘವೇ । ತಿಹೀ ಶ್ರವಣಾಚೇ ಘರ ರಿಘಾವೇ । ಮಗ ಸಂವಾದ ಸುಖ ಭೋಗಾವೇ । ಗೀತಾಖ್ಯ ಹೇ ॥ ೫ ॥ ಹಾ ಅತಿಸೋ ಅತಿ ಪ್ರಸಂಗೇ । ಸಾಂಡೂನಿ ಕಥಾಚಿ ತೇ ಸಾಂಗೇ । ಜೇ ಕೃಷ್ಣಾರ್ಜುನ ದೋಘೇ । ಬೋಲತ ಹೋತೇ ॥ ೬ ॥ ತೇ ವೇಳೀ ಸಂಜಯೋ ರಾಯಾತೇ ಮ್ಹಣೇ । ಅರ್ಜುನ ಅಧಿಷ್ಠಿಲಾ ದೈವ ಗುಣೇ । ಜೇ ಅತಿ ಪ್ರೀತೀ ಶ್ರೀನಾರಾಯಣೇ । ಬೋಲಿಜತ ಅಸೇ ॥ ೭ ॥ ಜೇ ನ ಸಾಂಗೇಚಿ ಪಿತಯಾ ವಸುದೇವಾಸೀ । ಜೇ ನ, ಸಾಂಗೇಚಿ ಮಾತೇ ದೇವಕೀಸಿ । ಜೇ ನ ಸಾಂಗೇಚಿ ಬಂಧು ಬಳಿ ಭದ್ರಾಸೀ । ತೇ ಗುಹ್ಯ ಅರ್ಜುನೇಸೀ ಬೋಲತ ॥ ೮ ॥ ದೇವೀ ಲಕ್ಷ್ಮೀಯೇ ಏವಢೀ ಜವಳಿಕ । ತೇಹೀ ನ ದೇಖೇ ಯಾ ಪ್ರೇಮಾಚೆ ಸುಖ । ಆಜೀ ಶ್ರೀಕೃಷ್ಣ ಪ್ರೇಮಾಚೆ ಬಿಕ । ಯಾತೇಂಚಿ ಆಥೀ ॥ ೯ ॥ ಸನಕಾದಿಕಾಂಚಿಯಾ ಆಶಾ । ವಾಢೀ ನಲ್ಗ್ಯಾ ಕೀರ ಬಹುವಸಾ । ಪರೀ ತ್ಯಾಹೀ ಯೇಣೇ ಮಾನೇ ಯಶಾ । ಯೇತೀಚಿನಾ ॥ ೧೦ ॥ ಯಾ ಶ್ರೀಜಗದೀಶ್ವರಾಚೆ ಪ್ರೇಮ । ಏಥ ದಿಸತಸೇ ನಿರುಪಮ । ಕೈಸೇ ಪಾರ್ಥೇ ಯೇಣೇ ಸರ್ವೋತ್ತಮ । ಪುಣ್ಯಕೇಲೇ ॥ ೧೧ ॥ ಹೋ ಕಾ ಜಯಾಚಿಯಾ ಪ್ರೀತಿ । ಆಮೂರ್ತ ಹಾ ಆಲಾ ವ್ಯಕ್ತೀ । ಮಜ ಏಕ ವಂಕೀ ಯಾಚೀ ಸ್ಥಿತಿ । ಆವಡತ ಅಸೇ ॥ ೧೨ ॥ ಯೇರ್ಹವೀ ಹಾ ಯೋಗಿಯಾ ನಾಡಳೇ । ವೇದಾರ್ಥಾಸಿ ನಾಕಳೇ । ಜೇಥ ಧ್ಯಾನಾಚೇಹೀ ಡೋಳೇ ಪಾವತೀನಾ ॥ ೧೩ ॥ ತೋ ಹಾ ನಿಜಸ್ವರೂಪ । ಅನಾದಿ ನಿಷ್ಕಂಪ । ಪರೀ ಕವಣೇ ಮಾನೇ ಸ ಕೃಪ । ಜಾಹಲಾ ಆಹೇ ॥ ೧೪ ॥ ಹಾ ತ್ರೈಲೋಕ್ಯಪಟಾಚೀ ಘಡೀ । ಅಕಾರಾಚೀ ಪೈಲಥಡೀ । ಕೈಸಾ ಯಾಚಿಯೇ ಆವಡೀ । ಆವರಲಾ ಅಸೇ ॥ ೧೫ ॥

**ಇಲ್ಲಿ ಶ್ರೀಜ್ಞಾನೇಶ್ವರ ಮಹಾರಾಜರು ಶ್ರೋತೃಗಳ ಮತ್ತು ಶ್ರೋತ್ರೇಂದ್ರಿಯಗಳ ಭಾಗ್ಯವರ್ಣನೆಯನ್ನು ಪ್ರತಿಪಾದನೆಮಾಡಿರುತ್ತಾರೆ.**

**ಅರ್ಥ**— ಈ ದಿವಸ ಶ್ರವಣೇಂದ್ರಿಯಗಳಿಗೆ (ಶ್ರೀಗುರು ಕೃಪಾರೂಪೀ ಪ್ರಕಾಶದಿಂದ ಕಿವಿಗಳಲ್ಲಿ ಗೀತಾ ತತ್ವವು ಪ್ರತ್ಯಕ್ಷ ದೃಗ್ಗೋಚರವಾಯಿತು.) ಭಾಗ್ಯೋದಯವು ಪ್ರಾಪ್ತವಾಯಿತು. ಕಾರಣವೇನಂದರೆ ಯಥಾರ್ಥ ಗೀತೆಯ ಶ್ರವಣವಾಗುವದು ಬಹಳಮಾಡಿ ಸ್ವಪ್ನವತ್ ಅದೆ. ಈಗ ಭಾಗ್ಯೋದಯವು ಪರಿಪಕ್ವವಾದುದರಿಂದ ಇಂತಹ ಗೀತಾರೂಪ ನಿಕ್ಷೇಪವನ್ನು ಈ ದಿವಸ ಕರ್ಣಗಳು ಪ್ರತ್ಯಕ್ಷ ನೋಡಿದವು. ಜಾಗ್ರತವಾದ ಮೇಲೆ ಸ್ವಪ್ನದೊಳಗಿನ ಮಾತು ಅಸತ್ಯವೆಂದು ಭಾಸವಾಗುತ್ತದೆ. ಆದರೆ ಅದು ಈ ದಿವಸ ಸತ್ಯವೆಂದು ತೋರಿತು. ॥ ೧ ॥ ಮೊದಲಿಗೇ ಆತ್ಮವಿಚಾರವು! (ವಿವೇಕದ ಸಂಭಾಷಣವು) ಅದರಲ್ಲಿ ಜಗತ್ತಿನಲ್ಲಿ ಶ್ರೇಷ್ಠ ಸರ್ವೋತ್ತಮನಾದ ಭಗವಾನ್ ಶ್ರೀಕೃಷ್ಣ ಪರಮಾತ್ಮನು ಪ್ರತಿಪಾದನ ಮಾಡುವವನು! ಮತ್ತು ಭಕ್ತರಾಜ ಅರ್ಜುನನು ಕೇಳುವವನು!! ॥ ೨ ॥

ಪಂಚಮಸ್ವರವೂ ಮತ್ತು ಅದರಲ್ಲಿಯೇ ಉತ್ತಮ ಸುಗಂಧ ಸುವಾಸನೆಯೂ ಮತ್ತು ಸ್ವಾದವೂ ಇವುಗಳ ಐಕ್ಯವಾದರೆ ಹೇಗೆ ಆನಂದವಾಗುವದೋ, ಹಾಗೆಯೇ ಈ ಗೀತಾರೂಪೀ ಕಥಾಮೃತದಲ್ಲಿ ಸರ್ವ ಇಂದ್ರಿಯಗಳಿಗೂ ಆನಂದವಾಗುವ ರಸವು ತುಂಬಿದೆ. ॥ ೩ ॥ ದೈವದ ಮಹತ್ವವನ್ನು ದೊಡ್ಡಸ್ತಿಕೆಯನ್ನು) ಎಷ್ಟು ವರ್ಣನೆ ಮಾಡಿದರೂ ತೀರದು. ಯಾವುದರ ಯೋಗದಿಂದ ಶ್ರೋತೃಗಳ ಜಪತಪಗಳು ಫಲದ್ರೂಪವಾಗಿರುವವು. ಅದರಿಂದ ಅವರಿಗೆ ಅಮೃತರೂಪ ಗಂಗೆಯು ದೊರಕಿರುವಳು. ॥ ೪ ॥ ಆದುದರಿಂದ ಸರ್ವ ಇಂದ್ರಿಯಗಳೂ ತಮ್ಮ ತಮ್ಮ ಉದ್ಯೋಗಗಳನ್ನು ಬಿಟ್ಟು ಶ್ರವಣೇಂದ್ರಿಯಗಳಲ್ಲಿ ಪ್ರವೇಶಮಾಡಿ, ಏಕಾಗ್ರದಿಂದ ಕೃಷ್ಣಾರ್ಜುನರ 'ಪ್ರಶ್ನೋತ್ತರರೂಪ ಸಂಭಾಷಣದ) ಗೀತೆಯ ಸಂವಾದ ಸುಖವನ್ನು ಭೋಗಿಸಬೇಕು. ॥ ೫ ॥ ( ಆವಾಗ ಸಂತ ಸಮುದಾಯವು ಶ್ರೀ ಜ್ಞಾನೇಶ್ವರ ಮಹಾರಾಜರಿಗೆ ಅನ್ನುತ್ತಾರೆ- ) ಇನ್ನು ಮೇಲೆ ನಿನ್ನ ವಿಸ್ತಾರವಾದ, ಅತಿಶಯೋಕ್ತಿ ವರ್ಣನೆಯನ್ನು ಸಾಕುಮಾಡಿ ಶ್ರೀ ಕೃಷ್ಣಾರ್ಜುನರು ಏನು ಮಾತಾಡುತ್ತಿದ್ದರೋ ಆ ಕಥೆಯನ್ನೇ ಹೇಳು. ॥ ೬ ॥ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ಆ ಸಮಯದಲ್ಲಿ ಸಂಜಯನು ಧೃತರಾಷ್ಟ್ರ ರಾಜನಿಗೆ ಹೇಳುತ್ತಾನೆ. ಸುದೈವದಿಂದ ಯುಕ್ತನಾದ ಮಹಾಭಾಗ್ಯಶಾಲಿ ಅರ್ಜುನನಿಗೆ ಶ್ರೀ ನಾರಾಯಣನು ಅತಿಶಯವಾದ ಪ್ರೇಮದಿಂದ ಹೇಳುತ್ತಾನೆ. ॥ ೭ ॥ ಯಾವ ಗುಪ್ತ ರಹಸ್ಯವನ್ನು ತನ್ನ ತಂದೆ ವಸುದೇವನಿಗೆ ಮತ್ತು ತಾಯಿ ದೇವಕಿಗೆ, ಬಂಧು ಬಲರಾಮನಿಗೆ ಸಹ ಹೇಳಲಿಲ್ಲವೋ, ಆ ಗುಹ್ಯವನ್ನು ಅರ್ಜುನನಿಗೆ ಹೇಳಿದನು. ॥ ೮ ॥ ಶ್ರೀ ಲಕ್ಷ್ಮೀದೇವಿಯು ಯಾವಾಗಲೂ ಪರಮಾತ್ಮನ ಸನ್ನಿಧಿಯಲ್ಲಿದ್ದು ಸೇವಾಮಾಡುತ್ತಿರುವಳು. ಆದರೆ ಅವಳಿಗೆ ಕೂಡ ಈ ಪ್ರೇಮಸುಖದ ಅನುಭವವು ದೊರಕಲಿಲ್ಲ. ಆ ಕೃಷ್ಣಪ್ರೇಮದ ಬಲವು ಈ ದಿವಸ ಆ ಪಾರ್ಥನಲ್ಲಿಯೇ ಉಂಟಾಗಿರುವದು. ॥ ೯ ॥ ಸನಕಾದಿಗಳು ಬಹಳ ದಿವಸದಿಂದ (ಪರಮಾತ್ಮಸುಖದ ವಿಷಯದಲ್ಲಿ) ನಿಶ್ಚಯದಿಂದ ಅತಿಶಯ ಆಶಾಮಾಡುತ್ತಿದ್ದರೂ, ಈ ತರದ ಯೋಗ್ಯತೆಯ ಪ್ರೇಮವು ಅವರಿಗೆ ದೊರಕಲಿಲ್ಲ. ॥ ೧೦ ॥ ಈ ಜಗದೀಶ್ವರ ಶ್ರೀಕೃಷ್ಣನ ಅನುಪಮ ಪ್ರೇಮವು ಅರ್ಜುನನಲ್ಲಿಯೇ ನೆಲೆಸಿರುವದನ್ನು ನೋಡಲು ಎಂತಹ ಮಹತ್‌ಪುಣ್ಯವನ್ನು ಮಾಡಿರಬಹುದು ! ॥ ೧೧ ॥ ಯಾವನ ಪ್ರೀತಿಯ ದೆಸೆಯಿಂದ ನಿರಾಕಾರನಾದ ಪರಬ್ರಹ್ಮನು ಸಾಕಾರಕ್ಕೆ ಬಂದನೋ ಅಂತಹ ಅರ್ಜುನನ ಏಕನಿಷ್ಠಾವಸ್ಥಾ (ದೇಹವು) ಭಿನ್ನವಾಗಿದ್ದರೂ ಉಭಯತರು ಒಂದೇ ರೂಪವಾಗಿರುವರು. ॥ ೧೨ ॥ ಭಗವಾನ್ ಶ್ರೀಕೃಷ್ಣಪರಮಾತ್ಮನು, ಯೋಗಿಗಳ ದೃಷ್ಟಿಗೆ ಗೋಚರವಾಗದವನು ! ವೇದಗಳಿಗೆ ತಿಳಿಯದವನು ! ಅವನಲ್ಲಿ ಧ್ಯಾನದ ದೃಷ್ಟಿಯು ಪ್ರವೇಶವಾಗುವದಿಲ್ಲ. ॥ ೧೩ ॥ ಅವನು ಆತ್ಮಸ್ವರೂಪನೂ, ಅನಾದಿಯೂ, ಜನ್ಮರಹಿತನೂ, ಅಚಲನೂ ಆದ ಭಗವಾನನು ಆ ಅರ್ಜುನನ ಮೇಲೆ ಕೃಪಾವಂತನಾಗಿರುವನು ! ॥ ೧೪ ॥ ಇವನು ತ್ರೈಲೋಕ್ಯರೂಪವಸ್ತ್ರದ (ಮೂರು ಲೋಕಗಳೂ ಇವನ ರೂಪವಿದ್ದು ) ಘಳಿಗೆಯು ! ಆಕಾರದ ಆಚೆಗಿರುವವನು ! ಇಂತಹನು ಅರ್ಜುನನಿಗೆ ಇಷ್ಟು ಪ್ರೇಮದಿಂದ ಸ್ವಾಧೀನನಾದುದು ಹೇಗೋ ತಿಳಿಯದು ! ॥ ೧೫ ॥

**ಶ್ರೀ ಭಗವಾನುವಾಚ—**

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

[ **ಶ್ರೀಭಗವಾನುವಾಚ ಇಮಮಿತಿ** ] ಮಗ ದೇವ ಮ್ಹಣೇ ಪಾಂಡುಸುತಾ । ಹಾಚಿ ಯೋಗ ಆಮ್ಹೀ ವಿವಸ್ವತಾ । ಕಥಿಲಾಪರೀ ತೇ ವಾರ್ತಾ । ಬಹುವಾ ದಿವಸಾಂಚೀ ॥ ೧೬ ॥ ಮಗ ತೇಣೇ ವಿವಸ್ವತೇ ರವೀ । ಹೇ ಯೋಗಸ್ಥಿತೀ ಆಘವೀ । ನಿರೂಪಿಲೀ ಬರವೀ । ಮನೂಪ್ರತಿ ॥ ೧೭ ॥ ಮನೂನೆ ಆಪಣ ಅನುಷ್ಠಿಲೀ । ಮಗ ಇಕ್ಷ್ವಾಕುವಾ ಉಪದೇಶಿಲೀ । ಐಸೀ ಪರಂಪರಾ ವಿಸ್ತಾರಿಲೀ । ಆದ್ಯ ಹೇ ಗಾ ॥ ೧೮ ॥

**ಅರ್ಥ**— ಆ ಮೇಲೆ ಭಗವಾನ್ ಶ್ರೀಕೃಷ್ಣನು ಪಂಡುಪುತ್ರನಾದ ಅರ್ಜುನನಿಗೆ ಅನ್ನುತ್ತಾನೆ— ನಿಷ್ಕಾಮ ಕರ್ಮಯೋಗವನ್ನು ನಾನು ಮೊದಲು ವಿವಸ್ವತನೆಂಬ ಸೂರ್ಯನಿಗೆ ಹೇಳಿದೆನು. ಆದರೆ ಆ ಮಾತಿಗೆ ಈಗ ಬಹಳ ದಿವಸಗಳಾಗಿ ಹೋದವು. ॥ ೧೬ ॥ ಆ ಮೇಲೆ ಸೂರ್ಯನು ಈ ಸರ್ವ ಯೋಗವನ್ನು ವೈವಸ್ವತ ಮನುವಿಗೆ ಹೇಳಿದನು. ॥ ೧೭ ॥ ಮತ್ತು ಮನುಋಷಿಯು ಆ ಯೋಗದ ಆಚರಣೆಯನ್ನು ಮಾಡಿ ಇಕ್ಷ್ವಾಕು ಎಂಬ ಹೆಸರಿನ ತನ್ನ ಪುತ್ರನಿಗೆ ಅದರ ಉಪದೇಶವನ್ನು ಮಾಡಿದನು. ಹೀಗೆಯೇ ಮೊದಲಿನಿಂದ ಪರಂಪರೆಯಾಗಿ ಈ ಯೋಗೋಪದೇಶವು ನಡೆದುಬಂದಿರುತ್ತದೆ. ॥ ೧೮ ॥

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥ ೨ ॥**

**[ಏವಂ ಪರಂಪರಾ ಪ್ರಾಪ್ತಮಿಂತಿ]** ಮಗ ಆಣಿಕಹೀ ಯಾ ಯೋಗಾತೇ । ರಾಜರ್ಷಿ ಜಾಹಲೇ
ಜಾಣತೇ । ಪರೀ ತೇಥೋನಿ ಆತಾ ಸಾಂಪ್ರತೇ । ನೇಣಿ ಜೇ ಕೋಣ್ಹೀ ॥ ೧೯ ॥ ಜೇ ಪ್ರಾಣಿಯಾ
ಕಾಮೀ ಭರ । ದೇಹಾಚಿವರೀ ಆದರ । ಮ್ಹಣೋನಿ ಪಡಿಲಾ ವಿಸರ । ಆತ್ಮಬೋಧಾಚಾ ॥ ೨೦ ॥
ಅವ್ಹಾಟಲಿಯಾ ಆಸ್ಥಾ ಬುದ್ಧಿ । ವಿಷಯಸುಖಾಚೀ ಪರಮಾವಧಿ । ಜೀವ ತೈಸಾ ಉಪಾಧಿ । ಆವಡೇ
ಲೋಕಾ ॥ ೨೧ ॥ ಯೇರ್ಹವೀ ತರ್ಹೀ ಖವಣೇಯಾಂಚ್ಯಾ ಗಾಂವೀ । ಪಾಟಾವೇ ಕಾಯ ಕರಾವೀ ।
ಸಾಂಗೇ ಜಾತ್ಯಂಧಾರವೀ । ಕಾಯ ಆಥೀ ॥ ೨೨ ॥ ಕಾ ಬಹಿರ ಯಾಂಚ್ಯಾ ಆಸ್ಥಾನೀ । ಕವಣ ಗೀತಾ
ತೇ ಮಾನೀ । ಕೀ ಕೋಳ್ಹೇಯಾ ಚಾಂದಣೀ । ಆವಡೀ ಉಪಜೇ ॥ ೨೩ ॥ ಪೈ ಚಂದ್ರೋದಯಾ
ಆರೌತೇ । ಜಯಾಂಚೇ ಡೋಳೇ ಫುಟತೀ ಅಸತೇ । ತೇ ಕಾವಳೇ ಕೇವೀ ಚಂದ್ರಾತೇ । ವೋಳಖತೀ
॥ ೨೪ ॥ ತೈಸೀ ವೈರಾಗ್ಯಾಚೀ ಶಿಂವ ನ ದೇಖತೀ । ಜೇ ವಿವೇಕಾಚೀ ಭಾಷಾ ನೇಣತೀ । ತೇ ಮೂರ್ಖ
ಕೇವೀ ಪಾವತೀ । ಮಜ ಈಶ್ವರಾತೇ ॥ ೨೫ ॥ ಕೈಸಾನೇಣೋ ಮೋಹ ವಾಢಿನಲಾ । ತೇಣೇ ಬಹುತೇಕ
ಕಾಳ ವ್ಯರ್ಥ ಗೇಲಾ । ಮ್ಹಣೋನಿ ಯೋಗ ಹಾ ಲೋಪಲಾ । ಲೋಕೀ ಇಯೇ ॥ ೨೬ ॥

**ಅರ್ಥ**— ಮುಂದೆ ಮತ್ತೆ ಕೆಲವು ರಾಜಋಷಿಗಳಿಗೆ ಈ ಯೋಗವು ಗೊತ್ತಾಯಿತು. ಆದರೆ ಆ ಮೇಲೆ ಈ ಹೊತ್ತಿನವರೆಗೆ ಅದು ಯಾರಿಗೂ ಗೊತ್ತಿರುವದಿಲ್ಲ. ॥ ೧೯ ॥ ಕಾರಣವೇನಂದರೆ ಪ್ರಾಣಿಗಳಿಗೆ ವಿಷಯ ಸೇವನೆಯಲ್ಲಿಯೇ ಪ್ರೇಮವೂ ಮತ್ತು ದೇಹದ ಮೇಲೆಯೇ ಆದರವೂ ಇದ್ದುದರಿಂದ ಅವರಿಗೆ ಆತ್ಮಬೋಧದ ವಿಸ್ಮರಣೆಯು ಆಗಿರುವದು. ॥ ೨೦ ॥ ಆಸ್ತಿಕ ಬುದ್ಧಿಯು ತಪ್ಪು ಹಾದಿಯಿಂದ ನಡೆದದ್ದರಿಂದ ವಿಷಯ ಸುಖವೇ ಪರಮಾವಧಿಯಾಗಿ ಅದೇ ಆದ್ಯಕರ್ತವ್ಯವೆಂದು ಜನರಿಗೆ ತಿಳಿದು ಅವರು ಜೀವದಕಿಂತಲೂ ವಿಷಯರೂಪ ಉಪಾಧಿಯಮೇಲೆ ಪ್ರೇಮಮಾಡಹತ್ತಿದರು. ॥ ೨೧ ॥ ಹೀಗೆ ನೋಡು– ಯಾವಾಗಲೂ ನಗ್ನರಾಗಿ ಇರುವ ದಿಗಂಬರರ (ಜೈನ ಸನ್ಯಾಸಿಗಳ) ಊರಿನಲ್ಲಿ ಉತ್ತಮೋತ್ತಮವಾದ ವಸ್ತ್ರಗಳ (ಶಾಲು ಶಕಲಾತಿಗಳ)ನ್ನು ಯಾರು ಅಪೇಕ್ಷೆ ಮಾಡುವರು? ಇಲ್ಲವೇ ಜನ್ಮಾಂಧನಿಗೆ ಸೂರ್ಯನ ಉಪಯೋಗವೇನು? ॥ ೨೨ ॥ ಇಲ್ಲವೇ ಕಿವುಡರ ಸಭೆಯಲ್ಲಿ ಗಾಯನವಾದನಕ್ಕೆ ಯಾರು ಮಾನಕೊಡುವರು? ಅಥವಾ ತುಡಗುಮಾಡುವ ವ್ಯಸನವಿದ್ದವರಿಯ ಮನಸಿನಲ್ಲಿ ಬೆಳದಿಂಗಳಿನಿಂದ ಆನಂದವು ಹೇಗಾಗಬೇಕು? ॥ ೨೩ ॥ ಅದರಂತೆಯೇ ಚಂದ್ರೋದಯ ಪೂರ್ವದಲ್ಲಿ ಯಾವ ಪ್ರಾಣಿಗಳ ಕಣ್ಣುಗಳು ಕಾಣದಂತಾಗುತ್ತವೆಯೊ ಆ ಕಾಗೆಗಳು ಚಂದ್ರನನ್ನು ಹೇಗೆ ನೋಡುವವು? ಅವುಗಳಿಗೆ ಚಂದ್ರನ ಪರಿಚಯವಾದರೂ ಹೇಗಾಗಬೇಕು? ॥ ೨೪ ॥ ಇದರಂತೆ ಯಾವನು ವೈರಾಗ್ಯದ ಸೀಮೆಯನ್ನು ಸಹ ನೋಡಿರುವದಿಲ್ಲ ಮತ್ತು ಯಾವನಿಗೆ ವಿವೇಕದ ಭಾಷಣವು ಗೊತ್ತೇ ಇರುವದಿಲ್ಲವೋ, ಆ ಮೂರ್ಖನಿಗೆ ನನ್ನ-ಪರಮೇಶ್ವರ, ಪ್ರಾಪ್ತಿಯ ಲಾಭವು ಹೇಗಾಗುವದು? ॥ ೨೫ ॥ ಈ ಮೋಹವು ಇಷ್ಟು ಹೇಗೆ ಬೆಳೆಯಿತೆಂಬುದನ್ನು ಯಾರು ಬಲ್ಲರು? ಆದರೆ ಅದರಿಂದಲೇ ಬಹಳೊಂದು ಕಾಲವು ವ್ಯರ್ಥವಾಗಿ ಗತಿಸಿ ಹೋಗಿರುವದು. ಆದುದರಿಂದ ಈ ಜಗತ್ತಿನಲ್ಲಿ ಆ ಯೋಗವು ಮುಳುಗಿಹೋಗಿರುವದು. ॥ ೨೬ ॥

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ ॥ ೩ ॥**

[ **ಸ ಏವೋತಿ** ] ತೋಚೀ ಹಾ ಆಜೀ ಆತಾ । ತುಜಪ್ರತಿ ಕುಂತೀ ಸುತಾ । ಸಾಂಗೀತಲಾ ಆಪ್ಸ್ನೀ ತತ್ವತಾ । ಭ್ರಾಂತಿ ನ ಕರೀ ॥ ೨೭ ॥ ಹೇ ಜೀವೀಚೆ ನಿಜ ಗುಜ । ಪರೀ ಕೇವೀ ರಾಖೋ ತುಜ । ಜೇ ಪಢಿಯೇಸೀ ತೂ ಮುಜ । ಮ್ಹಣಮೂನಿಯಾ ॥ ೨೮ ॥ ತೂ ಪ್ರೇಮಾಚಾ ಪುತಳಾ । ಭಕ್ತೀಚಾ ಜಿವ್ಹಾಳಾ । ಮೈತ್ರಿಯೇಚೀ ಚಿತ್ಕಳಾ । ಧನುರ್ಧರಾ ॥ ೨೯ ॥ ತೂ ಅನುಸಂಗಾಚಾ ಠಾವೋ । ಆತಾ ತುಜ ಕಾಯ ವಂಚೋ ಜಾವೋ । ಜರ್‍ಹೀ ಸಂಗ್ರಾಮಾರೂಢ ಆಹೋ । ಜಾಹಲೋ ಆಪ್ಸ್ನೀ ॥ ೩೦ ॥ ತರೀ ನಾವೇಕ ಹೇ ಸಾಹಾವೇ । ಗಾಜಾಬಜ್ಯಹೀ ನ ಧರಾವೇ । ಪರೀ ತುಝೆ ಅಜ್ಞಾನತ್ವ ಹರಾವೇ । ಲಾಗೇ ಆಧೀ ॥ ೩೧ ॥

**ಅರ್ಥ**— ಎಲೋ ಕುಂತಿ ಕುಮಾರನಾದ ಪಾರ್ಥನೇ! ಈ ಪುರಾತನ ಯೋಗವನ್ನು ಇಂದು ನಿನಗೆ ಹೇಳಿದ್ದೇನೆ. ಇದರ ವಿಷಯವಾಗಿ ನೀನು ಏನಾದರೂ ಒಂದು ಸಂಶಯವನ್ನು ತೆಗೆದುಕೊಳ್ಳಬೇಡ. ॥ ೨೭ ॥ ಈ ಯೋಗ ವೆಂದರೆ ನನ್ನ ಜೀವ ಇಲ್ಲವೇ ಪ್ರಾಣವಾಗಿರುವದು. ಆದರೆ ಅದನ್ನು ನಿನಗೆ ಕೊಡದೇ ಗುಪ್ತವಾಗಿ ಹೇಗೆ ಇಡಬೇಕು ? ಏಕೆಂದರೆ ನೀನು ನನ್ನ ಪ್ರೀತಿಯ ಶ್ರೇಷ್ಠ ಭಕ್ತನಾಗಿರುವಿ ॥ ೨೮ ॥ ಧನುರ್ಧರನೇ ! ನೀನು ಪ್ರೇಮದ ಪುಥ್ಥಳಿಯೇ ಇದ್ದು ಭಕ್ತಿಯ ಶೆಲೆಯೂ ಮತ್ತು ನನ್ನ ಜೀವದ ಗೆಳೆಯನೂ ಆಗಿರುವಿ ॥ ೨೯ ॥ ನೀನು ನನ್ನ ಸಖ್ಯತ್ವದ ವಿಶ್ವಾಸದ ಸ್ಥಾನವಾಗಿರುವಿ. ಆದುದರಿಂದ ನಾವು ಯುದ್ಧಕ್ಕೆ ಸಿದ್ಧವಾಗಿರಲು ನಿನಗೆ ವಂಚಿಸಿ ಈ ಯೋಗವನ್ನು ಹೇಗೆ ಮುಚ್ಚಿಡಬೇಕು ? ॥ ೩೦ ॥ ಕಾರಣ ಯುದ್ಧದ ಗಡಿಬಿಡಿಯಿದ್ದರೂ ಅದನ್ನು ಕ್ಷಣಹೊತ್ತು ಒಂದುಕಡೆಗೆ ಇಟ್ಟು, ಗಣನೆಗೆ ತಾರದೇ ಮೊದಲಿಗೇ ನಿನ್ನ ಅಜ್ಞಾನವನ್ನು ನಾವು ದೂರಮಾಡಬೇಕಾಗಿರುವದು. ॥ ೩೧ ॥

**ಅರ್ಜುನ ಉವಾಚ—**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥ ೪ ॥**

[ **ಅಪರಮಿತಿ** ] ತವ ಅರ್ಜುನ ಮ್ಹಣೇಶ್ರೀಹರೀ । ಮಾಯ ಅಪುಲೇ ಯಾಚಾ ಸ್ನೇಹ ಕರೀ । ತೇಥ ವಿಸ್ಮಯ ಕಾಯ ಅವಧಾರೀ । ಕೃಪಾಸಿಧೇ ॥ ೩೨ ॥ ತೂ ಸಂಸಾರ ಶ್ರಾಂತಾಚೀ ಸಾವುಲೀ । ಅನಾಥ ಜೀವಾಂಚೀ ಮಾವುಲೀ । ಆಮುತೇಕೀರ ಪ್ರಸವಲೀ । ತುಝೀಚ ಕೃಪಾ ॥ ೩೩ ॥ ದೇವಾ ಪಾಂಗುಳ ಏಕಾಧೇ ವಿಇಜೇ । ತಾರೀ ಜನ್ಮೌನಿ ಜೋಜಾರ ಸಾಹಿಜೇ । ಬೋಲೋ ಕಾಯತುಝೆ । ತುಜಚಿ ಪುಢಾ ॥ ೩೪ ॥ ಆತಾ ಪುಸೇನ ಜೇ ಮೀ ಕಾಹೀ । ತೇಥೆ ನಿಕೇ ಚಿತ್ತದೇಈ । ತೇವಿಂಚಿ ದೇವೇ ಕೋಪಾವೇ ನಾಹೀ । ಬೋಲಾ ಏಕಾ ॥ ೩೫ ॥ ತರೀ ಮಾಗೀಲ ಜೇ ವಾರ್ತಾ । ತುವಾ ಸಾಂಗಿತಲೀ ಹೋತೀ ಅನಂತಾ । ತೇ ನಾವೇಕ ಮುಜಚಿತ್ತಾ । ಮಾನೇಚಿನಾ ॥ ೩೬ ॥ ಜೇ ತೋ ವಿವಸ್ವತ ಮ್ಹಣಜೇ ಕಾಯೀ । ಐಸೇ ಹೇ ವಡಿಲಾ ಠಾಉವೇ ನಾಹೀ । ತರೀ ತುವಾಚಿ ತೇವೀ ಕಹೀ । ಉಪದೇಶಿಲಾ ॥ ೩೭ ॥ ತೋ ಆಇಕಿಜೇ ಬಹುತಾ ಕಾಳಾಚಾ । ಆಣಿ ತೂ ತವ ಶ್ರೀಕೃಷ್ಣ ಸಾಂಪೇಚಾ । ಮ್ಹಣೋನಿಗಾ ಇಯೇ ಮಾತುಚಾ । ವಿಸಂವಾದ ॥ ೩೮ ॥ ತೇವೀಚಿ ದೇವಾ ಚರಿತ್ರ ತುಝೆ । ಆಪಣ ಕಾಂಹೀಚಿ ನೇಣಿಜೇ । ಹೇ ಲಟಿಕೇ ಕೇವೀ ಮ್ಹಣಿಜೇ । ಏಕಿಹೇಳಾ ॥ ೩೯ ॥ ಪರೀ ಹೇಚಿ ಮಾತು ಆಘವೀ । ಮೀ ಪರಿಯೇಸೇ ಐಸೀ ಸಾಂಗಾವೀ । ಜೇ ಕಾ ತುವಾ ತಯಾರವೀ । ಉಪದೇಶ ಕೇಲಾ ॥ ೪೦ ॥

**ಅರ್ಥ** — ಆ ಸಮಯದಲ್ಲಿ ಅರ್ಜುನನು ಅನ್ನುತ್ತಾನೆ- ಹೇ ಕೃಪಾನಿಧೇ ! ತಾಯಿಯು ತನ್ನ ಕೂಸಿನಮೇಲೆ ಪ್ರೇಮವನ್ನು ಮಾಡಿದರೆ ಅದರಲ್ಲಿ ವಿಸ್ಮಯವೇನು ? ॥ ೩೨ ॥ ನೀನು ಸಂಸಾರತಾಪತ್ರಯದಿಂದ ಸೋತುನಿಂತ ಪ್ರಾಣಿಗಳ ನೆರಳು ಅನಾಥ ಜನರ ಮಾತೃದೇವತೆ !! ನಮ್ಮ ಜನ್ಮವು ನಿಶ್ಚಯವಾಗಿ ನಿನ್ನ ಕೃಪೆಯಿಂದಲೇ ಆಗಿರುತ್ತದೆ. ॥೩೩॥ ದೇವಾ! ತಾಯಿಗೆ ಕಾಲಿಲ್ಲದ ಮಗನು ಹುಟ್ಟಿದರೆ ಜನ್ಮದಾರಭ್ಯ ತಾಯಿಗೆ ಕಷ್ಟಸೋಸ ಬೇಕಾಗುವದಿಲ್ಲವೇ ? ಇದನ್ನೆಲ್ಲ ನೀವು ಬಲ್ಲವರೇ. ಆದರೆ ನಿಮ್ಮ ಮುಂದೆ ನಿಮ್ಮ ಮಹಾತ್ಮ್ಯವನ್ನೇನು ಹೇಳುವದು. ॥ ೩೪ ॥ ಇನ್ನುಮೇಲೆ ನಿಮಗೆ ನಾನು ಯಾವದಾದರೂ ಒಂದು ಮಾತು ಕೇಳುವವನಿದ್ದೇನೆ. ಅದರ ಕಡೆಗೆ ನೀವು ಚನ್ನಾಗಿ ಲಕ್ಷ ಕೊಡಬೇಕು. ಮತ್ತು ಆ ಮಾತಿನ ವಿಷಯವಾಗಿ ನಿಮ್ಮ ಮನಸ್ಸಿನಲ್ಲಿ ಕ್ರೋಧವನ್ನು ತರಬಾರದು. ॥ ೩೫ ॥ ಹೇ ಅನಂತನೇ! ನೀವು ಬಹಳದಿವಸದ ಹಿಂದಿನ ಮಾತನ್ನು ಅಂದರೆ "ಸೂರ್ಯನಿಗೆ ಈ ಯೋಗವನ್ನು ಹೇಳಿದೆನು" ಎಂದು ಹೇಳಿದಿರಿ. ಆದರೆ ನನಗೆ ಅದರ ವಿಷಯವಾಗಿ ಸಂಶಯ ಉಂಟಾಗಿರುತ್ತದೆ. ॥ ೩೬ ॥ ವಿವಸ್ವತ ಸೂರ್ಯನೆಂದರೆ ಯಾರು ? ಯಾವ ಕಾಲದವನು ? ಎಂಬದು ನಮ್ಮ ಪೂರ್ವಜರಿಗೆ ಸಹ ಗೊತ್ತಿರುವದಿಲ್ಲ. ಅವನಿಗೆ ನೀವು ಯಾವಾಗ್ಗೆ, ಹೇಗೆ ಉಪದೇಶ ಮಾಡಿದಿರಿ ? ॥ ೩೭ ॥ ಆ ಸೂರ್ಯನು ಬಹಳ ದಿವಸಗಳ ಹಿಂದೆಯೇ ಆಗಿ ಹೋಗಿರುವನೆಂದು ಕೇಳಿದ್ದೇನೆ. ಆದರೆ ಶ್ರೀ ಕೃಷ್ಣಾ! ನಿಮ್ಮನ್ನು ನೋಡಿದರೆ, ಇತ್ತೀಚಿನವರಾಗಿರುವಿರಿ. ಅಂದಬಳಿಕ ಈ ಮಾತಿನಲ್ಲಿ ನನಗೆ ವಿರೋಧ ಕಂಡುಬರುತ್ತದೆ. ॥ ೩೮ ॥ ಅದರಲ್ಲಿ ದೇವಾ! ನಿನ್ನ ಚರಿತ್ರೆಯು ಅಗಾಧವಾಗಿರುವದು. ನಮಗೆ ಏನೂ ತಿಳಿಯುವದಿಲ್ಲ. ಅಂದಬಳಿಕ ನೀವು ಅನ್ನುವದು ಅಸತ್ಯವಾಗಿರುವುದೆಂದಾದರೂ ವಿಚಾರಿಸದೇ ಅನ್ನುವದು ಹೇಗೆ ? ॥ ೩೯ ॥ ಆದರೆ 'ನೀವು ಸೂರ್ಯನಿಗೆ ಉಪದೇಶ ಮಾಡಿದೆನೆಂಬ' ಹೇಳುವ ಮಾತು, ನನಗೆ ತಿಳಿಯುವಂತೆ ಸ್ಪಷ್ಟವಾಗಿ ಹೇಳು. ॥ ೪೦ ॥

**ಶ್ರೀ ಭಗವಾನುವಾಚ** -

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥ ೫ ॥**

**[ಬಹೂನಿ ಮೇ ಇ॰]** ತವ ಶ್ರೀಕೃಷ್ಣ ಮ್ಹಣೇ ಪಾಂಡುಸುತಾ । ತೋ ವಿವಸ್ವತ ಜೈಹೋತಾ । ತೈ ಆಮ್ಹೀ ನಸೋ ಐಸೀ ಚಿತ್ತಾ । ಭ್ರಾಂತಿ ಜರೀ ತುಜ ॥೪೧॥ ತರೀ ತೂಗಾ ಹೇ ನೇಣಸೀ। ಪೈ ಜನ್ಮೆ ಆಮ್ಹಾ ತುಮ್ಹಾಸೀ । ಬಹುತೇ ಗೇಲೀ ಪರೀ ನ ಸ್ಮರಸೀ । ಆಪುಲೀ ತೂ ॥ ೪೨॥ ಮೀ ಜೇಣೇ ಜೇಣೇ ಅವಸರೇ । ಜೇ ಜೇ ಹೋವುನಿ ಅವತರೇ । ತೇ ತೇ ಸಮಸ್ತಹೀ ಸ್ಮರೇ । ಧನುರ್ಧರಾ ॥ ೪೩ ॥

**ಅರ್ಥ**— ಆಗ್ಗೆ ಶ್ರೀಕೃಷ್ಣ ಪರಮಾತ್ಮನು ಅನ್ನುತ್ತಾನೆ. ಪಂಡುಪುತ್ರನೇ! ಯಾವಕಾಲಕ್ಕೆ ಸೂರ್ಯನಿದ್ದನೋ ಆ ಕಾಲಕ್ಕೆ ನಾವು ಇದ್ದಿಲ್ಲ, ಎಂಬ ಸಂಶಯವು ನಿನ್ನ ಮನಸಿನಲ್ಲಿ ಹುಟ್ಟಿರಬಹುದು. ॥ ೪೧ ॥ ಆದರೂ ಇದು ನಿನಗೆ ಗೊತ್ತಿರುವದಿಲ್ಲ. ನಿನ್ನ ಮತ್ತು ನನ್ನ ಜನ್ಮಗಳು ಹಿಂದೆ ಬಹಳೇ ಆಗಿ ಹೋಗಿರುವವು. ಆದರೆ ನಿನ್ನ ಜನ್ಮಗಳ ಸ್ಮರಣೆಯು ನಿನಗಿರುವದಿಲ್ಲ. ॥೪೨॥ ಅರ್ಜುನನೇ! ಯಾವ ಯಾವ ಕಾಲಕ್ಕೆ ಯಾವ ಯಾವ ಅವತಾರಗಳನ್ನು ನಾನು ಎತ್ತಿರುವೆನೋ ಆ ಎಲ್ಲ ಅವತಾರಗಳ ಸ್ಮರಣೆಯು ನನಗೆ ಇರುತ್ತದೆ. ॥ ೪೩ ॥

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥ ೬ ॥**

**[ಅಜೋಽಪಿ ಸನ್ನಿತಿ]** ಮ್ಹಣೋನಿ ಹೇ ಆಘವೇ । ಮಾಗೀಲ ಮಜ ಆಠವೇ । ಮೀ ಅಜಹೀ ಪರೀ ಸಂಭವೇ । ಪ್ರಕೃತಿಯೋಗೇ ॥ ೪೪ ॥ ಮಾಝೀ ಅವ್ಯಯತ್ವ ತರೀ ನ ನಸೇ । ಪರೀ ಹೋಣೇ ಜಾಣೇ ಏಕದಿಸೇ । ತೇ ಪ್ರತಿಬಿಂಬೇ ಮಾಯಾವಶೇ । ಮಾಝ್ಯಾಚಿ ಠಾಯೀ ॥ ೪೫ ॥ ಮಾಝೀ

ಸ್ವತಂತ್ರತಾ ತರೀ ನ ಮೋಡೇ । ಪರೀ ಕರ್ಮಾಧೀನ ಐಸಾ ಆವಡೇ । ತೇಹೀ ಭ್ರಾಂತಿ ಬುದ್ಧಿ ತರೀ ಘಡೇ । ಯೇರ್ಹವೀ ನಾಹೀ ॥ ೪೬ ॥ ಕೀ ಏಕಚಿ ದಿಸೇ ದುಸರೇ । ತೇ ದರ್ಪಣಾಚೇನಿ ಆಧಾರೇ । ಯೇರ್ಹವೀ ಕಾಯ ವಸ್ತುವಿಚಾರೇ । ದುಜೇ ಆಹೇ ॥ ೪೭ ॥ ತೈಸಾ ಅಮೂರ್ತಚಿ ಮೀ ಕಿರೀಟೀ । ಪರೀ ಪ್ರಕೃತಿ ಜೈ ಅಧಿಷ್ಟೀ । ತೈ ಸಾಕಾರಪಣೇ ನಟ ನಟೀ । ಕಾರ್ಯಾಲಾಗೀ ॥ ೪೮ ॥

**ಅರ್ಥ—** ಆದುದರಿಂದ ನನಗೆ ಹಿಂದಾದ ಮಾತಿನ ಸ್ಮರಣೆ ಚನ್ನಾಗಿ ಇದೆ. ನಾನು ಜನ್ಮರಹಿತನಿದ್ದಾಗ್ಯಾದರೂ ಭಕ್ತಕಾರ್ಯಾರ್ಥವಾಗಿ ಅನಾದಿ ಆತ್ಮಮಾಯಾ ಅಂಗೀಕಾರಮಾಡಿ, ಆ ಯೋಗದಿಂದ ಅವತರಿಸಿ ಪ್ರಸಿದ್ಧನಾಗಿರುತ್ತೇನೆ. ॥ ೪೪ ॥ ನನ್ನ ಅವಿನಾಶತ್ವವು ನಾಶ ಹೊಂದುವದಿಲ್ಲ. ಆದರೆ ಅವತಾರ ತೆಗೆದುಕೊಂಡು ಬರುವದೂ, ಹೋಗುವದೂ ನನ್ನ ಮಾಯಾಶಕ್ತಿಯ ಒಂದು ಪ್ರಕಾರದ ಪ್ರತಿಬಿಂಬವು ಮಾತ್ರ. ॥ ೪೫ ॥ ಇದರಿಂದ ನನ್ನ ಸ್ವತಂತ್ರತೆಯು ಭಂಗವೆಂದಿಗೂ ಆಗುವದಿಲ್ಲ. ಆದರೆ ನಾನು ಕರ್ಮಾಧೀನನಾಗಿರುವೆನೆಂದು ಜನರಿಗೆ ಕಾಣುತ್ತದೆ. ಅದು ಅವರ ಭ್ರಾಂತಿಯ ಮೂಲಕ ಹಾಗೆ ತೋರುತ್ತದೆ. ನಿಜವಾಗಿ ನೋಡಿದರೆ ಹಾಗಿರುವದಿಲ್ಲ. ॥ ೪೬ ॥ ಇಲ್ಲವೇ ಒಂದೇ ವಸ್ತುವು ಕನ್ನಡಿಯ ಯೋಗದಿಂದ ಎರಡು ಸ್ಥಳದಲ್ಲಿ ಕಾಣುತ್ತದೆ. ಆದರೆ ನಿಜವಾದ ಸ್ಥಿತಿಯ ವಿಚಾರ ಮಾಡಿದರೆ ಅವು ಎರಡಿರುವವೇ ? ॥ ೪೭ ॥ ಅದರಂತೆಯೇ ಅರ್ಜುನಾ! ನಾನು ನಿರಾಕಾರನಿರುತ್ತೇನೆ. ಆದರೆ ಜಗತ್ಕಾರ್ಯಾರ್ಥವಾಗಿ ಮಾಯೆಯನ್ನು ಸ್ವೀಕಾರಮಾಡಿ ನಟನೋಪಾದಿಯಲ್ಲಿ ಬಹಿರಂಗವಾಗಿ ಆಕಾರವನ್ನು ಧರಿಸಿ ಸಾಕಾರನಾಗುವೆನು. ॥ ೪೮ ॥

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ ೭ ॥**

**[ ಯದಾ ಯದಾ ಹಿತಿ ]** ಜೇ ಧರ್ಮಜಾತ ಆಘವೇ । ಯುಗಾಯುಗೀ ಮ್ಯಾ ರಕ್ಷಾವೇ । ಐಸಾ ಓಘು ಹಾ ಸ್ವಭಾವೇ । ಆದ್ಯ ಅಸೇ ॥ ೪೯ ॥ ಮ್ಹಣೋನಿ ಅಜತ್ವ ಪರತೇ ಠೇವೀ । ಮೀ ಅವ್ಯಕ್ತ ಪಣಹೀ ನಾಠವೀ । ಜೇ ವೇಳೀ ಧರ್ಮಾತೇ ಅಭಿಭವೀ । ಅಧರ್ಮ ಹಾ ॥ ೫೦ ॥

**ಅರ್ಥ—** ಜಗತ್ತಿನಲ್ಲಿ ಬಾಳುವ ಅಖಿಲಧರ್ಮಗಳನ್ನು ಯುಗಯುಗಗಳಲ್ಲಿಯೂ ರಕ್ಷಿಸುವ ನನ್ನ ಕ್ರಮವು ಪುರಾತನದಿಂದಲೂ ನಡೆದು ಬಂದಿರುತ್ತದೆ. ॥ ೪೯ ॥ ಆದುದರಿಂದ ಯಾವಯಾವ ಕಾಲದಲ್ಲಿ ಅಧರ್ಮದಿಂದ ಧರ್ಮವು ಪರಾಭವ ( ನಾಶ ) ಹೊಂದುವದೋ ಆ ಕಾಲದಲ್ಲಿ ನನ್ನ ಅಜತ್ವವನ್ನು ( ಜನ್ಮರಹಿತತನವನ್ನು ) ಬದಿಗಿಟ್ಟು ಬಿಡುತ್ತೇನೆ. ಆವಾಗ ನಿರಾಕಾರನೆಂಬ ಸ್ಮರಣೆಯನ್ನೂ ನಾನು ಮರೆತು ಬಿಡುತ್ತೇನೆ. ॥ ೫೦ ॥

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।**
**ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥ ೮ ॥**

**[ ಪರಿತ್ರಾಣಾಯ ಸಾಧೂನಾಮಿತಿ ]** ತೇ ವೇಳಿ ಆಪುಲ್ಯಾ ಚೇನಿ ಕೈವಾರೇ । ಮೀ ಸಾಕಾರ ಹೋವೂನಿ ಅವತರೇ । ಮಗ ಅಜ್ಞಾನಾಚೇ ಅಂಧಾರೇ । ಗಿಳೂನಿಘಾಲೀ ॥ ೫೧ ॥ ಅಧರ್ಮಾಚೀ ಅವಧೀ ತೋಡೀ । ದೋಷಾಂಚೀ ಲಿಹಿಲೀಫಾಡೀ । ಸಜ್ಜನಾ ಕರವೀ ಗುಢೀ ! ಸುಖಾಚೀ ಉಭವೀ ॥ ೫೨ ॥ ದೈತ್ಯಾಂಚೀ ಕುಳೇ ನಾಶೀ । ಸಾಧೂಚಾಮಾನ ಗಿಂವಶೀ । ಧರ್ಮಾಸೀ ನೀತಿಶೀ । ಶೇಸ ಭರೀ ॥ ೫೩ ॥ ಮೀ ಅವಿವೇಕಾಚೀ ಕಾಜಳೀ । ಫೇಡುನಿ ವಿವೇಕದೀಪ ಉಜಳೀ । ತೈ ಯೋಗಿಯಾ ಪಾಹೇ ದಿವಾಳೀ । ನಿರಂತರ ॥೫೪॥ ಸ್ವ ಸುಖೇ ವಿಶ್ವ ಕೊಂದೇ । ಧರ್ಮಾಚೀ ಜಗೀ ನಾಂದೇ । ಭಕ್ತಾ ನಿಘತೀ ದೊಂದೇ । ಸಾತ್ವಿಕಾಂಚೀ ॥೫೫॥ ತೈ ಪಾಪಾಚಾ ಅಚಳಫಿಟೇ । ಪುಣ್ಯಾಚೀ ಪಹಾಟ ಫುಟೇ । ಜೈ ಮೂರ್ತಿ ಮಾಝೀ ಪ್ರಗಟೇ । ಪಾಂಡು ಕುಮರಾ ॥ ೫೬ ॥ ಐಸೇಯಾ ಕಾಜಾ ಲಾಗೀ । ಅವತರೇ ಮೀ ಯುಗಾ ಯುಗೀ । ಪರೀ ಹೇಚಿ ವೋಳಖೇ ಜೋ ಜಗೀ ತೋ ವಿವೇಕಿಯಾ ॥ ೫೭ ॥

**ಅರ್ಥ—** ಆಗ ನಾನು ಭಕ್ತಕೈವಾರಿಯಾಗಿ ದೇಹಧಾರಣಮಾಡಿ ಅವತಾರತೆಗೆದುಕೊಳ್ಳುತ್ತೇನೆ. ಮತ್ತು ಆ ಮೇಲೆ ಅಜ್ಞಾನರೂಪೀ ಅಂಧಕಾರವನ್ನು ನುಂಗಿಬಿಡುತ್ತೇನೆ. ॥ ೫೧ ॥ ಅಧರ್ಮದ ಆಯುಷ್ಯಮರ್ಯಾದೆಯನ್ನು ಮುರಿದುಬಿಡುತ್ತೇನೆ. ದೋಷಗಳನ್ನು ಬರೆದ (ಜನಾಖರ್ಚಿನ) ಖಾತೆವಹಿಗಳನ್ನು ಹರಿದುಹಾಕುತ್ತೇನೆ. ಮತ್ತು ಸತ್ಪುರುಷರಿಂದಲೂ, ಸಾಧುಗಳಿಂದಲೂ ಸುಖದ ಧ್ವಜವನ್ನು ನಿಲ್ಲಿಸುತ್ತೇನೆ. ॥ ೫೨ ॥ ದೈತ್ಯ (ದುಷ್ಟ)ಕುಲದ ನಾಶ ಮಾಡುತ್ತೇನೆ. ಸಾಧುಗಳಿಗೆ ಯೋಗ್ಯವಾದ ಸನ್ಮಾನ ದೊರೆಯುವಂತೆ ಮಾಡುತ್ತೇನೆ. ಧರ್ಮ ಮತ್ತು ನೀತಿಗಳ ವಿವಾಹಮಾಡಿ ಅಕ್ಷತೆಹಾಕುತ್ತೇನೆ ॥ ೫೩ ॥ ಅವಿಚಾರರೂಪವಾದ ಕಾಡಿಗೆಯನ್ನು ತೆಗೆದು ವಿಚಾರರೂಪೀ ದೀವಿಗೆಯನ್ನು ಪ್ರಜ್ವಲಿತಮಾಡುತ್ತೇನೆ ಅವಾಗ ಯೋಗಿಗಳಿಗೆ ಅದೊಂದು ನಿರಂತರವಾದ ಆನಂದದ ದೀಪಾವಳಿಯ ಹಬ್ಬವು, ಎಂದು ಭಾಸವಾಗುತ್ತದೆ. ॥ ೫೪ ॥ ಆಮೇಲೆ ಸತ್-ಸುಖದಿಂದ ಸರ್ವವಿಶ್ವವೂ ತುಂಬಿಹೋಗುತ್ತದೆ. ಎಲ್ಲಿ ನೋಡಿದಲ್ಲಿ ಜನರು ಧರ್ಮಾಚರಣೆಯಲ್ಲಿಯೇ ಮಗ್ನರಾಗುತ್ತಾರೆ. ಮತ್ತು ಭಕ್ತಜನರು ಸತ್ವಗುಣದಿಂದ ಪರಿಪೂರ್ಣರಾಗುತ್ತಾರೆ. ॥ ೫೫ ॥ ಅರ್ಜುನಾ ! ಯಾವ ಕಾಲದಲ್ಲಿ ನನ್ನ ಅವತಾರ ಪ್ರಕಟವಾಗುತ್ತದೋ ಆವಾಗ ಪಾಪದ ಪರ್ವತಗಳು ನಾಶಹೊಂದುತ್ತವೆ. ಮತ್ತು ಪುಣ್ಯದ ಉದಯವಾಗುತ್ತದೆ. ॥ ೫೬ ॥ ಇಂತಹ ಕಾರ್ಯದ ಸಲುವಾಗಿಯೇ ನಾನು ಯುಗಯುಗಗಳಲ್ಲಿ ಅವತಾರವನ್ನೆತ್ತುವೆನೆಂದು ಯಾರು ನಂಬುವರೋ ಅವರೇ ಜಗತ್ತಿನಲ್ಲಿ ವಿಚಾರವಂತರಾಗಿರುವರೆಂದು ತಿಳಿ. ॥ ೫೭ ॥

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ ೯ ॥**

**[ ಜನ್ಮೇತಿ ]** ಮಾಝೇ ಅಜತ್ವೇ ಜನ್ಮಣೇ । ಅಕ್ರಿಯತಾಚಿ ಕರ್ಮ ಕರಣೇ । ಹೇ ಅವಿಕಾರ ಜೋ ಜಾಣೇ । ತೋ ಪರಮಮುಕ್ತ ॥ ೫೮ ॥ ತೋ ಚಾಲಿಲಾ ಸಂಗೇ ನ ಚಳೇ । ದೇಹೀಂಚಾ ದೇಹೀ ನಾಕಳೇ । ಮಗ ಪಂಚತ್ವೀ ತವ ಮಿಳೇ । ಮಾಝ್ಯಾಂಚೀ ರೂಪೀ ॥ ೫೯ ॥

**ಅರ್ಥ—** ನಾನು ಅಜ (ಜನ್ಮರಹಿತ)ನಾಗಿದ್ದೂ, ಜನ್ಮಧಾರಣೆ ಮಾಡಿರುವೆನೆಂದೂ ಮತ್ತು ನನ್ನ ಅಕ್ರಿಯತ್ವವು ಸ್ಥಿರವಿದ್ದೂ ಕರ್ಮ ಮಾಡುತ್ತೇನೆಂಬುವದೂ, ಈ ಪರಸ್ಪರ ವಿರುದ್ಧ ಸ್ಥಿತಿಯ ಅಬಾಧಿತ ನಿಸಃಶಯ ಬೋಧವು ಯಾವನಿಗೆ ಆಗಿರುವದೋ ಅವನು ಪರಮಮುಕ್ತನಾಗಿರುವನು. ॥ ೫೮ ॥ ಹೀಗೆ ತಿಳಿಯುವವನು ದೇಹದ ಸಂಬಂಧದಿಂದ ಅವನು ನಡೆದಂತೆ ಕಂಡರೂ ಅವನು ನಡೆಯುವದಿಲ್ಲ. ಅವನು ದೇಹಧಾರಣ ಮಾಡಿದಾಗ್ಯೂ ದೇಹಸಂಬಂಧದ ಮಮತ್ವದಲ್ಲಿ ಸಿಕ್ಕುಬೀಳುವದಿಲ್ಲ. ಆ ಮೇಲೆ ಅವನು ಮರಣಕಾಲದಲ್ಲಿ ನನ್ನ ಸ್ವರೂಪದಲ್ಲಿ ಬಂದು ಸೇರುತ್ತಾನೆ. (ಸಾಯುಜ್ಯ ಮುಕ್ತಿಯನ್ನು ಹೊಂದುತ್ತಾನೆ.) ॥ ೫೯ ॥

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

**[ ವೀತರಾಗ ಭಯೇತಿ ]** ಯೇರ್ಹವೀ ಪರಾಪರ ನ ಶೋಚಿತೀ । ಜೇ ಕಾಮನಾ ಶೂನ್ಯಹೋತೀ । ವಾಟಾ ಕೋಣೇ ವೇಳೀ ನ ವಚತೀ । ಕ್ರೋಧಾಚಿಯಾ ॥ ೬೦ ॥ ಸದಾ ಮಿಯಾಂಚಿ ಆಥಿಲೇ । ಮಾಝಿಯಾ ಸೇವಾ ಜಿಯಾಲೇ । ಕೀ ಆತ್ಮಬೋಧೇ ತೋಷಲೇ । ವೀತರಾಗ ಜೇ ॥ ೬೧ ॥ ಜೇ ತಪೋ ತೇಜಾಚಿಯಾ ರಾಶೀ । ಕೀ ಏಕಾಯತನ ಜ್ಞಾನಾಸೀ । ಜೇ ಪವಿತ್ರತಾ ತೀರ್ಥಾಂಸೀ । ತೀರ್ಥ ರೂಪ ॥ ೬೨ ॥ ತೇ ಮದ್ಭಾವಾ ಸಹಜೇ ಮೀ ಆಲೇ । ತೇಚಿ ತೇ ಹೋವುನಿ ಠೇಲೇ । ಜೇ ಮಜ ತಯಾ ಉರಲೇ । ಪದರ ನಾಹೀ ॥ ೬೩ ॥ ಸಾಂಗೇ ಪಿತಳೇಚೀ ಗಾಂಧಿಕಾಳಿಕ । ಜೈ ಫಿಟಲೀ ಹೋಯ ನಿಃಶೇಖ । ತೈ ಸುವರ್ಣ ಕಾಈ ಆಣಿಕ । ಜೋಡೂ ಜಾಇಜೇ ॥ ೬೪ ॥ ತೈಸೇಯ ಮನಿಯಮೀ ಕಡಸಲೇ । ಜೇ ತಪೋ ಜ್ಞಾನೇ ಚೋಖಾಳಲೇ । ಮೀ ತೇಚಿ ತೇ ಜಾಹಲೇ । ಏಥ ಸಂಶಯೋ ಕಾಯಸಾ ॥೬೫॥

**ಅರ್ಥ—** ಆದರೆ ಹಿಂದಿನ ಮತ್ತು ಮುಂದಿನ ಮಾತಿನ ಬಗ್ಗೆ ಯಾವನು ದುಃಖಿಸುವದಿಲ್ಲವೊ, ಮತ್ತು ವಾಸನಾ ರಹಿತನಾಗಿರುತ್ತಾನೋ, ಅವನು ಯಾವಾಗಲೂ ಕ್ರೋಧವಶನಾಗುವದಿಲ್ಲ. ॥ ೬೦ ॥ ಯಾವನು ವಿಷಯದಲ್ಲಿ ಅಪ್ರೀತಿಯುಳ್ಳವನಾಗಿರುತ್ತಾನೋ, ಮತ್ತು ಯಾವನು ಸದಾ ನನ್ನ ಯೋಗದಿಂದ ಸಂಪನ್ನನಾಗಿ ನನ್ನ ಪ್ರಾಪ್ತಿಯಿಂದ ತನ್ನನ್ನು ಧನ್ಯನೆಂದು ತಿಳಿದಿರುತ್ತಾನೋ, ಮತ್ತು ನನ್ನ ಸೇವೆಯು ಸಲುವಾಗಿಯೇ ಅವನು ಬದುಕಿರುತ್ತಾನೋ, ಯಾವನು ಜ್ಞಾನಬೋಧದಿಂದ ಸಂತೋಷಹೊಂದುತ್ತಾನೋ, ॥ ೬೧ ॥ ಯಾವನು ತಪಃಶ್ಚರ್ಯದ ತೇಜೋ ರಾಶಿಯೂ ಇಲ್ಲವೇ ಜ್ಞಾನದ ಮನೆಯೂ ಅಥವಾ ತೀರ್ಥಗಳಿಗೆ ಸಹ ಪವಿತ್ರಮಾಡುವ ತೀರ್ಥರೂಪವೇ ಇರುತ್ತಾನೋ, ॥ ೬೨ ॥ ಅವನು ನನ್ನ ಸ್ವರೂಪವನ್ನು ಸಹಜವೇ ಬಂದು ಸೇರುತ್ತಾನೆ. ನನ್ನಂತೆಯೇ ರೂಪ ವುಳ್ಳವನಾಗಿ, ಅವನ ಮತ್ತು ನನ್ನ ಪರಸ್ಪರ ಅಂತರವು ಇಲ್ಲದಂತಾಗುವದು. ॥ ೬೩ ॥ ಹಿತ್ತಾಳಿಯ ಕಿಲಬುಹೊಂದುವ ಗುಣವು ಇಲ್ಲದಂತಾದರೆ, ಬಂಗಾರವನ್ನು ಹುಡುಕುವ ಪರಿಶ್ರಮವನ್ನೇಕೆ ವಹಿಸಬೇಕು ? ಆ ಮೇಲೆ ಅದೇ ಬಂಗಾರ ವಾಗುವದು. (ಕಿಲುಬಿನಿಂದಲೇ ಹಿತ್ತಾಳಿಯು ಬೇರೆಯಾಗಿಯೂ, ಬಂಗಾರವಲ್ಲವೆಂದೂ ಗೊತ್ತಾಗುವದು) ॥ ೬೪ ॥ ಅದೇ ಪ್ರಕಾರ ಯಾವನು ಯಮನಿಯಮಾದಿ ಅಷ್ಟಾಂಗ ಯೋಗದಿಂದ ಶುದ್ಧನಾಗಿರುತ್ತಾನೋ ಮತ್ತು ತಪೋಜ್ಞಾನ ದಿಂದ ನಿರ್ಮಲನಾಗಿರುವನೋ ಅವನು ನನ್ನಂತೆಯೇ ಮದ್ರೂಪ ಆಗಿರುವನು. ಇದರಲ್ಲಿ ಸಂಶಯವಿಲ್ಲ. ॥ ೬೫ ॥

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥಸರ್ವಶಃ ॥ ೧೧ ॥**

**[ ಯೇ ಯಥಾ ಮಾಂ ಪ್ರಪದ್ಯಂತೇ ಇತಿ ]** ಯೇರ್ಹವೀ ತರೀ ಪಾಹೀ । ಜೇ ಜೈಸೇ ಮಾರ್ತೆ ರಾಯೀ । ಭಜತೀ ತಯಾ ಮೀ ಹೀ । ತೈಸಾಚೀ ಭಜೇ ॥ ೬೬ ॥ ದೇಖೇ ಮನುಷ್ಯ ಜಾತ ಸಕಳ । ಹೇ ಸ್ವಭಾವತಾ ಭಜನಶೀಳ । ಜಾಹಾಲೇ ಅಸೇ ಕೇವಳ । ಮಾಝ್ಯಾ ಠಾಯೀ ॥ ೬೭ ॥ ಪರೀ ಜ್ಞಾನೇ ವೀಣ ನಾಶಿಲೇ । ಜೇ ಬುದ್ಧಿ ಭೇದಾಸಿ ಆಲೇ । ತೇಣೇಂಚಿ ತ್ಯಾ ಕಲ್ಪಿಲೇ । ಅನೇಕತ್ವೇ ॥ ೬೮ ॥ ಮ್ಹಣವೂನಿ ಅಭೇದೀ ಭೇದ ದೇಖತೀ । ಯಯಾ ಅನಾಮಾ ಯಾ ನಾಮೇ ಠೇವಿತೀ । ದೇವೀ ದೇವೋ ಮ್ಹಣತೀ । ಅಚರ್ಚಾತೇ ॥ ೬೯ ॥ ಜೇ ಸರ್ವತ್ರ ಸದಾ ಸಮು । ತೇಥ ವಿಭಾಗ ಅಧಮೋತ್ತಮು । ಮತಿ ವಶೇ ಸಂಭ್ರಮು । ವಿವಂಚಿತೀ ॥ ೭೦ ॥

**ಅರ್ಥ—** ಸಹಜವಾಗಿ ವಿಚಾರ ಮಾಡಿ ನೋಡಿದರೆ ನನ್ನನ್ನು ಯಾರು ಯಾವ ಭಾವದಿಂದ ಭಜಿಸುವರೋ, ಅವರಿಗೆ ನಾನು ಅದೇ ಭಾವನೆಯಿಂದ ಫಲ ಕೊಡುವೆನು. ॥ ೬೬ ॥ ಹೀಗೆ ನೋಡು ಮನುಷ್ಯಮಾತ್ರರೆಲ್ಲರೂ ಸ್ವಭಾ ವತಃ ನನ್ನ ಭಜನೆಮಾಡುವದರ ಕಡೆಗೇ ಕೇವಲ ಅವರ ಪ್ರವೃತ್ತಿ ಇರುವದು. ॥ ೬೭ ॥ ಆದರೆ ಜ್ಞಾನದ ಅಭಾವದಿಂದ 'ಒಬ್ಬನೇ ಆತ್ಮನು ( ಸರ್ವಾಂತರಾತ್ಮನಾದ ಈಶ್ವರನು ) ಸಕಲ ಭೂತ ಮಾತ್ರಗಳಲ್ಲಿ ಆವಿರ್ಭವಿಸಿ ಪ್ರಕಟನಾಗಿರುವ ನೆಂಬ ಜ್ಞಾನವು' ನಾಶವಾಗಿರುವದು. ಆದರಿಂದ ಬುದ್ಧಿಯು ಸ್ಥಳದಲ್ಲಿ ಭೇದ ವುತ್ಪನ್ನವಾಗಿ, ನಾನೊಬ್ಬನೇ ಇದ್ದು ಆ ನನ್ನಲ್ಲಿ ಅನೇಕತ್ವವನ್ನು ಕಲ್ಪಿಸಿರುವರು ॥ ೬೮ ॥ ಅಂತಾ ಸರ್ವ ಭೂತ ಮಾತ್ರಗಳಲ್ಲಿ ನನ್ನ ವ್ಯಾಪ್ತಿ ಇದ್ದು ಅಭಿನ್ನನಾದ ನನ್ನಲ್ಲಿ ಭೇದವನ್ನು ಕಲ್ಪಿಸುತ್ತಾರೆ. ನಾನು ನಾಮರಹಿತನಿದ್ದು ನನಗೆ ಅನೇಕ ಹೆಸರಿಡುತ್ತಾರೆ. ಚರ್ಚೆ ಯನ್ನು ಮಾಡಲಿಕ್ಕೆ ಅಶಕ್ಯ ಅನಿರ್ವಾಚ್ಯನಿದ್ದೂ ನನಗೆ ಕೆಲವರು ದೇವ, ಹಲವರು ದೇವಿ, ಹೀಗೆ ಅನ್ನುತ್ತಾರೆ. ॥೬೯॥ ನಾನು ಸರ್ವತ್ರದಲ್ಲಿ ಯಾವಾಗಲೂ ಸಮದೃಷ್ಟಿಯುಳ್ಳವನಾಗಿದ್ದು ಆ ನನ್ನ ಸ್ಥಳದಲ್ಲಿ ಅವರು ಭ್ರಾಂತಚಿತ್ತದಿಂದ ನಾನು ಅಧಮನೂ, ಉತ್ತಮನೂ ಎಂದು ಭೇದ ಮಾಡುತ್ತಾರೆ. ॥ ೭೦ ॥

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥ ೧೨ ॥**

**[ಕಾಂಕ್ಷಂತಃ ಕರ್ಮಣಾಮಿತಿ]** ಮಗ ನಾನಾಹೇತು ಪ್ರಕಾರೇ । ಯಥೋಚಿತೇ ಉಪಚಾರೇ । ಮಾನಿಲೀ ದೇವತಾಂತರೇ । ಉಪಾಸಿತೀ ॥ ೭೧ ॥ ಏಥ ಜೇ ಜೇ ಅಪೇಕ್ಷಿತ । ತೇ ತೈಸೇಂಚಿ ಪಾವತೀ ಸಮಸ್ತ । ಪರೀ ತೇ ಕರ್ಮಫಳ ನಿಶ್ಚಿತ । ವೋಳಖತೂ ॥ ೭೨ ॥ ವಾಂಚೂನಿ ದೇತೇ ಘೇತೇ ಆಣಿಕ । ನಿಭ್ರಾಂತ ನಾಹೀ ಸಮ್ಯಕ । ಏಥ ಕರ್ಮಚಿ ಫಲಸೂಚಕ । ಮನುಷ್ಯಲೋಕೀ ॥ ೭೩ ॥ ಜೈಸೇ ಕ್ಷೇತ್ರೀ ಜೇ ಪೇರಿಜೇ । ತೇ ವಾಂಚೂನಿ ಆನ ನ ನಿವಜೇ । ಕಾ ಪಾಹಿಜೇ ತೇಚಿ ದೇಖಿಜೇ । ದರ್ಪಣಾಧಾರೇ ॥ ೭೪ ॥ ನಾತರೀ ಡೇಯಾತಳವಟೀ । ಜೈಸಾ ಆಪಲಾಚಿ ಬೋಲ ಕಿರೀಟೀ । ಪಡಿಸಾದ ಹೋವುನಿ ಉಠೀ । ನಿಮಿತ್ತಯೋಗೇ ॥ ೭೫ ॥ ತೈಸಾ ಸಮಸ್ತಾ ಯಾ ಭಜನಾ । ಮೀ ಸಾಕ್ಷೀಭೂತ ಪೈ ಅರ್ಜುನಾ । ಏಥ ಪ್ರತಿಫಳೇ ಭಾವನಾ । ಆಪುಲಾಲೀ ॥ ೭೬ ॥

**ಅರ್ಥ—** ಆ ಮೇಲೆ ಮನಸಿನಲ್ಲಿ ನಾನಾತರದ ಕಲ್ಪನೆಗಳನ್ನು ಮಾಡಿ ಯಾವದು ಯಾರಿಗೆ ಪ್ರೀಯವಾಗಿರುವದೋ, ಆ ಉಪಚಾರದಿಂದ ಅನೇಕ ದೇವರನ್ನು ಕಲ್ಪಿಸಿ ಆ ದೈವತಗಳ ಉಪಾಸನೆಯನ್ನು ಮಾಡುತ್ತಾರೆ. ॥ ೭೧ ॥ ಈ ಪ್ರಕಾರ ಯಾವನಿಗೆ ಯಾವ ಇಚ್ಛೆಯಿರುವದೋ, ಅವನಿಗೆ ಅದೇ ಪ್ರಾಪ್ತವಾಗುತ್ತದೆ. ಆದರೆ ಇದು ಅವರ ಕರ್ಮದ ಫಲವಿರುವದೆಂದು ನೀನು ನಿಶ್ಚಯದಿಂದ ನಂಬು. ॥ ೭೨ ॥ ನಿಜವಾಗಿ ನೋಡಿದರೆ ಕೊಡುವವನೂ, ಇಲ್ಲವೇ ತೆಗೆದುಕೊಳ್ಳುವವನೂ, ಕರ್ಮದ ಹೊರತು ಇನ್ನಾವದೂ ಅಲ್ಲ. ಈ ನರಲೋಕದಲ್ಲಿ ಕರ್ಮದಿಂದಲೇ ಫಲ ಪ್ರಾಪ್ತಿಯಾಗುತ್ತದೆ. ॥ ೭೩ ॥ ಭೂಮಿಯಲ್ಲಿ ಯಾವ ಧಾನ್ಯವನ್ನು ಬಿತ್ತುವರೋ ಅದೇ ಧಾನ್ಯವು ಅಂಕುರಿಸುವದೇ ಹೊರ್ತು ಮತ್ತೊಂದು ಹುಟ್ಟುವದಿಲ್ಲ. ಇಲ್ಲವೇ ಕನ್ನಡಿಯಲ್ಲಿ ಯಾವದು ನೋಡುತ್ತಿರುವದೋ ಅದೇ ದೃಷ್ಟಿಗೆ ಬೀಳುವದು. ॥೭೪॥ ಇಲ್ಲವೇ ಅರ್ಜುನಾ! ಗಿರಿಕಂದರಗಳಲ್ಲಿ ಯಾವ ಪ್ರಕಾರ ತಮ್ಮ ಶಬ್ದವು ತಾವು ಮಾತಾಡಿದಂತೆಯೇ ಪ್ರತಿಧ್ವನಿಯಾಗಿ ಕೇಳಬರುತ್ತದೋ, ॥ ೭೫ ॥ ಅದೇ ಪ್ರಕಾರ ಅರ್ಜುನಾ, ಪ್ರತಿಒಂದು ಉಪಾಸನೆಗೆ ನಾನೇ ಆಧಾರ (ಸಾಕ್ಷಿ) ಭೂತನಾಗಿರುತ್ತೇನೆ. ಆದುದರಿಂದ ಪ್ರತಿಯೊಬ್ಬರಿಗೆ ಅವರವರ ಭಾವನೆಯಂತೆ ಫಲಪ್ರಾಪ್ತಿಯಾಗುತ್ತದೆ. ॥ ೭೬ ॥

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ ॥ ೧೩ ॥**

**[ ಚಾತುರ್ವರ್ಣ್ಯ ಮಿತಿ ]** ಆತಾ ಯಾಚಿ ಪರೀ ಜಾಣ । ಚಾರ್ಹೀ ಹೇ ವರ್ಣ । ಸೃಜಿಲೇ ಮ್ಯಾ ಗುಣ । ಕರ್ಮವಿಭಾಗೇ ॥ ೭೭ ॥ ಜೇ ಪ್ರಕೃತೀ ಚೇನಿ ಆಧಾರೇ । ಗುಣಾಚೇನಿ ವ್ಯಭಿಚಾರೇ । ಕರ್ಮೇ ತದನುಸಾರೇ । ವಿವಂಚಿಲೀ ॥ ೭೮ ॥ ಏಥ ಏಕಚಿ ಹೇ ಧನುಷ್ಯಪಾಣೀ । ಪರೀ ಜಾಹಾಲೇ ಗಾಚಹೂ ವರ್ಣೀ । ಐಸೀ ಗುಣ ಕರ್ಮ ಕಡಸಣೀ । ಕೇಲೀ ಸಹಜೇ ॥ ೭೯ ॥ ಮ್ಹಣೋನಿ ಆ ಇಕೇ ಪಾರ್ಥಾ । ಹೇ ವರ್ಣಭೇದ ಸಂಸ್ಥಾ । ಮೀ ಕರ್ತಾ ನವ್ಹೇ ಸರ್ವಥಾ । ಯಾಚಿಲಾಗೀ ॥ ೮೦ ॥

**ಅರ್ಥ—** ಇದೇ ಪ್ರಕಾರ ( ಸತ್ವ, ರಜ, ತಮ ಈ ಮೂರು ಗುಣಗಳು ಶಮ, ದಮ, ಶೌರ್ಯ, ತೇಜ, ಕೃಷಿ, ವಣಿಜ್ಯ, ಸೇವಾ ಮುಂತಾದ ಕರ್ಮಗಳಿಂದ ) ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಮುಂತಾದ ಗುಣ ಕರ್ಮಗಳ ವಿಭಾಗ ಮಾಡಿ ಈ ನಾಲ್ಕು ವರ್ಣಗಳನ್ನು ನಾನೇ ಉತ್ಪನ್ನ ಮಾಡಿರುವೆನು. ॥ ೭೭ ॥ ಮತ್ತು ಆ ನಾಲ್ಕು ವರ್ಣಗಳ ಕರ್ಮಗಳನ್ನು ತಮ್ಮ ತಮ್ಮ ಪ್ರಕೃತಿ ಧರ್ಮದಿಂದ ಮತ್ತು ಗುಣತಾರತಮ್ಯದಿಂದ ವ್ಯವಸ್ಥೆಮಾಡಿದ್ದೇನೆ. ॥ ೭೮ ॥ ಧನುರ್ಧರಾ! ಈ ಸರ್ವ ಜನರೂ ಒಂದೇ ಇದ್ದು ಗುಣ ಕರ್ಮಗಳ ಯೋಗದಿಂದ ಅವರ ನಾಲ್ಕು ವರ್ಣಗಳು ಸಹಜವಾಗಿಯೇ ಉಂಟಾದವು. ॥ ೭೯ ॥ ಗುಣ ಕರ್ಮಾನುರೂಪ ವಿವೇಕ-ವಿಚಾರದಿಂದಲೇ ವರ್ಣಭೇದದ ವ್ಯವಸ್ಥೆಯಾಗಿರುತ್ತದೆ. ಆದುದರಿಂದ ಅರ್ಜುನಾ, ಈ ಬ್ರಾಹ್ಮಣ ಕ್ಷತ್ರಿಯಾದಿ ವರ್ಣಭೇದದ ಸ್ಥಾಪನೆಯ ಕರ್ತೃ ಮೂಲತಃ ನಾನಿರುವದಿಲ್ಲ. ॥ ೮೦ ॥

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

**[ ನ ಮಾಮಿತಿ ]** ಹೇ ಮಜಚಿಸ್ತವ ಜಾಹಾಲೇ । ಪರೀ ಮ್ಯಾ ನಾಹೀ ಕೇಲೇ । ಐಸೇ ಜೇಣೇ ಜಾಣಿತಲೇ । ತೋ ಸುಟಲಾ ಗಾ ॥ ೮೧ ॥

**ಅರ್ಥ—** ಈ ವರ್ಣಭೇದವು ಒಂದು ವೇಳೆ ನನ್ನಿಂದಲೇ ಆಗಿರುತ್ತದೆ, ಅಂದರೆ ನನ್ನ ಸತ್ತಾದಿಂದಲೇ ಆಗಿರುತ್ತದೆ. ಆದರೂ ಅದನ್ನು ನಾನು ಮಾಡಿರುವದಿಲ್ಲ. ಹೀಗೆ ಯಾವನು ತಿಳಿಯುವನೋ ಅವನೇ ಕರ್ಮಾತೀತ ನಾಗಿರುವನು. ॥ ೮೧ ॥

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥ ೧೫ ॥**

**[ ಏವಂ ಜ್ಞಾತ್ವೇತಿ ]** ಮಾಗೀಲ ಮುಮುಕ್ಷು ಜೇ ಹೋತೇ । ತಿಹೀ ಐಸಿಯಾ ಜಾಣೋನಿ ಮಾತೇ ಕರ್ಮಕೇಲೀ ಸಮಸ್ತೇ ಧನುರ್ಧರಾ ॥ ೮೨ ॥ ಪೇರಿತಾ ಬೀಜೇ ಜೈಸೀ ದಗ್ಧಲೀ । ನುಗವತೀಚಿ ಪೇರಿಲೀ । ತೈಸೀ ಕರ್ಮೇಂಚಿ ಪರೀ ತಯಾ ಜಾಹಾಲೀ । ಮೋಕ್ಷಹೇತು ॥ ೮೩ ॥ ಏಥ ಆಣಿಕಹೀ ಏಕ ಅರ್ಜುನಾ । ಕರ್ಮಾ ಕರ್ಮ ವಿವಂಚನಾ । ಆಪುಲಿಯೇ ಚಾಡೇಸಜ್ಞಾನಾ । ಯೋಗ್ಯನೋಹೇ ॥ ೮೪ ॥

**ಅರ್ಥ—** ಅರ್ಜುನಾ! ಪೂರ್ವಕಾಲದಲ್ಲಿ ಆಗಿಹೋದ ಮುಮುಕ್ಷುಗಳು ಕೂಡ ಇದೇ ಪ್ರಕಾರದಿಂದಲೇ ನನ್ನನ್ನು ತಿಳಿದು ಸರ್ವಕರ್ಮಗಳನ್ನು ಮಾಡಿದರು. ॥ ೮೨ ॥ ಆದರೆ ಯಾವ ಪ್ರಕಾರ ಹುರಿದ ಬೀಜಗಳನ್ನು ಬಿತ್ತಿದರೆ ಮೂಲತಃ ನಾಟುವದೇ ಇಲ್ಲವೋ, ಅದೇ ಪ್ರಕಾರ ಅವರ ನಿಷ್ಕಾಮಕರ್ಮಗಳೇ ಅವರ ಮೋಕ್ಷಪ್ರಾಪ್ತಿಗೆ ಕಾರಣ ಗಳಾಗುತ್ತವೆ. ॥ ೮೩ ॥ ಮತ್ತು ಅರ್ಜುನಾ! ಅದರಲ್ಲಿ ಇನ್ನೂ ಒಂದು ಮಾತು ಹೀಗೆ ಇರುವದು. ಅದು ಹೇಗೆಂದರೆ, ಇದು ಕರ್ಮವಿರುವದೋ ಅಥವಾ ಅಕರ್ಮವಿರುವದೋ ಇದರ ವಿಚಾರವು ತಮ್ಮ ಮತದಿಂದಲೇ ನಿಶ್ಚಯಿಸುವದು ಬುದ್ಧಿವಂತರಿಗೆ ಕೂಡಾ ಕಠಿಣವಾಗಿರುವದು. ॥ ೮೪ ॥

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧೬ ॥**

**[ ಕಿಂ ಕರ್ಮ ಕಿಮ ಕರ್ಮೇತಿ ]** ಕರ್ಮ ಮ್ಹಣಿಪೇ ತೇ ಕವಣ । ಅಥವಾ ಅಕರ್ಮಾ ಕಾಯ ಲಕ್ಷಣ । ಐಸೇ ವಿಚಾರತಾ ವಿಚಕ್ಷಣ । ಗುಂಫೋನಿ ಠೇಲೆ ॥ ೮೫ ॥ ಜೈಸೇ ಕಾ ಕುಡೇ ನಾಣೇ । ಖರ್ಯಾಚೇನಿ ಸಾರಖೇಪಣೇ । ಡೋಳ್ಯಾಚೇಹೀ ದೇಖಣೇ । ಸಂಶಯೀ ಘಾಲೀ ॥ ೮೬ ॥ ತೈಸೇ ನೈಷ್ಕರ್ಮ್ಯ ತೇಚೇನಿ ಭ್ರಮೇ । ಗಿಂವಸಿಜತ ಆಹಾತೀ ಕರ್ಮೇ । ಜೇ ದುಜೀ ಸೃಷ್ಟಿ ಮನೋ ಧರ್ಮೇ । ಕರೂ ಸಕತೀ ॥ ೮೭ ॥ ವಾಚೂನಿ ಮೂರ್ಖಾಚೀ ಗೋಠೀ ಕಾಯಸೀ । ಏಥ ಮೋಹಲೇ ಗಾ ದೀರ್ಘದರ್ಶೀ । ಮ್ಹಣೋನಿ ಆತಾ ತೇಚಿ ಪರಿಯೇಸೀ । ಸಾಂಗೇನ ತುಜ ॥ ೮೮ ॥

**ಅರ್ಥ—** ಕರ್ಮವೆಂದು ಯಾವದಕ್ಕೆ ಅನ್ನುತ್ತಾರೆ? ಅಕರ್ಮದ ಲಕ್ಷಣವೇನು? ಈ ಮಾತಿನ ವಿಚಾರ ಮಾಡುತ್ತ ಮಾಡುತ್ತ ಜ್ಞಾನಿಗಳು ಕೂಡಾ ಗೊಂದಲದಲ್ಲಿ ಬಿದ್ದಿರುವರು. ॥ ೮೫ ॥ ಹೇಗೆ ಖೊಟ್ಟಿ ನಾಣ್ಯಗಳು ನಿಜವಾದ ನಾಣ್ಯದಂತೆ ಪ್ರತ್ಯಕ್ಷ ತೋರುವದರಿಂದ ಚಿನಿವಾಲನ ಕಣ್ಣಿಗೆ ಸಹ ಸಂಶಯವುಂಟಾಗುತ್ತದೊ, ॥ ೮೬ ॥ ಹಾಗೆಯೇ, ಮನಸಿನಲ್ಲಿ ತಂದರೆ ಸಂಕಲ್ಪ ಮಾತ್ರದಿಂದ ಪ್ರತಿ ಸೃಷ್ಟಿಯನ್ನೇ ನಿರ್ಮಾಣಮಾಡುವ ಸಾಮರ್ಥ್ಯವು

ಯಾರಿಗೆ ಇರುತ್ತದೋ ಅವರಿಗೆ ಸಹ ನೈಷ್ಕರ್ಮ್ಯದ ಸ್ಥಿತಿಯು ತಿಳಿಯುವದಿಲ್ಲ. ಅದರಿಂದ ಅವರು ಭ್ರಮೆಯಿಂದ ಕರ್ಮದ ಪಾಶದಲ್ಲಿ ಶಿಲುಕಿ ಬಿದ್ದಿರುತ್ತಾರೆ. ॥ ೮೭ ॥ ಕರ್ಮವಾವುದು, ಅಕರ್ಮವಾವುದು ಎಂಬ ವಿಷಯದ ವಿಚಾರದಲ್ಲಿ ದೊಡ್ಡ ದೊಡ್ಡ ವಿದ್ವಾಂಸರು ಸಹ ಭ್ರಮೆಪಡುವರು. ಅಂದಬಳಿಕ ಅಜ್ಞಾನಿಗಳ (ಮೂರ್ಖರ) ಮಾತನ್ನೇನು ಹೇಳಬೇಕು ? ಆದುದರಿಂದ ಆ ಕರ್ಮಜ್ಞಾನವನ್ನು ನಿನಗೆ ಹೇಳುತ್ತೇನೆ ಕೇಳು. ॥ ೮೮ ॥

**ಕರ್ಮಣೋಽಹಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

**[ ಕರ್ಮಣೋಹ್ಯಪೀತಿ ]** ತರೀ ಕರ್ಮ ಮ್ಹಣಿಜೇ ಸ್ವಭಾವೇ । ಜೇಣೇ ವಿಶ್ವಾಕಾರ ಸಂಭವೇ । ತೇ ಸಮ್ಯಕ ಆಧೀ ಜಾಣಾವೇ । ಲಾಗೇ ಏಥ ॥ ೮೯ ॥ ಮಗ ವರ್ಣಾಶ್ರಮಾಸಿ ಉಚಿತ । ಜೇ ವಿಶೇಷ ಕರ್ಮ ವಿಹಿತ । ತೇಹೀ ವೋಳಖಾವೇ ನಿಶ್ಚಿತ । ಉಪಯೋಗೇಸೀ ॥ ೯೦ ॥ ಪಾಠೀ ಜೇ ನಿಷಿದ್ಧ ಮ್ಹಣಿಪೇ । ತೇಹೀ ಬುಝಾವೇ ಸ್ವರೂಪೇ । ಯೇತುಲೇನಿ ಕಾಹೀ ನ ಗುಂಫೇ । ಆಪೈಸೇಚೀ ॥ ೯೧ ॥ ಯೇರ್ಹವೀ ಜಗ ಹೇ ಕರ್ಮಾಧೀನ । ಐಸಿಯಾಚೀ ವ್ಯಾಪ್ತೀಗಹನ । ಪರೀ ತೇ ಅಸೋ ಆಇಕೇ ಚಿನ್ಹ । ಪ್ರಾಪ್ತಾಚೇಗಾ ॥ ೯೨ ॥

**ಅರ್ಥ—** ಈಶ್ವರನ ಸ್ಥಳದಲ್ಲಿ ಜೀವಗಳ ಕರ್ಮಾನುಸಾರವಾಗಿ ಈ ವಿಶ್ವರಚನೆಯನ್ನು (ಉತ್ಪನ್ನ) ಮಾಡುವ ಸಂಕಲ್ಪವು, ಕರ್ಮವೆಂದು ಕರೆಯಲ್ಪಡುವದು. ಅದರ ಯಥಾರ್ಥ ಸ್ವರೂಪವನ್ನು ತಿಳಿದುಕೊಳ್ಳಲೇಬೇಕು. । ೮೯ ॥ ಆ ಮೇಲೆ ಯಾವ ಕರ್ಮವು ವರ್ಣಾಶ್ರಮಕ್ಕೆ ವಿಹಿತವಾದೀತು, ( ಬ್ರಾಹ್ಮಣಾದಿ ನಾಲ್ಕುವರ್ಣದವರಿಗೆ, ಮತ್ತು ಬ್ರಹ್ಮಚರ್ಯಾದಿ ನಾಲ್ಕು ಆಶ್ರಮಗಳಿಗೆ ಯೋಗ್ಯವಾದೀತು ) ಮತ್ತು ವೇದದಲ್ಲಿ ಹೇಳಿದ ಅನುಷ್ಠಾನವನ್ನು ಹೇಗೆ ಮಾಡಬೇಕು, ಮತ್ತು ಅದರ ಫಲವೇನು ಎಂಬುದಿದನ್ನು ಗೊತ್ತು ಮಾಡಿಕೊಳ್ಳಬೇಕು. ॥ ೯೦ ॥ ಯಾವನು ಫಲದಿಂದ ಯುಕ್ತವಾದ ಸರ್ವ ಕರ್ಮಗಳನ್ನು ನಿಷಿದ್ಧವೆಂದು ತಿಳಿಯುವನೋ ಅವನು ಪರಮಾತ್ಮ ಸ್ವರೂಪವೇ ಆಗಿರುತ್ತಾನೆ. ಈ ಯಥಾರ್ಥ ಜ್ಞಾನದಿಂದ ಪುರುಷನು ಸಹಜವೇ ಕರ್ಮದ ಬಂಧನದಲ್ಲಿ ಶಿಲುಕುವದಿಲ್ಲ. ॥ ೯೧ ॥ ನೋಡಿದರೆ ಜಗತ್ತು ಕರ್ಮಾಧೀನವಾಗಿರುವದು. ಕರ್ಮದ ವ್ಯಾಪ್ತಿಯು ದುಸ್ತರವಾಗಿರುವದು. ಅದಂತೂ ಇರಲಿ, ಮೇಲೆ ಹೇಳಿದಂತೆ ಕರ್ಮವೆಂದರೇನು ? ವಿಕರ್ಮವೆಂದರೇನು ! ಇದರ ಯಥಾರ್ಥ ಜ್ಞಾನವನ್ನು ಪ್ರಾಪ್ತಿಮಾಡಿಕೊಂಡ ಪುರುಷರ ಲಕ್ಷಣವನ್ನು ಹೇಳುತ್ತೇನೆ ಕೇಳು. ॥ ೯೨ ॥

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನ ಕರ್ಮಕೃತ್ ॥ ೧೮ ॥**

**[ ಕರ್ಮಣ್ಯ ಕರ್ಮಯಃ ಪಶ್ಯೇದಿತಿ ]** ಜೋ ಸಕಳಕರ್ಮೀ ವರ್ತತಾ । ದೇಖೇ ಆಪುಲೀ ನೈಷ್ಕರ್ಮ್ಯತಾ । ಕರ್ಮಸಂಗೇ ನಿರಾಶತಾ । ಫಳಾಚಿಯಾ ॥ ೯೩ ॥ ಆಣಿ ಕರ್ತವ್ಯತೇಲಾಗೀ । ಜಯಾ ದುಸರೇ ನಾಹೀ ಜಗೀ । ಐಸಿಯಾ ನೈಷ್ಕರ್ಮ್ಯತಾ ತರೀ ಚಾಂಗೀ । ಬೋಧಲಾ ಅಸೇ ॥ ೯೪ ॥ ತರೀ ಕ್ರಿಯಾ ಕಲಾಪ ಆಘವಾ । ಆಚರತ ದಿಸೇ ಬರವಾ । ತೋಚಿ ತೋ ಯೇ ಚಿನ್ಹೀ ಜಾಣಾವಾ । ಜ್ಞಾನಿಯಾಗಾ ॥ ೯೫ ॥ ಜೈಸಾ ಕಾ ಜಳಾ ಪಾಶೀ ಉಭಾ ಠಾಕೇ । ತೋ ಜರೀ ಆಪಣ ಪೇ ಜಳಾಮಾಜೀ ದೇಖೇ । ತರೀ ತೋ ನಿಭ್ರಾಂತ ವೋಳಖೇ । ಮ್ಹಣೇ ಮೀ ವೇಗಳಾ ಆಹೇ ॥ ೯೬ ॥ ಅಥವಾ ನಾವೇ ಹನ ಜೋ ರಿಗೇ । ತೋ ಥಡಿಯೇಚೆ ರುಖ ಜಾತಾ ದೇಖೇ ವೇಗೇ । ತೇಚಿ ಸಾಚೋಕಾರೇ ಪಾಹೋ ಜೋ ಲಾಗೇ । ತನ ರುಖ ಮ್ಹಣೇ ಅಚಳ ॥ ೯೭ ॥ ತೈಸೇ ಸರ್ವ ಕರ್ಮೀ ಅಸಣೇ । ತೇ ಫುಡೇ ಮಾನೂನಿ ವಾಯಾಣೇ । ಮಗ ಆಪಣ ಜೋ ಜಾಣೇ । ನೈಷ್ಕರ್ಮ್ಯ ಐಸಾ ॥ ೯೮ ॥ ಆಣಿ ಉದೋ

ಅಸಾ ಚೇನಿ ಪ್ರಮಾಣೇ । ಜೈಸೇ ನ ಚಲತಾ ಸೂರ್ಯಾಚೇ ಚಾಲಣೇ । ತೈಸೇ ನೈಷ್ಕರ್ಮ್ಯ ತತ್ವ ಜಾಣೇ । ಕರ್ಮಿಂಚಿ ಅಸತಾ ॥ ೯೯ ॥ ತೋ ಮನುಷ್ಯಾ ಸಾರಿಖಾ ತರೀ ಆವಡೇ । ಪರೀ ಮನುಷ್ಯತ್ವ ತಯಾ ನ ಘಡೇ । ಜೈಸೇ ಜಳಾಮಾಜೀ ನ ಬುಡೇ । ಭಾನುಬಿಂಬ ॥ ೧೦೦ ॥ ತೇಣೇ ನ ಪಾಹತಾ ವಿಶ್ವ ದೇಖಿಲೇ । ನ ಕರಿತಾ ಸರ್ವ ಕೇಲೇ । ನ ಭೋಗಿತಾ ಭೋಗಿಲೇ । ಭೋಗ್ಯಜಾತ ॥ ೧ ॥ ಏಕೇಚಿ ಠಾಯೀ ಬೈಸಲಾ । ಪರೀ ಸರ್ವತ್ರ ತೋಚಿ ಗೇಲಾ । ಹೇ ಅಸೋ ವಿಶ್ವಜಾಹಾಲಾ । ಆಂಗೇಚಿತೋ ॥ ೨ ॥

**ಅರ್ಥ**— ಯಾವನು ಫಲಾಪೇಕ್ಷೆಯನ್ನು ಬಿಟ್ಟು ಸಕಲಕರ್ಮಗಳ ಆಚರಣ ಮಾಡುತ್ತಾನೋ ಅವನು ಅಕರ್ಮ ವನ್ನು ತಾನು ಮಾಡುತ್ತೇನೆಂದು ತಿಳಿಯುವದಿಲ್ಲ. ॥ ೯೩ ॥ ಮತ್ತು ಅವನು ನಿಷ್ಕಾಮ ಕರ್ಮದ ವಿಷಯದಲ್ಲಿ ಮಾತ್ರ ಚನ್ನಾಗಿ ತಿಳಿದವನಾಗಿರುತ್ತಾನೆ. ಅವನಿಗೆ ಆತ್ಮಸ್ವರೂಪದ ಹೊರ್ತು ಅನ್ಯವಾವದೂ ತೋರುವದಿಲ್ಲ. ಆದುದರಿಂದ ಅವನ ಕರ್ತವ್ಯವು ಇಲ್ಲದಂತೆ ಆಗಿರುತ್ತದೆ. ॥ ೯೪ ॥ ಲೋಕದೃಷ್ಟಿಯಿಂದ ಅವನು ಸರ್ವ ಕರ್ಮಗಳನ್ನು ಒಳ್ಳೇ ಪ್ರೀತಿಯಿಂದ ಆಚರಿಸುತ್ತಾನೆಂದು ಕಂಡುಬಂದರೂ ಅವನು ನಿಜವಾದ ಜ್ಞಾನಿಯೇ ಇರುತ್ತಾನೆ. ॥ ೯೫ ॥ ಒಬ್ಬಾನೊಬ್ಬ ಮನುಷ್ಯನು ಜಲಾಶಯದ ದಂಡೆಯಲ್ಲಿ ನಿಂತರೆ ತನ್ನ ಪ್ರತಿಬಿಂಬವನ್ನು ನೀರಿನಲ್ಲಿ ಕಾಣುತ್ತಿದ್ದರೂ ಅವನು ನೀರಿನಿಂದ ಬೇರೆಯಾಗಿರುವೆನೆಂದು ಚನ್ನಾಗಿ ಅರಿತಿರುತ್ತಾನೆ. ॥ ೯೬ ॥ ಅಥವಾ ನಾವಿನಲ್ಲಿ ಕುಳಿತು ಹೋಗುವ ಮನುಷ್ಯನಿಗೆ ನದಿಯ ದಂಡೆಯ ಮೇಲಿನ ಗಿಡಗಳು ಓಡುತ್ತಿರುವಂತೆ ಕಂಡು ಬರುತ್ತವೆ. ಆದರೆ ನಿಜವಾಗಿ ವಿಚಾರ ಮಾಡಿ ನೋಡಿದರೆ ಆ ಗಿಡಗಳು ಅಚಲವಾಗಿರುತ್ತವೆಂಬುದು ಕಂಡು ಬರುತ್ತದೆ. ॥ ೯೭ ॥ ಅದೇ ಪ್ರಕಾರ ಸರ್ವ ಕರ್ಮಗಳನ್ನು ಮಾಡುತ್ತಿರಲಾಗಿ ಆ ಕರ್ಮಗಳು ತನ್ನಲ್ಲಿ ಪ್ರತೀತಿಗೆ ಬರುತ್ತವೆ. ಅವು ನಿಜವಾಗಿ ತಾನು ಮಾಡುವ ದಿಲ್ಲೆಂಬುದು ಸ್ಪಷ್ಟವಾಗಿ ಕಂಡುಬರುತ್ತದೆ. ಕರ್ಮರಹಿತ ಸರ್ವಸ್ವತಂತ್ರನಾದ ಪರಮಾತ್ಮನೇ ನಮ್ಮಲ್ಲಿ ನಿಂತು ಮಾಡಿಸುತ್ತಾನೆಂದು ಅವನು ತಿಳಿದಿರುತ್ತಾನೆ. ॥ ೯೮ ॥ ಮತ್ತು ಸೂರ್ಯನ ಉದಯಾಸ್ತಗಳನ್ನು ನೋಡಿ, ಇಷ್ಟೇ ಪ್ರಮಾಣದಿಂದಲೇ ಅವನು ನಡೆಯುತ್ತಾನೆಂದು ತಿಳಿಯುವದು ಅಸತ್ಯವು; ಅದರಂತೆ ಕರ್ಮಾಚರಣ ಮಾಡಿದಾಗ್ಯೂ ಅವುಗಳನ್ನು ತಾನು ಮಾಡುತ್ತಿರುವದಿಲ್ಲವೆಂದು ಅವನು ತಿಳಿದಿರುತ್ತಾನೆ, ( ಕರ್ತೃ ಈಶ್ವರನೆಂದು ನಂಬಿರುತ್ತಾನೆ) ॥ ೯೯ ॥ ಸೂರ್ಯನ ಪ್ರತಿಬಿಂಬವು ನೀರಿನಲ್ಲಿದ್ದರೂ ಸೂರ್ಯನು ಕಡೆಗೆಯೇ ಹೇಗೆ ಇರುವನೋ ಹಾಗೆಯೇ ಅವನು, ಮಾನವ ನಂತೆ ತೋರಿದರೂ ಪ್ರತ್ಯಕ್ಷ ಪರಬ್ರಹ್ಮನ ಪ್ರತಿಬಿಂಬವೇ ಆಗಿರುವನು. ॥ ೧೦೦ ॥ ಅವನು ನೋಡದೇ ವಿಶ್ವವನ್ನು ಕಂಡಿರುವನು. ಏನೂಮಾಡದೇ ಸರ್ವವನ್ನೂ ಪೂರ್ತಿಗೊಳಿಸಿರುವನು. ಏನನ್ನೂ ಭೋಗಿಸದೇ ಸರ್ವಭೋಗ್ಯ ವಸ್ತುಗಳನ್ನೂ ಸುಖಿಸಿರುವನು. ॥ ೧೦೧ ॥ ಅವನು ಒಂದೇ ಸ್ಥಳದಲ್ಲಿ ಕುಳಿತರೂ ಸರ್ವತ್ರದಲ್ಲಿಯೂ ಅಲೆದಾಡಿರುವನು. ಇದಂತೂ ಇರಲಿ, ಬಹಳ ಹೇಳುವದೇನು, ಸರ್ವ ವಿಶ್ವವೇ ತಾನಾಗಿರುವನು. ॥ ೧೦೨ ॥

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪ ವರ್ಜಿತಾಃ ।**
**ಜ್ಞಾನಾಗ್ನಿದಗ್ಧ ಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥ ೧೯ ॥**

**[ ಯಸ್ಯ ಸರ್ವ ಇತಿ ]** ಜಯಾ ಪುರುಷಾಚ್ಯಾ ಠಾಯೀ । ಕರ್ಮಾಚಾ ತರೀ ಖೇದ ನಾಹೀ । ಪರೀ ಫಳಾಪೇಕ್ಷಾ ಕಾಂಹೀ । ಸಂಚರೇನಾ ॥ ೩ ॥ ಆಣಿ ಹೇಕರ್ಮ ಮೀ ಕರೀನ । ಅಥವಾ ಆದರಿಲೇ ಸಿದ್ಧಿ ನೇಈನ । ಯೇಣೇಸಂಕಲ್ಪೇಹೀ ಜಯಾಚೇ ಮನ । ವಿಟಾಳೇನಾ ॥ ೪ ॥ ಜ್ಞಾನಾಗ್ನೀಚೇನಿ ಮುಖೇ । ಜೇಣೇ ಜಾಳಿಲೀ ಕರ್ಮೇ ಅಶೇಖೇ । ತೋ ಪರಬ್ರಹ್ಮಚಿ ಮನುಷ್ಯ ವೇಖೇ । ವೋಳಖ ತೂ ॥ ೫ ॥

**ಅರ್ಥ**— ಯಾವ ಪುರುಷನಿಗೆ ಕರ್ಮಾಚರಣದ ವಿಷಯದಲ್ಲಿ ಖೇದವಾಗುವದಿಲ್ಲವೋ, ಮತ್ತು ಕರ್ಮಫಲದ ಇಚ್ಛೆಯು ಯಾವನ ಮನಸ್ಸಿನಲ್ಲಿ ಉದ್ಭವಿಸಿರುವದಿಲ್ಲವೋ, ॥ ೩ ॥ ಮತ್ತು ಯಾವದಾದರೊಂದು ಕರ್ಮವನ್ನು

ಮಾಡೇನು ಅಥವಾ ಪ್ರಾರಂಭನಾಡಿದ ಒಂದಾನೊಂದು ಕರ್ಮವನ್ನು ಪೂರ್ಣಮಾಡೇನು ಇಂತಹ ಸಂಕಲ್ಪವನ್ನು ಕೂಡಾ ಯಾವನ ಮನಸ್ಸು ಸ್ಪರ್ಶಮಾಡುವದಿಲ್ಲವೋ, ॥ ೪ ॥ ಮತ್ತು ಜ್ಞಾನರೂಪ ಅಗ್ನಿಯ ಮುಖದಲ್ಲಿ ಯಾವನು ತನ್ನ ಸರ್ವಕರ್ಮಗಳನ್ನು ಸುಟ್ಟು ಬಿಟ್ಟಿರುವನೋ, ಅಂಥ ಆ ಪುರುಷನು ಮನುಷ್ಯರೂಪದಿಂದ ಪರಬ್ರಹ್ಮನೇ ಅವತರಿಸಿರುವನೆಂದು ತಿಳಿ. ॥ ೫ ॥

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿ ಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥**

[ **ತ್ಯಕ್ತ್ವೇತಿ** ] ಜೋ ಶರೀರೀ ಉದಾಸ ! ಫಳಭೋಗೀ ನಿರಾಸ । ನಿತ್ಯತಾ ಉಲ್ಹಾಸ । ಹೋವುನಿ ಅಸೇ ॥ ೬ ॥ ಜೋ ಸಂತೋಷಾಚಾ ಗಾಭಾರಾ । ಆತ್ಮಬೋಧಾಚಿಯಾ ವೋಗರಾ । ಪುರೇ ನ ವ್ಹಣೇಚಿ ಧನುರ್ಧರಾ । ಆರೋಗಿತಾ ॥ ೭ ॥

**ಅರ್ಥ**— ಯಾವನು ಶರೀರದ ವಿಷಯದಲ್ಲಿ ಉದಾಸೀನನಾಗಿರುವನೋ ಮತ್ತು ಕರ್ಮದಿಂದ ಆಗತಕ್ಕ ಫಲ ಪ್ರಾಪ್ತಿಯ ವಿಷಯವಲ್ಲಿ ನಿರಿಚ್ಛನಾಗಿರುವನೋ ಅವನು ಯಾವಾಗಲೂ ಆನಂದ ಸ್ವರೂಪವಲ್ಲಿ ಮಗ್ನನಾಗಿರುವನು ॥೬॥ ಪಾರ್ಥಾ ! ಇವನು ಸಂತೋಷವೆಂಬ ನಡುಮನೆಯಲ್ಲಿ ಕುಳಿತು ಆತ್ಮಬೋಧ ರೂಪ ಪಕ್ವಾನ್ನವನ್ನು ಭೋಜನಮಾಡ ಹತ್ತಿದರೆ ಸಾಕು, ತೃಪ್ತಿ ಆಗಿರುವದು ಎಂದು ಅನ್ನುವದೇ ಇಲ್ಲ. ॥ ೭ ॥

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತ ಸರ್ವ ಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ೨೧ ॥**
**ಯದೃಚ್ಛಾಲಾಭ ಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವ ಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥ ೨೨ ॥**

[ **ನಿರಾಶೀರ್ಯತ ಚಿತ್ತಾತ್ಮೇತಿ** ] ಕೈಸೀ ಅಧಿಕಾಧಿಕ ಆವಡೀ । ಘೇತ ಮಹಾ ಸುಖಾಚೀ ಗೋಡೀ । ಸಾಂಡೋನಿಯಾ ಆಶಾಕುರೋಂಡೀ । ಅಹಂಭಾವೇಸೀ ॥ ೮ ॥ ಮ್ಹಣೋನಿ ಅವಸರೇ ಜೇ ಜೇ ಪಾವೇ । ತೇಣೇಚಿ ತೋ ಸುಖಾವೇ । ಜಯಾ ಆಪುಲೇ ಆಣಿ ಪರಾವೇ । ದೋನ್ಹೀ ನಾಹೀ ॥ ೯ ॥ ತೋ ದಿಠೀ ಜೇ ಪಾಹೇ ! ತೇ ಆಪಣಾಚಿ ಹೋವುನಿ ಜಾಯೇ । ಆಇಕೇ ತೇ ಆಹೇ । ತೋಚಿ ಜಾಹಲಾ ॥ ೧೦ ॥ ಚರಣೀ ಹನ ಚಾಲೇ । ಮುಖೇ ಜೇ ಜೇ ಬೋಲೇ । ಐಸೇ ಚೇಷ್ಟಾಜಾತ ತೇ ತುಲೇ । ಆಪಣಚಿ ಜೋ ॥ ೧೧ ॥ ಹೇ ಅಸೋ ವಿಶ್ವ ಪಾಹೀ । ಜಯಾಸಿ ಆಪಣಪೇ ವಾಚೂನಿ ನಾಹೀ । ಆತಾ ಕವಣ ತೇ ಕರ್ಮಕಾಹೀ । ಬಾಧೀತಯಾತೆ ॥ ೧೨ ॥ ಹಾಮತ್ಸರ ಜೇಥ ಉಪಜೇ । ತೇ ತುಲೇ ನುರೇಚಿ ಜಯಾಮಜೇ । ತೋ ನಿರ್ಮತ್ಸರ ಕಾಈ ವ್ಹಣಿಜೇ । ಬೋಲನರೀ ॥೧೩॥ ವ್ಹಣೋನಿ ಸರ್ವಾಪರೀ ಮುಕ್ತ । ತೋ ಸಕರ್ಮಚಿ ಕರ್ಮರಹಿತ । ಸಗುಣಪರೀ ಗುಣಾತೀತ । ಏಥ ಭ್ರಾಂತಿ ನಾಹೀ ॥ ೧೪ ॥

**ಅರ್ಥ**— ಯಾವನು ಅಹಂಕಾರವನ್ನೂ ಆಶೆಯನ್ನೂ ಬಿಟ್ಟಿರುವನೋ ಅವನು ಅತ್ಯಧಿಕವಾದ ನಿಸ್ಸೀಮ ಪ್ರೇಮದಿಂದ ಬ್ರಹ್ಮಸುಖದ ಸ್ವಾದವನ್ನು ತೆಗೆದುಕೊಳ್ಳುತ್ತಾನೆ. ॥ ೮ ॥ ಆದುದರಿಂದ ಯಾವ ಯಾವ ಸಮಯಕ್ಕೆ ಯಾವ ಯಾವದು ದೊರಕುವದು ಅದರಲ್ಲಿಯೇ ಅವನು ಸುಖವಿರುವನೆಂದು ತಿಳಿಯುತ್ತಾನೆ. ಮತ್ತು ಇದು ತನ್ನದು, ಇದು ಅನ್ಯರದು ಎಂಬ ಭೇದವೇ ಅವನಲ್ಲಿರುವದಿಲ್ಲ. ॥ ೯ ॥ ಅವನು ತನ್ನ ದೃಷ್ಟಿಯಿಂದಲೇ ಯಾವ ಯಾವದನ್ನು ನೋಡುತ್ತಾನೋ ಮತ್ತು ಕೇಳುತ್ತಾನೋ ಆ ಎಲ್ಲ ವ್ಯಾಪಾರಗಳ ಕರ್ತನು ಆತ್ಮನೇ ಆಗಿರುತ್ತಾನೆ. ॥ ೧೧೧ ॥

ಕಾಲುಗಳಿಂದ ನಡೆಯುತ್ತಾನೆ. ಬಾಯಿಯಿಂದ ಮಾತನಾಡುತ್ತಾನೆ. ಅದೇಪ್ರಕಾರ ಶರೀರದಿಂದ ಎಷ್ಟು ವ್ಯಾಪಾರ ಮಾಡುತ್ತಾನೋ ಆ ಸರ್ವನೂ ಆತ್ಮನೇ ಆಗಿರುತ್ತಾನೆ. ॥ ೧೧ ॥ ಇದಂತೂ ಇರಲಿ ಬಹಳ ಹೇಳುವದೇನು, ಜಗತ್ತಿನಲ್ಲಿ ನೋಡುತ್ತಿರಲಿಕ್ಕಾಗಿ ಆತ್ಮಸ್ವರೂಪದ ವಿನಃ ಎರಡನೇದು ಅವನಿಗೆ ಯಾವದೂ ಕಾಣುವದಿಲ್ಲ. ಅವನಿಗೆ ಯಾವ ಕಾರಣದಿಂದಲೂ, ಯಾವ ಬಾಧೆಯೂ ಉಂಟಾಗಲರಿಯದು. ॥ ೧೨ ॥ ಈ ಮತ್ಸರವು ಯಾವ ದ್ವೈತದಲ್ಲಿ ಉತ್ಪನ್ನವಾಗುತ್ತದೋ ಆ ದ್ವೈತವೇ ಅವನ ದೃಷ್ಟಿಗೆ ಬೀಳುವದಿಲ್ಲ. ಅಂದಬಳಿಕ ಅವನು ನಿರ್ಮತ್ಸರನಾಗಿರುವನೆಂದು ಶಬ್ದದಿಂದ ಹೇಳಬೇಕೇನು ? ॥ ೧೩ ॥ ಅವನು ಸರ್ವಪ್ರಕಾರದಿಂದಲೂ ಮುಕ್ತನಾಗಿರುತ್ತಾನೆ. ಅವನು ಸರ್ವ ಕರ್ಮಗಳನ್ನು ಮಾಡುತ್ತಿದ್ದಾಗ್ಯೂ ಕರ್ಮರಹಿತನಾಗಿರುತ್ತಾನೆ. ಅವನು ಸಗುಣನಂತೆ ಕಾಣುತ್ತಿದ್ದಾಗ್ಯೂ ಗುಣಾತೀತನಾಗಿರುತ್ತಾನೆ. ಇದರಲ್ಲಿ ಸಂಶಯವಿಲ್ಲ. ॥ ೧೪ ॥

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

**[ ಗತ ಸಂಗಸ್ಯೇತಿ ]** ತೋ ದೇಹಸಂಗೇ ತರೀ ಅಸೇ । ಪರೀ ಚೈತನ್ಯಾ ಸಾರಿಖಾ ದಿಸೇ । ಪಾಹತಾ ಪರಬ್ರಹ್ಮಾಚೇನಿ ಕಸೇ । ಚೋಖಾಳ ಭಲಾ ॥ ೧೫ ॥ ಐಸಾಹೀ ಪರೀ ಕೌತುಕೇ । ಜರೀ ಕರ್ಮ ಕರೀ ಯಜ್ಞಾದಿಕೇ । ತರೀ ತಿಯೇ ಲಯಾಜಾತೀ ನಿಃಶೇಖೇ । ತಯಾಚ್ಯಾಚಿ ಠಾಯಿ ॥ ೧೬ ॥ ಅಕಾಳೀಚೀ ಅಭ್ರೇ ಜೈಸೀ । ಉರ್ಮೀವೀಣ ಆಕಾಶೀ । ಹರಪತೀ ಅಪ್ರೈಸೀ । ಉದಯಲೀ ಸಾತೀ । ॥ ೧೭ ॥ ತೈಸೀ ವಿಧಿವಿಧಾನೇ ವಿಹಿತೇ । ಜರೀ ಆಚರೇ ತೋ ಸಮಸ್ತೇ । ತರೀ ತಿಯೇ ಐಕ್ಯಭಾವೇ ಐಕ್ಯಾತೇ । ಸಾವತೀಚಿಗಾ ॥ ೧೮ ॥

**ಅರ್ಥ—** ಮತ್ತು ಅವನು ದೇಹಧಾರಿಯಾಗಿದ್ದಾನೆ. ಆದರೂ ನಿರ್ಗುಣನೋಪಾದಿಯಲ್ಲಿ ಕಾಣುತ್ತಾನೆ. ಮತ್ತು ಅವನನ್ನು ಒರಗೆಹಚ್ಚಿ ನೋಡಿದರೆ ಬ್ರಹ್ಮಸ್ವರೂಪದಂತೆ ತೋರುತ್ತಾನೆ. ॥ ೧೫ ॥ ಹೀಗೆ ಅವನು ಕೇವಲ ಮುಕ್ತನಿದ್ದಾನೆ. ಆದರೆ ಒಂದು ವೇಳೆ ಕೌತುಕದಿಂದ ಯಥಾವಿಧಿ ಯಜ್ಞಾದಿಕ ಕರ್ಮದ ಆಚರಣೆಯನ್ನೂ ಮಾಡುತ್ತಾನೆ. ಆದರೂ ಆ ಸಂಪೂರ್ಣ ಕರ್ಮವು ಅವನಲ್ಲಿಯೇ ( ಆತ್ಮನಲ್ಲಿಯೇ ) ಲಯಹೊಂದುತ್ತದೆ. ॥ ೧೬ ॥ ಆಕಾಶದಲ್ಲಿ ಉದ್ಭವಿಸಿದ ಅಕಾಲ ಮೋಡಗಳು ಮಳೆಯಾಗದೇ ತನ್ನಿಂದ ತಾನೇ ನಾಶಹೊಂದುತ್ತವೋ, ॥ ೧೭ ॥ ಅದೇ ಪ್ರಕಾರ ಅವನು ವೇದವಿಹಿತವಾದ ಕರ್ಮವನ್ನು ಈಶ್ವರಾರ್ಪಣ ಬುದ್ಧಿಯಿಂದ ಯಥಾವಿಧಿ ಆಚರಿಸುತ್ತಿರುವದರಿಂದ ಆ ಕರ್ಮದ ಸ್ಥಳದಲ್ಲಿ ಅವನ ದ್ವೈತಭಾವವು ಉಳಿಯದೇ ಅದೇ ಸ್ಥಳದಲ್ಲಿ ಲಯಹೊಂದುತ್ತದೆ ॥ ೧೮ ॥

**ಬ್ರಹ್ಮಾರ್ಪಣಂ ಬ್ರಹ್ಮಹವಿರ್ಬ್ರಹ್ಮಾಗ್ನೌ ಬ್ರಹ್ಮಣಾಹುತಂ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

**[ ಬ್ರಹ್ಮಾರ್ಪಣ ಮಿತಿ ]** ಹೇ ಹವನ ಮೀ ಹೋತಾ । ಕಾ ಇಯೇ ಯಜ್ಞೀ ಹಾ ಭೋಕ್ತಾ । ಐಸಿಯಾ ಬುದ್ಧೀಸಿ ನಾಹೀ ಭಿನ್ನತಾ । ಮ್ಹಣಪೂನಿಯಾ ॥ ೧೯ ॥ ಜೇ ಇಷ್ಟಯಜ್ಞ ಯಜಾವೇ । ತೇ ಹವಿ ಮಂತ್ರಾದಿ ಆಘವೇ । ತೋ ದೇಖತಸೇ ಅವಿನಾಶ ಭಾವೇ । ಆತ್ಮಬುದ್ಧಿ ॥ ೨೦ ॥ ಮ್ಹಣವೂನಿ ಬ್ರಹ್ಮತೇಚಿ ಕರ್ಮ । ಐಸೇ ಬೋಧಾ ಆಲೇ ಜಯಾಸಮ । ತಯಾ ಕರ್ತವ್ಯತೇ ನೈಷ್ಕರ್ಮ್ಯ । ಧನುರ್ಧರಾ ॥ ೨೧ ॥ ಆತಾ ಅವಿವೇಕ ಕುಮಾರತ್ವಾ ಮುಕಲೇ । ಜಯಾ ವಿರಕ್ತೀಚೆ ಪಾಣಿಗ್ರಹಣ ಜಾಹಾಲೇ । ಮಗ ಉಪಾಸನಜಿಹೀ ಆಣಿಲೇ । ಯೋಗಾಗ್ನೀಚೇ ॥ ೨೨ ॥

**ಅರ್ಥ—** ' ಇದು ಒಂದು ಹವನವು. ಅದರ ಕರ್ತನು ನಾನು. ಮತ್ತು ಯಜ್ಞದ ಭೋಕ್ತಾ ಇಂಥವನೇ, ' ಎಂಬ ಕಲ್ಪನೆಯ ಭಿನ್ನಭಾವನೆಯು ಅವನಲ್ಲಿರುವದಿಲ್ಲ. ಆದುದರಿಂದ, ॥ ೧೯ ॥ ಯಾವ ಯಾವ ಇಷ್ಟಯಜ್ಞವನ್ನು

ಮಾಡುತ್ತಾನೋ ಅವುಗಳನ್ನು ಅವನು ಅವಿನಾಶಭಾವನೆಯ ದೃಷ್ಟಿಯಿಂದ ಮಾಡಿ ಅದರಲ್ಲಿಯ ಹೋಮ, ದ್ರವ್ಯ, ಮಂತ್ರ ಈ ಎಲ್ಲವೂ ಆತ್ಮರೂಪಪರಮೇಶ್ವರನೇ ಎಂದು ತಿಳಿಯುತ್ತಾನೆ. ॥ ೧೩೦ ॥ ಅರ್ಜುನಾ, ಬ್ರಹ್ಮವೇ ಕರ್ಮವೆಂಬ ಸಮಬುದ್ಧಿಯು ಯಾವನ ಅಂತಃಕರಣದಲ್ಲಿ ಉಂಟಾಗಿರುವದೋ ಅವನು ಕರ್ಮಮಾಡಿದಾಗ್ಯಾದರೂ ನಿಷ್ಕಾಮ ಕರ್ಮಿಯಾಗಿದ್ದಾನೆ. ॥ ೨೧ ॥ ಅವನ ಅವಿಚಾರರೂಪ ಬಾಲ್ಯಾವಸ್ಥೆಯು ಹೋದ ಮೇಲೆ ವಿರಕ್ತಿಯ ಸಂಗಡ ಲಗ್ನವಾಗುತ್ತದೆ. (ಕಾರಣವೇನಂದರೆ, ಲಗ್ನವಾಗದಹೊರ್ತು ಅಗ್ನಿಸೇವೆ ಮಾಡಲು ಬರುವದೇ ಇಲ್ಲ.) ಆ ಮೇಲೆ ಜೀವಬ್ರಹ್ಮೈಕ್ಯರೂಪವಾದ ಯೋಗಾಗ್ನಿಯ ಉಪಾಸನೆಯನ್ನು ಅವನು ಪ್ರಾರಂಭಮಾಡುವನು. ॥ ೨೨ ॥

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥ ೨೫ ॥**

**[ ದೈವಮಿತಿ ]** ಜೇ ಯಜನಶೀಲ ಅಹರ್ನಿಶೀ । ಜಿಹೀ ಅವಿದ್ಯಾ ಹವಿಲೀ ಮನೇಸೀ । ಗುರುವಾಕ್ಯ ಹುತಾಶೀ । ಹವನ ಕೇಲೇ ॥ ೨೩ ॥ ತಿಹೀ ಯೋಗಾಗ್ನಿ ಕೀ ಯಜಿಜೇ । ತೋ ದೈವಯಜ್ಞ ಮ್ಹಣಿಜೇ । ಜೇಣೇ ಆತ್ಮಸುಖ ಕಾಮಿಜೇ । ಪಾಂಡುಕುಮರಾ ॥ ೨೪ ॥ ದೈವಾಸ್ತವ ದೇಹಾಚೇ ಪಾಳಣ । ಜೋ ಚಿಂತೀನಾ ದೇಹಭರಣ । ತೋ ಮಹಾ ಯೋಗೀ ಜಾಣ । ದೈವಯೋಗೇ ॥ ೨೫ ॥ ಆತಾ ಅವಧಾರೀ ಸಾಂಗೇನ ಆಣಿಕ । ಜೇ ಬ್ರಹ್ಮಾಗ್ನಿ ಸಾಗ್ನಿಕ । ತಯಾತೇ ಯಜ್ಞೇಚಿ ಯಜ್ಞದೇಖ । ಉಪಾಸಿಜೇ ॥ ೨೬ ॥

**ಅರ್ಥ**— ಇವನು ಅಹೋರಾತ್ರಿಯಲ್ಲಿಯೂ ಯಜ್ಞಮಾಡುವವನಾಗಿರುತ್ತಾನೆ. ಅವನು ಗುರುವಾಕ್ಯರೂಪ ಅಗ್ನಿಯಲ್ಲಿ ಮನಸಹಿತವಾಗಿ ಅಜ್ಞಾನದ ಹವನ ಮಾಡಿರುವನು. ॥ ೨೩ ॥ ಅರ್ಜುನಾ ! ಯಾವನಿಗೆ ಆತ್ಮಸುಖದ ಇಚ್ಛೆಯಿರುವದೋ ಅವನೇ ಈ ಯೋಗಾಗ್ನಿಯ ಯಜನವನ್ನು ಮಾಡಬೇಕು. ಮತ್ತು ಇದಕ್ಕೇ ದೈವಯಜ್ಞವೆಂದು ಕರೆಯುತ್ತಾರೆ. ॥ ೨೪ ॥ ದೇಹವು ದೈವಾಧೀನವಾದದ್ದೆಂದು ತಿಳಿದು ಅದರ ಪೋಷಣೆಯ ವಿಷಯದಲ್ಲಿ ಅವನು ಚಿಂತಿಸುವದಿಲ್ಲ. ಇವನೇ ದೈವಯೋಗದಿಂದ ಮಹಾಯೋಗಿಯೆಂದು ತಿಳಿ. ॥ ೨೫ ॥ ಈಗ ಯಾರು ಬ್ರಹ್ಮಾಗ್ನಿಯ ಅಗ್ನಿಹೋತ್ರಿಗಳು ಸ್ವಕರ್ಮದಿಂದ ಈಶ್ವರಾರಾಧನೆಯನ್ನು ಮಾಡುತ್ತಾರೋ, ಅವರ ವಿಷಯಕವಾಗಿ ವರ್ಣನೆಯನ್ನು ಮಾಡುತ್ತೇನೆ ಕೇಳು. ॥ ೨೬ ॥

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥ ೨೬ ॥**

**[ ಶ್ರೋತ್ರಾದೀ ನೀತಿ ]** ಏಕ ಸಂಯಮಾಗ್ನಿ ಹೋತ್ರೀ । ತೇ ಯುಕ್ತಿತ್ರಯಾಚ್ಯಾ ಮಂತ್ರೀ । ಯಜನ ಕರಿತೀ ಪವಿತ್ರೀ । ಇಂದ್ರಿಯದ್ರವ್ಯೀ ॥ ೨೭ ॥ ಏಕಾ ವೈರಾಗ್ಯರವಿ ವಿಮಳೇ । ತವ ಸಂಯತೀ ವಿಹಾರ ಕೇಲೇ । ತೇಥ ಅಪಾವೃತ ಜಾಹಾಲೇ । ಇಂದ್ರಿಯಾನಳ ॥ ೨೮ ॥ ತಿಹೀ ವಿರಕ್ತೀಚೀ ಜ್ವಾಳಾ ಘೇತಲೀ । ತವ ವಿಕರಾಚೀ ಇಂಧನೇ ಪಳಿಪಲೀ । ತೇಥ ಆಶಾಧೂಮೇ ಸಾಂಡಿಲೀ । ಪಾಂಚಹೀ ಕುಂಡೇ ॥ ೨೯ ॥ ಮಗ ವಾಕ್ಯವಿಧೀಚಿಯಾ ನಿರವಡೀ । ವಿಷಯ ಆಹುತೀ ಉದಂಡೀ । ಹವನ ಕೇಲೇ ಕುಂಡೀ । ಇಂದ್ರಿಯಾಗ್ನೀಚ್ಯಾ ॥ ೩೦ ॥

**ಅರ್ಥ**— ಯಾರು ಆತ್ಮಸ್ವಯಂರೂಪವಾದ ಅಗ್ನಿಯಲ್ಲಿ ಹೋಮ ಮಾಡುವರೋ ಅವರು 'ಕಾಯಾ, ವಾಚಾ, ಮಾನಸಿಕ,' ಈ ಮೂರು ಯುಕ್ತಿ ಮಂತ್ರಗಳಿಂದ ಪವಿತ್ರವಾದ ಇಂದ್ರಿಯ ರೂಪದ್ರವ್ಯದಿಂದ ಹವನಮಾಡುತ್ತಾರೆ. ॥ ೨೭ ॥ ಕೆಲವರು ವೈರಾಗ್ಯರೂಪೀ ಸೂರ್ಯೋದಯವಾದ ಮೇಲೆ ಸಂಯಮಾಗ್ನಿಯ ಉದ್ಧರಣ ಮಾಡಿ ಅದು ಪ್ರಜ್ವಲಿತವಾದಮೇಲೆ, ಇಂದ್ರಿಯರೂಪ ಅಗ್ನಿಯನ್ನು ಜ್ಞಾನದಿಂದ ಪ್ರಜ್ವಲಿತಮಾಡುತ್ತಾರೆ. ॥ ೨೮ ॥ ಅದರಿಂದ

ವೈರಾಗ್ಯರೂಪೀ ಜ್ವಾಲೆಯು ಹೊತ್ತಿದ ಕೂಡಲೇ ತೀವ್ರವೇ ವಿಷಯವಿಕಾರರೂಪ ಕಟ್ಟಿಗೆಗಳು ಸುಡುತ್ತವೆ. ಆವಾಗ ಜ್ಞಾನೇಂದ್ರಿಯ ಮೊದಲಾದ ಪಂಚವಿಷಯುಗಳ ಕುಂಡವಲ್ಲಿಯ ಆಶಾರೂಪವಾದ ಹೊಗೆಯನ್ನು ಅವರು ತ್ಯಾಗ ಮಾಡಿದರು. ॥ ೨೯ ॥ ಆ ಮೇಲೆ ವೇದಾಂತದಲ್ಲಿ ಹೇಳಿದ ವಿಧಿಯ ಯೋಗದಿಂದ ಇಂದ್ರಿಯರೂಪ ಅಗ್ನಿಯು ಉರಿಯುವ ಕುಂಡದಲ್ಲಿ ವಿಷಯುಗಳ ದೊಡ್ಡ ಆಹುತಿಯನ್ನು ಕೊಟ್ಟರು. ॥ ೩೦ ॥

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

**[ ಸರ್ವಾಣೀತಿ ]** ಏಕೇಯಯಾಪರೀ ಪಾರ್ಥಾ । ದೋಷ ಕ್ಷಾಳಿಲೇ ಸರ್ವಥಾ । ಏಕೀ ಹೃದಯಾರಣೀ ಮಂಥಾ । ವಿವೇಕ ಕೇಲಾ ॥ ೩೧ ॥ ತೋ ಉಪಶಮೇ ನಿಹಟಲಾ । ಧೈರ್ಯಭಾರೇ ದಾಟಲಾ । ಗುರುವಾಕ್ಯೇ ಕಾಢಿಲಾ । ಬಳಕಟಪಣೇ ॥ ೩೨ ॥ ಐಸೇ ಸಮರಸೇ ಮಂಥನ ಕೇಲೇ । ತೇಥ ಝಡಕರೀ ಕಾಜ ಆಲೇ । ಜೇ ಉಜ್ಜೀವನ ಜಾಹಲೇ । ಜ್ಞಾನಾಗ್ನೀಚೇ ॥ ೩೩ ॥ ಪಹಿಲಾ ಋದ್ಧಿ ಸಿದ್ಧೀಚಾ ಸಂಭ್ರಮು । ತೋ ನಿವರ್ತೋನಿ ಗೇಲಾ ಧೂಮು । ಮಗ ಪ್ರಗಟಲಾ ಸೂಕ್ಷ್ಮ । ವಿಸ್ಫುಲಿಂಗ ॥ ೩೪ ॥ ತಯಾ ಮನಾಚೇ ಮೋಕಳೇ । ತೇಚಿ ಸೇಟವಣ ಘಾತಲೇ । ಜೇ ಯಮನಿಯಮೀ ಹಳವಾರಲೇ । ಆಯಿತೇ ಹೋತೇ ॥ ೩೫ ॥ ತೇಣೇ ಸಾದುಕಪಣೇ ಜ್ವಾಳಾ ಸಮೃದ್ಧಾ । ಮಗ ವಾಸನಾಂತರಾಂಚಿಯಾ ಸಮಿಧಾ । ಸ್ನೇಹೇಸೀ ನಾನಾವಿಧಾ । ಜಾಳಿಲಿಯಾ ॥ ೩೬ ॥ ತೇಥ ಸೋಹಂಮಂತ್ರೇ ದೀಕ್ಷಿತೀ । ಇಂದ್ರಿಯ ಕರ್ಮಾಚಿಯಾ ಆಹುತೀ । ತಿಯೇ ಜ್ಞಾನಾನಳೀ ಪ್ರದೀಪ್ತೀ । ದಿಧಲಿಯಾ ॥ ೩೭ ॥ ಪಾಠೀ ಪ್ರಾಣ ಕರ್ಮಾಚಿಯೇ ಸ್ರುವೇಸಿಶೀ । ಪೂರ್ಣಾಹುತೀ ಪಡಲಿಯಾ ಹುತಾಶೀ । ತೇಥ ಅವಭೃತ ಸಮರಸೀ । ಸಹಜೇ ಜಾಹಲೇ ॥ ೩೮ ॥ ಮಗ ಆತ್ಮಬೋಧೀಚೆ ಸುಖ । ಜೇ ಸಂಯಮಾಗ್ನೀಚೇಹುತ ಶೇಷ । ತೋಚಿ ಪುರೋಡಾಶ ದೇಖ । ಘೇತಲಾತಿಹೀ ॥ ೩೯ ॥ ಏಕ ಐಶಿಯಾ ಇಂಹೀ ಯಜನೀ । ಮುಕ್ತ ತೇ ಜಾಹಲೇ ತ್ರಿಭುವನೀ । ಯಾ ಯಜ್ಞಕ್ರಿಯಾ ತರಿ ಆನಾನೀ । ಪರೀ ಪ್ರಾಪ್ಯ ತೇ ಏಕ ॥ ೧೪೦ ॥

**ಅರ್ಥ—** ಪಾರ್ಥಾ! ಈ ಪ್ರಕಾರ ಯಾರು ತಮ್ಮ ಸರ್ವ ದೋಷಗಳನ್ನು ಕ್ಷಾಲನ ಮಾಡಿದರೊ, ಅವರು ಹೃದಯರೂಪೀ ಅರಣಿಯಮೇಲೆ ವಿಚಾರರೂಪ ಮಂಥನವನ್ನು ಮಾಡಿ, ॥ ೩೧ ॥ ಅದನ್ನು ಧೈರ್ಯರೂಪ ಭಾರದಿಂದ ಒತ್ತಿ ಶಾಂತಿರೂಪ ಕಡುಗೋಲಿನಿಂದ ಕಡೆದರು. ॥ ೩೨ ॥ ಈ ಪ್ರಕಾರ ಸರ್ವವೃತ್ತಿಯು ಐಕ್ಯಮಾಡಿ ಮಂಥನ ಮಾಡುವದರಿಂದ ಅಲ್ಲಿ ಆಗಿಂದಾಗ್ಯೆ ಕಾರ್ಯವು ಸಿದ್ಧಿಗೆ ಹೋಯಿತು. ( ಅದಾವುದೆಂದರೆ ) ಜ್ಞಾನಾಗ್ನಿಯು ಪ್ರಜ್ವಲಿತವಾಯಿತು. ॥ ೩೩ ॥ ಆವಾಗ ಪ್ರಥಮದಲ್ಲಿ ಋದ್ಧಿಸಿದ್ಧಿಯ ಮೋಹದಿಂದ ಉದ್ಭವಿಸಿದ ಹೊಗೆಯು ಇಲ್ಲದಂತಾಗಿ ಅಲ್ಲಿ ಸೂಕ್ಷ್ಮವಾದ ಬೆಂಕಿಯ ಕಿಡಿಗಳು ಉದ್ಭವಿಸಿದವು. ॥ ೩೪ ॥ ಯಮದಮಗಳ ಶುಷ್ಕ ( ಒಣಗಿದ ) ನಿರ್ದೋಷ ಮನಸನ್ನು ಅಗ್ನಿಗೆ ಆಹುತಿ ಹಾಕಿದರು. ॥ ೩೫ ॥ ಅವುಗಳ ಸಹಾಯದಿಂದ ದೊಡ್ಡ ಜ್ವಾಲೆಯು ಉತ್ಪನ್ನವಾಯಿತು. ಆ ಮೇಲೆ ವಾಸನಾರೂಪ ಸಮಿಧೆಗಳಿಗೆ ಅನೇಕ ಪ್ರಕಾರದ ಮೋಹವೆಂಬ ತುಪ್ಪವನ್ನು ಹಾಕಿ ಅದನ್ನು ಸುಟ್ಟುಬಿಟ್ಟರು. ॥ ೩೬ ॥ ಆ ಮೇಲೆ ಜೀವರೂಪ ದೀಕ್ಷಿತನು ಜ್ಞಾನರೂಪೀ ಪ್ರದೀಪ್ತಾಗ್ನಿಯಲ್ಲಿ ಇಂದ್ರಿಯ ಕರ್ಮಗಳ ಆಹುತಿಯನ್ನು ಕೊಟ್ಟನು. ॥ ೩೭ ॥ ಕೊನೆಗೆ ಪ್ರಾಣಕರ್ಮವೆಂಬ ' ಸ್ರುವಾ ' ಈ ಹೆಸರಿನ ಯಜ್ಞಪಾತ್ರೆಯನ್ನು ಸಹ ಅಗ್ನಿಯಲ್ಲಿ ಪೂರ್ಣಾಹುತಿ ಕೊಟ್ಟಮೇಲೆ ಐಕ್ಯಬೋಧದ ( ಯಜ್ಞದ ಕಡೆಯ ) ಅನುಭವ ಅವಭೃತ ಸ್ನಾನವು ಸಹಜವೇ ಲಭಿಸಿತು. ॥ ೩೮ ॥ ಮತ್ತು ಸಂಯಮಾಗ್ನಿಯಲ್ಲಿ ಇಂದ್ರಿಯ ಮುಂತಾದ ಹೋಮ ದ್ರವ್ಯದ ಹವನ ಮಾಡಿ, ಉಳಿದ ಆತ್ಮ ಸುಖವನ್ನೇ ' ಪುರೋಡಾಶ ' ( ಪಾಯಸ ) ವೆಂದು ತೆಗೆದುಕೊಂಡರು. ॥ ೩೯ ॥

ಕೆಲವರು ಈ ರೀತಿಯಿಂದ ಯಜ್ಞಮಾಡಿ ಮೂರು ಲೋಕಗಳಲ್ಲಿ ಮುಕ್ತರಾಗಿ ಹೋದರು. ಆದುದರಿಂದ ಈ ಯಜ್ಞ ಕ್ರಿಯೆಯು ಒಂದು ವೇಳೆ ನಾನಾ ಪ್ರಕಾರ ವಿದ್ದಾಗ್ಯಾದರೂ ಅದರ ಕಡೆಯ ಫಲಪ್ರಾಪ್ತಿಯು ಒಂದೇ ಆಗಿರುವದು ॥೧೪೦॥

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಽಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

**[ ದ್ರವ್ಯ ಯಜ್ಞಾ ಇತಿ ]** ಏಕ ದ್ರವ್ಯಯಜ್ಞ ಮ್ಹಣಿಪತೀ । ಏಕ ತಪ ಸಾಮುಗ್ರಿಯಾ ನಿಪಜವಿತೀ । ಏಕ ಯೋಗಯಾಗ ಹೀ ಆಹಾತೀ । ಜೇ ಸಾಂಗಿತಲೇ ॥ ೪೧ ॥ ಏಕೀ ಶಬ್ದೀ ಶಬ್ದಯಜಿಜೇ ! ತೋ ವಾಗ್ಯಜ್ಞ ಮ್ಹಣಿಜೇ । ಜ್ಞಾನೇ ಜ್ಞೇಯ ಗಮಿಜೇ । ತೋ ಜ್ಞಾನಯಜ್ಞ ॥ ೪೨ ॥ ಹೇ ಅರ್ಜುನಾ ಸಕಳ ಕುವಾಡೇ । ಜೇ ಅನುಷ್ಠಿತಾ ಅತಿ ಸಾಂಕಡೇ । ಪರೀ ಜಿತೇಂದ್ರಿಯಾಸೀಂಚಿ ಘಡೇ । ಯೋಗ್ಯತಾವಶೇ ॥ ೪೩ ॥ ತೇ ಪ್ರವೀಣ ತೇಥ ಭಲೇ । ಆಣಿ ಯೋಗ ಸಮೃದ್ಧಿ ಆಥಿಲೇ । ಮ್ಹಣೋನಿ ಆಪಣಪಾ ತಿಹೀ ಕೇಲೇ । ಆತ್ಮಹವನ ॥ ೪೪ ॥

**ಅರ್ಥ**— ಈ ಯಾವ ಯೋಗವನ್ನು ಹೇಳಿದೆನೋ ಅದರಲ್ಲಿ ಒಂದಕ್ಕೆ ದ್ರವ್ಯಯಜ್ಞವೆಂದು ಕರೆಯುತ್ತಾರೆ. ಇನ್ನೊಂದಕ್ಕೆ ( ತಪಸ್ಸಾಮರ್ಥ್ಯದಿಂದ ಮಾಡಿದ್ದರಿಂದ ) ತಪೋಯಜ್ಞವೆಂದು ಕರೆಯುತ್ತಾರೆ. ಒಂದಕ್ಕೆ ( ಅಷ್ಟಾಂಗ ಸಾಧನದಿಂದ ಸಾಧಿಸಿದ್ದರಿಂದ ) ಯೋಗಯಜ್ಞವೆಂದು ಕರೆಯುತ್ತಾರೆ. ॥ ೪೧ ॥ ಯಾವದರಲ್ಲಿ ಶಬ್ದದಿಂದ ಶಬ್ದದ ಹೋಮ ಮಾಡುತ್ತಾರೋ ಅವಕ್ಕೆ ವಾಗ್‌ಯಜ್ಞವೆಂದೆನ್ನುತ್ತಾರೆ. ಮತ್ತು ಯಾವ ಯಜ್ಞದಲ್ಲಿ ಜ್ಞಾನದಿಂದ ಬ್ರಹ್ಮ ಪ್ರಾಪ್ತಿಯಾಗುತ್ತದೋ ಅದಕ್ಕೆ ಜ್ಞಾನಯಜ್ಞವೆಂದೆನ್ನುತ್ತಾರೆ. ॥ ೪೨ ॥ ಅರ್ಜುನಾ ! ಈ ಸರ್ವಯಜ್ಞಗಳು ಬಹಳೇ ಕಠಿಣ ಕಷ್ಟಪ್ರದವಾಗಿದ್ದು ಇವುಗಳ ಆಚರಣೆಯನ್ನು ಮಾಡುವದು ದುರ್ಘಟವಾಗಿರುವದು. ಆದರೆ ಯಾವನು ಇಂದ್ರಿಯಗಳನ್ನು ಜಯಿಸಿರುವನೋ ಅವನಿಗೆ ಮಾತ್ರ ಅವುಗಳನ್ನು ( ಯಜ್ಞಗಳನ್ನು ) ಅಧಿಕಾರ ಪರತ್ವದಿಂದ ಮಾಡಲಿಕ್ಕೆ ಬರುವದು. ॥ ೪೩ ॥ ಯೋಗ ಸಮೃದ್ಧಿಯಿಂದ ಸುಸಂಪನ್ನನಾದಂಥ ಪುರುಷನೇ ಈ ಯಜ್ಞವನ್ನು ಮಾಡಲಿಕ್ಕೆ ಸಮರ್ಥನಿರುವನು. ಕಾರಣವೇನಂದರೆ- ಅವನು ತನ್ನ ಜೀವವನ್ನು ಆತ್ಮನಲ್ಲಿ ಹವನ ಮಾಡಿರುವನು. ॥೪೪॥

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥ ೨೯ ॥**

**[ ಅಪಾನೇ ಜುಹ್ವತೀತಿ ]** ಮಗ ಅಪಾನಾಗ್ನೀಚೇ ಮುಖೀ । ಪ್ರಾಣದ್ರವ್ಯ ದೇಖೀ । ಹವನ ಕೇಲೇ ಏಕೀ । ಅಭ್ಯಾಸಯೋಗೇ ॥ ೪೫ ॥ ಏಕ ಅಪಾನ ಪ್ರಾಣೀ ಅರ್ಪಿತಿ । ಏಕ ದೋಹೀತೇಹೀ ನಿರುಂಧಿತೀ । ತೇ ಪ್ರಾಣಾಯಾಮೀ ಮ್ಹಣಪತೀ । ಪಾಂಡುಕುಮರಾ ॥ ೪೬ ॥

**ಅರ್ಥ**— ಕೆಲವರು ಅಭ್ಯಾಸಯೋಗದಿಂದ ಅಪಾನವಾಯು ರೂಪವಾದ ಅಗ್ನಿಯಲ್ಲಿ ಪ್ರಾಣವಾಯುರೂಪ ದ್ರವ್ಯದ ಹವನ ಮಾಡುತ್ತಾರೆ. ॥ ೪೫ ॥ ಎಲೋ ಪಾಂಡುನಂದನನೇ ! ಕೆಲವರು ಅಪಾನವಾಯುವನ್ನು ಪ್ರಾಣ ವಾಯುವಿನಲ್ಲಿ ಕೂಡಿಸಿರುತ್ತಾರೆ. ಮತ್ತು ಕೆಲವರು ಎರಡೂ ವಾಯುಗಳನ್ನು ನಿರೋಧಿಸುತ್ತಾರೆ. ಅವರಿಗೆ 'ಪ್ರಾಣಾಯಾಮ' ಯಜ್ಞಮಾಡುವವರೆಂದು ಕರೆಯುತ್ತಾರೆ. ॥ ೪೬ ॥

**ಅಪರೇ ನಿಯತಾಹಾರಾಃ ಪ್ರಾಣಾನ್ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ॥ ೩೦ ॥**

**[ ಅಪರ ಇತಿ ]** ಏಕ ವಜ್ರಯೋಗಕ್ರಮೇ । ಸರ್ವಾಹಾರ ಸಂಯಮೇ । ಪ್ರಾಣೀ ಪ್ರಾಣ ಸಂಭ್ರಮೇ । ಹವನ ಕರಿತೀ ॥ ೪೭ ॥ ಐಸೇ ಮೋಕ್ಷಕಾಮ ಸಕಳ । ಸಮಸ್ತ ಹೇ ಯಜನಶೀಳ ।

ಜಿಹೀ ಯಜ್ಞದ್ವಾರಾ ಮನೋಮಳ । ಕ್ಷಾಳಣಕೇಲೇ ॥ ೪೮ ॥ ಜಯಾ ಅವಿದ್ಯಾಜಾತ ಜಾಳಿತಾ । ಜೇ ಉರಲೇ ನಿಜ ಸ್ವಭಾವತಾ । ಜೇಥ ಅಗ್ನಿ ಆಣಿ ಹೋತಾ । ಉರೇಚಿನಾ ॥ ೪೯ ॥ ಜೇಥ ಯಜಿತ ಯಾಚಾ ಕಾಮಪುರೇ । ಯಜ್ಞೀಚೆ ವಿಧಾನ ಸರೇ । ಮಾಗುತೇ ಜೇ ಥೋನಿ ವೋಸರೇ । ಕ್ರಿಯಾ ಜಾತ ॥ ೧೫೦ ॥ ವಿಚಾರ ಜೇಥ ನ ರಿಗೇ । ಹೇತು ಜಯಾತೇ ನೇಘೇ । ಜೇ ದ್ವೈತದೋಷ ಸಂಗೇ । ಲಿಂಪೇಚಿನಾ ॥ ೫೧ ॥

**ಅರ್ಥ**— ಕೆಲವರು ಹಟಯೋಗದ ಕ್ರಮದಿಂದ ಸರ್ವ ಆಹಾರವನ್ನು ಜಯಿಸಿ ಪ್ರಾಣವಾಯುರೂಪೀ ಅಗ್ನಿಯಲ್ಲಿ ತ್ವರೆಯಿಂದ ಪ್ರಾಣದ ಹವನ ಮಾಡುತ್ತಾರೆ. ॥ ೪೭ ॥ ಇಂಥ ಪ್ರಕಾರದ ಮೋಕ್ಷ ಪ್ರಾಪ್ತಿಯನ್ನೇ ಅಪೇಕ್ಷೆ ಮಾಡುವವರೆಲ್ಲರೂ ಯಜ್ಞಕರ್ತರಿರುತ್ತಾರೆ. ಅವರು ಆ ಯಜ್ಞದ್ವಾರದಿಂದ ತಮ್ಮ ಕಾಮಕ್ರೋಧ ಮುಂತಾದ ವಿಕಾರಗಳನ್ನು ಇಲ್ಲದಂತೆ ಮಾಡುತ್ತಾರೆ. ॥ ೪೮ ॥ ಈ ಪ್ರಕಾರ ಸರ್ವ ಅಜ್ಞಾನಗಳನ್ನು ಸುಟ್ಟುಬಿಟ್ಟದ್ದರಿಂದ ಅವರಿಗೆ ಸ್ವಭಾವಿಕವಾಗಿ ಶುದ್ಧಸ್ವರೂಪವೇ ಉಳಿಯುತ್ತದೆ. ಮತ್ತು ಇದು ಅಗ್ನಿ ನಾನು ಯಜ್ಞಮಾಡುವವನು ಎಂಬ ದ್ವೈತಭಾವನೆಯು ಅವನಲ್ಲಿ ಉಳಿಯುವದಿಲ್ಲ. ॥ ೪೯ ॥ ಆ ಸ್ಥಳದಲ್ಲಿ ಯಜ್ಞಮಾಡುವವರ ಇಚ್ಛೆಯು ಪೂರ್ಣವಾಗಿ ಯಜ್ಞಕ್ರಿಯೆಗಳು ಮುಗಿಯುತ್ತವೆ. ಅರ್ಥಾತ್ ಕಡೆಗೆ ಸರ್ವ ಕರ್ಮಗಳು ಇಲ್ಲದಂತಾಗುತ್ತವೆ. ॥ ೫೦ ॥ ಆ ಸ್ಥಳದಲ್ಲಿ ವಿಚಾರದ ಪ್ರವೇಶವಾಗುವದಿಲ್ಲ; ಕಾಮನೆಯ ಸ್ಪರ್ಶವಾಗುವದಿಲ್ಲ; ಮತ್ತು ದ್ವೈತ ದೋಷದ ಸಂಬಂಧವೇ ಉಳಿಯುವದಿಲ್ಲ; ॥ ೫೧ ॥

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮಸನಾತನಂ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯಕುತೋಽನ್ಯಃ ಕುರುಸತ್ತಮ ॥ ೩೧ ॥**

**[ ಯಜ್ಞ ಶಿಷ್ಟಾಮೃತ ಭುಜ ಇತಿ ]** ಐಸೇ ಅನಾದಿಸಿದ್ಧ ಚೋಖಟ । ಜೇ ಜ್ಞಾನ ಯಜ್ಞಾವಶಿಷ್ಟ । ತೇ ಸೇವಿತೀ ಬ್ರಹ್ಮನಿಷ್ಠ । ಬ್ರಹ್ಮಾಹಂಮಂತ್ರೇ ॥ ೫೨ ॥ ಐಸೇ ಶೇಷಾಮೃತೇ ಧಾಲೇ । ಕೀ ಅಮರ್ತ್ಯ ಭಾವಾ ಆಲೇ । ಮ್ಹಣೋನಿ ಬ್ರಹ್ಮತೇ ಜಾಹಾಲೇ । ಅನಾಯಾಸೇ ॥ ೫೩ ॥ ಯೇರಾ ವಿರಕ್ತಿ ಮಾಳ ನ ಘಾಲಿಚೀ । ಜಯಾ ಸಂಯಮಾಗ್ನೀಚೀ ಸೇವಾ ನ ಘಡೇಚೀ । ಜೇ ಯೋಗಾಯಾಗ ನ ಕರಿತೀಚೀ । ಜನ್ಮಲೇ ಸಾತೇ ॥ ೫೪ ॥ ಜಯಾ ಐಹಿಕ ಧಡ ನಾಹೀ । ತಯಾಂಚೇ ಪರತ್ರ ಪುಸಸೀ ಕಾಈ । ಮ್ಹಣೋನಿ ಅಸೋ ಹೇ ಗೋಷ್ಟೀ ಪಾಹೀ । ಪಾಂಡುಕುಮರಾ ॥ ೫೫ ॥

**ಅರ್ಥ**— ಹೀಗೆ ಅನಾದಿ ಸಿದ್ಧ ಶುದ್ಧ ಯಜ್ಞಾವಶಿಷ್ಟ ಬ್ರಹ್ಮನನ್ನು ಬ್ರಹ್ಮನಿಷ್ಠ ಜನರು ಅಹಂಬ್ರಹ್ಮಾಸ್ಮಿ ಮಂತ್ರಸೇವನ ಮಾಡಿ ಬ್ರಹ್ಮರೂಪವಾಗುತ್ತಾರೆ. ॥ ೫೨ ॥ ಈ ಪ್ರಕಾರ ಯಜ್ಞದಲ್ಲಿ ಉಳಿದ ಜ್ಞಾನರೂಪ ಅಮೃತವನ್ನು ಕುಡಿದು ಅವರು ತೃಪ್ತರಾಗಿ ಅಮರರಾಗುತ್ತಾರೆ. ಅವರು ಸಹಜವೇ ಬ್ರಹ್ಮತ್ವವನ್ನು ಹೊಂದುತ್ತಾರೆ. ॥ ೫೩ ॥ ಯಾರ ಕೈಯಿಂದ ಈ ಯಜ್ಞದ ಆಚರಣೆಯು ಸಂಭವಿಸುವದಿಲ್ಲವೋ, ಅವರಲ್ಲಿ ವೈರಾಗ್ಯವು ಉಂಟಾಗುವದಿಲ್ಲ. ಯಾವನಿಗೆ ಆತ್ಮಸಂಯಮನ ಮಾಡಲಿಕ್ಕೆ ಬರುವದಿಲ್ಲವೋ, ಮತ್ತು ಯಾರು ಜನ್ಮಕ್ಕೆ ಬಂದಿರಲಿಕ್ಕಾಗಿ ಯೋಗ ಯಾಗಗಳನ್ನು ಮಾಡುವದಿಲ್ಲವೋ, ॥ ೫೪ ॥ ಅರ್ಜುನಾ! ಯಾರದು ಇಹಲೋಕದಲ್ಲಿ ಗತಿಯಿಲ್ಲವೋ, ಅವರ ಪರಲೋಕದಲ್ಲಿಯ ಕ್ಷೇಮುಸಮಾಚಾರವನ್ನು ಏಕೆ ಕೇಳುವೆ? ಅವರ ವಿಷಯವಾಗಿ ಮಾತನಾಡಲೇಬೇಡ. ॥೫೫॥

**ಏವಂ ಬಹುವಿಧಾ ಯಜ್ಞಾವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥ ೩೨ ॥**

**[ ಏವಮಿತಿ ]** ಐಸೇ ಬಹುತೀ ಪರೀ ಅನೇಗ । ಜೇ ಸಾಂಗಿತಲೇ ತುಜ ಕಾಯಾಗ । ತೇ ವಿಸ್ತಾರೂನಿ ವೇದೇಚಾಂಗ । ಮ್ಹಣಿತಲೇ ಆಹಾತೀ ॥೫೬॥ ಪರೀ ತೇಣೇ ವಿಸ್ತಾರೇ ಕಾಯ ಕರಾವೇ । ಹೇಚಿ ಕರ್ಮ ಸಿದ್ಧ ಜಾಣಾವೇ । ಯೇತುಲೇನಿ ಕರ್ಮಬಂಧ ಸ್ವಭಾವೇ । ಪಾವೇಲನಾ ॥೫೭॥

**ಅರ್ಥ—** ಹೀಗೆ ನಾನಾಪ್ರಕಾರದ ಹನ್ನೆರಡು ಯಜ್ಞಗಳನ್ನು ನಿನಗೆ ಹೇಳಿದೆನು. ಅವುಗಳ ವಿಷಯವಾಗಿ ವೇದಗಳಲ್ಲಿ ಬಹಳೇ ವಿಸ್ತೃತವಾಗಿ ಉತ್ತಮ ವರ್ಣನೆಯನ್ನು ಮಾಡಿರುತ್ತದೆ. ॥ ೫೬ ॥ ಆದರೆ ವೇದದೊಳಗಿನ ವಿಸ್ತೃತವಾದ ವರ್ಣನೆಯನ್ನು ಕೇಳಿ ಮಾಡುವದೇನು? ಈ ಸರ್ವಯಜ್ಞಗಳು ಕರ್ಮದಿಂದ ಉತ್ಪನ್ನವಾಗಿರುವ ದೆಂಬದೇ ಅದರಲ್ಲಿಯ ಸಾರವು. ಇಷ್ಟು ತಿಳಿಯುವದರಿಂದ ಕರ್ಮದ ಬಾಧೆಯು ಉಂಟಾಗುವದಿಲ್ಲ. ॥ ೫೭ ॥

**ಶ್ರೇಯಾನ್ದ್ರವ್ಯಮಯಾದ್ಯಜ್ಞಾಜ್ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

**[ಶ್ರೇಯಾನಿತಿ]** ಅರ್ಜುನಾ, ವೇದ ಜಯಾಂಚೆ ಮೂಳ । ಜೇ ಕ್ರಿಯಾವಿಶೇಷ ಸ್ಥೂಳ । ಜಯಾ ನವ್ಹಾಳಿಯೇಚೇ ಫಳ । ಸ್ವರ್ಗಸುಖ ॥ ೫೮ ॥ ತೇ ದ್ರವ್ಯಾದಿಯಾಗ ಕೀರಹೋತೀ । ಪರೀ ಜ್ಞಾನ ಯಜ್ಞಾಚೀ ಸರೀ ನ ಪವತಿ । ಜೈಸೀ ತಾರಾ ತೇಜ ಸಂಪತ್ತೀ । ದಿನಕರಾಪಾಶೀ ॥ ೫೯ ॥ ದೇಖೇ ಪರಮಾತ್ಮ ಸುಖನಿಧಾನ । ಸಾಧಾವಯಾ ಯೋಗಿಜನ । ಜೇ ನ ವಿಸಂಬಿತೀ ಅಂಜನ । ಉನ್ಮೇಷನೇತ್ರೀ ॥ ೧೬೦ ॥ ಜೇ ಥಾಂವತಯಾ ಕರ್ಮಾಚೀ ಲಾಣೀ । ನೈಷ್ಕರ್ಮ್ಯ ಬೋಧಾಚೀ ಖಾಣೀ । ಜೇ ಭುಕೇಲಿಯಾ ಧಣೀ । ಸಾಧನಾಚೀ ॥ ೬೧ ॥ ಜೇಥ ಪ್ರವೃತ್ತಿ ಪಾಂಗುಳ ಜಾಹಾಲೀ । ತರ್ಕಾಚೀ ದೃಷ್ಟೀಗೇಲೀ । ಜೇಣೇ ಇಂದ್ರಿಯೇ ವಿಸರಲೀ । ವಿಷಯಸಂಗ ॥ ೬೨ ॥ ಮನಾಚೇ ಮನ ಪಣ ಗೇಲೇ । ಜೇಥ ಬೋಲಾಚೇ ಬೋಲಕೇ ಪಣ ರೇಲೇ । ಜಯಾಮಾಜೀ ಸಾಂಪಡಲೇ । ಜ್ಞೇಯ ದಿಸೇ ॥ ೬೩ ॥ ಜೇಥ ವೈರಾಗ್ಯಾಚಾ ಪಾಂಗ ಫಿಟೇ । ವಿವೇಕಾಚಾಹೀ ಸೋಸತುಟೇ । ಜೇಥ ನ ಪಾಹತಾ ಸಹಜ ಭೆಟೇ । ಆಪಣಪೇ ॥ ೬೪ ॥

**ಅರ್ಥ—** ಅರ್ಜುನಾ! ಆ ಯಜ್ಞದ ಮೂಲವು ವೇದ ಮತ್ತು ಅದರಲ್ಲಿಯ ಕರ್ಮದ ಗೊಂದಲವು ಬಹಳೇ ಇರುತ್ತದೆ. ಮತ್ತು ಆದರ ಪ್ರಥಮ ಫಲವು ಸ್ವರ್ಗವಾಗಿರುತ್ತದೆ. । ೫೮ ॥ ಅದು ಕರ್ಮಯಜ್ಞವಿರುವದೇನೋ ನಿಜ. ಆದರೆ ಸೂರ್ಯನ ಮುಂದೆ ನಕ್ಷತ್ರಗಳ ತೇಜವು ಅಡಗುತ್ತದೆ. ಆ ಕರ್ಮಯೋಗವು ಜ್ಞಾನಯಜ್ಞದ ಸಮಾನ ವಾಗಲಾರದು. ॥ ೫೯ ॥ ಯಾರು ಜ್ಞಾನಾಂಜನವನ್ನು ಕಣ್ಣಿನಲ್ಲಿ ಹಾಕಿ ಆತ್ಮಸುಖರೂಪದ ಧನವನ್ನು ದೊರಕಿಸುವ ದರಿಂದ ಯೋಗೀ ಜನರು ಅಹೋರಾತ್ರಿ ಜಾಗ್ರುತರಾಗಿರುತ್ತಾರೆ. ॥ ೬೦ ॥ ಯಾವ ಜ್ಞಾನವು ಆರಂಭಮಾಡಿದ ಕರ್ಮದ ಪ್ರಾಪ್ತಿಯ ಸ್ಥಾನವಾಗಿರುವದೋ, ಅದು ಬ್ರಹ್ಮಾವಬೋಧದ ಖಣಿಯಾಗಿರುತ್ತದೆ. ಮತ್ತು ಆತ್ಮಪ್ರಾಪ್ತಿಯ ಹಸಿವೆ ಯಿಂದ ಬಳಲುವ ಸಾಧಕರಿಗೆ ತೃಪ್ತಿಯ ಸ್ಥಾನವಾಗಿರುತ್ತದೆ. ॥ ೬೧ ॥ ಯಾವ ಸ್ಥಳದಲ್ಲಿ ಕರ್ಮಾಪೇಕ್ಷೆಯು ಇಲ್ಲ ದಂತಾಗಿರುವದೋ ಆ ಸ್ಥಳದಲ್ಲಿ ತರ್ಕವು ನಿಂತು ಹೋಗಿರುವದು. ಮತ್ತು ಯಾವವರ ಯೋಗದಿಂದ ಇಂದ್ರಿಯಗಳು ವಿಷಯಸೇವನೆ ಮಾಡುವದನ್ನು ಮರೆತುಬಿಟ್ಟಿರುವವೋ, ॥ ೬೨ ॥ ಯಾವ ಸ್ಥಳದಲ್ಲಿ ಮನಸಿನ ಮನವೇ ಇಲ್ಲದಂತಾ ಗಿರುವದೋ, ಎಲ್ಲಿ ಶಬ್ದದ ಗತಿಯು ನಿಂತುಹೋಗಿರುವದೋ, ಆ ಸ್ಥಳದಲ್ಲಿ ಅಂತರ್ಗತ ಬ್ರಹ್ಮವು ಪ್ರಾಪ್ತವಾಗುತ್ತದೆ. ॥ ೬೩ ॥ ಯಾವ ಸ್ಥಳದಲ್ಲಿ ವೈರಾಗ್ಯದ ಕಷ್ಟದಾಯಕವಾದ ಸ್ಥಿತಿಯು ಇಲ್ಲದಂತಾಗುವದೋ, ವಿಚಾರದ ಧಾವನೆಯು ನಷ್ಟಹೊಂದುವದೋ, ಅಲ್ಲಿ ಶ್ರಮವಿಲ್ಲದೇ ಆತ್ಮಜ್ಞಾನವು ಪ್ರಾಪ್ತವಾಗುತ್ತದೆ. ॥ ೬೪ ॥

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

**[ತದ್ವಿದ್ಧಿ ಪ್ರಣಿಪಾತೇನೇತಿ]** ತೇ ಗಾ ಜ್ಞಾನ ಪೈ ಬರವೇ । ಜರೀ ಮನೀ ಆಥೀ ಜಾಣಾವೇ । ತರೀ ಸಂತಾತೇ ಭಜಾವೇ । ಸರ್ವಸ್ವೇಸೀ ॥ ೬೫ ॥ ಜೇ ಜ್ಞಾನಾಚಾ ಕುರುಠಾ । ತೇಥ ಸೇವಾ ಹಾ

ದಾರಿವಂಠಾ । ತೋ ಸ್ವಾಧೀನ ಕರೀ ಸುಭಟಾ ! ವೋಳಗೋನೀ ॥ ೬೬ ॥ ತರೀ ತನುಮನ ಜೀವೇ । ಚರಣಾಸೀ ಲಾಗಾವೇ । ಆಣಿ ಅಗರ್ವತಾ ಕರಾವೇ । ದಾಸ್ಯ ಸಕಳ ॥ ೬೭ ॥ ಮಗ ಅಪೇಕ್ಷಿತ ಜೇ ಆಪುಲೇ । ತೇಹೀ ಸಾಂಗತೀಲ ಪುಸಿಲೇ । ಜೇಣೇ ಅಂತಃಕರುಣ ಬೋಧಲೇ । ಸಂಕಲ್ಪಾನಯೇ ॥೬೮॥

**ಅರ್ಥ—** ಹೀಗೆ ಸರ್ವೋತ್ಕೃಷ್ಟ ಜ್ಞಾನವನ್ನು ದೊರಕಿಸಬೇಕೆಂಬ ಇಚ್ಛೆಯು ಇದ್ದರೆ ನೀನು ಬ್ರಹ್ಮಜ್ಞಾನ ಸಂಪನ್ನರಾದ ಸಂತರ ಸೇವೆಯನ್ನು ಮಾಡು. ॥ ೬೫ ॥ ಆ ಸಂತರು ಜ್ಞಾನದ ಗೃಹವೇ ಆಗಿರುವರು. ಸೇವಾಧರ್ಮವು ಆ ಗೃಹದ ದ್ವಾರವಾಗಿರುವದು. ಅದರೆ ಅರ್ಜುನಾ ! ನೀನು ಅತ್ತಕಡೆಗೆ ತಿರುಗಿ ಸೇವಾಧರ್ಮರೂಪವಾದ ಬಾಗಿಲನ್ನು ನಿನ್ನ ಸ್ವಾಧೀನಪಡಿಸಿಕೊಳ್ಳು. ॥ ೬೬ ॥ ಅಂದರೆ ಸಂತರ ಸೇವೆಯನ್ನು ಮಾಡು. ಅದು ಹೇಗೆ ಮಾಡಬೇಕೆಂದು ನೀನು ಕೇಳಬಹುದು. ಆದಸೆ ಕಾಯಾ-ವಾಚಾ-ಮನ ಮತ್ತು ಪ್ರಾಣದಿಂದ, ಅಹಂಕಾರರಹಿತನಾಗಿ ಸಂತರ ಚರಣ ಸೇವೆಯನ್ನು ಮಾಡುವವನಾಗು. ॥ ೬೭ ॥ ಈ ಪ್ರಕಾರದ ಸೇವೆಮಾಡುವದರಿಂದ ಪ್ರಸನ್ನರಾದ ಸಂತರ ಪ್ರಸನ್ನ ಸ್ಥಿತಿಯಲ್ಲಿ, ಜನನ-ಮರಣರೂಪೀ ಸಂಸಾರದ ದುಃಖಬಂಧನದಿಂದ ಮುಕ್ತನಾಗುವ ಉಪಾಯವನ್ನು ಕೇಳಿದರೆ ಅದನ್ನೂ ಬೋಧಿಸುವರು. ಆ ಯೋಗದಿಂದ ಶಿಷ್ಯನ ಅಂತಃಕರುಣದಲ್ಲಿ ಸಂಸಾರದ ಕಲ್ಪನೆಯು ಸಹ ಬರುವದಿಲ್ಲ. ॥ ೬೮ ॥

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋಮಯಿ ॥ ೩೫ ॥**

**[ಯಜ್ಜ್ಞಾತ್ವೇತಿ]** ಜಯಾಚೇನಿ ವಾಕ್ಯ ಉಜಿವಡೇ । ಜಾಹಾಲೇ ಚಿತ್ತ ನಿಘಡೇ । ಬ್ರಹ್ಮಾಚೇನಿ ಪಾಡೇ । ನಿಃಶಂಕ ಹೋಯ ॥ ೬೯ ॥ ತೇ ವೇಳಿ ಆಪಣ ಪೇಯಾ ಸಹಿತೇ । ಇಯೇ ಅಶೇಷೆಹಿ ಭೂತೇ । ಮಾಝ್ಯಾ ಸ್ವರೂಪೀ ಅಖಂಡಿತೇ । ದೇಖಸೀ ತೂ ॥ ೭೦ ॥ ಐಸೇ ಜ್ಞಾನಪ್ರಕಾಶೇ ಪಾಹೇಲ । ತೈ ಮೋಹಾಂಧಕಾರ ಜಾಈಲ । ಜೈ ಶ್ರೀ ಗುರುಕೃಪಾ ಹೋಈಲ ಪಾರ್ಥಾ ಗಾ ॥ ೭೧ ॥

**ಅರ್ಥ—** ಯಾವ ಉಪದೇಶದಿಂದ ಬ್ರಹ್ಮನಂತೆ ನಿಃಸಂಶಯ, ನಿರ್ಭಯ ಅಂತಃಕರುಣವು ಯಾವಾಗ ಆಗುವದೋ ॥ ೬೯ ॥ ಆವಾಗ ತನ್ನ ಸಹ ಸರ್ವಭೂತಗಳೂ ನನ್ನ ಅಖಂಡರೂಪದ ಸ್ಥಳದಲ್ಲಿದ್ದದ್ದನ್ನು ನೀನು ನೋಡುವಿ. ॥ ೧೭೦ ॥ ಪಾರ್ಥಾ, ಈ ರೀತಿಯಿಂದ ಯಾವಾಗ ಸತ್ಪುರುಷರ ಕೃಪಾಕಟಾಕ್ಷಕ್ಕೆ ಪಾತ್ರನಾಗುವಿಯೋ, ಆವಾಗ ನಿನ್ನ ಅಂತಃಕರುಣದಲ್ಲಿ ಜ್ಞಾನಸೂರ್ಯನು ಉದಯನಾಗಿ ಮೋಹಾಂಧಕಾರವು ಇಲ್ಲದಂತಾಗುವದು. ॥ ೭೧ ॥

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥**

**[ಅಪೀತಿ]** ಜರೀ ಕಲ್ಮಷಾಚಾ ಆಗರ । ತೂ ಭ್ರಾಂತೀಚಾ ಸಾಗರ । ವ್ಯಾಮೋಹಾಚಾ ಡೋಂಗರ । ಹೋವುನಿ ಅಸಸೀ ॥ ೭೨ ತರ್ಹೀ ಜ್ಞಾನ ಶಕ್ತೀಚೇನಿ ಪಾಡೇ । ಹೇ ಆಘವೇಚಿ ಗಾಥೋ-ಕಡೇ । ಐಸೇ ಸಾಮರ್ಥ್ಯ ಅಸೇ ಚೊಖಡೇ । ಜ್ಞಾನೀ ಇಯೇ ॥ ೭೩ ॥ ದೇಖೇ ವಿಶ್ವಸಂಭ್ರಮಾ ಐಸಾ । ಜೋ ಅಮೂರ್ತಾಚಾ ಕಡಸಸಾ । ತೋ ಜಯಾಚಿಯಾ ಪ್ರಕಾಶಾ । ಪುರೇಚಿನಾ ॥ ೭೪ ॥ ತಯಾ ಕಾಯಸೇ ಹೇ ಮನೋಮಳ । ಹೇ ಬೋಲತಾಚಿ ಅತಿ ಕಿಡಾಳ । ನಾಹೀ ಯೇಣೇ ಪಾಡೇ ಢಿಸಾಳ ದುಜೇ ಜಗೀ ॥ ೭೫ ॥

**ಅರ್ಥ—** ನೀನು ಪಾತಕದ ಆಗರವು. ಭ್ರಾಂತಿಯ ಸಮುದ್ರವು. ಅಥವಾ ಭ್ರಮದ ಪರ್ವತವು. ಇದ್ದಾಗ್ಯಾದರೂ, ॥ ೭೨ ॥ ಜ್ಞಾನದ ಶಕ್ತಿಯ ಮುಂದೆ ಈ ಸರ್ವವೂ ತುಚ್ಛವಾಗಿರುವವು. ಹೀಗೆ ಈ ಜ್ಞಾನದಲ್ಲಿ ಶ್ರೇಷ್ಠವಾದ ಸಾಮರ್ಥ್ಯವು ಇರುತ್ತದೆ. ॥ ೭೩ ॥ ಪರಮಾತ್ಮ ಜ್ಞಾನದ ಉದಯವಾದ ಕೂಡಲೇ ಈ ವಿಶ್ವವು ಸತ್ಯವಾಗಿ

ರುವದೆಂಬ ಭ್ರಮೆಯು ನಷ್ಟವಾಗುತ್ತದೆ. ॥ ೭೪ ॥ ಆ ಜ್ಞಾನದ ಮುಂದೆ ಮನಸಿನೊಳಗಿನ ಅಜ್ಞಾನದ ಪಾಡೇನು ? ಆದುದರಿಂದ ನಿನ್ನ ಮನಸಿನಲ್ಲಿ ಈ ಸಂಶಯವನ್ನು ತರುವದು ಯೋಗ್ಯವಾಗಿರುವದಿಲ್ಲ. ಕಾರಣವೇನೆಂದರೆ ಈ ಜಗತ್ತಿನಲ್ಲಿ ಜ್ಞಾನದ ಸಮಾನವಾದ ಅನ್ಯವಸ್ತುವೇ ಇರುವದಿಲ್ಲ. ॥ ೭೫ ॥

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭ ॥**

**[ ಯಥೈಧಾಂಸೀತಿ ]** ಸಾಂಗೇ ಭುವನ ತ್ರಯಾಚೀ ಕಾಜಳೀ । ಜೇ ಗಗನಾ ಮಾಜೀ ಉಧವಲೀ । ತಿಯೇ ಪ್ರಳಯೀಂಚೇ ವಾವಟುಳೀ । ಕಾಯ ಅಭ್ರಪುರೇ ॥ ೭೬ ॥ ಕೀ ಪವನಾಚೇನಿ ಕೋಪೇ ಪಾಣಿಯೆಂಚಿ ಜೋ ಪಳಿಪೇ । ತೋ ಪ್ರಳಯಾನಳ ದಡಪೇ । ತೃಣಕಾಷ್ಠೇಕಾಯೀ ॥ ೭೭ ॥

**ಅರ್ಥ**— ಮೂರು ಲೋಕಗಳೂ ಪ್ರಜ್ವಲಿತವಾದಮೇಲೆ ಅದರ ಹೊಗೆಯು ಆಕಾಶದಲ್ಲಿ ಹಬ್ಬಿದರೆ ಆ ಹೊಗೆಯನ್ನು ಹಾರಿಸಿ ಬಿಡುವಂಥ ಪ್ರಳಯಕಾಲದ ಬಿರುಗಾಳಿಗೆ, ಮೋಡವನ್ನು ಚದುರಿಸಿ ಇಲ್ಲವಂತೆ ಮಾಡುವುದೇನು ಅಸಾಧ್ಯವಾಗಿರುವದೇ ? ॥ ೭೬ ॥ ಇಲ್ಲವೆ ಆ ಬಿರುಗಾಳಿಯ ಸಹಾಯದಿಂದ ಅಗ್ನಿಯು ಪ್ರಜ್ವಲಿತವಾಗಿರಲು ಅದು ನೀರನ್ನು ಸಹ ಸುಟ್ಟುಬಿಡುವದು. ಅಂಥ ಪ್ರಳಯ ಕಾಲಾಗ್ನಿಯು ಹುಲ್ಲು, ಕಟ್ಟಿಗೆಗಳಿಂದ ಆರುವದು ( ಅಡಗುವದು ) ಸಾಧ್ಯವಿರುವದೇನು ? ॥ ೭೭ ॥

**ನಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇ ನಾತ್ಮನಿ ವಿಂದತಿ ॥ ೩೮ ॥**

**[ ನ ಹಿ ಜ್ಞಾನೇನ ಸದೃಶಮಿತಿ ]** ಮ್ಹಣೋನಿ ಅಸೋ ಹೇ ನಘಡೇ ತೇ ವಿಚಾರಿತಾಂಚಿ ಅಸಂಗಡೇ । ಪುಢತೀ ಜ್ಞಾನಾಚೇನಿ ಪಾಡೇ । ಪವಿತ್ರ ನದಿಸೇ ॥ ೭೮ ॥ ಏಥ ಜ್ಞಾನ ಹೇ ಉತ್ತಮು ಹೋಯೇ । ಆಣಿಕಹೀ ಏಕ ತೈಸೇ ಕೇ ಆಹೇ । ಜೈಸೇ ಚೈತನ್ಯಕಾನೋಹೇ । ದುಸರೇ ಗಾ ॥ ೭೯ ॥ ಯಾ ಮಹಾ ತೇಜಾಚೇನಿ ಕಸೇ । ಜರೀ ಚೋಖಾಳ ಪ್ರತಿಬಿಂಬ ದಿಸೇ । ಕಾ ಗಿಂವ ಸಿಲೇ ಗಿಂವಸೇ । ಆಕಾಶ ಹೇ ॥ ೧೮೦ ॥ ನಾತರೀ ಪೃಥ್ವೀಚೇ ನಿ ಪಾಡೇ । ಕಾಂಟಾಳೇ ಜರೀ ಜೋಡೇ । ತರೀ ಉಪಮಾ ಜ್ಞಾನಿಸೀ ಘಡೇ । ಪಾಂಡು ಕುಮರಾ ॥ ೮೧ ॥ ಮ್ಹಣೋನಿ ಬಹುತೀ ಪರೀ ಪಾಹತಾ । ಪುಢತ ಪುಢತೀ ನಿರ್ಧಾರಿತಾ । ಹೇ ಜ್ಞಾನಾಚೀ ಪವಿತ್ರತಾ । ಜ್ಞಾನೀಂಚಿ ಆಥಿ ॥ ೮೨ ॥ ಜೈಸೀ ಅಮೃತಾಚೀ ಚವೀ ನಿವಡಿಜೇ । ತರೀ ಅಮೃತಾಚಿ ಸಾರಿಖೀ ಮ್ಹಣಿಜೇ । ತೈಸೇ ಜ್ಞಾನ ಹೇ ಉಪಮಿಜೇ । ಜ್ಞಾನೇಸೀಚಿ ॥ ೮೩ ॥ ಆತಾ ಯಾವರೀ ಜೇ ಬೋಲಣೇ । ತೇ ವಾಯಾಂಚಿ ವೇಳ ಫೇಡಣೇ । ತವ ಸಾಚಚಿ ಹೇ ಪಾರ್ಥಮ್ಹಣೇ । ಜೇ ಬೋಲತ ಅಸಾ ॥ ೮೪ ॥ ಪರೀ ತೇಚಿ ಜ್ಞಾನ ಕೇವೀ ಜಾಣಾವೆ । ಐಸೇ ಅರ್ಜುನೇ ಜವ ಪುಸಾವೇ । ತವ ತೇ ಮನೋಗತದೇವೇ ಜಾಣೀತಲೇ ॥೮೫॥ ಮಗ ಮ್ಹಣಿತಸೇ ಕಿರೀಟೀ । ಆತಾಚಿತ್ತ ದೇಈ ಇಯೇ ಗೋಠೀ ಸಾಂಗೇ ನ ಜ್ಞಾನಾಚಿಯೇ ಭೇಟೀ । ಉಪಾವೋ ತುಜ ॥ ೮೬ ॥

**ಅರ್ಥ**— ಇದಂತೂ ಇರಲಿ; ಈ ಮಾತು ಯಾವಾಗ್ಯೂ ಸಂಭವಿಸಲಾರದು. ಮತ್ತು ಅದರ ವಿಚಾರ ಮಾಡುವದು ಅಸಂಗತವಾಗಿ ಕಾಣುತ್ತದೆ ವಿಚಾರಿಸಲು, ಜ್ಞಾನದ ಸಮಾನವಾದ, ಪವಿತ್ರ ಎರಡನೆಯ ಪದಾರ್ಥವು ಇಲ್ಲಿ ಇನ್ನಾವುದೂ ಇರುವದಿಲ್ಲ. ॥ ೭೮ ॥ ಯಾವ ಪ್ರಕಾರ ಚೈತನ್ಯಕ್ಕೆ ಸಮಾನವಾದ ಮತ್ತೊಂದು ವಸ್ತುವು ದೊರಕಲಾರದೋ, ಅದೇ ಪ್ರಕಾರ ಈ ಲೋಕದಲ್ಲಿ ಶ್ರೇಷ್ಠಜ್ಞಾನವನ್ನು ಸರಿಗಟ್ಟುವ ಅನ್ಯವಸ್ತುವು ಎಲ್ಲಿಯೂ ದೊರಕುವದಿಲ್ಲ. ॥ ೭೯ ॥ ಒಂದು ವೇಳೆ ಸೂರ್ಯನ ತೇಜದಂತೆ ಅವನ ಪ್ರತಿಬಿಂಬದ ತೇಜವು ಸಮಾನವಾಗುವದೇ ?

ಇಲ್ಲವೇ ಆಕಾಶವನ್ನು ತನ್ನ ಕಂಕುಳಲ್ಲಿ ಹಿಡಿಯಲು ಬರುವದೇ ? ॥ ೮೦ ॥ ಇಲ್ಲವೇ ಪೃಥ್ವಿಗೆ ಸಮಾನವಾದ ಭಾರವುಳ್ಳ ಎರಡನೇದೊಂದು ವಸ್ತುವು ದೊರಕಿದರೆ ಮಾತ್ರ ಜ್ಞಾನದ ಬೆಲೆಯ (ಸಮಾನವಾದ) ಇನ್ನೊಂದು ವಸ್ತುವು ದೊರಕಬಹುದು. ॥ ೮೧ ॥ ಆದುದರಿಂದ ಬಹಳೊಂದು ಪ್ರಕಾರದಿಂದ ಮೇಲಿಂದಮೇಲೆ ವಿಚಾರಮಾಡಿ ನೋಡಲು ಈ ಜ್ಞಾನದ ಪವಿತ್ರತನವು ಜ್ಞಾನದಲ್ಲಿಯೇ ಇರುವದು ॥ ೮೨ ॥ ಅಮೃತದ ರುಚಿಯನ್ನು ಯಾರಾದರೂ ಹೇಗಿರುವದೆಂದು ಕೇಳಿದರೆ ಅದು ಅಮೃತದಂತೆಯೇ ಎಂದು ಹೇಳಬೇಕು. ಅದರಂತೆ ಜ್ಞಾನಕ್ಕೆ ಜ್ಞಾನದ ಉಪಮೆಯೇ ಯೋಗ್ಯವಾಗಿರುವದು. ॥ ೮೩ ॥ ಇನ್ನುಮೇಲೆ ಹೆಚ್ಚಿಗೆ ವಿಚಾರಿಸುವದೆಂದರೆ ವ್ಯರ್ಥವಾಗಿ ಕಾಲಹರಣಮಾಡಿದಂತಾಗುವದು. ಆವಾಗ ಅರ್ಜುನನು ಅನ್ನುತ್ತಾನೆ- ನಿಮ್ಮ ಭಾಷಣೆಯು ನಿಜವದೆ. ॥ ೮೪ ॥ ಆದರೆ ಆ ಜ್ಞಾನವನ್ನು ಯಾವ ಉಪಾಯದಿಂದ ಪ್ರಾಪ್ತಮಾಡಿಕೊಳ್ಳಬೇಕು ? ಹೀಗೆ ಅರ್ಜುನನು ಕೇಳುವಷ್ಟರಲ್ಲಿಯೇ ಅವನ ಮನೋಭಿಪ್ರಾಯವನ್ನು ಭಗವಂತನು ತಿಳಿದಿದ್ದನು. ॥ ೮೫ ॥ ಆ ಮೇಲೆ ಅರ್ಜುನನಿಗೆ ಅನ್ನುತ್ತಾನೆ- ಎಲೋ ಕಿರೀಟೀ, ಜ್ಞಾನ ಪ್ರಾಪ್ತಿಯ ಉಪಾಯವನ್ನು ನಾನು ನಿನಗೆ ಹೇಳುತ್ತೇನೆ. ಆ ಮಾತಿನಕಡೆಗೆ ಅವಧಾನವನ್ನು ಕೊಡು. ॥ ೮೬ ॥

**ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥**

**[ಶ್ರದ್ಧಾ ವಾಂಲ್ಲಭತೇ ಜ್ಞಾನಮಿತಿ]** ಆತ್ಮಸುಖಾಚಿಯಾ ಗೋಡಿ ಯಾ ವಿಟೇ ಜೋ ಕಾ ಸಕಳ ವಿಷಯಾ । ಜಯಾಚ್ಯಾ ಠಾಯೀ ಇಂದ್ರಿಯಾ । ಮಾನ ನಾಹೀ ॥ ೮೭ ॥ ಜೋ ಮನಾಸೀ ಚಾಡ ನ ಸಾಂಗೇ । ಜೋ ಪ್ರಕೃತೀಚೆ ಕೇಲೇ ನೇಘೇ । ಜೋ ಶ್ರದ್ಧೇಚೇನಿ ಸಂಭೋಗೇ । ಸುಖಿಯಾ ಜಾಹಲಾ ॥ ೮೮ ॥ ತಯಾತೇಂಚಿ ಗಿಂವಸಿತ । ತೇ ಜ್ಞಾನಪಾವೇ ನಿಶ್ಚಿತ । ಜಯಾಮಾಜೀ ಅಚುಂಬಿತ ಶಾಂತಿ ಅಸೇ ॥ ೮೯ ॥ ತೇ ಜ್ಞಾನ ಹೃದಯೀ ಪ್ರತಿಷ್ಠೇ । ಆಣಿ ಶಾಂತೀಚಾ ಅಂಕುರ ಫುಟೇ । ಮಗ ವಿಸ್ತಾರ ಬಹು ಪ್ರಕಟೇ । ಆತ್ಮಬೋಧಾಚಾ ॥ ೯೦ ॥ ಮಗ ಜೇಥುತೀ ವಾಸ ಪಾಹಿಜೇ । ತೇಥುತೀ ಶಾಂತೀಚಿ ದೇಖಿಜೇ । ತೇಥ ಆಪ ಪರ ನೇಣಿಜೇ । ನಿರ್ಧಾರಿತಾ ॥ ೯೧ ॥ ಐಸಾ ಹಾ ಉತ್ತರೋತ್ತರ । ಜ್ಞಾನ ಬೀಜಾಚಾ ವಿಸ್ತಾರ । ಸಾಂಗತಾ ಅಸೇ ಅಪಾರ । ಪರೀ ಅಸೋ ಆತಾ ॥ ೯೨ ॥

**ಅರ್ಥ**— ಆತ್ಮಸುಖದ ಅಭಿರುಚಿಯಿಂದ ಯಾವನ ಮನಸ್ಸು ಸರ್ವ ವಿಷಯಸುಖಗಳ ವಿಷಯದಲ್ಲಿ ಬೇಸರವಾಗಿ ಹೋಗಿರುವದೋ, ಮತ್ತು ಯಾವನಲ್ಲಿ ಮೂಲತಃ ಇಂದ್ರಿಯಗಳ ಪ್ರತಿಷ್ಠೆಯು ಇರುವದಿಲ್ಲವೋ, ॥ ೮೭ ॥ ಯಾವನು ತನ್ನ ಅಪೇಕ್ಷೆಯನ್ನು ತನ್ನ ಮನಸಿಗೆ ತಿಳಿಯಗೊಡುವದಿಲ್ಲವೋ, ಅವನು ಪೂರ್ವ ಕರ್ಮ ಸಂಸ್ಕಾರದಿಂದ ಉತ್ಪನ್ನವಾದಂಥ ವಾಸನೆಯನ್ನು ವಿಚಾರದಲ್ಲಿ ತರುವದೇ ಇಲ್ಲ. ಪ್ರಕೃತಿ ಕಡಿಯಿಂದಾಗುವ ಕರ್ಮ (ಆ ಕರ್ಮದ ಕರ್ತೃತ್ವ) ವನ್ನು ತನ್ನ ಕಡೆಗೆ ತೆಗಿದುಕೊಳ್ಳುವದಿಲ್ಲ. ಶ್ರದ್ಧೆಯ ಉಪಭೋಗದಿಂದ ಅವನು ಸಂತೋಷ ಉಳ್ಳವನಾಗಿರುತ್ತಾನೆ. ॥ ೧೮೮ ॥ ಯಾವ ಜ್ಞಾನದಲ್ಲಿ ಓತಪ್ರೋತ ಶಾಂತಿ ತುಂಬಿರುವದೋ ಆ ಜ್ಞಾನವು ಅವನನ್ನು ಹುಡುಕುತ್ತ ಹುಡಕುತ್ತ (ತನ್ನಿಂದ ತಾನೆ) ಬಂದು ಅವನ ವಶವಾಗುತ್ತದೆ. ಇದು ನಿಶ್ಚಯವು ! ॥ ೮೯ ॥ ಆ ಜ್ಞಾನವು ಅಂತಃಕರಣದಲ್ಲಿ ಸ್ಥಿರವಾಯಿತೆಂದರೆ ಶಾಂತಿಯ ಅಂಕುರವು ಹುಟ್ಟಿ ಮುಂದೆ ಆತ್ಮಬೋಧದ ವಿಸ್ತಾರವಾಗುತ್ತದೆ. ॥ ೧೯೦ ॥ ಆ ಮೇಲೆ ಅವನು ಎಲ್ಲಿ ಯಾವಕಡೆಗೆ ನೋಡುವನೋ ಅಲ್ಲಿ ಅವನಿಗೆ ಶಾಂತಿಯೇ ಕಣ್ಣಿಗೆ ಕಾಣುತ್ತದೆ. ಮತ್ತು ಆ ಶಾಂತಿಯ ಸ್ಥಳದಲ್ಲಿ ಆಪ-ಪರ ಭಾವನೆಯು ಇರುವದಿಲ್ಲ. ॥೯೧॥ ಈ ರೀತಿಯಿಂದ ಜ್ಞಾನದ ವಿಷಯದಲ್ಲಿ ಎಷ್ಟು ವರ್ಣನೆ ಮಾಡಿದರೂ ತೀರದು. ಅದು ಅಲ್ಪವೇ ಆಗಿರುವದು. ಆದರೆ ಆ ಮಾತು ಈಗ ಇಷ್ಟಕ್ಕೇ ಸಾಕು. ॥೯೨॥

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥ ೪೦ ॥**

**[ಅಜ್ಞಶ್ಚೇತಿ]** ಐಕೇ ಜಯಾ ಪ್ರಾಣಿ ಯಾಚ್ಯಾ ಠಾಯೀ । ಇಯಾ ಜ್ಞಾನಾಚೀ ಆವಡೀ ನಾಹೀ । ತಯಾಚೇ ಜಿಯಾಲೇ ಮ್ಹಣೋ ಕಾಈ । ವರೀ ಮರಣ ಚಾಂಗ ॥ ೯೩ ॥ ಶೂನ್ಯ ಜೈಸೇ ಗ್ರಹ । ಕಾ ಚೈತನ್ಯೇ ವೀಣ ದೇಹ । ತೈಸೇ ಜೀವಿತ ತೇ ಸಂಮೋಹ । ಜ್ಞಾನಹೀನ ॥ ೯೪ ॥ ಅಥವಾ ಜ್ಞಾನಕೀರ ಆಪುನೋಹೇ । ಪರೀ ತೇ ಚಾಡ ಏಕೀ ಜರೀ ವಾಹೇ । ತರೀ ತೇಥ ಜಿವ್ಹಾಳಾ ಕಾಂಹೀ ಆಹೇ । ಪ್ರಾಪ್ತೀಚಾಪೈ । ೯೫ ॥ ವಾಂಚೂನಿ ಜ್ಞಾನಾಚೀ ಗೋಠೀ ಕಾಯಸೀ । ಪರೀ ತೇ ಆಸ್ಥಾಹೀ ನಥೀ ಮಾನಸೀ । ತರೀ ತೇ ಸಂಶಯರೂಪ ಹುತಾಶೀ । ಪಡಿಲಾ ಜಾಣ ॥ ೯೬ ॥ ಜೇ ಅಮೃತಹೀ ಪರೀ ನಾಪಡೇ । ಐಸೇ ಸಾವಿಯಾಚಿ ಅರೋಚಕ ಜೈಪಡೇ । ತೈಮರಣ ಆಲೇ ಅಸೇ ಫುಡೇ । ಜಾಣೋಯೇಕೀ ॥ ೯೭ ॥ ತೈಸಾ ವಿಷಯಸುಖೇ ರಂಜೇ । ಜೋ ಜ್ಞಾನೇ ಸೀಂಚಿ ಮಾಜೇ । ತೋ ಸಂಶಯೇ ಅಂಗೀ ಕಾರಿಜೇ । ಏಥ ಭ್ರಾಂತಿನಾಹೀ ॥ ೯೮ ॥ ಮಗ ಸಂಶಯೀ ಜರೀ ಪಡಿಲಾ । ತರೀ ನಿಭ್ರಾಂತ ಜಾಣೇ ನಾಸಲಾ । ತೋ ಐಹಿಕ ಪರತ್ರಾ ಮುಕಲಾ । ಸುಖಾಸಿಗಾ ॥ ೯೯ ॥ ಜಯಾ ಕಾಳಜ್ವರ ಅಂಗೀ ಬಾಣೇ । ತೋ ಶೀತೋಷ್ಣ ಜೈಶೀ ನೇಣೇ । ಆಗೀ ಆಣೀ ಚಾಂದಿಣೇ । ಸರಿಸೇಂಚಿ ಮಾನೀ ॥ ೨೦೦ ॥ ತೈಸೇ ಸಾಚ ಆಣಿ ಲಟಿಕೇ । ವಿರುದ್ಧ ಆಣಿ ನಿಕೇ । ಸಂಶಯೀ ತೋ ನೋಳಖೇ । ಹಿತಾಹಿತ ॥ ೧ ॥ ಹಾ ರಾತ್ರೀ ದಿವಸ ಪಾಹೀ । ಜೈಸಾ ಜಾತ್ಯಂಧಾ ಠಾವುವಾ ನಾಹೀ । ತೈಸೇ ಸಂಶಯೀ ಅಸತಾ ಕಾಂಹೀ । ಮನಾ ನಯೇ ॥ ೨ ॥ ಮ್ಹಣವೂನಿ ಸಂಶಯಾಹೂನಿ ಥೋರ । ಆಣಿಕ ನಾಹೀ ಪಾಪ ಘೋರ । ಹಾ ವಿನಾಶಾಚೀ ವಾಗುರ । ಪ್ರಾಣಿ ಯಾಂಸೀ ॥ ೩ ॥ ಯೇಣೇ ಕಾರಣೇ ತುವಾತ್ಯಜಾವಾ । ಆಧೀ ಹಾಚಿ ಏಕ ಜಿಣಾವಾ । ಜೋ ಜ್ಞಾನಾಚಿ ಯಾ ಅಭಾವಾ । ಮಾಜಿ ಅಸೇ ॥ ೪ ॥ ಜೈ ಅಜ್ಞಾನಾಚೇ ಗಡದ ಪಡೇ । ತೈಹಾ ಬಹುವಸ ಮನೀ ವಾಢೇ । ಮ್ಹಣೋನಿ ಸರ್ವಥಾ ಮಾರ್ಗ ಮೋಡೇ । ವಿಶ್ವಾಸಾಚಾ ॥ ೫ ॥ ಹೃದಯೀ ಹಾಚಿ ನ ಸಮಾಯೇ ಬುದ್ಧಿತೇ ಗಿವಸೂನಿ ಠಾಯೇ । ತೇಥೆ ಸಂಶಯಾತ್ಮಕ ಹೋಯೇ ಲೋಕತ್ರಯ ॥ ೬ ॥

**ಅರ್ಥ**— ಯಾವ ಮನುಷ್ಯನಲ್ಲಿ ಇಂಥ ಪ್ರಕಾರದ ಜ್ಞಾನಪ್ರಾಪ್ತಿಯ ವಿಷಯವಾಗಿ ಶ್ರದ್ಧೆಯು ಉಂಟಾಗುವದಿಲ್ಲವೋ ಅವನ ಜೀವಿತವು ವ್ಯರ್ಥವಾಗಿರುವದು. ಅವನು ಬದುಕಿರುವದರಕಿಂತಲೂ ಸಾಯುವದೇ ಲೇಸು. ॥ ೯೩ ॥ ಒಂದಾನೊಂದು ನಿರ್ಜನವಾದ ಹಾಳುಭುವನವೂ, ಇಲ್ಲವೇ ಪ್ರಾಣವಿಲ್ಲದ ಶರೀರವೂ ಹೇಗೋ ! ಹಾಗೆಯೇ ಜ್ಞಾನಹೀನ ಮನುಷ್ಯನ ಜೀವಿತವು ಮೋಹಯುಕ್ತ (ಶೂನ್ಯ) ವಾಗಿರುವದು. ॥ ೯೪ ॥ ನಿಜವಾದ ಜ್ಞಾನವು ಪ್ರಾಪ್ತವಾಗದಿದ್ದರೆ ಬಿಡಲಿ. ಆದರೆ ಆಜ್ಞಾನಕ್ಕೋಸುಗ ಪ್ರಯತ್ನವನ್ನಾದರೂ ಅವನು ಮಾಡಿದರೆ ತುಸುವಾದರೂ ಫಲಪ್ರಾಪ್ತಿಯಾಗದೇ ಇರದು. ॥ ೯೫ ॥ ಜ್ಞಾನದೊರಕಿಸುವ ವಿಷಯವಂತೂ ಒತ್ತಟ್ಟಿಗೆ ಉಳಿಯಲಿ. ಆದರೆ ಜ್ಞಾನವು ಪ್ರಾಪ್ತಿಯಾಗಬೇಕೆಂಬ ಅಪೇಕ್ಷೆಯು ಕೂಡ ಯಾರಲ್ಲಿ ಇರುವದಿಲ್ಲವೋ ಅವರು ಸಂಶಯರೂಪ ಅಗ್ನಿಯಲ್ಲಿ ಬಿದ್ದಿರುವರೆಂದು ತಿಳಿ. ॥ ೯೬ ॥ ಯಾಕಂದರೆ ಮನುಷ್ಯನಿಗೆ ಅಮೃತವು ಸಹ ರುಚಿಯಾಗದೇ ಅರುಚಿಯುತ್ಪನ್ನವಾದರೆ, ಅವನಿಗೆ ಮರಣವು ಸಮೀಪಿಸಿರುವುದೆಂದು ನಿಶ್ಚಯವಾಗಿ ತಿಳಿ. ॥ ೯೭ ॥ ಅದರಂತೆಯೇ ವಿಷಯಸುಖವಲ್ಲಿಯೇ ಯಾವನು ಆನಂದ ಹೊಂದುತ್ತಾನೋ, ಮತ್ತು ಜ್ಞಾನಪ್ರಾಪ್ತಿಯ ವಿಷಯದಲ್ಲಿ ಅಲಕ್ಷ್ಯನಾಗಿರುವನೋ, ಅವನನ್ನು ಸಂಶಯವು ನುಂಗಿ ಬಿಟ್ಟಿರುವದೆಂಬುವರಲ್ಲಿ ಸಂಶಯವಿಲ್ಲ. ॥ ೯೮ ॥ ಈ ರೀತಿಯಿಂದ ಯಾವನು ಸಂಶಯದಲ್ಲಿ ಬೀಳುತ್ತಾನೋ, ಅವನು ನಾಶಹೊಂದಿದನೆಂದು ನಿಃಸಂಶಯವಾಗಿ ತಿಳಿ. ಆದುದರಿಂದ ಅವನು ಇಹಲೋಕದ, ಮತ್ತು ಪರಲೋಕದ ಸುಖದಿಂದ ದೂರಾಗಿರುವನು. ॥ ೯೯ ॥ ಯಾವನಿಗೆ ಸನ್ನಿಪಾತ ಜ್ವರವು ಬಂದಿರುವದೋ ಅವನಿಗೆ ಶೀತೋಷ್ಣದ ಅನುಭವವಾಗಲಾರದು. ಅವನು ಬಿಸಿಲು ಬೆಳದಿಂಗಳು ಸಹ ಸಮಾನವೆಂದೇ ತಿಳಿಯುತ್ತಾನೆ. ॥ ೨೦೦ ॥ ಅದೇ ಪ್ರಕಾರ ಸತ್ಯ-ಅಸತ್ಯ, ಅನುಕೂಲ-ಪ್ರತಿಕೂಲ, ಹಿತ-ಅಹಿತ ಇವುಗಳು ಸಂಶಯಾತ್ಮನಿಗೆ ತಿಳಿಯುವದಿಲ್ಲ. ॥ ೧ ॥ ಯಾವ

ಪ್ರಕಾರ ಜನ್ಮಾಂಧನಿಗೆ ರಾತ್ರಿ-ಹಗಲು ಗೊತ್ತಿರುವದಿಲ್ಲವೋ, ಅದೇ ಪ್ರಕಾರದ ಸಂಶಯಾತ್ಮನಿಗೆ ಯಾವದೂ ತಿಳಿಯುವದಿಲ್ಲ. ॥ ೨ ॥ ಆದುದರಿಂದ ಸಂಶಯದಕಿಂತಲೂ ಎರಡನೇ ಭಯಂಕರ ಪಾಪವು ಯಾವದೂ ಇರುವದಿಲ್ಲ. ಪ್ರಾಣಗಳನ್ನು ನಾಶಪಡಿಸುವ ಒಂದು ಪಾಶವೇ ಅದು ಆಗಿರುವದು. ॥೩॥ ಈ ಕಾರಣದ ದೆಶೆಯಿಂದಲಾದರೂ, ನೀನು ಅದರ ಸಂಗತಿಯನ್ನು ಬಿಟ್ಟು, ಮೊದಲು ಇದನ್ನು ಜಯಿಸು. ಈ ಸಂಶಯದ ವ್ಯಾಪ್ತಿಯು ಜ್ಞಾನದ ಅಭಾವದಲ್ಲಿ ಮಾತ್ರ ಇರುತ್ತದೆ. ॥ ೪ ॥ ಯಾವಾಗ ಅಜ್ಞಾನದ ದಟ್ಟವಾದ ಕತ್ತಲೆಯು ಇರುತ್ತದೋ, ಆವಾಗ ಈ ಸಂಶಯವು ಮನಸಿನಲ್ಲಿ ಬೆಳೆಯಹತ್ತುತ್ತದೆ. ಆದುದರಿಂದ ಅದು ಮನುಷ್ಯನಲ್ಲಿ ವಿಶ್ವಾಸದ ಹೆಸರನ್ನೂ ಸಹ ಅಂಕುರಿಸಗೊಡುವದಿಲ್ಲ. ॥ ೫ ॥ ಇದು ಅಂತಃಕರಣದಲ್ಲಿಯೇ ತುಂಬಿಕೊಂಡಿರುವದಲ್ಲದೇ, ಬುದ್ಧಿಯನ್ನು ಸಹ ಅಚ್ಛಾದಿಸಿಬಿಡುತ್ತದೆ. ಆ ಮೇಲೆ, ಆ ಮನುಷ್ಯನಿಗೆ ಮೂರು ಲೋಕಗಳೂ ಸಂಶಯಾತ್ಮಕವೇ ಆಗಿ ಕಾಣುತ್ತವೆ. ॥ ೬ ॥

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ॥ ೪೧ ॥**

**[ ಯೋಗ ಸಂನ್ಯಸ್ತೇತಿ ]** ಐಸಾ ಜರೀ ಥೋರಾವೇ । ತರೀ ಉಪಾಯೋ ಏಕೇ ಆಂಗವೇ । ಜರೀ ಹಾತೀ ಹೋಯಬರವೇ । ಜ್ಞಾನಖಡ್ಗ ॥ ೭ ॥ ತರೀ ತೇಣೇ ಜ್ಞಾನಶಸ್ತ್ರೇ ತಿಖಟೇ । ನಿಖಳ ಹಾ ನಿವಟೇ । ಮಗ ನಿಃಶೇಷ ಖತಾಫಿಟೇ । ಮಾನಸೀಚಾ ॥ ೮ ॥

**ಅರ್ಥ—** ಆದರೆ ಇಷ್ಟು ಅದು ಬೆಳೆದಾಗ್ಯೂ ಅದನ್ನು ಸ್ವಾಧೀನಮಾಡಿಕೊಳ್ಳಲಿಕ್ಕೆ ಒಂದು ಉಪಾಯವು ಇರುವದು. ಹದನವಾದ ಜ್ಞಾನಖಡ್ಗವು ಕೈಯಲ್ಲಿದ್ದರೆ, ॥ ೭ ॥ ಆ ತೀಕ್ಷ್ಣವಾದ ಶಸ್ತ್ರದ ಯೋಗದಿಂದ ಈ ಸರ್ವವೂ ಇಲ್ಲದಂತಾಗುತ್ತದೆ. ಆ ಮೇಲೆ ಅವನ ಮನಸಿನೊಳಗಿನ ಸಂಶಯವು ಸಮೂಲವಾಗಿ ನಾಶಹೊಂದುತ್ತದೆ. ॥ ೮ ॥

**ತಸ್ಮಾದಜ್ಞಾನಸಂಭೂತಂ ಹೃಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ**
**'ಬ್ರಹ್ಮಾರ್ಪಣಯೋಗೋ' ನಾಮ ಚತುರ್ಥೋಽಧ್ಯಾಯಃ ॥ ೪ ॥**

[ **ತಸ್ಮಾದಿತಿ ]** ಯಾಕಾರಣೇ ಪಾರ್ಥಾ । ಉಠೀ ವೇಗೀ ವರೌತಾ । ನಾಶ ಕರೋನಿ ಹೃದಯಸ್ಥಾ । ಸಂಶಯಾಸೀ ॥ ೯ ॥ ಐಸೇ ಸರ್ವಜ್ಞಾಚಾ ಬಾಪ । ಜೋ ಶ್ರೀಕೃಷ್ಣ ಜ್ಞಾನದೀಪ । ತೋಮ್ಹಣತಪೇ ಸ ಕೃಪ । ಐಕೇರಾಯಾ ॥ ೨೧೦ ॥ ತವ ಯಾ ಪೂರ್ವಾಪರ ಬೋಲಾಚಾ । ವಿಚಾರೂನಿ ಕುಮರುಪಾಂಡೂಚಾ । ಕೈಸಾ ಪ್ರಶ್ನ ಅವಸರೀಂಚಾ । ಕರೀತ ಹೋಈಲ ॥ ೧೧ ॥ ತೇಕಥೇಚೀ ಸಂಗತೀ । ಭಾವಾಚೀ ಸಂಪತ್ತೀ । ರಸಾಚೀ ಉನ್ನತೀ । ಮ್ಹಣಿಪೇಲಪುಢಾ ॥ ೧೨ ॥ ಜಯಾಚಿಯಾ ಬರವೇಪಣೀ । ಕೀಜೇ ಆತಾ ರಸಾಂಚೀ ವೋವಳಣೀ । ಜೋ ಸಜ್ಜನಾಚಿಯೇ ಆಯಣೀ । ವಿಸಾವಾ ಜಗೀ ॥ ೧೩ ॥ ಜೋ ಶಾಂತಚಿ ಅಭಿನವೇಲ । ತೇ ಪರಿಯಸಾ ಮರ್ಹಾಜೇ ಬೋಲ । ಜೇ ಸಮುದ್ರಾಹೂನಿ ಸಖೋಲ । ಅರ್ಥಭರಿತ ॥ ೧೪ ॥ ಜೈಸೇ ಬಿಂಬ ತರೀ ಬಚಕೇಚಿ ಎವಢೇ । ಪರೀ ಪ್ರಕಾಶಾಸಿ ತ್ರಿಭುವನ ಥೋಕಡೇ । ಶಬ್ದಾಚೀ ವ್ಯಾಪ್ತಿತೇಣೇ ಪಾಡೇ । ಅನುಭವಾವೀ ॥ ೧೫ ॥ ನಾತರೀ ಕಾಮಿತಯಾಚಿಯಾ ಇಚ್ಛಾ । ಫಳೇ ಕಲ್ಪವೃಕ್ಷ ಜೈಸಾ । ಬೋಲ ವ್ಯಾಪಕ ಹೋಯ ತೈಸಾ । ತರೀ ಅವಧಾನ ದ್ಯಾವೇ ॥ ೧೬ ॥ ಹೇ ಅಸೋಕಾಯ ಮ್ಹಣಾವೇ । ಸರ್ವಜ್ಞ ಜಾಣತೀ ಸ್ವಭಾವೇ । ತರೀ ನಿಕೇ ಚಿತ್ತ ದ್ಯಾವೇ । ಹೇ ವಿನಂತಿ ಮಾಝೀ ॥ ೧೭ ॥ ಜೇಥ ಸಾಹಿತ್ಯ ಆಣಿ ಶಾಂತಿ ಹೇ ರೇಖೋ

ದಿಸೇ ಬೋಲತೀ । ಜೈಸೀ ಲಾವಣ್ಯ ಗುಣ ಕುಳವತೀ । ಆಣಿ ಪತಿವ್ರತಾ ॥೧೮॥ ಅಧೀಂಚಿ ಸಾಖರ ಆವಡೇ । ತೇಚೀ ಜರೀ ಓಖದೀ ಜೋಡೇ । ತರೀ ಸೇವಾವೀ ನಾಕಾ ಕೋಡೇ । ನಾವಾ ನಾವಾ ॥೧೯॥ ಸಹಜೇ ಮಲಯಾನಿಲ ಮಂದ ಸುಗಂಧ । ತಯಾ ಅಮೃತಾಚಾ ಹೋಯಸ್ವಾದ ॥ ಆಣಿ ತೇಥೇಂಚಿ ಜೋಡೇನಾದ । ಜರೀ ದೈವಗತ್ಯಾ ॥ ೨೦ ॥ ತರೀ ಸ್ಪರ್ಶೇ ಸರ್ವಾಂಗೇ ನಿವವೀ ! ಸ್ವಾದೇ ಜಿವ್ಹೇತೇ ನಾಚವೀ । ತೇವೀಂಚಿ ಕಾನಾಕರವೀ । ಮ್ಹಣವೀ । ಬಾಪ ಮಾಝಾ ॥ ೨೧ ॥ ತೈಸೇ ಕಥೇಚೇ ಇಯೇ ಐಕಣೇ । ಏಕ ಶ್ರವಣಾಂಸಿ ಹೋಯಪಾರಣೇ । ಅಣಿ ಸಂಸಾರ ದುಃಖ ಮೂಳವಣೇ । ವಿಕೃತೀ ವಿಣೇ ॥ ೨೨ ॥ ಜರೀ ಮಂತ್ರೇಚಿ ವೈರೀ ಮರೇ । ತರೀ ವಾಯಾ ಕಾ ಬಾಂಧಾವೇ ಕಟಾರೇ । ರೋಗಜಾಯ ದೂಧ ಸಾಖರೇ । ತರೀ ನಿಂಬಕಾ ಪಿಯಾವಾ ॥ ೨೩ ॥ ತೈಸಾ ಮನಾಚಾ ಮಾರ ನ ಕರಿತಾ । ಆಣಿ ಇಂದ್ರಿಯಾ ದುಃಖ ನ ದೇತಾ । ಏಥ ಮೋಕ್ಷ ಅಸೇ ಆಯತಾ । ಶ್ರವಣಾಚೀ ಮಾಜೀ ॥ ೨೪ ॥ ಮ್ಹಣೋನಿ ಆಥಿಲಿಯಾ ಆರಾಣುಕಾ । ಗೀತಾರ್ಥ ಹಾನಿಕಾ । ಜ್ಞಾನದೇವ ಮ್ಹಣೇ ಆಇಕಾ । ನಿವೃತ್ತಿದಾಸ ॥ ೨೫ ॥

**ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಚತುರ್ಥೋಽಧ್ಯಾಯಃ ॥ ೪ ॥ ಶ್ಲೋಕ ೪೨; ಓವಿ ೨೨೫**

**ಅರ್ಥ—** ಆದುದರಿಂದ ಪಾರ್ಥಾ! ನಿನ್ನ ಮನಸಿನಲ್ಲಿಯ ಸಂಶಯವನ್ನು ಹೊರದೂಡಿ (ಯುದ್ಧಕ್ಕೆ) ಎದ್ದೇಳು. ।೯॥ ಸಂಜಯನು ಧೃತರಾಷ್ಟ್ರರಾಜನಿಗೆ ಅನ್ನುತ್ತಾನೆ— ರಾಜನೇ ! ಕೇಳು, ಜ್ಞಾನಿಜನರ ಜನಕನಾದ ಜ್ಞಾನದೀಪ ಭಗವಾನ್ ಶ್ರೀಕೃಷ್ಣಪರಮಾತ್ಮನು ಬಹಳೇ ಕೃಪೆಯಿಂದ ಅರ್ಜುನನಿಗೆ ಅನ್ನುತ್ತಾನೆ. ॥ ೧೦ ॥ ಆಗ್ಗೆ ಈ ಸರ್ವ ಪೂರ್ವಾಪರ ಕಥೆಯ ವಿಚಾರವನ್ನು ಮಾಡಿ ಆ ಅರ್ಜುನನು ಸಮಯೋಚಿತವಾದ ಪ್ರಶ್ನೆಯನ್ನು ಮಾಡಿದನು. ॥ ೧೧ ॥ ಆ ಕಥೆಯ ಹೊಂದಿಕೆಯೂ, ಅಭಿಪ್ರಾಯದ ಶೋಭೆಯೂ, ಮತ್ತು ಕಥಾಮೃತ ರಸದ ರುಚಿಯೂ, ಮುಂದೆ ಹೇಳುವದರಲ್ಲಿ ಬರುವದು. ॥ ೧೨ ॥ ಯಾವನ ಸಂಭಾಷಣದ ಶ್ರೇಷ್ಠತನದ ಮುಂದೆ ಎಂಟೂ ರಸಗಳನ್ನೂ ನಿವಾಳಿಸ ಬೇಕೋ, ಮತ್ತು ಯಾವ ಸಜ್ಜನರ ಬುದ್ಧಿಗೆ ಈ ಜಗತ್ತಿನಲ್ಲಿ ವಿಶ್ರಾಂತಿ ಸ್ಥಾನವಾಗಿರುವನೋ, ॥ ೧೩ ॥ ಯಾವ ಮಹಾರಾಷ್ಟ್ರ ಭಾಷಾದಲ್ಲಿಯ ಸಂಭಾಷಣದಿಂದ ಶಾಂತಿರಸವು ಪ್ರಗಟವಾದೀತು, ಮತ್ತು ಯಾವದು ಸಮುದ್ರದ ಕಿಂತಲೂ ಗಂಭೀರವಾಗಿದ್ದು, ಅರ್ಥದಿಂದ ಪೂರ್ಣವಾಗಿ ತುಂಬಿರುತ್ತದೋ, ಅಂತಹ ಆ ಸಂಭಾಷಣವನ್ನು ಶ್ರವಣ ಮಾಡಬೇಕು. ॥ ೧೪ ॥ ಹೇಗೆ ಸೂರ್ಯಬಿಂಬವು ಕೈಯೊಳಗೆ ಹಿಡಿಯುವಷ್ಟು ಸಣ್ಣದಾಗಿ ಕಂಡರೂ, ಅದರ ಪ್ರಕಾಶವು ಮಾತ್ರ ಮೂರಲೋಕವನ್ನೂ ವ್ಯಾಪಿಸಿ ಹೊರಬಿದ್ದಿದೆಯೋ, ಹಾಗೆಯೇ ಈ ಶಬ್ದಾರ್ಥ ವ್ಯಾಪ್ತಿಯೂ ಇರುವುದೆಂಬುದರ ಅನುಭವವನ್ನು ಮಾಡಿಕೊಳ್ಳಬೇಕು. ॥ ೧೫ ॥ ಇಲ್ಲವೇ ಕಲ್ಪವೃಕ್ಷವು ಹೇಗೆ ಕಾಮುಕಜನರ ಇಚ್ಛೆಯನ್ನು ಪೂರ್ತಿಗೊಳಿಸುತ್ತದೋ, ಅದರಂತೆಯೇ ಈ ಸಂಭಾಷಣವು ಸರ್ವ ಇಚ್ಛಾಪೂರ್ಣ ಮಾಡುವಂತಹ ದಿರುವದು. ಆದುದರಿಂದ ಇದರ ಕಡೆಗೆ ಪೂರ್ಣ ಲಕ್ಷಕೊಡಬೇಕು. ॥೧೬॥ ಶ್ರೋತೃಗಳಿರಾ! ನಿಮಗೆ ಹೆಚ್ಚಿಗೆ ಹೇಳುವ ದೇನು ? ನೀವು ಎಲ್ಲವನ್ನು ತಿಳಿದವರೇ ಆಗಿರುವಿರಿ. ಅಂದ ಬಳಿಕ ಚನ್ನಾಗಿ ಲಕ್ಷ ಪೂರೈಸಬೇಕೆಂಬದಿಷ್ಟೇ ನನ್ನ ವಿನಂತಿ ಯಿದೆ. ॥ ೧೭ ॥ ಯಾವ ಪ್ರಕಾರ ಓರ್ವ ಸ್ತ್ರೀಯು ಸುಂದರಳೂ, ಗುಣವಂತಿಯೂ, ಕುಲಶೀಲಳೂ, ಇದ್ದು ಪತಿವ್ರತೆಯೂ, ಆಗಿರುವಳೋ ಅದೇ ಪ್ರಕಾರ ಈ ಸಂಭಾಷಣದ ಪದ್ಧತಿಯು ಮೇಲಿಂದ ಇದರಲ್ಲಿ ಸರ್ವ ಅಲಂಕಾರವೂ, ಮತ್ತು ಶಾಂತಿಯೂ, ನಿಚ್ಚಳವಾಗಿ ಕಾಣುತ್ತದೆ. ॥೧೮॥ ಮೊದಲಿಗೆ ಸಕ್ಕರೆಯ ಮೇಲೆ ಪ್ರೇಮವಿದ್ದು ಅದು ಒಂದು ವೇಳೆ ಔಷಧದ ಅನುಪಾನದಲ್ಲಿ ಕೊಟ್ಟರೆ ಅದನ್ನು ಆನಂದದಿಂದ ಮೇಲಿಂದ ಮೇಲೆ ಏಕೆ ಸೇವಿಸಕೂಡದು! ॥೧೯॥ ಸಹಜವೇ ಮಲಯಗಿರಿಯ ಮೇಲಿನ ಸುಗಂಧ ಮತ್ತು ಮಂದ, ಮಂದವಾದ ಸುಳಿಗಾಳಿಯು ಬೀಸುತ್ತಿರಲು ಅದರಲ್ಲಿ ಅಮೃತದ ರುಚಿಯು ಉತ್ಪನ್ನವಾದರೆ ಮತ್ತು ಅಲ್ಲಿಯೇ ದೈವಯೋಗದಿಂದ ಪಂಚಮ ಸ್ವರದಂಥ ನಾದವು ಕಿವಿಗೆ ಇಂಪಾಗಿ ಕೇಳಹತ್ತಿತು. ॥ ೨೦ ॥ ಅಂದರೆ ಆ ಸುಗಂಧಮಯವಾದ ಗಾಳಿಯ ಸ್ಪರ್ಶದಿಂದ ಸರ್ವಾಂಗವೂ ತಣ್ಣಗೇ ಆಗುವದು. ಮತ್ತು

ಸ್ವಾದದಿಂದ ನಾಲಿಗೆಗೆ ಸಮಾಧಾನವಾಗುವದು. ಅದರಂತೆಯೇ ಮಧುರ ಸ್ವರವನ್ನು ಕೇಳಿದ ಕೂಡಲೇ ಕರ್ಣಗಳು ಆನಂದದಿಂದ ಕೊಂಡಾಡುವವು. ॥ ೨೧ ॥ ಅದೇ ಪ್ರಕಾರ ಈ ಕಥೆಯನ್ನು ಕೇಳುವದರಿಂದ ಕಿವಿಗಳಿಗೆ ಪಾರಣೆಯಾದೀತು. (ಬಹು ದಿನಸಗಳಿಂದ ಸತ್ಕಥೆಯ ಶ್ರವಣವಿಲ್ಲದೇ ಉಪೋಷಣಮಾಡಿದ ಕರ್ಣಗಳು ಈ ದಿವಸ ಗೀತಾಮೃತ ಶ್ರವಣರೂಪೀ ಭೋಜನದಿಂದ ತೃಪ್ತಿಹೊಂದಿದವು.) ಮತ್ತು ಸಂಸಾರ ಸುಖದಿಂದ ಯಾವದೊಂದು ವಿಕಾರವಾಗದೇ ಅದು ತನ್ನಿಂದತಾನೇ ಇಲ್ಲದಂತೆ ಆಗುವದು. ॥ ೨೨ ॥ ಆದರೆ ಮಂತ್ರಗಳಿಂದಲೇ ಶತ್ರುಗಳನ್ನು ನಾಶಪಡಿಸುವ ಸಾಮರ್ಥ್ಯವಿದ್ದರೆ ವ್ಯರ್ಥವಾಗಿ ಶಸ್ತ್ರಾಸ್ತ್ರಗಳನ್ನೇಕೆ ಧರಿಸಬೇಕು ! ಅದರಂತೆಯೇ ಹಾಲು ಸಕ್ಕರೆ ಕುಡಿಯುವದರಿಂದಲೇ ರೋಗನಿವಾರಣೆಯಾಗುವಂತಿದ್ದರೆ, ವಿಷಮಯವಾದ ಬೇವಿನರಸವನ್ನೇಕೆ ಕುಡಿಯಬೇಕು ? ॥ ೨೩ ॥ ಅದೇ ಪ್ರಕಾರ ಮನೋನಿಗ್ರಹವನ್ನು ಮಾಡದೇ, ಇಂದ್ರಿಯಗಳಿಗೆ ದುಃಖಕೊಡದೇ, ಈ ಗೀತಾಮೃತ ಶ್ರವಣದಲ್ಲಿಯೇ ಪ್ರತ್ಯಕ್ಷ ಮೋಕ್ಷಸುಖ ಇರುತ್ತದೆ ॥ ೨೪ ॥ ಆದುದರಿಂದ ನಿವೃತ್ತಿದಾಸರಾದ ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ— ನಿಮ್ಮ ಮನಸಿನಲ್ಲಿ ಎಷ್ಟು ಉತ್ಕಟವಾದ ಇಚ್ಛೆಯುಂಟೋ ? ಅಷ್ಟು ಇಚ್ಛೆಯಿಂದ ಈ ಗೀತಾರ್ಥವನ್ನು ಕೇಳಬೇಕು. ॥ ೨೫ ॥

**ಶ್ರೀಮದ್ಭಗವದ್ಗೀತೆಯ ಮತ್ತು ಜ್ಞಾನೇಶ್ವರಿಯ ಸರಲ, ಸುಲಭ ಕನ್ನಡ ಭಾಷಾಂತರದ ನಾಲ್ಕನೆಯ ಅಧ್ಯಾಯವು**

## ಸಮಾಪ್ತವು

## ❁ ಶ್ರೀಕೃಷ್ಣಾರ್ಪಣಮಸ್ತು ❁



# ಜ್ಞಾನೇಶ್ವರಿ

## ಐದನೆಯ ಅಧ್ಯಾಯವು

**ಅರ್ಜುನ ಉವಾಚ—**

**ಸನ್ಯಾಸಂ ಕರ್ಮಣಾಂಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇಬ್ರೂಹಿ ಸುನಿಶ್ಚಿತಮ್ ॥ ೧ ॥**

[ **ಸನ್ಯಾಸಂಕರ್ಮಣಾಂ ಕೃಷ್ಣೇತಿ** ] ಮಗ ಪಾರ್ಥ ಶ್ರೀಕೃಷ್ಣಾತೇ ಮ್ಹಣೇ । ಹಾ ಹೋ ಹೇ ಕೈಸೇ ತುಮಚೇ ಬೋಲಣೇ । ಏಕ ಹೋಯ ತರೀ ಅಂತಃಕರಣೇ । ವಿಚಾರೂಯೇ ॥ ೧ ॥ ಮಾಗಾ ಸಕಳ ಕರ್ಮಾಚಾ ಸನ್ಯಾಸ । ತುಮ್ಹೀಚ ನಿರೋಪಿಲಾ ಹೋತಾ ಬಹುವಸ । ತರೀ ಕರ್ಮಯೋಗೀ ಕೇವೀ ಅತಿರಸ । ಪೋಖೀತಸಾ ಪುಢತೀ ॥ ೨ ॥ ಐಸೇ ವ್ಯರ್ಥ ಹೇ ಬೋಲತಾ । ಆಮ್ಹಾ ನೇಣ ತಯಾಚ್ಯಾ ಚಿತ್ತಾ । ಆಪುಲಿಯೇ ಚಾಡೇ ಶ್ರೀಅನಂತಾ । ಉಮಜ ನೋಹೇ ॥ ೩ ॥ ಐಕೇ ಏಕಸಾರಾತೇ ಬೋಧಿಜೇ । ತರೀ ಏಕನಿಷ್ಠಚೀ ಬೋಲಿಜೇ । ಹೇ ಆಣಿಕೀ ಕಾಯ ಸಾಂಗಿಜೇ । ತುಮ್ಹಾಪ್ರತಿ ॥ ೪ ॥ ತರೀ ಯಾಚಿಲಾಗೀ ತುಮತೇ । ಮ್ಯಾರಾವುಳಾಸಿ ವಿನವಿಲೇ ಹೋತೇ । ಜೇ ಹಾ ಪರಮಾರ್ಥ ಧ್ವನಿತೇ । ನ ಬೋಲಾವಾ ॥ ೫ ॥ ಪರೀ ಮಾಗೀಲ ಅಸೋ ದೇವಾ । ಆತಾ ಪ್ರಸ್ತುತೀ ಉಕಲ ದೇಖಾವಾ । ಸಾಂಗೇ ದೋಹೀಮಾಜೀ ಬರವಾ । ಮಾರ್ಗ ಕವಣ ॥ ೬ ॥ ಜೋ ಪರಿಣಾಮೀಚಾ ನಿರ್ವಾಳಾ । ಅಚುಂಬಿತ ಯೇ ಫಳಾ । ಆಣಿ ಅನುಷ್ಠಿತಾ ಪ್ರಾಂಜಳಾ । ಸಾವಿಯಾಚಿ ॥ ೭ ॥ ಜೈಸೇ ನಿದ್ರೇಚೆ ಸುಖ ನ ಮೋಡೇ । ಆಣಿ ಮಾರ್ಗ ತರೀ ಬಹುಸಾಲ ಸಾಂಡೇ । ತೈಸೆ ಸುಖಾಸನಾ ಸಾಂಗಡೇ। ಸೋಹಪೇ ಹೋಯ ॥ ೮ ॥ ಯೇಣೇ ಅರ್ಜುನಾಚೇನಿ ಬೋಲೇ । ದೇವೋಮನೀ ರಿಝುಲೇ । ಮಗ ಹೋಯಿಲ ಐಕೇ ಮ್ಹಣಿತಲೇ । ಸಂತೋಷೋನಿಯಾ ॥ ೯ ॥ ದೇಖಾ ಕಾಮಧೇನು ಐಸೀ ಮಾಯೇ । ಸದೈವಾ ಜಯಾ ಹೋಯೇ । ತೋಚಂದ್ರಹೀ ಪರೀಲಾಹೇ । ಖೇಳಾವಯಾ ॥ ೧೦ ॥ ಪಾಹೇಪಾ ಶ್ರೀ ಶಂಭೂಚೀ ಪ್ರಸನ್ನತಾ । ತಯಾ ಉಪಮನ್ಯೂಚಿಯಾ ಆರ್ತಾ । ಕಾಯ ಕ್ಷೀರಾಬ್ಧಿ ದೂಧಭಾತಾ । ದೇಇಜೇಚಿನಾ ॥ ೧೧ ॥ ತೈಸಾ ಔದಾರ್ಯಾಚಾ ಕುರುತಾ । ಶ್ರೀಕೃಷ್ಣ ಆಪು ಜಾಹಾಲಿಯಾ ಸುಭಟಾ । ಕಾ ಸರ್ವ ಸುಖಾಚಾ ವಸೌಟಾ । ತೋಚಿ ನೋಹಾವಾ ॥ ೧೨ ॥ ಏಥ ಚಮತ್ಕಾರ ಕಾಯಸಾ । ಗೋಸಾವೀ ಶ್ರೀ ಲಕ್ಷ್ಮೀಕಾಂತಾ ಐಸಾ । ಆತಾ ಆಪುಲಿಯಾ ಸವೇಸಾ । ಮಾಗಾವಾ ಕೀ ॥ ೧೩ ॥ ಮ್ಹಣೋನಿ ಅರ್ಜುನೇ ಮ್ಹಣಿತಲೇ । ತೇ ಹಾಂಸೋನಿ ಯೇರೀ ದಿಧಲೇ । ತೇಚಿ ಸಾಂಗೇನ ಬೋಲಿಲೇ । ಕಾಯ ಕೃಷ್ಣೇ ॥ ೧೪ ॥

**ಅರ್ಥ**— ಆ ಮೇಲೆ ಅರ್ಜುನನು ಶ್ರೀಕೃಷ್ಣನಿಗೆ ಅನ್ನುತ್ತಾನೆ— ಹೇ ದೇವಾ ! ಶ್ರೀಕೃಷ್ಣಾ, ನಿಮ್ಮ ಮಾತು ದ್ವಿವಿಧವಾಗಿರುವದು. ನೀವು ಏನಾದರೂ ಒಂದೇ ನಿಶ್ಚಯಾತ್ಮಕ ಮಾತು ಹೇಳಿದರೆ, ಅದನ್ನು ಅಂತಃಕರಣಪೂರ್ವಕವಾಗಿ ವಿಚಾರಿಸುತ್ತೇನೆ. ॥ ೧ ॥ ಸರ್ವಕರ್ಮದ ತ್ಯಾಗಮಾಡಬೇಕೆಂದು ಹಲವು ಪರಿಯಿಂದ ನೀವೇ ಮೊದಲಿಗೆ ನಿರೂಪಣ ಮಾಡಿದಿರಿ. ಈಗ ಕರ್ಮಮಾಡುವದರ ದೆಸೆಯಿಂದ ಮತ್ತೇಕೆ ಆಗ್ರಹಮಾಡುತ್ತಿರುವಿರಿ ? ॥ ೨ ॥ ಅನಂತಾ ! ಹೀಗೆ ನಿಮ್ಮ ಎರಡು ತರದ ಭಾಷಣವು ನನ್ನಂಥ ಅಜ್ಞಾನಿಯ ಚಿತ್ತದಲ್ಲಿ ಹೊಳೆಯುವ ಬಗೆ ಹೇಗೆ ?

॥ ೩ ॥ ದೇವಾ ಕೇಳು ! ಒಂದೇ ತತ್ತ್ವದ ಬೋಧವಮಾಡುವದಿದ್ದರೆ ಒಂದೇ ಮಾರ್ಗವನ್ನು ಹೇಳಬೇಕು. ಇದನ್ನು ಅನ್ಯರು ನಿಮಗೆ ತಿಳಿಸಬೇಕಾಗಿರುವುದೇ ? ॥ ೪ ॥ ಇದರ ದೆಸೆಯಿಂದಲೇ ನಾನು ಮೊದಲಿಗೆ ವಿನಂತಿ ಮಾಡಿ, ಈ ಪಾರಮಾರ್ಥವನ್ನು ಗೂಢವಾದ ಅರ್ಥದಿಂದ ಹೇಳಬಾರದೆಂದು ನಿಮಗೆ ಕೇಳಿಕೊಂಡಿದ್ದೆನು. ॥ ೫ ॥ ಆದರೆ ದೇವಾ ! ಆ ಹಿಂದಿನ ಮಾತು ಹಾಗೇ ಇರಲಿ, ಪ್ರಸ್ತುತ. ಎರಡೂ ಮಾರ್ಗಗಳಲ್ಲಿ ಉತ್ತಮವಾದ ಮಾರ್ಗವಾವುದೆಂಬುದನ್ನು ನನಗೆ ಸ್ಪಷ್ಟಮಾಡಿ ಹೇಳಬೇಕು. ॥ ೬ ॥ ಆ ಮಾರ್ಗವು ಕೊನೆಯ ವರೆಗೆ ಮುಟ್ಟುವಂತಹದೂ, ತಪ್ಪದೇ ಫಲ ಕೊಡುವಂತಹದೂ, ಮತ್ತು ಆಚರಿಸಲು ಸುಲಭವಾದುದೂ, ಇರಬೇಕು. ॥ ೭ ॥ ಯಾವ ಪ್ರಕಾರ ಸುಲಭ ಮತ್ತು ಸುಖಾವಹ ವಾಹನವು ಇರುವದರಿಂದ ನಿದ್ದೆಯನ್ನು ಕೆಡಿಸದೇ ಬಹುದೂರವಾದ ಮಾರ್ಗವನ್ನು ಕ್ರಮಿಸಲು ಬರುತ್ತದೋ, ಅದೇ ಪ್ರಕಾರ ನೀವು ನನಗೆ ಸುಲಭಸಾಧನವನ್ನು ಹೇಳಬೇಕು. ॥ ೮ ॥ ಈ ಪ್ರಕಾರ ಅರ್ಜುನನ ಸಂಭಾಷಣವನ್ನು ಕೇಳಿದ ಮೇಲೆ ಭಗವಾನ್ ಶ್ರೀಹರಿಯು ಮನಸಿನಲ್ಲಿ ಬಹಳೇ ಅಂತಃಕರಣಯುಕ್ತನಾಗಿ ಪ್ರಸನ್ನನಾದನು. ಮತ್ತು ಪರಮ ಉಲ್ಹಾಸದಿಂದ ಅರ್ಜುನನಿಗೆ ಅನ್ನುತ್ತಾನೆ— ನೀನು ಅನ್ನುವಂತೆಯೇ ಆಗುವದು. ಕೇಳು. ॥ ೯ ॥ ಪ್ರಾರಬ್ಧವಾನ್ ಪುರುಷನಿಗೆ ಕಾಮಧೇನುವಿನಂತಹ ತಾಯಿಯು ದೊರಕಿದರೆ ಅವನು ಆಡಲಿಕ್ಕೆ ಚಂದ್ರನನ್ನು ಬೇಡಿದರೆ ದೊರಕಬಹುದು. ಹೀಗೆ ನೋಡು. ಉಪಮನ್ಯುವಿಗೆ ಶ್ರೀಶಂಕರನು ಪ್ರಸನ್ನನಾದ ಮೇಲೆ ಅವನ ಅಪೇಕ್ಷೆಯಂತೆಯೇ ಹಾಲು-ಅನ್ನದ ಬದಲು ಅವನಿಗೆ ಕ್ಷೀರಸಾಗರವನ್ನು ಕೊಡಲಿಲ್ಲವೇ ? ॥ ೧೧ ॥ ಅದರಂತೆಯೇ ಔದಾರ್ಯದ ಭಾಂಡಾರವೇ ಆದ ಶ್ರೀಕೃಷ್ಣ ಪರಮಾತ್ಮನು ಆ ಅರ್ಜುನನಿಗೆ ದೊರಕಿರಲು ಸುಖದ ವಾಸಸ್ಥಾನವೇ ಅವನೇಕೆ ಆಗಕೂಡದು ? ಅರ್ಥಾತ್ ಆಗೇ ಆಗುವನು. ॥ ೧೨ ॥ ಇಲ್ಲವೇ ಅರ್ಜುನನಿಗೆ ಶ್ರೀಲಕ್ಷ್ಮೀಕಾಂತನಂತಹ ಯಜಮಾನನು (ಧನಿಯು) ದೊರಕಿರಲು ಅವನು ಸ್ವೇಚ್ಛೆಯಿಂದ ತನ್ನ ಅಪೇಕ್ಷೆಯ ಪ್ರಕಾರ ಬೇಡಕೂಡದೇಕೆ ? ಇದರಲ್ಲಿ ಆಶ್ಚರ್ಯವೇನು ? ॥ ೧೩ ॥ ಆದರೆ ಅರ್ಜುನನು ಯಾವ ಯಾವದನ್ನು ಬೇಡಿದನೋ ಆ ಎಲ್ಲ ಪದಾರ್ಥಗಳನ್ನು ಅವನಿಗೆ ಸುಪ್ರಸನ್ನಮುಖದಿಂದ ಭಗವಾನ್ ಶ್ರೀಕೃಷ್ಣ ಪರಮಾತ್ಮನು ಪೂರೈಸಿಕೊಟ್ಟನು. ಅದು ಯಾವುದೆಂಬುದನ್ನು ಈಗ ಹೇಳುತ್ತೇನೆ. ॥ ೧೪ ॥

**ಶ್ರೀ ಭಗವಾನುವಾಚ—**

**ಸನ್ನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥ ೨ ॥**

**[ ಸನ್ಯಾಸಃ ಇತಿ ]** ತೋ ಮ್ಹಣೇ ಗಾ ಕುಂತೀ ಸುತಾ । ಹೇ ಸನ್ಯಾಸ ಯೋಗ ವಿಚಾರಿತಾ । ಮೋಕ್ಷಕರ ತತ್ತ್ವತಾ । ದೋನೀಹೀ ಹೋತೀ ॥ ೧೫ ॥ ತರಿ ಜಾಣಾನೇಣಾ ಸಕಳಾ । ಹಾ ಕರ್ಮಯೋಗುಕೀರ ಪ್ರಾಂಜಳಾ । ಜೈಸೀ ನಾವ ಸ್ತ್ರಿಯಾ ಬಾಳಾ । ತೋಯ ತರಣೀ ॥ ೧೬ ॥ ತೈಸೇ ಸಾರಾಸಾರ ಪಾಹಿಜೇ । ತರೀ ಸೋಹಪಾ ಹಾಚಿ ದೇಖಿಜೇ । ಯೇಣೇ ಸನ್ಯಾಸಫಳ ಲಾಹಿಜೇ । ಅನಾಯಾಸೇ ॥ ೧೭ ॥ ಆತಾ ಯಾಚಿಲಾಗೀ ಸಾಂಗೇನ । ತುಜ ಸಂನ್ಯಾಸಿಯಾಚೇ ಚಿನ್ಹ । ಮಗ ಸಹಜೇ ಹೇ ಅಭಿನ್ನ । ಜಾಣಸೀತೂ ॥ ೧೮ ॥

**ಅರ್ಥ—** ಭಗವಾನ್ ಶ್ರೀ ಕೃಷ್ಣನು ಅನ್ನುತ್ತಾನೆ- ಕುಂತೀ ಕುಮಾರನೇ ! ನಿಜವಾಗಿ ವಿಚಾರಮಾಡಿ ನೋಡಿದರೆ ಕರ್ಮಯೋಗ ಮತ್ತು ಕರ್ಮತ್ಯಾಗ, ಇವೆರಡೂ ಮೋಕ್ಷದಾಯಕಗಳಾಗಿರುತ್ತವೆ. ॥ ೧೫ ॥ ಆದರೆ ಸಣ್ಣ ಹುಡುಗರಿಗೂ, ಸ್ತ್ರೀಯರಿಗೂ ನದಿಯನ್ನು ದಾಟ ಹೋಗಲು ನಾವೆಯು ಹೇಗೆ ಸುಲಭವಾಗಿರುವದೋ ಹಾಗೆಯೇ ಜ್ಞಾನಿಗಳೂ, ಅಜ್ಞಾನಿಗಳಿಗೂ ಕೂಡ ಜನನ-ಮರಣ ರೂಪೀ ಸಂಸಾರ ಸಾಗರವನ್ನು ದಾಟಲು ಕರ್ಮಯೋಗವು ನಿಜವಾಗಿ ಸುಲಭ ಸಾಧನವಾಗಿರುತ್ತದೆ. ॥ ೧೬ ॥ ಅದರಂತೆಯೇ ಸಾರಾಸಾರ ವಿಚಾರಮಾಡಿ ನೋಡಿದರೆ ಇದೇ

ಯೋಗವು ಸುಲಭವಾಗಿರುವದು. ಆದರೆ ಈ ಕರ್ಮಯೋಗದ ಆಚರಣೆ ಮಾಡುವದರಿಂದ ಅನಾಯಾಸವಾಗಿ ಕರ್ಮತ್ಯಾಗದ ಫಲವಾದರೂ ದೊರಕುತ್ತದೆ. ॥ ೧೭ ॥ ಇದೇ ಕಾರಣದ ದೆಸೆಯಿಂದ ನಿನಗೆ ಕರ್ಮಸನ್ಯಾಸ ಮಾಡುವವರ ಗುರ್ತನ್ನು ಹೇಳುವೆನು. ಅಂದರೆ ಕರ್ಮಯೋಗ ಮತ್ತು ಸನ್ಯಾಸಯೋಗ ಈ ಎರಡೂ ಒಂದೇ ಆಗಿರುತ್ತವೆಂಬದು ನಿನಗೆ ಸಹಜವಾಗಿ ನಿಜವೆಂದು ತೋರುವದು. ॥ ೧೮ ॥

**ಜ್ಞೇಯಃ ಸ ನಿತ್ಯಸನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ ॥ ೩ ॥**

**[ ಜ್ಞೇಯಃ ಸ ನಿತ್ಯಸನ್ಯಾಸೀತಿ ]** ತರೀ ಗೇಲಿಯಾಚೀಸೇ ನ ಕರೀ । ನ ಪವತಾ ಚಾಡ ನ ಧರೀ । ಜೋ ಸುನಿಶ್ಚಳ ಅಂತರೀ । ಮೇರೂ ಜೈಸಾ ॥ ೧೯ ॥ ಆಣಿ ಮೀ ಮಾಝೀ ಐಸೀ ಆಠವಣ । ವಿಸರಲೇ ಜಯಾಚೇ ಅಂತಃಕರಣ । ಪಾರ್ಥಾ ತೋ ಸನ್ಯಾಸೀ ಜಾಣ । ನಿರಂತರ ॥೨೦॥ ಜೋ ಮನೇ ಐಸಾ ಜಾಹಲಾ । ಸಂಗೀ ತೋಚಿ ಸಾಂಡಿಲಾ । ಮ್ಹಣೋನಿ ಸುಖೇ ಸುಖ ಪಾವಲಾ । ಅಖಂಡಿತ ॥ ೨೧ ॥ ಆತಾ ಗ್ರಹಾದಿಕ ಆಘವೇ । ತೇ ಕಾಹೀ ನಲಗೇ ತ್ಯಜಾವೇ । ಜೇ ಘೇತೇ ಜಾಹಾಲೇ ಸ್ವಭಾವೇ । ನಿಃಸಂಗ ಮ್ಹಣವೂನಿ ॥ ೨೨ ॥ ದೇಖೇ ಅಗ್ನಿ ವಿಝೋನಿ ಜಾಯೇ । ಮಗ ಜೇ ರಾಖೊಂಡೀ ಕೇವಳ ಹೋಯೇ । ತೈ ತೇ ಕಾಪುಸೇ ಗಿಂವಸೂಯೇ । ಜಿಯಾಪರೀ ॥ ೨೩ ॥ ತೈಸಾ ಅಸತೇನಿ ಉಪಾಧೀ । ನಾಕಳಿಜೇ ತೋ ಕರ್ಮಬಂಧೀ । ಜಯಾಚಿಯೇ ಬುದ್ಧಿ । ಸಂಕಲ್ಪ ನಾಹೀ ॥೨೪॥ ಮ್ಹಣೋನಿ ಕಲ್ಪನಾ ಜೈಸಾಂಡೇ । ತೈಚಿ ಗಾ ಸನ್ಯಾಸು ಘಡೇ । ಯಾ ಕಾರಣೇ ದೋನಿ ಸಾಂಗಡೇ । ಸನ್ಯಾಸ ಯೋಗ ॥ ೨೫ ॥

**ಅರ್ಥ**— ಯಾವನು ಕಳೆದು ಹೋದ ವಸ್ತುವಿನ ಸ್ಮರಣೆ ಮಾಡುವದಿಲ್ಲವೋ, ಮತ್ತು ಯಾವದಾದರೊಂದು ವಸ್ತುವು ದೊರಕದಿದ್ದರೆ ಅದರ ಇಚ್ಛೆಯನ್ನು ಮಾಡುವದಿಲ್ಲವೋ, ಯಾವನು ಮೇರುಪರ್ವತದೋಪಾದಿಯಲ್ಲಿ ಅಂತರಂಗದಲ್ಲಿ ಸ್ಥಿರನಾಗಿರುತ್ತಾನೋ, ॥ ೧೯ ॥ ಪಾರ್ಥಾ ಯಾವನ ಅಂತಃಕರಣದಲ್ಲಿ ನಾನು, ನನ್ನದೆಂಬ ಸ್ಮರಣೆ ಸಹ ಉಂಟಾಗುವದಿಲ್ಲವೋ, ಅವನು ನಿತ್ಯ ಸನ್ಯಾಸಿಯೆಂದು ತಿಳಿ. ॥ ೨೦ ॥ ಯಾವನ ಮನಸಿನಲ್ಲಿ ಇಂತಹ ಸ್ಥಿತಿಯು ಉಂಟಾಗಿರುತ್ತದೋ, ಅವನಲ್ಲಿ ವಿಷಯ ಸುಖವು ಇಲ್ಲದಂತೆ ಆದುದರಿಂದ ಅವನು ನಿಸ್ಸಂಗವಾಗಿರುವನು. ಅವನಿಗೇನೇ ಯಾವಾಗಲೂ ಸುಖದ ಪ್ರಾಪ್ತಿಯಾಗುತ್ತದೆ. ॥ ೨೧ ॥ ಅವನು ಮನೆಮಾರುತ್ಯಾಗಮಾಡಲು ಅವಶ್ಯವಿಲ್ಲ. ಯಾಕಂದರೆ ಅವುಗಳಲ್ಲಿ ತನ್ನ ಸಂಬಂಧವೇ ಇಲ್ಲವೆಂಬುದನ್ನು ಆತನು ಅರಿತಿರುವನು. ॥ ೨೨ ॥ ಅಗ್ನಿಯು ಆರಿ ಹೋದಮೇಲೆ ಉಳಿದ ಕರುಕು ಬೂದಿಯನ್ನು ಹೇಗೆ ಅರಳಿಯಲ್ಲಿ ಸುತ್ತಿ ಇಡಲಿಕ್ಕೆ ಬರುವಂತೆ ॥ ೨೩ ॥ ಯಾವನ ಬುದ್ಧಿಯು 'ಅಹಂ ಕರ್ತೃತ್ವಾಭಿಮಾನ'ದ ವಿಕಾರದಿಂದ ಮುಕ್ತವಾಗಿರುವದೋ, ಅವನು ಸಂಸಾರದ ಉಪಾಧಿಯಲ್ಲಿದ್ದರೂ ಕರ್ಮಬಂಧನದಿಂದ ಕಟ್ಟಲ್ಪಡುವದಿಲ್ಲ. ॥ ೨೪ ॥ ಆದುದರಿಂದ ಯಾವಾಗ ಮನಸಿನೊಳಗಿನ ಕಲ್ಪನೆಗಳು ಇಲ್ಲದಂತಾಗುತ್ತವೆಯೋ ಆವಾಗ್ಗೇ ಸನ್ಯಾಸವು ಪ್ರಾಪ್ತವಾಗುತ್ತದೆ, ಮತ್ತು ಇದೇ ಕಾರಣದ ದೆಸೆಯಿಂದ ಕರ್ಮತ್ಯಾಗ ಮತ್ತು ಕರ್ಮಯೋಗ ಇವೆರಡೂ ಸಮಾನವಾಗಿಯೇ ಇರುತ್ತವೆ. ॥ ೨೫ ॥

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ॥ ೪ ॥**

**[ ಸಾಂಖ್ಯಯೋಗೌ ಪೃಥಗ್ಬಾಲಾಃ ಇತಿ ]** ಯೇರ್ಹವೀ ತರೀ ಪಾರ್ಥಾ । ಜೇ ಮೂರ್ಖ ಹೋತೀ ಸರ್ವಥಾ । ತೇ ಸಾಂಖ್ಯಯೋಗ ಸಂಸ್ಥಾ । ಜಾಣತೀ ಕೇವೀ ॥ ೨೬ ॥ ಸಹಜೇ ತೇ

ಅಜ್ಞಾನ। ಮ್ಹಣೋನಿ ಮ್ಹಣತೀ ತೇ ಭಿನ್ನ। ಯೇರ್ಹವೀ ದೀಪಾಪ್ರತಿ ಕಾ ಈ ಅನಾನ। ಪ್ರಕಾಶ ಅಹಾತೀ ॥ ೨೭ ॥ ಪೈ ಸಮ್ಯಕ ಏಕೇ ಅನುಭವೇ। ಜಿಹೀಂ ದೇಖಿಲೇ ತತ್ವ ಆಘವೇ। ದೋಹೀ ತೇಹೀ ಐಕ್ಯಭಾವೇ। ಮಾನಿತೀ ಗಾ ॥ ೨೮ ॥

**ಅರ್ಥ**— ಇದರ ಹೊರ್ತು ಪಾರ್ಥಾ ! ಯಾರು ಸಂಪೂರ್ಣವಾಗಿ ಅಜ್ಞಾನಿಗಳಿರುವರೋ ಅವರಿಗೆ ಜ್ಞಾನ ಯೋಗ ಮತ್ತು ಕರ್ಮಯೋಗ ಇವುಗಳ ರೀತಿಯು ಹೇಗೆ ತಿಳಿಯುವದು ? ॥ ೨೬ ॥ ಸ್ವಾಭಾವಿಕವಾದ ಅಜ್ಞಾನದ ದೆಶೆಯಿಂದ ಈ ಎರಡೂ ಯೋಗಗಳು ಭಿನ್ನವಾಗಿರುವವೆಂದು ಅವರು ಅನ್ನುತ್ತಾರೆ. ಆದರೆ ಒಂದೇ ದೀವಿಗೆಯ ಹತ್ತರ ಬೇರೆ ಬೇರೆ ಪ್ರಕಾಶಗಳು ಉಂಟಾಗುವವೇನು ? ॥ ೨೭ ॥ ಆದಾಗ್ಯೂ ಅವರು ಸಮದೃಷ್ಟಿಯ ಜ್ಞಾನಾನುಭವದಿಂದ ಪರಬ್ರಹ್ಮರೂಪದ ತತ್ವವನ್ನು ತಿಳಿದವರಾಗಿರುತ್ತಾರೆ. ಅವರು ಈ ಎರಡೂ ಯೋಗಗಳು ಒಂದೇ ಆಗಿರುವವೆಂದು ಅರಿತಿರುತ್ತಾರೆ. ॥ ೨೮ ॥

**ಯತ್ಸಾಂಖ್ಯೈಃ ಪ್ರಾಪ್ಯತೇಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

**[ ಯತ್ಸಾಂಖ್ಯೈರಿತಿ ]** ಆಣಿ ಸಾಂಖ್ಯೀ ಜೇ ಪಾವಿಜೇ। ತೇಚೀ ಯೋಗೀ ಗಮಿಜೇ। ಮ್ಹಣೋನಿ ಐಕ್ಯತಾದೋಹೀತೇ ಸಹಜೇ। ಇಯಾ ಪರೀ ॥ ೨೯ ॥ ದೇಖೇ ಆಕಾಶಾ ಆಣಿ ಅವಕಾಶಾ। ಭೇದ ನಾಹೀ ಜೈಸಾ। ತೈಸೇ ಐಕ್ಯ ಯೋಗಸನ್ಯಾಸಾ। ಜಿಯಾ ಜೋ ॥ ೩೦ ॥ ತಯಾಸೀಚಿ ಜಗೀ ಪಾಹಲೇ। ಆಪಣಪೇ ತೇಣೇಂಚಿ ದೇಖಿಲೇ। ಜಯಾ ಸಾಂಖ್ಯಯೋಗ ಜಾಣವಲೇ। ಭೇದೇವಿಣ ॥ ೩೧ ॥

**ಅರ್ಥ**— ಮತ್ತು ಜ್ಞಾನಯೋಗದಿಂದ ಯಾವ ಫಲ ಪ್ರಾಪ್ತಿಯಾಗುವದೋ ಅದೇ ಫಲಪ್ರಾಪ್ತಿಯು ಕರ್ಮ ಯೋಗದಿಂದಲಾದರೂ ಆಗುತ್ತದೆ. ಈ ರೀತಿಯಾಗಿ ಎರಡದರಲ್ಲಿಯೂ ಸಹಜವೇ ಐಕ್ಯತೆಯು ಕಂಡುಬರುತ್ತದೆ. ॥ ೨೯ ॥ ಆಕಾಶ ಮತ್ತು ಬೈಲು ಇದರಲ್ಲಿ ಹೇಗೆ ಭೇದವಿಲ್ಲವೋ, ಹಾಗೆಯೇ ಜ್ಞಾನಯೋಗ ಮತ್ತು ಕರ್ಮಯೋಗ ಇವುಗಳಲ್ಲಿ ಭೇದವಿಲ್ಲವೆಂದು ಯಾರು ತಿಳಿಯುತ್ತಾರೋ, ॥ ೩೦ ॥ ಅವರು ಜ್ಞಾನಯೋಗ ಮತ್ತು ಕರ್ಮಯೋಗ ದಲ್ಲಿ ಭಿನ್ನಭಾವನೆಯನ್ನು ಕಾಣುವದಿಲ್ಲ. ಅವರಿಗೇ ಮಾತ್ರ ಈ ಜಗತ್ತಿನಲ್ಲಿ ಸೂರ್ಯೋದಯವಾಗಿರುವದು. ( ಜ್ಞಾನಪ್ರಾಪ್ತಿ ಆಗಿರುವದು ) ಅವರೇ ಆತ್ಮಸ್ವರೂಪವನ್ನು ಅರಿತವರು. ॥ ೩೧ ॥

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ॥ ೬ ॥**

**[ ಸಂನ್ಯಾಸಸ್ತ್ವಿತಿ ]** ಜೋ ಯುಕ್ತಿ ಪಂಥೇ ಪಾರ್ಥಾ। ಚಢೇ ಮೋಕ್ಷ ಪರ್ವತಾ। ತೋ ಮಹಾ ಸುಖಾಚಾ ನಿಮಥಾ। ವಹಿಲಾ ಪಾವೇ ॥ ೩೨ ॥ ಯೇರಾ ಯೋಗಸ್ಥಿತೀ ಜಯಾ ಸಾಂಡೇ। ತೋ ವಾಯಾಂಚಿ ಗಾ ಹವ್ಯಾಸೀ ಪಡೇ। ಪರೀ ಪ್ರಾಪ್ತಿ ಕಹೀ ನ ಘಡೇ। ಸನ್ಯಾಸಾಚೀ ॥ ೩೩ ॥

**ಅರ್ಥ**— ಪಾರ್ಥಾ ! ಯಾವನು ಕರ್ಮಮಾರ್ಗದಿಂದ ಮೋಕ್ಷರೂಪವಾದ ಪರ್ವತವನ್ನು ಹತ್ತುತ್ತಾನೋ ಅವನು ಆ ಪರ್ವತದ ಬ್ರಹ್ಮರೂಪಿ ಶಿಖರದ ಮೇಲೆ ತೀವ್ರವೇ ಮುಟ್ಟುತ್ತಾನೆ. ॥ ೩೨ ॥ ಯಾರು ಕರ್ಮಮಾರ್ಗದ ಆಚರಣೆ ಮಾಡುವದಿಲ್ಲವೋ, ( ಕರ್ಮಯೋಗದ ಸಹಾಯವಿಲ್ಲದೇ ಕರ್ಮಸನ್ಯಾಸಿಯಾಗುವದು ಕಠಿಣವು. ) ಅವರು ಜ್ಞಾನಪ್ರಾಪ್ತಿಯ ವಿಷಯದಲ್ಲಿ ವ್ಯರ್ಥವಾಗಿ ಕಷ್ಟಬಡುತ್ತಾರೆ. ಅವರಿಗೆ ಅದು ಎಂದೂ ಪ್ರಾಪ್ತವಾಗುವದಿಲ್ಲ. ॥೩೩॥

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವ ಭೂತಾತ್ಮ ಭೂತಾತ್ಮಾ ಕುರ್ವನ್ನಪಿ ನಲಿಪ್ಯತೇ ॥ ೭ ॥**

**[ ಯೋಗ ಯುಕ್ತೋ ವಿಶುದ್ಧಾತ್ಮೇತಿ ]** ಜೇಣೇ ಭ್ರಾಂತೀ ಪಾಸೂನಿ ಹಿರತಲೇ । ಗುರು ವಾಕ್ಯೇ ಮನ ಧುತಲೇ । ಮಗ ಆತ್ಮಸ್ವರೂಪೀ ಘಾತಲೇ । ರೋವೂನಿಯಾ ॥ ೩೪ ॥ ಜ್ಯೆಸೇ ಸಮುದ್ರೀ ಲವಣ ನ ಪಡೇ । ತವ ವೇಗಳೇ ಅಲ್ಪ ಆವಡೇ । ಮಗ ಹೋಯ ಸಿಂಧೂಚಿ ಏವಢೇ । ಮಿಳೇ ತೆಂವ್ಹಾ ॥ ೩೫ ॥ ತೈಸೇ ಸಂಕಲ್ಪೋನಿ ಕಾಢಿಲೇ । ಜಯಾಚೇ ಮನಚಿ ಚೈತನ್ಯ ಜಾಹಾಲೇ । ತೇಣೇ ಏಕದೇಶಿಯೇ ಪರೀ ವ್ಯಾಪಿಲೇ । ಲೋಕತ್ರಯ ॥ ೩೬ ॥ ಆತಾ ಕರ್ತಾ ಕರ್ಮ ಕರಾವೇ । ಹೇ ಖುಂಟಲೇ ತಯಾ ಸ್ವಭಾವೇ । ಆಣಿ ಕರೀ ಜರ್‍ಹೀ ಆಘವೇ । ತರ್‍ಹೀ ಅಕರ್ತಾ ತೋ ॥ ೩೭ ॥

**ಅರ್ಥ**— ಯಾವನು ತನ್ನ ಮನಸ್ಸನ್ನು ಭ್ರಮೆಯಿಂದ ಮುಕ್ತಮಾಡಿ ಅದನ್ನು ಗುರುವಾಕ್ಯದಿಂದ ಶುದ್ಧಪಡಿಸಿ ಆತ್ಮಸ್ವರೂಪದಲ್ಲಿ ಲೀನನಾಗಿರುತ್ತಾನೆ. ॥ ೩೪ ॥ ಎಲ್ಲಿಯ ವರೆಗೆ ಸಮುದ್ರದಲ್ಲಿ ಉಪ್ಪು ಹಾಕಿರುವದಿಲ್ಲವೋ ಅಲ್ಲಿಯ ವರೆಗೆ ಅದು ಸಮುದ್ರದಿಂದ ಬೇರೆಯಾಗಿ ಚಿಕ್ಕದಾಗಿ ಕಂಡು; ಸಮುದ್ರದಲ್ಲಿ ಬೆರೆತೊಡನೆಯೇ ಸಮುದ್ರವೆಲ್ಲವನ್ನೂ ಹೇಗೆ ವ್ಯಾಪಿಸುವದೋ, ॥ ೩೫ ॥ ಹಾಗೆಯೇ ಅವನ ಮನಸ್ಸು ಸಂಕಲ್ಪದಿಂದ ಬಿಡುಗಡೆ ಹೊಂದಿದ ಮೇಲೆ ಬ್ರಹ್ಮ ರೂಪದಲ್ಲಿ ಕೂಡಿ ಹೋಗಿರುತ್ತದೆ. ವಿಚಾರಿಸಿದರೆ ಅವನ ಮನಸ್ಸು ' ಏಕದೇಶೀ ' ಎಂಬುವದೇನೋ ನಿಜ. ಆದರೂ ಅವನು ತ್ರಿಭುವನ ವ್ಯಾಪ್ತನಾಗಿರುವನು. ॥ ೩೬ ॥ ಆ ಮೇಲೆ ಅವನಿಗೆ ನಾನು ಒಬ್ಬ ಕರ್ತಾ, ಇದು ಒಂದು ಕರ್ಮ ಮತ್ತು ನಾನು ಇಂಥಾದ್ದೇ ಒಂದು ಕ್ರಿಯಾ ( ಕಾರ್ಯ ) ಮಾಡತಕ್ಕದ್ದೆಂಬ ಮಾತು ಸ್ವಭಾವಗತ್ಯವಾಗಿ ಇಲ್ಲದಂತೆ ಆಗುತ್ತದೆ. ಅವನು ಜನರ ದೃಷ್ಟಿಗೆ ಸರ್ವ ಕರ್ಮಗಳನ್ನು ಮಾಡಿದವನಂತೆ ಕಂಡರೂ ನಿಜವಾಗಿ ಅವನು ( ಕರ್ಮ ದಿಂದ ) ಅಲಿಪ್ತನಿರುವನು. ॥ ೩೭ ॥

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ಗಚ್ಛನ್ಸ್ವಪನ್ ಶ್ವಸನ್ ॥ ೮ ॥**
**ಪ್ರಲಪನ್ವಿಸೃಜನ್ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥ ೯ ॥**

**[ ನೈವ ಕಿಂಚಿದಿತಿ ]** ಜೇ ಪಾರ್ಥಾ ತಯಾ ದೇಹೀ । ಮೀ ಐಸಾ ಆಠವೂ ನಾಹೀ । ತರೀ ಕರ್ತೃತ್ವ ಕೈಚೇ ಕಾಈ । ಉರೇ ಸಾಂಗೇ ॥ ೩೮ ॥ ಐಸೇ ತನುತ್ಯಾಗೇವಿಣ । ಅಮೂರ್ತಾಚೇ ಗುಣ । ದೀಸತೀ ಸಂಪೂರ್ಣ । ಯೋಗಯುಕ್ತಾ ॥ ೩೯ ॥ ಯೇರ್‍ಹವೀ ಆಣಿಕಾಂಚಿಯೇ ಪರೀ । ತೋಹೀ ಏಕ ಶರೀರೀ । ಅಶೇಷಾಹೀ ವ್ಯಾಪಾರೀ । ವರ್ತತ ದಿಸೇ ॥ ೪೦ ॥ ತೋಹೀ ನೇತ್ರೀ ಪಾಹೇ । ಶ್ರವಣೀ ಐಕತ ಆಹೇ । ಪರೀ ತೇಥಿಂಚಾ ಸರ್ವಥಾ ನೋಹೇ । ನವಲ ದೇಖೇ ॥ ೪೧ ॥ ಸ್ಪರ್ಶಾಸಿ ತರೀ ಜಾಣೇ । ಪರಿಮಳ ಸೇವೀ ಘ್ರಾಣೇ । ಅವಸರೋಚಿತ ಬೋಲಣೇ । ತಯಾಹಿ ಅಥಿ ॥ ೪೨ ॥ ಆಹಾರಾತೇ ಸ್ವೀಕಾರೀ । ತ್ಯಜಾವೇ ತೇ ಪರಿಹರೀ । ನಿದ್ರೇಚಿಯಾ ಅವಸರೀ । ನಿದಿಜೇ ಸುಖೇ ॥ ೪೩ ॥ ಆಪುಲೇನಿ ಇಚ್ಛಾವಶೇ । ತೋಹೀ ಗಾ ಚಾಲತ ದಿಸೇ । ಪೈ ಸಕಲ ಕರ್ಮ ಐಸೇ । ರಾಹಾಟೇ ಕೀರ ॥ ೪೪ ॥ ಹೇ ಸಾಂಗೋ ಕಾಈ ಏಕೈಕ । ದೇಖೇ ಶ್ವಾಸೋಚ್ಛ್ವಾಸಾದಿಕ । ಆಣಿ ನಿಮಿಷೋನ್ಮಿಷಾದಿಕ । ಆದಿಕರೂನಿ ॥ ೪೫ ॥ ಪಾರ್ಥಾ ತಯಾಚೇ ಠಾಯೀ । ಹೇ ಆಘವೇಚಿ ಅಥಿ ಪಾಹೀ । ಪರೀ ತೋ ಕರ್ತಾ ನವ್ಹೇ ಕಾಹೀ । ಪ್ರತೀತಿಬಳೇ ॥ ೪೬ ॥ ಜೈ ಭ್ರಾಂತಿಸೇಜೇ ಸುತಲಾ । ತೈ ಸ್ವಪ್ನಸುಖೇ ಭುತಲಾ । ಮಗ ತೋ ಜ್ಞಾನೋದಯೀ ಚೇತಲಾ । ಮ್ಹಣೋನಿಯಾ ॥ ೪೭ ॥

**ಅರ್ಥ**— ಕಾರಣ ಪಾರ್ಥಾ! ಅವನಿಗೆ ದೇಹದ ಸ್ಥಳದಲ್ಲಿ ಆತ್ಮಬುದ್ಧಿಯ ಸ್ಮರಣೆಯೇ ಉಳಿದಿರುವದಿಲ್ಲ. ಅಂದಬಳಿಕ ಅವನಲ್ಲಿ ನಾನು ಕರ್ತೃ ಎಂಬ ಅಭಿಮಾನವು ಹೇಗೆ ಉಳಿಯುವದು ಹೇಳು? ॥ ೩೮ ॥ ಈ ಪ್ರಕಾರ ಶರೀರ ತ್ಯಾಗಮಾಡದೇ ಆ ಯೋಗಯುಕ್ತ ಪುರುಷನಲ್ಲಿ ನಿರಾಕಾರ ಪರಬ್ರಹ್ಮನ ಸಂಪೂರ್ಣ ಗುಣಗಳು ದೃಷ್ಟಿಗೋಚರವಾಗುತ್ತವೆ. ॥ ೩೯ ॥ ಮಿಕ್ಕುಳಿದ ಜನರಂತೆ ಅವನು ಶರೀರಧಾರಿಯಾಗಿದ್ದು ಸರ್ವವ್ಯಾಪಾರ ಮಾಡುತ್ತಾನೆಂದು ಕಾಣುತ್ತದೆ. ॥ ೪೦ ॥ ಅವನು ನೇತ್ರದಿಂದ ನೋಡುತ್ತಾನೆ. ಕರ್ಣದಿಂದ ಕೇಳುತ್ತಾನೆ. ಆದರೂ ಶರೀರದ ಭಾವನೆಯಿಂದ ಲಿಪ್ತನಾಗಿರುವದಿಲ್ಲ. ಈ ಆಶ್ಚರ್ಯವನ್ನು ನೋಡು ॥ ೪೧ ॥ ಅವನಿಗೆ ಸ್ಪರ್ಶವಾದದ್ದು ತಿಳಿಯುತ್ತದೆ. ಅವನು ಮೂಗಿನಿಂದ ವಾಸನೆಯನ್ನು ತೆಗೆದುಕೊಳ್ಳುತ್ತಾನೆ. ಮತ್ತು ಅವನಿಗೆ ಸಮಯೋಚಿತವಾದ ಭಾಷಣವನ್ನು ಮಾಡಲಿಕ್ಕೆ ಬರುತ್ತದೆ. ॥ ೪೨ ॥ ಅವನು ಭೋಜನವನ್ನು ಮಾಡುತ್ತಾನೆ. ಚಲ್ಲುವಂಥ ಪದಾರ್ಥಗಳನ್ನು ಚಲ್ಲಿಕೊಡುತ್ತಾನೆ. ನಿದ್ದೆಮಾಡುವಾಗ ಸುಖದಿಂದ ನಿದ್ರಿಸುತ್ತಾನೆ ॥ ೪೩ ॥ ತನ್ನ ಅಪೇಕ್ಷೆಯಂತೆ ಅವನು ನಡೆಯುತ್ತಾನೆ. ಅದೇ ಪ್ರಕಾರ ಯಾವ ಯಾವ ಕಾಲಕ್ಕೆ ಯಾವ ಯಾವ ಕರ್ಮಗಳನ್ನು ಮಾಡತಕ್ಕವೋ ಅವುಗಳನ್ನೆಲ್ಲ ಮಾಡುತ್ತಾನೆ. ॥ ೪೪ ॥ ಇವುಗಳನ್ನು ಒಂದೊಂದು ಎಷ್ಟೆಂದು ಹೇಳುತ್ತಕೂಡಲಿ? ಹೀಗೆ ನೋಡು— ಉಸುರಾಡಿಸೋಣ, ಅದರಂತೆಯೇ ಕಣ್ಣುತೆರೆಯೋಣ ಮತ್ತು ಮುಚ್ಚೋಣ ಮುಂತಾದ, ॥ ೪೫ ॥ ಎಷ್ಟೋ ಕ್ರಿಯೆಗಳು ಅವನಲ್ಲಿ ದೃಷ್ಟಿಗೆ ಬೀಳುತ್ತವೆ. ಆದರೆ ಪಾರ್ಥಾ, ಆತ್ಮಾನುಭವ ಬಲದಿಂದ ಅವನು ಆ ಕ್ರಿಯೆಗಳ ಕರ್ತೃವಾಗಿರಲಾರನು. ॥ ೪೬ ॥ ಯಾವಾಗ ಅವನು ಭ್ರಾಂತಿರೂಪ ಹಾಸುಗೆಯ ಮೇಲೆ ಮಲಗಿದ್ದನೋ, ಆವಾಗ ಅವನು ಸ್ವಪ್ನಸುಖದಿಂದ ಭ್ರಮಿಷ್ಟನಾಗಿದ್ದನು. ಅದರಿಂದ (ತನ್ನ ನಿಜ ಸ್ವರೂಪವನ್ನು ಮರೆತು ದುಃಖಭಾಗಿಯಾಗಿದ್ದನು.) ಈಗ ಜ್ಞಾನೋದಯವಾಗಿ ಜಾಗ್ರತನಾಗಿರುವದರಿಂದ (ತಾನು ಸರ್ವಕರ್ತನಾದ ಪರಮಾತ್ಮ ಶ್ರೀಹರಿಯ ಅಂಶಭೂತನು ಸರ್ವ ಕರ್ಮಗಳಿಗೆ "ನಾಹಂ ಕರ್ತಾ ಹರಿಃ ಕರ್ತಾ" ಎಂಬ ಅರಿವು ಅವನಿಗೆ ಉಂಟಾದುದರಿಂದ ಅವನು ಕರ್ಮಗಳ ಕರ್ತೃನಾಗಲಾರನು. ॥ ೪೭ ॥

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

**[ ಬ್ರಹ್ಮಣ್ಯಾಧಾಯ ಕರ್ಮಾಣೀತಿ]** ಆತಾ ಅಧಿಷ್ಠಾನ ಸಂಗತೀ । ಅಶೇಷಾಹೀ ಇಂದ್ರಿಯವೃತ್ತೀ । ಆಪುಲಾಲಿಯಾ ಅರ್ಥೀ । ವರ್ತತ ಆಹಾತಿ ॥ ೪೮ ॥ ದೀಪಾಚೇನಿ ಪ್ರಕಾಶೇ । ಗ್ರಹೀಚೇ ವ್ಯಾಪಾರ ಜೈಸೇ । ದೇಹೀ ಕರ್ಮಜಾತ ತೈಸೇ । ಯೋಗಯುಕ್ತಾ ॥ ೪೯ ॥ ತೋ ಕರ್ಮೇ ಕರೀ ಸಕಳೇ । ಪರೀ ಕರ್ಮಬಂಧಾ ನಾಕಳೇ । ಜೈಸೇ ನ ಸಿಂಪೇ ಜಳೀ ಜಳೇ । ಪದ್ಮಪತ್ರ ॥ ೫೦ ॥

**ಅರ್ಥ**— ಈಗ ಬ್ರಹ್ಮಸಾನ್ನಿಧ್ಯದಿಂದ ಅರ್ಥಾತ್ ಆತ್ಮನ ಆಶ್ರಯದಿಂದ ಸರ್ವ ಇಂದ್ರಿಯಗಳ ವೃತ್ತಿಯು ತಮ್ಮ ತಮ್ಮ ವಿಷಯದಲ್ಲಿ ವ್ಯವಸಾಯ ಮಾಡುತ್ತಿರುತ್ತವೆ. ॥ ೪೮ ॥ ದೀಪದ ಪ್ರಕಾಶದಿಂದ ಹೇಗೆ ಮನೆಯೊಳಗಿನ ಸರ್ವ ವ್ಯವಹಾರಗಳು ನಡೆಯುತ್ತವೆಯೋ, (ಆದರೆ ಸ್ವತಃ ದೀಪವು ಮಾತ್ರ ಅವುಗಳಿಂದ ಅಲಿಪ್ತವಾಗಿರುವಂತೆ) ಜ್ಞಾನಿಗಳ ಕಡೆಯಿಂದ ಕರ್ಮಗಳು ಆಗುತ್ತಿರುತ್ತವೆ. ॥ ೪೯ ॥ ಆದರೆ ಕಮಲದ ಎಲೆಗಳು ನೀರಿನಲ್ಲಿ ಇದ್ದಾಗ್ಯಾದರೂ ಅವು ಹೇಗೆ ನೀರಿನಿಂದ ತೊಯ್ಯುವದಿಲ್ಲವೋ, ಅದರಂತೆ (ಬ್ರಹ್ಮಾರ್ಪಣ ಬುದ್ಧಿಯಿಂದ ಅನಾಸಕ್ತನಾಗಿ) ಆ ಜ್ಞಾನಿಯು ಸರ್ವ ಕರ್ಮಗಳನ್ನು ಮಾಡುವದರಿಂದ ಕರ್ಮಬಂಧನದ ತೊಡಕಿನಲ್ಲಿ ಶಿಕ್ಕುವದಿಲ್ಲ. ॥ ೫೦ ॥

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ॥ ೧೧ ॥**

**[ ಕಾಯೇನೇತಿ ]** ದೇಖೇ ಬುದ್ಧೀಚೀ ಭಾಷನೇಣಿಜೇ । ಮನಾಚಾ ಅಂಕುರ ನುದ್ಭೈಜೇ ಐಸಾ ವ್ಯಾಪಾರ ತೋ ಬೋಲಿಜೇ । ಶಾರೀರಗಾ ॥ ೫೧ ॥ ಹೇಚ ಮರಾಠೀ ಪರಿಯೇಸೀ । ತರೀ

ಬಾಳಕಾಚೀ ಚೇಷ್ಟಾ ಜೈಸೀ । ಯೋಗಿಯೇ ಕರ್ಮೇ ಕರಿತೀ ತೈಸೀ । ಕೇವಳಾ ತನು ॥ ೫೨ ॥ ಮಗ ಪಾಂಚ ಭೌತಿಕ ಸಂಚಲೇ । ಜೆಂವ್ಹಾ ಶರೀರ ಅಸೇ ನಿದೇಲೇ । ತೆಥೆ ಮನಚಿ ರಾಹಾಟೇ ಏಕಲೇ । ಸ್ವಪ್ನೀ ಜೇವೀ ॥ ೫೩ ॥ ನವಲ ಐಕೇ ಧನುರ್ಧರಾ । ಕೈಸಾ ವಾಸನೇಚಾ ಸಂಸಾರಾ । ದೇಹಾಹೋ ನೇದೀ ಉಜಗರಾ । ಪರೀ ಸುಖದುಃಖೇ ಭೋಗೀ ॥ ೫೪ ॥ ಇಂದ್ರಿಯಾಂಚ್ಯಾ ಗಾಂವೀ ನೇಣಿಜೇ । ಐಸಾ ವ್ಯಾಪಾರ ಜೋ ನಿಪಜೇ । ತೋ ಕೇವಳ ಗಾ ಮ್ಹಣಿಜೇ । ಮಾನಸಾಚಾ ॥ ೫೫ ॥ ಯೋಗಿಯೇ ತೋಹೀ ಕರಿತೀ । ಪರೀ ಕರ್ಮೇಂತೇ ನ ಬಂಧಿಜತೀ । ಜೇ ಸಾಂಡಿಲೀ ಆಹೇ ಸಂಗತೀ । ಅಹಂಭಾವಾಚೀ ॥ ೫೬ ॥ ಆತಾ ಜಾಹಾಲಿಯಾ ಭ್ರಮು ಹತ । ಜೈಸೇ ಪಿಶಾಚಾಚೇ ಚಿತ್ತ । ಮಗ ಇಂದ್ರಿಯಾಚೇ ಚೇಷ್ಟಿತ । ವಿಕಳದಿಸೇ ॥ ೫೭ ॥ ಸ್ವರೂಪತರೀ ದೇಖೇ । ಆಳವಿಲೇ ಆಇಕೇ । ಶಬ್ದಬೋಲೇ ಮುಖೇ । ಪರಿ ಜ್ಞಾನ ನಾಹೀ ॥ ೫೮ ॥ ಹೇ ಅಸೋ ಕಾ ಜೇವಿಣೆ । ಜೇ ಜೇ ಕಾಹೀ ಕರಣೇ । ತೇ ಕೇವಳ ಕರ್ಮ ಜಾಣೇ । ಇಂದ್ರಿಯಾಂಚೇ ॥ ೫೯ ॥ ಮಗ ಸರ್ವತ್ರ ಜೇ ಜಾಣತೇ । ತೇ ಬುದ್ಧೀಚೇ ಕರ್ಮ ನಿರುತೇ । ವೋಳಖೇ ಅರ್ಜುನಾತೇ । ಮ್ಹಣೇ ಶ್ರೀಹರೀ ॥ ೬೦ ॥ ತೇ ಬುದ್ಧಿ ಧುರೇ ಕರುನೀ । ಕರ್ಮ ಕರಿತೀ ಚಿತ್ತ ದೇವುನೀ । ಪರೀತೇ ಕರ್ಮಾಪಾಸುನಿ । ಮುಕ್ತ ದಿಸತೀ ॥ ೬೧ ॥ ಜೇ ಬುದ್ಧೀಚಿಯೇ ಠಾವೂನಿ ದೇಹೀ । ತಯಾ ಅಹಂಕಾರಾಚೀ ಸೇಚಿ ನಾಹೀ । ಮ್ಹಣೋನಿ ಕರ್ಮ ಕರಿತಾ ಪಾಹೀ । ಚೋಖಾಳಲೇ ॥ ೬೨ ॥ ಅಗಾ ಕರಿತೇ ನ ವೀಣ ಕರ್ಮ । ತೇಚಿ ತೇ ನಿಷ್ಕರ್ಮ । ಹೇ ಜಾಣತೀ ಸುವರ್ಮ । ಗುರುಗಮ್ಯ ಜೇ ॥ ೬೩ ॥ ಆತಾ ಶಾಂತರಸಾಚೇ ಭರಿತೇ । ಸಾಂಡಿತ ಆಹೇ ಪಾತ್ರಾತೇ । ಜೇ ಬೋಲಣೇ ಬೋಲಾ ಪರೌತೇ । ಬೋಲವಲೇ ॥ ೬೪ ॥ ಏಥ ಇಂದ್ರಿಯಾಚಾ ಪಾಂಗ । ಜಯಾ ಫಿಟಲಾ ಆಹೇ ಚಾಂಗ । ತಯಾಸೀಚಿ ಆಥಿಲಾಗ । ಪರಿಸಾವಯಾ ॥ ೬೫ ॥ ಹಾ ಅಸೋ ಅತಿ ಪ್ರಸಂಗ। ನ ಸಂಡೀ ಪಾ ಕಥಾಲಾಗ । ಹೋಈಲ ಶ್ಲೋಕ ಸಂಗತೀಭಂಗ । ಮ್ಹಣವೂನಿಯಾ ॥ ೬೬ ॥ ಜೇ ಮನಾ ಆಕಳಿತಾ ಕುವಾಡೇ । ಘಾಘುಸಿತಾ ಬುದ್ಧೀಸೀ ನಾತುಡೇ । ತೇ ದೈವಾಚೇನಿ ಸುರವಾಡೇ । ಸಾಂಗವಲೇ ತುಜ ॥ ೬೭ ॥ ಜೇ ಶಬ್ದಾತೀತ ಸ್ವಭಾವೇ । ತೇ ಬೋಲೀಂಚಿ ಜರೀ ಫಾವೇ । ತರೀ ಆಣಿಕೇ ಕಾಯ ಕರಾವೇ । ಕಥಾಸಾಂಗೇ ॥ ೬೮ ॥ ಹಾ ಆರ್ತಿ ವಿಶೇಷ ಶ್ರೋತಯಾಂಚಾ । ಜಾಣೋನಿ ದಾಸ ನಿವೃತ್ತೀಚಾ । ಮ್ಹಣೇ ಸಂವಾದ ದೋಘಾಂಚಾ । ಪರಿಸೋನಿ ಪರಿಸಾ ॥ ೬೯ ॥ ಮಗ ಶ್ರೀಕೃಷ್ಣ ಮ್ಹಣೇ ಪಾರ್ಥಾತೇ । ಆತಾ ಪ್ರಾಪ್ತಾಚೇ ಚಿನ್ಹ ಪುರತೇ । ಸಾಂಗೇನ ತುಜ ನಿರುತೇ । ಚಿತ್ತದೇಈ ॥೭೦॥

**ಅರ್ಥ**— ಯಾವದರಲ್ಲಿ ಬುದ್ಧಿಯ ಗುರುತು ಕಾಣುವದಿಲ್ಲವೋ, ಮತ್ತು ಮನಸಿನ ಅಂಕುರವು ಉದ್ಭವಿಸುವದಿಲ್ಲವೋ, ಆ ವ್ಯಾಪಾರಕ್ಕೆ ದೇಹವ್ಯಾಪಾರವೆಂದೆನ್ನಬೇಕು. ॥ ೫೧ ॥ ಇದನ್ನೇ ಪ್ರಾಕೃತ ಭಾಷೆಯಲ್ಲಿ ( ಸ್ಪಷ್ಟವಾಗಿ) ಸುಲಭರೀತಿಯಿಂದ ಹೇಳುತ್ತೇನೆ ಕೇಳು– ಹೇಗೆ ಚಿಕ್ಕಮಕ್ಕಳ ಕೆಲಸಗಳು ಮನಸು ಮತ್ತು ಬುದ್ಧಿ ಇವುಗಳನ್ನು ಬಿಟ್ಟು ಆಗುತ್ತಿರುತ್ತವೋ, ಅದೇಪ್ರಕಾರ ಯೋಗೀ ಜನರು ಕೇವಲ ಶರೀರಮಾತ್ರದಿಂದಲೇ ಕರ್ಮವನ್ನು ಮಾಡುತ್ತಾರೆ. ॥ ೫೨ ॥ ಪಂಚತತ್ವದಿಂದ ಸಿದ್ಧಪಡಿಸಿದ ಈ ಶರೀರವು ಮಲುಗಿದಾಗ ಮನಸ್ಸೊಂದೇ ತನ್ನ ವ್ಯಾಪಾರವನ್ನು ಹೇಗೆ ಸಾಗಿಸುವದೋ ॥ ೫೩ ॥ ಅದರಂತೇ ಈ ದೇಹಕ್ಕೆ ತಿಳಿಯಗೊಡದೇ ವಾಸನೆಯು ಆ ದೇಹದ ಕಡೆಯಿಂದ ಸುಖದುಃಖಗಳನ್ನು ಭೋಗಿಸಲಿಕ್ಕೆ ಹಚ್ಚುತ್ತದೆ. ಅರ್ಜುನಾ, ಇದೆಂತಹ ಆಶ್ಚರ್ಯವಾಗಿರುವದು ನೋಡು ! ॥ ೫೪ ॥ ಇಂದ್ರಿಯಗಳಿಗೆ ಗೊತ್ತಾಗದೇ ಯಾವ ವ್ಯಾಪಾರವು ಆಗುತ್ತದೋ ಅದಕ್ಕೆ ಕೇವಲ ಮನೋವ್ಯಾಪಾರವೆನ್ನುತ್ತಾರೆ. ॥ ೫೫ ॥ ಯೋಗಿಗಳು ಸಹ ಮನೋವ್ಯಾಪಾರದ ಆಚರಣೆಯನ್ನು ಮಾಡುತ್ತಾರೆ. ಆದರೆ ಅವರು ಕರ್ಮದಿಂದ ಬಂಧಿಸಲ್ಪಟ್ಟಿರುವದಿಲ್ಲ. ಯಾಕಂದರೆ ಅವರು ಅಹಂಕಾರವನ್ನು ತ್ಯಾಗಮಾಡಿರುತ್ತಾರೆ. ॥ ೫೬ ॥ ಯಾವಕಾಲಕ್ಕೆ ಒಬ್ಬ ಮನುಷ್ಯನ ಮನಸ್ಸು ಭ್ರಮಿಷ್ಟವಾಗಿರುತ್ತದೋ, ಇಲ್ಲವೇ ಭೂತಬಾಧೆಯಾಗಿ ಚಿತ್ತವು ಅಸ್ಥಿರ

ವಾಗಿರುತ್ತದೋ, ಆ ಕಾಲಕ್ಕೆ ಅವನ ಇಂದ್ರಿಯಗಳ ಸರ್ವ ವ್ಯಾಪಾರಗಳು ಅವ್ಯವಸ್ಥಿತವಾಗಿ ಕಾಣುತ್ತವೆ. ॥ ೫೭ ॥ ಎದುರಿಗೆ ಮನುಷ್ಯ ಬಂದದ್ದು ಅವನಿಗೆ ಕಾಣುತ್ತದೆ. ಯಾರಾದರೂ ಕರೆದರೆ ಕೇಳಿಸುತ್ತದೆ. ಮತ್ತು ಅವನು ಸ್ವತಃ ಮಾತನಾಡುತ್ತಾನೆ. ಆದರೆ ಅವನಲ್ಲಿ ಜ್ಞಾನದ ಅಭಾವವಿರುತ್ತದೆ. ॥ ೫೮ ॥ ಇರಲಿ; ತಾತ್ಪರ್ಯವೇನಂದರೆ ನಿಷ್ಕಾರಣ ವಾಗಿ ಏನಾದರೂ ಒಂದು ಮಾಡುವದು ಬರೀ ಇಂದ್ರಿಯಗಳ ಕರ್ಮವೇ ಆಗಿರುವದೆಂದು ತಿಳಿ. ॥ ೫೯ ॥ ಇದಲ್ಲದೇ, ಎಲ್ಲವನ್ನೂ ತಿಳಿದು ಮಾಡುತ್ತಿರುವ ಕಾರ್ಯವು ಬುದ್ಧಿಯಿಂದಾದ ಕರ್ಮವೆಂದು ತಿಳಿ. ॥ ೬೦ ॥ ಆ ಯೋಗಿಯು ಬುದ್ಧಿಯನ್ನು ಮುಂದೆಮಾಡಿಕೊಂಡು ಮನಃಪೂರ್ವಕವಾಗಿ ಆಚರಣೆ ಮಾಡುತ್ತಾನೆ ಆದರೆ ಅವನು ಕರ್ಮಾತೀತನೂ ಮತ್ತು ಬ್ರಹ್ಮಭಾವನೆಯ ಆಚೆಯ ಕಡೆಗಿದ್ದು ಮುಕ್ತನಾಗಿದ್ದಾನೆ. ॥ ೬೧ ॥ ಕಾರಣ, ಬುದ್ಧಿ ಯಿಂದ ದೇಹದವರೆಗೆ ಅವನಿಗೆ ಅಹಂಕಾರದ ನೆನಪು ಸಹ ಇರುವದಿಲ್ಲ. ಆದುದರಿಂದ ಅವನು ಕರ್ಮಮಾಡುತ್ತಿದ್ದಾ ಗ್ಯಾದರೂ ಶುದ್ಧ ಪವಿತ್ರನೇ ಆಗಿರುವನು. ॥ ೬೨ ॥ ಕರ್ಮಮಾಡುವವನು ನಾನು ಇದ್ದೇನೆಂಬ ಭಾವನೆಯನ್ನಿಡದೇ ಯಾವ ಕರ್ಮವು ಮಾಡಲ್ಪಡುವದೋ, ಅದೇ ನೈಷ್ಕರ್ಮ್ಯವಾಗಿರುವದು. ಇದು ಗುರುಗಳಿಂದ ತಿಳಿಯತಕ್ಕ ತತ್ವ ವಿದ್ದರೂ, ಇದನ್ನು ಅವನು ತಿಳಿದಿರುತ್ತಾನೆ. ॥ ೬೩ ॥ ನಾವು ಈಗ ಶಬ್ದದಿಂದ ಪ್ರತಿಪಾದನಮಾಡಲಿಕ್ಕೆ ಯಾವದು ಬರುವದಿಲ್ಲವೋ ಅದನ್ನೇ ಹೇಳಿದೆವು. ಆದುದರಿಂದಲೇ ಶಾಂತಿರಸವು ಅತಿ ಹೆಚ್ಚಾಗಿ ತುಂಬಿದ ಪಾತ್ರೆಯ ಮೇರೆಯನ್ನು ದಾಟಿ ಹೊರಸೂಸಿ ಹರಿಯಿತು. ॥ ೬೪ ॥ ಇದನ್ನು ಕೇಳುವ ಅಧಿಕಾರಿಗಳು ಯಾರು ? ಎಂದು ನೀನು ಅನ್ನುತ್ತಿದ್ದರೆ, ಇಂದ್ರಿಯ ದ್ವಾರಾ ಪ್ರಾಪ್ತವಾಗುವ ನಾಶವಂತ ಸುಖದಿಂದಲೇ ತೃಪ್ತಿಹೊಂದುವ ದರಿದ್ರ ಭಾವನೆಯು ಯಾರಲ್ಲಿ ವಾಸವಾಗಿರುವದಿಲ್ಲವೋ; ಅವರೇ ಆ ವೈರಾಗ್ಯಸಂಪನ್ನರೇ ಇದನ್ನು ಕೇಳುವ ಅಧಿಕಾರಿ ಗಳು. ॥ ೬೫ ॥ ಆ ಮೇಲೆ ಶ್ರೋತೃಗಳು ಶ್ರೀ ಜ್ಞಾನೇಶ್ವರ ಮಹಾರಾಜರಿಗೆ ಅನ್ನುತ್ತಾರೆ. ಈ ವಿಷಯಾಂತರವನ್ನು ಪೂರ್ಣಮಾಡಿರಿ. ಕಥೆಯ ಅನುಸಂಧಾನವನ್ನು ಬಿಡಬೇಡಿರಿ. ಏಕೆಂದರೆ ಶ್ಲೋಕದ ಸಂಗತಿಯು ಅಸಂಗತವಾಗಿ ಕೆಟ್ಟು ಹೋದೀತು ! ॥ ೬೬ ॥ ಯಾವದು ಮನಸಿನಿಂದ ತಿಳಿದುಕೊಳ್ಳಲು ದುಸ್ತರವಾಗಿರುವದೋ ಮತ್ತು ವಿಚಾರ ಮಾಡಿದಾಗ್ಯೂ ಬುದ್ಧಿಗೆ ನಿಲುಕದಂತಹದಿರುವದೋ, ಅಂತಹದನ್ನು ನೀವು ನಮಗೆ ಹೇಳಿದುದು ನಮ್ಮ ಸುದೈವವೆಂದೇ ತಿಳಿಯಬೇಕು. ॥ ೬೭ ॥ ಯಾವದು ಮೂಲತಃ ಶಬ್ದದಿಂದ ಬಣ್ಣಿಸಲು ಬರುವದಿಲ್ಲವೋ, ಅದು ಒಂದು ವೇಳೆ ಶಬ್ದದಿಂದಲೇ ಹೇಳುವಂತಾದರೆ ಬೇರೆ ಉಪಾಯಗಳನ್ನೇಕೆ ಮಾಡಬೇಕು ? ಇರಲಿ; ಇನ್ನು ಕಥೆಯನ್ನು ಪ್ರಾರಂಭಿ ಸಿರಿ. ॥ ೬೮ ॥ ಕೇಳುವವರ ಈ ಉತ್ಕಟ ಅಪೇಕ್ಷೆಯನ್ನು ತಿಳಿದು ನಿವೃತ್ತಿದಾಸ ಜ್ಞಾನದೇವರು ಅನ್ನುತ್ತಾರೆ. ಇದು ವರೆಗೆ ಕೇಳಿದ ಉಭಯತರ ಸಂವಾದವನ್ನು ಮನನಮಾಡಿ ಮತ್ತೆ ಅದನ್ನೇ ಕೇಳಲು ಸಿದ್ಧರಾಗಿರಿ. ॥ ೬೯ ॥ ಆ ಮೇಲೆಶ್ರೀಕೃಷ್ಣನು ಪಾರ್ಥನಿಗೆ ಅನ್ನುತ್ತಾನೆ- ಪೂರ್ಣ ಬ್ರಹ್ಮನಿಷ್ಠನಿಗೆ ಗುರುತುಹಿಡಿಯುವದರದೆಸೆಯಿಂದ ನಿಜವಾದ ಚಿಹ್ನವು ಯಾವುದೆಂಬುದನ್ನು ನಾನು ಹೇಳುತ್ತೇನೆ. ಅದಕ್ಕಾಗಿ ಚನ್ನಾಗಿ ಲಕ್ಷಗೊಡು. ॥ ೭೦ ॥

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇಸಕ್ತೋ ನಿಬಧ್ಯತೇ ॥ ೧೨ ॥**

**[ ಯುಕ್ತಃ ಇತಿ ]** ತರೀ ಆತ್ಮಯೋಗೇ ಆಥಿಲಾ । ಜೋ ಕರ್ಮ ಫಳಾಶೀ ವಿಟಲಾ । ತೋ ಘರರಿಘೋನಿ ವರಿಲಾ । ಶಾಂತೀ ಜಗೀ ॥ ೭೧ ॥ ಯೇರ ಕರ್ಮಬಂಧೇ ಕಿರೀಟೀ । ಅಭಿಲಾಷಾಚಿಯಾ ಗಾಂಠೀ । ಕಳಾಸಲಾ ಖುಂಟೀ । ಫಳಭೋಗಾಚ್ಯಾ ॥ ೭೨ ॥

**ಅರ್ಥ—** ಆದರೆ ಆತ್ಮಜ್ಞಾನದಿಂದ ಯಾವನು ಪೂರ್ಣ ಸಂಪನ್ನನಾಗಿರುವನೋ ಮತ್ತು ಯಾವನಿಗೆ ಸರ್ವಕರ್ಮ ಫಲದ ಬೇಸರು ಉಂಟಾಗಿರುತ್ತದೋ ಅವನಿಗೆ ಈ ಜಗತ್ತಿನಲ್ಲಿ ತನ್ನ ಮನೆಯಲ್ಲಿ ಕುಳಿತಲ್ಲಿಯೇ ಶಾಂತಿಯು ಪ್ರಾಪ್ತವಾಗುತ್ತದೆ. ॥ ೭೧ ॥ ಅರ್ಜುನಾ ಎರಡನೇ ಸಂಸಾರಿಯು ( ಯೋಗ ಹೀನನು ) ಕರ್ಮಬಂಧನದಿಂದ ಕಟ್ಟಲ್ಪಟ್ಟದ್ದು ಅಭಿಲಾಷೆಯೆಂಬ ಗಂಟಿನಿಂದ, ಭೋಗರೂಪೀ ಗೂಟಕ್ಕೆ ಗಟ್ಟಿಯಾಗಿ ಬಂಧಿಸಲ್ಪಟ್ಟಿರುವನು. ॥ ೭೨ ॥

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

**[ ಸರ್ವ ಕರ್ಮಾಣೀತಿ ]** ಜೈಸಾ ಫಳಾಚಿಯೇ ಹಾವೇ । ತೈಸೇ ಕರ್ಮಕರೀ ಆಘವೇ । ಮಗ ನ ಕೀಜೇಚಿ ಯೇಣೇ ಭಾವೇ । ಉಪೇಕ್ಷಿಜೋ ॥ ೭೩ ॥ ತೋ ಜಯಾಕಡೆ ವಾಸಪಾಹೇ । ತೇಉತೀ ಸುಖಾಚೀ ಸೃಷ್ಟೀ ಹೋಯೇ । ತೋಮ್ಹಣೇ ತೇಥರಾಹೇ । ಮಹಾಬೋಧ ॥ ೭೪ ॥ ನವದ್ವಾರ ದೇಹೀ । ತೋ ಅಸತಚಿ ಪರೀ ನಾಹೀ । ಕರೀತಚಿ ನ ಕರೀ ಕಾಹೀ । ಫಳತ್ಯಾಗೀ ॥ ೭೫ ॥

**ಅರ್ಥ—** ಫಲಾಭಿಲಾಷೆಯಿಂದ ಕರ್ಮಾಚರಣೆ ಮಾಡುವವರಂತೆ ಯಾವನು ಸರ್ವಕರ್ಮಗಳನ್ನು ಯಥಾ ಸಾಂಗವಾಗಿ ಮಾಡಿಯೂ, ಆ ಕರ್ಮಗಳ ಕರ್ತೃ ತಾನಾಗಿಲ್ಲವೆಂದು ತಿಳಿತು ಕರ್ಮತ್ಯಾಗಿಯೆನ್ನಿಸಿ ಕೊಂಡಿರುವನೋ ಆ ಪುರುಷನ ಯೋಗ್ಯತೆಯನ್ನೇನು ಹೇಳುವದು ? ॥ ೭೩ ॥ ಆ ಪುರುಷನು ಯಾವ ಯಾವ ಕಡೆಗೆ ನೋಡುತ್ತಾನೋ, ಅಲ್ಲಲ್ಲಿ ಸುಖಮಯವಾದ ಸೃಷ್ಟಿಯು ಆಗುತ್ತದೆ. ಮತ್ತು ಅವನು ಹೇಳಿದ ಸ್ಥಳದಲ್ಲಿ ಬ್ರಹ್ಮಜ್ಞಾನವು ಎದುರಿಗೇ ಬಂದು ನಿಲ್ಲುತ್ತದೆ. ॥ ೭೪ ॥ ಒಂದು ಫಲಾಪೇಕ್ಷೆಯನ್ನು ಬಿಟ್ಟುಕೊಡುವದರಿಂದ ಅವನು ನವದ್ವಾರದ ದೇಹದಲ್ಲಿದ್ದಾಗ್ಯಾದರೂ ಇಲ್ಲದಂತೆ ಇರುತ್ತಾನೆ. ಮತ್ತು ಸರ್ವ ಕರ್ಮಗಳನ್ನು ಮಾಡಿಯೂ ಮಾಡಿದವನಂತೆಯೇ ಇರುತ್ತಾನೆ. ॥ ೭೫ ।

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥**

**[ ನ ಕರ್ತೃತ್ವಮಿತಿ ]** ಜೈಸಾ ಕಾ ಸರ್ವೇಶ್ವರ । ಪಾಹಿಜೇ ತವ ನಿರ್ವ್ಯಾಪಾರ । ಪರೀ ತೋಚಿ ರಚೀ ವಿಸ್ತಾರ । ತ್ರಿಭುವನಾಚಾ ॥ ೭೬ ॥ ಆಣಿ ಕರ್ತಾ ಮ್ಹಣಿಪೇ । ತರೀ ಕವಣೇ ಕರ್ಮೀ ನ ಶಿಂಪೇ । ಜೇ ಹಾತಪಾವೋ ನ ಲಿಂಪೇ । ಉದಾಸ ವೃತ್ತೀಚಾ ॥ ೭೭ ॥ ಯೋಗನಿದ್ರಾ ತರೀ ನ ಮೋಡೇ । ಅಕರ್ತೇಪಣಾ ಸಳು ನ ಘಡೇ । ಪರೀ ಮಹಾಭೂತಾಚೇ ದಳವಾಡೇ । ಉಭಾರೀ ಭಲೇ ॥ ೭೮ ॥ ಜಗಾಚ್ಯಾ ಜೀವೀ ಆಹೇ । ಪರೀ ಕವಣಾಚಾ ಕಹೀ ನೋಹೇ । ಜಗಚಿ ಹೇ ಹೋಯ ಜಾಯೇ ತೋ ಶುದ್ಧೀಹೀ ನೇಣೇ ॥ ೭೯ ॥

**ಅರ್ಥ—** ನೋಡಿದರೆ ಪರಮೇಶ್ವರನು ಅಕರ್ತಾ ಇದ್ದಾನೆ. ಆದರೆ ಈ ತ್ರಿಭುವನದ ವಿಸ್ತಾರವನ್ನು ಅವನೇ ಮಾಡುತ್ತಾನೆ. ॥ ೭೬ ॥ ಮತ್ತು ಅವನು ಕರ್ತಾ ಇರುವನೆಂದು ತಿಳಿದರೆ ಅವನು ಯಾವುದಾದರೂ ಕರ್ಮದಿಂದ ಲಿಪ್ತನಾಗುವದಿಲ್ಲ. ಕಾರಣವೇನಂದರೆ ಅವನಲ್ಲಿರುವ ಉದಾಸೀನ ವೃತ್ತಿಯು ಯಾವ ಕರ್ಮವನ್ನೂ ಅವನ ಸ್ಪರ್ಶ ಮಾಡಲನುವು ಗೊಡುವದಿಲ್ಲ. ॥ ೭೭ ॥ ಅವನ ಯೋಗ ನಿದ್ರೆಯು ಭಂಗವು ಸ್ವಲ್ಪವೂ ಆಗುವದಿಲ್ಲ. ಮತ್ತು ಅವನ ಅಕರ್ತೃತ್ವಕ್ಕಾದರೂ ಕುಂದು ತಗಲುವದಿಲ್ಲ. ಆದರೆ ಅವನು ಮಹಾಭೂತಗಳ ಸಮುದಾಯವನ್ನು ಉತ್ತಮ ರೀತಿಯಿಂದ ನಿರ್ಮಾಣಮಾಡಿ ನಿಲ್ಲಿಸುತ್ತಾನೆ. ॥ ೭೮ ॥ ಈ ಜಗತ್ತಿನಲ್ಲಿ ಪ್ರಾಣಿಮಾತ್ರಗಳ ಅಂತಃಕರಣದಲ್ಲಿ ಪರಮೇಶ್ವರನು ಇದ್ದಾನೆ. ಆದರೆ ಅವನು ಯಾವಾಗ್ಯೂ ಯಾರವನೂ ಇರುವದಿಲ್ಲ. ಮತ್ತು ಈ ಜಗತ್ತಿನ ಉತ್ಪತ್ತಿ ಮತ್ತು ನಾಶ ಇವುಗಳ ವಾರ್ತೆಯೇ ಆತನರಿಯನು. ॥ ೭೯ ॥

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ॥ ೧೫ ॥**

**[ ನಾದತ್ತ ಇತಿ ]** ಪಾಪ ಪುಣ್ಯೇ ಅಶೇಷೇ । ಪಾಸೀಂಚಿ ಅಸತು ನ ದೇಖೇ । ಆಣಿ ಸಾಕ್ಷೀಹೀ ಹೋವೂ ನ ಠಾಕೇ । ಯೇರೀ ಗೋಷ್ಟೀ ಕಾಯಸೀ ॥ ೮೦ ॥ ಪೈ ಮೂರ್ತೀಚೇನಿ ಮೇಳೇ । ತೋ ಮೂರ್ತಚಿ ಹೋವೂನಿ ಖೇಳೇ । ಪರೀ ಅಮೂರ್ತ ಪಣ ನ ಮೈಳೇ । ದಾದುಲಯಾಚೇ ॥ ೮೧ ॥ ತೋ ಸೃಜೀ ಪಾಳೀ ಸಂಹಾರೀ । ಐಸೇ ಬೋಲತೀ ಜೇ ಚರಾಚರೀ । ತೇ ಅಜ್ಞಾನ ಗಾ ಅವಧಾರೀ । ಪಂಡುಕುಮರಾ ॥ ೮೨ ॥

**ಅರ್ಥ—** ಪಾಪ ಪುಣ್ಯ ಸರ್ವವೂ ಅವನ ಹತ್ತಿರವಿದ್ದಾಗ್ಯೂ ಅವನು ಅವುಗಳನ್ನು ನೋಡುವದಿಲ್ಲ. ಅಲ್ಲದೇ ಅವುಗಳಿಗೆ ಸಾಕ್ಷೀಭೂತನಾಗಿ ಸಹ ಇರುವದಿಲ್ಲ. ಅಂದಬಳಿಕ ಎರಡನೇ ಮಾತಿನ ಸಲುವಾಗಿ ವಿಚಾರಿಸುವದೇಕೆ! ॥೮೦॥ ಒಂದುವೇಳೆ ಸಗುಣಮೂರ್ತಿ ಧಾರಣ ಮಾಡಿಕೊಂಡು ಅವನು ದೇಹಧಾರಿಯಾಗಿ ಲೀಲೆ ಮಾಡುತ್ತಾನೆ; ( ಮಚ್ಛ, ಕೂರ್ಮ ಮೊದಲಾದ ಅನಂತ ಅವತಾರಗಳನ್ನೆತ್ತಿ ಭಕ್ತಕಾರ್ಯಾರ್ಥವಾಗಿ ಈ ಜಗತ್ತಿನಲ್ಲಿ ಪ್ರಕಟವಾಗುತ್ತಾನೆ. ) ಆದರೆ ಆ ಪರಮಾತ್ಮನ ನಿರಾಕಾರತ್ವವು ನಾಶ ಹೊಂದುವದಿಲ್ಲ. ॥ ೮೧ ॥ ಹೀಗೆ ಇದ್ದರೂ ಅರ್ಜುನನೇ ಅವನು ಹುಟ್ಟಿಸುತ್ತಾನೆ, ಪಾಲಿಸುತ್ತಾನೆ ಮತ್ತು ಸಂಹರಿಸುತ್ತಾನೆ ; ಎಂದು ತಿಳಿಯುವ ಜನರು ಅಜ್ಞಾನಿಗಳೆಂದು ತಿಳಿ. ॥೮೨॥

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತ ಮಾತ್ಮನಃ ।**
**ತೇಷಾಮಾದಿತ್ಯವಜ್ಞಾನಂ ಪ್ರಕಾಶಯತಿ ತತ್ಪರಂ ॥ ೧೬ ॥**

**[ ಜ್ಞಾನೇನೇತಿ ]** ತೇ ಅಜ್ಞಾನ ಜೈ ಸಮೂಳ ತುಟೇ । ತೈ ಭ್ರಾಂತೀಚೇ ಮಸ್ಯೆರೇ ಫಿಟೇ । ಮಗ ಅಕರ್ತೃತ್ವ ಪ್ರಕಟೇ । ಮಜ ಈಶ್ವರಾಚೇ ॥ ೮೩ ॥ ಏಥ ಈಶ್ವರ ಏಕ ಅಕರ್ತಾ । ಐಸೇ ಮಾನಲೇ ಜರೀ ಚಿತ್ತಾ । ಆಣಿ ತೋಚಿ ಮೀ ಹೇ ಸ್ವಭಾವತಾ । ಆದೀಚಿ ಅಹೇ ॥ ೮೪ ॥ ಐಸೇನಿ ವಿವೇಕೇ ಉದೋ ಚಿತ್ತೀ । ತಯಾಸಿಭೇದ ಕೈಂಚಾ ತ್ರಿಜಗತೀ । ದೇಖೇ ಆಪುಲಿಯಾ ಪ್ರತೀತೀ । ಜಗಚಿ ಮುಕ್ತ ॥ ೮೫ ॥ ಜೈಸೀ ಪೂರ್ವ ದಿಸೇಚ್ಯಾ ರಾವುಳೀ । ಉದಯಾ ಯೇತಾಂಚಿ ಸೂರ್ಯ ದಿವಾಳೀ । ಕೀ ಯೇರೀಹೀ ದಿಶಾತಿಯೇಚಿ ಕಾಳೀ । ಕಾಳಿಮಾ ನಾಹೀ ॥ ೮೬ ॥

**ಅರ್ಥ—** ಈ ಅಜ್ಞಾನವು ಯಾವಾಗ ಸಮೂಲವಾಗಿ ನಾಶ ಹೊಂದುತ್ತದೋ ಅವಾಗ್ಗೆನೇ ಭ್ರಾಂತಿರೂಪ ಕತ್ತಲೆಯು ನಾಶ ಹೊಂದುತ್ತದೆ. ಆ ಮೇಲೆ ಪರಮೇಶ್ವರನ ಅಕರ್ತೃತ್ವ ಸ್ಪಷ್ಟವಾಗಿ ಅವನಿಗೆ ತಿಳಿಯಹತ್ತುತ್ತದೆ. ॥೮೩॥ ಈ ಪ್ರಕಾರ ಭಗವಾನನು ಅಕರ್ತೃವು ಇರುತ್ತಾನೆಂಬದು ಮನಸಿನಲ್ಲಿ ನಿಶ್ಚಯವಾದರೆ ಬ್ರಹ್ಮಸ್ವರೂಪವೇ ನಾನು ಇದ್ದೇನೆ ( ಅವನ ಅಧಿಷ್ಠಾನವೇ ನನ್ನಲ್ಲಿ ಇದೆ. ) ಎಂಬದು ಮೊದಲಿನಿಂದಲೇ ಸಿದ್ಧವದೆ. ( ಅರ್ಥಾತ್ ನಾನಾದರೂ ಅಕರ್ತೃವೇ ಎಂಬ ಮಾತೂ ಆವನು ಚನ್ನಾಗಿ ತಿಳಿದಿರುತ್ತಾನೆ. ) ॥ ೮೪ ॥ ಈ ಪ್ರಕಾರ ವಿವೇಕದಿಂದ ಯಾವನ ಚಿತ್ತದಲ್ಲಿ ಪ್ರಕಾಶವು ಬೀಳುತ್ತದೋ, ಅವನಿಗೆ ಮೂರು ಲೋಕಗಳಲ್ಲಿ ಭೇದವು ಉಳಿಯುವದಿಲ್ಲ. ( ಒಬ್ಬನೇ ದೇವನು ಸರ್ವಭೂತ ಮಾತ್ರಗಳಲ್ಲಿ ಅಂತರಾತ್ಮನಾಗಿರುವನೆಂದು ) ಅನುಭವದಮೇಲಿಂದ ಸರ್ವ ಜಗತ್ತು ಮುಕ್ತವಿರುವದೆಂದು ಅವನು ತಿಳಿಯುತ್ತಾನೆ. ॥ ೮೫ ॥ ಹೇಗೆ ಪೂರ್ವಕ್ಕೆ ಸೂರ್ಯೋದಯವಾದ ಕೂಡಲೇ ಪ್ರಕಾಶವು ಹಬ್ಬಿ, ಎರಡನೇ ಕಡೆಗಿರುವ ಕತ್ತಲೆಯನ್ನೂ ಇಲ್ಲದಂತೆ ಮಾಡುವದೋ, ಅದೇ ಪ್ರಕಾರ, ॥ ೮೬ ॥

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯ ಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

**[ ತದ್ಬುದ್ಧಯ ಇತಿ ]** ಬುದ್ಧಿ ನಿಶ್ಚಯೇ ಆತ್ಮಜ್ಞಾನ । ಬ್ರಹ್ಮರೂಪ ಭಾವೀ ಆಪಣಾ ಆಪಣ ಬ್ರಹ್ಮನಿಷ್ಠಾ ರಾಖೇಪೂರ್ಣ । ತತ್ಪರಾಯಣ ಅಹರ್ನಿಶೀ ॥೮೭॥ ಐಸೇ ವ್ಯಾಪಕ ಜ್ಞಾನ ಭಲೇ । ಜಯಾಂ

ಚಿಯಾ ಹೃದಯಾ ಗಿಂವಸಿತ ಆಲೇ । ತಯಾಂಚೀ ಸಮುಶಾದೃಷ್ಟಿ ಬೋಲೇ । ವಿಶೇಷೂಕಾಇ ॥ ೮೮ ॥ ಏಕ ಆಪಣಪೆಂಚಿ ಜೈಸೇ । ತೇ ದೇಖಿತೀ ವಿಶ್ವ ತೈಸೇ । ಹೇ ಬೋಲಣೇ ಕಾಯಸೇ । ನವಲ ಏಥ ॥೮೯॥ ಪರೀ ದೈವ ಜೈಸೇ ಕವತಿಕೇ । ಕ ಹೀಚ ದೈನ್ಯ ನ ದೇಖೇ । ಕಾವಿವೇಕ ಹಾ ನೋಳಖೇ । ಭ್ರಾಂತೀ ತೇ ಜೇವೀ ॥ ೯೦ ॥ ನಾತರೀ ಅಂಧ ಕಾರಾಚೀ ವಾಸೀ । ಜೈಸಾ ಸೂರ್ಯ ನವೇಖೇ ಸ್ವಪ್ನೀ । ಅಮೃತ ನಾಯಕೇ ಕಾನೀ । ಮೃತ್ಯುಕಥಾ ॥ ೯೧ ॥ ಹೇ ಅಸೋ ಸಂತಾಪ ಕೈಸಾ । ಚಂದ್ರ ನ ಸ್ಮರೇ ಜೈಸಾ । ಭೂತೀ ಭೇದ ನೇಣತೀ ತೈಸಾ । ಜ್ಞಾನಿಯೇ ತೇ ॥ ೯೨ ॥

**ಅರ್ಥ—** ಯಾವನಿಗೆ ಆತ್ಮಜ್ಞಾನದ ವಿಷಯದಲ್ಲಿ ನಿಶ್ಚಯವಾದ ಬುದ್ಧಿಯಿರುವದೋ ಮತ್ತು ತಾನು ತನಗೆ ಬ್ರಹ್ಮಸ್ವರೂಪವೆಂದು ತಿಳಿಯುತ್ತಾನೋ, ರಾತ್ರಿ-ಹಗಲು ಬ್ರಹ್ಮಪರಾಯಣನಾಗಿ ತನ್ನ ಬ್ರಹ್ಮಸ್ಥಿತಿಯನ್ನು ಪೂರ್ಣವಾಗಿಟ್ಟುಕೊಂಡಿರುವನೋ, ॥ ೮೭ ॥ ಹೀಗೆ ಸರ್ವವ್ಯಾಪಕ ಜ್ಞಾನವು ಯಾವನನ್ನು ಅರಸುತ್ತ ಬರುತ್ತಿದೆಯೋ ಅವನಿಗೆ ಸಮದೃಷ್ಟಿಯುಂಟಾಗುತ್ತದೆ. ಇದನ್ನು ಹೆಚ್ಚಿಗೆ ವಿಸ್ತರಿಸಿ ಹೇಳುವದೇನಿದೆ ? ॥ ೮೮ ॥ ಅವನು ತನ್ನಂತೆಯೇ ಸರ್ವ ವಿಶ್ವವೂ ಬ್ರಹ್ಮಸ್ವರೂಪವೆಂದು ತಿಳಿಯುತ್ತಾನೆ. ಇದರಲ್ಲಿ ಆಶ್ಚರ್ಯವೇನು ? ॥ ೮೯ ॥ ಯಾವ ಪ್ರಕಾರ ಭಾಗ್ಯವು ವಿನೋದಕ್ಕಾಗಿ ಸಹ ದಾರಿದ್ರ್ಯದ ಅನುಭವವನ್ನು ಮಾಡಿಕೊಳ್ಳಲಾರವೋ, ಮತ್ತು ವಿವೇಕಕ್ಕೆ ಭ್ರಾಂತಿಯ ಪರಿಚಯವೂ ಸಹ ಹೇಗೆ ಇರುವದಿಲ್ಲವೋ, ॥ ೯೦ ॥ ಅಥವಾ, ಸೂರ್ಯನು ಸ್ವಪ್ನದಲ್ಲಿ ಸಹ ಕತ್ತಲೆಯನ್ನು ಹೇಗೆ ಕಾಣನೋ, ಇಲ್ಲವೇ ಅಮೃತವು ಕಿವಿಯಿಂದ ಸಹ ಹೇಗೆ ಮರಣದ ವಾರ್ತೆಯನ್ನು ಕೇಳಿರಲಾರದೋ, ॥ ೯೧ ॥ ಇದಿರಲಿ, ಚಂದ್ರನಿಗೆ ಉಷ್ಣತೆಯೆಂದರೇನೆಂಬುದು ಕೂಡಾ ಹೇಗೆ ಅರಿಯನೋ ಅದೇ ಪ್ರಕಾರ ( ಪರತತ್ವದಲ್ಲಿಯೇ ಬುದ್ಧಿಯನ್ನಿಟ್ಟು ಅದರಲ್ಲಿಯೇ ಮಗ್ನರಾಗಿ ನಿಷ್ಠೆಯಿಂದ ಪರಮಾತ್ಮನೇ ಪರಮಾಶ್ರಯವೆಂದರಿತ ಜ್ಞಾನಿಗಳು ಪಾಪರಹಿತರಾಗಿರುವದರಿಂದ ) ಅವರಿಗೆ ಪ್ರಾಣಿಮಾತ್ರಗಳಲ್ಲಿ ಭೇದವು ಕಂಡು ಬರುವದಿಲ್ಲ. ॥ ೯೨ ॥

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮ ॥**

**[ ವಿದ್ಯಾ ವಿನಯ ಸಂಪನ್ನ ಇತಿ ]** ಮಗ ಹಾ ಮಶಕು ಹಾ ಗಜು । ಕೀ ಶ್ವಪಚು ಹಾ ದ್ವಿಜು । ಪೈಲ ಇತರ ಹಾ ಆತ್ಮಜು । ಹೇ ಉರಲೇ ಕೇ ॥ ೯೩ ॥ ನಾತರೀ ಹೇ ಧೇನು ಹೇ ಶ್ವಾನ । ಏಕ ಗುರೂ ಏಕ ಹೀನ । ಹೇ ಅಸೋ ಕೈಚೇ ಸ್ವಪ್ನ । ಜಾಗತಯಾ ॥ ೯೪ ॥ ಏಥ ಭೇದ ತರೀ ಕೀ ದೇಖಾವಾ । ಜರೀ ಅಹಂಭಾವ ಉರಲಾ ಹೋ ಆವಾ । ತೋ ಆಧೀಂಚಿ ನಾಹೀ ಆಘವಾ । ಆತಾ ವಿಷಮ ಕಾ ಈ ॥ ೯೫ ॥

**ಅರ್ಥ—** ಆಮೇಲೆ, ಇದು ನೊಣವು-ಇದು ಆನೆ, ಇವ ಹೊಲೆಯ-ಇವ ಹಾರುವ, ಅದರಂತೆಯೆ ಇವನು ನನ್ನ ಮಗನು-ಇವನು ಅನ್ಯನು ಎಂಬ ಭೇದವು ಅವನಲ್ಲಿ ಉಳಿಯಲಾರದು. ॥ ೯೩ ॥ ಇಲ್ಲವೇ ಇದು ಧೇನುವು-ಇದು ಶ್ವಾನವು, ಒಂದು ದೊಡ್ಡದು-ಒಂದು ಸಣ್ಣದು, ಈ ತರಹದ ಸ್ವಪ್ನವು ( ಸರ್ವ ಭೂತಾಂತರಾತ್ಮಾ ಶ್ರೀಹರಿಯೇ ನೆಲೆಸಿರುವನೆಂಬ ಧೃಡಭಾವನೆಯಿಂದ ) ಜಾಗ್ರತರಾದ ಪುರುಷನಿಗೆ ಬೀಳಬಹುದೇ ? ॥ ೯೪ ॥ ಎಲ್ಲಿ ನಾನು-ನನ್ನದು ಎಂಬ ಅಹಂಕಾರವು ಉಳಿದಿರುವದೋ, ಅಲ್ಲಿಯೇ ಭೇದವು ದೃಷ್ಟಿಗೆ ಬೀಳುವದು. ಆದರೆ ಮೊದಲಿಗೇ ಆ, ಭೇದಭಾವವು ಸ್ವಲ್ಪಾದರೂ ಇಲ್ಲದಂತಾದ ಮೇಲೆ ಭಿನ್ನತ್ವವು ಉಳಿಯುವದಾದರೂ ಹೇಗೆ? ॥ ೯೫ ॥

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥ ೧೯ ॥**

**[ಇಹೈವ ತೈರ್ಜಿತ ಇತಿ]** ಮ್ಹಣೋನಿ ಸರ್ವತ್ರ ಸದಾಸಮ । ತೇ ಆಪಣಚಿ ಅದ್ವಯ ಬ್ರಹ್ಮ । ಹೇ ಸಂಪೂರ್ಣ ಜಾಣೇ ಮರ್ಮ । ಸಮದೃಷ್ಟಿಚೇ ॥ ೯೬ ॥ ಜೋ ಹೀ ವಿಷಯಸಂಗ ನ ಸಾಂಡಿತಾ । ಇಂದ್ರಿಯಾತೇ ನ ದಂಡಿತಾ । ಪರೀ ಭೋಗಿಲೀ ನಿಃಸಂಗತಾ । ಕಾಮನೇವಿಣ ॥ ೯೭ ॥ ಜೋ ಹೀ ಲೋಕಾಂ ಜೇನಿ ಆಧಾರೇ । ಲೌಕಿಕೇಂಚೀ ವ್ಯಾಪಾರೇ । ಪರೀ ಸಾಂಡಿಲೇ ನಿದಸುರೇ । ಲೌಕಿಕ ಹೇ ॥ ೯೮ ॥ ಜೈಸಾ ಜನಾಮಾಜಿ ಖೇಚರ । ಅಸತಚಿ ಜನಾ ನವ್ಹೆ ಗೋಚರ । ತೈಸಾ ಶರೀರೀ ಪರೀ ಸಂಸಾರ । ನೋಳಖೇ ತಯಾ ತೇ ॥ ೯೯ ॥ ಹೇ ಅಸೋ ಪವನಾಚೇನಿ ಮೇಳೇ । ಜೈಸೇ ಜಳೀಂಚಿ ಜಳ ಲೋಳೇ । ತೇ ಆಣಿಕೇ ಮ್ಹಣತೀ ವೇಗಳೇ । ಕಲ್ಲೋಳ ಹೇ ॥ ೧೦೦ ॥ ತೈಸೇ ನಾಮರೂಪ ತಯಾಚೇ । ಯೆರ್ಹವೀ ಬ್ರಹ್ಮಚಿ ತೋ ಸಾಚೇ । ಮನ ಸಾಮ್ಯ ಆಲೇ ಜಯಾಚೇ । ಸರ್ವತ್ರ ಗಾ ॥ ೧ ॥ ಐಸೇನಿ ಸಮದೃಷ್ಟೀ ಜೋ ಹೋಯೇ । ತಯಾ ಪುರುಷಾ ಲಕ್ಷಣ ಹೀ ಆಹೇ । ಅರ್ಜುನಾ ಸಂಕ್ಷೇಪೇ ಸಾಂಗೇನ ಪಾಹೇ । ಅಚ್ಯುತ ಮ್ಹಣೇ ॥ ೨ ॥

**ಅರ್ಥ**— ಆದುದರಿಂದ ಯಾವನದು ಯಾವಾಗಲೂ ಸಮದೃಷ್ಟಿಯಿರುವದೋ ಅವನು ಸ್ವತಃ ಅದ್ವಿತೀಯ ಬ್ರಹ್ಮಸ್ವರೂಪನಿರುವನು. ಇದೇ ಸಮದೃಷ್ಟಿಯ ಸಂಪೂರ್ಣ ಗುರುತಾಗಿರುವದೆಂದು ತಿಳಿ. ॥ ೯೬ ॥ ಅವನು ವಿಷಯ ಸಂಗತಿಯನ್ನು ಬಿಡದೇ ಇಂದ್ರಿಯುಗಳನ್ನು ನಿರ್ಬಂಧಿಸಿದದಿದ್ದರೂ ನಿರಿಚ್ಛೆಯಿಂದ ಸರ್ವ ಭೋಗಗಳನ್ನು ಭೋಗಿಸುತ್ತಾನೆ. ಅಂತಹನು ಅಕರ್ತೃತ್ವದ ಅನುಭವವನ್ನು ಚನ್ನಾಗಿ ತೆಗೆದುಕೊಂಡವನಿರುವನು. ॥ ೯೭ ॥ ಯಾವನು ಜನರ ಆಶ್ರಯದಿಂದ ನಡೆದು ಮತ್ತು ಸರ್ವ ವ್ಯವಹಾರವನ್ನೂ ಮಾಡಿ ಲೌಕಿಕದೊಳಗಿನ ಅಜ್ಞಾನವನ್ನು ಬಿಟ್ಟುಕೊಟ್ಟಿರುತ್ತಾನೋ, ॥ ೯೮ ॥ ಆ ಪುರುಷನು—ಭೂತವು ಯಾವ ಪ್ರಕಾರ ಸರ್ವ ಜನರಲ್ಲಿದ್ದಾಗ್ಯಾದರೂ ಅಗೋಚರವಾಗಿರುವದೋ ಅದೇ ಪ್ರಕಾರ ಶರೀರ ಧಾರಿಯಿದ್ದಾಗ್ಯಾದರೂ ಸಂಸಾರದವನ್ನು ಅರಿಯುವನಾಗಿರುವನು. ॥ ೯೯ ॥ ಇದು ಇರಲಿ; ಗಾಳಿಯಿಂದ ನೀರಿನಲ್ಲಿ ತರಂಗಗಳುಂಟಾಗುತ್ತವೆ. ಆದರೆ ಅಜ್ಞಾರಾದವರು ನೀರಿನಿಂದ ತರಂಗಗಳು ಬೇರೆಯಾಗಿರುವವೆಂದೇ ಭಾವಿಸುತ್ತಾರೆ. ॥ ೧೦೦ ॥ ಅದೇ ಪ್ರಕಾರ ಯಾರ ಮನಸ್ಸು ಸರ್ವ ಸ್ಥಳದಲ್ಲಿಯೂ ಸಮಾನವಾಗಿರುವದೋ ಅವರ ಶರೀರ ಮತ್ತು ಹೆಸರು ಇವುಗಳು ಜಗರೂಢಿಯಂತಿದ್ದಾಗ್ಯೂ ಅವನು ಸಾಕ್ಷಾತ್ ಬ್ರಹ್ಮಸ್ವರೂಪನೇ ಇರುವನು. ॥ ೧ ॥ ಭಗವಾನ್ ಶ್ರೀಕೃಷ್ಣ ಪರಮಾತ್ಮನು ಅನ್ನುತ್ತಾನೆ— ಅರ್ಜುನಾ! ಹೀಗೆ ಯಾವನಲ್ಲಿ ಸಮದೃಷ್ಟಿಯು ಉಂಟಾಗಿರುತ್ತದೋ, ಆ ಪುರುಷನ ಲಕ್ಷಣವನ್ನು ಸಂಕ್ಷೇಪವಾಗಿ ಹೇಳುತ್ತೇನೆ ಕೇಳು— ॥ ೧೦೨ ॥

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯನೋದ್ವಿಜೇತ್ ಪ್ರಾಪ್ಯ ಚಾಪ್ರಿಯಂ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**

**[ನ ಪ್ರಹೃಷ್ಯೇದಿತಿ]** ತರೀ ಮೃಗ ಜಳಾಚೇನಿ ಪೂರೇ । ಜೈಸೇ ನ ಲೋಟಿಜೇ ಕಾ ಗಿರಿವರೇ ತೈಸಾ ಶುಭಾ ಶುಭೀ ನ ವಿಕರೇ । ಪಾತಲಿಯಾ ಜೋ ॥ ೩ ॥ ತೋಚಿ ತೋ ನಿರುತಾ । ಸಮದೃಷ್ಟಿ ತತ್ವತಾ । ಹರಿ ಮ್ಹಣೇ ಪಾಂಡುಸುತಾ । ತೋಚಿ ಬ್ರಹ್ಮ ॥ ೪ ॥

**ಅರ್ಥ:—** ಆದರೆ ಮೃಗಜಲದ ಮಹಾಪೂರದಿಂದ ಪರ್ವತಗಳು ತೇಲಿ ಹೋಗುವದಿಲ್ಲವೋ, ಅದೇ ಪ್ರಕಾರ ಯಾವನು (ಪ್ರಿಯವಸ್ತುವು ದೊರಕಿದರೆ ಆನಂದಿಸುವದಿಲ್ಲ. ಮತ್ತು ಅಪ್ರಿಯವಸ್ತು ದೊರಕಿದರೆ ದುಃಖಿಸುವದಿಲ್ಲ) ಶುಭಾ ಶುಭ ಕರ್ಮಗಳಿಂದ ವಿಕಾರ ಹೊಂದುವದಿಲ್ಲವೋ, ॥ ೩ ॥ ಅವನೇ ನಿಜವಾದ ಸಮದೃಷ್ಟಿಯ ತತ್ವವನ್ನು ತಿಳಿದವನು ಮತ್ತು ಅವನೇ ಸ್ವಯಂ ಬ್ರಹ್ಮಸ್ವರೂಪನಿರುವನೆಂದು ಶ್ರೀಹರಿಯು ಅರ್ಜುನನ ಮುಂದೆ ಹೇಳಿದನು ॥ ೪ ॥

**ಬಾಹ್ಯ ಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿಯತ್ ಸುಖಂ ।**
**ಸಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯ್ಯಮಶ್ನುತೇ ॥ ೨೧ ॥**

[ ಬಾಹ್ಯ ಸ್ಪರ್ಶೇಷ್ವಸಕ್ತಾತ್ಮೇತಿ ] ಜಯಾ ಆಪಣಪೇ ಸೋಂಡೂನಿ ಕಹೀ । ಇಂದ್ರಿಯ ಗ್ರಾವಯಾವರೀ ಯೇಣೇ ನಾಹೀ । ತೋ ವಿಷಯ ನ ಸೇವೀ ಹೇ ಕಾಯೀ । ವಿಚಿತ್ರ ಏಥ ॥ ೪ ॥ ಸಹಜೇ ಸ್ವಸುಖಾಚೇನಿ ಅಪಾರೇ । ಸುರವಾಡ ಲೇನಿ ಅಂತರೇ ರಚಿಲಾ ಮ್ಹಣವೂನಿ ಬಾಹಿರೇ । ಪಾವುಲ ನ ಘಲೀ ॥ ೬ ॥ ಸಾಂಗೇ ಕುಮುದ ದಳಾಚೇನಿ ತಾಟೇ । ಜೋ ಜೇವಿಲಾ ಚಂದ್ರಕಿರಣೇ ಚೊಖಟೆ । ತೋ ಚಕೋರ ಕಾಯೀ ವಾಳುವಂಟೇ । ಚುಂಬಿತ ಅಸೇ ॥ ೭ ॥ ತೈಸೇ ಆತ್ಮ ಸುಖ ಉಪಾಇಲೇ । ಜಯಾಸಿ ಆಪಣ ಪೇಂಚಿ ಫಾವಲೇ । ತಯಾ ವಿಷಯ ಸಹಜ ಸಾಂಡವಲೇ । ಮ್ಹಣೋ ಕಾಯೀ ॥ ೮ ॥ ಯೇರ್ಹವೀ ತರೀ ಕೌತುಕೇ । ವಿಚಾರೂನಿ ಪಾಹೇ ಪಾನಿಕೇ । ಯಾ ವಿಷಯಾಂಚೇನಿ ಸುಖೇ । ಝುಕಲೇ ಕವಣ ॥ ೯ ॥

**ಅರ್ಥ:** – ಯಾವನು ಆತ್ಮಸ್ವರೂಪದಲ್ಲಿಯೇ ಮಗ್ನನಾಗಿ ಎಂದಿಗೂ ಇಂದ್ರಿಯಗಳಿಗೆ ಆಧಿನನಾಗಿರನೋ, ಅವನು ವಿಷಯ ಸೇವನೆಯನ್ನು ಮಾಡದಿರುವದರಲ್ಲಿ ಆಶ್ಚರ್ಯವೇನು ? ॥ ೫ ॥ ಆತ್ಮ ಸುಖದ ಪೂರ್ಣತೆಯಿಂದ ಅವನ ಅಂತಃಕರಣವು ಸ್ವಭಾವಿಕವಾಗಿ ಸಂತುಷ್ಟವಾಗಿರುತ್ತದೆ. ಆದುದರಿಂದ ಇಂದ್ರಿಯಗಳ ಪ್ರವೃತ್ತಿಯ ಕಡೆಗೆ ಅವನ ಮನಸ್ಸು ಒಲೆಯುವದಿಲ್ಲ. ॥ ೬ ॥ ಚಕೋರಪಕ್ಷಿಯು ಚಂದ್ರವಿಕಾಸನಿಕಮಲಪತ್ರದಲ್ಲಿ ಕಿರಣಾಮೃತವನ್ನು ಸೇವಿಸಿರುವದೋ, ಅದು ನದಿದಂಡೆಯ ಮೇಲಿನ ಉಸುಬಿನ ಕಣಗಳನ್ನು ತಿನ್ನಲಿಷ್ಟ ಪಡಬಹುದೇ ? ॥ ೭ ॥ ಯಾವನಿಗೆ ತನ್ನ ಹೃದಯದಲ್ಲಿಯೇ ಆತ್ಮಾನಂದವು ಪ್ರಾಪ್ತವಾಗಿರುತ್ತದೋ, ಅವನಿಗೆ ವಿಷಯತ್ಯಾಗ ಉಂಟಾಗಿರುವದು ಸಹಜವೇ! ಇದನ್ನೇನು ನಾನು ಬೇರೆ ಹೇಳಬೇಕಾಗಿರುವುದೇ ? ॥ ೮ ॥ ಯಾರು ವಿಷಯದ ಸುಖದಿಂದ ಮೋಸಹೊಂದುವರೊ, ಅಂತಹರವಿಷಯವನ್ನು ನಿನ್ನೊಳಗೇ ನೀನು ಕುತೂಹಲದಿಂದ ವಿಚಾರಮಾಡು. ॥ ೯ ॥

**ಯೇಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವತೇ ।**
**ಆದ್ಯಂತವಂತಃ ಕೌಂತೇಯ ನತೇಷು ರಮತೇ ಬುಧಃ ॥ ೨೨ ॥**

[ ಯೇ ಹಿ ಸಂಸ್ಪರ್ಶಜಾ ಭೋಗಾಇತಿ ] ಜೇಹೀ ಆಪಣಪೇ ನಾಹೀ ದೇಖಿಲೇ । ತೇಚಿ ಇಹೀ ಇಂದ್ರಿಯಾರ್ಥೀ ರಂಜಲೇ । ಜೈಸೇ ರಂಕ ಕಾ ಆಳುಕೈಲೇ । ತುಷಾತೇ ಸೇವಿ ॥ ೧೧೦ ॥ ನಾತರೀ ಮೃಗೇ ತೃಷಾಪೀಡಿತೇ । ಸಂಭ್ರಮೇ ವಿಸರೋನಿ ಜಳಾತೇ । ಮಗ ತೋಯ ಬುದ್ಧೀ ಬರಡಿತೇ। ಠಾಕೂನಿ ಯೇತೀ ॥ ೧೧ ॥ ತೈಸೇ ಆಪಣಪೇ ನಾಹೀ ದಿಠೇ । ಜಯಾತೇ ಸ್ವಸುಖಾಚೇ ಸದಾ ಖರಾಟೇ । ತಯಾಂಸೀಚಿ ವಿಷಯ ಹೇ ಗೋಮಟೇ । ಆವಡತೀ ॥ ೧೨ ॥ ಯೇರ್ಹವೀ ವಿಷಯೀ ಸುಖ ಆಹೆ । ಹೇ ಬೋಲಣೇಚಿ ಸಾರಿಖೇ ನೋಹೇ । ತರೀ ವಿದ್ಯುತ್‌ಸ್ಫುರಣೇ ಕಾನ ಪಾಹೇ । ಜಗಾವಮಾಜೀ ॥ ೧೩ ॥ ಸಾಂಗೇ ವಾತವರ್ಷ ಆತಪಧರೇ । ಐಸೇ ಅಭ್ರಚ್ಛಾಯಾಚಿ ಜರಿ ಸರೇ । ತರೀ ತ್ರಿಮಾಳಿಕೇ ಧವಳಾರೇ । ಕರಾವೀ ಕಾ ॥ ೧೪ ॥ ಮ್ಹಣೋನಿ ವಿಷಯಸುಖ ಜೇ ಬೋಲಿಜೇ । ತೇ ನೇಣತಾ ಗಾವಾಯಾ ಜಲ್ಪಿಜೇ । ಜೈಸೇ ಮಹುರ ಕಾಮ್ಹಣಿಜೇ । ವಿಷಕಂದಾತೇ ॥ ೧೫ ॥ ನಾ ತರೀ ಭೌಮಾ ನಾಮ ಮಂಗಳ । ರೋಹಿಣೀತೇ ಮ್ಹಣತೀ ಜಳ । ತೈಸಾ ಸುಖಪ್ರವಾದ ಬರಳ । ವಿಷಯಿಕ ಹಾ ॥ ೧೬ ॥ ಹೇ ಅಸೋ ಆಘವೀ ಬೋಲೀ । ಸಾಂಗ ಪಾ ಸರ್ಪಫಣೇಚೀ ಸಾವುಲೀ । ತೇ ಶೀತಲ ಹೋಈಲ ಕೇತುಲೀ । ಮೂಷಕಾಸೀ ॥ ೧೭ ॥ ಜೈಸಾ ಆಮಿಷ ಕೇವಲ ಪಾಂಡವಾ । ಮೀನ ನ ಸೇವೀ ತವಚಿ ಬರವಾ । ತೈಸಾ ವಿಷಯಸಂಗ ಆಘವಾ । ನಿಭ್ರಾಂತ ಜಾಣೇ ॥ ೧೮ ॥ ಹೇ ವಿರಕ್ತಾಂಚಿಯೇ ದೃಷ್ಟೀ । ಜೈ ನ್ಯಾಹಾಳಿಜೇ ಕಿರೀಟೀ। ತೈ ಪಾಂಡುರೋಗಾಚಿಯೇ ಪುಷ್ಟೀ। ಸಾರಿಖೇ ದಿಸೇ ॥೧೯॥ ಮ್ಹಣೋನಿ ವಿಷಯಭೋಗೀ ಜೇ ಸುಖ। ತೇ ಸಾದ್ಯಂತಚಿ ಜಾಣ ದುಃಖ। ಪರೀ ಕಾಯಕರಿತೀ ಮೂರ್ಖ । ನ ಸೇವೀತಾ ನ ಸರೇ ॥೧೨೦॥

ತೇ ಅಂತರ ನೇಣತೀ ಬಾಪುಡೇ । ಮ್ಹಣೋನಿ ಅಗತ್ಯ ಸೇವಣೇ ಘಡೇ । ಸಾಂಗೇ ಪೂಯ ಪಂಕೀಚೇ ಕಿಡೇ । ಕಾಯಚಿಳಸೀ ಘೇತೀ ॥ ೨೧ ॥ ತಯಾ ದುಃಖಿಯಾ ದುಃಖಚಿ ಜಿವ್ಹಾರ । ತೇ ವಿಷಯ ಕರ್ದಮೀಚೇ ದರ್ದುರ । ತೇ ಭೋಗ ಜಳೀಚೇ ಜಳಚರ । ಸಾಂಡಿತೀ ಕೇವೀ ॥ ೨೨ ॥ ಆಣಿ ದುಃಖಯೋನೀ ಜಿಯಾ ಆಹಾತೀ । ತಿಯಾ ನಿರರ್ಥಕಾ ತರೀ ನವ್ಹತೀ । ಜರೀ ವಿಷಯಾವರೀ ವಿರಕ್ತೀ । ಧರಿತೀ ಜೀವ ॥ ೨೩ ॥ ನಾತರೀ ಗರ್ಭವಾಸಾದಿ ಸಂಕಟ । ಕಾ ಜನ್ಮಮರಣೀಚೇ ಕಷ್ಟ । ಹೇ ವಿಸಾವೇವೀಣ ವಾಟ । ವಾಹವೀ ಕವಣೇ ॥ ೨೪ ॥ ಜರೀ ವಿಷಯೀ ವಿಷಯೋ ಸಾಂಡಿಜೇಲ । ತರೀ ಮಹಾದೋಷ ಕೇ ವಸಿಜೇಲ । ಆಣಿ ಸಂಸಾರ ಹಾ ಶಬ್ದ ನವ್ಹೇಲ । ಲಟಿಕಾ ಜಗೀ ॥ ೨೫ ॥ ಮ್ಹಣೋನಿ ಅವಿದ್ಯಾ ಜಾತ ನಾಥಿಲೇ । ತೇ ತಿಹೀಚಿ ಸಾಚ ದಾವಿಲೇ । ಜಿಹೀ ಸುಖಬುದ್ಧೀ ಘೇತಲೇ । ವಿಷಯದುಃಖ ॥ ೨೬ ॥ ಯಾಕಾರಣೇ ಗಾಸುಭಟಾ । ಹಾ ವಿಚಾರಿತಾ ವಿಷಯ ವೋಖಟಾ । ತೂ ಝುಣೇ ಕಹೀ ಯಾವಾಟಾ । ವಿಸರೋನಿಜಾಸೀ ॥ ೨೭ ॥ ಪೈಯಾತೀ ವಿರಕ್ತ ಪುರುಷ ತ್ಯಜಿತೀ ಕಾ ಜೈಸೇ ವಿಷ । ನಿರಾಶಾತಯಾ ದುಃಖ ದಾವಿಲೇ ನಾವಡೇ ॥ ೨೮ ॥

**ಅರ್ಥ**— ಯಾವ ಪ್ರಕಾರ ಹಸಿವೆಯಿಂದ ಪೀಡಿತನಾದ ದರಿದ್ರನು ತವಡು ಸಹ ತಿನ್ನಲು ಹೇಸುವದಿಲ್ಲವೋ, ಇದರಂತೆ ಯಾವನು ಆತ್ಮಸ್ವರೂಪದ ಅನುಭವವನ್ನು ತೆಗೆದುಕೊಂಡಿರುವದಿಲ್ಲವೋ, ಅವನೇ ಇಂದ್ರಿಯಜನ್ಯ ವಿಷಯ ಸುಖದಲ್ಲಿ ಮಗ್ನನಾಗುತ್ತಾನೆ. ॥ ೧೧೦ ॥ ಇಲ್ಲವೇ ತೃಷೆಯಿಂದ ವ್ಯಾಕುಲವಾದ ಚಿಗುರೆಯು ಭ್ರಮದಿಂದ ನಿಜವಾದ ನೀರನ್ನು ಬಿಟ್ಟು ಮರಡಿಯ ಬೈಲು ಭೂಮಿಯಲ್ಲಿ ಉತ್ಪನ್ನವಾಗುವ ಬಿಸಲುಗುದುರಿಗೇ ನೀರು ಹರಿಯುತ್ತದೆಂಬ ಭ್ರಮೆಯಿಂದ ಓಡುತ್ತ ಬರುತ್ತದೆ. ॥ ೧೧ ॥ ಅದೇ ಪ್ರಕಾರ ಯಾವನು ಆತ್ಮಸುಖದ ಅನುಭವ ತೆಗೆದುಕೊಂಡಿರುವದಿಲ್ಲವೋ, ಯಾವನಿಗೆ ಸ್ವಾತ್ಮಸುಖದ ಅನುಭವವು ಯಾವಾಗಲೂ ಕಡಿಮೆ ಇರುತ್ತದೋ, ಅವನಿಗೇನೇ ! ಈ ವಿಷಯ ಸುಖವು ರುಚಿಕರವೂ, ಶ್ರೇಷ್ಠತಮವೂ ಆಗಿರುವುದೆಂದು ತೋರುತ್ತದೆ. ॥ ೧೨ ॥ ಸಹಜವಾಗಿ ನೋಡಿದರೆ ವಿಷಯದಲ್ಲಿ ಸುಖವಿರುವದೆಂದು ಅನ್ನುವದೇ ಯೋಗ್ಯವಾಗಿರುವದಿಲ್ಲ. ಆದರೂ ಸುಖವಿರುವದೆಂದು ಹೀಗೆ ತಿಳಿದು ನಡೆದರೆ ಆಕಾಶದಲ್ಲಿ ಮಿಂಚುವದರಿಂದ ಬೀಳುವ ಬೆಳಕಿನಲ್ಲಿ ಹಗಲಿನಂತೆ ಜಗತ್ತಿನಲ್ಲಿಯ ವ್ಯವಹಾರಗಳು ಏಕೆ ನಡೆಯಕೂಡದು ? ॥ ೧೩ ॥ ಅಭ್ರಚ್ಛಾಯೆ ( ಮೋಡದ ನೆರಳು ) ಇದರಿಂದಲೇ ಗಾಳಿ, ಮಳೆ, ಬಿಸಿಲುಗಳ ನಿವಾರಣೆಯಾಗುವಂತಿದ್ದರೆ ಈ ಮೂರು ಮೂರು ಅಂತಸ್ತಿನ ಮನೆಗಳನ್ನು ಕಟ್ಟಲು ಕಾರಣವೇನು ? ॥ ೧೪ ॥ ಆದುದರಿಂದ ವಿಷದ ಗಡ್ಡೆಗೆ ( ಬಚನಾಗದ ಬೇರು ) ಅಜ್ಞ ಜನರು ಸ್ವಾದವಿರುವದೆಂದು ತಿಳಿಯುತ್ತಾರೆ. ಅದೇ ಪ್ರಕಾರ ವಿಷಯ ವ್ಯವಹಾರದಲ್ಲಿ ಸುಖವಿರುವದೆಂದು ಅನ್ನುವದು ವ್ಯರ್ಥವಾದ ಬಡಬಡಿಕೆಯೇ ಆಗಿರುವದು. ॥ ೧೫ ॥ ಇಲ್ಲವೇ ಭೌಮ ಈ ನಕ್ಷತ್ರಕ್ಕೆ ಹೇಗೆ ಮಂಗಲವೆಂಬ ಹೆಸರಿದ್ದರೂ ಅದರ ಪರಿಣಾಮವು ಅಮಂಗಲ ( ಕಷ್ಟದಾಯಕ ) ವಾಗಿ ನಮ್ಮ ಅನುಭವಕ್ಕೆ ಬರುತ್ತದೋ, ಇಲ್ಲವೇ ಮೃಗಜಲಕ್ಕೆ ಹೇಗೆ ಜಲವೆಂದು ಭ್ರಮೆ ಪಡುತ್ತಾರೋ ಹಾಗೆಯೇ ವಿಷಯಸೇವನೆಯಲ್ಲಿ ಸುಖವಿರುವದೆಂಬ ಮಾತೂ ಅಸತ್ಯವಾದುದು. ॥ ೧೬ ॥ ಈ ಎಲ್ಲ ಮಾತುಗಳೂ ಒತ್ತಟ್ಟಿಗಿರಲಿ; ಆದರೆ ನಾಗರಹಾವಿನ ಹೆಡೆಯ ನೆರಳು ಇಲಿಗೆ ಎಷ್ಟರ ಮಟ್ಟಿಗೆ ಸುಖಾವಹವಾಗಿರುವುದೆಂಬುದನ್ನು ನೀನೇ ಹೇಳು ? ॥ ೧೭ ॥ ಅರ್ಜುನನೇ, ಗಾಣಕ್ಕೆ ಹಚ್ಚಿದ ಅಮಿಷ ( ಮಾಂಸ ) ದ ತುತ್ತನ್ನು ಮೀನಗಳು ಎಲ್ಲಿಯವರೆಗೆ ತಮ್ಮ ನಾಲಿಗೆಯಿಂದ ಸ್ಪರ್ಶ ಮಾಡಿರುವದಿಲ್ಲವೋ, ಅಲ್ಲಿಯವರೆಗೇನೇ ! ಅವುಗಳಿಗೆ ಕ್ಷೇಮ ಉಂಟಾಗಿರುವದು. ಇದೇ ಪ್ರಕಾರ ಪುರುಷನು ವಿಷಯ ಸಂಗತಿಯ ಅನುಭವವನ್ನು ಎಲ್ಲಿಯವರೆಗೆ ತೆಗೆದುಕೊಂಡಿರುವದಿಲ್ಲವೋ ಅಲ್ಲಿಯವರೆಗೆ ಮಾತ್ರ ಸುರಕ್ಷಿತನಾಗಿರುವನು. ॥ ೧೮ ॥ ಎಲೋ ಕಿರೀಟಿ ! ವೈರಾಗ್ಯಶೀಲನ ದೃಷ್ಟಿಯಿಂದ ಈ ವಿಷಯಗಳನ್ನು ನೋಡಿದ್ದಾದರೆ, ಪಂಡುರೋಗದಿಂದ ಯುಕ್ತನಾದ ಮನುಷ್ಯನ ಪುಷ್ಟಿಯಂತೆ ತೋರುತ್ತದೆ. ( ಆದರೆ ಅವನು ಮಾತ್ರ ಶಕ್ತಿಹೀನನಾಗಿರುತ್ತಾನೆ. ॥ ೧೯ ॥ ಆದುದರಿಂದ ವಿಷಯೋಪಭೋಗದಲ್ಲಿ ಯಾವನಿಗೆ ಸುಖವಿರುವದೆಂದು ಅನ್ನ

ಬೇಕಾಗಿರುವದೋ ಅದು ಮೊದಲಿನಿಂದ ತುದಿಯವರೆಗೆ ಸಂಪೂರ್ಣವಾಗಿ ದುಃಖಮಯವೇ ಎಂದು ತಿಳಿ. ಆದರೂ ಮಾಡುವುದೇನು? ಮೂರ್ಖರಿಗೆ ವಿಷಯಸೇವನೆ ಮಾಡದ ಹೊರತು ಅನ್ಯಮಾರ್ಗವೇ ಇರುವದಿಲ್ಲ. ॥ ೧೨೦ ॥ ಅವರಿಗೆ ಅದರ ಮರ್ಮವು ತಿಳಿಯದೇ ಇದ್ದುದರಿಂದ ವಿಷಯ ಸೇವನೆಯನ್ನು ಅವಶ್ಯವಾಗಿ ಮಾಡಲೇ ಬೇಕಾಗುತ್ತದೆ. (ಅದರಿಂದ ಅವರು ತೃಪ್ತಿ ಹೊಂದುವದೇ ಇಲ್ಲ.) ಕೀವು ರಕ್ತದ ಹೇಸಿಕೆಯಲ್ಲಿಯೇ ಉರುಳಾಡಿ ಜೀವಿಸುವ ಕ್ರಿಮಿಗಳಿಗೆ ಎಂದಾದರೂ ಹೇಸಿಕೆ ಉಂಟಾಗುವದೇ ನೀನೇ ಹೇಳು ! ॥ ೨೧ ॥ ಆ ದುಃಖಿತರಿಗೆ ದುಃಖವೇ ಪ್ರಿಯವಾಗಿರುತ್ತದೆ. ಕಾರಣವೇನೆಂದರೆ ಅವರು ವಿಷಯರೂಪ ಕೆಸರಿನೊಳಗಿನ ಕಪ್ಪೆಗಳೂ; ವಿಷಯೋಪಭೋಗರೂಪ ನೀರಿನಲ್ಲಿಯ ಮೀನುಗಳೂ, ಆಗಿರುವದರಿಂದ ವಿಷಯಸೇವನೆಯನ್ನು ಮಾಡಬೇಡವೆಂದರೆ ಹೇಗೆ ಬಿಡುವರು ? ॥ ೨೨ ॥ ಆದರೆ ವಿಷಯ ಸುಖದ ದೆಸೆಯಿಂದ ಜೀವ ಮಾತ್ರರೂ ವಿರಕ್ತರಾದರೆ ದುಃಖದಾಯಕವಾದ ಯೋನಿಗಳೆಲ್ಲವೂ ವ್ಯರ್ಥವಾಗಿ ಹೋಗುವದಿಲ್ಲವೇ ? ॥ ೨೩ ॥ ಇಲ್ಲವೇ ಗರ್ಭವಾಸದಲ್ಲಿ ಆಗತಕ್ಕ ದುಃಖ ಅಥವಾ ಜನನ-ಮರಣದಲ್ಲಿಯ ಕಷ್ಟ ಇವುಗಳು ವಿಶ್ರಾಂತಿಯಿಲ್ಲದೇ ಭೋಗಿಸಬೇಕಾದ ಮಾರ್ಗವನ್ನು ಯಾರು ಭೋಗಿಸುವರು ? ॥ ೨೪ ॥ ಆದರೆ ವಿಷಯಾಸಕ್ತ ಜನರು ವಿಷಯದ ಉಪಭೋಗ ತೆಗೆದುಕೊಳ್ಳುವದನ್ನು ಬಿಟ್ಟಿದ್ದಾದರೆ ಮಹಾದೋಷಗಳು ಎಲ್ಲಿ ವಾಸ ಮಾಡಬೇಕು ? ಮತ್ತು ಸಂಸಾರವೆಂಬ ಶಬ್ದವು ಜಗತ್ತಿನಲ್ಲಿ ಅಸತ್ಯವಾಗುವದಿಲ್ಲವೇ ? ॥ ೨೫ ॥ ಆದುದರಿಂದ ಅವರು ವಿಷಯದಿಂದ ಆಗತಕ್ಕ ದುಃಖವೇ ಸುಖವೆಂದು ತಿಳಿಯುವದರಿಂದ ಇವರು ಅಸತ್ಯವಾದ ಸರ್ವ ಅಜ್ಞಾನ ವಿಷಯಗಳನ್ನು ನಿಜವಿರುವವೆಂದು ಜನರಿಗೆ ಸಿದ್ಧಮಾಡಿ ತೋರಿಸಿದರು. ॥ ೨೬ ॥ ಈ ಕಾರಣದ ದೆಸೆಯಿಂದ ಅರ್ಜುನಾ ! ವಿಚಾರಮಾಡಿ ನೋಡುತ್ತಿರಲಿಕ್ಕಾಗಿ ಈ ವಿಷಯಗಳು ಬಹಳೇ ಅನಿಷ್ಟವಾದವುಗಳು. ಆದುದರಿಂದ ನೀನು ಅಕಸ್ಮಾತ್ ಮರೆತು ಸಹ ಈ ಹಾದಿಗೆ ಹೋಗಬೇಡ ಕಂಡೆಯಾ? ॥ ೨೭ ॥ ಕಾರಣ ಯಾರು ವಿರಕ್ತ ಪುರುಷರಿರುವರೋ, ಅವರು ಈ ವಿಷಯಸುಖವನ್ನೇ ವಿಷವೆಂದು ತಿಳಿದು ಅದನ್ನು ತ್ಯಾಗಮಾಡುತ್ತಾರೆ. ಮತ್ತು ಅವರು ನಿರಿಚ್ಛರಿರುವದರಿಂದ ವಿಷಯಗಳಿಂದಾದ ಸುಖಸ್ವರೂಪವಾದ ದುಃಖವು ಅವರಿಗೆ ಸೇರುವದಿಲ್ಲ. ॥ ೨೮ ॥

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥ ೨೩ ॥**

**[ ಶಕ್ನೋತೀ ಹೈವೇತೀ ]** ಜ್ಞಾನಿಯಾಂಚ್ಯಾ ಹನತಾಯೀ । ಯಾಚೀ ವಾರ್ತಾಹೀ ಕೀರ ನಾಹೀ । ದೇಹೀ ದೇಹಭಾವ ಜಿಹೀ । ಸ್ವವಶ ಕೇಲೇ ॥ ೨೯ ॥ ಜಯಾತೇ ಬಾಹ್ಯಾಚೀ ಭಾಖ ನೇಣೆ ಜೇಚಿ ನಿಃಶೇಖ । ಅಂತರೀ ಸುಖ । ಏಕ ಆಥಿ ॥ ೩೦ ॥ ಪರೀ ತೇ ವೇಗಳೇಪಣೇ ಭೋಗಿಜೇ । ಜೈಸೇ ಪಕ್ಷಿಯೇ ಫಳ ಚುಂಬಿಜೇ । ತೈಸೇ ನವ್ಹೇ ತೇಥ ವಿಸರಿಜೇ । ಭೋಗಿತೇಪಣಹೀ ॥ ೩೧ ॥ ಭೋಗೀ ಅವಸ್ಥಾ ಏಕೀ ಉಠೀ । ತೇ ಅಹಂಕಾರಾಚಾ ಅಂಚಳ ಲೋಟೀ । ಮಗ ಸುಖೇಸೀ ಘೇ ಆಂಠೀ । ಗಾಢೇ ಪಣೇ ॥ ೩೨ ॥ ತಿಯೇ ಆಲಿಂಗನ ಮೇಳೀ । ಹೋಯ ಆಪೇ ಆಪ ಕವಳೀ । ತೇಥ ಜಳ ಜೈಸೇ ಜಳೀ । ವೇಗಳೇ ನ ದಿಸೇ ॥ ೩೩ ॥ ಕಾ ಆಕಾಶೀ ವಾಯೋ ಹರಪೇ । ತೇಥ ದೋನ್ಹೀ ಹೇ ಭಾಷ ಲೋಪೇ । ತೈಸೇ ಸುಖಚಿ ಉರೇ ಸ್ವರೂಪೇ । ಸುರತೀತಿಯೇ ॥ ೩೪ ॥ ಐಸೀ ದ್ವೈತಾಚೀ ಭಾಷಾ ಜಾಯೇ । ಮಗ ಮ್ಹಣೋ ಜರೀ ಏಕಚೀ ಹೋಯೇ । ತರೀ ತೇಥ ಸಾಕ್ಷೀ ಕವಣ ಆಹೇ । ಜಾಣತೇ ಜೇ ॥ ೩೫ ॥

**ಅರ್ಥ:—** ಜ್ಞಾನಿಗಳ ಸ್ಥಳದಲ್ಲಿಯಾದರೂ ನಿಶ್ಚಯದಿಂದ ಈ ವಿಷಯದ ವಾರ್ತೆಯು ಸಹ ಹೊರಡುವದಿಲ್ಲ. ಕಾರಣವೇನಂದರೆ ಅವರು ದೇಹಧಾರಿಯಿದ್ದಾಗ್ಯೂ ದೇಹಧರ್ಮವನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡಿರುತ್ತಾರೆ. ॥೨೯॥ ಯಾವನಿಗೆ ಅಂತರ್ಯಾಮಿ ಆತ್ಮಸುಖದ ಲಾಭವಾಗಿರುತ್ತದೋ, ಅವನಿಗೆ ವಿಷಯದ ಮಾತು ಸಹಸ್ಮರಣೆಯಲ್ಲಿ ಬರುವ

ದಿಲ್ಲ. ॥ ೧೩೦ ॥ ಆದರೆ ಆ ಆತ್ಮಸುಖದ ಉಪಭೋಗವನ್ನು ತೆಗೆದುಕೊಳ್ಳುವ ರೀತಿಯು ಬೇರೆಯಾಗಿರುತ್ತದೆ. ಅದು ಹೇಗೆಂದರೆ–ಪಕ್ಷಿಯು ಹಣ್ಣಿನ ಚುಂಬನ ಮಾಡುತ್ತಿರುವಾಗ ಆ ಸ್ಥಳದಲ್ಲಿ ಭೋಕ್ತಾ, ಭೋಗ್ಯ ವಸ್ತು, ಮತ್ತು ಭೋಗ ಈ ಮೂರು ಮಿಲನವಾಗಿರುತ್ತವೆ. ಆದರೆ ಅಲ್ಲಿ ( ಆತ್ಮಸುಖೋಪಭೋಗ ಮಾಡುವಾಗ ಮಾತ್ರ ಈ ಮೂರೂ ಇರುವದಿಲ್ಲ. ಆಗ ಜ್ಞಾನಿಗಳು ( ಆತ್ಮಸುಖರತರು) ತಾವು ಭೋಕ್ತೃಗಳೆಂಬ ಅರಿವನ್ನೂ ಮರೆತಿರುತ್ತಾರೆ ॥ ೩೧ ॥ ಆತ್ಮ ಸುಖದ ಭೋಗವನ್ನು ತೆಗೆದುಕೊಳ್ಳುವದರ ದೆಸೆಯಿಂದ ಯಾವ ಒಂದು ವೃತ್ತಿಯುದ್ಭವಿಸುತ್ತದೋ, ಅದು ಅಹಂಕಾರದ ನಾಶಮಾಡುತ್ತದೆ. ಆ ಮೇಲೆ ಧೃಢವಾಗಿ ಸುಖದ ಆಲಿಂಗನವನ್ನು ಮಾಡುತ್ತದೆ. ಅಲ್ಲದೇ ತಾನೂ ಸುಖರೂಪವನ್ನು ಹೊಂದುತ್ತದೆ. ॥ ೩೨ ॥ ಮತ್ತು ಆ ಆಲಿಂಗನದ ಭರದಲ್ಲಿ ತನ್ನಿಂದತಾನೇ ಐಕ್ಯವಾಗಿ ಹೋಗುತ್ತದೆ. ಯಾವ ಪ್ರಕಾರ ನೀರು ನೀರಿನಲ್ಲಿ ಮಿಶ್ರವಾದಕೂಡಲೇ ಅದು ಬೇರೆಯಾಗಿ ಕಂಡು ಬರುವದಿಲ್ಲವೋ, ॥ ೩೩ ॥ ಇಲ್ಲವೇ ಯಾವ ಪ್ರಕಾರ ಆಕಾಶದಲ್ಲಿಯು ಗಾಳಿಯು ಇಲ್ಲದಂತಾದ ಮೇಲೆ ಆಕಾಶ ಮತ್ತು ವಾಯು ಇವುಗಳಲ್ಲಿಯು ಭೇದವೇ ಇಲ್ಲದುದಾಗುತ್ತದೋ ? ಅದೇ ಅದೇಪ್ರಕಾರ ವೃತ್ತಿ ಮತ್ತು ಆತ್ಮಾ ಇವುಗಳು ಐಕ್ಯವಾಗುವದರಿಂದ ಉಳಿಯುವದು ಒಂದೇ ಒಂದಾದ ಸುಖವು ॥ ೩೪ ॥ ಇದೇ ಪ್ರಕಾರ ಯಾವಾಗ ದ್ವೈತಭಾವನೆಯು ಇಲ್ಲದಂತಾಗುತ್ತದೋ ಆವಾಗ ಐಕ್ಯತ್ವವು ಪ್ರಾಪ್ತವಾದದ್ದನ್ನು ತಿಳಿಯಲಿಕ್ಕೆ ಸಾಕ್ಷಿಯಾದರೂ ಎಲ್ಲಿಂದ ಬರಬೇಕು ? ॥ ೩೫ ॥

ಯೋಽಂತಃ ಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।
ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥

ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ ।
ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇರತಾಃ ॥ ೨೫ ॥

[ ಯೋಽಂತಃಸುಖೋಽಂತ ರಾರಾಮ ಇತಿ ] ಮ್ಹಣೋನಿ ಅಸೋಹೇ ಆಘವೇ । ಏಥ ನ ಬೋಲಣೇ ಕಾಯ ಬೋಲಾವೇ । ತೇ ಖೂಣಾಚಿ ಪಾವೇಲ ಸ್ವಭಾವೇ । ಆತ್ಮಾರಾಮ ॥ ೩೬ ॥ ಜೇ ಐಸೇನಿ ಸುಖೇ ಮಾತಲೇ । ಆಪಣಪಾಂಚಿ ಆಪಣ ರಾಹಿಲೇ । ತೇ ಮೀ ಜಾಣೇ ನಿಖಿಳ ವೋತಲೇ । ಸಾಮುರಸ್ಯಾಚೇ ॥ ೩೭ ॥ ತೇ ಆನಂದಾಚೇ ಅನುಕಾರ । ಸುಖಾಚೇ ಅಂಕುರ । ಕೀ ಮಹಾಬೋಧೇ ವಿಹಾರ । ಕೇಲೇ ಜೈಸೇ ॥ ೩೮ ॥ ತೇ ವಿವೇಕಾಚೇ ಗಾಂವ । ಕೀ ಪರಬ್ರಹ್ಮೀಚೇ ಸ್ವಭಾವ । ನಾ ತರೀ ಅಳಂಕಾರಲೇ ಅವಯವ । ಬ್ರಹ್ಮವಿದ್ಯೇಚೇ ॥ ೩೯ ॥ ತೇ ಸತ್ತ್ವಾಚೇ ಸಾತ್ವಿಕ । ಕೀ ಚೈತನ್ಯಾಚೇ ಆಂಗಿಕ । ಹೇ ಬಹು ಅಸೋ ಐಕೈಕ । ವಾನಿಸೀ ಕಾಯೀ ॥ ೧೪೦ ॥ ತೂ ಸಂತಸ್ತವನೀ ರತಸೀ । ತರೀ ಕಥೇಚೀ ಸೇನ ಕರಿಸೀ । ಕೀ ನಿರಾಳೀ ಬೋಲ ದೇಖಸೀ ಸನಾಗರ ॥ ೪೧ ॥ ಪರೀ ತೋ ರಸಾತಿಶಯೋ ಮುಕುಳೀ । ಮಗ ಗ್ರಂಥಾರ್ಥದೀಪ ಉಜಳೀ । ಕರೀ ಸಾಧು ಹೃದಯು ರಾವುಳೀ । ಮಂಗಳವುಖಾ ॥ ೪೨ ॥ ಐಸಾ ಗುರೂಚಾ ಉಮಾಯಿಲಾ । ನಿವೃತ್ತಿ ದಾಸಾಸೀ ಪಾತಲಾ । ಮಗ ತೋ ಮ್ಹಣೇ ಕೃಷ್ಣ ಬೋಲಿಲಾ । ತೇಚಿ ಆಇಕಾ ॥ ೪೩ ॥ ಅರ್ಜುನಾ ಅನಂತ ಸುಖಾಚ್ಯಾ ಡೋಹೀ । ಏಕ ಸರಾತಳಚಿ ಥೇತಲಾ ಜಿಹೀ । ಮಗ ಸ್ಥಿರಾವೂನಿ ತೇಹೀ । ತೇಚಿ ಜಾಹಾಲೇ ॥ ೪೪ ॥ ಅಥವಾ ಆತ್ಮಪ್ರಕಾಶೇ ಚೋಖೇ । ಜೋ ಆಪಣ ಪೇಂಚಿ ವಿಶ್ವ ದೇಖೇ । ತೋ ದೇಹೇಂಚೀ ಪರಬ್ರಹ್ಮ ಸುಖೇ । ಮಾನೂ ಯೇಈಲ ॥ ೪೫ ॥ ಜೇ ಸಾಚೋಕಾರೀ ಪರಮ । ನಾತೇ ಅಕ್ಷರ ನಿಃಸೀಮ । ಜಿಯೇ ಗಾಂವಿಚೇ ನಿಷ್ಕಾಮ । ಅಧಿಕಾರಿಯೇ ॥ ೪೬ ॥ ಜೇ ಮಹರ್ಷೀ ವಾಢಿಲೇ । ವಿರಕ್ತಾ ಭಾಗಾಫಿಟಲೇ । ಜೇ ನಿಃಸಂಶಯಾ ಪಿಕಲೇ । ನಿರಂತರ ॥ ೪೭ ॥

**ಅರ್ಥ—**ಅನುಭವದ ಹೊರ್ತು ಆಡಲು ಬರಲಾರದ ಮಾತನ್ನೀಗ ಆಡಿದರೆ ಉಪಯೋಗವೇನು ? ಯಾವನು ಸ್ವತಃ ಆತ್ಮಸ್ವರೂಪವನ್ನು ಹೊಂದಿರುವನೋ ಅವನಿಗೇ ಆದರ ಗುರ್ತು ಸಹಜವಾಗಿ ಹತ್ತುವದು. ॥ ೩೬ ॥ ಇಂಥ ಸುಖದಿಂದ ಯಾರು ಪರಿಪೂರ್ಣರಾಗಿರುವರೋ, ಮತ್ತು ಯಾರು ಸ್ವ-ಸ್ವರೂಪದಲ್ಲಿ ಮಗ್ನರಾಗಿರುವರೋ, ಅವರು ಮದ್ರೂಪವುಳ್ಳವರಾಗಿ ಬ್ರಹ್ಮಾನಂದದ ನಿರ್ಮಲವಾದ ಮೂರ್ತಿಯೇ ಆಗಿರುವರೆಂದು ನಾನು ತಿಳಿಯುತ್ತೇನೆ. ॥ ೩೭ ॥ ಅವನು ಆನಂದದ ಸ್ವರೂಪದ ಅಂಕುರ ಅಥವಾ ಆತ್ಮಬೋಧದ ಕ್ರೀಡಾಂಗಣವೇ ಆಗಿರುತ್ತಾನೆ. ॥ ೩೮ ॥ ಅವನು ವಿಚಾರ (ವಿವೇಕ)ದ ಗ್ರಾಮವು ! ಪರಬ್ರಹ್ಮದ ಸ್ವಭಾವವು ! ಇಷ್ಟೇ ಅಲ್ಲ; ಆದರೆ ಅವನ ಅವಯವ ಗಳು ಬ್ರಹ್ಮವಿದ್ಯಾಲಂಕಾರಗಳಿಂದ ಸುಶೋಭಿತವಾಗಿರುತ್ತವೆ. ॥ ೩೯ ॥ ಅದು ಸತ್ವದ ಸಾತ್ವಿಕ ಮತ್ತು ಚೈತನ್ಯದ ರೂಪವಾಗಿರುವದು. ಹೀಗೆ ಮಹಾರಾಜರು ಅದರ ವರ್ಣನೆ ಮಾಡುವ ಭರದಲ್ಲಿರುವಾಗ್ಗೆ ಶ್ರೀಗುರು ನಿವೃತ್ತಿದಾಸರು ಅನ್ನುತ್ತಾರೆ.— ಇದಂತೂ ಇರಲಿ, ಆ ಪುರುಷನ ವರ್ಣನೆಯನ್ನೆಷ್ಟು ಮಾಡುವೆ ! ॥ ೧೪೦ ॥ ನೀನು ಸಾಧು ಜನರ ಸ್ತೋತ್ರದಲ್ಲಿ ಮಗ್ನನಾದೆಯೆಂದರೆ ನಿನಗೆ ಕಥೆಯ ಸ್ಮರಣೆಯೇ ಉಳಿಯುವದಿಲ್ಲ. ಅವನ್ನು ಬಿಟ್ಟು ಇನ್ನೊಂದರ ವರ್ಣನೆಯನ್ನು ಚನ್ನಾಗಿ ಮಾಡಲುಪಕ್ರಮಿಸುವಿ. ॥ ೪೧ ॥ ಆದುದರಿಂದ ಆ ಸಾಧು ಜನರ ಸ್ತುತಿಯನ್ನು ಈಗ ಪೂರ್ಣ ಮಾಡು. ಮತ್ತು ಗೀತಾರ್ಥರೂಪವಾದ ದೀಪವನ್ನು ಬೆಳಗಿ ಸಾಧು ಜನರ ಹೃದಯ-ಮಂದಿರದಲ್ಲಿ ಜ್ಞಾನೋದಯವನ್ನುಂಟು ಮಾಡು. ॥ ೪೨ ॥ ಈ ಪ್ರಕಾರ ನಿವೃತ್ತಿ ದಾಸರಿಗೆ ಗುರು ಗಳು ಎಚ್ಚರ ಹೇಳಿದ್ದರಿಂದ ಅವರು ಆಮೇಲೆ ಅನ್ನುತ್ತಾರೆ— ಶ್ರೀಕೃಷ್ಣ ಪರಮಾತ್ಮನು ಹೇಳಿದುದನ್ನೇ ನಾನಿನ್ನು ಹೇಳುವೆನು. ಲಕ್ಷವನ್ನಿಟ್ಟು ಕೇಳಿರಿ. ॥ ೪೩ ॥ ಅರ್ಜುನಾ ! ಆತ್ಮಸುಖದ ಮಡುವಿನಲ್ಲಿ ಯಾವನು ಒಂದೇ ಕಾಲಕ್ಕೆ ತಳಕ್ಕೆ ಮುಟ್ಟುವಂತೆ ಮುಳುಗಿದ್ದಾನೆಯೋ, ಅವನು ಅಲ್ಲಿಯೇ ಸ್ಥಿರವಾಗಿ ಆತ್ಮಸ್ವರೂಪವೇ ಆಗಿರು ವನು. ॥ ೪೪ ॥ ಇಲ್ಲವೆ: ಆತ್ಮನ ನಿರ್ಮಲವಾದ ಪ್ರಕಾಶದಿಂದ ಯಾವನು ತನ್ನಲ್ಲಿಯೇ ವಿಶ್ವವನ್ನು ನೋಡು ತ್ತಾನೋ, ಅವನು ದೇಹದಲ್ಲಿದ್ದಾಗ್ಯೂ ಪರಬ್ರಹ್ಮಸ್ವರೂಪನಾಗಿರುವನೆಂದು ಸಹಜವೇ ತಿಳಿಯಲಿಕ್ಕೆ ಬರುವದು. ॥೪೫॥ ಅವನು ನಿಜವಾಗಿ ಅತ್ಯುತ್ತಮ, ಅವಿನಾಶ, ಅಮರ್ಯಾದವಾದಂಥ ಬ್ರಹ್ಮಸುಖದ ಅಧಿಕಾರಿಯೂ, ನಿರಿಚ್ಛನೂ ಆಗಿರುತ್ತಾನೆ. ॥ ೪೬ ॥ ಆ ಸುಖವು ಮಹರ್ಷಿಗಳ ದೆಸೆಯಿಂದಲೆಂದೇ ಕಾಯ್ದಿಟ್ಟಿರುತ್ತದೆ. ಅದು ವೈರಾಗ್ಯ ಶೀಲರ ಪಾಲಿಗೆ ಬಂದಿರುತ್ತದೆ. ಮತ್ತು ನಿಃಸಂದೇಹವುಳ್ಳ ಜೀವರುಗಳ ದೆಸೆಯಿಂದಲೇ ಪರಿಪಕ್ವವಾಗಿರುತ್ತದೆ. ॥ ೪೭ ॥

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥ ೨೬ ॥**

**[ ಕಾಮ ಕ್ರೋಧೇತಿ ]** ಜಿಹೀ ವಿಷಯಾ ಪಾಸೋನಿ ಹಿರತಲೇ । ಚಿತ್ತ ಆಪುಲೇ ಆಪಣ ಚಿಂತಿಲೇ । ತೇ ನಿಶ್ಚಿತ ಜೇಥ ಸುತಲೇ । ಚೇತೀಚಿನಾ ॥ ೪೮ ॥ ತೇ ಪರಬ್ರಹ್ಮ ನಿರ್ವಾಣ । ಜೇ ಆತ್ಮ ವಿದಾಂಚೇ ಕಾರಣ । ತೇಂಚಿ ತೇ ಪುರುಷ ಜಾಣ । ಪಂಡು ಕುಮರಾ ॥ ೪೯ ॥ ತೇ ಐಸೇ ಕೈಸೇನಿ ಜಾಹಾಲೇ । ಜೇ ದೇಹೀಚಿ ಬ್ರಹ್ಮತ್ವಾ ಆಲೇ । ಹೇ ಪುಸಸೀ ತರೀ ಭಲೇ । ಸಂಕ್ಷೇಪೇ ಸಾಂಗೋ ॥೧೫೦॥

**ಅರ್ಥ:—** ಯಾವನು ತನ್ನ ಮನಸ್ಸನ್ನು ವಿಷಯದಿಂದ ಹಿಂತಿರುಗಿಸಿ ಜಯಶಾಲಿಯಾಗಿರುವನೋ ಅವನು ಎಲ್ಲಿ ಮಲಗಿರುವನೋ, ಅಲ್ಲಿಂದ ನಿಶ್ಚಯವಾಗಿ ಎಚ್ಚರವಾಗುವದಿಲ್ಲ. ಅವನು ಬ್ರಹ್ಮ ಸ್ವರೂಪದಲ್ಲಿ ಮಗ್ನನಾಗಿರುವದರಿಂದ ದೇಹಭಾನವು ಅವನಿಗುಂಟಾಗುವದಿಲ್ಲ. ॥ ೪೮ ॥ ಎಲೋ ಪಂಡುಪುತ್ರನೇ, ಆ ಪುರುಷನು ಆತ್ಮಜ್ಞಾನಿಯಾಗಿರುವದ ರಿಂದ ಅವನು ಕೈವಲ್ಯ ಪರಬ್ರಹ್ಮಸ್ವರೂಪನೇ ಆಗಿರುವನು. ॥ ೪೯ ॥ ಅವನು ಹೀಗೆ ಹೇಗಾದನು ? ದೇಹದಲ್ಲಿದ್ದಾಗ್ಯಾ ದರೂ ಬ್ರಹ್ಮತ್ವವನ್ನು ಹೇಗೆ ಹೊಂದಿದನೆಂಬುದನ್ನು ನೀನು ಕೇಳಬಹುದು. ಆದರೆ ನಿನಗೆ ಅದನ್ನು ಸಂಕ್ಷೇಪವಾಗಿಯೇ ಹೇಳುತ್ತೇನೆ ಕೇಳು. ॥ ೧೫೦ ॥

**ಸ್ಪರ್ಶಾನ್ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥ ೨೭ ॥**

**[ ಸ್ಪರ್ಶಾನ್ಕೃತ್ವೇತಿ ]** ತರೀ ವೈರಾಗ್ಯಾಚೇನಿ ಆಧಾರೇ । ಜೇಹೀ ವಿಷಯ ದವಡೂನಿ ಬಾಹಿರೇ । ಶರೀರೀ ಏಕಂದರೇ । ಕೇಲೇ ಮನ ॥ ೫೧ ॥ ಸಹಜೇ ತಿಹೀ ಸಂಧೀ ಭೇಟೇ । ಜೇಥ ಭ್ರೂಪಲ್ಲವಾಪಡೇ ಗಾಂಠೀ । ತೇಥ ಪಾಠಿ ಮೋರೀ ದಿಠೀ । ಪಾಲಟೋನಿಯಾ ॥೫೨॥ ಸಾಂಡೂನಿ ದಕ್ಷಿಣ ವಾಮ । ಪ್ರಾಣಾಪಾನ ಸಮ । ಚಿತ್ತೇಸೀ ವ್ಯೋಮಗಾಮಿಯೇ ಕರಿತೀ ॥೫೩॥

**ಅರ್ಥ—** ಆದರೆ ವೈರಾಗ್ಯದ ಆಧಾರದಿಂದ ವಿಷಯಗಳನ್ನು ಹೊರಗೆ ದೂಡಿ ಯಾವ ಶರೀರದಲ್ಲಿ ತಮ್ಮ ಮನಸ್ಸನ್ನು ಏಕನಿಷ್ಠವಾಗಿಡುತ್ತಾರೆ. ॥ ೫೧ ॥ ಇಡ, ಪಿಂಗಲಗಳಲ್ಲಿಯ ಪ್ರಾಣವಾಯುವನ್ನು ಸುಷುಮ್ನೆಯಲ್ಲಿ ಒಯ್ದು ಲಲಾಟ ಚಕ್ರದಲ್ಲಿ ಸ್ವರೂಪದ ಕಡೆಗೆ ದೃಷ್ಟಿಯನ್ನು ಹಿಂದಕ್ಕೆ ತಿರುಗಿಸಿ ಸ್ಥಿರಪಡಿಸುತ್ತಾರೆ. ॥ ೫೨ ॥ ಎಡಕಿನ ಮತ್ತು ಬಲಕಿನ ಮೂಗಿನ ಹೊರಳೆಗಳನ್ನುಳಿದು ಪ್ರಾಣ ಮತ್ತು ಅಪಾನ ಈ ವಾಯುವನ್ನು ಒಂದೇ ಮಾಡಿ ಚಿತ್ತವನ್ನು ಚಿದಾಕಾಶದಲ್ಲಿ ಒಯ್ಯುತ್ತಾರೆ. ॥ ೫೩ ॥

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ॥ ೨೮ ॥**

**[ ಯತೇಂದ್ರಿಯೇತಿ ]** ತೇಥ ಜೈಸೀ ರಥ್ಯೋದಕೇ ಸಕಳೇ । ಘೇವೂನಿ ಗಂಗಾ ಸಮುದ್ರೀ ಮಿಳೇ । ಮಗ ಏಕೇಕ ವೇಗಳೇ । ನಿವಡೂ ನಯೇ ॥ ೫೪ ॥ ತೈಸೀ ವಾಸನಾಂತ ರಾಚೀ ವಿವಂಚನಾ । ಮಗ ಆಪೈಸೀ ಪಾರುಖೇ ಅರ್ಜುನಾ । ಜೇ ವೇಳೀ ಗಗನೀ ಲಯೋ ಮನಾ । ಪವನೇ ಕೀಜೇ ॥ ೫೫ ॥ ಜೇಥ ಹೇ ಸಂಸಾರ ಚಿತ್ರ ಉಮಟೇ । ತೋ ಮನೋರೂಪ ಪಟಿ ಫಾಟೇ । ಜೈಸೇ ಸರೋವರ ಆಟೇ । ಮಗ ಪ್ರತಿಭಾ ನಾಹೀ ॥ ೫೬ ॥ ತೈಸೇ ಮನ ಏಥ ಮುದಲ ಜಾಯೇ । ಮಗ ಅಹಂಭಾವಾದಿಕ ಕೇ ಆಹೇ । ಮ್ಹಣೋನಿ ಶರೀರೇಂಚಿ ಬ್ರಹ್ಮ ಹೋಯೇ । ಅನುಭವೀತೋ ॥ ೫೭ ॥

**ಅರ್ಥ—** ಗಂಗಾ ಪ್ರವಾಹವು ಮಾರ್ಗದಲ್ಲಿ ಸಿಕ್ಕ ಹೊಲಸು, ಮತ್ತು ಸ್ವಚ್ಛ ನೀರಿನ ಎಷ್ಟೋ ಪ್ರವಾಹಗಳನ್ನು ಕೂಡಿಕೊಂಡು ಸಮುದ್ರಕ್ಕೆ ಕೂಡುವದು. ಆಮೇಲೆ ಗಂಗಾ ಪ್ರವಾಹವಾಗಲೀ, ಹೊಲಸು ನೀರಾಗಲಿ ಬೇರೆಯಾಗಿ ಕಾಣುವದಿಲ್ಲ. ॥ ೫೪ ॥ ಅದೇ ಪ್ರಕಾರ ಅರ್ಜುನನೇ ! ಯಾವಾಗ ಚಿದಾಕಾಶದಲ್ಲಿ ಮನಸ್ಸು ಮತ್ತು ಪ್ರಾಣಗಳು ವಿರೋಧವಾಗಿ ಲಯ ಹೊಂದುತ್ತದೆ ಆವಾಗ ವಾಸನಾರೂಪವಾದ ವಿಚಾರವು ತನ್ನಿಂದ ತಾನೇ ಇಲ್ಲದಂತಾಗುತ್ತದೆ. ॥ ೫೫ ॥ ಯಾವ ಮನೋರೂಪವಾದ ಪಟದ ಮೇಲೆ ಈ ಸಂಸಾರರೂಪ ಚಿತ್ರವು ಮೂಡಿರುತ್ತದೋ, ಆ ಚಿತ್ರವು ತನ್ನಿಂದ ತಾನೇ—ಇಲ್ಲದಂತಾಗುತ್ತದೆ. ಸರೋವರದ ನೀರು ಅಟ್ಟಿಸಿದಾಗ ಅದರಲ್ಲಿಯ ಪ್ರತಿಬಿಂಬವು ಯಾವ ಪ್ರಕಾರ ಮಾಯವಾಗುವದೋ, ॥ ೫೬ ॥ ಅದೇ ಪ್ರಕಾರ ಮುಖ್ಯವಾದ ಮನಸೇ ಇಲ್ಲದಂತಾದ ಮೇಲೆ ಅದನ್ನವಲಂಬಿಸಿದ ಅಹಂಕಾರ ಮುಂತಾದವುಗಳು ಎಲ್ಲಿಂದ ಉಳಿಯುವವು ? ಅಂತೇ ಬ್ರಹ್ಮಸ್ವರೂಪದ ಅನುಭವ ತೆಗೆದುಕೊಳ್ಳುವವರು ದೇಹಧಾರಿಗಳಿರುವಾಗಲೇ ಬ್ರಹ್ಮರೂಪರಾಗುತ್ತಾರೆ. ॥ ೫೭ ॥

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥ ೨೯ ॥**

**ಇತಿ ಶ್ರೀ ಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ 'ಸನ್ಯಾಸಯೋಗೋ' ನಾಮ ಪಂಚಮೋಽಧ್ಯಾಯಃ ॥ ೫ ॥**

**[ ಭೋಕ್ತಾರಂ ಯಜ್ಞತಪಸಾಮಿತಿ ]** ಆಯ್ಕೇ ಮಾಗಾ ಹನ ಸಾಂಗಿತಲೇ । ಜೇ ದೇಹೀಂಚಿ
ಬ್ರಹ್ಮತ್ವ ಪಾವಲೇ । ತೇ ಯೇಣೇ ಮಾರ್ಗೇ ಆಲೇ । ಮ್ಹಣವೂನಿಯಾ ॥ ೫೮ ॥ ಆಣಿ ಯಮ
ನಿಯಮಾಂಚೇ ಡೊಂಗರ । ಅಭ್ಯಾಸಾಚೇ ಸಾಗರ । ಕ್ರಮೋನಿ ಹೇಪಾರ । ಪಾತಲೇ ತೇ ॥ ೫೯ ॥ ತಿಹೀ
ಆಪಣಪೇ ಕರೂನಿ ನಿರ್ಲೇಪ । ಪ್ರಪಂಚಾಚೇ ಫೇತಲೇ ಮಾಪ । ಮಗ ಸಾಚ ಶಾಂತೀಚೇಂಚಿ ರೂಪ ।
ಹೋವುನಿ ಠೇಲೆ ॥ ೧೬೦ ॥ ಐಸಾ ಯೋಗ ಯುಕ್ತೀಚಾ ಉದ್ದೇಶ । ಜೇಥ ಬೋಲಿಲಾ ಹೃಷೀಕೇಶ ।
ತೇಥ ಅರ್ಜುನ ಸುದಂಶ । ಮ್ಹಣೋನಿ ಚಮತ್ಕಾರಿಲಾ ॥ ೬೧ ॥ ತೇ ದೇಖಿಲಿಯಾ ಕೃಷ್ಣೇ ಜಾಣಿತಲೇ ।
ಮಗ ಹಾಂಸೋನಿ ಪಾರ್ಥಾತೇ ಮ್ಹಣಿತಲೇ । ಕಾಯೀ ಪಾ ಚಿತ್ತ ಉವಾಇಲೇ । ಇಯೇ ಬೋಲೋ
ತುಝೇ ॥ ೬೨ ॥ ತವ ಅರ್ಜುನ ಮ್ಹಣೇ ದೇವೋ । ಪರಚಿತ್ತ ಲಕ್ಷಣಾಚಾ ರಾವೋ । ಭಲಾ ಜಾಣಿತಲಾ
ಜೀಭಾವೋ । ಮಾನಸ ಮಾಝಾ ॥ ೬೩ ॥ ಮ್ಯಾ ಜೇ ಕಾಂಹೀ ವಿವರೂನಿ ಪುಸಾವೇ । ತೇ ಆಧೀಂಚಿ
ಜಾಣಿತಲೇ ದೇವೇ । ತರೀ ಬೋಲಿಲೇ ತೇಚಿ ಸಾಂಗಾವೇ । ವಿವಳ ಕರೂನಿ ॥ ೬೪ ॥ ಯೇರ್ಹವೀ
ತರೀ ಅವಧಾರಾ । ಜೋ ದಾವಿಲಾ ತುಮ್ಹೀ ಅನುಸಾರಾ । ತೋ ಪನ್ನಗ್ರ್ಯಾಹೂನಿ ಪಾಯಉತಾರಾ ।
ಸೋಹಪಾ ಜೈಸಾ ॥ ೬೫ ॥ ತೈಸಾ ಸಾಂಖ್ಯಾಹೂನಿ ಪ್ರಾಂಜಳಾ । ಆಮ್ಹಾ ಸಾರಿಖಿಯಾ ಅಬಳಾ ।
ಏಥ ಆಥಿ ಪರೀ ಕಾಂಹೀ ಕಾಳಾ । ತೋ ಸಾಹೋಯೇವತ ॥ ೬೬ ॥ ಮ್ಹಣೋನಿ ಏಕವೇಳ ದೇವಾ ।
ತೋಚಿ ಪಡತಾಳಾ ಫೇಯಾವಾ । ವಿಸ್ತಾರೇಲ ತರೀ ಸಾಂಗಾವಾ । ಸಾದ್ಯಂತಚಿ ॥ ೬೭ ॥ ತವ
ಶ್ರೀಕೃಷ್ಣ ಮ್ಹಣತೀ ಹೋ ಕಾ । ತುಜ ಹಾ ಮಾರ್ಗ ಗಮಲಾನಿಕಾ । ತರೀ ಕಾಯ ಜಾಹಾಲೇ ಆಇಕೀ
ಚೋ ಕಾ । ಸುಖೇ ಬೋಲೋ ॥ ೬೮ ॥ ಅರ್ಜುನಾ ತೂ ಪುಸಸೀ । ಪುಸೋನಿ ಅನುಷ್ಠಿಸೀ । ತರೀ
ಆಮ್ಹಾಂಸೀಚಿ ವಾಣಿ ಕಾಯಸೀ । ಸಾಂಗಾವಯಾಚೀ ॥ ೬೯ ॥ ಆಧೀಂಚ ಚಿತ್ತ ಮಾಯೇಚೇ । ವರೀ
ಮಿಷ ಜಾಹಾಲೇ ಪಢಿಯಂತಯಾಚೇ । ಅತಾ ತೇ ಅದ್ಭುತಪಣ ಸ್ನೇಹಾಚೇ । ಕವಣ ಜಾಣೇ ॥ ೧೭೦ ॥
ತೇ ಮ್ಹಣೋ ಕಾರುಣ್ಯರಸಾಚೀ ವೃಷ್ಟೀ । ಕೀ ನವಯಾ ಸ್ನೇಹಾಚೀ ಸೃಷ್ಟೀ । ಹೇ ಅಸೋ ನೇಣಿಜೇ
ದೃಷ್ಟೀ । ಹರೀಚೀ ವಾನೂ ॥ ೭೧ ॥ ಜೇ ಅಮೃತಾಚೀ ವೊತಲೀ । ಕೀ ಪ್ರೇಮಾಚೀ ಪೀವೂನ
ಮಾತಲೀ । ಮ್ಹಣೂನಿ ಅರ್ಜುನ ಮೋಹೇ ಗುಂತಲೀ । ನಿಘೋ ನೇಣೇ ॥ ೭೨ ॥ ಹೇ ಬಹು ಜೇಜೇ
ಜಲ್ಪಿಜೇಲ । ತೇಥೆ ಕಥೇಚಿ ಫಾಂಕ ಹೋಈಲ । ಪರೀ ತೇ ಸ್ನೇಹ ರೂಪಾ ನ ಯೇಲ ।
ಬೋಲವರೀ ॥ ೭೩ ॥ ಮ್ಹಣೋನಿ ವಿಸುರಾ ಕಾಯಯೇಣೇ । ತೋ ಈಶ್ವರ ಕವಳಾವಾ ಕವಣೇ ।
ಜೋ ಆಪುಲೇ ಮಾನನೇಣೇ । ಆಪಣಚಿ ॥ ೭೪ ॥ ತರೀ ಮಾಗೀಲ ಧ್ವನೀ ಆಂತ । ಮಜ ಗಮಲಾ
ಸಾವಿಯಾಚೀ ಮೋಹಿತ । ಜೇ ಬಳಾತ್ಕಾರೇ ಅಸೇ ಮ್ಹಣತ । ಪರಿಸ ಬಾಪಾ ॥ ೭೫ ॥ ಅರ್ಜುನಾ
ಜೇಣೇ ಜೇಣೇ ಭೇದೇ । ತುಝೇ ಕಾ ಚಿತ್ತ ಬೋಧೇ । ತೈಸೇ ತೈಸೇ ವಿನೋದೇ । ನಿರೂಪಿಜೇಲ ॥ ೭೬ ॥
ತೋ ಕಾ ಇಸಯಾ ನಾವ ಯೋಗ । ತಯಾಚಾ ಕವಣ ಉಪೇಗ । ಅಥವಾ ಅಧಿಕಾರ ಪ್ರಸಂಗ । ಕವಣಾ
ಏಥ ॥ ೭೭ ॥ ಐಸೇ ಜೇ ಜೇ ಕಾಹೀ । ಉಕ್ತ ಅಸೇ ಇಯೇ ಠಾಯೀ । ತೇ ಆಘವೇಚಿ ಪಾಹೀ ।
ಸಾಂಗೇನ ಆತಾ ॥ ೭೮ ॥ ತೂ ಚಿತ್ತ ದೇವೂನಿ ಅವಧಾರೀ । ಐಸೇ ಮ್ಹಣೋನಿ ಶ್ರೀಹರೀ । ಬೋಲಿ
ಜೇಲ ತೇ ಪುಢಾರೀ । ಕಥಾ ಆಹೇ ॥ ೭೯ ॥ ಶ್ರೀಕೃಷ್ಣ ಆರ್ಜುನಾಸೀ ಸಂಗ । ನ ಸಾಂಡೋನಿ
ಸಾಂಗೇಲ ಯೋಗ । ತೋ ವ್ಯಕ್ತ ಕರೂ ಪ್ರಸಂಗ । ಮ್ಹಣೇ ನಿವೃತ್ತಿದಾಸ ॥ ೧೮೦ ॥

**ಇತಿ ಶ್ರೀ ಜ್ಞಾನದೇವ ಕೃತಾಯಾಂ ಭಾವಾರ್ಥ ದೀಪಿಕಾಯಾಂ ಪಂಚಮೋऽಧ್ಯಾಯಃ ॥ ೫ ॥ ಶ್ಲೋಕ ೨೯, ಓವಿಗಳು ೧೮೦**

**ಅರ್ಥ**— ಈ ಯೋಗಮಾರ್ಗದಿಂದಲೇ ಕೆಲವು ಜನರು ಜೀವಂತರಿರುವಾಗಲೇ ಬ್ರಹ್ಮಸ್ವರೂಪರಿರುವರೆಂದು ನಾವು ಮೊದಲೇ ಹೇಳಿದ್ದೇವೆ. ॥ ೫೮ ॥ ಅಂತೆಯೇ ಅವರು ಯಮ-ನಿಯಮ-ಯೋಗ ಮಾರ್ಗದ ಪರ್ವತವನ್ನು ಮತ್ತು ಯೋಗಾಭ್ಯಾಸರೂಪ ಸಮುದ್ರವನ್ನೂ ದಾಟಿ ಪಾರಾಗಿರುವರು. (ಬ್ರಹ್ಮಸ್ವರೂಪವನ್ನು ಪ್ರಾಪ್ತಮಾಡಿಕೊಂಡಿರುವರು.) ॥ ೫೯ ॥ ಮತ್ತು ಅವರೇ ಸ್ವತಃ ತಾವು ಉಪಾಧಿರಹಿತರಾಗಿ ಪ್ರಪಂಚವನ್ನು ಜಯಿಸಿ ಅದರಿಂದ ಮುಕ್ತರಾಗಿರುವರು, ಆದ್ದರಿಂದ ಅವರು ನಿಜವಾಗಿ ಬ್ರಹ್ಮಸ್ವರೂಪವೇ ಆಗಿರುವರು. ॥ ೧೬೦ ॥ ಈ ಪ್ರಕಾರ ಯಾವಾಗ ಶ್ರೀ ಕೃಷ್ಣನು ಯೋಗ ಯುಕ್ತಿಯ ಉಪಾಯವನ್ನು ಪ್ರಕಟಮಾಡಿದನೋ, ಆವಾಗ ಅರ್ಜುನನು ಅದರ ಮರ್ಮವನ್ನು ಬಲ್ಲವನಾದ್ದರಿಂದ ಬಹಳೇ ಆಶ್ಚರ್ಯಹೊಂದಿದನು. ॥ ೬೧ ॥ ಇದನ್ನು ನೋಡಿ ಕೃಷ್ಣನು ಅವನ ಮನಸಿನೊಳಗಿನ ಅಭಿಪ್ರಾಯವನ್ನು ತಿಳಿದು ನಗೆಮೊಗದಿಂದ ಪಾರ್ಥನಿಗೆ ಅನ್ನುತ್ತಾನೆ.— ನನ್ನ ಸಂಭಾಷಣದಿಂದ ನಿನ್ನ ಮನಸು ಇಷ್ಟು ಪ್ರಸನ್ನವಾದುದೇಕ? ಎನ್ನಲು ॥ ೬೨ ॥ ಅರ್ಜುನನು ಅನ್ನುತ್ತಾನೆ— ದೇವಾ! ಎರಡನೆಯವರ ಅಂತಃಕರಣವಲ್ಲಿ ಉದ್ಭವಿಸಿದ ಮನೋಗತವನ್ನು ತಿಳಿಯುವವರಲ್ಲಿ ಶ್ರೇಷ್ಠ ಅರಸನಾಗಿರುವಿ. ಆದುದರಿಂದ ನನ್ನ ಮನಸಿನೊಳಗಿನ ಭಾವವನ್ನು ನೀನು ಚನ್ನಾಗಿ ಅರಿತುಕೊಂಡಿರುವಿ. ॥ ೬೩ ॥ ನಾನು ಯಾವದನ್ನು ವಿನರಿಸಿ ಕೇಳಬೇಕೆಂದು ಮಾಡಿದ್ದೆನೋ ಅದರ ಲಕ್ಷಣವನ್ನು ನೀನು ಮೊದಲಿಗೇ ತಿಳಿದಿರುವೆ. ಅಂದಬಳಿಕ ಈಗ ನನಗೆ ಹೇಳುವ ವಿಷಯವನ್ನು ಹೆಚ್ಚಿಗೆ ಸ್ಪಷ್ಟವಾಗಿ ಹೇಳಬೇಕು. ॥ ೬೪ ॥ ಯೋಗಶಾಸ್ತ್ರದ ಯಾವ ಮಾರ್ಗವನ್ನು ನೀವು ನನಗೆ ಹೇಳಿದಿರಿ ಅದು ಹೇಗಿರುವದೆಂದರೆ, ಆಳವಾದ ನೀರಿನೊಳಗಿಂದ ಈಸಿ ಹೋಗುವದರಕಿಂತಲೂ ಕಾಲುನಡಿಗೆಯಿಂದ ಹೋಗುವದು ಹೇಗೆ ಸುಲಭವಾಗಿರುವದೋ, ಹಾಗೆ ಅದೆ. ॥ ೬೫ ॥ ಅದೇ ಪ್ರಕಾರ ಜ್ಞಾನಯೋಗದಕಿಂತಲೂ ಅಷ್ಟಾಂಗಯೋಗವು ನಮ್ಮಂತಹ ನಿರ್ಬಲರಿಗೆ ಸುಗಮವಾಗಿರುವದು ಆದರೆ ಅದು ಕೆಲವು ಕಾಲಾಂತರದಿಂದ ತಡೆದು ಸಾಧ್ಯವಾಗುವಂತಹದಿದ್ದರೂ ನಡೆಯಬಹುದು. ॥ ೬೬ ॥ ಆದರೆ ದೇವಾ! ಆ ಯೋಗವನ್ನು ಪರೀಕ್ಷಿಸಿ ನೋಡುವದರ ದೆಸೆಯಿಂದ ಇನ್ನೊಂದು ಸಲ ಹೇಳಬೇಕು. ಅದರಿಂದ ಹೆಚ್ಚಿಗೆ ವಿಸ್ತಾರವಾಗುವದೇನೋ ನಿಜ! ಆದರೂ ಅದನ್ನು ಸಾದ್ಯಂತವಾಗಿ ಹೇಳಲೇ ಬೇಕು. ॥ ೬೭ ॥ ಆವಾಗ ಶ್ರೀಕೃಷ್ಣನು ಅನ್ನುತ್ತಾನೆ.— ಹೀಗೋ, ನಿನಗೆ ಈ ಯೋಗಮಾರ್ಗದ ವಿಷಯದಲ್ಲಿ ವಿಶೇಷವಾಗಿ ಪ್ರೀತಿಯುಂಟಾಗಿದ್ದರೆ, ನಾವೂ ಉತ್ಸಾಹದಿಂದ ಹೇಳುತ್ತೇವೆ. ಸಂತೋಷಚಿತ್ತನಾಗಿ ಆಲಿಸು. ॥ ೬೮ ॥ ಅರ್ಜುನನೇ! ನೀನು ಕೇಳುತ್ತಿ ಮತ್ತು ಕೇಳಿದಂತೆ ಆಚರಣೆಯನ್ನು ಮಾಡುವೆ. ಹೀಗಿರಲು ನಾವೇಕೆ ಹೇಳುವದನ್ನು ಕಡಿಮೆ ಮಾಡಬೇಕು? ॥ ೬೯ ॥ ಈ ಶ್ರೀಕೃಷ್ಣಾರ್ಜುನ ಸಂವಾದದ ಮೇಲೆ ಜ್ಞಾನೇಶ್ವರರು ಟೀಕೆಯನ್ನು ಮಾಡುತ್ತಾರೆ. ಮೊದಲಿಗೇ ತಾಯಿಯ ಅಂತಃಕರಣವು! ಅದರಲ್ಲಿ ಪ್ರೀತಿಯ ಮಗುವಿನ ನಿಮಿತ್ತವಿದ್ದಮೇಲೆ ಆ ಸ್ಥಳದಲ್ಲಿ ತೋರುವ ನಿಸ್ಸೀಮ ಪ್ರೇಮದ ಮಹಾತ್ಮೆಯು ಉಳಿದವರಿಗೆ ಹೇಗೆ ತಿಳಿಯುವದು? ॥ ೧೭೦ ॥ ಆ ಸ್ನೇಹಕ್ಕೆ ಕರುಣಾರಸದ ಮೊಳೆಗರೆಯಿತು. ಇಲ್ಲವೇ ನಿಸ್ಸೀಮ ಪ್ರೇಮದ ಹೊಸ ಸೃಷ್ಟಿಯೇ ನಿರ್ಮಾಣವಾಗಿರುವದೆಂದರೂ ನಡೆದೀತು. ಇದಂತೂ ಇರಲಿ! ಭಗವಂತನ ಕೃಪಾದೃಷ್ಟಿಯ ವರ್ಣನೆಯನ್ನು ಯಾರು ಮಾಡಬೇಕು? ॥ ೭೧ ॥ ಆ ಪ್ರೇಮದ ದೃಷ್ಟಿಯು ಅಮೃತದ ಮುಸಿಯಲ್ಲಿ ಸುರಿದಿರುವದು. ಇಲ್ಲವೇ ಪ್ರೇಮರಸವನ್ನು ಕುಡಿದು ಉನ್ಮತ್ತವಾಗಿರುವದರಿಂದ ಅರ್ಜುನನ ಮೋಹದಲ್ಲಿ ಸಿಲುಕಿ ಬಿದ್ದು ಹೊರಗೆ ಬರದಂತೆ ಆಗಿರುವದು. ॥ ೭೨ ॥ ಈ ವಿಷಯವಾಗಿ ಯಾವ ಯಾವದು ಹೆಚ್ಚಿಗೆ ಮಾತಾಡಬೇಕೋ ಆ ಆ ಮಾತಿನಿಂದ ಕಥೆಯ ವಿಷಯಾಂತರವಾದೀತು. ಆದರೆ ಶ್ರೀಕೃಷ್ಣ ಮತ್ತು ಅರ್ಜುನ ಇವರಲ್ಲಿಯ ಸ್ನೇಹದ ವರ್ಣನೆಯನ್ನು ಶಬ್ದದಿಂದ ಮಾಡಲಿಕ್ಕೆ ಬರಲಾರದು. ॥ ೭೩ ॥ ಯಾವ ಪರಮೇಶ್ವರನಿಗೆ ಕೂಡ ತಮ್ಮ ಪ್ರೇಮದ ಅಳತೆಯನ್ನು ಮಾಡಲಿಕ್ಕೆ ಬರುವದಿಲ್ಲವೋ, ಆ ಪರಮೇಶ್ವರನ ಪ್ರೇಮವನ್ನು ತಿಳಿಯುವವರಾರು? ಆದ್ದರಿಂದ ಈ ವಿಚಾರ ಮಾಡುತ್ತ ಕೂಡುವದರಲ್ಲಿ ಪ್ರಯೋಜನವೇನೂ ಇಲ್ಲ. ॥ ೭೪ ॥ ಆದರೆ ಹಿಂದೆ ಹೇಳಿದ ಅಭಿಪ್ರಾಯದ ಮೇಲಿಂದ ನೋಡಲು "ಅರ್ಜುನನ ವಿಷಯಕವಾಗಿ ಶ್ರೀಕೃಷ್ಣನು ಬಹಳೇ ಮೋಹಿತನಾಗಿರುವನೆಂದು" ನನಗೆ ಕಂಡುಬರುತ್ತದೆ. ಏಕೆಂದರೆ ಶ್ರೀಕೃಷ್ಣನು ಬಲತ್ಕಾರ ಮಾಡಿ ಅಪ್ಪಾ ಅರ್ಜುನನೇ ನನ್ನ ಭಾಷಣವನ್ನು ಕೇಳು ಎಂದು ಆಗ್ರಹಪಡುತ್ತಾನೆ. ॥೭೫॥ ಅರ್ಜುನಾ! ಯಾವ ಯಾವ ಪ್ರಕಾರ ನಿನ್ನ ಮನಸಿಗೆ ಬೋಧವಾದೀತೋ ಅದೇ ಪ್ರಕಾರ

ನಿನಗೆ ನಾವು ಔತ್ಸುಕ್ಯದಿಂದ ಈ ಮಾರ್ಗವನ್ನು ಹೇಳುವೆವು. ॥ ೭೬ ॥ ಆ ಯೋಗಕ್ಕೆ ಏನು ಅನ್ನುತ್ತಾರೆ? ಅದರ ಉಪಯೋಗವೇನು? ಅದನ್ನು ಆಚರಿಸುವ ಅಧಿಕಾರಿಗಳಾರು? ॥ ೭೭ ॥ ಹೀಗೆ ಇದರ ಸಂಬಂಧವಾದ ಎಲ್ಲವನ್ನೂ ನಿನ್ನ ಮುಂದೆ ನಾವೀಗ ಹೇಳುತ್ತೇವೆ. ॥ ೭೮ ॥ ಆದ್ದರಿಂದ ನೀನು ಚಿತ್ತಗೊಟ್ಟು ಕೇಳು. ಹೀಗೆ ಸಂಭಾಷಣಮಾಡಿ ಶ್ರೀಹರಿಯು ಯಾವದನ್ನು ಹೇಳಿದನೋ ಆ ಕಥೆಯು ಮುಂದು ಬರುತ್ತದೆ. ॥ ೭೯ ॥ ಶ್ರೀ ನಿವೃತ್ತಿದಾಸ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ಆದರೆ ದ್ವೈತಸಿದ್ಧಾಂತವನ್ನು (ಸೇವ್ಯ ಸೇವಕತ್ವವನ್ನು) ಸ್ಥಿರವಾಗಿಟ್ಟ ಶ್ರೀಕೃಷ್ಣನು ಅರ್ಜುನನಿಗೆ ಯಾವ ಯೋಗವನ್ನು ಹೇಳಿದನೋ ಅದನ್ನು ನಾವು ಸ್ಪಷ್ಟಮಾಡಿ ಹೇಳುತ್ತೇವೆ. ॥ ೧೮೦ ॥

**ಶ್ರೀಮದ್ಭಗವದ್ಗೀತೆಯ ಮತ್ತು ಶ್ರೀ ಜ್ಞಾನೇಶ್ವರಿಯ ಸುಲಭ, ಸರಲ ಕನ್ನಡ ಅನುವಾದದ ಐದನೆಯ ಅಧ್ಯಾಯವು ಮುಗಿದುದು.**

## ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**



# ಜ್ಞಾನೇಶ್ವರೀ

## ಆರನೆಯ ಅಧ್ಯಾಯವು

ಮಗ ರಾಯಾತೇ ಮ್ಹಣೇ ಸಂಜಯೋ। ತೋಚಿ ಅಭಿಪ್ರಾಯು ಅವಧಾರಿಜೋ। ಶ್ರೀಕೃಷ್ಣ ಸಾಂಗತೀ ಆತಾ ಜೋ। ಯೋಗರೂಪ ॥ ೧ ॥ ಸಹಜೇ ಬ್ರಹ್ಮರಸಾಚೇ ಪರಗುಣೇ। ಕೇಲೇ ಅರ್ಜುನಾಲಾಗೀ ನಾರಾಯಣೇ। ಕೀ ತೇಚಿ ಅವಸರೀಪಾಹುಣೇ। ಪಾತಲೋ ಆಮ್ಹೀ ॥ ೨ ॥ ಕೈಸೀ ದೈವಾಚೀ ಥೋರೀ ನೇಣಿಜೇ। ಜೈಸೇ ತಾನ್ಹೇಲಿಯಾ ತೋಯ ಸೇವಿಜೇ। ಕೀ ತೇಚಿ ಚವೀ ಕರೂನಿ ಪಾಹಿಜೇ। ತವ ಅಮೃತ ಆಹೇ ॥ ೩ ॥ ತೈಸೇ ಆಮ್ಹಾ ತುಮ್ಹಾ ಜಾಹಾಲೇ। ಜೇ ಆಡಮುಠೀ ತತ್ವಫಾವಲೇ। ತವ ಧೃತರಾಷ್ಟ್ರೇ ಮ್ಹಣಿತಲೇ। ಹೇ ನ ಪುಸೋ ತೂ ತೇ ॥ ೪ ॥ ತಯಾ ಸಂಜಯಾ ಯೇಣೇಬೋಲೆ। ರಾಯಾಚೇ ಹೃದಯ ಚೋಜವಲೇ। ಜೇ ಅವಸರೀ ಆಹೇ ಫೇಂಠಲೇ। ಕುಮರಾಚಿಯಾ ॥ ೫ ॥ ಹೇ ಜಾಣೋನಿ ಮನೀ ಹಾಸಿಲಾ। ಮ್ಹಣೇ ಮ್ಹಾತಾರಾ ಮೋಹೇ ನಾಶಿಲಾ। ಯೇರ್ಹವೀ ಬೋಲ ತರೀ ಭಲಾ ಜಾಹಾಲಾ। ಅವಸರೀಂಇಯೇ ॥ ೬ ॥ ಪರೀ ತೇ ತೈಸೇ ಕೈಸೇನಿ ಹೋಈಲ। ಜಾತ್ಯಂಧಾ ಕೈಸೇ ಪಾಹೇಲ। ತೇವಿಚಿ ಯೇರೂ ರೋಷ ಘೇಈಲ। ಮ್ಹಣೋನಿ ಬಿಹೇ ॥ ೭ ॥ ಪರೀ ಆಪಣ ಚಿತ್ತೀ ಆಪುಲಾ। ನಿಕಿಯಾ ಪರೀ ಸಂತೋಷಲಾ। ಜೇ ತೋ ಸಂವಾದ ಫಾವಲಾ। ಶ್ರೀಕೃಷ್ಣಾರ್ಜುನಾಚಾ ॥ ೮ ॥ ತೇಣೇ ಆನಂದಾಚೇನಿ ಥಾಲೇಪಣೇ। ಸಾಭಿಪ್ರಾಯ ಅಂತಃಕರಣೇ। ಆತಾ ಆದರೇಸೀ ಬೋಲಣೇ। ಘಡೇಲ ತಯಾ ॥ ೯ ॥ ತೋ ಗೀತೇಮಾಜೀ ಷಷ್ಠೀಚಾ। ಪ್ರಸಂಗ ಅಸೇ ಆಯಣೀಚಾ। ಜೈಸಾ ಕ್ಷೀರಾರ್ಣವೀ ಅಮೃತಾಚಾ। ನಿವಾಡ ಜಾಹಲಾ ॥ ೧೦ ॥ ತೈಸೇ ಗೀತಾರ್ಥಾಚೇ ಸಾರ। ಜೇ ವಿವೇಕಸಿಂಧೂಚೇ ಪಾರ। ನಾನಾ ಯೋಗವಿಭವ ಭಾಂಡಾರ। ಉಘಡಲೇ ಕಾ ॥ ೧೧ ॥ ಜೇ ಆದಿ ಪ್ರಕೃತೀಚೇ ವಿಸರಣೇ। ಜೇ ಶಬ್ದ ಬ್ರಹ್ಮಾಸಿ ನ ಬೋಲಣೇ। ಜೇಥೂನಿ ಗೀತಾವಲ್ಲೀಚೇ ತಾಣೇ। ಪ್ರರೋಹಪಾವೇ ॥ ೧೨ ॥ ತೋ ಅಧ್ಯಾಯ ಸಾಹಾವಾ। ವರೀ ಸಾಹಿತ್ಯಾಚಿಯಾ ಬರವಾ। ಸಾಂಗಿಜೇಲ ಮ್ಹಣೋನಿ ಪರಿಸಾವಾ। ಚಿತ್ತ ದೇವುನೀ ॥ ೧೩ ॥ ಮಾಝಾ ಮ್ಹರಾಟಾಚೀ ಬೋಲ ಕೌತುಕೇ। ಪರೀ ಅಮೃತಾತೇಹೀ ಪೈಜ ಜಿಂಕೇ। ಐಸೀ ಅಕ್ಷರೇ ರಸೀಕೇ। ಮೇಳವೀನ ॥ ೧೪ ॥ ಜಿಯೇ ಕೋವಳಿಕೇಚೇನಿ ಪಾಡೇ। ದಿಸತೀ ನಾದೀಚೆ ರಂಗ ಥೋಡೇ। ವೇಧೇ ಪರಿಮಳಾಚೇ ಬೀಕಮೋಡೇ। ಜಯಾಚೇನಿ ॥ ೧೫ ॥ ಐಕಾ ರಸಾಳಪಣಾಚಿಯಾ ಲೋಭಾ। ಕೀ ಶ್ರವಣೇಚಿ ಹೋತೀ ಜಿಭಾ। ಬೋಲೇ ಇಂದ್ರಿಯಾ ಲಾಗೇ ಕಳಂಭಾ। ಏಕಮೇಕಾ ॥ ೧೬ ॥ ಸಹಜೇ ಶಬ್ದ ತರೀ ವಿಷೋ ಶ್ರವಣಾಚಾ। ಪರೀ ರಸನಾ ಮ್ಹಣೇ ರಸ ಹಾ ಆಮುಚಾ। ಘ್ರಾಣಾಸಿ ಭಾವ ಜಾಯ ಪರಿಮಳಾಚಾ। ಹಾ ತೋಚಿ ಹೋಈಲ ॥ ೧೭ ॥ ನವಲ ಬೋಲತೀಯೇ ರೇಖೇಚೀ ವಾಹಾಣೀ। ದೇಖತಾ ಡೋಳಾ ಪುರೋ ಲಾಗೇ ಧಣೀ। ತೇ ಮ್ಹಣತೀ ಉಘಡಲೀ ಖಾಣೀ। ರೂಪಾಚೀ ಹೇ ॥ ೧೮ ॥ ಜೇಥ ಸಂಪೂರ್ಣ ಪದ ಉಭಾರೇ। ತೇಥ ಮನಚಿ ಧಾವೇ ಬಾಹಿರೇ। ಬೋಲ ಭುಜಾಹೀ ಆವಿಷ್ಕರೇ। ಆಲಿಂಗಾವಯಾ ॥ ೧೯ ॥ ಐಸೀ ಇಂದ್ರಿಯೇ ಆಪುಲಾಲಿಯಾ ಭಾವೀ। ಝೋಂಬತೀ ಪರೀ ತೋ ಸರಿಸೇಪಣೇಂಚಿ ಬುಝಾವೀ। ಜೈಸಾ ಏಕಲಾ ಜಗ ಚೇವವೀ। ಸಹಸ್ರಕರ ॥ ೨೦ ॥ ತೈಸೇ ಶಬ್ದಾಚೇ ವ್ಯಾಪಕಪಣ। ದೇಖಿಜೇ ಅಸಾಧಾರಣ।

ಪಾಹಾತಯಾ ಭಾವಜ್ಞಾ ಫಾವತೀ ಗುಣ । ಚಿಂತಾಮಣೀಚೇ ॥ ೨೧ ॥ ಹೇ ಅಸೋ ತಯಾ ಬೋಲಾಚೀ ತಾಟೀ ಭಲೀ । ವರೀ ಕೈವಲ್ಯರಸೇ ವೋಗರಲೀ । ಹೀ ಪ್ರತಿಪತ್ತಿ ಮಿಯಾ ಕೇಲೀ । ನಿಷ್ಕಾಮಾಸೀ ॥ ೨೨ ॥ ಆತಾ ಆತ್ಮಪ್ರಭಾ ನಿತ್ಯನವೀ । ತೇಚಿ ಕರೂನಿ ಠಾಣದಿವೀ । ಜೋ ಇಂದ್ರಿಯಾತೇ ಚೋರೂನಿ ಜೇವೀ । ತಯಾಸೀಚಿ ಫಾವೇ ॥ ೨೩ ॥ ತೇಥ ಶ್ರವಣಾಚೇನಿ ಪಾಂಗೇ-। ವಿಣ ಶ್ರೋತಯಾ ವ್ಹಾವೇಲಾಗೇ । ಹೇ ಮನಾಚೇನಿ ನಿಜಾಂಗೇ । ಭೋಗಿಜೇ ಗಾ ॥ ೨೪ ॥ ಆಹಾಚ ಬೋಲಾಚೀ ವಾಲೀಫ ಫೇಡಿಜೇ । ಆಣಿ ಬ್ರಹ್ಮಾಚಿಯಾತಿ ಆಂಗಾ ಘಡಿಜೇ । ಮಗ ಸುಖೇಸೀ ಸುರವಾಡಿಜೇ । ಸುಖಾಚಿಮಾಜೀ ॥ ೨೫ ॥ ಐಸೇ ಹಳುವಾರಪಣ ಜರೀ ಯೇಈಲ । ತರೀಚ ಹೇ ಉಪೇಗಾ ಜಾಈಲ । ಯೇರ್ಹವೀ ಆಘವೀ ಗೋಷ್ಟೀ ಹೋಈಲ । ಮುಕಯಾ ಬಹಿರಯಾಚಿ ॥ ೨೬ ॥ ಪರೀ ತೇ ಅಸೋ ಆತಾ ಆಘವೇ । ನ ಲಗೇ ಶ್ರೋತಯಾಂತೇ ಕಡಸಾವೇ । ಜೇ ಅಧಿಕಾರಿಯೇ ಏಥ ಸ್ವಭಾವೇ । ನಿಷ್ಕಾಮ ಕಾಮ ॥ ೨೭ ॥ ಜಿಹೀ ಆತ್ಮಬೋಧಾಚಿಯಾ ಆವಡೀ । ಕೇಲೀ ಸ್ವರ್ಗ ಸಂಸಾರಾಚೀ ಕುರೋಂಡೀ । ತೇ ವಾಚೂನಿ ಏಥಿಂಚೀ ಗೋಡೀ । ನೇಣತೀ ಆಣಿಕ ॥ ೨೮ ॥ ಜೈಸಾ ವಾಯಸೀ ಚಂದ್ರ ನೋಳಖಿಜೇ । ತೈಸಾ ಪ್ರಾಕೃತೀ ಗ್ರಂಥ ಹಾ ನೇಣಿಜೇ । ಆಣಿ ತೋ ಹಿಮಾಂಶುಚಿ ಜೇವಿ ಖಾಜೇ । ಚಕೋರಾಚೇ ॥ ೨೯ ॥ ತೈಸಾ ಸಜ್ಞಾನಾಸೀ ತರೀ ಹಾ ಠಾವೋ । ಆಣಿ ಅಜ್ಞಾನಾಸೀ ಆನ ಗಾವೋ । ವ್ಹಣೋನಿ ಬೋಲಾವಯಾ ವಿಷಯು ಪಹಾಹೋ । ವಿಶೇಷ ನಾಹೀ ॥ ೩೦ ॥ ಪರೀ ಅನುವಾದಲೋ ಮೀ ಪ್ರಸಂಗೇ । ತೇ ಸಜ್ಜನಿ ಉಪಸಾಹಾವೇ ಲಾಗೇ । ಆತಾ ಸಾಂಗೇನ ಕಾಯ ಶ್ರೀರಂಗೇ । ನಿರೋಪಿಲೇಂಜೇ ॥ ೩೧ ॥ ತೇ ಬುದ್ಧೀಹಿ ಆಕಳಿತಾ ಸಾಂಕಡೇ । ವ್ಹಣವೂನಿ ಬೋಲೀ ವಿಪಾಯೇ ಸಾಂಪಡೇ । ಪರೀ ಶ್ರೀನಿವೃತ್ತಿಕೃಪಾದೀಪ ಉಜಿಯೇಡೇ । ದೇಖೇನ ಮೀ ॥ ೩೨ ॥ ಜೇ ದಿಠೀಹೀ ನ ಪವಿಜೇ । ತೇ ದಿಠೀವೀಣ ದೇಖಿಜೇ । ಜರೀ ಅತೀಂದ್ರಿಯ ಲಾಹಿಜೇ । ಜ್ಞಾನಬಳ ॥ ೩೩ ॥ ನಾತರೀ ಜೇ ಧಾತುವಾದಾಹೀ ನ ಜೋಡೇ । ತೇ ಲೋಹೀಂಚಿ ಪಂಧರೇ ಸಾಂಪಡೇ । ಜರೀ ದೈವಯೋಗೇ ಚಢೇ । ಪರಿಸ ಹಾತಾ ॥ ೩೪ ॥ ತೈಸೀ ಸದ್ಗುರುಕೃಪಾ ಹೋಯೇ । ತರೀ ಕರಿತಾ ಕಾಯ ಆಪು ನೋಹೇ । ವ್ಹಣವೂನಿ ತೇ ಅಪಾರ ಮಾತೇ ಆಹೇ । ಜ್ಞಾನದೇವ ವ್ಹಣೇ ॥ ೩೫ ॥ ತೇಣೇ ಕಾರಣೇ ಮೀ ಬೋಲೇನ । ಬೋಲೀ ಅರೂಪಾಚೇ ರೂಪ ದಾವೀನ । ಅತೀಂದ್ರಿಯ ಪರೀ ಭೋಗವೀನ । ಇಂದ್ರಿಯಾಕರವೀ ॥ ೩೬ ॥ ಆಇಕಾ ಯಶ ಶ್ರೀ ಔದಾರ್ಯ । ಜ್ಞಾನವೈರಾಗ್ಯ ಐಶ್ವರ್ಯ । ಹೇ ಸಾಹೀ ಗುಣವರ್ಯ । ವಸತೀ ಜೇಥ ॥ ೩೭ ॥ ವ್ಹಣೋನಿ ತೋ ಭಗವಂತ । ಜೋ ನಿಃಸಂಗಾಚಾ ಸಾಂಗಾತ । ತೋ ವ್ಹಣೇ ಪಾರ್ಥಾ ದತ್ತಚಿತ್ತ । ಹೋಯೀ ಆತಾ ॥ ೩೮ ॥

**ಅರ್ಥ**— ಆಮೇಲೆ ಸಂಜಯನು ಧೃತರಾಷ್ಟ್ರನಿಗೆ ಅನ್ನುತ್ತಾನೆ. ರಾಜಾ, ಇನ್ನುಮೇಲೆ ಭಗವಾನ್ ಶ್ರೀಕೃಷ್ಣನು ಯೋಗಸಾಧನದ ವಿಷಯವಾಗಿ ಅರ್ಜುನನಿಗೆ ಹೇಳಿದ ಆತನ ಅಭಿಪ್ರಾಯವನ್ನು ಕೇಳು. ॥ ೧ ॥ ಶ್ರೀಕೃಷ್ಣಪರಮಾತ್ಮನು ಅರ್ಜುನನಿಗೆ ಬ್ರಹ್ಮಜ್ಞಾನದ ಪಾರಣೆ ( ಈ ಹೊತ್ತಿನ ವರೆಗೆ ಅಜ್ಞಾನರೂಪೀ ಉಪವಾಸವನ್ನು ಮಾಡಿದ ಮೇಲೆ ) ಜ್ಞಾನಾಮೃತದ ( ಭೋಜನ ) ವನ್ನು ಮಾಡಿಸಿದನು. ಅದೇ ಸಮಯಕ್ಕ ನಾವು ಸಹಜವಾಗಿ ಆ ಸ್ಥಳದಲ್ಲಿ ಊಟಗರಾಗಿ ಹೋಗಿದ್ದೆವು. ॥ ೨ ॥ ನಮ್ಮ ಭಾಗ್ಯದ ಮಹಾತ್ಮೆಯನ್ನು ಏನೆಂದು ಬಣ್ಣಿಸಲಿ ? ತಿಳಿಯದಾಗಿದೆ. ತೃಷೆಯಿಂದ ಪೀಡಿತನಾದ ಮನುಷ್ಯನು ನೀರುಕುಡಿಯಬೇಕೆಂದು ನೀರಿನ ಪಾತ್ರೆಯನ್ನು ಬಾಯಿಗೆ ಹಚ್ಚಿ ರುಚಿ ನೋಡುವಷ್ಟರಲ್ಲಿ ಅವನಿಗೆ ನೀರಿನ ಬದಲು ಅಮೃತವಿರುವದೆಂದು ತೋರಿದಂತೆ, ॥ ೩ ॥ ಆಗಂತುಕ ಗಿರಾಕಿಗೆ ಮೌಲ್ಯವಾನ ವಸ್ತುವು ತಾನಾಗಿಯೇ ಕಡಿಮೆ ಕ್ರಯಕ್ಕೆ ದೊರೆತಂತೆ, ಈಗ ನನಗೆ ಮತ್ತು ನಿನಗೆ ಪರಮಾತ್ಮತತ್ವದ ಲಾಭವು ಪ್ರಾಪ್ತವಾಗಿದೆ. ಆವಾಗ ಧೃತರಾಷ್ಟ್ರರಾಜನು ಅನ್ನುತ್ತಾನೆ—“ನಾನು ನಿನಗೆ ಈ ಬ್ರಹ್ಮಜ್ಞಾನದ ವಿಷಯವನ್ನು ವಿಚಾರಿಸಿಲ್ಲ.” ॥ ೪ ॥ ಹೀಗೆ ಧೃತರಾಷ್ಟ್ರನ ಸಂಭಾಷಣವನ್ನು ಕೇಳಿ, ಸಂಜಯನು ಧೃತರಾಷ್ಟ್ರನ ಹೃದಯವನ್ನು

ಪುತ್ರಸ್ನೇಹದ ಮೋಹವು ಮುಸುಕಿಕೊಂಡಿರುವುದೆಂದು ತಿಳಿದುಕೊಂಡನು. ॥ ೫ ॥ ಇದನ್ನು ಲಕ್ಷದಲ್ಲಿ ತಂದು ಸಂಜಯನು ಮನದಲ್ಲಿಯೇ ವಿಸ್ಮಯಗೊಂಡು ತನ್ನೊಳಗೆ ತಾನೇ ಅನ್ನುತ್ತಾನೆ. ಅಯ್ಯೋ, ಈ ವೃದ್ಧ ಧೃತರಾಷ್ಟ್ರನು ಪುತ್ರವಾತ್ಸಲ್ಯದಿಂದ ತೀರ ಹುಚ್ಚನಾಗಿರುವನು. ವಿಚಾರಮಾಡಿ ನೋಡಿದರೆ, ಇಲ್ಲಿಯವರೆಗೆ ನಡೆದ ಕೃಷ್ಣಾರ್ಜುನರ ಸಂವಾದವು ಅತಿ ಉತ್ತಮವಾಗಿರುವದು. ॥ ೬ ॥ ಆದರೆ ಈ ಸಂವಾದದ ರುಚಿಯು ಇವನಿಗೆಲ್ಲಿಂದ ಬರಬೇಕು? ಏಕೆಂದರೆ ಜನ್ಮಾಂಧನಾದವನಿಗೆ ಏನಾದರೂ ಕಾಣಬಹುದೇ? ಆದರೆ ಇದನ್ನು ಸ್ಪಷ್ಟವಾಗಿ ಮಾತನಾಡಿದರೆ ಅವನು ಕೋಪಿಸಿಕೊಳ್ಳುವನೆಂಬ ಭಯದಿಂದ ಸಂಜಯನು ಏನನ್ನೂ ಹೇಳಲಿಲ್ಲ. ॥ ೭ ॥ ಆದರೂ ಶ್ರೀ ಕೃಷ್ಣಾರ್ಜುನರ ಪರಸ್ಪರ ಸಂವಾದದಿಂದ ಅವನು ತನ್ನ ಮನಸ್ಸಿನಲ್ಲಿ ಮಾತ್ರ ಹೆಚ್ಚಾದ ಸಂತೋಷವನ್ನು ಹೊಂದಿದನು. ॥ ೮ ॥ ಈ ಆನಂದದ ತೃಪ್ತಿಯಿಂದ ಪ್ರಫುಲ್ಲಿತನಾದ ಅವನು ಇನ್ನುಮೇಲೆ ಧೃತರಾಷ್ಟ್ರನಿಗೆ ಬಹಳ ಮಾರ್ಯಾದೆಯಿಂದ ಅಭಿಪ್ರಾಯ ವನ್ನು ಹೇಳುವನು. ॥ ೯ ॥ ಕ್ಷೀರಸಾಗರದ ಮಂಥನ ಮಾಡುವಕಾಲಕ್ಕೆ ಹೇಗೆ ಅಮೃತದ ಪ್ರಾಪ್ತಿಯಾಗಿರುವದೋ ಹಾಗೆಯೇ ಗೀತೆಯಲ್ಲಿ ಆರನೆಯ ಅಧ್ಯಾಯದ ಪ್ರಸಂಗವು (ಅನುವಾದವು) ಬಹು ಶ್ರೇಷ್ಠವಾದದ್ದಿರು ವದು. ಇದನ್ನು ಬುದ್ಧಿಯಿಂದಲೇ ತಿಳಿದುಕೊಳ್ಳಬೇಕಾದುದು. ॥ ೧೦ ॥ ಈ ಅಧ್ಯಾಯವು ಗೀತಾರ್ಥದ ಸಾರವಾಗಿರುತ್ತದೆ. ಮತ್ತು ಆತ್ಮಾನಾತ್ಮ ವಿಚಾರರೂಪೀ ಸಮುದ್ರದ ಆಚೆಯ ದಂಡೆಯಾಗಿರುವದು. ಅಥವಾ ಯೋಗ ಸಂಪತ್ತಿಯ ತೆರೆದ ಭಾಂಡಾರವೇ ಆಗಿರುವದು. ॥ ೧೧ ॥ ಯಾವದು ಆದಿ ಮಾಯೆಯ ವಿಶ್ರಾಂತಿ ಸ್ಥಾನವೋ, ಯಾವ ಸ್ಥಳದಲ್ಲಿ ವೇದಗಳು ಸಹ ಮೌನಧಾರಣ ಮಾಡಬೇಕಾಗುವದೋ, ಮತ್ತು ಯಾವದರಿಂದ ಗೀತಾ ರೂಪೀ ಬಳ್ಳಿಗೆ ಅಂಕುರವು ಉದ್ಭವಿಸಿರುವದೋ ॥ ೧೨ ॥ ಅದು ಇದೇ ಆರನೆಯ ಅಧ್ಯಾಯವು. ಸರ್ವಾಲಂಕಾರ ಮುಂತಾದ ಸಾಹಿತ್ಯಗಳಿಂದ ಪರಿಪೂರ್ಣಹೊಂದಿದಂಥದನ್ನೀಗ ಹೇಳುವೆನು. ಅದನ್ನು ಚಿತ್ತಗೊಟ್ಟು ಕೇಳಬೇಕೆಂದು ಮಹಾರಾಜರು ಸಂತರಿಗೆ ವಿನಂತಿ ಮಾಡುತ್ತಾರೆ. ॥ ೧೩ ॥ ನನ್ನ ಭಾಷಣವು ಶುದ್ಧ ಪ್ರಾಕೃತವಾದದ್ದೇನೋ ನಿಜ. ಆದರೆ ಆ ಶಬ್ದಗಳು ಪ್ರತಿಜ್ಞೆಯಿಂದ ಸಹಜವೇ ಅಮೃತವನ್ನಾದರೂ ಬಿದ್ದುಕಟ್ಟಿ ಜಯಿಸಬಹುದು. ಇಂತಹ ರುಚಿಕರವಾದ ಶಬ್ದಗಳಿಂದ ನಾನು ಹೇಳುವೆನು. ॥ ೧೪ ॥ ಆ ಮಾತಿನ ಮೃದುತನದ ಆನಂದದ ಮುಂದೆ ಸಪ್ತ ಸ್ವರದಿಂದ ತೋರುವ ಗಾಯನದ ಆನಂದವೂ ಸಹ ಸರಿಗಟ್ಟಲಾರದು. ಇಲ್ಲವೇ ಅದರ ಛಂದದಿಂದ ಉತ್ತಮವಾದ ಸುಗಂಧವು ಸಹ ಕಡಿಮೆಯಾಗುವದು. ॥ ೧೫ ॥ ಹೀಗೆ ನೋಡು, ಸ್ವಾರ್ಥದ ಆಶೆಯಿಂದ ಕಿವಿಗಳಿಗೆ ನಾಲಿಗೆಯು ಹುಟ್ಟುವದು. ಇಂದ್ರಿಯಗಳು ತಮ್ಮತಮ್ಮೊಳಗೇ ಜಗಳಾಡಹತ್ತುವವು. ಜಗಳಾಡಲು ಕಾರಣವೇನೆಂದರೆ— ॥ ೧೬ ॥ ಶಬ್ದ ವಿಷಯವು ಕಿವಿಗಳದು ಅದೆ. ಆದರೆ ನಾಲಿಗೆಯು ಈ ರಸವು ನನ್ನದೇ ಇರುವದೆಂದು ಅನ್ನುವದು. ಮತ್ತು ಘ್ರಾಣೇಂದ್ರಿಯಗಳಿಗೆ ಈ ಶಬ್ದ ವಿಷಯವೇ ನಮ್ಮ ಗಂಧ ವಿಷಯವಾಗಿರುತ್ತದೆಂದು ಭಾಸವಾಗುವದು. ॥ ೧೭ ॥ ಇದಕಿಂತಲೂ ಇನ್ನೊಂದು ಹೆಚ್ಚಿನ ಆಶ್ಚರ್ಯದ ವಿಷಯವು ಯಾವದೆಂದರೆ, ಶಬ್ದಗಳ ಸುಂದರ ರಚನೆಯನ್ನು ನೋಡಿ ಕಣ್ಣುಗಳು ತೃಪ್ತಿಹೊಂದಿ, ಅವುಗಳಿಗೆ ಇದು ಸಂಭಾಷಣವಿರದೇ ಪ್ರತ್ಯಕ್ಷರೂಪ ವಿಷಯವೇ ನಿರ್ಮಾಣವಾಗಿರುತ್ತದೆಂದು ಭಾಸವಾಗುತ್ತದೆ. ॥ ೧೮ ॥ ಯಾವಾಗ್ಗೆ ಶಬ್ದವು ಸಂಪೂರ್ಣವಾಕ್ಯರೂಪದಿಂದ ಹೊರಬೀಳುತ್ತದೋ ಆಗ್ಗೆ ಇಂದ್ರಿಯಗಳನ್ನು ಹಿಂದಕ್ಕೆ ಸರಿಸಿ ಮನಸ್ಸು ಮುಂದೆ ಬರುವದು. ಮತ್ತು ತನ್ನ ಬಾಹುಗಳನ್ನೆತ್ತಿ ಆ ವಾಕ್ಯಗಳನ್ನು ಆಲಂಗಿಸಬೇಕೆಂದು ಓಡುವದು. ॥ ೧೯ ॥ ಈ ಪ್ರಕಾರ ಸರ್ವ ಇಂದ್ರಿಯಗಳು ತಮ್ಮ ತಮ್ಮ ಧರ್ಮದಂತೆ (ಶಬ್ದರೂಪೀ) ಸಂಭಾಷಣಕ್ಕೆ ಜಗ್ಗಾಡುವವು. ಆದರೆ ಆ ಶಬ್ದಗಳಾದರೂ ಸರ್ವ ಇಂದ್ರಿಯಗಳನ್ನು ಸಮಾನವಾಗಿ ಶಾಂತಮಾಡುವವು. ಯಾವ ಪ್ರಕಾರ ಒಬ್ಬನೇ ಸೂರ್ಯನು ಸರ್ವ ಜಗತ್ತಿನ ವ್ಯವಹಾರಕ್ಕೇ ಪ್ರವರ್ತಕನಾಗಿರುವನೋ, ॥ ೨೦ ॥ ಅದೇ ಪ್ರಕಾರ ಆ ಶಬ್ದದ ವ್ಯಾಪಕತ್ವವು ಅಲೌಕಿಕವಾಗಿರುತ್ತದೆಂದು ತಿಳಿಯಬೇಕು. ಮತ್ತೆ ನೋಡಲಿಕ್ಕೆ ಹೋದರೆ ಯಾವನು ಅದರ ಅರ್ಥವನ್ನು ತಿಳಿಯುವ ವನಿರುವನೋ, ಅವನಿಗೆ ಆ ಸ್ಥಳದಲ್ಲಿ ಚಿಂತಾಮಣಿ ಸದೃಶವಾದ ಗುಣವು ಕಂಡುಬರುತ್ತದೆ. ॥ ೨೧ ॥ ಇದಂತೂ ಇರಲಿ, ಆ ಮಾತಿನ ಸುಂದರವಾದ ಉತ್ತಮ ತಳಿಗೆಯಲ್ಲಿ ಮೋಕ್ಷರೂಪೀ ಪಕ್ವಾನ್ನವನ್ನು ಬಡಿಸಿರುತ್ತದೆ. ಇಂಥ ಗ್ರಂಥರಚನಾರೂಪೀ ಮೇಜವಾನಿಯನ್ನು ನಾನು ನಿಷ್ಕಾಮ ಸಂತರ ದೆಸೆಯಿಂದ ಮಾಡಿರುವೆನು. ॥ ೨೨ ॥ ಈ

ಮೇಜವಾನಿಯಲ್ಲಿ ಈಗ ನಿತ್ಯನೂತನವಾಗಿರುವ ಆತ್ಮಪ್ರಕಾಶವನ್ನೇ ಒಂದು ಸಮೆಯಲ್ಲಿಯ ದೀವಿಗೆಯನ್ನುಮಾಡಿ ಆ ದೀವಿಗೆಯ ಪ್ರಕಾಶದೊಳಗೆ ಯಾವನು ಇಂದ್ರಿಯಗಳಿಗೆ ತಿಳಿಯಗೊಡದೇ ಉಪಭೋಗ ತೆಗೆದುಕೊಳ್ಳುವನೋ, ಅವನಿಗೆ ಮಾತ್ರ (ಕೈವಲ್ಯರೂಪೀ) ಪಕ್ವಾನ್ನದ ಲಾಭವಾಗುತ್ತದೆ. ॥ ೨೩ ॥ ಈ ಮೇಜವಾನಿಯ ದೆಸೆಯಿಂದ ಶ್ರೋತೃಗಳು ಈ ಸ್ಥಳದಲ್ಲಿ ಶ್ರವಣದ ಮುಖ್ಯಸಾಧನವಾದ ಕರ್ಣಗಳ ಸಂಗತಿಯನ್ನೇ ಬಿಟ್ಟುಕೊಟ್ಟು, ಈ ಮೇಜವಾನಿಯನ್ನು ಅಂತರ್ಮುಖ ಮನಸಿನಿಂದಲೇ ಭೋಗಿಸತಕ್ಕದ್ದಿದೆ. ॥ ೨೪ ॥ ಮೇಲೆ ಮೇಲಿರುವ ಶಬ್ದರೂಪೀ ಗೌಸಣಿಕೆಯನ್ನು ತೆಗೆದು ನೋಡಲು ಒಳಗೆ ಅರ್ಥರೂಪೀ ಬ್ರಹ್ಮವು ಇರುವದೆಂದು ತಿಳಿಯುತ್ತದೆ. ಅದರ ಸಂಗಡ ತದ್ರೂಪವನ್ನು ಹೊಂದಬೇಕು. ಆ ಮೇಲೆ ಸುಖದಲ್ಲಿಯೇ ಸುಖದ ಸ್ವಾದವನ್ನು ತೆಗೆದುಕೊಂಡು ಅದರಲ್ಲಿಯೇ ಬೆರೆತು ಹೋಗಬೇಕು. ॥ ೨೫ ॥ ಈ ಮೇರೆಗೆ ಅಂತಃಕರಣದಲ್ಲಿ ಸೂಕ್ಷ್ಮತನವು ಉಂಟಾದರೆ ಮಾತ್ರ ನನ್ನ ನಿರೂಪಣೆಯು ಉಪಯೋಗವಾಗುವದು. ಇಲ್ಲದೇ ಹೋದರೆ ಈ ಎಲ್ಲ ಸಂಭಾಷಣವು ಮೂಕನ ಮಾತನ್ನು ಕಿವುಡನು ಕೇಳಿದಂತೆಯಾಗುವದು. ॥೨೬॥ ಆದರೆ ಅದೆಲ್ಲವೂ ಹಾಗೆಯೇ ಇರಲಿ. ಶ್ರೋತ್ರುಗಳನ್ನು ಆರಿಸಿ ತೆಗೆಯುವ ಅವಶ್ಯವಿಲ್ಲ. ಯಾಕೆಂದರೆ ಈ ವಿಷಯ ಸುಖದಲ್ಲಿ ಸಹಜವೇ ಕಾಮನಾಶೂನ್ಯ ಅಂತಃಕರಣವುಳ್ಳ ಜನರೇ ಅಧಿಕಾರಿಗಳಾಗಿರುವರು. ॥ ೨೭ ॥ ಯಾವನು ಆತ್ಮಜ್ಞಾನ ಪ್ರೇಮದಿಂದ ಸಂಸಾರಸ್ವರ್ಗ ಇವುಗಳನ್ನು ದಾಟಿರುವನೋ ಅವನ ಹೊರ್ತು ಅನ್ಯರಿಗೆ ಈ ಮಾತಿನ ಮಾಧುರ್ಯವು ತಿಳಿಯುವದಿಲ್ಲ. ॥ ೨೮ ॥ ಯಾವ ಪ್ರಕಾರ ಕಾಗೆಗಳಿಗೆ ಚಂದ್ರನ ಪರಿಚಯವಿರುವದಿಲ್ಲವೋ ಅದೇ ಪ್ರಕಾರ ವಿಷಯಾಸಕ್ತ ಜನರಿಗೆ ಈ ಪ್ರತಿಪಾದನವು ತಿಳಿಯಲಾರದು. ಆದರೆ (ಶೀತಲ ಕಿರಣದ) ಅದೇ ಚಂದ್ರನೇ ಚಕೋರಪಕ್ಷಿಯ ಖಾದ್ಯವಾಗಿರುವನೋ, ಅವೇ ಪ್ರಕಾರ ಕರ್ಮಫಲದ ಆಶೆಯಿಲ್ಲದವರಿಗೇ ಈ ಪ್ರತಿಪಾದನದ ಅರ್ಥವು ತಿಳಿಯುವದು. ॥ ೨೯ ॥ ಅದರಂತೆಯೇ ಜ್ಞಾನೀ ಪುರುಷನಿಗೆ ಈ ಗ್ರಂಥವು ವಿಶ್ರಾಂತಿಸ್ಥಾನವಾಗಿರುವದು. ಮತ್ತು ಅಜ್ಞಾನಿಗಳಿಗೆ ಅಪರಿಚಿತ ಸ್ಥಾನವಾಗಿರುವದು. ಈ ವಿಷಯವಾಗಿ ಹೆಚ್ಚು ಹೇಳುವದೇನೂ ಇರುವದಿಲ್ಲ. ॥೩೦॥ ಆದರೆ ಪ್ರಸಂಗಾನುಸಾರವಾಗಿ ನಾನು ಮಾತನಾಡಿ ಬಿಟ್ಟೆನು. ಅದನ್ನು ಸಜ್ಜನರು ಕ್ಷಮಿಸುವದು ಉಚಿತವೇ ಆಗಿರುವದು. ಇನ್ನು ಶ್ರೀಕೃಷ್ಣನು ಯಾವುದನ್ನು ಹೇಳಿದನೋ ಅದನ್ನೇ ಹೇಳುವೆನು. ॥ ೩೧ ॥ ಆ ಸಂಭಾಷಣವು ಬುದ್ಧಿಗೆ ಸಹ ತಿಳಿಯಲಿಕ್ಕೆ ಕಠಿಣವಾಗಿರುವದು. ಅದನ್ನು ಶಬ್ದದಿಂದ ಹೇಳಲು ಅಕಸ್ಮಾತ್ ಬಂದರೆ ಬರಬಹುದು. ಆದರೆ ಶ್ರೀಗುರು ನಿವೃತ್ತಿ ಮಹಾರಾಜರ ಕೃಪಾರೂಪ ದೀವಿಗೆಯ ಬೆಳಕಿನಿಂದ ಅದನ್ನು ನೋಡುವೆನು. ಮತ್ತು (ನೋಡಿದ್ದನ್ನು) ಹೇಳುವೆನು. ॥ ೩೨ ॥ ಅತೀಂದ್ರಿಯ (ಇಂದ್ರಿಯಗಳಿಗೆ ಅಗಮ್ಯ) ವಾದ ಜ್ಞಾನವು ಪ್ರಾಪ್ತವಾದರೆ, ಯಾ ದೃಷ್ಟಿಗೆ ಕಾಣುವದಿಲ್ಲ? ಅದು ಕಣ್ಣಿನ ಹೊರ್ತು ನೋಡಲಿಕ್ಕೆ ಬರುತ್ತದೆ. ॥ ೩೩ ॥ ದೈವಯೋಗದಿಂದ ಪರಿಸಮಣಿಯು ಹಸ್ತಗತವಾದರೆ ಧಾತುಪರೀಕ್ಷಕರಿಗೆ, ಬಹು ಆಯಾಸದಿಂದ ದೊರಕಬಹುದಾದ ಸುವರ್ಣವು, ಕಬ್ಬಿಣದಿಂದ ದೊರಕುತ್ತಿದೆ. ॥ ೩೪ ॥ ಅದರಂತೆಯೇ ಸದ್ಗುರುಗಳ ಕೃಪೆಯಾದರೆ, ಪ್ರಯತ್ನಮಾಡಿದ ಯಾವ ಕಾರ್ಯವು ಸಾಧ್ಯವಾಗದಿರಬಹುದು? ಎಂದು **ಜ್ಞಾನೇಶ್ವರ ಮಹಾರಾಜರು** ಅನ್ನುತ್ತಾರೆ. ಇಂಥ ಯಾವ ಸದ್ಗುರುಗಳ ಅನುಗ್ರಹವು ನನ್ನ ಮೇಲೆ ಪೂರ್ಣವಾಗಿರುವದೋ, ॥೩೫॥ ಆ ಸದ್ಗುರುಗಳ ಅನುಗ್ರಹದ ಯೋಗದಿಂದ ನಾನು ಈ ವ್ಯಾಖ್ಯಾನವನ್ನು ಮಾಡುವೆನು. ಮತ್ತು ನನ್ನ ವ್ಯಾಖ್ಯಾನದಲ್ಲಿ ಅರೂಪನಾದ ಬ್ರಹ್ಮನ ಸ್ಪಷ್ಟರೂಪವನ್ನು ತೋರಿಸುವೆನು. ಮತ್ತು ಅದು (ಬ್ರಹ್ಮವು) ಒಂದುವೇಳೆ ಇಂದ್ರಿಯಗಳಿಗೆ ಗೋಚರವಾಗದಂತಹವೂ, ಅವುಗಳ (ಇಂದ್ರಿಯಗಳ) ಆಚೆಯ ಕಡೆಗೆ ಇದ್ದರೂ ಅದರ ಅನುಭವವು ಇಂದ್ರಿಯಗಳಿಗೆ ತಿಳಿಯುವಂತೆ ನಾನು ಮಾಡುವೆನು. ॥ ೩೬ ॥ ಶ್ರವಣಮಾಡಿರಿ. 'ಕೀರ್ತಿ, ಲಕ್ಷ್ಮೀ, ಉದಾರತನ, ಜ್ಞಾನ, ವೈರಾಗ್ಯ, ಮತ್ತು ಐಶ್ವರ್ಯ, ಈ ಆರು ಶ್ರೇಷ್ಠತನವಾದ ಗುಣಗಳಿಂದ ಮಂಡಿತನಾಗಿ ಷಡ್ಗುಣೈಶ್ವರ್ಯಸಂಪನ್ನ ಭಗವಾನನೆಂದು ಯಾವನು ಕರೆಯಲ್ಪಡುವನೋ, ಮತ್ತು ಯಾವನು ಸರ್ವಸಂಗ ಪರಿತ್ಯಾಗಿಯ ಪರಮ ಮಿತ್ರನಾಗಿರುವನೋ, ಅಂತಹ ಆ ಶ್ರೀಕೃಷ್ಣಪರಮಾತ್ಮನು ಅನ್ನುತ್ತಾನ. ಅರ್ಜುನನೇ ಇನ್ನು ಮೇಲೆ ನೀನು ಪೂರ್ಣ ಲಕ್ಷವನ್ನು ಕೊಡು. ॥ ೩೭ ॥

**ಶ್ರೀಭಗವಾನುವಾಚ—**

**ಅನಾಶ್ರಿತಃ ಕರ್ಮಫಲಂ ಕಾರ್ಯಂಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥ ೧ ॥**

**[ ಅನಾಶ್ರಿತಃ ಕರ್ಮಫಲಮಿತಿ ]** ಆಯಿಕೇ ಯೋಗೀ ಆಣಿ ಸನ್ಯಾಸೀ ಜನೀ । ಹೇ ಏಕಚಿ ಸಿನಾನೇ ಝುಣೀ ಮಾನೀ । ಯೇರ್ಹ್ವೀ ವಿಚಾರಿಜತೀ ಜವ ದೋನ್ಹೀ । ತವ ಏಕಚೀ ತೇ ॥ ೩೯ ॥ ಸಾಂಡಿಜೇ ದುಜಿಯಾ ನಾಮಾಚಾ ಆಭಾಸ । ತರೀ ಯೋಗ ತೋಚಿ ಸನ್ಯಾಸ । ಪಾಹತಾ ಬ್ರಹ್ಮೀ ನಾಹೀ ಅವಕಾಶ । ದೋಹೀಮಾಜೀ ॥ ೪೦ ॥ ಜೈಸೇ ನಾಮಾಚೇನಿ ಅನಾರಿಸೇಪಣೇ । ಏಕಾ ಪುರುಷಾತೇ ಬೋಲಾವಣೇ । ಕಾ ದೋಸ್ಹೀ ಮಾರ್ಗೀ ಜಾಣೇ । ಏಕಚಿ ಠಾಯಾ ॥ ೪೧ ॥ ನಾತರೀ ಏಕಚಿ ಉದಕ ಸಹಜೇ । ಪರೀ ಸಿನಾನಾ ಘಟೀ ಭರಿಜೇ । ತೈಸೇ ಭಿನ್ನತ್ವ ಜಾಣಿಜೇ । ಯೋಗ ಸನ್ಯಾಸಾಚೇ ॥ ೪೨ ॥ ಆಇಕೇ ಸಕಳ ಸಮತೇ ಜಗೀ । ಅರ್ಜುನಾ ಪಾಹೇ ತೋಚೀ ಯೋಗಿ । ಜೋ ಕರ್ಮೇ ಕರೂನಿ ರಾಗೀ । ನೋಹೇಚೀ ಫಳೀ ॥೪೩॥ ಜೈಸೀ ಮಹೀ ಹೇ ಉಬ್ಥಿಜೇ । ಜನೀ ಅಹಂಬುದ್ಧೀವೀಣ ಸಹಜೇ । ಆಣಿ ತೇಥೀಂಚೀ ತಿಯೇ ಬೀಜೇ । ಅಪೇಕ್ಷೀನಾ ॥೪೪॥ ತೈಸಾ ಅನ್ವಯಾಚೇನಿ ಆಧಾರೇ । ಜಾತೀಚೇನಿ ಅನುಕಾರೇ । ಜೇ ಜೇಣೇ ಅವಸರೇ । ಕರಣೇ ಪಾವೇ ॥೪೫॥ ತೇ ತೈಸೇಂಚಿ ಉಚಿತಕರೀ । ಪರೀ ಸಾಟೋಪ ನೋಹೇ ಶರೀರೀ । ಆಣಿ ಬುದ್ಧೀಹೀ ಕರೋನಿ ಫಳವೇರೀ । ಜಾಯೇಚಿನಾ ॥ ೪೬ ॥ ಐಸಾ ತೋಚಿ ಸನ್ಯಾಸೀ । ಪಾರ್ಥಾ ಗಾ ಪರಿಯೇಸೀ । ತೋಚಿ ಭರವಸೇಸಿಸೀ । ಯೋಗೀಶ್ವರ ॥ ೪೭ ॥ ವಾಚೂನಿ ಉಚಿತ ಕರ್ಮ ಪ್ರಾಸಂಗಿಕ । ತಯಾತೇ ಮ್ಹಣೇ ಹೇ ಸಾಂಡಾವೇ ಬದ್ಧಕ । ತರೀ ಟಾಂಕೋ ಟಾಕೀ ಆಣಿಕ ಏಕ । ಮಾಂಡೀಚಿ ತೋ ॥ ೪೮ ॥ ಜೈಸಾ ಕ್ಷಾಳೂನಿಯಾ ಲೇಪ ಏಕ । ಸವೇಂಚಿ ಲಾವಿಜೇ ಆಣಿಕ । ತೈಸೇ ನಿ ಆಗ್ರಹಾಚಾ ಪಾಇಕ । ವಿಚಂಬೇ ವಾಯಾ ॥ ೪೯ ॥ ಗ್ರಹಸ್ಥಾಶ್ರಮಾಚೇ ವೋಝೇ । ಕಪಾಳೀ ಆಧೀ ಚಿ ಆಹೆ ಸಹಜೇ । ಕೀ ತೇಚಿ ಸಂನ್ಯಾಸೇ ವಾಢವಿಜೇ । ಸರಿಸೇ ಪುಢತೀ ॥ ೫೦ ॥ ಮ್ಹಣೂನಿ ಅಗ್ನಿಸೇವಾ ನ ಸಾಂಡಿತಾ । ಕರ್ಮಾಚೀರೇಖಾನೋಲಾಂಡಿತಾ । ಆಹೇ ಯೋಗ ಸುಖ ಸ್ವಭಾವತಾ । ಆಪಣಪಾಂಚಿ ॥ ೫೧ ॥

**ಅರ್ಥ:**— ಅರ್ಜುನಾ ಕೇಳು, ಈ ಜಗತ್ತಿನಲ್ಲಿ 'ನಿಷ್ಕಾಮಕರ್ಮಯೋಗೀ ಮತ್ತು ಸಾಂಖ್ಯಯೋಗಿ' ಈ ಎರಡೂ ಒಂದೇ ಇರುತ್ತವೆ. ಇವರಿಗೆ ಒಂದು ವೇಳೆ ನೀನು ಬೇರೆ ಎಂದು ಕರೆಯಬಹುದು. ಆದರೆ ಹಾಗೆ ಮಾತ್ರ ತಿಳಿಯಬೇಡ. ಸಹಜ ವಿಚಾರಮಾಡಿ ನೋಡಿದರೆ ಈ ಎರಡೂ ಒಂದೇ ಆಗಿರುವವು. ॥ ೩೯ ॥ ಭಿನ್ನ ಭಿನ್ನವಾದ ಎರಡು ಹೆಸರಿನಿಂದ ಭಾಸಮಾನವಾದ ಭೇದವನ್ನು ಬಿಟ್ಟು ಬಿಟ್ಟರೆ. ಯೋಗವೇ ಸನ್ಯಾಸವಾಗಿರುವದು. ತತ್ವತಃ ನೋಡಿದರೆ ಬ್ರಹ್ಮಸ್ವರೂಪದ ಸ್ಥಳದಲ್ಲಿ ಈ ಎರಡರಲ್ಲಿಯೂ ಅಂತರ ( ಭಿನ್ನ ) ವಿರುವದಿಲ್ಲ. ॥ ೪೦ ॥ ಯಾವ ಪ್ರಕಾರ ಬೇರೆ ಬೇರೆ ಹೆಸರಿನಿಂದ ಒಬ್ಬನೇ ಮನುಷ್ಯನನ್ನು ಕರೆಯುವರೋ, ಅದೇ ಪ್ರಕಾರ ಎರಡು ಬೇರೆ ಬೇರೆ ಹಾದಿಗಳಿಂದಲೂ ಒಂದೇ ( ನಿರ್ದಿಷ್ಟ ) ಸ್ಥಾನಕ್ಕೆ ಮುಟ್ಟುತ್ತಾರೆ. ॥ ೪೧ ॥ ಸ್ವಭಾವತಃ ನೀರು ಒಂದೇ ಆದರೂ ಅವುಗಳನ್ನು ಬೇರೆ ಬೇರೆ ಕೊಡಗಳಲ್ಲಿ ತುಂಬುವದರಿಂದ. ಅವು ಬೇರೆ ಬೇರೆಯಾಗಿ ಹೇಗೆ ಕಾಣುವದೋ. ಹಾಗೆಯೇ ಯೋಗ ಮತ್ತು ಸನ್ಯಾಸ ಇವುಗಳಲ್ಲಿಯ ಭೇದವು ತೋರಿಕೆಗೆ ಮಾತ್ರ ಬೇರೆಯಾಗಿ ಕಾಣುವದು. ॥ ೪೨ ॥ ಅರ್ಜುನಾ ಕೇಳು. ಯಾವನು ಕರ್ಮಾಚರಣೆಯನ್ನು ಮಾಡಿ, ಅದರ ಫಲದ ವಿಷಯದಲ್ಲಿ ಆಸಕ್ತನಾಗುವದಿಲ್ಲವೋ. ಅವನೇ ಜಗನ್ಮಾನ್ಯ ಯೋಗಿಯಾಗಿರುವನು. ॥ ೪೩ ॥ ಯಾವ ಪ್ರಕಾರ ಪೃಥ್ವಿಯು ಅಹಂಕಾರವಿಲ್ಲದೇ ಸಹಜವೇ ವೃಕ್ಷ ಮುಂತಾದವುಗಳಿಗೆ ಜನ್ಮವನ್ನೀಯುತ್ತಿರುವದೋ ಮತ್ತು ಆ ವೃಕ್ಷಗಳಿಗೆ ಬರುವ ಬೀಜದ ( ಫಲದ ) ಅಪೇಕ್ಷೆಯನ್ನು ಮಾಡಲಾರದೋ, ॥ ೪೪ ॥ ಅದೇ ಪ್ರಕಾರ ಆತ್ಮಬೋಧದ ಆಧಾರದಿಂದ ಜಾತಿಗೆ ಅನುರೂಪವಾದಂಥ ಯಾವ ಕರ್ಮವನ್ನು

**ಯಾವ ಕಾಲದಲ್ಲಿ ಮಾಡುವ ಪ್ರಸಂಗಬರುವದೋ,** ॥ ೪೫ ॥ ಅದನ್ನೆಲ್ಲ ಸರ್ವ ಯಥಾವಿಧಿಯಿಂದ ಮಾಡಿ, ಅವನು ತನ್ನ ಶರೀರದಲ್ಲಿ ಅಹಂಕಾರವನ್ನು ಉತ್ಪನ್ನ ಮಾಡಗೊಡುವದಿಲ್ಲ. ಮತ್ತು ಬುದ್ಧಿಗೆ ಫಲದ ಆಶೆಯು ಕಡೆಗೆ ನೋಡ ಗೊಡುವದಿಲ್ಲ. ॥ ೪೬ ॥ ಪಾರ್ಥಾ ಕೇಳು. ಇಂಥ ಪುರುಷನೇ ಸನ್ಯಾಸಿಯು ಮತ್ತು ಅವನೇ ನಿಃಸಂಶಯವಾಗಿ ಯೋಗೀಶ್ವರನಾಗಿರುವನು. ॥೪೭॥ ಇದರ ಹೊರ್ತು ಯಾವನು ನಿತ್ಯ-ನೈಮಿತ್ತಿಕ ಕರ್ಮವನ್ನು ಮಾಡುವದು ಪ್ರಾಪ್ತ ವಾದರೆ ಆ ಕರ್ಮಗಳಿಗೆ ಅವನು "ಈ ಕರ್ಮಗಳು ಬಂಧನಮಾಡತಕ್ಕವು" ಎಂದು ತಿಳಿಯುವನು. ಮತ್ತು ಅವುಗಳನ್ನು ತ್ಯಾಗಮಾಡಿ ತೀವ್ರವೇ ಯಾವದಾದರೊಂದು ಎರಡನೇ ಕರ್ಮವನ್ನು ಮಾಡಲು ಪ್ರಾರಂಭಿಸುವನು. ॥ ೪೮ ॥ ಯಾವ ದಾದರೊಂದು ಲೇಪವನ್ನು ತೊಳೆದು ಬಿಟ್ಟು ಅದಕ್ಕೆ ಆಗಿಂದಾಗಲೇ ಎರಡನೇ ಲೇಪವನ್ನು ಹಚ್ಚಲು ಪ್ರಯತ್ನಮಾಡು ವಂತೆ, ಉಚಿತ ಕರ್ಮವನ್ನು ತ್ಯಾಗಮಾಡಿ ಅನ್ಯಕರ್ಮವನ್ನು ಮಾಡುವ ಆಗ್ರಹದಲ್ಲಿ ವ್ಯರ್ಥವಾಗಿ ಶ್ರಮಪಡು ತ್ತಾನೆ. ॥ ೪೯ ॥ ಗ್ರಹಸ್ಥಾಶ್ರಮದ ಭಾರವನ್ನು ಎಲ್ಲರ ತಲೆಯಮೇಲೆ, ಮೊದಲಿಗೇ, ಸಹಜವಾಗಿಯೇ ಹೊರಿಸಿರು ವದು. ಆದರೆ ಆ ಗ್ರಹಸ್ಥಾಶ್ರಮದ ಆಚರಣವು ಯಥಾರ್ಥವಾದ ವಿಧಿಯಿಂದ ಮಾಡದೇ ಸನ್ಯಾಸ ಗ್ರಹಣಮಾಡಿ ಮೊದಲಿನ ಭಾರವನ್ನು ಚಲ್ಲಿಕೊಟ್ಟು ತೀವ್ರವೇ ಎರಡನೇ ಭಾರವನ್ನು ತಲೆಯಮೇಲೆ ಹೊತ್ತುಕೊಳ್ಳುತ್ತಾನೆ. ॥ ೫೦ ॥ ಆದುದರಿಂದ ಶ್ರೌತಸ್ಮಾರ್ತ ಹೋಮ ಮುಂತಾದ ಕರ್ಮಗಳ ಯಥಾವಿಧಿಯಾದ ಆಚರಣವನ್ನು ಬಿಟ್ಟುಕೊಡದೇ, ಕರ್ಮದ ಮರ್ಯಾದೆಯನ್ನು ಉಲ್ಲಂಘನ ಮಾಡದೇ, ಜ್ಞಾನ ಯೋಗದ ಸುಖವು ತನ್ನ ಸ್ವತಃದಲ್ಲಿ ಸಹಜವೇ ದೊರಕು ವದು. ॥ ೫೧ ॥

**ಯಂ ಸನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ** ॥ ೨ ॥

**[ ಯಂ ಸಂನ್ಯಾಸಮಿತಿ ]** ಐಕೇ ಸನ್ಯಾಸೀ ತೋಚಿ ಯೋಗೀ । ಐಸೀ ಏಕವಾಕ್ಯ ತೇಚೀ ಜಗೀ । ಗುಢೀ ಉಭವಿಲೀ ಅನೇಗೀ । ಶಾಸ್ತ್ರಾಂತರೀ ॥ ೫೨ ॥ ಜೇಥ ಸಂನ್ಯಾಸಿಲಾ ಸಂಕಲ್ಪುತುಟೇ । ತೇಥಚಿ ಯೋಗಾಚೇ ಸಾರಭೇಟೇ । ಐಸೇ ಹೇ ಅನುಭವಾಚೇನಿ ಧಟೇ । ಸಾಚೇಂಜಯಾ ॥ ೫೩ ॥

**ಅರ್ಥ** - ಕೇಳು, 'ಯಾವನು ಸನ್ಯಾಸಿಯೋ ಅವನೇ ಯೋಗಿಯು'. ಎಂಬುವ ಏಕವಾಕ್ಯದ ಧ್ವಜವು ಅನೇಕ ಶಾಸ್ತ್ರಗಳಿಂದ ಈ ಜಗತ್ತಿನಲ್ಲಿ ನಿಲ್ಲಿಸಲ್ಪಟ್ಟಿದೆ. ॥ ೫೨ ॥ ಯಾವ ಸ್ಥಳದಲ್ಲಿ ಬಿಟ್ಟುಕೊಟ್ಟಂಥ ಸಂಕಲ್ಪವು ಅಂಶತಃ ಇಲ್ಲದಂತಾಗಿರುತ್ತದೋ, ಅದೇ ಸ್ಥಳದಲ್ಲಿ ಯೋಗದ ಸರ್ವಸ್ವವು (ಬ್ರಹ್ಮವು) ಪ್ರಾಪ್ತವಾಗುತ್ತದೆ. ಹೀಗೆ ಅವನಿಗೆ ಅನುಭವದ ತಕ್ಕಡಿಯಿಂದ ನಿಜವೆಂದು ನಂಬುಗೆಯಾಗಿರುವದು. (ಅವನೇಸನ್ಯಾಸಿ, ಅವನೇ ಯೋಗಿ ಯಾಗಿರುವನು.) ॥ ೫೩ ॥

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ** ॥ ೩ ॥

**[ ಆರುರುಕ್ಷೋರ್ಮುನೇರ್ಯೋಗಮಿತಿ ]** ಆತಾ ಯೋಗಾಚಳಾಚಾ ನಿಮಥಾ । ಜರೀ ಠಾಕಾವಾ ಆಥಿ ಪಾರ್ಥಾ । ತರೀ ಸೋಪಾನಾ ಯಾ ಕರ್ಮಪಥಾ । ಚುಕಸೀ ಝಣೀ ॥ ೫೪ ॥ ಯೇಣೇ ಯಮ ನಿಯಮಾಚೇನಿ ತಳವಟೇ । ರಿಗೇ ಆಸನಾಚಿಯೇ ಪಾವುಲವಾಟೇ । ಯೇ ಈ ಪ್ರಾಣಾಯಾಮಾಚೇನಿ ಆಡಕಾಠೇ । ವರೌತಾ ಗಾ ॥ ೫೫ ॥ ಮಗ ಪ್ರತ್ಯಾಹಾರಾಚಾ ಅಧಾಡಾ । ಜೋಬುದ್ಧೀಚಿಯಾಹಿಪಾಯಾ ನಿಸಡಾ । ಜೇಥ ಹಟಿಯೇ ಸಾಂಡಿತೀ ಹೋಡಾ । ಕಡೇಲಗ ॥೫೬॥ ತರೀ ಅಭ್ಯಾಸಾಚೇನಿ ಬಳೇ । ಪ್ರತ್ಯಾಹಾರೀ ನಿರಾಳೇ । ನಖೀ ಲಾಗೇಲ ಥಾಳೇ ಥಾಳೇ । ವೈರಾಗ್ಯಾಚೀ ॥೫೭॥ ಐಸಾ ಪವನಾಚೇನಿ ಪಾಠಾರೇ । ಯೇತಾ ಧಾರಣೇಚೇನಿ ಪೈಸಾರೇ । ಕ್ರಮೀ ಧ್ಯಾನಾಚೇ

ಚವರೀ । ಸಾಂಪಡೇ ತವ ॥ ೫೮ ॥ ಮಗ ತಯಾ ಮಾರ್ಗಾಚೀ ಧಾವ । ಪುರೀಲ ಪ್ರವೃತ್ತೀಚೀ ಹಾವ ।
ಜೇಥ ಸಾಧ್ಯಸಾಧನಾ ಖೇವ । ಸಮರಸೇ ಹೋಯ ॥ ೫೯ ॥ ಜೇಥ ಪುಢೀಲ ಪೈಸ ಪಾರುಷೇ ।
ಮಾಗೀಲ ಸ್ಮರಣ ವೇ ತೇ ಠಾಕೇ । ಐಸಿಯೇ ಸರಿಸೀಯೇ ಭೂಮಿಕೇ । ಸಮಾಧಿರಾಹೇ ॥ ೬೦ ॥
ಯೇಣೇ ಉಪಾಯೇ ಯೋಗಾರೂಢ । ಜೋ ನಿರವಧಿ ಜಾಹಲಾ ಪ್ರೌಢ । ತಯಾಚಿಯಾ ಚಿನ್ಹಾಂಚಾ
ನಿವಾಡ । ಸಾಂಗೇನ ಆ ಇಕೇ ॥ ೬೧ ॥

**ಅರ್ಥ**— ಪಾರ್ಥಾ, ಈಗ ಯೋಗರೂಪೀ ಪರ್ವತದ ಶಿಖರವನ್ನು ಯಾವನಿಗೆ ಹೋಗಿ ಮುಟ್ಟಬೇಕಾಗಿರುವದೋ, ಅವನು ಈ ಕರ್ಮಮಾರ್ಗರೂಪೀ ಸುಲಭ ಮೆಟ್ಟಲುಗಳಿಂದ ಹತ್ತಲಿಕ್ಕೆ ಮರೆಯಬಾರದು. (ಕರ್ಮ ಮಾರ್ಗವನ್ನು ಆಚರಿಸದೇ ಇರಕೂಡದು.) ॥ ೫೪ ॥ ಈ ಕರ್ಮಮಾರ್ಗದಿಂದ ಹೋಗಲಿಕ್ಕೆ ಹತ್ತಿದರೆ ಮೊದಲಿಗೆ ಈ ಪರ್ವತದ ಯಮ-ನಿಯಮರೂಪೀ ತಳವು ಹತ್ತುತ್ತದೆ. ಆ ಮೇಲೆ ಯೋಗದಲ್ಲಿಯ ಅನೇಕವಿಧ ಆಸನದ ಕಾಲುದಾರಿಯಿಂದ ಪ್ರಾಣಾಯಾಮರೂಪವಾದಂಥ (ಅಷ್ಟಾಂಗಯೋಗದೊಳಗಿನ ನಾಲ್ಕನೇ ಅಂಗದಿಂದ) ಅಡ್ಡಹಾದಿಯಿಂದ ಮೇಲೆ ಹೋಗಬೇಕಾಗುತ್ತದೆ. ॥ ೫೫ ॥ ಆ ಮೇಲೆ ಪ್ರತ್ಯಾಹಾರ (ವಿಷಯದಿಂದ ಇಂದ್ರಿಯಗಳನ್ನು ಹಿಂದಕ್ಕೆ ತಿರುಗಿಸೋಣ)ವೆಂಬ ಅರ್ಧ ಕತ್ತರಿಸಿಹೋದಂಥ ದಂಡೆಯು ಹತ್ತುತ್ತದೆ. ಅದರ ಮೇಲಿಂದ ನಡೆಯಲಿಕ್ಕೆ ಬುದ್ಧಿಯ ಕಾಲುಗಳು ಸಹ ಜಾರುತ್ತವೆ. ಆ ಮಾರ್ಗವನ್ನು ದಾಟಿಹೋಗುವಾಗ ಹಟಯೋಗಿಗಳ ಪ್ರತಿಜ್ಞೆಯು ಸಹ ಕೊನೆಗಾಣುವದಿಲ್ಲ. ॥ ೫೬ ॥ ಆದರೂ ಅಭ್ಯಾಸದ ಬಲದಿಂದ ಪ್ರತ್ಯಾಹಾರ ರೂಪವಾದ ಶೂನ್ಯದಂಥ ಕಠಿಣ ಮಾರ್ಗದಲ್ಲಿ ಏರಿ ಹೋಗಲು ವೈರಾಗ್ಯವೊಂದೇ ಸಮರ್ಥವುಳ್ಳದ್ದಾಗಿರುವದು. ॥ ೫೭ ॥ ಈ ಮೇರೆಗೆ 'ಪ್ರಾಣ ಮತ್ತು ಅಪಾನ' ವಾಯುರೂಪ ಕುದುರೆಯ ಮೇಲೆ ಕುಳಿತು ಮಾರ್ಗಕ್ರಮಣ ಮಾಡುತ್ತಿರಲಿಕ್ಕಾಗಿ ಚಿತ್ತಸ್ಥಿರ ಮಾಡುವಂಥ ಪ್ರಶಸ್ತವಾದ ಮಾರ್ಗವೊಂದು ಹತ್ತುವದು. ಅಲ್ಲಿಂದ ಮುಂದಿರುವ ಧ್ಯಾನರೂಪೀ ಶಿಖರವನ್ನು ಕೂಡಾ ದಾಟಲು ಬರುವದು. ॥ ೫೮ ॥ ಆಮೇಲೆ ಯಾವ ಸ್ಥಳದಲ್ಲಿ ಸಾಧ್ಯ ಮತ್ತು ಸಾಧನಗಳು ಒಂದೇ ಆಗುತ್ತವೆಯೋ, ಆ ಸ್ಥಳದಲ್ಲಿ ಮಾರ್ಗದ ಧಾವನೆಯೂ ಪ್ರವೃತ್ತಿಯ ಹವ್ಯಾಸವೂ ಮುಗಿಯುತ್ತದೆ. ॥ ೫೯ ॥ ಯಾವ ಸ್ಥಳದಲ್ಲಿ ಮುಂದಡಿಯನ್ನು ಇಡಲು ಸಾಧ್ಯವಾಗುವದಿಲ್ಲವೋ, ಮತ್ತು ಹಿಂದಿನ ಸ್ಮರಣೆಯೂ ಉಳಿಯುವದಿಲ್ಲವೋ ಇಂಥ ಆ ಐಕ್ಯರೂಪೀ ಸಮಾನ ಭೂಮಿಕೆಯ ಸಮಾಧಿಯ ಮೇಲೆ ಅವನು ಇರುತ್ತಾನೆ. ॥೬೦॥ ಈ ಉಪಾಯದಿಂದ ಯಾವ ಯೋಗಿಯು ನಿಷ್ಣಾತನೂ, ಅಖಂಡ ಪರಿಪೂರ್ಣನಾಗಿರುವನೋ ಅವನ ಚಿನ್ಹಗಳನ್ನು ನಿನಗೆ ಸ್ಪಷ್ಟರೀತಿಯಿಂದ ಹೇಳುತ್ತೇನೆ ಕೇಳು. ॥೬೧॥

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

**[ ಯಾದಾಹೀತಿ ]** ತರೀ ಜಯಾಚಿಯಾ ಇಂದ್ರಿಯಾಂಚಿಯಾ ಘರಾ । ನಾಹೀ ವಿಷಯಾಂಚಿಯಾ ಯೇರಝಾರಾ । ಜೋ ಆತ್ಮಬೋಧಾಚ್ಯಾ ವೋವರಾ । ಪಹುಡಲಾ ಅಸೇ ॥ ೬೨ ॥ ಜಯಾಚೇ ಸುಖದುಃಖಾಚೇನಿ ಅಂಗೇ । ಝಗಟಲೇ ಮಾನಸ ಚೇವೋ ನೇಣೇ । ವಿಷಯ ಪಾಶೀಹೀ ಆಲಿಯಾ ಸೇ ನ ರಿಘೇ । ಹೇ ಕಾಯ ಮ್ಹಣವೂನಿ ॥ ೬೩ ॥ ಇಂದ್ರಿಯೇ ಕರ್ಮಾಚ್ಯಾ ಠಾಯೀ । ವಾಢೀನಲೀ ಪರೀ ಕಹೀ । ಫಳ ಹೇತೂಚೀ ಚಾಡ ನಾಹೀ । ಅಂತಃಕರಣೀ ॥೬೪॥ ಅಸತೇನಿ ದೇಹೇ ಏತುಲಾ । ಜೋ ಚೇತುಚಿ ದಿಸೇ ನಿದೇಲಾ । ತೋಚಿ ಯೋಗಾರೂಢ ಭಲಾ । ವೋಳಖೇ ತೂ ॥೬೫॥ ತೇಥ ಅರ್ಜುನ ಮ್ಹಣೇ ಅನಂತಾ! ಹೇ ಮಜ ವಿಸ್ಮೋ ಬಹು ಆಇಕತಾ । ಸಾಂಗೇ ತಯಾ ಐಸೀ ಯೋಗ್ಯತಾ । ಕವಣೇ ದೀಜೇ ॥೬೬॥

**ಅರ್ಥ**— ಯಾವನ ಇಂದ್ರಿಯರೂಪೀ ಮಂದಿರದಲ್ಲಿ ವಿಷಯದ ಬರು-ಹೋಗುವ ವ್ಯವಹಾರವು ನಿಂತು ಹೋಗಿರುವದೋ, ಮತ್ತು ಯಾವನು ಆತ್ಮಜ್ಞಾನ ರೂಪೀ ವಿಶ್ರಾಂತಿ ಗೃಹದಲ್ಲಿ ಸ್ವಸ್ಥವಾಗಿ ಮಲಗಿರುವನೋ, ॥ ೬೨ ॥

ಯಾವನ ಮನಸ್ಸು ಸುಖ–ದುಃಖಗಳ ಹೊಡೆತದಿಂದ ಎಚ್ಚರಗೊಳ್ಳುವದಿಲ್ಲವೋ, ವಿಷಯವು ಅತಿ ನಿಕಟವಾಗಿದ್ದರೂ ಅವೇನೆಂಬುವದರ ಅರಿವೂ ಯಾವನಿಗೆ ಆಗುವದಿಲ್ಲವೋ, ॥ ೭೩ ॥ ಇಂದ್ರಿಯಗಳು ಕರ್ಮಗಳನ್ನು ಮಾಡುತ್ತಿದ್ದರೂ ಯಾವನ ಹೃದಯದಲ್ಲಿ ಫಲಾಪೇಕ್ಷೆಯು ಎಂದಿಗೂ ಉತ್ಪನ್ನವಾಗುವದಿಲ್ಲವೋ, ॥ ೭೪ ॥ ಮತ್ತು ಹೀಗೆ ದೇಹ ವ್ಯಾಪಾರವು ನಡೆದಿದ್ದರೂ ಯಾವನು ನಿದ್ರೆಯಲ್ಲಿಯ ಸ್ಥಿತಿಯಂತೆ ಉದಾಸೀನನಾಗಿ ತೋರುವನೋ ಅವನಿಗೇನೇ ನಿಜವಾದ ಯೋಗವು ಸಾಧ್ಯವಾಗಿರುವುದೆಂದು ತಿಳಿ. ॥ ೭೫ ॥ ಈ ಮೇರೆಗೆ, ಯೋಗಿಗಳ ಸ್ಥಿತಿಯನ್ನು ಕೇಳಿ, ಭಗವಾನ್ ಶ್ರೀ ಕೃಷ್ಣನನ್ನು ಕುರಿತು ಅರ್ಜುನನು ಅನ್ನುತ್ತಾನೆ- ಹೇ ಅನಂತಾ ! ನೀವು ಏನು ಹೇಳುತ್ತೀರಿ, ಅದನ್ನು ಕೇಳಿ ಆಶ್ಚರ್ಯವೆನಿಸುತ್ತದೆ. ಆದರೆ ಆ ಯೋಗಿಗೆ ಇಂತಹ ಯೋಗ್ಯತೆಯನ್ನು ಯಾರು ಕೊಡುವರು ಎಂಬುದನ್ನು ನನಗೆ ಹೇಳಬೇಕು. ॥ ೭೬ ॥

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

[ **ಉದ್ಧರೇದಿತಿ** ] ತವ ಹಾಸೋನಿ ಕೃಷ್ಣ ಮ್ಹಣೇ । ತುಝೆ ನವಲ ನಾಹೀ ಬೋಲಣೇ । ಕವಣಾಸಿ ಕಾಯದಿಜೇಲ ಕವಣೇ । ಅದ್ವೈತೀ ಏಥ ॥ ೭೭ ॥ ಪೈ ವ್ಯಾಮೋಹಾಚಿಯೇ ಶೇಜೇ । ಬಳಿಯಾ ಅವಿದ್ಯಾ ನಿದ್ರಿತ ಹೋಇಜೇ । ತೇ ವೇಳೀ ದುಃಸ್ವಪ್ನಹಾ ಭೋಗಿಜೇ । ಜನ್ಮಮೃತ್ಯ್ವಾಂಚಾ ॥ ೭೮ ॥ ಪಾಠೀ ಅವಸಾಂತ ಯೇ ಚೇವೋ । ತೈತೇ ಅವಘೇಚಿ ಹೋಯವಾವೋ । ಐಸಾ ಉಪಜೇ ನಿತ್ಯ ಸದ್ಭಾವೋ । ತೋಹೀ ಆಪಣಪಾಂಚಿ ॥ ೭೯ ॥ ಮ್ಹಣವೂನಿ ಆಪಣಾಚಿ ಆಪಣಯಾ । ಘಾತ ಕಿಜತ ಅಸೇ ಧನಂಜಯಾ । ಚಿತ್ತ ದೇವೂನಿ ನಾಥಿಲಿಯಾ । ದೇಹಾಭಿಮಾನಾ ॥ ೭೦ ॥

**ಅರ್ಥ**— ಆಗ್ಗೆ ಶ್ರೀಕೃಷ್ಣನು ನಗುಮೊಗದಿಂದ ನುಡಿಯುತ್ತಾನೆ- ನಿನ್ನ ಮಾತುಗಳು ನನಗೆ ಆಶ್ಚರ್ಯವನ್ನುಂಟು ಮಾಡುತ್ತವೆ. ಈ ಅದ್ವೈತ ಸ್ಥಿತಿಯಲ್ಲಿ ಯಾರಿಗೆ ಯಾರು ಏನನ್ನು ಕೊಡಬೇಕಾಗಿದೆ ? ॥ ೭೭ ॥ ಮನುಷ್ಯನು ಅವಿವೇಕರೂಪೀ ಹಾಸಿಗೆಯಮೇಲೆ ಪ್ರಬಲವಾದ ಅವಿದ್ಯೆಯ ಯೋಗದಿಂದ ಯಾವಾಗ ( ಜೀವವು ) ಮಲಗಿರುತ್ತಾನೋ, ಆವಾಗ ಜನನ–ಮರಣ ರೂಪೀ ದುಃಸ್ವಪ್ನವನ್ನು ಅನನು ಭೋಗಿಸುತ್ತಾನೆ. ॥ ೭೮ ॥ ಅಕಸ್ಮಾತ್ ಜಾಗ್ರುತವಾಗುತ್ತಾನೆ. ಆವಾಗ ಆ ಸ್ವಪ್ನ ಮುಂತಾದವೆಲ್ಲವೂ ವ್ಯರ್ಥವಾಗುತ್ತವೆ. ಈ ಪ್ರಕಾರ ತಮ್ಮ ಅಸ್ತಿತ್ವದ ಯಾವ ಪ್ರತೀತಿಯು ಬರುತ್ತದೆ, ಅದಾದರೂ ತನ್ನ ಸ್ಥಳದಲ್ಲಿಯೇ ತನ್ನಲ್ಲಿಯೇ ಬರುತ್ತದೆ. ॥ ೭೯ ॥ ಆದುದರಿಂದ ಅರ್ಜುನಾ ! ನಾಶವಂತ ದೇಹಾಭಿಮಾನವನ್ನು ಹಿಡಿದು ( ದೇಹವೇ ನಾನೆಂಬ ಅಭಿಮಾನದಿಂದ ) ಮನುಷ್ಯನು ತಾನೇ ತನ್ನ ಘಾತವನ್ನು ಮಾಡಿಕೊಳ್ಳಲು ಪ್ರವೃತ್ತನಾಗುತ್ತಾನೆ. ॥ ೭೦ ॥

**ಬಂಧುರಾತ್ಮಾಽತ್ಮನಸ್ತಸ್ಯ ಯೇನಾತ್ಮೈವಾತ್ಮನಾಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

[ **ಬಂಧುರಾತ್ಮಾ ಇತಿ** ] ಹಾ ವಿಚಾರೂನಿ ಅಹಂಕಾರ ಸಾಂಡಿಜೇ । ಮಗ ಅಸತೀಚ ವಸ್ತು ಹೋ ಇಜೇ । ತರೀ ಆಪಲೀ ಸ್ವಸ್ತಿ ಸಹಜೇ । ಆಪಣ ಕೇಲೀ ॥ ೭೧ ॥ ಯೇರ್ಹವೀ ಕೋಶ ಕೀಟಕಾಚಿಯಾಪರೀ । ತೋ ಆಪಣಯಾ ಆಪಣ ವೈರೀ । ಜೋ ಆತ್ಮ ಬುದ್ಧಿ ಶರೀರೀ । ಚಾರುಸ್ಥಳೀ ॥ ೭೨ ॥ ಕೈಸೇ ಪ್ರಾಪ್ತೀಚಿಯೇ ವೇಳೇ । ನಿದೈವಾ ಆಂಧಳೇ ಪಣಾಚೇ ಡೋಹಳೇ । ಕೀ ಅಸತೇ ಆಪುಲೇ ಡೋಳೇ । ಆಪಣ ಝಾಂಕೀ ॥ ೭೩ ॥ ಕಾ ಕವಣ ಏಕ ಭ್ರಮಲೇ ಪಣೇ । ಮೀ ತೋ ನವ್ಹೇ ಗಾ ಚೋರಲೋ ಮ್ಹಣೇ । ಐಸಾ ನಾಥಿಲಾಭಂದ ಅಂತಃಕರಣೇ । ಘೇವೂನ ಠಾಕೇ ॥ ೭೪ ॥ ಯೇರವೀ ಹೋಯತೇ ತೋಚಿ ಆಹೇ । ಪರೀ ಕಾಯೀ ಕೀಜೇ ಬುದ್ಧೀ ತೈಸೀ ನೋಹೇ । ದೇಖಾ ಸ್ವಪ್ನೀಂಚೇನಿ ಘಾಯೇ ।

ಕೀಮರೀ ಸಾಚೀ ॥೭೫॥ ಜೈಸೀ ತೇ ಶುಕಾಚೇನಿ ಅಂಗಭಾರೇ । ನಳಿಕಾ ಭೋವಿನ್ನಲೀ ಏರಿ ಮೋಹರೇ । ತರೀ ತೇಣೇ ಉಡಾವೇ ಪರೀ ನ ಪುರೇ । ಮನ ಶಂಕಾ ॥ ೭೬ ॥ ವಾಯಾಂಚಿ ಮಾನ ಪಿಳೀ । ಅಟುವೇ ಹಿಯೇ ಆವಳೀ । ಓಟಾಂತು ನಳೀ । ಧರೂನಿ ಠಾಕೇ ॥ ೭೭ ॥ ಮ್ಹಣೇ ಬಾಂಧಲಾ ಮೀ ಫುಡಾ । ಐಸಿಯಾ ಭಾವನೇಚಿಯಾ ಪಡೇ ಖೋಡಾ । ಕೀ ಮೋಕಳಿಯಾ ಪಾಯಾಂಚಾ ಚವಡಾ । ಗೋವೀ ಅಧಿಕೇ ॥ ೭೮ ॥ ಐಸಾ ಕಾಜೇವಿಣ ಆ ತುಡಲಾ । ತೋ ಸಾಂಗ ಪಾ ಕಾಯ ಆಣಿಕೇ ಬಾಂಧಲಾ । ಮಗ ನ ಸೋಡಿಜೇಚ ಜರ್ಹೀ ನೇಲಾ । ತೋಡೂನಿ ಅರ್ಧಾ ॥ ೭೯ ॥ ಮ್ಹಣವೂನಿ ಆಪಣಯಾ ಆಪಣಚಿ ರಿಪು । ಜೇಣೇ ವಾಢವಿಲಾ ಹಾ ಸಂಕಲ್ಪು । ಯೇರ ಸ್ವಯಂಬುದ್ಧೀ ಮ್ಹಣೇ ಬಾಪು । ಜೋ ನಾಧಿಲೇ ನೇಘೇ ॥೮೦॥

**ಅರ್ಥ**— ವಿಚಾರಮಾಡಿ ಈ ಅಹಂಕಾರವನ್ನು ಬಿಡಬೇಕು. ಮತ್ತು ಆಮೇಲೆ ಇದ್ದಂಥ ತನ್ನ ಸ್ವರೂಪವನ್ನು ಗುರ್ತಿಸಿ ಬ್ರಹ್ಮರೂಪವಾಗಬೇಕು ಅಂದರೆ ಸಹಜವೇ ತಮ್ಮ ಕಲ್ಯಾಣವನ್ನು ಮಾಡಿಕೊಂಡಂತಾಗುತ್ತದೆ ॥ ೭೧ ॥ ಇಲ್ಲದೇ ಇದ್ದರೆ ಯಾವನು ಸುಶೋಭಿತವಾದ ಶರೀರವೇ ನಾನು ಇದ್ದೇನೆಂಬುವನ್ನು ತನ್ನ ಬುದ್ಧಿಯಿಂದ ತಿಳಿದು ( ಶರೀರದ ಸ್ಥಳದಲ್ಲಿ ಲುಬ್ಧನಾಗಿ ) ಆತ್ಮ ಸ್ವರೂಪವನ್ನು ಮರೆತು ಬಿಡುತ್ತಾನೆ, ಅವನು **ಕೋಶಕಾರ** ಎಂಬ ಹುಳದಂತೆ ತಾನೇ ತನ್ನ ವೈರಿಯಾಗುತ್ತಾನೆ. ॥ ೭೨ ॥ ಅನಾಯಾಸವಾಗಿ ಭಾಗ್ಯ ( ಲಾಭ ) ಪ್ರಾಪ್ತ ವಾಗುವ ಸುಸಂಧಿಯು ದೊರೆತಿರಲು, ದೈವಹೀನ ಮನುಷ್ಯನಿಗೆ ಕುರುಡನಾಗಬೇಕೆಂಬ ಬಯಕೆಯು ಹುಟ್ಟಿ, ಸಹಜವಾಗಿಯೇ ಪ್ರಾಪ್ತವಾಗತಕ್ಕ ವಸ್ತುಲಾಭವನ್ನು ಕಳೆದುಕೊಳ್ಳುತ್ತಾನೆ. ॥ ೭೩ ॥ ಇಲ್ಲವೇ ಯಾವನಾದರೂ ಒಬ್ಬ ಮನುಷ್ಯನು ಭ್ರಮಿಷ್ಟನಾದುದರಿಂದ ತನ್ನನ್ನೇ ಮರೆತು ತಾನೇ ಕದಿಯಲ್ಪಟ್ಟಿರುವೆನೆಂಬ ಅಸತ್ಯ ಭಾವದಿಂದ ಅಂತಃಕರಣದಲ್ಲಿ ಕಳವಳಗೊಳ್ಳುತ್ತಿರುತ್ತಾನೆ. ॥ ೭೪ ॥ ಈ ಭ್ರಮದ ಭ್ರಾಂತಿಯನ್ನು ಬಿಟ್ಟು ನಿಜವಾಗಿ ವಿಚಾರಮಾಡಿ ನೋಡಲು, ತಾನೇ ಬ್ರಹ್ಮಸ್ವರೂಪನಾಗಿರುವೆನೆಂದು ಅರಿವಾಗುತ್ತದೆ. ಆದರೆ ಏನು ಮಾಡಿದರೂ ಅವನ ಬುದ್ಧಿಗೆ ನಾನು ಬ್ರಹ್ಮಸ್ವರೂಪನಾಗಿರುವೆನೆಂಬ ಅರಿವು ಉಂಟಾಗುವುದೇ ಇಲ್ಲ. ಆದುದರಿಂದ ತಾನು ದುಃಖಿಯೆಂಬ ಭ್ರಮೆಯಿಂದ ದುಃಖಿಸುತ್ತಾನೆ. ಆವಾಗಲಾದರೂ ಅವನ ಬ್ರಹ್ಮಸ್ವರೂಪವು ನಾಶಹೊಂದಿರುವದಿಲ್ಲ. ನೋಡು, ಕನಸಿನಲ್ಲಿಯು ಕತ್ತಿಯು ಹೊಡೆತದಿಂದ ಯಾವನಾದರೂ ನಿಜವಾಗಿ ಸಾಯಬಲ್ಲನೇ ? ॥೭೫॥ ಗಿಳಿಯನ್ನು ಹಿಡಿಯುವದರ ದೆಸೆಯಿಂದ ಮಾಡಿದ "ನಳಿಕಾಯಂತ್ರದ ಮೇಲೆ" ಅದು ಕುಳಿತರೆ, ಆ ಗಿಳಿಯ ಭಾರದಿಂದ ಆ ಯಂತ್ರವು ವಿರುದ್ಧದೆಸೆಗೆ ತಿರುಗುತ್ತದೆ. ಆವಾಗ ಆ ಪಕ್ಷಿಯು ಹಾರಿಹೋಗಲು ಶಕ್ತಿಯುಳ್ಳದ್ದಾಗಿದ್ದರೂ, ನಳಿಯನ್ನು ಬಿಟ್ಟರೆ ತಾನೆಲ್ಲಿ ಕೆಳಗೆ ಬಿದ್ದು ಸಾಯುವೆನೋ ಎಂಬ ಭ್ರಮೆಯು ಭಯದಿಂದ ಗಟ್ಟಿಯಾಗಿ ಆ ನಳಿಯನ್ನು ಹಿಡಿದು ಮನದಲ್ಲಿ ಕಳವಳಗುಟ್ಟುತ್ತಿರುತ್ತದೆ. ॥ ೭೬ ॥ ವ್ಯರ್ಥವಾಗಿ ಅದು ತನ್ನ ತಲೆಯನ್ನು ಅಲುಗಾಡಿಸುತ್ತಿರುತ್ತದೆ. ಮತ್ತು ಆ ನಳಿಯನ್ನು ತನ್ನ ಚುಂಚಿನಿಂದ, ಗಟ್ಟಿಯಾಗಿ ಹಿಡಿದು ಎದೆಯಿಂದ ಅವಚಿಕೊಂಡು ಕಿರಿಚುತ್ತಿದೆ. ಮತ್ತು ಅನ್ನುವದೇನೆಂದರೆ, ॥ ೭೭ ॥ ನಾನು ನಿಜವಾಗಿ ಬಂಧನದಲ್ಲಿ ಶಿಲುಕಿ ಬಿದ್ದಿರುತ್ತೇನೆ. ಎಂಬ ಇದೇ ಭಾವನೆಯಿಂದ ಅದು ಪಾಶದಲ್ಲಿ ಶಿಕ್ಕುಬೀಳುತ್ತದೆ. ಮತ್ತು ತೆರುವಿದ್ದ ತನ್ನ ಕಾಲುಗಳಿಂದ ಗಟ್ಟಿಯಾಗಿ ಮತ್ತೆ ಮತ್ತೆ ಹಿಡಿಯುತ್ತದೆ. ॥ ೭೮ ॥ ಇಂಥ ಸ್ಥಿತಿಯಲ್ಲಿ ಅದನ್ನು ಅರ್ಧ ಕತ್ತರಿಸಿ ತೆಗೆದುಕೊಂಡು ಹೋದರೂ ಆ ಗಿಳಿಯು ಆ ನಳಿಯನ್ನು ಬಿಡುವದಿಲ್ಲ. ಹೀಗೆ ಅದು ನಿರರ್ಥಕವಾಗಿ ಬಂಧನದಲ್ಲಿ ಶಿಗುವದು. ಅದಕ್ಕೆ ಯಾರಾದರೂ ಕಟ್ಟಿರುವರೋ ಹೇಗೆ ಹೇಳು ನೋಡುವಾ ? ॥ ೭೯ ॥ ಆದುದರಿಂದ ಯಾವನು ಮನಸಿನಲ್ಲಿ ಸಂಕಲ್ಪವನ್ನು ವಿಶೇಷವಾಗಿ ಬೆಳಿಸಿರುತ್ತಾನೋ ಅವನು ತಾನೇ ತನ್ನ ಶತ್ರುವಾಗುತ್ತಾನೆ. ಅಂದರೆ ಯಾವ ಪುರುಷನು ವ್ಯರ್ಥವಾದ ಅಭಿಮಾನವನ್ನು ಧರಿಸಿರುವದಿಲ್ಲವೋ ಅವನು ಆತ್ಮಜ್ಞಾನಿಯಾಗಿರುತ್ತಾನೆ. ॥ ೮೦ ॥

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ॥ ೭ ॥**

**[ ಜಿತಾತ್ಮನ ಇತಿ ]** ತಯಾ ಸ್ವಾಂತಃಕರಣಜಿತಾ । ಸಕಳಕಾಮೋಪಶಾಂತಾ । ಪರಮಾತ್ಮಾ ಪರೌತಾ । ದೂರ ನಾಹೀ ॥ ೮೧ ॥ ಜೈಸಾ ಕಿಡಾಳಾಚಾ ದೋಷ ಜಾಯೇ । ತರೀ ಪಂಧರೀ ತೇಂಚಿ ಹೋಯೇ । ತೈಸೇ ಜೀವಾ ಬ್ರಹ್ಮತ್ವ ಆಹೇ । ಸಂಕಲ್ಪಲೋಪೀ ॥ ೮೨ ॥ ಹಾ ಘಟಾಕಾರ ಜೈಸಾ । ನಿಮಾಲಿಯಾ ತಯಾ ಅವಕಾಶಾ। ನ ಲಗೇ ಮಿಳೋ ಜಾಣೇ ಆಕಾಶಾ । ಆನಾರಾಯಾ ॥ ೮೩ ॥ ತೈಸಾ ದೇಹಾಹಂಕಾರ ನಾಥಿಲಾ । ಹಾ ಸಮೂಳ ಜಯಾಚಾ ನಾಶಿಲಾ । ತೋಚಿ ಪರಮಾತ್ಮಾ ಸಂಚಲಾ । ಆಧೀಚಿ ಆಹೇ ॥ ೮೪ ॥ ಆತಾ ಶೀತೋಷ್ಣಾಂಚಿಯಾ ವಾಹಣೀ । ತೇಥ ಸುಖದುಃಖಾಚೀ ಕಡಸಣೀ । ಇಯೇ ನ ಸಮಾತೀ ಕಾಂಹೀ ಬೋಲಣೀ । ಮಾನಾಪಮಾನಾಚೀ ॥ ೮೫ ॥ ಜೇ ಜಿಯೇ ವಾಟಾ ಸೂರ್ಯ ಜಾಯೇ । ತೇವ್ಹತೇ ತೇಜಾಚೇ ವಿಶ್ವ ಹೋಯೇ । ತೈಸೇ ತಯಾ ಪಾವೇ ತೇ ಆಹೇ । ತೋಚಿ ಮ್ಹಣವೂನಿ ॥ ೮೬ ॥ ದೇಖೇ ಮೇಘೌನಿ ಸುಟತೀ ಧಾರಾ ತಿಯಾ । ನ ರೂಪತೀ ಜೈಸಿಯಾ ಸಾಗರಾ । ತೈಸೀ ಶುಭಾ ಶುಭೇ ಯೋಗೀಶ್ವರಾ । ನವ್ಹತೀ ಆನೇ ॥ ೮೭ ॥

**ಅರ್ಥ—** ಯಾವನು ತನ್ನ ಮನಸ್ಸನ್ನು ಜಯಿಸಿರುವನೋ ಮತ್ತು ಯಾವನ ಸರ್ವವಾಸನೆಯು ಶಾಂತವಾಗಿ ರುವದೋ, ಅವನಿಗೆ ಅನ್ಯರ ಹಾಗೆ ಪರಮೇಶ್ವರನು ದೂರವಾಗಿರುವದಿಲ್ಲ. ॥ ೮೧ ॥ ಯಾವ ಪ್ರಕಾರ ಹೀನ ಬಂಗಾರ ದಲ್ಲಿ ಕೂಡಿದ ನೀಚ ಧಾತುವಿನ ದೋಷವು ಹೊರಟುಹೋದ ಮೇಲೆ ಅದೇ ಬಂಗಾರವು (ನೂರು ನಂಬರಿನ) ಶುದ್ಧ ಸುವರ್ಣವಾಗಿ ಪರಿಣಮಿಸುತ್ತದೋ ಅದೇ ಪ್ರಕಾರ ಅಹಂಕಾರವು ನಿರ್ಮೂಲವಾದನಂತರ, ಜೀವಕ್ಕೆ ಬ್ರಹ್ಮತ್ವವು ಪ್ರಾಪ್ತವಾಗುತ್ತದೆ. ॥ ೮೨ ॥ ಕೊಡವು ನಾಶವಾಗಿ ಹೋದರೂ, ಕೊಡದಲ್ಲಿಯ ಆಕಾಶವು ಅವಕಾಶವಿಲ್ಲದೇ ಸಹಜವೇ ಮಹದಾಕಾಶವನ್ನು ಸೇರುತ್ತದೆ. ಅದಕ್ಕೆ ಅನ್ಯಸ್ಥಳದಲ್ಲಿ ಹೋಗುವ ಕಾರಣಬೀಳುವದಿಲ್ಲ. ॥ ೮೩ ॥ ಯಾವನ ದೇಹ ದಲ್ಲಿ ಅಸತ್ಯವಾದ ಅಹಂಕಾರದ ಸಮೂಲ ನಾಶವಾಗಿರುವದೋ, ಆ ಪುರುಷನು ಮೂಲತಃ ಪರಮಾತ್ಮಸ್ವರೂಪ ನಿದ್ದಾನೆ. ॥ ೮೪ ॥ ಇಂಥ ಸ್ಥಿತಿಯಲ್ಲಿ ಶೀತ–ಉಷ್ಣ, ಸುಖ-ದುಃಖ, ಮಾನ–ಅಪಮಾನದ ಮಾತುಗಳು ಅವನಲ್ಲಿ ಮೂಲತಃ ಸಂಭವಿಸುವದೇ ಇಲ್ಲ. ॥ ೮೫ ॥ ಯಾವ ಯಾವ ಹಾದಿಯಿಂದ ಸೂರ್ಯನು ಹೋಗುತ್ತಾನೋ, ಆ ಎಲ್ಲ ಹಾದಿಯಿಂದಲೂ ಅವನಿಗೆ ಸರ್ವ ವಿಶ್ವವೂ ಪ್ರಕಾಶಮಾನವಾಗಿ ಕಾಣುತ್ತದೆ. ಅದರಂತೆಯೇ ಆ ಪುರುಷನಿಗೆ ಕಾಣುವ ಎಲ್ಲ ವಸ್ತುಗಳೂ ಬ್ರಹ್ಮಸ್ವರೂಪವೇ ಆಗಿ ತೋರುವವು. ॥ ೮೬ ॥ ನೋಡು, ಮೇಘದಿಂದ ಬೀಳುವ ಮಳೆಯ ಹನಿ ಗಳು ಯಾವ ಪ್ರಕಾರ ಸಮುದ್ರದಲ್ಲಿಯೇ ಬೆರೆತು ಹೋಗುತ್ತವೆಯೋ, ಅದೇ ಪ್ರಕಾರ ಶುಭಾಶುಭಗಳು ಯೋಗೇಶ್ವರರ ಆತ್ಮಸ್ವರೂಪದಿಂದ ಭಿನ್ನವಾಗಿರುವದಿಲ್ಲವಾದುದರಿಂದ, ಆ ಎರಡೂ ಅವರ ಪ್ರತೀತಿಗೆ ಬರುವದಿಲ್ಲ. ॥ ೮೭ ॥

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥ ೮ ॥**

**[ ಜ್ಞಾನ ವಿಜ್ಞಾನೇತಿ ]** ಜೋ ಹಾ ವಿಜ್ಞಾನಾತ್ಮಕ ಭಾವೋ । ತಯಾ ವಿವರಿತಾ ಜಾಹಲಾ ವಾವೋ । ಮಗ ಲಾಗಲಾ ಜವ ಪಾಹೋ । ತವ ಜ್ಞಾನ ತೇ ತೋಚಿ ॥ ೮೮ ॥ ಆತಾ ವ್ಯಾಪಕ ಕೀ ಏಕ ದೇಶೀ । ಊಹಾಪೋಹೀ ಜೇ ಐಸೀ । ತೇ ಕರಾವೀ ಠೇಲೀ ಆಪೈಸೀ । ದುಜೇ ನ ವೀಣ ॥ ೮೯ ॥ ಐಸಾ ಶರೀರೀಚಿ ಪರೀ ಕೌತುಕೇ । ಪರಬ್ರಹ್ಮಾಚೇನಿ ಪಾಡೇ ತುಕೇ । ಜೇಣೇ ಜಿಂತಲೀ ಏಕೇ । ಇಂದ್ರಿಯೇಗಾ ॥ ೯೦ ॥ ತೋ ಜಿತೇಂದ್ರಿಯ ಸಹಜೇ । ತೋಚಿ ಯೋಗಯುಕ್ತ ಮ್ಹಣಿಜೇ । ಜೇಣೇ ಸಾನೇ ಥೋರ ನೇಣಿಜೇ । ಕವಣೇ ಕಾಳೀ ॥ ೯೧ ॥ ದೇಖೇ ಸೋನಯಾಚೇ ನಿಖಳ। ಮೇರು ಯೇಸಣೇ ಥಿಸಾಳ। ಆಣಿ ಮಾತಿಯೇಚೇ ಡಿಖಳ । ಕೀ ಸರೀಸೇಂಚಿ ಮಾನೀ ॥ ೯೨ ॥ ಪಾಹಾತಾ ಪೃಥ್ವೀಚೇ ಮೋಲ ಥೋಡೇ। ಐಸೇ ಅನರ್ಘ್ಯ ರತ್ನ ಚೋಖಡೇ । ದೇಖೇ ದಗಡಾಚೇನಿ ಪಾಡೇ । ನಿಚಾಡ ಐಸಾ ॥ ೯೩ ॥

**ಅರ್ಥ—** ಅನುಭವಕ್ಕೆ ಬರುವಂತಹ ಈ ದೃಶ್ಯವಾದ ಜಗತ್ತಿನ ವಿಷಯವಾಗಿ ವಿಚಾರಮಾಡಿ, ಅವರು ಅದನ್ನು ಆತ್ಮದೃಷ್ಟಿಯಿಂದ ಅಸತ್ಯವೆಂದು ಸಿದ್ಧಮಾಡಿರುವರು. ಆ ಮೇಲೆ, ನಾನು ಯಾರು ಇದ್ದೇನೆಂಬುದನ್ನು ಯಾವಾಗ್ಗೆ ಅವರು ನೋಡಲಿಕ್ಕೆಹತ್ತಿದರೋ, ಆಗ್ಗೆ ಜ್ಞಾನವಾದರೂ ತಮ್ಮ ಸ್ವರೂಪವೇ ಇರುವುದೆಂದು ಅವರಿಗೆ ತಿಳಿಯಿತು. ॥ ೮೮ ॥ ಹೀಗೆ ನಿಶ್ಚಯವಾದ ನಂತರ ನಾನು ವ್ಯಾಪಕನಿದ್ದೇನೊ,ಇಲ್ಲವೇ ಏಕದೇಶೀ ಇರುವೆನೋ,ಎಂಬ ವಿಷಯವಾಗಿ ತರ್ಕವಿತರ್ಕ ಮಾಡಿದರೆ, ಅದು ಅಲ್ಲಿಗೇ ಕುಂಠಿತವಾಗುತ್ತದೆ. ಏಕೆಂದರೆ ಅಲ್ಲಿ ದ್ವೈತಭಾವವೇ ಇರುವದಿಲ್ಲ. ॥ ೮೯ ॥ ಈ ಮೇರೆಗೆ ಶರೀರದಲ್ಲಿದ್ದು ಯಾವನು ತನ್ನ ಇಂದ್ರಿಯಗಳನ್ನು ಜಯಸಿರುವನೋ, ಅವನಿಗೆ ಸಹಜವೇ ಬ್ರಹ್ಮಸದೃಶವಾದ ಯೋಗ್ಯತೆಯು ಬಂದಿರುತ್ತದೆ. ॥ ೯೦ ॥ ಅವನೇ ಸಹಜವಾಗಿ ಜಿತೇಂದ್ರಿಯನು. ಅವನೇ ಯೋಗಿಯಾಗಿರುವನು. ಕಾರಣವೇನೆಂದರೆ ಅವನಿಗೆ ಹಿರಿದು ಕಿರಿದು ಎಂಬ ಭೇದವು ಯಾವಾಗಲೂ ಇರುವದಿಲ್ಲ. ॥ ೯೧ ॥ ಶುದ್ಧ ಬಂಗಾರದ ‘ ಮುದ್ದೆಯು ’ ಮೇರುಪರ್ವತದಷ್ಟು ದೊಡ್ಡದು ದೊರಕಿದರೂ ಅದು ಮಣ್ಣಿನ ಮಟ್ಟಿಯೆಂದೇ ಅವರು ತಿಳಿಯುತ್ತಾರೆ ॥ ೯೨ ॥ ಯಾವುದರ ಬೆಲೆಯನ್ನು ನೋಡುತ್ತಿರಲಿಕ್ಕಾಗಿ ಅದರ ಮುಂದೆ ಪೃಥ್ವಿಯೇ ಕಡಿಮೆ ಕಿಮ್ಮತ್ತಿನದಾಗಿ ಕಾಣುವದೋ ಅಂಥ ಅಮೌಲ್ಯವಾದ ರತ್ನವನ್ನೇ ಪಾಷಾಣವೆಂದು ತಿಳಿಯುವಷ್ಟು ಅವರು ನಿರಿಚ್ಛರಾಗಿರುತ್ತಾರೆ. ॥ ೯೩ ॥

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

**[ ಸುಹೃನ್ಮಿತ್ರೇತಿ ]** ತೇಥ ಸುಹೃದ ಆಣಿ ಶತ್ರು । ಕಾ ಉದಾಸ ಆಣಿ ಮಿತ್ರು । ಹಾ ಭಾವ ಭೇದ ವಿಚಿತ್ರು । ಕಲ್ಪೂ ಕೈಂಚಾ ॥ ೯೪ ॥ ತಯಾ ಬಂಧು ಕೋಣ ಕಾಹ್ಯಾಚಾ । ದ್ವೇಷಿಯಾ ಕವಣ ತಯಾಚಾ । ಮೀಚಿ ವಿಶ್ವ ಐಸಾ ಜಿಯಾಚಾ । ಬೋಧ ಜಾಹಾಲಾ ॥ ೯೫ ॥ ಮಗ ತಯಾಚಿಯೇ । ದೃಷ್ಟೀ । ಅಧಮೋತ್ತಮ ಅಸೇ ಕಿರೀಟೀ । ಕಾಯ ಪರಿಸಾಚಿಯೇ ಕಸವಟೀ । ವಾನಿಯಾ ಕೀಜೇ ॥೯೬॥ ತೇ ಜೈಸೀ ನಿರ್ವಾಣ ಸುವರ್ಣಚಿ ಕರೀ । ತೈಸೀ ಜಯಾಚೀ ಬುದ್ಧೀ ಚರಾಚರೀ । ಹೋಯ ಸಾಮ್ಯಾಚಿ ಉಜರೀ । ನಿರಂತರ ॥ ೯೭ ॥ ಜೇ ತೇ ವಿಶ್ವಾಳಂಕಾರಾಚೇ ವಿಸುರೇ । ಜರೀ ಆಹಾತೀ ಅನಾನೇ ಆಕಾರೇ । ತರೀ ಘಡಲೇ ಏಕಚಿ ಭಾಂಗಾರೇ । ಪರಬ್ರಹ್ಮೇ ॥ ೯೮ ॥ ಐಸೇ ಜಾಣಣೇ ಜೇ ಬರವೇ । ತೇ ಫಾವಲೇ ತಯಾ ಆಘವೇ । ಮ್ಹಣೋನಿ ಅಹಚವಾಹಾಚೇ ನ ಝುಕವೇ । ಯೇಣೇ ಆಕಾರಚಿತ್ರೇ ॥ ೯೯ ॥ ಘಾಪೇ ಪಟಾಮಾಜೇ ದೃಷ್ಟೀ । ದಿಸೇ ತಂತೂಚೀ ಸೃಂಥ ಸೃಷ್ಟೀ । ಪರೀ ತೋ ಏಕ ವಾಂಚೂನಿ ಗೋಷ್ಟೀ । ದುಜೀನಾಹೀ ॥ ೧೦೦ ॥ ಐಸೇನಿ ಪ್ರತೀತೀ ಹೇ ಗವಸೇ । ಐಸಾ ಅನುಭವ ಜಯಾತೇ ಅಸೇ । ತೋಚಿ ಸಮಬುದ್ಧೀ ಹೇ ಅನಾರಿಸೇ । ನವ್ಹೇ ಜಾಣೇ ॥೧॥ ಜಯಾಚೇ ನಾವ ತೀರ್ಥರಾವೋ। ದರ್ಶನೇ ಪ್ರಶಸ್ತೀಸಿ ಠಾವೋ । ಜಯಾಚೇನಿ ಸಂಗೇ ಬ್ರಹ್ಮಭಾವೋ । ಭ್ರಾಂತಾಸಹಿ ॥೨॥ ಜಯಾಚೇನಿ ಬೋಲೇ ಧರ್ಮುಜಿಯೇ । ದಿಠೀ ಮಹಾ ಸಿದ್ಧೀತೇ ವಿಯೇ । ದೇಖೇ ಸ್ವರ್ಗಸುಖಾದಿಇಯೇ । ಖೇಳ ಜಯಾಚಾ ॥ ೩ ॥ ವಿಸಾಯೇ ಜರೀ ಆಠವಲಾಚಿತ್ತಾ । ತರೀ ದೇ ಆಪುಲೀ ಯೋಗ್ಯತಾ । ಹೇ ಅಸೋ ತಯಾತೇ ಪ್ರಶಂಸಿತಾ । ಲಾಭ ಆಥೀ ॥ ೪ ॥

**ಅರ್ಥ—** ಇವರು ಆಪ್ತರು ಮತ್ತು ಇವರು ಶತ್ರುಗಳು ಅಥವಾ ಉದಾಸೀನರು ಎಂಬ ಭೇದದೃಷ್ಟಿಯು ಯಾರಲ್ಲಿ ಉಳಿದಿರುವದಿಲ್ಲವೋ, ಅವರಿಗೆ ಇಂಥ ವಿಚಿತ್ರ ಕಲ್ಪನೆಯಾದರೂ ಎಲ್ಲಿಂದ ಬರಬೇಕು ? ॥ ೯೪ ॥ ನಾನೇ ಜಗತ್ತು ಇದ್ದೇನೆಂಬ ಬೋಧವು ಯಾರ ಮನಸ್ಸಿನಲ್ಲಿ ದೃಢವಾಗಿರುವದೋ, ಅವರಿಗೆ ಬಂಧುಗಳು ಯಾರು ? ದ್ವೇಷವೆಲ್ಲಿಯದು ? ॥ ೯೫ ॥ ಆ ಮೇಲೆ ಅರ್ಜುನಾ, ಅವರ ದೃಷ್ಟಿಗೆ ಉತ್ತಮ- ಅಧಮ ಎಂಬ ಭ್ರಮೆಯು

ಉಂಟಾಗುವ ಬಗೆ ಹೇಗೆ? ಹೀಗೆ ನೋಡು– ಸ್ಪರ್ಶಮಣಿಯ ಸ್ಪರ್ಶದಿಂದ, ಹೀನ–ಮಧ್ಯಮ–ಉತ್ತಮ ಮುಂತಾದ ಬೇರೆ ಬೇರೆ ತರದ ಬಂಗಾರವು ಆಗಬಹುದೇ? ಅದು ಹೇಗೆ ಶುದ್ಧ– ನಿರ್ದೋಷ ಬಂಗಾರವನ್ನು ಮಾಡುತ್ತದೋ, ಅದರಂತೆಯೇ ಯಾವನ ಬುದ್ಧಿಯು ಚರಾಚರಾತ್ಮಕವಾದ ವಸ್ತುಗಳಲ್ಲಿ ನಿರ್ಮಲವಾದ ಸಮಾನದೃಷ್ಟಿಯೇ ಇರುವದರಿಂದ ಒಂದೇ ತತ್ವವಿರುವದೆಂದು ತಿಳಿಯುತ್ತಾರೆ. ॥ ೯೭ ॥ ಯಾಕಂದರೆ ವಿಶ್ವರೂಪದ ಅಲಂಕಾರದ ಮುದ್ರೆಯು ಒಂದು ವೇಳೆ ಅನೇಕ ಆಕಾರದವು ಇರುತ್ತವೆ. ಆದರೂ ಅವು ಒಂದೇ ಪರಬ್ರಹ್ಮರೂಪೀ ಬಂಗಾರದಿಂದ ಮಾಡಿದವಿರುತ್ತವೆ. ॥ ೯೮ ॥ ಈ ಮೇರೆಗೆ ಶುದ್ಧ ಮತ್ತು ಸತ್ಯವಾದ ತತ್ವವು ಯಾವನಿಗೆ ಪೂರ್ಣವಾಗಿ ತಿಳಿದಿರುತ್ತದೋ, ಅವನು ಚಿತ್ರವಿಚಿತ್ರ ರಚನೆಗಳಿಂದ ಮೇಲಿಂದ ಮೇಲೆ ಮೋಸಹೊಂದುವದಿಲ್ಲ. ॥ ೯೯ ॥ ವಸ್ತ್ರದ ಕಡೆಗೆ ನೋಡಿದರೆ ಅದು ಹೇಗೆ ತಂತುಮಯವಾಗಿ ತೋರುತ್ತದೋ, ಅದರಂತೆಯೇ ಅವನಿಗೆ ಬ್ರಹ್ಮಸತ್ತಾದ ಹೊರ್ತು ಜಗತ್ತಿನಲ್ಲಿ ಅನ್ಯವಾವುದೂ ಕಾಣುವದಿಲ್ಲ. ॥ ೧೦೦ ॥ ಈ ಮೇರೆಗೆ ಸರ್ವ ಜಗತ್ತು ತುಂಬಿಕೊಂಡಿರುತ್ತದೆ. ಹೀಗೆ ಯಾವನಿಗೆ ಅನುಭವ ಬರುತ್ತಿದೆಯೋ, ಅವನೇ ಸಮಬುದ್ಧಿಯವನಾಗಿರುವನು. ಇದು ಅಸತ್ಯವಲ್ಲವೆಂಬುದನ್ನು ನಿಶ್ಚಯವಾಗಿ ನಂಬು. ॥ ೧॥ ಯಾವನ ಹೆಸರು ತೀರ್ಥರಾಜ ಎಂದಿರುವದೋ, ಯಾವನ ದರ್ಶನದಿಂದ ಅಂತಃಕರಣದಲ್ಲಿ ಸಮಾಧಾನವುಂಟಾಗುವದೋ ಮತ್ತು ಯಾವನ ಸಂಗತಿಯಿಂದ ಅಹಂಕಾರದಿಂದ ಭ್ರಮೆಪಟ್ಟ ಪುರುಷನ ಭ್ರಾಂತಿಯು ಹೋಗಿ ಅವನು ಬ್ರಹ್ಮಸ್ವರೂಪನಾಗುತ್ತಾನೋ, ॥ ೨ ॥ ಯಾವನ ಮಾತುಗಳು ಧರ್ಮದ ಜೀವವಾಗಿ ದೃಷ್ಟಿಯು ಮಹಾಸಿದ್ಧಿಯನ್ನು ಪ್ರಾಪ್ತಿಮಾಡಿಕೊಡುವಂತಹದಾಗಿರುವದೋ, ಮತ್ತು ಸ್ವರ್ಗಾದಿ ಸುಖಗಳು ಯಾವನ ಆಟವಾಗಿರುವವೋ, ॥ ೩ ॥ ಇಂಥ ಮನುಷ್ಯನನ್ನು ಚಿತ್ತದಲ್ಲಿ ಒಂದುವೇಳೆ ಸ್ಮರಣೆಮಾಡಿದ ಕೂಡಲೇ, ಅವನು ತನ್ನ ಯೋಗ್ಯತೆಯನ್ನೇ ಕೊಡುತ್ತಾನೆ. ಬಹಳ ಹೇಳುವದೇನು! ಅವನ ಸ್ತೋತ್ರವನ್ನು ಮಾಡುವದರಿಂದ ಮಹತ್ವವಾದ ಲಾಭವೇ ಇರುತ್ತದೆ. ॥ ೪ ॥

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತ ಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

[ **ಯೋಗೀತಿ** ] ಪುಢತೀ ಅಸ್ತಮೇನಾ ಐಸೇ । ಜಯಾ ಪಾಹಲೇ ಅದ್ವೈತದಿವಸೇ । ಮಗ ಆಪಣ ಪಾಂಚಿ ಆಪಣ ಅಸೇ । ಅಖಂಡಿತ ॥ ೫ ॥ ಐಸಿಯಾ ದೃಷ್ಟೀ ಜೋವಿವೇಕೀ । ಪಾರ್ಥಾ ತೋ ಏಕಾಕೀ । ಸಹಜೇ ಅಪರಿಗ್ರಹೀ ಜೋ ತಿಹೀ ಲೋಕೀ । ತೋಚಿ ಮ್ಹಣವುನೀ ॥ ೬ ॥ ಐಸಿಯೇ ಅಸಾಧಾರಣೇ । ನಿಷ್ಪನ್ನಾಚೀ ಲಕ್ಷಣೇ । ಆಪುಲೇನಿ ಬಹುವಸಪಣೇ । ಶ್ರೀಕೃಷ್ಣ ಬೋಲಿಲೇ ॥ ೭ ॥ ಜೋ ಜ್ಞಾನಿಯಾಚಾ ಬಾಪ । ದೇಖಣೇ ಯಾಂಚೇ ದಿಠೀಚಾದೀಪ । ಜಯಾ ದಾದುಲಯಾಚಾ ಸಂಕಲ್ಪ । ವಿಶ್ವ ರಚೀ ॥ ೮ ॥ ಪ್ರಣವಾಚಿಯೇ ಪೇಠೇ । ಜಾಹಾಲೇ ಶಬ್ದ ಬ್ರಹ್ಮ ಮಾಜಿಠೇ । ತೇಜಯಾಚಿಯೇ ಯಶಾ ಧಾಕುಟೇ । ವೇಢೂನ ಪುರೇ ॥ ೯ ॥ ಜಯಾಚೇನಿ ಆಂಗಿಕೇ ತೇಜೇ । ಆವೋ ರವಿ ಶಶೀಂಚಿಯೇ ವಣಿಜೇ । ಮ್ಹಣವೂನಿ ಜಗ ಹೇ ವೇಸಜೇ । ವೀಣ ಅಸೇ ತಯಾ ॥ ೧೦ ॥ ಹಾಗಾ ನಾಮುಚಿ ಏಕ ಜಯಾಚೇ । ಪಾಹತಾ ಗಗನಹೀ ದಿಸೇ ಟಾಂಚೇ । ಗುಣ ಏಕೈಕ ಕಾಯ ತಯಾಚೇ । ಕಲಿಶೀಲ ತೂ ॥ ೧೧ ॥ ಮ್ಹಣೋನಿ ಅಸೋ ಹೇ ವಾನಣೇ । ಸಾಂಗೋ ನೇಣೋ ಕವಣಾಚಾ ಲಕ್ಷಣೇ । ದಾವಾವೀ ಮಿಷೇ ಯೇಣೇ । ಕಾ ಬೋಲಿಲೋ ತೇ ॥ ೧೨ ॥ ಐಕೇ ದ್ವೈತಾಚಾ ಠಾವೋಚಿ ಫೇಡೀ । ತೇ ಬ್ರಹ್ಮವಿದ್ಯಾ ಕಿಜೇಲ ಉಘಡೀ । ತರೀ ಅರ್ಜುನ ಪಢಿಯೇ ಹೇ ಗೋಡೀ । ನಾಸೇಲ ಹನ ॥ ೧೩ ॥ ಮ್ಹಣೋನಿ ತೇ ತೈಸೇ ಬೋಲಣೇ । ನವ್ಹೇ ಸಪಾತಳ ಆಡ ಲಾವಣೇ । ಕೇಲೇ ಮನಚಿ ವೇಗಳ ವಾಣೇ । ಭೋಗಾವಯಾ ॥ ೧೪ ॥ ಜಯಾ ಸೋಹಂಭಾವ ಅಟಕ । ಮೋಕ್ಷ ಸುಖಾಲಾಗೋನಿ ರಂಕ । ತಯಾಚಿಯೇ ದಿಠೀಚಾ ಝುಣೇ ಕಳಂಕ । ಲಾಗೇಲ ತುಝಿಯಾ ಪ್ರೇಮಾ ॥ ೧೫ ॥ ವಿಪಾಯೇ ಅಹಂಭಾವ ಯಯಾಚಾ

ಜಾಈಲ । ಮೀತೇಂಚಿ ಹಾ ಜರೀ ಹೋಈಲ । ತರೀ ಮಗ ಕಾಯ ಕೀಜೇಲ । ಏಕಲೇಯಾ ॥ ೧೬ ॥ ಡಿಠೀಚಿ ಪಾಹತಾ ನಿವಿಜೇ । ಕಾತೋಂಡ ಭರೋನಿ ಬೋಲಿಜೇ । ನಾತರೀ ದಾಟೂನಿ ಖೇವದೀಜೇ । ಐಸೇ ಕೋಣ ಆಹೇ ॥ ೧೭ ॥ ಆಪುಲಿಯಾ ಮನಾ ಬರವೀ । ಅಸಮಾ ಈ ಗೋಠೀ ಜೇವೀ । ತೇ ಕನಣೇಸಿ ಚಾವಳಾವೀ । ಜರೀ ಐಕ್ಯ ಜಾಹಲೇ ॥ ೧೮ ॥ ಇಯಾ ಕಾಕುಳತೀ ಜನಾರ್ದನೇ । ಅನ್ಯೋಪದೇಶಾಚೇನಿ ಹಾತಾಸನೇ। ಬೋಲಾ ಮಾಜೀ ಮನ ಮನೇ ಆಲಿಂಗೂ ಸರಲೇ ॥೧೯॥ ಹೇ ಪರಿಸತಾ ಜರೀ ಕಾನಡೇ। ತರೀ ಜಾಣ ಪಾ ಪಾರ್ಥ ಉಘಡೇ। ಶ್ರೀಕೃಷ್ಣ ಸುಖಾಂಚೆಚಿ ರೂಪಡೇ। ಮೋತಲೇಗಾ ॥೧೨೦॥ ಹೇ ಅಸೋ ವಯಸೇಚಿಯೇ ಶೇವಟೀ । ಜೈಸೇ ಏಕಚೀ ಪಿಯೇ ಪಾಂಝೋಟೀ । ಮಗತೇ ಮೋಹಾಚೀ ತ್ರಿಪುಟೀ । ನಾಚೋ ಲಾಗೇ ॥ ೨೧ ॥ ತೈಸೇ ಜಾಹಾಲೇ ಶ್ರೀ ಅನಂತಾ । ಐಸೇ ತರೀ ಮೀ ನ ಮ್ಹಣತಾ । ಜರೀ ತಯಾಚಾ ನ ದೇಖತಾ । ಅತಿಶಯೋ ಏಥ ॥ ೨೨ ॥ ಪಹಾ ಪಾ ನವಲ ಕೈಸೇ ಚೋಜ । ಕೀ ಉಪದೇಶ ಕೇವುತೇ ಝುಂಜ । ಪರೀ ಪ್ರಥೇ ಮಾಲ ಭಾಚೇ ಭೋಜ । ನಾಚತ ಅಸೇ ॥ ೨೩ ॥ ಆವಡೀ ಆಣಿ ಲಾಜವೀ । ವ್ಯಸನ ಆಣಿಶಿಣವೀ । ಪಿಸೇ ಆಣಿನ ಭುಲವೀ । ತರೀ ತೇಚಿ ಕಾಈ ॥ ೨೪ ॥ ಮ್ಹಣವೂನಿ ಭಾವಾರ್ಥ ತೋ ಐಸಾ । ಅರ್ಜುನ ಮೈತ್ರಿಯೇಚಾ ಕುವಾಸಾ । ಕೀ ಸುಖೇ ಶೃಂಗಾರಲಿಯಾ ಮಾನಸಾ । ದರ್ಪಣ ತೋ ॥ ೨೫ ॥ ಯಾ ಪರೀ ಬಾಪ ಪುಣ್ಯ ಪವಿತ್ರ । ಜಗೀ ಭಕ್ತಿಬೀಜಾಸೀ ಸುಕ್ಷೇತ್ರ । ತೋ ಶ್ರೀಕೃಷ್ಣ ಕೃಪೇಪಾತ್ರ । ಯಾಚಿ ಲಾಗೀ ॥ ೨೬ ॥ ಹೋಕಾ ಅತ್ಮನಿವೇದನಾ ತಳೀಂಚೀ । ಜೇ ಪೀಠಿಕಾ ಹೋಯ ಸಖ್ಯಾಚೀ । ಪಾರ್ಥ ಅಧಿಷ್ಠಾತ್ರೀ ತೇಥೀಂಚೀ । ಮಾತೃಕಾ ಗಾ ॥ ೨೭ ॥ ಪಾಸೀಂಚಿ ಗೋಸಾವೀ ನ ವಾನಿಜೇ । ಮಗ ಪಾಇಕಾಚಾ ಗುಣ ಘೇಇಜೇ । ಐಸಾ ಅರ್ಜುನ ತೋ ಸಹಜೇ । ಪಢಿಯೇ ಹರೀ ॥ ೨೮ ॥ ಪಾಹಾ ಪಾ ಅನುರಾಗೇ ಭಜೇ। ಜೇ ಪ್ರಿಯೋತ್ತಮೇ ಮಾನಿಜೇ। ತೇ ಪತೀಹೂನಿ ಕಾಯ ನ ವಾನಿಜೇ । ಪತಿವ್ರತಾ ॥ ೨೯ ॥ ತೈಸಾ ಅರ್ಜುನಚಿ ವಿಶೇಷಸ್ತವಾವಾ । ಐಸೇ ಆವಡಲೇ ಮಜಜೀವಾ । ಜೇ ತೋ ತ್ರಿಭುವನೀಂಚಿಯಾ ದೈವಾ । ಏಕಾಯತನ ಜಾಹಾಲಾ ॥ ೧೩೦ ॥ ಜಯಾಚಿಯಾ ಆವಡೀ ಚೇನಿ ಪಾಂಗೇ । ಅಮೂರ್ತಹೀ ಮೂರ್ತಿ ಆಂಗವೇ । ಪೂರ್ಣಾಹಿಪರೀ ಲಾಗೇ । ಅವಸ್ಥಾ ಜಯಾಚೀ ॥೩೧॥ ತವ ಶ್ರೋತೇ ಮ್ಹಣತೀ ದೈವ । ಕೈಸೀ ಬೋಲಾಚೀ ಹವಾವ । ಕಾಯ ನಾದಾತೇ ಹನ ಬರವ । ಜಿಣೋನಿ ಆಲೀ ॥ ೩೨ ॥ ಹಾ ಹೋ ನವಲ ನೋಹೇ ದೇಶೀ । ಮರ್ಹಾಟೀ ಬೋಲಿಜೇ ತರೀ ಐಸೀ । ವಾಣೀ ಉಮಟತಾಹೇ ಆಕಾಶೀ । ಸಾಹಿತ್ಯ ರಂಗಾಚೇ ॥ ೩೩ ॥ ಕೈಸೇ ಉನ್ಮೇಖಚಾಂದಿಣೇ ತಾರ । ಆಣಿ ಭಾವಾರ್ಥ ಪಡೇಗಾರ । ಹೇಚಿ ಶ್ಲೋಕಾರ್ಥ ಕುಮುದಿನೀ ಫಾರ । ಸಾವಿಯಾ ಹೋತೀ ॥ ೩೪ ॥ ಚಾಡಚಿ ನಿಚಾಡಾ ಕರೀ। ಐಸೀ ಮನೋರಥೀ ಯೇ ಥೋರೀ । ತೇಣೇ ವಿಪಳಲೇ ಅಂತರೀ । ತೇಥ ಡೋಲ ಆಲಾ ॥೩೫॥ ತೇ ಸಿವೃತ್ತಿದಾಸೇ ಜಾಣಿತಲೇ । ಮಗ ಅವಧಾನ ದ್ಯಾಮಣಿತಲೇ । ನವಲ ಪಾಂಡವ ಕುಳೀ ಪಾಹಲೇ । ಕೃಷ್ಣದಿವಸೇ ॥೩೬॥ ದೇವಕೀ ಯಾ ಉದರೀ ವಾಹಿಲಾ । ಯಶೋದಾ ಸಾಯಾಸೇ ಪಾಳಿಲಾ । ಶೇಖೀ ಉಪೇಗಾ ಗೇಲಾ । ಪಾಂಡವಾಸೀ ॥ ೩೭ ॥ ಮ್ಹಣವೂನಿ ಬಹುದಿವಸ ವೋಳಗಾವಾ । ಕಾ ಅವಸರೂ ಪಾಹೋನಿ ವಿನವಾವಾ । ಹಾಹೀ ಸೋಸ ತಯಾ ಸದೈವಾ । ಪಡೇಚಿನಾ ॥ ೩೮ ॥ ಹೇ ಅಸೋ ಕಥಾ ಸಾಂಗೇ ವೇಗೀ । ಮಗ ಅರ್ಜುನ ಮ್ಹಣೇ ಸಲಗೀ । ದೇವಾ ಇಯೇ ಸಂತಚಿನ್ಹೇ ಆಂಗೀ । ನ ಠಕತೀ ಮಾಝ್ಯಾ ॥ ೩೯ ॥ ಯೇರವ್ಹೀ ಯಾ ಲಕ್ಷಣಾಂಚಿಯಾ ನಿಜಸಾರಾ । ಮೀ ಅಪಾಡೇ ಕೀರ ಅಪುರಾ । ಪರೀ ತುಮಚೇನಿ ಬೋಲೇ ಅವಧಾರಾ । ಥೋರಾವೇ ಜರೀ ॥ ೧೪೦ ॥ ಜೇ ತುಮ್ಹೀ ಚಿತ್ತ ದೇಯಾಲ । ತರೀ ಬ್ರಹ್ಮಪಿಯಾ ಹೋಯಿಜೇಲ । ಕಾಯ ಜಾಹಾಲೇ ಅಭ್ಯಾಸಿಜೇಲ । ಸಾಂಗಾಲಜೇ ॥ ೪೧ ॥ ಹಾ ಹೋ ನೇಣೇ ಕವಣಾಚೀ ಕಾಹಾಣೀ । ಆಇಕೋನಿ ಶ್ಲಾಘಜಿತ ಅಸೋ ಅಂತಃಕರಣೀ ।

ಐಸಿ ಜಾಹಾಲೀ ಪಣಾಚೀ ಶಿರಯಾಣೀ । ಕಾಯುಸೀ ದೇವಾ ॥ ೪೨ ॥ ಹೇ ಆಂಗೇ ವ್ಯಾಹೋಇಜೋ
ಕಾ । ಯೇ ತುಲೇ ಗೋಸಾವೀ ಆಪುಲೇಪಣೇ ಕೀ ಜೋ ಕಾ । ತವ ಹಾಸೋನ ಶ್ರೀಕೃಷ್ಣ ಹೋಕಾ
ಕರೂ ಮ್ಹಣತೀ ॥ ೪೩ ॥ ದೇಖಾ ಸಂತೋಷ ಏಕ ನ ಜೋಡೇ । ತವಚಿ ಸುಖಾಂಚೇ ಸೈಂಥ ಸಾಂಕಡೇ।
ಮಗ ಜೋಡಲಿಯಾ ಕವಣೇಕಡೇ । ಅಪುರೇ ಅಸೇ ॥ ೪೪ ॥ ತೈಸಾ ಸರ್ವೇಶ್ವರ ಬಳಿಯಾ ಸೇವಕೇ ।
ಮ್ಹಣೋನಿ ಬ್ರಹ್ಮಹೀ ಹೋಯ ತೋ ಕೌತುಕೇ । ಪರೀ ಕೈಸಾ ಭಾರೇ ಆತಲಾ ಪಿಕೇ । ದೈವಾಚೇನಿ ।
॥ ೪೫ ॥ ಜೋ ಜನ್ಮ ಸಹಸ್ರಾಚಿಯಾ ಸಾಠೀ । ಇಂದ್ರಾದಿಕಾಹೀ ಮಹಾಗ ಭೇಟೀ । ತೋ ಆಧೀನ
ಕೇತುಲಾ ಕಿರೀಟೀ । ಜೇ ಬೋಲಹೀ ನ ಸಾಹೇ ॥ ೪೬ ॥ ಮಗ ಐಕಾ ಜೇ ಪಾಂಡವೇ । ಮ್ಹಣಿತಲೇ
ವ್ಯಾ ಬ್ರಹ್ಮ ಹೋ ಆವೇ । ತೇ ಅಶೇಷಹೀ ದೇವೇ । ಅವಧಾರಿಲೇ ॥ ೪೭ ॥ ತೇಥ ಐಸೇಚಿ ಏಕ ವಿಚಾ
ರಿಲೇ । ಜೇ ಯಾ ಬ್ರಹ್ಮತ್ವಾಚೇ ಡೋಹಳೇ ಜಾಹಲೇ । ಪರೀ ಉದರಾ ವೈರಾಗ್ಯ ಆಹೇ ಆಲೇ । ಬುದ್ಧೀ
ಚಿಯಾ ॥ ೪೮ ॥ ಯೆರ್ಹವೀ ದಿವಸ ತರೀ ಯಾ ಅಪುರೇ । ಪರೀ ವೈರಾಗ್ಯ ವಸಂತಾಚೇನಿ ಭರೇ । ಜೇ
ಸೋಹಂಭಾವ ಮಹುರೇ । ಮೊಡೋನಿ ಆಲಾ ॥ ೪೯ ॥ ಮ್ಹಣೋನಿ ಪ್ರಾಪ್ತಿ ಫಳೀ ಫಳತಾ । ಯಯಾಸಿ
ವೇಳ ನಲಗೇಲ ಆತಾ । ಹೋಯ ವಿರಕ್ತ ಐಸಾ ಅನಂತಾ । ಭರವಸಾ ಜಾಹಲಾ ೫೦ ॥ ಮ್ಹಣೇ ಜೇ
ಜೇ ಹಾ ಅಧಿಷ್ಠೀಲ । ತೇ ಆರಂಭೀಚ ಯಯಾ ಫಳೇಲ । ಮ್ಹಣೋನಿ ಸಾಂಗಿತಲಾ ನ ವಚೇಲ ।
ಅಭ್ಯಾಸ ವಾಯಾ ॥ ೫೧ ॥ ಐಸೇ ವಿವರೋನಿಯಾ ಶ್ರೀಹರೀ । ಮ್ಹಣಿತಲೇ ತಿಯೇ ಅವಸರೀ ॥
ಅರ್ಜುನಾ ಹಾ ಅವಧಾರೀ। ಪಂಥರಾಜ ॥ ೫೨ ॥ ತೇಥ ಪ್ರವೃತ್ತಿ ತರೂಚ್ಯಾ ಬುಡೀ । ದಿಸತೀ ನಿವೃತ್ತೀ
ಫಳಾಚಿಯಾ ಕೋಡೀ । ಜಿಯೇ ಮಾರ್ಗೀಚಾ, ಕಾಪಡೀ । ಮಹೇಶ ಆಝುನೀ ॥ ೫೩ ॥ ಪೈ ಯೋಗಿ
ವೃಂದೇ ವಹಿಲೀ । ಆಡವೀ ಆಕಾಶೀ ನಿಘಾಲೀ । ಕೀ ತೇಥ ಅನುಭವಾಚ್ಯಾ ಪಾವುಲೀ । ಧೋರಣ
ಪಡಿಲಾ ॥ ೫೪ ॥ ತೀಹೀ ಆತ್ಮ ಬೋಧಾಚೇನಿ ಉಜುಕಾರೇ । ಧಾವ ಘೇತಲೀ ಏಕ ಸರೇ । ಕೀ ಯೇರ
ಸಕಳ ಮಾರ್ಗ ನಿವಸುರೇ । ಸಾಂಡೂನಿಯಾ ॥ ೫೫ ॥ ಪಾಠೀಮಹರ್ಷೀ ಯೇಣೇ ಆಲೇ । ಸಾಧಕಾಂಚೇ
ಸಿದ್ಧ ಜಾಹಾಲೇ । ಆತ್ಮವಿದ ಥೋರಾವಲೇ । ಯೇಣೇಚಿ ಪಂಥೇ ॥ ೫೬ ॥ ಹಾ ಮಾರ್ಗ ಜೈ ದೇಖಿಜೇ।
ತೈ ತಾಹಾನ ಭೂಕ ವಿಸಂಜೇ । ರಾತ್ರಿ ದಿವಸ ನೇಣಿಜೇ । ವಾಟೇ ಇಯೇ ॥ ೫೭ ॥ ಚಾಲತಾ ಪಾವುಲ
ಜೇಥ ಪಡೇ । ತೇಥ ಅಪವರ್ಗಾಚೀ ಖಾಣೀ ಉಘಡೇ । ಆವ್ಹಾಂಟಲಿಯಾ ತರೀ ಜೋಡೇ । ಸ್ವರ್ಗ
ಸುಖ ॥ ೫೮ ॥ ನಿಗಿಜೇ ಪೂರ್ವೀಲಿಯಾ ಮೋಹರಾ । ಕೀ ಯೇಇಜೇ ಪಶ್ಚಿಮೇಚಿಯಾ ಘರಾ ।
ನಿಶ್ಚಳಪಣೇ ಧನುರ್ಧರಾ । ಚಾಲಣೇ ಏಥೀಂಚೇ ॥ ೫೯ ॥ ಯೇಣೇ ಮಾರ್ಗೇ ಜಯಾ ಠಾಯಾ
ಜಾಇಜೇ । ತೋ ಗಾಂವ ಆಪಣಚಿ ಹೋಇಜೇ । ಹೇ ಸಾಂಗೋ ಕಾಯ ಸಹಜೇ । ಜಾಣಸೀ ತೂ
॥ ೧೬೦ ॥ ತೆಥೇ ಪಾರ್ಥೇ ಮ್ಹಣಿತಲೇ ದೇವಾ । ತರೀ ತೇಚಿ ಮಗ ಕೆಂವ್ಹಾ । ಕಾ ಆರ್ತಿ
ಸಮುದ್ರಾಸಿ ನ ಕಾಢಾವಾ । ಬುಡತು ಜೇಮೀ ॥ ೬೧ ॥ ತವ ಕೃಷ್ಣ ಮ್ಹಣತೀ ಐಸೇ । ಹೇ ಉತ್ಸಂಖಿಳ
ಬೋಲಣೇ ಕಾಯಿಸೇ । ಆಮ್ಹಿ ಸಾಂಗತಸೊ ಆಪೈಸೆ । ವರೀ ಪುಶಿಲೇ ತೂವಾ ॥ ೬೨ ॥

**ಅರ್ಥ**— ಎಂದಿಗೂ ಮುಳುಗದಂಥ ಜ್ಞಾನ ಸೂರ್ಯನು ಯಾವನ ಹೃದಯಾಕಾಶದಲ್ಲಿ ವುದಯವಾಗಿರುವನೋ ಅವನು ಯಾವಾಗಲೂ ತಾನು ತನ್ನಲ್ಲಿಯೇ ಬ್ರಹ್ಮಾನಂದ ಸುಖವಲ್ಲಿ ಮಗ್ನನಾಗಿರುತ್ತಾನೆ. ॥ ೫ । ಪಾರ್ಥನೇ ! ಈ ದೃಷ್ಟಿಯಿಂದ ಯಾವನು ವಿಚಾರ ಮಾಡುತ್ತಾನೋ ಅವನು ಮೂರು ಲೋಕಗಳಲ್ಲಿಯೂ ಅದ್ವಿತೀಯನು ಪರಿವಾರ ಸಂಗ್ರಹ ಮಾಡದೇ ಪರಿಗ್ರಹಶೂನ್ಯನಾಗಿರುವನು ॥ ೬ ॥ ( ಜ್ಞಾನೇಶ್ವರಮಹಾರಾಜರು ಅನ್ನುತ್ತಾರೆ. ) ಇಂಥ ಅಸಾಮಾನ್ಯಸಿದ್ಧ ಪುರುಷ ಸಾಧುವಿನ ಲಕ್ಷಣಗಳನ್ನು ಶ್ರೀಕೃಷ್ಣ ಪರಮಾತ್ಮನು, ತನ್ನಿಂದಧಿಕವಾದ ಗೌರವವನ್ನು ಕೊಟ್ಟು ಮೆರೆಸಿ ಹೇಳಿದನು. ॥ ೭ ॥ ಯಾವನು ಸರ್ವಜ್ಞಾನಿಗಳಲ್ಲಿ ಶ್ರೇಷ್ಠನೂ ಸರ್ವರ ದೃಷ್ಟಿಗೆ ಪ್ರಕಾಶಕನೂ ಆಗಿರುವನೋ, ಮತ್ತು

ಯಾವನು ತನ್ನ ಸಾಮರ್ಥ್ಯದಬಲದಿಂದ ಸಂಕಲ್ಪಮಾತ್ರದಿಂದಲೇ ಈ ವಿಶ್ವಸೃಷ್ಟಿಯನ್ನೇ ಸೃಜಿಸಬಲ್ಲನೋ ॥ ೮ ॥ ಮತ್ತು ಓಂ ಕಾರದ ಸಂತೆಯಲ್ಲಿ ಸಿದ್ಧವಾದ ವೇದರೂಪೀ ಶುಭ್ರ ವಸ್ತ್ರದಿಂದ ಯಾವನ ಆರುಗುಣಗಳಲ್ಲೊಂದು ಗುಣವಾದ ' ಯಶ ' ವನ್ನು ಸಹ ಆವರಿಸಲು ಅಪೂರ್ಣವಾಗಿರುವದೋ, ಆ ಷಡ್ಗುಣೈಶ್ವರ್ಯ ಮಂಡಿತನಾದ ಶ್ರೀಕೃಷ್ಣ ಕೀರ್ತಿ ಎಂಬ ಒಂದೇ ಗುಣವನ್ನು ಕೂಡಾ ವೇದಗಳಿಂದಲೂ ಸಂಪೂರ್ಣವಾಗಿ ವರ್ಣಿಸಲು ಸಾಧ್ಯವಾಗಲಿಲ್ಲ ( ಸೋತು ಹೋದವು ) ॥ ೯ ॥ ಯಾವನ ಅಂಗ ಪ್ರಭೆಯಿಂದಲೇ ಸೂರ್ಯಚಂದ್ರರ ವ್ಯವಹಾರದಲ್ಲಿ ಸಾಮರ್ಥ್ಯವುಂಟಾಗಿರುವದೋ, ಅಂತಹ ಆ ಪರಮಾತ್ಮನ ದಿವ್ಯ ಪ್ರಕಾಶದ ಆಧಾರವಿಲ್ಲದಲೇ ಈ ಜಗತ್ತು ಪ್ರಕಾಶಿತವಾಗಬಹುದೇ? ॥ ೧೦॥ ಶ್ರೀ ಜ್ಞಾನೇಶ್ವರ ಮಹಾರಾಜರು ತಮ್ಮ ಮನಸಿನಲ್ಲಿಯೇ ಅನ್ನುತ್ತಾರೆ— ( ಎಲೋ ಮನಸ್ಸೇ ! ) ಯಾವ ಭಗವಂತನ ನಾಮ ಮಹಾತ್ಮ್ಯೆಯೊಂದನ್ನೇ ಪರಿಶೀಲಿಸಿದರೆ ಅದರಮುಂದೆ ಆಕಾಶದ ವಿಸ್ತಾರವೂ ಕಡಿಮೆಯೆಂದು ತೋರುತ್ತದೋ, ಆ ಭಗವಂತನ ಒಂದೊಂದು ಗುಣಗಳನ್ನು ನೀನು ಹೇಗೆ ತಿಳಿಯಲು ಶಕ್ತನಾಗುವೆ ! ॥ ೧೧॥ ಆದುದರಿಂದ ಇನ್ನು ಮೇಲೆ ಈ ವರ್ಣನೆಯನ್ನು ಸಾಕುಮಾಡು. ಈ ( ಸಂತರ ) ಲಕ್ಷಣವನ್ನು ಹೇಳುವ ನಿಮಿತ್ಯದಿಂದ ಭಗವಾನನು ಯಾರ ಲಕ್ಷಣಗಳನ್ನು ಹೇಳಿದನೋ (?) ಏತಕ್ಕಾಗಿ ಹೇಳಿದನೋ (!) ನನಗೆ ತಿಳಿಯಲು ಅಸಾಧ್ಯವಾಗಿದೆ. ॥ ೧೨ । ಆದರೆ ನನಗೆ ಹೀಗೆ ಕಾಣುತ್ತದೆ ಅದನ್ನು ಹೇಳುವೆನು ಕೇಳು. *ದ್ವೈತವು ಅಡಗಿ ಹೆಸರಿಗೆ ಸಹ ಉಳಿಯದಂತೆ ಮಾಡುವಂಥ ಬ್ರಹ್ಮಜ್ಞಾನವನ್ನು ಸ್ಪಷ್ಟವಾಗಿ ವ್ಯಕ್ತಮಾಡುವದರಿಂದ, ತನ್ನ ಪ್ರಿಯಕರನಾದ ಅರ್ಜುನನಲ್ಲಿ ( ಭಗವಂತನ ವಿಷಯಕವಾಗಿ ) ಇದ್ದ ಭಕ್ತಿಪ್ರೇಮವು ನಾಶವಾದೀತು, ॥ ೧೩ ॥ ಎಂಬ ವಿಚಾರದಿಂದ ಭಗವಂತನು ದೇವಭಕ್ತ ಇವರ ಮಧ್ಯದಲ್ಲಿ ಪ್ರೇಮಸುಖ ಭೋಗಿಸುವದರ ದೆಶೆಯಿಂದ ಅರ್ಜುನನಲ್ಲಿ ಸೇವ್ಯಸೇವಕತ್ವ ( ದ್ವೈತ )ಭಾವವನ್ನುಳಿಸಿದ್ದಲ್ಲದೇ ಪರ್ಯಾಯದಿಂದ ಸಾಧುಗಳ ಸ್ಥಿತಿಯ ವರ್ಣನೆಮಾಡಿ ಬ್ರಹ್ಮಜ್ಞಾನದ ವಿಷಯದಲ್ಲಿ ಸ್ಪಷ್ಟವಾಗಿ ಮಾತನಾಡಲಿಲ್ಲ. ॥ ೧೪ ॥ ಯಾರು ಅಹಂಬ್ರಹ್ಮಸ್ಫುರಣದಲ್ಲಿ ಅಡಕವಾಗಿ ಮೋಕ್ಷಪ್ರಾಪ್ತಿಯದೆಶೆಯಿಂದ ದೀನರಾಗಿರುವರೋ, ಅಂಥ ಅದ್ವೈತರ ದೃಷ್ಟಿಯಕಪ್ಪು ಅರ್ಜುನನೇ ! ಒಂದು ವೇಳೆ ನಿನ್ನ ಪ್ರೇಮಕ್ಕೆ ತಗಲಬಹುದು ॥ ೧೫ ॥ ಅಕಸ್ಮಾತ್ತ ಅರ್ಜುನನಲ್ಲಿ “ ನಾನು ” ಎಂಬ ( ಅಹಂತಾ ) ರೂಪಿ ದ್ವೈತಭಾವನೆಯೇ ಅಳಿದುಹೋಗಿ ಅದ್ವೈತನಾಗಲು ನಾನೇ ಅವನು ಎಂಬ ಧೃಡವಾದ ಜ್ಞಾನವು ಉಂಟಾದರೆ ಆ ಮೇಲೆ ನಾನೊಬ್ಬನೇ ಏನು ಮಾಡಬೇಕು ? ॥ ೧೬ ॥ ನೋಡಿದಕೂಡ್ಲೆ ನೇತ್ರಾನಂದ ಪಡೆಯಲು, ನಾಲಿಗೆಯಿಂದ ಸವಿಮಾತುಗಳನ್ನಾಡಿ ಸಂತೋಷಹೊಂದಲು, ಮತ್ತು ಆನಂದದಿಂದ ದೃಢಾಲಿಂಗನಕೊಡಲಿಕ್ಕೆ ಅರ್ಜುನನ್ನುಳಿದು ಅನ್ಯ ಪ್ರೇಮದ ಸದ್ಭಕ್ತರು ನನಗೆ ಮತ್ತಾರಿರುವರು? ॥ ೧೭ ॥ ಆದರೆ ಅರ್ಜುನನು ನನ್ನಲ್ಲಿ ಐಕ್ಯಹೊಂದಿದರೆ ನನ್ನ ಮನಸಿನಲ್ಲಿದ್ದ ಶ್ರೇಷ್ಠ ರಹಸ್ಯವಾದ ಸಂಭಾಷಣವು ಯಾವದೋ, ಅದು ನನ್ನ ಅಂತಃಕರಣದಲ್ಲಿ ಹಿಡಿಯದೇ ಹೋದರೆ ನಾನು ಯಾರಸಂಗಡ ಮಾತನಾಡಬೇಕು ? ॥ ೧೮ ॥ ಇಂಥ ತೊಂದರೆಯನ್ನು ಶ್ರೀಕೃಷ್ಣನು ಮನಸಿನಲ್ಲಿ ತಂದು ತನ್ನ ವಿಷಯದಲ್ಲಿ ಕನಿಕರವುಳ್ಳವನಾಗಿ ಅನ್ಯೋಪದೇಶದ ಹತವಟಯಿಂದ ಮಾತನಾಡಿ ಅರ್ಜುನನ ಅರ್ಜುನತ್ವವನ್ನು ( ಸೇವಕತ್ವವನ್ನು ) ಸ್ಥಿರಪಡಿಸಿ ತನ್ನ ಮನಸಿನಿಂದ ಅರ್ಜುನನ ಮನಸಿಗೆ ಆಲಿಂಗನವನ್ನು ಕೊಟ್ಟನು. ॥ ೧೯ ॥ ಇದನ್ನು ಕೇಳುವವರಿಗೆ ಒಂದುವೇಳೆ ಅಶಕ್ಯವೆಂದು ಕಾಣಬಹುದು ಆದರೂ ಅರ್ಜುನನು ಶ್ರೀಕೃಷ್ಣನ ಸುಖದ ಪಡಿಯಚ್ಚಿನಲ್ಲಿ ಮೂಡಿಸಿ ತೆಗೆದ ಮೂರ್ತಿಯೇ ಆಗಿದ್ದಾನೆಂಬದು ನಿಶ್ಚಯವೆಂದು ತಿಳಿಯರಿ. ॥ ೧೨೦ ॥ ಇದಂತೂ ಯಿರಲಿ. ಒಬ್ಬಾನೊಬ್ಬ ಬಂಜೆ ಸ್ತ್ರೀಯಳಿಗೆ ಅವಳ ವಯಸ್ಸು ಆಗಿಹೋದ ಮೇಲೆ ಆ ಮುದುಕಿಗೆ ಒಂದೇ ಮಗನು ಹುಟ್ಟಿದರೆ ಅವಳಿಗೆ ಆ ಮಗುವಿನ ಮೋಹದಲ್ಲಿ ತಲ್ಲೀನವಾಗಿ ಅವಳು ಹೇಗೆ

---

* ದ್ವೈತದಲ್ಲಿ ಒಬ್ಬರು ಇನ್ನೊಬ್ಬರನ್ನು ಮೂಸಿಸುವರು. ನೋಡುವರು ಕೇಳುವರು ಮಾತಾಡಿಸುವರು. ಇನ್ನೊಬ್ಬರನ್ನು ಕುರಿತು ವಿಚಾರಮಾಡುವರು. ಆದರೆ, ಆತ್ಮನೋರ್ವನೇ ಇರುವಲ್ಲಿ ಯಾರನ್ನು ಯಾತರಿಂದ ಯಾರು ಮೂಸಿಸಬೇಕು. ನೋಡಬೇಕು; ಕೇಳಬೇಕು ಮಾತಾಡಬೇಕು, ವಿಚಾರಿಸಬೇಕು ? ಯಾವನು ಇದನ್ನೆಲ್ಲ ಅರಿಯುವನೋ, ಆ ಆತ್ಮನನ್ನು ಯಾತರಿಂದ ಅರಿತುಕೊಳ್ಳಬೇಕು ? ಅವನು ಅನಾದಿಜ್ಞಾನಿಯು ಅವನ ಜ್ಞಾನವು ಯಾತರಿಂದಾಗಬೇಕು. ಎಂದು ಯಾಜ್ಞವಲ್ಕ್ಯನು ಮೈತ್ರೇಯಳಿಗೆ ಹೇಳಿರುವನು. ( ಬೃಹದಾರಣ್ಯಕೋಪನಿಷತ್ತು. ಅಂ ೨ ಬ್ರಾಂ ೪ ಮಂತ್ರ ೧೩–೧೪ )

ಕುಣಿಯುವಳೋ, ॥ ೨೧ ॥ ಅದರಂತೆ ಶ್ರೀಕೃಷ್ಣನ ಸ್ಥಿತಿಯಾಗಿರುವದು. ಅರ್ಜುನನ ಮೇಲಿನ ಅತಿಶಯವಾದ ಅವನ ಪ್ರೇಮವು ನನ್ನ ದೃಷ್ಟಿಗೆ ಬೀಳದಿದ್ದರೆ ನಾನು ಹೀಗೆ ಅನ್ನುತ್ತಿದ್ದಿಲ್ಲ. ॥ ೨೨ ॥ ನೋಡು, ನೋಡು. ಇದು ಏನು ಆಶ್ಚರ್ಯ ! ಮತ್ತು ಎಷ್ಟು ಪ್ರೇಮ ! ಇಂಥ ಘೋರವಾದ ರಣರಂಗದಲ್ಲಿ ಇದು ಎಂಥ ಬ್ರಹ್ಮಜ್ಞಾನದ ಉಪದೇಶವು ? ಇಂಥ ಇಕ್ಕಟ್ಟಿನ ಸ್ಥಳದಲ್ಲಿ ಭಗವಂತನ ಪ್ರೀತಿಯು ಗೊಂಬೆಯಾದ ಅರ್ಜುನನ ಮುಂದೆ ಪ್ರೇಮಮೂರ್ತಿ ಶ್ರೀಕೃಷ್ಣನು ಕುಣಿಯುತ್ತಿದ್ದನು. ॥ ೨೩ ॥ ಪ್ರೇಮವಿದ್ದು ನಾಚಿಕೆಯನ್ನು ತೊರೆಯದೆ ಯಿದ್ದರೆ ವ್ಯಸನವಿದ್ದು ಬೇಸರ ಬರುತ್ತಿದ್ದರೆ ಹುಚ್ಚುಹಿಡಿದಿರಲು ಮನುಷ್ಯನ ಬುದ್ಧಿಯು ಭ್ರಮಿಷ್ಟವಾಗದೇಯಿದ್ದರೆ ಅವು ಇರುವವೆಂದು ಅನ್ನುವದರಲ್ಲಿ ಅರ್ಥವೇನಿರುವದು ? ॥ ೨೪ ॥ ಈ ಮಾತಿನ ಸಾರವು ( ರಹಸ್ಯವು ) ಇಷ್ಟೇಯಿರುವದು. ಅರ್ಜುನನು ಶ್ರೀಕೃಷ್ಣನ ಮಿತ್ರತ್ವದ ಮಂದಿರವೇ ಆಗಿರುವನು. ಮತ್ತು ಸುಖದಿಂದ ಶೃಂಗಾರಮಾಡಿರುವಂಥ ಶ್ರೀಕೃಷ್ಣನ ಮನಸ್ಸು ಪ್ರತ್ಯಕ್ಷ ನೋಡುವಂಥ ಕೈಗನ್ನಡಿಯೇ ಆಗಿರುವನು. ॥ ೨೫ ॥ ಈ ಪ್ರಕಾರಾ ಅರ್ಜುನನು ಧನ್ಯನೂ, ಪುಣ್ಯಪವಿತ್ರನೂ ಮತ್ತು ಭಕ್ತಿರೂಪ ಬೀಜವನ್ನು ಬಿತ್ತುವ ಉತ್ತಮವಾದ ಭೂಮಿಯೂ ಯಿದ್ದುದರಿಂದಲೇ ಅವನು ಶ್ರೀಕೃಷ್ಣನ ಕೃಪೆಗೆ ಪಾತ್ರನಾಗಿರುವನು. ॥ ೨೬ ॥ ಶ್ರವಣದಿಂದ ಆತ್ಮನಿವೇದನದ ವರೆಗೆ ನವವಿಧ ಭಕ್ತಿಗಳಲ್ಲಿ ಆತ್ಮನಿವೇದನದ ಹಿಂದಿನ ಸಖ್ಯವೆಂಬ ಎನೇ ಭಕ್ತಿಗೆ ಪಾರ್ಥನು ಅಧಿಷ್ಠಾನನೂ ಆಶ್ರಯಭೂತನೂ ಮುಖ್ಯ ದೈವತವೂ ಆಗಿರುತ್ತಾನೆ. ॥ ೨೭ ॥ ಭಗವಾನ ಶ್ರೀಷ್ಮಧನಿಯು ಹತ್ತರದಲ್ಲಿಯೇ ಇರಲು ಆ ಪ್ರಭುವಿನ ವರ್ಣನೆಯನ್ನು ಮಾಡದೇ ಭೃತ್ಯನನ್ನು ಸ್ತುತಿಸುವದರಿಂದ ಅತ್ಯಧಿಕವಾದ ಸಂತೋಷವು ಭಗವಂತನಿಗೆ ಉಂಟಾಗಬೇಕೆಂದರೆ ಪಾರ್ಥನು ಇಂಥ ಯೋಗ್ಯತೆಯುಳ್ಳವನೂ ಸಹಜವೇ ಶ್ರೀಹರಿಗೆ ಅತಿಪ್ರೀತಿಯವನೂ ಆಗಿದ್ದನು. ॥ ೨೮ ॥ ಯಾವ ಪತಿವ್ರತೆಯು ತನ್ನ ಪತಿಯನ್ನು ಅತಿ ಪ್ರೀತಿಯಿಂದ ಸೇವೆಮಾಡಿ ಪತಿಗೆ ಮಾನ್ಯವಾಗಿರುವಳೋ ಆ ಪತಿವ್ರತೆಯನ್ನು ಲೋಕದ ಜನರು ವಿಶೇಷವಾಗಿ ವರ್ಣಿಸುವದಿಲ್ಲವೇ ? ॥ ೨೯ ॥ ಇದೇ ರೀತಿಯಿಂದಾ ಅರ್ಜುನನನ್ನೇ ಇಲ್ಲಿ ವಿಶೇಷವಾಗಿ ಸ್ತೋತ್ರಮಾಡಬೇಕಾಗಿರುವದೆಂಬದು ನನ್ನ ಮನಸ್ಸಿಗೆ ತೋಚಿದ್ದರಿಂದ ನಾನು ಹಾಗೆ ಮಾಡಿರುವೆನು. ಯಾಕಂದರೆ ತ್ರಿಭುವನದ ಸರ್ವಭಾಗ್ಯವು ಒಬ್ಬ ಅರ್ಜುನನಲ್ಲಿಯೇ ನೆಲಿಸಿರುವದು. ॥ ೩೦ ॥ ಯಾವ ಪಾರ್ಥನ ಪ್ರೇಮದ ದೆಶೆಯಿಂದ ಮರುಳನಾಗಿ ನಿರಾಕೃತಿಯಾದ ಪರಬ್ರಹ್ಮ ಶ್ರೀಕೃಷ್ಣಮೂರ್ತಿಯು ಸಗುಣಸ್ವರೂಪಧರಿಸಿ ಅವನಿಗಧೀನನಾಗಿ ಅವತಾರ ತೆಗೆದುಕೊಳ್ಳಬೇಕಾಯಿತೋ, ಆ ದೇವನು ಪೂರ್ಣನಾಗಿದ್ದರೂ ಅರ್ಜುನನ ಸಖ್ಯತ್ವದ ಉತ್ಕಟವಾದ ಇಚ್ಛೆಯು ಆ ಪರಮೇಶ್ವರನಿಗೆ ಉಂಟಾಗಿರುವದು. ॥ ೩೧ ॥ ಆಗ್ಗೆ ಶ್ರೋತ್ರುಗಳು ಅನ್ನುತ್ತಾರೆ. ನಮ್ಮ ಭಾಗ್ಯವು ದೊಡ್ಡದು ! ಶ್ರೀ ಜ್ಞಾನೇಶ್ವರನ ಭಾಷಾಸರಣಿಯು ಅದರಲ್ಲಿಯ ಸುಂದರ ಶಬ್ದಗಳ ಮಧುರತೆಯು ಸೌಂದರ್ಯವು, ನಾದಬ್ರಹ್ಮನಿಗೆ ಸಹ ಜಯಿಸಿರುವದು. ॥ ೩೨ ॥ ಎಲೋ ! ಶುದ್ಧ ಮಹಾರಾಷ್ಟ್ರ ಭಾಷೆಯ ಸಂಭಾಷಣದ ವರ್ಣನೆಯಿಂದ ಹೃದಯಾಕಾಶದ ಮೇಲೆ ಶೃಂಗಾರಾದಿ ನವರಸದ ಬೇರೆ ಬೇರೆ ಮುದ್ರೆಗಳು ಮೂಡಬೇಕೆಂದರೆ, ಇದು ಹೆಚ್ಚಿನ ಆಶ್ಚರ್ಯವಿರುವದಿಲ್ಲೇನು ? ॥ ೩೩ ॥ ಶ್ರೀ ಜ್ಞಾನೇಶ್ವರ ಮಹಾರಾಜರ ಸಂಭಾಷಣವು ಹ್ಯಾಗಿರುವದೆಂದರೆ ಜ್ಞಾನರೂಪ ಚಂದ್ರಮನ ಬೆಳದಿಂಗಳದಂತೆ ಸ್ವಚ್ಛವಾಗಿದ್ದು ಅವರ ಭಾಷಣದ ಭಾವಾರ್ಥದಿಂದ ಮನಸಿಗೆ ಆನಂದ ಉಂಟಾಗುತ್ತದೆ. ಆದುದರಿಂದ ಗೀತೆಯ ಶ್ಲೋಕದಲ್ಲಿಯ ಅರ್ಥವು ಚಂದ್ರವಿಕಾಶಿನೀ ಕಮಲದಂತೆ ಸಹಜವೇ ಅರಳಿರುವದು. ॥ ೩೪ ॥ ಆ ಸಂಭಾಷಣದ ಯೋಗ್ಯತೆಯು ಹ್ಯಾಗೆ ಇರುವದೆಂದರೆ ನಿರಿಚ್ಛ ಮನುಷ್ಯನಿಗೆ ಸಹ ಈ ವ್ಯಾಖ್ಯಾನವನ್ನು ಕೇಳುವ ಅಪೇಕ್ಷೆಯು ಉಂಟಾಗುವದು. ಈ ವ್ಯಾಖ್ಯಾನದ ಶ್ರವಣದಿಂದ ಶ್ರೋತೃಗಳ ಅಂತಃಕರಣದಲ್ಲಿ ಪ್ರಕಾಶಬಿದ್ದು ಅವರು ಸಂತೋಷದಿಂದ ತಲೆದೂಗಿದರು. ॥ ೩೫ ॥ ಹೀಗೆ ಶ್ರೋತೃಗಳ ಮನಸ್ಸಿನಭಾವವನ್ನು ತಿಳಿದು ನಿವೃತ್ತಿದಾಸ ಜ್ಞಾನದೇವರು ಅನ್ನುತ್ತಾರೆ. ಶ್ರೋತೃಗಳಿರಾ! ಇತ್ತಕಡೆಗೆ ಅವಧಾನವನ್ನೀಯಬೇಕೆಂದು ನುಡಿದರು. ಶ್ರೀಕೃಷ್ಣರೂಪ ಸೂರ್ಯನು ಪಾಂಡವರ ಕುಲದಮೇಲೆ ಪ್ರಕಾಶ ಮಾಡಿದನು. (ಶ್ರೀಕೃಷ್ಣನು ಪಾಂಡವರ ಮೇಲೆ ಪರಮಾನುಗ್ರಹ ಮಾಡಿದನು.) ॥ ೩೬ ॥ ಯಾವನಿಗೆದೇವಕಿಯು ನವಮಾಸ ಗರ್ಭದೊಳಗೆ ಹೊತ್ತಳೋ, ಯಶೋದೆಯು ಕಷ್ಟಬಟ್ಟು ಯಾವ ಅರ್ಭಕನನ್ನು ಜೋಪಾನಮಾಡಿ ಸಲುಹಿದಳೋ, ಆ ಗೋಪಾಲಕೃಷ್ಣಮೂರ್ತಿಯು ಪಾಂಡವರ ಆಧೀನನಾಗಿ ಅವರ ಬಂಡಿ ಹೊಡೆಯುವ ಆಳಾದನು. ಕಟ್ಟ

ಕಡೆಗೆ ಪಾಂಡವರಿಗೇ ಉಪಯೋಗವಾದನು. ॥ ೩೬ ॥ ಆದುದರಿಂದ ಬಹುದಿವಸಗಳ ವರೆಗೆ ಅವನ ಸೇವೆಮಾಡಬೇಕು. ಮತ್ತು ಸಮಯ ಸಾಧಿಸಿ ಅವನಲ್ಲಿ ವಿನಯದಿಂದ ಬೇಡಿಕೊಳ್ಳಬೇಕೆಂಬುವಷ್ಟು ಸಹಪ್ರಯಾಸವು ಆ ಭಾಗ್ಯಶಾಲಿಯಾದ ಅರ್ಜುನನಿಗೆ ಬೀಳಲಿಲ್ಲ ! ॥ ೩೭ ॥ ಶ್ರೋತೃಗಳು ಅನ್ನುತ್ತಾರೆ ಇಪಂತೂ ಇರಲಿ, ಇನ್ನುಮುಂದೆ ಕಥಾಭಾಗವನ್ನು ಬೇಗನೇ ಹೇಳಬೇಕೆಂದು ಕೇಳಿಕೊಳ್ಳಲು (ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ.) ಅರ್ಜುನನು ಸಲಿಗೆಯಿಂದ ಬೇಡಿಕೊಳ್ಳುತ್ತಾನೆ. ದೇವಾ ! ನೀವು ಯಾವ ಈ ಸಂತರ ಲಕ್ಷಣವನ್ನು ಹೇಳಿದಿರಿ ಅದು ನನ್ನ ಅಂತಃಕರಣದಲ್ಲಿ ನಿಲ್ಲುವ ದಿಲ್ಲ. ॥೩೯॥ ಈ ಲಕ್ಷಣದ ತಾತ್ಪರ್ಯವನ್ನು ತಿಳಿದುಕೊಳ್ಳಲಿಕ್ಕೆ ನಾನು ನಿಜವಾಗಿ ಅಯೋಗ್ಯನೂ ಅಪೂರ್ಣನೂ ಇರುವೆನು. ಆದರೂ ನಿಮ್ಮ ಅನುಗ್ರಹದಿಂದ ಒಂದುವೇಳೆ ನನಗೆ ಯೋಗ್ಯತೆಯು ಬಂದರೂ ಬರಬಹುದು. ॥ ೧೪೦ ॥ ಆದರೆ ನಿಮ್ಮ ಮನಸ್ಸಿಗೆ ಬಂದರೆ ನನ್ನನ್ನು ಬ್ರಹ್ಮಸ್ವರೂಪದೊಳಗಿರಿಸುವದು. ನಿಮಗೆ ಆಶ್ಚರ್ಯವೇ ? ನೀವು ಯಾವ ದಾದರೊಂದು ಅಭ್ಯಾಸಮಾಡಲು ನನಗೆ ಉಪದೇಶ ಮಾಡಿದರೆ ಅದೆಲ್ಲವನ್ನು ಭಕ್ತಿಪೂರ್ವಕವಾಗಿ ಮಾಡಲು ನನಗೆ ಅಸಾಧ್ಯವಿರುವದೇ ? ॥ ೪೧ ॥ ಎಲೋ ದೇವನೆ ! ನೀವು ಯಾರ ಮಾತು ಹೇಳುತ್ತಿರುವಿರೆಂಬದು, ನನಗೆ ತಿಳಿಯುವ ದಿಲ್ಲ. ಅದನ್ನು ಕೇಳಿ ನಾನು ನನ್ನ ಮನಸಿನಲ್ಲಿ ಅವರ ಸ್ತೋತ್ರಮಾಡುತ್ತಿರುವೆನು. ಆದರೆ ಇಂಥ ಲಕ್ಷಣಗಳು ಯಾವ ಪುರುಷನಲ್ಲಿ ಸ್ವಯಂಸಿದ್ಧವಾಗಿರುವವೋ, ಆ ಪುರುಷನ ಯೋಗ್ಯತೆಗೆ ಪರಿಮಿತಿಯೇ ಇರುವದಿಲ್ಲ. ॥ ೪೨ ॥ ಪ್ರಭೋ! ನಾನು ನಿಮ್ಮವನೇ ಎಂದು ತಿಳಿದು ನನ್ನಲ್ಲಿ ಅಷ್ಟು ಯೋಗ್ಯತೆಯು ಬರುವಂತೆ ಮಾಡುವಿರೇನು ? ಆಗ್ಗೆ ಶ್ರೀಕೃಷ್ಣ ಭಗವಾನನು ನಗೆಮೊಗದಿಂದ ಅನ್ನುತ್ತಾನೆ. ಅಹುದು, ಯಾಕಾಗಲೊಲ್ಲದು. ನಿನ್ನ ಮನೋಬಯಕೆಯಂತೆ ಮಾಡು ವೆವು. ॥ ೪೩ ॥ ನೋಡು, ಎಲ್ಲಿಯವರೆಗೆ ಒಂದು ಸಮಾಧಾನ ಪ್ರಾಪ್ತವಾಗಿರುವದಿಲ್ಲವೋ, ಅಲ್ಲಿಯವರೆಗೆ ನಾಲ್ಕೂ ಕಡೆಯಿಂದ ಸುಖದ ಬರಗಾಲವೇ ಉಂಟಾಗುತ್ತದೆ. ಒಂದುವೇಳೆ ಸಂತೋಷವು ಪೂರ್ಣಪ್ರಾಪ್ತವಾದಮೇಲೆ ಸುಖದ ಕೊರತೆ ಹೇಗೆ ಆಗುವದು ! ॥ ೪೪ ॥ ಅದೇ ಪ್ರಕಾರ ಸರ್ವಶಕ್ತಿವಾನ್ ಸಮರ್ಥ ಸರ್ವೇಶ್ವರನ ಪೂರ್ಣ ಸೇವಕನೆನಿಸಿದ ಅರ್ಜುನನು ಸಹಜವೇ ಬ್ರಹ್ಮಸ್ವರೂಪನಾಗುವದರಲ್ಲಿ ಸಂದೇಹವೇನು ? ಅರ್ಜುನನ ಸದ್ದೈವಭಾಗ್ಯದ ಭಾರದಿಂದ ಶ್ರೀಕೃಷ್ಣನು ಬಾಗಿ ಅವನಿಗಧೀನನಾಗಿ ಹೇಗೆ ಫಲದ್ರೂಪವಾಗಿರುವನೆಂಬದನ್ನು ನೋಡಿರಿ. ॥ ೪೫ ॥ ಇಂದ್ರಾದಿ ದೇವತೆಗಳಿಗೆ ಸಹ ಸಾವಿರಾರು ಜನ್ಮತೆಗೆದುಕೊಂಡರೂ, ಯಾವನ ದರ್ಶನವಾಗಬೇಕಾದರೆ ದುರ್ಮಿಳವಾಗಿರುವದೋ, ಆ ಶ್ರೀಕೃಷ್ಣನು ಅರ್ಜುನನ ಮಾತನ್ನು ಒಂದೂ ಮೀರುತ್ತಿದ್ದಿಲ್ಲ. ಭಕ್ತಾಧೀನನಾಗಿದ್ದನು. ॥ ೪೬ ॥ ಆ ಮೇಲೆ ಅರ್ಜುನನು ಬ್ರಹ್ಮಸ್ವರೂಪನಾಗಬೇಕೆಂಬದನ್ನು ಶ್ರೀಕೃಷ್ಣನು ಸಂಪೂರ್ಣವಾಗಿ ಕೇಳಿದನು. ॥ ೪೭ ॥ ಆ ಸಮಯದಲ್ಲಿ ಶ್ರೀಕೃಷ್ಣನು ಮನಸ್ಸಿನಲ್ಲಿ ವಿಚಾರಮಾಡಿ ಅನ್ನುತ್ತಾನೆ. ತಾನು ಬ್ರಹ್ಮಸ್ವರೂಪನಾಗಬೇಕೆಂಬ ಬಯಕೆಯು ಅರ್ಜುನನಿಗೆ ಉಂಟಾಗಿದೆ ಅಂದಬಳಿಕ ಅವನ ಬುದ್ಧಿಯು ಉದರದಲ್ಲಿ ವೈರಾಗ್ಯದ ಗರ್ಭವು ನಿಂತಿರುವದು. ॥ ೪೮ ॥ ಅಥವಾ ಅರ್ಜುನನು ನೂತನವಾದ ವೃಕ್ಷವಿದ್ದಾಗ್ಯೂ ವೈರಾಗ್ಯರೂಪ ವಸಂತದ ಭರದಿಂದ ಅಹಂಬ್ರಹ್ಮ ರೂಪ ಮೊಗ್ಗೆಗಳ ಭಾರದಿಂದ ಬಾಗಿರುವನು. ॥ ೪೯ ॥ ಆದುದರಿಂದ ಇವನಿಗೆ ಮೋಕ್ಷರೂಪ ಫಲದ ಪ್ರಾಪ್ತಿಯು ತೀವ್ರವೇ ದೊರಕಬಹುದು. ಯಾಕಂದರೆ ಇವನು ವೈರಾಗ್ಯಸಂಪನ್ನನಾಗಿರುವನೆಂಬದು ಶ್ರೀಕೃಷ್ಣನಿಗೆ ಮನೋನಿರ್ಧಾರ ಉಂಟಾಯಿತು. ॥ ೧೫೦ ॥ ಶ್ರೀಕೃಷ್ಣನು ಅನ್ನುತ್ತಾನೆ— ಇನ್ನು ಮೇಲೆ ಅರ್ಜುನನು ಯಾವ ಅನುಷ್ಠಾನವನ್ನು ಆಚರಿಸುವನೋ, ಅದೆಲ್ಲವೂ ಅವನಿಗೆ ತೀವ್ರನೇ ಫಲದ್ರೂಪವಾದೀತು. ಆದುದರಿಂದ ಇವನಿಗೆ ಯೋಗಾಭ್ಯಾಸ ಮಾಡಲು ಉಪದೇಶಮಾಡಿದರೆ ಅದು ಎಂದಿಗೂ ವ್ಯರ್ಥವಾಗಲಾರದು. ॥ ೫೧ ॥ ಎಂಬದನ್ನು ಆಗ್ಗೆ ಶ್ರೀಹರಿಯು ತನ್ನ ಮನಸ್ಸಿನಲ್ಲಿ ವಿಚಾರಮಾಡಿ ಅನ್ನುತ್ತಾನೆ— ಅರ್ಜುನನೇ ! ನಾವು ನಿನಗೆ ಯಾವ ಯೋಗಮಾರ್ಗವನ್ನು ಹೇಳಬೇಕೆಂದಿರುವೆವೋ, ಅದು ಸರ್ವಮಾರ್ಗದಲ್ಲಿ ರಾಜನೆನಿಸಿಕೊಂಡಿರುತ್ತದೆ ಅದನ್ನು ನೀನು ಕೇಳು. ॥ ೫೨ ॥ ಈ ಮಾರ್ಗದಲ್ಲಿ ಪ್ರವೃತ್ತಿರೂಪ ಗಿಡದ ಬುಡಕ್ಕೆ ನಿವೃತ್ತಿರೂಪ ಕೋಟಿಗಟ್ಟಲೇ ಫಲಗಳು ಕಾಣುತ್ತಿರುತ್ತವೆ. ( ಈ ಮಾರ್ಗದ ಆಚರಣ ಮಾಡಲಿಕ್ಕೆ ಹತ್ತುವದರಿಂದ ಮೋಕ್ಷರೂಪ ಫಲವು ದೊರಕುತ್ತದೆ. ) ಮತ್ತು ಇದೇ ಮಾರ್ಗದಿಂದ ಶ್ರೀ ಶಂಕರನು ಈ ಹೊತ್ತಿನವರೆಗೆ ಯಾತ್ರೆಯನ್ನು ಮಾಡುತ್ತಿರುವನು. ॥ ೫೩ ॥ ಎರಡನೇ ಯೋಗೀ ಜನರಾದರೂ

ಹೃದಯಾಕಾಶದಲ್ಲಿ ಅಡ್ಡ ಮಾರ್ಗದಿಂದ ನಡಿಯಹತ್ತಿದರು. ಆ ಮೇಲೆ ಅನುಭವದಿಂದ ಈ ರಾಜಮಾರ್ಗದ ಥೋರ ಣವು ಅವರಿಗೆ ದೊರಕಿತು. ॥ ೧೫೪ ॥ ಅವರು ಮಿಕ್ಕುಳಿದ ಸರ್ವ ಅಜ್ಞಾನದ ಮಾರ್ಗಗಳನ್ನು ಬಿಟ್ಟುಕೊಟ್ಟು ಸರಳ ವಾದ ಮಾರ್ಗದಿಂದ ಒಂದೇಸವನೇ ನಡಿಯಲಿಕ್ಕೆ ಹತ್ತಿದರು. ॥ ೧೫೫ ॥ ಆ ಮೇಲೆ ಪೂರ್ವದಲ್ಲಿಯ ಮಹರ್ಷಿಗಳಾ ದರೂ ಇದೇ ಮಾರ್ಗದಿಂದ ಬಂದರು. ಅವರು ಸಾಧಕರಿದ್ದು ಸಿದ್ಧರಾದರು. ಮತ್ತು ಅದೇಪ್ರಕಾರಾ ತತ್ವಜ್ಞಾನಿಗಳು ಇದೇ ಪಂಥದಿಂದ ಶ್ರೇಷ್ಠತ್ವವನ್ನು ಪಡೆದರು. ॥ ೫೬ ॥ ಈ ಮಾರ್ಗದಿಂದ ನಡೆಯುತ್ತಿರಲು ಹಸಿವೆ ನೀರಡಿಕೆಗಳ ಸ್ಮರಣೆಯು ಉಳಿಯುವದಿಲ್ಲ. ಈ ದಾರಿಯಿಂದ ನಡೆಯುತ್ತಿರಲು ರಾತ್ರಿ ಮತ್ತು ಹಗಲು ಇದರ ಕಲ್ಪನೆಯು ಆಗುವ ದಿಲ್ಲ. ॥ ೫೭ ॥ ಈ ಮಾರ್ಗಕ್ರಮಣ ಮಾಡುತ್ತಿರಲು ಎಲ್ಲೆಲ್ಲಿ ಪಾದಗಳು ಬೀಳುವವು ಆ, ಆ, ಸ್ಥಳದಲ್ಲಿ ಮೋಕ್ಷದ ಖಣಿಯೇ ತೆರೆಯುತ್ತದೆ. ಮತ್ತು ಅಕಸ್ಮಾತ ಅವನು ಅಡಮಾರ್ಗವನ್ನು ಹಿಡಿದರೂ ಅವನಿಗೆ ಸ್ವರ್ಗಸುಖವು ದೊರಕುತ್ತದೆ. ॥ ೫೮ ॥ ಅವನು * ಪೂರ್ವದ ಮಾರ್ಗದಿಂದ ಹೊರಟು ಅಂದರೆ ಪ್ರವೃತ್ತಿ ಮಾರ್ಗವನ್ನು ಬಿಟ್ಟು (ಇಂದ್ರಿಯಗಳ ನಿಗ್ರಹಮಾಡಿ) ಪಶ್ಚಿಮಕ್ಕೆ ಬರುತ್ತಾನೆ. ( ನಿವೃತ್ತಿಯ ಮಾರ್ಗಕ್ಕೆ ಹತ್ತುತ್ತಾನೆ. ) ಎಲೈ ಧನುರ್ಧರನೇ! ಈ ಸ್ಥಳದ ಮಾರ್ಗಕ್ರಮಣಮಾಡುವದು ಹೇಗೆಂದರೆ ನಿಶ್ಚಲವಾದ ನಿರ್ಧಾರ ಮನಸಿನಿಂದ ಕೂಡುವದೇ ಆಗಿರುವದು. ॥ ೫೯ ॥ ಈ ಹಾದಿಯಿಂದ ಯಾವ ಗ್ರಾಮಕ್ಕೆ ಹೋಗಬೇಕಾಗಿರುವದು ಆ ಗ್ರಾಮವೇ ತಾನು ಆಗುತ್ತಾನೆ. ಇದನ್ನು ಯಾಕೆ ಹೇಳಬೇಕು ? ಅದು ನಿನಗೆ ಸಹಜವೇ ತಿಳಿಯುವದು. ॥ ೬೦ ॥ ಆಗ್ಗೆ ಅರ್ಜುನನು ಅನ್ನುತ್ತಾನೆ ಶ್ರೀಕೃಷ್ಣಾ! ಈ ಯೋಗಶಾಸ್ತ್ರವನ್ನು ಯಾವಾಗ್ಗೆ ನನಗೆ ಹೇಳುವಿರಿ ? ಕಾರಣವೇನಂದರೆ ನಾನು ಉತ್ಕಂಠಾರೂಪ ಸಮುದ್ರದಲ್ಲಿ ಮುಳುಗುತ್ತಿರಲು ಅದರೊಳಗಿಂದ ನೀವು ನನ್ನನ್ನು ಯಾಕೆ ಕಡೆಗೆ ತೆಗೆಯುವದಿಲ್ಲ ? ॥ ೬೧ ॥ ಆಗ್ಗೆ ಶ್ರೀಕೃಷ್ಣನು ಅನ್ನುತ್ತಾನೆ, ನಾವಾಗಿಯೇ ನಿನಗೆ ಹೇಳುತ್ತಿರುವಾಗ್ಗೆ ಪ್ರಶ್ನಮಾಡುವದಕ್ಕೆ ಇಷ್ಟು ಯಾಕೆ ಆತುರಪಡುತ್ತಿರುವಿ ? ॥ ೬೨ ॥

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಂ ॥ ೧೧ ॥**

**[ ಶುಚೌ ದೇಶೇ ಇತಿ ]** ತರೀ ವಿಶೇಷೇ ಆತಾ ಬೋಲಿಜೇಲ । ಪರೀ ತೇ ಅನುಭವೇ ಉಪೇಗಾ ಜಾಈಲ । ಮ್ಹಣೋನಿ ತೈಸೇ ಏಕ ಲಾಗೇಲ । ಸ್ಥಾನ ಪಾಹಾವೇ ॥ ೬೩ ॥ ಜೇಥ ಆರಾಣುಕೇಚೇನಿ ಕೋಡೇ । ಬೈಸಲಿಯಾ ಉಠೋ ನಾವಡೇ । ವೈರಾಗ್ಯಾಸೀ ದುಣೀವ ಚಢೇ। ದೇಖಿಲಿಯಾಜೇ ॥ ೬೪ ॥ ಜೋ ಸಂತೀ ವಸವಿಲಾ ಠಾವೋ । ಸಂತೋಷಾಸಿ ಸಾವಾವೋ । ಮನಾ ಹೋಯ ಉತ್ಸಾವೋ । ಧೈರ್ಯಾಚಾ ॥ ೬೫ ॥ ಅಭ್ಯಾಸಚಿ ಆಪಣ ಯಾತೇ ಕರೀ । ಹೃದಯಾತೇ ಅನುಭವವರೀ । ಐಸೀ ರಮ್ಯ ಪಣಾಚೀ ಥೋರೀ । ಅಖಂಡ ಜೇಥ ॥ ೬೬ ॥ ಜಯಾ ಆಡ ಜಾತಾ ಪಾರ್ಥಾ । ತಪಶ್ಚರ್ಯಾ ಮನೋ ರಥ । ಪಾಖಾಂಡೀ ಯಾಹೀ ಆಸ್ಥಾ। ಸಮೂಳ ಹೋಯ ॥ ೬೭ ॥ ಸ್ವಭಾವೇ ವಾಟೇ ಯೆತಾ। ಜರೀ ವರ ಪಡಾ ಜಾಹಾಲಾ । ಅವಚಿತಾ। ತರೀ ಸಕಾಮುಹೀ ಪರೀ ಮಾಘೌತಾ। ನಿಘೋ ವಿಸರೇ ॥೬೮॥ ಐಸೇನೀ ನ ರಾಹತಯಾತೇ ರಾಹಾವೀ। ಭ್ರಮತಯಾತೇ ಬೈಸವೀ। ಥಾಪಟೂನಿ ಚೇವವೀ । ವಿರಕ್ತೀತೇ ॥ ೬೯ ॥ ಹೇ ರಾಜ್ಯವರ ಸಾಂಡಿಜೇ । ಮಗ ನಿವಾಂತಾ ಏಥೇಂಚಿ ಅಸಿಜೇ। ಐಸೆ ಶೃಂಗಾರಯಾಂಹಿ ಉಪಜೇ । ದೇಖತ ಖೇವೋ ॥ ೧೭೦ ॥ ಜೇ ಯೇಣೇ ಮಾನೇ ಬರವಂಟೆ । ಆಣಿ ತೈಸೇಚಿ ಅತಿ ಚೋಖಟ । ಜೇಥ ಅಧಿಷ್ಠಾನ ಪ್ರಗಟ । ಡೋಳಾ ದಿಸೇ ॥ ೭೧ ॥ ಆಣಿಕಹೀ ಏಕ ಪಹಾವೇ । ಜೇ ಸಾಧಕೀ ವಸತೇ ಹೋ ಆವೇ । ಆಣಿ ಜನಾಚೇನಿ ಪಾಯರವೇ । ರುಳೇಚಿನಾ ॥ ೭೨ ॥ ಜೇಥ ಅಮೃತಾ ಚೇನೀ ಪಾಡೇ ।

---

* ಟೀಪು— ಪೂರ್ವಮಾರ್ಗ ಅಂದರೆ ಆಧಾರಾದಿ ಅಗ್ನಿಚಕ್ರದವರೆಗೆ ಇರುವ ಮಾರ್ಗವು. ಪಶ್ಚಿಮಮಾರ್ಗವೆಂದರೆ ತ್ರಿಕೂಟಾದಿ ಚೈತನ್ಯ ಚಕ್ರದವರೆಗಿನ ಮಾರ್ಗವು.

ಮೂಳಾಹೀ ಸಕಟಿ ಗೋಡೇ । ಜೋಡತೀ ದಾಟೇ ಝಾಡೇ । ಸದಾ ಫಳತೀ ॥ ೭೩ ॥ ಪಾವುಲಾ ಪಾವ್ರಲಾ ಉದಕೇ । ವರ್ಷಾಕಾಳಾವೀಣ ಅತಿಚೋಖೇ । ನಿರ್ಝರೇ ಕಾ ವಿಶೇಖೇ । ಸುಲಭೇ ಜೇಥೇ ॥ ೭೪ ॥ ಹಾ ಆತಪಹೀ ಅಳುಮಾಳ । ಜಾಣಿಜೇ ತರೀ ಶೀತಳ । ಪವನ ಅತಿ ನಿಶ್ಚಳ । ಮಂದ ಝುಳಕೇ ॥ ೭೫ ॥ ಬಹುತ ಕರೂನಿ ನಿಃಶಬ್ದ । ದಾಟ ನ ರಿಘೇ ಶ್ವಾಪದ । ಶುಕಹನ ಷಟ್ಪದ । ತೇವುತೇ ನಾಹೀ ॥ ೭೬ ॥ ಪಾಣಿ ಲಗೇ ಹಂಸೇ । ದೋನೀ ಚಾರೀ ಸಾರಸೇ । ಕವಣೇ ಏಕೇ ವೇಳೇ ಬೈಸೇ । ಕೋಕಿಳಹೀ ಹೋಕಾ ॥ ೭೭ ॥ ನಿರಂತರ ನಾಹೀ ತರೀ ಆಲೀ ಗೇಲೀ ಕಾಂಹೀ । ಹೋ ತು ಕಾ ಮಯೂರೇಹೀ । ಆವ್ಹೀ ನಾ ನ ಮ್ಹಣೋ ॥ ೭೮ ॥ ಪರೀ ಆವಶ್ಯಕ ಪಾಂಡವಾ । ಐಸಾ ಠಾವ ಜೋಡಾವಾ । ತೇಥ ನಿಗೂಢಮಠ ಹೋಆವಾ । ಕಾ ಶಿವಾಲಯ ॥ ೭೯ ॥ ದೋಹ್ನೀ ಮಾಜೀ ಆವಡೇ ತೆ । ಜೇ ಮಾನಲೇ ಹೋಯ ಚಿತ್ತೇ । ಬಹುತಕರೂನಿ ಏಕಾಂತೇ। ಬೈಸಿಜೇ ಗಾ ॥ ೧೮೦ ॥ ಮ್ಹಣೋನಿ ತೈಸೇ ತ ಜಾಣಾವೇ । ಮನ ರಾಹತೇ ಪಾಹಾವೇ । ರಾಹೇಲ ತೇಥ ರಚಾವೇ । ಆಸನ ಐಸೇ ॥ ೮೧ ॥ ವರೀ ಚೋಖಟ ಮೃಗ ಸೇವಡೀ । ಮಾಜೀ ಧೂತ ವಸ್ತ್ರಾಚೀ ಘಡೀ । ತಳವಟೀ ಅಮೋಡೀ । ಕುಶಾಂಕುರ ॥ ೮೨ ॥ ಸಕೋಮಳ ಸಂಸೇ । ಸುಬದ್ಧ ರಾಹತೀ ಆಪೈಸೇ ! ಏಕ ಪಾಡೇ ತೈಸೇ । ಮೋಜಾ ಘಾಲೀ ॥ ೮೩ ॥ ಪರೀ ಸಾವಿಯಾಚಿ ಉಂಚ ಹೋಈಲ । ತರೀ ಆಂಗ ಹನ ಡೋಲೇಲ । ನೀಚ ತರೀ ಪಾವೇಲ। ಭೂಮಿದೋಷ ॥ ೮೪ ॥ ಮ್ಹಣೋನಿ ತೈಸೇ ನ ಕಂಾವೇ । ಸಮಭಾವ ಧರಾವೇ । ಹೇ ಬಹು ಅಸೋ ಹೋಆವೇ । ಆಸನ ಐಸೇ ॥ ೮೫ ॥

**ಅರ್ಥ**— ಆದರೆ ಇನ್ನು ಮೇಲೆ ಈಗಲೇ ಸ್ಪಷ್ಟಮಾಡಿ ಆ ವಿಷಯವಾಗಿ ಪ್ರತಿಪಾದನ ಮಾಡುವದರಲ್ಲಿ ಬರುವದು. ಆದರೆ ಅವರಂತೆ ಅಭ್ಯಾಸಮಾಡುವದರಿಂದಲೇ ಅದರ ಉಪಯೋಗವಾದೀತು. ಆದುದರಿಂದ ಯೋಗಾಭ್ಯಾಸದ ದೆಶೆಯಿಂದಾ ಒಂದು ಉತ್ತಮಸ್ಥಾನವನ್ನು ಹುಡುಕಿ ಇಡಬೇಕು. ॥ ೭೩ ॥ ಆ ಸ್ಥಳದಲ್ಲಿ ಸಹಜವೇ ಕೂತುಕೊಳ್ಳುವದರಿಂದ ಮನಸ್ಸಿಗೆ ಒಳ್ಳೇ ಸಮಾಧಾನ ಉಂಟಾಗಬೇಕು ಅಲ್ಲಿಂದ ಬಿಟ್ಟು ಹೋಗಬೇಕೆಂಬ ಅಪೇಕ್ಷೆಯೇ ಆಗಬಾರದು ಮತ್ತು ಆ ಸ್ಥಾನವನ್ನು ನೋಡಿದ ಕೂಡಲೆ ವೈರಾಗ್ಯವು ದ್ವಿಗುಣಿತ ಜನಿಸಬೇಕು. ॥ ೭೪ ॥ ಆ ಸ್ಥಳವನ್ನು ಸತ್ಪುರುಷರು ಪೂರ್ವದಲ್ಲಿ ಸ್ಥಾಪನೆಮಾಡಿದ್ದಿರಬೇಕು. ಆ ಸ್ಥಳವು ಮನಸಿನ ಸಂತೋಷಕ್ಕೆ ಸಹಾಯವಾಗಿ ಮನಸಿಗೆ ಧೈರ್ಯದ ಉಲ್ಲಾಸವಾಗುತ್ತಿರಬೇಕು. ॥ ೭೫ ॥ ಆ ಸ್ಥಾನದಲ್ಲಿ ಅಭ್ಯಾಸ ಮಾಡುವದಕ್ಕೆ ಉತ್ತೇಜನ ಬರಬೇಕು. ಮತ್ತು ಅನುಭವವು ತಾನಾಗಿಯೇ ಸಾಧಕರ ಅಂತಃಕರಣಕ್ಕೆ ಮಾಲಿಯನ್ನು ಹಾಕಬೇಕು. ಹೀಗೆ ಪವಿತ್ರ ರಮ್ಯವಾದ ಸ್ಥಾನ ಮಹಾತ್ಮೆಯು ಎಲ್ಲಿ ನಿರಂತರವಾಗಿ ಯಿರುವದು. ॥ ೭೬ ॥ ಅರ್ಜುನನೇ ! ಯಾವ ಸ್ಥಾನದಲ್ಲಿ ಸಹಜವೇ ಪ್ರವೇಶಮಾಡುವದರಿಂದ ಅಲ್ಲಿ ಮನಃಪೂರ್ವಕವಾಗಿ ನಾಸ್ತಿಕನಿಗೆ ಸಹಾ ತಪಶ್ಚರ್ಯ ಮಾಡಬೇಕೆಂಬ ಸದ್ಬುದ್ಧಿಯು ಉಂಟಾಗಬೇಕು. ॥ ೧೭೭ ॥ ಸಹಜವೇ ಯಾವನಾದರೂ ವಿಷಯಾಸಕ್ತ ಮನುಷ್ಯನು ಅಕಸ್ಮಾತ್ ದಾರಿಯಿಂದಾ ಬರುವಾಗ್ಗೆ ಈ ಸ್ಥಾನವನ್ನು ನೋಡಿದರೆ ಅಲ್ಲಿಯೇ ಉಳಿದು ಮುಂದೆ ಹೋಗುವದನ್ನು ಮರೆತು ಬಿಡಬೇಕು. ॥ ೭೮ ॥ ಈ ರೀತಿಯಿಂದ ಆ ಸ್ಥಾನದಲ್ಲಿರಬಾರದೆಂಬವನಿಗೆ ಸಹ ಇರುವ ಅಪೇಕ್ಷೆಯನ್ನುಂಟು ಮಾಡಬೇಕು. ಯಾವಾಗಲೂ (ಒಂದೇ ಸ್ಥಳದಲ್ಲಿರದೆ) ತಿರುಗಾಡುವವರಿಗೆ ಕೂಡಾ ಆ ಸ್ಥಾನವು ಅಲ್ಲಿ ಕೂಡುವಹಾಗೆ ಮಾಡಬೇಕು. ವೈರಾಗ್ಯಶೀಲರಿಗೆ ಹೊಡೆದೆಬ್ಬಿಸಿ ಜಾಗ್ರತ ಮಾಡುತ್ತಿರಬೇಕು. ॥ ೭೯ ॥ ಒಬ್ಬಾನೊಬ್ಬ ರಾಜನು ಇಲ್ಲವೇ ವಿಲಾಸಿ ಪುರುಷನು ಈ ಸ್ಥಳವನ್ನು ನೋಡಿದಕೂಡಲೆ ತನ್ನ ರಾಜ್ಯ ಐಶ್ವರ್ಯಾದಿಗಳನ್ನು ತ್ಯಾಗಮಾಡಿ ಸುಖಿಯಾಗಿ ಅಲ್ಲಿಯೇ ಇರಬೇಕೆಂಬ ಆಶೆಯು ಹುಟ್ಟಬೇಕು. ॥ ೧೮೦ ॥ ಇಂಥ ಐಶ್ವರ್ಯದಿಂದ ಯುಕ್ತವಾದ ಯಾವ ಸ್ಥಾನವು ಉತ್ತಮವಾಗಿರುವದೋ, ಮತ್ತು ಅತಿಶಯ ಪವಿತ್ರಸ್ಥಾನವಾಗಿರುವದೋ, ಆ ಸ್ಥಳದಲ್ಲಿ ಬ್ರಹ್ಮಾನಂದವು ಪ್ರತ್ಯಕ್ಷ ಅನುಭವಕ್ಕೆ ಬರುತ್ತದೆ. ॥ ೮೧ ॥ ಇನ್ನೂ ಒಂದು ಈ ಸ್ಥಾನದ ಲಕ್ಷಣವನ್ನು ಸಾಧಕರು

ನೋಡಬೇಕಾಗುವದು. ಅದು ಯಾವದೆಂದರೆ ಆ ಸ್ಥಳವು ಸಾಧಕರು ವಾಸಮಾಡಿದ್ದಾಗಿರಬೇಕು. ಮತ್ತು ಆ ಸ್ಥಾನದಲ್ಲಿ ಜನರು ಬರಹೋಗುವ ಗದ್ದಲವು ಇರಬಾರದು. ॥ ೭೨ ॥ ಅಮೃತದಂತೆ ಬೊಡ್ಡಿಸಹಿತ ರುಚಿಕರವೂ, ಮತ್ತು ಯಾವಾಗಲೂ ಫಲದಿಂದ ಯುಕ್ತವಾದ ದಟತ ವೃಕ್ಷಗಳು ಇರಬೇಕು. ॥ ೧೭೩ ॥ ಅಲ್ಲಿ ಹೆಜ್ಜೆಹೆಜ್ಜೆಗೆ ನೀರಿನ ಝರಿಗಳು ಹರಿಯುವಂಥವು ಮತ್ತು ಮಳಿಗಾಲದಲ್ಲಿಯೂ ಕೂಡಾ ನಿರ್ಮಲವಾದ ನೀರಿರಬೇಕು. ಅಲ್ಲಿ ವಿಶೇಷವಾಗಿ ನೀರಿನ ಝರಿಗಳು ಇದ್ದು ಇಳಿದು ನೀರುತೆಗೆದುಕೊಳ್ಳಲಿಕ್ಕೆ ಸುಲಭವಾಗಿರಬೇಕು. ॥೧೭೪॥ ಆ ಸ್ಥಳದಲ್ಲಿ ಸೂರ್ಯನ ಬಿಸಲು ಸಹಾ ಸೌಮ್ಯವಾಗಿರಬೇಕು ಅಕಸ್ಮಾತ ಸ್ವಚ್ಛವಾಗಿ ಬಿಸಿಲುಬಿದ್ದರೆ ಅದರಿಂದ ವಿಶೇಷವಾಗಿ ತಾಪಉಂಟಾಗಬಾರದು ಅದರಂತೆ ಮಂದಮಂದವಾದ ಶೀತಲ ಗಾಳಿ ಬೀಸುತ್ತಿರಬೇಕು. ॥ ೧೭೫ ॥ ಆ ಸ್ಥಾನವು ಅಹೇತುಕ ನಿಃಶಬ್ದವಿರಬೇಕು ಅಲ್ಲಿ ಕ್ರೂರವಾದ ಶ್ವಾಪದಗಳ ಸಮೂಹವು ಇರಕೂಡದು ಅಲ್ಲಿ ಗಿಳಿಗಳು ಭ್ರಮರಗಳು (ವಿಶೇಷ) ಇರಬಾರದು. ॥ ೧೭೬ ॥ ಅಲ್ಲಿ ನೀರಗೋಳಿ ಹಂಸಪಕ್ಷಿ ನಾಲ್ಕೆರಡು ಚಕ್ರವಾಕ ಪಕ್ಷಿಗಳು ಒಂದು ವೇಳೆ ಕೋಕಿಲಪಕ್ಷಿ ಬಂದು ಕುಳಿತರೂ ನಡೆದೀತು. ॥ ೧೭೭ ॥ ಅವು ನಿರಂತರ ಇರಕೂಡದು ನವಿಲುಗಳು ಬಂದು ಹೋಗಿ ಇದ್ದರೂ ನಮ್ಮ ನಿರ್ಬಂಧವಿರುವದಿಲ್ಲ. ॥೧೭೮॥ ಆದರೆ ಅರ್ಜುನನೇ ! ಇಂಥ ಸ್ಥಾನವನ್ನು ಅವಶ್ಯವಾಗಿ ಶೋಧಮಾಡಬೇಕು ಅಲ್ಲಿ ಗುಪ್ತವಾದ ಗುಹಾ ಒಂದು ಸಿವಾಲಯವಿರಬೇಕು. ॥ ೧೭೯ ॥ ಈ ಎರಡು ಸ್ಥಾನಗಳಲ್ಲಿ ಯಾವದು ನಿಮಗೆ ಪ್ರೀಯವಾಗಿರುವದೋ, ನಿಮ್ಮ ಅಂತಃಕರಣದಲ್ಲಿ ಯಾವದು ಸಮಾಧಾನವೆನಿಸುವದೋ, ಅಲ್ಲಿ ಬಹಳಮಾಡಿ ಏಕಾಂತದಲ್ಲಿ ಕುಳಿತುಕೊಳ್ಳಬೇಕು. ॥ ೧೮೦ ॥ ಹೀಗೆ ಸರ್ವದರಿಂದಲೂ ಸುಲಭ ಮತ್ತು ಅನಕೂಲವಾದ ಸ್ಥಳವನ್ನು ನೋಡಿ ಅಲ್ಲಿ ತನ್ನ ಮನಸ್ಸು ಸ್ಥಿರವಾಗುತ್ತದೋ, ಅಥವಾ ಆಗುವದಿಲ್ಲವೋ ಎಂಬದನ್ನು ನೋಡಿ ಮನಸ್ಸು ಸ್ಥಿರವಾದರೆ ಅಲ್ಲಿ ಆಸನವನ್ನು ಹಾಕಬೇಕು. ಅದು ಹೇಗಂದರೆ ॥ ೮೧ ॥ ಮೇಲೆ ಶುಭ್ರವಾದ ವಸ್ತ್ರದಗಳಿಗೆ ಇದ್ದು ಅದರ ಕೆಳಗೆ ಕೃಷ್ಣಾಜಿನ ಮತ್ತು ಅದರ ಕೆಳಗೆ ದರ್ಭಾಸನವು ॥ ೮೨ ॥ ಆ ದರ್ಭಗಳು ಮೃದು ಕೋಮಲವಾದವು ಸಮಾನವಾದವು ಹಾಸಿದರೆ ಸ್ಥಿರವಾಗಿ ನಿಲ್ಲುವಂತೆ ಚನ್ನಾಗಿ ಜೋಡಿಸಿರಬೇಕು. ॥ ೮೩ ॥ ಆ ಆಸನವು ಒಂದು ವೇಳೆ ಎತ್ತರವಾದರೆ ಅಂಗವು ಅಲುಗಾಡಬಹುದು. ಮತ್ತು ಕೇವಲ ಕೆಳಗೆ ಆದರೆ ಭೂಮಿಯ ತಂಪು ಅಥವಾ ಗದ್ದಲಿ (ಗೊರ್ಲಿ) ಮುಂತಾದವು ಹತ್ತಿ ಉಪದ್ರವ ಆಗಬಹುದು. ॥ ೮೪ ॥ ಆದುದರಿಂದ ಹಾಗೆ ಮಾಡದೇ ಅದನ್ನು ಸಮಭಾಗವಾಗಿ ಹಾಕಬೇಕು ಹೀಗೆ ಸಾಧಕರು ಆಸನದ ಯೋಜನೆಯನ್ನು ಮಾಡಬೇಕು. ॥ ೮೫ ॥

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥ ೧೨ ॥**

**[ ತತ್ರೈಕಾಗ್ರಂ ಮನಃ ಕೃತ್ವೇತಿ ]** ಮಗ ತೇಥ ಆಪಣ । ಏಕಾಗ್ರ ಅಂತಃಕರಣ । ಕರೂನಿ ಸದ್ಗುರು ಸ್ಮರಣ । ಅನುಭವಿಜೇ ॥ ೮೬ ॥ ಜೇಥ ಸ್ಮರತೇನಿ ಆದರೇ । ಸಬಾಹ್ಯ ಸಾತ್ವಿಕೇ ಭರೇ । ಜವ ಕಾಠಿಣ್ಯ ವಿರೇ । ಅಹಂಭಾವಾಚೇ ॥ ೮೭ ॥ ವಿಷಯಾಂಚಾ ವಿಸರ ಪಡೇ । ಇಂದ್ರಿಯಾಂಚೀ ಕಸಮಸ ಮೋಡೇ । ಮನಾಚೀ ಘಡೀ ಘಡೇ । ಹೃದಯಾಮಾಜೀ ॥ ೮೮ ॥ ಐಸೇ ಐಕ್ಯ ಹೇ ಸಹಜೇ । ಫಾವೇತವ ರಾಹಿಜೇ । ಮಗ ತೇಣೇಂಚಿ ಬೋಧೇ ಬೈಸಿಜೇ । ಆಸನಾವರೀ ॥ ೮೯ ॥ ಆತಾ ಆಂಗಾತೇ ಆಂಗ ವರೀ । ಪವನಾತೇ ಪವನ ಧರೀ । ಐಸೀ ಅನುಭವಾಚೀ ಉಜರೀ । ಹೋಚಿ ಲಾಗೇ ॥ ೧೯೦ ॥ ಪ್ರವೃತ್ತಿ ಮಾಘೌತೀ ಮೋಹರೇ । ಸಮಾಧಿ ಐಲಾಡೀ ಉತರೇ । ಆಘವೇ ಅಭ್ಯಾಸೂ ಸರೇ । ಬೈಸತ ಖೇವೋ ॥ ೯೧ ॥ ಮುದ್ರೇಚಿ ಪ್ರೌಢೀ ಐಶೀ । ತೇಚಿ ಸಾಂಗಿಜೇಲ ಆತಾ ಪರಿಯೇಸೀ । ತರೀ ಊರೂ ಯಾ ಜಘನಾಸೀ । ಜಡೋನಿ ಘಾಲೀ ॥ ೯೨ ॥ ಚರಣತಳೇ ದೇವ್ಹಡೀ । ಆಧಾರದ್ರುಮಾಚ್ಯಾ ಬುಡೀ । ಸುಘಟಿತೇ ಗಾಢೀ । ಸಂಚರೀ ಪಾ ॥ ೯೩ ॥ ಸವ್ಯ ತೋ ತಳೀ ಠೇವಿಜೇ । ತೇಣೇ ಸಿವಣೀ ಮಧ್ಯಪೀಡಿಜೇ । ವರೀ ಬೈಸೇ ತೋ ಸಹಜೇ । ವಾಮಚರಣ ॥ ೯೪ ॥

ಗುದಮೇಂಢ್ರಾ ಆಂತೌತೀ । ಚಾರೀ ಅಂಗುಳೇ ನಿಗುತೀ । ತೇಥ ಸಾರ್ಧ ಸಾರ್ಧ ಪ್ರಾಂತೀ । ಸಾಂಡೂನಿಯಾ ॥ ೯೫ ॥ ಮಾಜೀ ಅಂಗುಳ ಏಕ ನಿಗೇ । ತೇಥ ಟಾಂಚೇ ಚೇನಿ ಉತ್ತರಭಾಗೇ । ನೇಹೇಟಿಜೇ ವರೀ ಆಂಗೇ । ಪೇಲಲೇ ನೀ ॥ ೯೬ ॥ ಉಚಲಿಲೇ ಕಾ ನೇಣಿಜೇ । ತೈಸೇ ಪೃಷ್ಠಾಂತ ಉಚಲಿ ಜೇ । ಗುಲ್ಫದ್ವಯಧರಿಜೇ । ತೇಣೇಚಿ ಮಾನೇ ॥ ೯೭ ॥ ಮಗ ಶರೀರ ಸಂಚು ಪಾರ್ಥಾ । ಅಶೇಷ ಹೀ ಸರ್ವಥಾ । ಪಾರ್ಷ್ಣಿಗೀಚಾ ಮಾಥಾ । ಸ್ವಯಂಭ ಹೋಯ ॥ ೯೮ ॥ ಅರ್ಜುನಾ ಹೇ ಜಾಣ । ಮೂಳಬಂಧಾ ಚೇ ಲಕ್ಷಣ । ವಜ್ರಾಸನ ಗೌಣ । ನಾಮ ಯಾಸೀ ॥ ೯೯ ॥ ಐಸೀ ಆಧಾರೀ ಮುದ್ರಾ ಪಡೇ । ಆಣಿ ಅಧೀಂಚಾ ಮಾರ್ಗ ಮೋಡೇ । ತೇಥ ಅಪಾನ ಆಂತುಲೀಕಡೇ । ಪೋಹೋಟೋ ಲಾಗೇ ॥ ೨೦೦ ॥

**ಅರ್ಥ**— ಆ ಮೇಲೆ ಆ ಸ್ಥಾನದಲ್ಲಿ ತಾನು ಏಕಾಗ್ರ ಅಂತಃಕರಣವುಳ್ಳವನಾಗಿ ಮನಸಿನಲ್ಲಿ ಸದ್ಗುರುಗಳ ಸ್ಮರಣ ಮಾಡಿ ಆತ್ಮಸುಖದ ಅನುಭವತೆಗೆದುಕೊಳ್ಳಬೇಕು ॥ ೧೮೬ ॥ ಆ ಸ್ಥಾನದಲ್ಲಿ ಅಹಂಭಾವವು ಇಲ್ಲದಂತೆ ಆಗಿ ಅಂತ ರ್ಬಾಹ್ಯದಲ್ಲಿ ಅಷ್ಟಸಾತ್ವಿಕ ಭಾವವು ಉಂಟಾಗುವವರೆಗೆ ಸದ್ಗುರುಗಳನ್ನು ಆದರಪೂರ್ವಕವಾಗಿ ಸ್ಮರಣ ಮಾಡಬೇಕು. ॥ ೧೮೭ ॥ ಅಲ್ಲಿ ವಿಷಯದ ವಿಸ್ಮರಣವು ಆಗುತ್ತದೆ. ಇಂದ್ರಿಯಗಳ ಅಪೇಕ್ಷೆಯು ಇಲ್ಲದಂತೆ ಆಗುತ್ತದೆ. ಮತ್ತು ಅಂತಃಕರಣದ ಸ್ಥಳದಲ್ಲಿ ಮನಸ್ಸಿನ ಸ್ಥಿರತ್ವವು ಉಂಟಾಗುತ್ತದೆ. ॥ ೧೮೮ ॥ ಈ ತೆರದಿಂದ ಸಹಜವೇ ಐಕ್ಯವಾಗುವವರೆಗೆ ಆ ಸ್ಥಳದಲ್ಲಿ ಸ್ಥಿರವಾಗಿ ಕುಳಿತುಕೊಳ್ಳಬೇಕು. ಮತ್ತು ಮನಸಿಗೆ ಆತ್ಮಬೋಧವಾದಬಳಿಕ ಆಸನದಮೇಲೆ ಕೂತುಕೊಳ್ಳಬೇಕು. ॥ ೧೮೯ ॥ ಆ ಮೇಲೆ ತನ್ನ ಅಂಗದಿಂದಲೆ ತನ್ನ ಅಂಗವನ್ನು ಸಾವರಿಸಿಕೊಳ್ಳಬೇಕು. ಮತ್ತು ಪ್ರಾಣಾಪಾನವಾಯುವಿನಿಂದ ಪ್ರಾಣಾಪಾನವನ್ನು ಆವರಿಸಬೇಕು. ಈ ರೀತಿಯಿಂದ ಅನುಭವದ ಉದಯವಾಗಲಿಕ್ಕೆ ಹತ್ತುತ್ತದೆ. ॥ ೧೯೦ ॥ ಆ ಸ್ಥಳದಲ್ಲಿ ಪ್ರವೃತ್ತಿಯು ಹಿಂದಕ್ಕೆ ತಿರುಗಿ ಸಹಜವೇ ಸಮಾಧಿ, ಸಾಧ್ಯವಾಗುವದರಿಂದ ಆಸನದಮೇಲೆ ಕುಳಿತಕೂಡಲೆ ಸರ್ವ ಅಭ್ಯಾಸವು ತನ್ನಿಂದತಾನೇ ಪೂರ್ಣವಾಗುತ್ತದೆ. ॥ ೧೯೧ ॥ ಮುದ್ರಾದ ವಿಷಯದಲ್ಲಿ ಯಾವ ಮಹತ್ವವು ಅದೆ, ಅದರ ವರ್ಣನವನ್ನು ಇನ್ನು ಮೇಲೆ ಮಾಡುತ್ತೇನೆ ಅದನ್ನು ಕೇಳು. ಹೊಟ್ಟೆಯನ್ನು ಮೊಳಕಾಲಿಗೆ ಹಚ್ಚಿ ಆಸನವನ್ನು ಹಾಕಬೇಕು. ॥ ೧೯೨ ॥ ಒಂದು ಪಾದದ ಮೇಲೆ ಎರಡನೇ ಪಾದವನ್ನು ಡೊಂಕವಾಗಿ ಇಟ್ಟು ಗುದಸ್ಥಾನದ ಬುಡಕ್ಕೆ ಒತ್ತಿ ಕೂಡಿಸಿ ಸ್ಥಿರವಾಗಿ ಘಟ್ಟಿಯಾಗಿ ಹಚ್ಚಬೇಕು. ॥ ೧೯೩ ॥ ಬಲಗಡೆ ಪಾದವನ್ನು ಕೆಳಗೆ ಇಟ್ಟು ಅದರಿಂದ ವೃಷಣದಿಂದ ಗುದಸ್ಥಾನದವರೆಗೆ (ಹೊಲಿಗೆಯಂತೆ ಇರುವ) ರೇಷಾದ ಮಧ್ಯದಲ್ಲಿ ಒತ್ತಬೇಕು. ಆ ಮೇಲೆ ಸಹಜವೇ ಯಡಗಡೆಯ ಪಾದವನ್ನು ಬಲಗಡೆಯ ಪಾದದಮೇಲೆ ಇಡಬೇಕು. ॥ ೧೯೪ ॥ ಗುದ ಮತ್ತು ಶಿಶ್ನ ಇವುಗಳ ಮಧ್ಯದಲ್ಲಿ ನಾಲ್ಕು ಬೊಟ್ಟು ಜಾಗೆಯು ಇರುತ್ತದೆ. ಅದನ್ನು ಹಿಂದೆ ದೀಡುಬೊಟ್ಟು ಮುಂದೆ ದೀಡುಬೊಟ್ಟು ಬಿಟ್ಟು, ॥ ೧೯೫ ॥ ಮಧ್ಯದಲ್ಲಿ ಒಂದೇ ಬೊಟ್ಟು ಜಾಗೆ ಉಳಿಯುತ್ತದೆ. ಅಲ್ಲಿ ಒತ್ತಿಹಿಡಿದ ಸ್ಥಳದ ಉತ್ತರ ಭಾಗದಿಂದ ತನ್ನ ಶರೀರವನ್ನು ನೆಟ್ಟಗೆ ತೂಗಿ ಹಿಡಿಯಬೇಕು. ॥ ೧೯೬ ॥ ಶರೀರವು ಎತ್ತಿರುತ್ತದೆಂಬದನ್ನು ತಿಳಿಯಗೊಡದಂತೆ ಬೆನ್ನ ಹುರಿಯಕಡೆಯ ಭಾಗವನ್ನು ಎತ್ತಬೇಕು. ಮತ್ತು ಎರಡೂ ಕಾಲುಗಳ ಹರಡಗಳನ್ನು ಸರಲ ಹಿಡಿಯಬೇಕು. ॥ ೧೯೭ ॥ ಆ ಮೇಲೆ ಪಾರ್ಥಾ! ಈ ಎಲ್ಲ ಶರೀರವು ಹರಡದ ತಲೆಯಮೇಲೆ ಆಧಾರವಿಲ್ಲದೇ ಸ್ವತಃ ಸಿದ್ಧವಾಗಿ ನಿಲ್ಲುತ್ತದೆ. ॥ ೧೯೮ ॥ ಅರ್ಜುನನೇ! ಇದು ಮೂಳಬಂಧವೆಂಬ ಆಸನದ ಲಕ್ಷಣವು. ಇದಕ್ಕೆ ವಜ್ರಾಸನವೆಂಬದೊಂದು ಗೌಣ ಹೆಸರು ಇರುತ್ತದೆ. ॥ ೧೯೯ ॥ ಈ ಪ್ರಕಾರಾ ಮೂಳಬಂಧ ಆಸನ ಮಾಡಿದರೆ ಕೆಳಗಿನ ಹಾದಿಯು ಬಂದ ಆಗುವದು. ಮತ್ತು ಆ ಮೇಲೆ ಅಪಾನವಾಯು ಒಳಗಿಂದೊಳಗೆ ಮೇಲೆ ಹೋಗಹತ್ತುತ್ತದೆ. ॥ ೨೦೦ ॥

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥ ೧೩ ॥**

**[ ಸಮಂ ಕಾಯಶಿರೋಗ್ರೀವಮಿತಿ ]** ತವ ಕರಸಂಪುಟ ಆಪೈಸೇ । ವಾಮ ಚರಣೀ ಬೈಸೇ । ಬಾಹುಮೂಳೀದಿಸೇ । ಥೋರಿವ ಆಲೀ ॥೧॥ ಮಾಜೇ ಉಭಾರಿಲೇನಿ ದಂಡೇ ! ಶಿರಕಮಳ ಹೋಯ

ಗಾಥೀ । ನೇತ್ರದ್ವಾರೇಂಚೀ ಕವಾಡೇ । ಲಾಗೂ ಪಾಹತೀ ॥ ೨ ॥ ವರಚಿಲೇ ಪಾತೀ ನ ಢಳತೀ । ತಳೀಂಚೀ ತಳೀ ಪುಂಜಾಳತೀ । ತೇಥ ಅರ್ಧೋನ್ಮಿಲಿತ ಸ್ಥಿತೀ । ಉಪಜೇ ತಯಾ ॥ ೩ ॥ ದಿಠೀ ರಾಹೋನಿ ಆಂತುಲೀ ಕಡೇ । ಬಾಹೇರ ಪಾವುಲ ಘಾಲೀ ಕೋಡೇ । ತೇ ಠಾಯೀ ಠಾವೋ ಪಡೇ । ನಾಸಾಗ್ರಪೀಠೀ ॥ ೪ ॥ ಐಸೇ ಆಂತಚ್ಯಾ ಆಂತಚಿ ರಚೇ । ಬಾಹೇರೀ ಮಾಗುತೇ ನ ವಚೇ । ಮ್ಹಣೋನಿ ರಾಹಣೇ ಅರ್ಧಿಯೇ ದಿಠೀಚೇ । ತೇಥೇಂಚಿ ಹೋಯ ॥ ೫ ॥ ಆತಾ ದಿಶಾಂಚೇ ಭೇಟೀ ಘ್ಯಾವೀ । ಕಾ ರೂಪಾಚೀ ವಾಟ ಪಹಾವೀ । ಹೇ ಚಾಡಸರೇ ಆಘವೀ । ಆಪಸಯಾ ॥ ೬ ॥ ಮಗ ಕಂಠನಾಳ ಆಟೇ । ಹನುವಟೀ ಹಡೌತೀ ದಾಟೇ । ತೇ ಗಾಢೀ ಹೋವೂನಿ ನೇಹಟೇ । ವಕ್ಷಃಸ್ಥಳೀ ॥ ೭ ॥ ಮಾಜೀ ಘಂಟಿಕಾ ಲೋಪೇ । ವರೀ ಬಂಧಜೋ ಆರೋಪೇ । ತೋ ಜಾಳಂಧರ ಮ್ಹಣಿಪೇ । ಪಂಡುಕುಮರಾ ॥ ೮ ॥ ನಾಭೀ ವರೀ ಪೊಟೇ । ಉದರ ಹೇ ಥೋಕೇ । ಅಂತರೀ ಫಾಂಕೇ ॥ ಹೃದಯ ಕೋಶ ॥ ೯ ॥ ಸ್ವಾಧಿಷ್ಠಾನಾವರೀಚಿಲೇ ಕಾಂಠೀ । ನಾಭಿಸ್ಥಾನ ತಳವಟೀ । ಬಂಧವಡೇ ಕಿರೀಟೇ । ವೋಢಿಯಾಣಾ ತೋ ॥ ೧೧೦ ॥

**ಅರ್ಥ**— ಆ ಮೇಲೆ ಎಡಗಡಿಯು ಕಾಲಮೇಲೆ ಸಹಜವಾಗಿ ಎರಡೂ ಕೈಗಳನ್ನು ದೊನ್ನಿಯ ಆಕಾರದಂತೆ ಮಾಡಿಡಬೇಕು. ಅಂದರೆ ಭುಜಗಳು ಉದ್ದವಾಗುತ್ತವೆ. ॥೧॥ ಆ ಮೇಲೆ ಶರೀರವು ಸ್ಥಿರವಾಯಿತೆಂದರೆ ಶಿರಕಮಲವು ಒಳಗೆ ಘಟ್ಟಿಯಾಗಿ ಕೂಡುವದರಿಂದ ಕಣ್ಣಿನ ಎವೆಗಳು ಮುಚ್ಚಹತ್ತುತ್ತವೆ. ॥ ೨ ॥ ಮೇಲಿನ ಎವೆಗಳು ಕೆಳಗೆ ಬರುತ್ತವೆ. ಮತ್ತು ಕೆಳಗಿನ ಎವೆಗಳು ಪ್ರಫುಲ್ಲಿತವಾದುದರಿಂದ ದೊಡ್ಡವಾಗುತ್ತವೆ. ಹೀಗಾಗುವದರಿಂದ ಅರ್ಧ ತೆರೆದಂತೆಯೂ, ಅರ್ಧ ಮುಚ್ಚಿದಂತೆಯೂ, ಕಣ್ಣುಗಳ ದೃಷ್ಟಿಯಾಗುತ್ತವೆ. ॥ ೩ ॥ ಈ ರೀತಿಯಿಂದ ದೃಷ್ಟಿಯು ಒಳಗಿಂದೊಳಗೆ ನಿಂತು ಕೌತುಕದಿಂದ ಬಹಳ ಹೊರಗೆ ಬಂದದ್ದಾದರೆ ಮೂಗಿನ ತುದಿಯವರೆಗೆ ಬರುತ್ತದೆ. ॥೪॥ ಹೀಗೆ ಒಳಗಿಂದೊಳಗೆ ದೃಷ್ಟಿಯು ಸ್ಥಿರವಾಗಿ, ಮರಳಿ ಹೊರಗೆ ಬರುವದಿಲ್ಲ. ಆದುದರಿಂದ ದೃಷ್ಟಿಯು ಮೂಗಿನ ತುದಿಯಮೇಲೆ ( ನಾಸಾಗ್ರ ದೃಷ್ಟಿಯು ) ಸ್ಥಿರವಾಗುತ್ತದೆ. ॥೫॥ ಇದರಿಂದ ಉಳಿದ ದಿಕ್ಕಿನ ಕಡೆಗೆ ನೋಡಬೇಕು. ಇಲ್ಲವೇ ಸ್ವರೂಪವು ದೃಷ್ಟಿಗೆ ಬೀಳಬೇಕೆಂದು ಮಾರ್ಗ ನಿರೀಕ್ಷಣ ಮಾಡಬೇಕೆಂಬ ಅಪೇಕ್ಷೆಯು ತನ್ನಿಂದ ತಾನೇ ಇಲ್ಲವಂತಾಗುತ್ತದೆ. ॥ ೬ ॥ ಆ ಮೇಲೆ ಕುತ್ತಿಗೆಯು ನಳಿಯು ಒಳಗೆ ಮುಚ್ಚಿಕೊಳ್ಳುತ್ತದೆ. ಹನುವಟಿಯು ಕುತ್ತಿಗೆಯ ಕೆಳಗಿನ ತಗ್ಗಿಗೆ ಹತ್ತಿಕೊಂಡು ಎದೆಯಮೇಲೆ ಧೃಡವಾಗಿ ಘಟ್ಟಿಯಾಗಿ ಕೂಡುತ್ತದ. ॥ ೭ ॥ ಎಲೋ ಪಾಂಡುನಂದನನೇ ! ಆ ಮೇಲೆ ಕಂಠಮಣಿಯು ಕಾಣದ ಹಾಗೆ ಆಗುತ್ತದೆ. ಈ ಸ್ವರೂಪಕ್ಕೆ "ಜಾಲಂಧರ ಬಂಧ"ವೆಂದೆನ್ನುತ್ತಾರೆ. ॥ ೮ ॥ ಹೊಕ್ಕಳವು ಮೇಲೆ ಉಬ್ಬಿ ಬರುತ್ತದೆ. ಹೊಟ್ಟೆಯು ತೆಳ್ಳಗಾಗುತ್ತದೆ. ಮತ್ತು ಹೃದಯ ಕೋಶವು ಅಂತರ್ಯಾಮಿ ವಿಸ್ತಾರ ಹೊಂದುತ್ತದೆ. ॥೯॥ ಅರ್ಜುನನೇ ! ಗುದದ್ವಾರದ ಭಾಗದಮೇಲೆ ಮತ್ತು ಹೊಕ್ಕಳ ಕೆಳಗಿನ ಭಾಗದಮೇಲೆ ಯಾವ ಮುದ್ರಾ ಸಿದ್ಧವಾಗುತ್ತದೆ. ಅದಕ್ಕೆ ಓಡಿಯಾಣಾ ಬಂಧವೆಂದೆನ್ನುತ್ತಾರೆ. ॥ ೧೦ ॥ ಈ ರೀತಿಯಿಂದ ಶರೀರದ ಹೊರಭಾಗದಿಂದ ಅಭ್ಯಾಸಕ್ರಮವು ಪ್ರಾರಂಭವಾಗುವದರಿಂದ ಒಳಗೆ ಮನೋಧರ್ಮದ ಬಲವು ಇಲ್ಲದಂತೆ ಆಗುತ್ತದೆ. ॥ ೧೧ ॥

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ**
**ಮನಃಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥ ೧೪ ॥**

**[ ಪ್ರಶಾಂತಾತ್ಮೇತಿ ]** ಐಸೀ ಶರೀರ ಬಾಹೇರಲೀಕಡೇ । ಅಭ್ಯಾಸಾಚೀ ಮಾಖರ ಪಡೇ । ತವ ಆಂತ ತ್ರಾಯ ಮೊಡೇ । ಮನೋ ಧರ್ಮಾಚೀ ॥ ೧೧ ॥ ಕಲ್ಪನಾ ನಿಮೇ । ಪ್ರವೃತ್ತೀ ಶಮೇ । ಆಂಗ ಮನ ವಿರಮೇ । ಸಾವಿಯಾಚೀ ॥ ೧೨ ॥ ಕ್ಷುಧಾ ಕಾಯ ಜಾಹಲೀ । ನಿದ್ರಾ ಕೇವುತೀ ಗೇಲೀ । ಹೇ

ಆಠವಣಹೀ ಹರಪಲೀ । ನ ದಿಸೇ ವೇಗಾ ॥ ೧೩ ॥ ಜೋ ಮೂಳ ಬಂಧೇ ಕೋಂಡಲಾ । ಅಪಾನ
ಮಾಘೌತಾ ಮುರಡಲಾ । ತೋ ಸವೇಚೀ ವರೀ ಸಾಂಕಡಲಾ । ಧರೀ ಪುಗು ॥ ೧೪ ॥ ಕ್ಷೋಭಲೀ ಪಣೇ
ಮಾಜೇ । ಉವಾ ಇಲಾ ಠಾಯೀ ಗಾಜೇ । ಮಣೀ ಪೂರೇಸೀ ಝುಂಜೇ । ರಾಹೋನಿಯಾ ॥ ೧೫ ॥
ಮಗ ಥಾವಲಿಯೇ ವಾಹಟುಳೀ । ಸೈಂಧ ಘೇವೂನಿ ಘುರ ಡಹುಳೀ । ಬಾಳಪಣೀಂಚೀ ಕುಹಿಟುಳೀ ।
ಬಾಹೇರ ಘಾಲೀ ॥ ೧೬ ॥ ಭೀತರೀ ವಳೀ ನ ಧರೀ । ಕೋಠ್ಯಾಮಾಜೀ ಸಂಚರೀ । ಕಫ ಪಿತ್ತಾಂಚೇ
ಥಾರೇ । ಉರೋ ನೇದೀ ॥ ೧೭ ॥ ಧಾತೂಚೇ ಸಮುದ್ರ ಉಲಂಡೀ । ಮೇದಾಚೇ ಪರ್ವತ ಫೋಡೀ ।
ಆಂತಲೀ ಮಜ್ಜಾ ಕಾಢೀ । ಅಸ್ಥಿಗತ ॥ ೧೮ ॥ ನಾಡೀತೇ ಸೋಡವೀ । ಗಾತ್ರಾಂತೇ ವಿಘುಡವೀ । ಸಾಧ
ಕಾಂತೇ ಭೇಡಸಾವೀ । ಪರೀ ಬಿಹಾವೇನಾ ॥ ೧೯ ॥ ವ್ಯಾಧೀತೇ ದಾವೀ । ಸವೇಂಚಿ ಹಾರವೀ । ಆಪ
ಪೃಥ್ವೀ ಕಾಲವೀ । ಏಕವಾಟ ॥ ೨೨೦ ॥ ತವ ಯೇರೀಕಡೆ ಧನುರ್ಧರಾ । ಆಸನಾಚಾ ಉಬಾರಾ । ಶಕ್ತಿ
ಕರೀ ಉಜಗರಾ । ಕುಂಡಲಿನೀ ತೇ ॥ ೨೧ ॥ ನಾಗಿಣೀಚೇ ಪಿಲೇ । ಕುಂಕುಮೇ ನಾಹಲೇ । ವಳಣ
ಘೇವೂನಿ ಆಲೇ । ಸೇಜೇ ಜೈಸೇ ॥ ೨೨ ॥ ತೈಸೀ ತೇ ಕುಂಡಲಿನೀ । ಮೋಟಕೀ ಔಟವಳಣೀ । ಅಧೋ
ಮುಖ ಸರ್ಪಿಣೀ । ನಿದೇಲೀ ಅಸೇ ॥ ೨೩ ॥ ವಿದ್ಯುಲ್ಲತೇಚೀ ವಿಡೀ । ವಹ್ನಿಜ್ವಾಳಾಂಚೀ ಘುಡೀ । ಪಂಧರೀ
ಯಾಂಚೀ ಚೋಖಡೀ । ಘೋಟೀವ ಜೈಸೀ ॥ ೨೪ ॥ ತೈಸೀ ಸುಬಂಧ ಆಟಲೀ । ಪುಟೀ ಹೋತೀ
ದಾಟಲೀ । ತೇ ವಜ್ರಾಸನೇ ಚಿಮುಟಲೀ । ಸಾವಧ ಹೋಯ ॥ ೨೫ ॥ ತೇಥ ನಕ್ಷತ್ರ ಜೈಸೇ ಉಲಂಡಲೇ
ಕಿ ಸೂರ್ಯಾಚೇ ಆಸನ ಮೋಡಲೇ । ತೇಜಾಚೇ ಬೀಜ ವಿರೂಢಲೇ । ಅಂಕುರೇಶಿ ॥ ೨೬ ॥ ತೈಸೀ
ವೇಢಿಯಾಂತೇ ಸೋಡಿತೀ । ಕವತಿಕೇ ಆಂಗ ಮೋಡಿತೀ । ಕಂದಾವರೀ ಶಕ್ತೀ । ಉಠಿಲೀ ದಿಸೇ ॥ ೨೭ ॥
ಸಹಜೇ ಬಹುತಾ ದಿವಸಾಂಚೀ ಭೂಕ । ವರೀ ಚೇವವಿಲೀ ತೇ ಹೋಯ ಮಿಷ । ಮಗ ಆವೇಶೇ ಪಸರೀ
ಮುಖ । ಊರ್ಧ್ವ ಉಜೂ ॥ ೨೮ ॥ ತೇಥ ಹೃದಯ ಕೋಶಾ ತಳವಟೀ । ಜೋ ಪವನ ಭರೇ ಕಿರೀಟೀ ।
ತಯಾ ಸಗಳೆಯಾಚೀ ಮಿಠೀ । ದೇವೂನಿ ಘಾಲೀ ॥ ೨೯ ॥ ಮುಖಿಂಚ್ಯಾ ಜ್ವಾಳೀ । ತಳೀ ವರೀ ಕವಳೀ ।
ಮಾಂಸಾಚೀ ವಡವಾಳೀ । ಆರೋಗು ಲಾಗೇ ॥ ೨೩೦ ॥ ಜೇ ಜೇ ಠಾಯ ಸಮಾಂಸ । ತೇಥ ಆಹಾಚ
ಜೋಡೇ ಘಾವುಸ । ಪಾಠೀ ಏಕ ದೋನೀ ಘಾಂಸ । ಹಿಯಾಹೀ ಭರೀ ॥ ೩೧ ॥ ಮಗ ತಳವೇ ತಳಹಾತ
ಶೋಧೀ । ಊರ್ಧ್ವೀಚೇ ಖಂಡ ಭೇದೀ । ಝಾಡಾ ಘೇ ಸಂಧೀ । ಪ್ರತ್ಯಂಗಾಚಾ ॥ ೩೨ ॥ ಅಧೋ
ಭಾಗ ತರೀ ನ ಸಾಂಡೀ । ಪರೀ ನಖೀಂಚೇಹೀ ಸತ್ವ ಕಾಢೀ । ತ್ವಚಾ ಧುವೂನಿ ಜಡೀ । ಪಾಂಜರೇಶೀ
॥ ೩೩ ॥ ಅಸ್ಥೀಚೆ ನಳೇ ನಿರಪೇ । ಶಿರಾಂಚೇ ಹೀರ ವೋರಪೇ । ತವ ಬಾಹೇರೀ ವಿರೂಢೀ ಕರಪೇ ।
ರೋಮ ಬೀಜಾಂಚೀ ॥ ೩೪ ॥ ಮಗ ಸಪ್ತ ಧಾತೂಂಚ್ಯಾ ಸಾಗರೀ । ತಾಹಾನೇಲೀ ಘೋಟ ಭರೀ ।
ಆಣಿ ಸವೇಂಚಿ ಉನ್ಹಾಳಾ ಕರೀ । ಖಡಖಡೀತ ॥ ೩೫ ॥ ನಾಸಾಪುಟೌನಿ ವಾರಾ । ಜೋ ಜಾತಸೇ
ಅಂಗುಳೇ ಬಾರಾ । ತೋ ಗಚೀಯೇ ಧರೂನಿ ಮಾಘಾರಾ । ಆಂತ ಘಾಲೀ ॥ ೩೬ ॥ ತೇಥ ಅಧ ವರೌತೇ
ಆಕುಂಚೆ । ಊರ್ಧ್ವ ತಳೌತೇ ಖಾಚೇ । ತಯಾ ಖೇವಾಮಾಜೀ ಚಕ್ರಾಂಚೇ । ಪದರ ಉರತೀ ॥ ೩೭ ॥
ಯೇರ್ಹವೀ ತರೀ ದೋನ್ಹೀ ತೆಂವ್ಹಾಚೀ ಮಿಳತೀ । ಪರೀ ಕುಂಡಲಿನೀ ನಾವೇಕ ದುಶ್ಚಿತ್ತ ಹೋತೀ । ತೇ
ತಯಾಂತೇ ಪ್ಹಣೇ ಪರೌತೀ । ತುಮ್ಹೀಚಿ ಕಾಯ ಏಥೇ ॥ ೩೮ ॥ ಆಇಕೇ ಪಾರ್ಥಿವ ಧಾತೂ ಆಘವೀ
ಆರೋಗಿತಾ ಕಾಹೀ ನುರವೀ । ಆಣಿ ಆಪಾತೇ ತವ ಠೇವೀ । ಪುಸೋನಿಯಾ ॥ ೩೯ ॥ ಐಸೀ ದೋನೀ
ಭೂತೇ ಖಾಯೇ । ತೇ ವೇಳೀ ಸಂಪೂರ್ಣ ಘಾಯೇ । ಮಗ ಸೌಮ್ಯ ಹೋವೂನಿ ರಾಹೇ । ಸುಷುಮ್ನೇ
ಪಾಶೀ ॥ ೨೪೦ ॥ ತೇಥ ತೃಪ್ತೀಚೇನಿ ಸಂತೋಷೇ । ಗರಳ ಜೆ ವಮೀ ಮುಖೇ । ತೇಣೇ ಠಿಯೇಚೇನಿ
ಪೀಯೂಷೇ । ಪ್ರಾಣ ಜಿಯೇ ॥ ೪೧ ॥ ತೋ ಅಗ್ನಿ ಆಂತೂನ ನಿಘೇ । ಪರೀ ಸಬಾಹ್ಯ ನಿವವೂಂಚಿ
ಲಾಗೇ । ತೇ ವೇಳೀ ಕಸು ಬಾಂಧಿತೀ ಆಂಗೇ । ಸಾಂಡಿಲೀ ಪುಢತೀ ॥ ೪೨ ॥ ಮಾರ್ಗ ಮೊಡಿತೀ

ನಾಡೀಚೇ । ನವ ವಿಧ ಪಣ ವಾಯೂಚೆ । ಜಾಯ ವ್ಯಾಣವೂನಿ ಶರೀರಾಚೇ । ಧರ್ಮ ನಾಹೀ ॥೪೩॥ ಇಡಾ ಪಿಂಗಳಾ ಏಕವಟತೀ । ಗಾಂಠೀ ತೀನ್ಹೀ ಸುಟತೀ । ಸಾಹೀ ಪದರ ಫುಟತೀ । ಚಕ್ರಾಂಚೇ ಹೇ ॥೪೪॥ ಮಗ ಶಶೀ ಆಣಿ ಭಾನು । ಐಸಾ ಕಲ್ಪಿಜೇ ಜೋ ಅನುಮಾನು । ತೋ ವಾತೀವರೀ ಪವನು । ಗಿಂವ ಸಿತಾ ನ ದಿಸೇ ॥ ೪೫ ॥ ಬುದ್ಧೀಚೀ ಪುಲಿಕಾ ವಿರೇ । ಪರಿಮಳ ಘ್ರಾಣೀ ಉರೇ । ತೋಹೀ ಶಕ್ತೀ ಸವೇ ಸಂಚರೇ । ಮಧ್ಯಮೇಮಾಜೀ ॥ ೪೬ ॥ ತವ ವರಿಲೇ ಕಡೋನಿ ಢಾಳೇ । ಚಂದ್ರಾಮೃತಾಚೇ ತಳೇ । ಕಾನವಡೋನಿ ಮಿಳೇ । ಶಕ್ತಿಮುಖೀ ॥ ೪೭ ॥ ತೇಣೇ ನಾಳಕೇ ರಸಭರೇ । ತೋ ಸರ್ವಾಂಗಾಮಾಜಿ ಸಂಚರೇ । ಜೇಥಿಂಚಾ ತೇಥ ಮುರೇ । ಪ್ರಾಣಪವನೇ ॥೪೮॥ ತಾತಲಿಯೇ ಮುಸೇ । ಮೇಣನಿಘೋನಿ ಜಾಯ ಜೈಸೇ । ಮಗ ಕೋಂದಲೀ ರಾಹೇ ರಸೇ । ವೋತಲೇನೀ ॥೪೯॥ ತೈಸೇ ಪಿಂಡಾಚೇನಿ ಆಕಾರೇ । ತೇ ಕಳಾಚಿ ಕಾ ಅವತರೇ । ವರೀ ತ್ವಚೆಚೇನಿ ಪದರೇ । ಪಾಂಗುರಲೀ ಅಸೇ ॥ ೨೫೦ ॥ ಜೈಸೀ ಆಭಾಳಾಚೀ ಬುಂಥೀ । ಕರೂನಿ ರಾಹೇ ಗಭಸ್ತೀ । ಮಗ ಫಿಟಲಿಯಾ ದೀಪ್ತೀ । ಧರೂನಯೇ ॥ ೫೧ ॥ ತೈಸಾ ಆಹಾಚವರೀ ಕೋರಡಾ । ತ್ವಚೇಚಾ ಅಸೇ ಪಾತೋಡಾ । ತೋ ಝಡೋನಿ ಜಾಯ ಕೋಂಡಾ । ಜೈಸಾ ಹೋಯ ॥ ೫೨ ॥ ಮಗ ಕಾಶ್ಮೀರೀಚೇ ಸ್ವಯಂಭ । ಕಾ ರತ್ನಬೀಜಾ ನಿಘಾಲೇ ಕೋಂಭ । ಅವಯವ ಕಾಂತೀಚೀ ಭಾಂಬ । ತೈಸೀ ದಿಸೇ ॥ ೫೩ ॥ ನಾ ತರೀ ಸಂಧ್ಯಾರಾಗೀಂಚೇ ರಂಗ । ಕಾಢೂನಿ ವಳಿಲೇ ತೇ ಆಂಗ । ಕೀ ಅಂತರ್ಜ್ಯೋತೀಚೇ ಲಿಂಗ । ನಿರ್ವಾಳಿಲೇ ॥ ೫೪ ॥ ಕುಂಕುಮಾಚೇ ಭರೀವ । ಸಿದ್ಧರಸಾಚೇ ವೋತೀವ । ಮಜ ಪಾಹತಾ ಸಾವೇವ । ಶಾಂತೀಚಿ ತೇ ॥ ೫೫ ॥ ತೇ ಆನಂದ ಚಿತ್ರೀಂಚೇ ಲೇಪ । ನಾ ತರೀ ಮಹಾ ಸುಖಾಚೇ ರೂಪ । ಕೀ ಸಂತೋಷ ತರೂಚೇ ರೋಪ । ಥಾವಲೇ ಜೈಸೇ ॥ ೫೬ ॥ ತೋ ಕನಕ ಚಂಪಕಾಚಾ ಕಳಾ । ಕೀ ಅಮೃತಾಚಾ ಪುತಳಾ । ನಾನಾ ಸಾಸಿನ್ನಲಾ ಮಳಾ । ಕೋವಳಿಕೇಚಾ ॥ ೫೭ ॥ ಹೋ ಕಾ ಜೇ ಶಾರದಿಯೇಚೇನಿ ವೋಲೇ । ಚಂದ್ರಬಿಂಬ ಪಾಲ್ಹೇಲೇ । ಕಾ ತೇಜಚಿ ಮೂರ್ತ ಬೈಸಲೇ । ಆಸನಾವರೀ ॥ ೫೮ ॥ ತೈಸೇ ಶರೀರ ಹೋಯೇ । ಜೇ ವೇಳೀ ಕುಂಡಲಿನೀ ಚಂದ್ರಪಿಯೇ । ಮಗ ದೇಹಾಕೃತಿ ಬಿಹೇ । ಕೃತಾಂತಗಾ ॥ ೫೯ ॥ ವಾರ್ಧಕ್ಯ ತರೀ ಬಹುಡೇ । ತಾರುಣ್ಯಾಚೀ ಗಾಂಠೀ ವಿಘಡೇ । ಲೋಪಲೀ ಉಘಡೇ । ಬಾಳದಶಾ ॥ ೨೬೦ ॥ ವಯಸಾ ತರೀ ಯೇತುಲೇವರೀ । ಯೇರ್ಹವೀ ಬಾಳಾಚಾ ಬಳಾರ್ಥ ಕರೀ । ಧೈರ್ಯಾಚೀ ಥೋರೀ । ನಿರುಪಮ ॥ ೬೧ ॥ ಕನಕದ್ರುಮಾಚ್ಯಾ ಪಾಲವೀ । ರತ್ನಕಳಿಕಾ ನಿತ್ಯ ನವೀ । ನಖೇ ತೈಸೀ ಬರವೀ । ನವೀ ನಿಘತೀ ॥ ೬೨ ॥ ದಾಂತಹೀ ಆನ ಹೋತೀ । ಪರೀ ಅಪಾಡೇ ಸಾನೇಜತೀ । ಜೈಸೀ ದುಬಾಹೀ ಬೈಸೇ ಪಾಂತೀ । ಹಿರೇಯಾಂಚೀ ॥ ೬೩ ॥ ಮಾಣಿ ಕುಲಿಯಾಂಚಿಯಾ ಕಣಿಯಾ । ಸಾವಿಯಾಚಿ ಅಣು ಪ್ರಮಾಣಿಯಾ । ತೈಸಿಯಾ ಸರ್ವಾಂಗೀ ಉಘವತೀ ಅಣಿಯಾ । ರೋಮಾಂಚಿಯಾ ॥ ೬೪ ॥ ಕರಚರಣ ತಳೇ । ಜೈಸೀ ಕಾ ರಾತೋತ್ಪಲೇ । ಪಾಖಾಳೀವ ಹೋತೀ ಡೋಳೇ । ಕಾಯ ಸಾಂಗೋ ॥ ೬೫ ॥ ನಿಡಾರಾಚೇನಿ ಕೋಂದಾಟೇ । ಮೋತಿಯೇ ನಾವರತೀ ಸಂಪುಟೇ । ಮಗ ಶಿವಣೀ ಜೈಸೀ ಉತಟೇ . ಶುಕ್ತಿ ಪಲ್ಲವಾಂಚೀ ॥ ೬೬ ॥ ತೈಸೀ ಪಾತಿಯಾಂಚಿಯೇ ಕವಳಿಯೇ ನ ಸಮಾಯೇ । ದಿಠೀ ಜಾಕಳೋನಿ ನಿಘೋ ಪಾಹೇ । ಆಧಿಲೀಚಿ ಪರೀ ಹೋಯೇ । ಗಗನಾ ಕವಳಿತೀ ॥ ೬೭ ॥ ಆಇಕೇ ದೇಹ ಹೋಯ ಸೋನಿಯಾಚೇ । ಪರೀ ಲಾಘುನ ಘೇ ವಾಯೂಚೇ । ಜೇ ಆಪ ಆಣಿ ಪೃಥ್ವೀಚೇ । ಅಂಶ ನಾಹೀ ॥೬೮॥ ಮಗ ಸಮುದ್ರಾ ಪೈಲೀಕಡೀಲ ದೇಖೇ । ಸ್ವರ್ಗೀಚಾ ಆಲೋಚ ಆಇಕೇ । ಮನೋಗತ ಓಳಖೇ । ಮುಂಗಿಯೇಚೇ ॥ ೬೯ ॥ ಪವನಾಚಾ ವಾರಿಕಾ ವಳಘೇ । ಚಾಲೇ ತರೀ ಉದಕೀ ಪಾವುಲ ನ ಲಾಗೇ । ಯೇಣೇ ಯೇಣೇ ಪ್ರಸಂಗೇ । ಯೇತೀ ಬಹುತಾ ಸಿದ್ಧಿ ॥ ೨೭೦ ॥ ಆಇಕೇ ಪ್ರಾಣಾಚಾ ಹಾತ ಧರೂನೀ । ಗಗನಾಚೀ ಪಾವುಠೀ ಕರುನೀ । ಮಧ್ಯಮೇಚೇನಿ ದಾದರಾಹುನೀ ॥ ಹೃದಯಾತಲೀ ॥೭೧॥

ತೇ ಕುಂಡಲಿನೀ ಜಗದಂಬಾ । ಜೇ ಚೈತನ್ಯ ಚಕ್ರವರ್ತೀಚೀ ಶೋಭಾ । ಜಯಾ ವಿಶ್ವಬೀಜಾಚಿಯಾ ಕೋಂಭಾ । ಸಾವುಲೀ ಕೇಲೀ ॥ ೭೩ ॥ ಜೇ ಶೂನ್ಯಲಿಂಗಾಚೀ ಪಿಂಡೀ । ಜೇ ಪರಮಾತ್ಮಯಾ ಶಿವಾಚೀ ಕರಂಡೀ । ಜೇ ಪ್ರಣವಾಚೀ ಉಘಡೀ । ಜನ್ಮಭೂಮೀ ॥ ೭೪ ॥ ಹೇ ಅಸೋ ತೇ ಕುಂಡಲಿನಿಬಾಳೀ। ಹೃದಯಾ ಆಂತಆಲೀ । ತವ ಅನಾಹತಾಚೀ ಬೋಲೀ । ಚಾಾವಳೇ ತೇ ॥ ೭೫ ॥ ಶಕ್ತೀಚಿಯಾ ಅಂಗಾ ಲಾಗಲೇ । ಬುದ್ಧಿಚೇ ಚೈತನ್ಯ ಹೋತೇ ಜಾಹಲೇ । ತೇ ತೇಣೇ ಆಇಕಲೇ । ಅಳುಮಾಳ ॥ ೭೬ ॥ ಘೋಷಾಚ್ಯಾ ಕುಂಡೀ । ನಾದ ಚಿತ್ರಾಂಚೀ ರೂಪಡೀ । ಪ್ರಣವಾಚಿಯಾ ಮೋಡೀ । ರೇಖಿಲೀ ಐಸೀ ॥ ೭೭ ॥ ಹೇಂಚಿ ಕಲ್ಪಾವೇ ತರೀ ಜಾಣೆ ಜೇ । ಪರೀ ಕಲ್ಪಿತೇ ಕೈಚೇ ಆಣಿಜೇ । ತರೀ ನೇಣೋ ಕಾಯ ಗಾ ಜೇ । ತಿಯೇ ಠಾಯೀ ॥ ೭೮ ॥ ವಿಸರೋನಿ ಗೇಲೋ ಅರ್ಜುನಾ । ಜವ ನಾಶ ನಾಹೀ ಪವನಾ । ತವ ವಾಚಾ ಆಥೀ ಗಗನಾ । ಮ್ಹಣವೂನಿ ಘುಮೇ ॥ ೭೯ ॥ ತಯಾ ಅನಾಹತಾಚೇನಿ ಮೇಘೇ । ಆಕಾಶ ದುಮದುಮೋ ಲಾಗೇ । ತವ ಬ್ರಹ್ಮಸ್ಥಾನೀಂಚೇ ಬೇಗೆ । ಸಹಜ ಫಿಟೇ ॥ ೨೮೦ ॥ ಆಇಕೇ ಕಮಳ ಗರ್ಭಾಕಾರೇ । ಜೇ ಮಹದಾಕಾಶ ದುಸರೇ । ಜೇಥ ಚೈತನ್ಯೇ ಆಥಾತುರೇ । ಹೋವೂನಿ ಅಸಿ ಜೇ ॥ ೮೧ ॥ ತಯಾ ಹೃದಯಾಚ್ಯಾ ಪರೀವರೀ । ಕುಂಡಲಿನಿಯಾ ಪರಮೇಶ್ವರೀ । ತೇಜಾಚೀ ಶಿದೋರೀ। ಪಿನಿಯೋಗಿಲೀ ॥ ೮೨ ॥ ಬುದ್ಧೀಚೇನಿ ಶಾಕೇ । ಹಾತ ಬೋನೇ ನಿಕೇ । ದ್ವೈತ ತೇಥ ನ ದೇಖೇ । ತೈಸೇ ಕೇಲೇ ॥ ೮೩ ॥ ನಿಜಕಾಂತೀ ಹಾರವಿಲೀ । ಮಗ ಪ್ರಾಣಚಿ ಕೇವಳ ಜಾಹಾಲೀ । ತೇ ವೇಳೀ ಕೈಸೀ ಗಮಲೀ । ಮ್ಹಣಾವೀಪಾ ॥ ೮೪ ॥ ಹೋ ಕಾ ಜೇ ಪವನಾಚೀ ಪುತಳೀ । ಪಾಂಘುರಲೀ ಹೋತಿ ಸೋನೇ ಸಳೀ । ತೇ ಫೇಡೂನಿಯಾ ವೇಗಳೀ । ರೇವಿಲೀತಿಯಾ ॥ ೮೫ ॥ ನಾ ತರೀ ವಾಯೂಚೇನಿ ಅಂಗೇ ಝುಗಟಲೀ । ದೀಪಾಚೀ ದೃಷ್ಟೀ ನಿಮುಟಲಿ । ಕಾ ಲಖಲಖೋನಿ ಹಾರಪಲೀ। ವೀಜಗಗನೀ ॥ ೮೬ ॥ ತೈಸೀ ಹೃದಯಕಮಳವೆರ್ಝೀ। ದಿಸೇ ಜೈಸೀ ಸೋನಿಯಾಚೀ ಸರೀ । ನಾ ತರೀ ಪ್ರಕಾಶ ಜಳಾಚೀ ಝುರೀ। ವಾಹತಆಲೀ ॥ ೮೭ ॥ ಮಗ ತೇ ಹೃದಯಭೂಮೀ ಪೋಕಳೇ । ಜಿರಾಲೀ ಕಾ ಏಕೇ ವೇಳೇ । ತೈಸೇ ಶಕ್ತೀಚೇ ರೂಪ ಮಾವಳೇ । ಶಕ್ತೀಚಿ ಮಾಜೀ ॥ ೮೮ ॥ ತೆಂವ್ಹಾ ತರೀ ಶಕ್ತೀಚಿ ಮ್ಹಣಿಜೇ । ಯೇರ್ಹವೀ ತೋ ಪ್ರಾಣ ಕೇವಳ ಜಾಣಿಜೇ । ಆತಾ ನಾದಬಿಂದು ನೇಣಿಜೇ । ಕಳಾಜ್ಯೋತಿ ॥ ೮೯ ॥ ಮನಾಚಾ ಹನ ಮಾರ । ಕಾ ಪವನಾಚಾ ಆಧಾರ । ಧ್ಯಾನಾಚಾ ಆದರ । ನಾಹೀ ಪರೀ ॥ ೯೦ ॥ ಹೇ ಕಲ್ಪನಾ ಘೇ ಸಾಂಡೀ । ತೇ ನಾಹೀಇಯೇ ಪರವಡೀ । ಹೇ ಮಹಾಭೂತಾಂಚೀಫುಡೀ । ಆಟಣೇ ದೇಖಾ ॥ ೨೯೦॥ ಪಿಂಡೇ ಪಿಂಡಾಚಾ ಗ್ರಾಸ । ತೋ ಹಾ ನಾಥ ಸಂಕೇತೀಂಚಾ ದಂಶ । ಪರೀ ದಾವೂನಿ ಗೇಲಾ ಉದ್ದೇಶ। ಶ್ರೀಮಹಾವಿಷ್ಣು ॥ ೯೧ ॥ ತಯಾ ಧ್ವನಿತಾಚೇ ಕೇಣೇ ಸೋಡುನಿ । ಯಥಾರ್ಥಾಚೀ ಘಡೀ ಝಾಡುನೀ। ಉಪಲವಿಲೀ ಮ್ಯಾ ಜಾಣುನೀ । ಗ್ರಾಹೀಕ ಶ್ರೋತೇ ॥ ೯೨ ॥

**ಅರ್ಥ**— ಈ ರೀತಿ ಶರೀರದ ಹೊರಗಿನ ಭಾಗದಿಂದ ಅಭ್ಯಾಸಕ್ರಮವು ಪ್ರಾರಂಭವಾಯಿತೆಂದರೆ ಒಳಗೆ ಮನಸಿನ ಧರ್ಮದ ಬಲವು ಇಲ್ಲದಂತಾಗುತ್ತದೆ. ॥ ೧೧ ॥ ( ಆ ಮನೋಧರ್ಮವು ಯಾವದೆಂಬದನ್ನು ಕೇಳು. ) ಕಲ್ಪನೆಯು ಕುಗ್ಗುತ್ತದೆ ಮನಸ್ಸಿನ ಆರ್ಷೆಯು ಕಡಿಮೆಯಾಗುತ್ತದೆ. ಮತ್ತು ಮನೋವಿಕಾರಗಳು ತಾವಾಗಿಯೇ ಬಂದಾಗುತ್ತವೆ. ॥ ೧೨ ॥ ಹಸಿವೆಯು ಏನಾಯಿತು ನಿದ್ದೆಯು ಎಲ್ಲಿಹೋಯಿತು. ಇವುಗಳ ನೆನಪು ಇಲ್ಲದಂತೆ ಆಗಿ ಅವುಗಳ ಗುರುತುಸಹ ಉಳಿಯುವದಿಲ್ಲ. ॥ ೧೩ ॥ ಮೂಲಬಂಧದಿಂದ ಗತಿಯನ್ನು ಬಂದಮಾಡಿದ ಅಪಾನವಾಯು ಹಿಂದೆ ಸರಿಯುವದರಿಂದ ಸಹಜವಾಗಿ ಮೇಲೆ ಶಿಕ್ಕು ಉಬ್ಬಹತ್ತುತ್ತದೆ. ॥ ೧೪ ॥ ಅದು ಕ್ಷೋಬದಿಂದ ಬಲವತ್ತರವಾಗಿ ಸಿಕ್ಕುಬಿದ್ದ ಸ್ಥಳದಲ್ಲಿ ಗುರುಗುರಿಸಲಿಕ್ಕೆ ಹತ್ತುತ್ತದೆ. ಮತ್ತು ತಡೆದು ತಡೆದು ಲಿಂಗಚಕ್ರಕ್ಕೆ ಧಕ್ಕೆಕೊಡಲಿಕ್ಕೆ ಹತ್ತುತ್ತದೆ. ॥ ೧೫ ॥ ಆ ಮೇಲೆ ಈ ರೀತಿಯಿಂದ ಪುಷ್ಟಿಆದ ಘಾಳಿಯು ನಾಲ್ಕೂಕಡೆಯಿಂದ ಹೊಟ್ಟೆಯಲ್ಲಿ ಸುತ್ತಿ

ಶೋಧಮಾಡಿರುವದರಿಂದ ಬಾಲ್ಯಾವಸ್ಥೆಯಿಂದ ಕೂಡಿದ್ದ ಹೊಲಸನ್ನು ಹೊರಗೆ ತೆಗೆಯುವ ಪ್ರಯತ್ನ ಮಾಡುತ್ತದೆ. ॥ ೧೬ ॥ ಈ ವಾಯು ಹೊಟ್ಟೆಯಲ್ಲಿ ತಳಕ್ಕೆ ಹೋಗದೆ ಹೊಟ್ಟೆಯಲ್ಲಿಯೇ ಪ್ರವೇಶಮಾಡುತ್ತದೆ. ಮತ್ತು ಕಫ ಪಿತ್ತ ಇವುಗಳ ನಾಶಮಾಡುತ್ತದೆ. ॥ ೧೭ ॥ ಸಪ್ತಧಾತುಗಳ ಸ್ಥಾನಗಳನ್ನು ದಾಟುತ್ತದೆ. ನೆಣದ ಪರ್ವತವನ್ನು ಒಡೆಯುತ್ತದೆ. ಮತ್ತು ಎಲವುಗಳಲ್ಲಿಯ ರಸವನ್ನು ಹೊರಗೆ ತೆಗೆಯುತ್ತದೆ. ॥ ೧೮ ॥ ನಾಡಿಗಳನ್ನು ಬಿಡಿಸುತ್ತದೆ. ಅವಯವಗಳನ್ನು ಶಿಥಿಲಮಾಡುತ್ತದೆ. ಮತ್ತು ಯೋಗಸಾಧನೆ ಮಾಡುವವರಿಗೆ ಭಯವನ್ನು ಹುಟ್ಟಿಸುತ್ತದೆ. ಆದರೆ ಅದರಿಂದ ಅಂಜಬಾರದು. ॥ ೧೯ ॥ ಅದು ವ್ಯಾಧಿಯನ್ನುಂಟು ಮಾಡುತ್ತದೆ. ಮತ್ತು ತೀವ್ರವೇ ವ್ಯಾಧಿಯ ನಾಶಮಾಡುತ್ತದೆ. ಮತ್ತು ಶರೀರದಲ್ಲಿ ಪೃಥ್ವಿಯ ಮತ್ತು ನೀರಿನ ಅಂಶವಿರುವದನ್ನು ಒಂದರಲ್ಲೊಂದು ಕೂಡಿಸುತ್ತದೆ ॥ ೨೦ ॥ ಅರ್ಜುನಾ ! ಎರಡನೇ ಕಡೆಗೆ ಏನು ಸ್ಥಿತಿಯಾಗುತ್ತದೆ ಅಂದರೆ ಆಸನದ ಊಷ್ಣತೆಯಿಂದ ಕುಂಡಲಿನಿ ಎಂಬ ಹೆಸರಿನ ಶಕ್ತಿಯು ಜಾಗ್ರತವಾಗುತ್ತದೆ. ॥ ೨೧ ॥ ಕೇಶರಬಣ್ಣದಿಂದ ಯುಕ್ತವಾದ ಹಾವಿನ ಮರಿಯು ಸುತ್ತಿಕೊಂಡು ಮಲಗುವಂತೆ ॥ ೨೨ ॥ ಆ ಕುಂಡಲಿನಿಯು ಸಣ್ಣ ಮೂರುವರೆ ಸುತ್ತುಗಳನ್ನು ಸುತ್ತಿಕೊಂಡು ಕೆಳಗೆ ಮೋರೆ ಮಾಡಿ ಸರ್ಪಿನಂತೆ ಮಲಗಿರುತ್ತದೆ. ॥ ೨೩ ॥ ಅದು ಮಿಂಚಿನ ಕಂಕಣದಂತೆ, ಅಥವಾ ಅಗ್ನಿಜ್ವಾಲೆಯ ಮಡಿಕೆಯಂತೆ, ಅಥವಾ ತಿಕ್ಕಿತಿಕ್ಕಿ ಹೊಳೆಯುವಂತೆ ಮಾಡಿದ ಬಂಗಾರದ ಸುತ್ತಿನಂತೆ, ॥ ೨೪ ॥ ನಾಭಿಸ್ಕಂದದಲ್ಲಿ ಹತ್ತಿಯಾಗಿ ಕುಳಿತಿರುವಂಥ ಅದು ಮೂಲಬಂಧದ ಹಿಚುಕುವಿಕೆಯಿಂದ ಜಾಗೃತವಾಗುತ್ತದೆ. ॥ ೨೫ ॥ ಆಗ್ಗೆ ನಕ್ಷತ್ರವು ಉದುರಿ ಬೀಳುವಾಗ್ಗೆ ಹೇಗೆ ಹೊಳೆಯುತ್ತದೋ, ಅಥವಾ ಸೂರ್ಯನ ಆಸನವೇ ಅಲ್ಲಾಡಬೇಕೋ, ಅಥವಾ, ತೇಜದ ಬೀಜವನ್ನು ಬಿತ್ತಿ ಅದಕ್ಕೆ ಮೊಳಿಕೆಯು ಉತ್ಪನ್ನವಾಗಬೇಕೋ, ॥ ೨೬ ॥ ಆ ಪ್ರಕಾರ ಆ ಕುಂಡಲಿನಿಯು ತನ್ನ ಸುತ್ತುಗಳನ್ನು ಬಿಚ್ಚಿ ಉಲ್ಹಾಸದಿಂದ ಆಲಸ್ಯವನ್ನು ಬಿಟ್ಟು ನಾಭಿಸ್ಥಾನದಲ್ಲಿ ನಿಂತಂತೆ ಕಾಣುತ್ತದೆ. ॥ ೨೭ ॥ ಅದು ಸಹಜವೇ ಬಹಳ ದಿವಸದಿಂದ ಹಸಿದಿದ್ದು ಅದನ್ನು ಜಾಗ್ರತಮಾಡಿದ ನಿಮಿತ್ಯದಿಂದ ಅದು ಆವೇಶದಿಂದ ಬಾಯಿ ತೆರೆದು ಮೇಲೆ ನೆಟ್ಟಗೆ ನಿಲ್ಲುತ್ತದೆ. ॥ ೨೮ ॥ ಎಲೋ ಕಿರೀಟಿ! ಹೃದಯಕಮಲದ ಕೆಳಗೆ ತುಂಬಿದಂಥ ಎಲ್ಲ ವಾಯುವಿನನ್ನು ಇದು ತಿಂದು ಬಿಡುತ್ತದೆ. ॥ ೨೯ ॥ ಮತ್ತು ಮುಖದಲ್ಲಿಯ ಜ್ವಾಲೆಗಳಿಂದ ಅದು ಕೆಳಗೆ ಮತ್ತು ಮೇಲೆ ವ್ಯಾಪಿಸುತ್ತಿದೆ. ಮತ್ತು ಮಾಂಸ ಮೊದಲಾದವುಗಳನ್ನು ಗ್ರಾಸಮಾಡುತ್ತದೆ. ॥ ೩೦ ॥ ಯಾವ ಸ್ಥಳದಲ್ಲಿ ಮಾಂಸವಿರುವದೋ ಆ ಮಾಂಸವನ್ನು ಸಹಜವಾಗಿ ತಿನ್ನುತ್ತದೆ. ಆ ಮೇಲೆ ಉಳಿದಭಾಗಗಳಲ್ಲಿಯೂ ಕೂಡ ಇದೇ ಪ್ರಕಾರ ಮಾಡುತ್ತದೆ. ॥ ೩೧ ॥ ಆ ಮೇಲೆ ಅಂಗಾಲು, ಅಂಗೈ, ಇವುಗಳನ್ನು ಶೋಧಿಸಿ ಮೇಲಿನ ಭಾಗದ ಭೇದನಮಾಡುತ್ತದೆ. ಮತ್ತು ಪ್ರತಿಒಂದು ಅವಯವ ಮತ್ತು ಸಂದುಗಳನ್ನು ಪರೀಕ್ಷಿಸುತ್ತದೆ. ॥ ೩೨ ॥ ತನ್ನ ಮೂಲಸ್ಥಾನವನ್ನು ಬಿಡದೇ ಉಗುರಿನಲ್ಲಿಯ ಸತ್ವವನ್ನು ಕೂಡ ತೆಗೆಯುತ್ತದೆ. ಮತ್ತು ತ್ವಚೆಯನ್ನು ತೊಳೆದು ಎಲವುಗಳ ಮತ್ತು ನರಗಳ ಪಂಜರಕ್ಕೆ ಕೂಡಿಸುತ್ತದೆ. ॥ ೩೩ ॥ ಅಸ್ಥಿಗಳ ನಳಿಗಳಲ್ಲಿಯ ರಸವನ್ನು ತೆಗೆದು ನರಗಳ ಮಧ್ಯವನ್ನು ಛೇದಿಸುತ್ತದೆ. ಆ ಕಾರಣದಿಂದ ಹೊರಗಿನ ಕೂದಲ ಬೆಳವಣಿಗೆಯು ಕಮರಿ ಹೋಗುತ್ತದೆ ॥ ೩೪ ॥ ಆ ಮೇಲೆ ಸಪ್ತ ಧಾತುಗಳ ಸಮುದ್ರದಲ್ಲಿ ತನ್ನ ತೃಷೆಯನ್ನು ತೀರಿಸಿಕೊಳ್ಳುತ್ತದೆ. ಕೂಡಲೇ ಸರ್ವಾಂಗವನ್ನೆಲ್ಲ ಆರ್ದ್ರಹೀನವಾಗಿ ಮಾಡಿಬಿಡುತ್ತದೆ ॥ ೩೫ ॥ ಮೂಗಿನ ಹೊರಳೆಗಳೊಳಗಿಂದ ಹನ್ನೆರಡು ಬೆರಳು ಬೀಸುವಂಥ ಪ್ರಾಣವಾಯುವನ್ನೂ ಸಹ ಗಟ್ಟಿಯಾಗಿ ಹಿಡಿದು ಒಳಗೆ ಜಗ್ಗುತ್ತದೆ. ॥ ೩೬ ॥ ಆ ಕಾಲಕ್ಕೆ ಪ್ರಾಣ ಮತ್ತು ಅಪಾನ ಈ ಎರಡು ವಾಯುಗಳು ಆಕುಂಚಿತವಾಗುತ್ತವೆ. ಮತ್ತು ಪ್ರಾಣ ಅಪಾನವನ್ನು ಒತ್ತಿ ಹಿಡಿಯುತ್ತದೆ. ಆ ಎರಡೂದರ ಆಲಿಂಗನದಿಂದ ಚಕ್ರಗಳ ಪಂಜರವು ಉಳಿಯುತ್ತದೆ. ॥ ೩೭ ॥ ಪ್ರಾಣ ಅಪಾನ ಈ ಎರಡೂ ವಾಯುಗಳು ಅದೇಕಾಲಕ್ಕೆ ಒಂದೆಡೆಗೆ ಕೂಡಿರುತ್ತವೆ. ಆದರೆ ಆ ಕುಂಡಲಿನಿಯು ಕ್ಷಣಹೊತ್ತು ಮುಗ್ಧೆಯಾಗಿ “ ನೀವು ಹಿಂತಿರಿಗಿ ಹೋಗಿರಿ ” ನಿಮ್ಮದು ಏನು ಕೆಲಸವದೆ ? ಎಂದು ಅವುಗಳಿಗೆ ಅನ್ನುತ್ತದೆ . ॥ ೩೮ ॥ ಅರ್ಜುನನೇ ಕೇಳು ! ಶರೀರದಲ್ಲಿಯ ಪೃಥ್ವಿಯ ಎಲ್ಲ ಅಂಶವನ್ನು ತಿಂದು ಏನೂ ಉಳಿಯದಂತೆ ಮಾಡುತ್ತದೆ. ಹಾಗೆಯೇ ನೀರಿನ ಎಲ್ಲ ಭಾಗವನ್ನು ನೆಕ್ಕಿ ಬಿಡುತ್ತದೆ. ॥ ೩೯ ॥ ಈ ರೀತಿಯಿಂದ ಎರಡೂ ಮಹಾಭೂತಗಳ ಅಂಶವನ್ನು ಸೇವಿಸಿ ತೃಪ್ತವಾದಮೇಲೆ ಶಾಂತಿಯನ್ನು ಹೊಂದಿ ಸುಷುಮ್ನಾ

ನಾಡಿಯು ಹತ್ತರ ಇರುತ್ತದೆ. ॥ ೨೪೦ ॥ ಆ ಸ್ಥಾನದಲ್ಲಿ ತೃಪ್ತಿಯನ್ನು ಹೊಂದಿದ ಆನಂದದಲ್ಲಿ ಅದು ತನ್ನ ಮುಖದಿಂದ ವಮನ ಮಾಡುವಂಥ ವಿಷರೂಪಿ ಅಮೃತದಿಂದಲೇ ಪ್ರಾಣಗಳು ಸಂರಕ್ಷಿಸಲ್ಪಡುತ್ತವೆ. ॥ ೨೪೧ ॥ ಆವಿಷರೂಪಿ ಅಗ್ನಿಯು ಹೊರಡುತ್ತದೆ. ಆದರೆ ಶರೀರದಲ್ಲಿಯ ಯಾವತ್ತೂ ದಾಹವನ್ನು ನಾಶಪಡಿಸುತ್ತದೆ. ಆ ಕಾರಣದಿಂದ ಶರೀರದಲ್ಲಿಯ ಕಳೆದು ಹೋದ. ಸಾಮರ್ಥ್ಯವು ಪುನಃ ಬರುತ್ತದೆ. ॥ ೪೨ ॥ ನಾಡಿಗಳ ಹರಿದಾಟವು ನಿಲ್ಲುತ್ತದೆ. ಮತ್ತು ನವವಾಯುಗಳ ಕಾರ್ಯವು ಬಂದಾಗುತ್ತದೆ. ಆದ್ದರಿಂದ ಶರೀರದ ಧರ್ಮವು ಉಳಿಯುವದಿಲ್ಲ. ॥ ೪೩ ॥ ಈಡಾ ಮತ್ತು ಪಿಂಗಳಾ ಇವುಗಳು ಒಂದು ಆಗುತ್ತವೆ. ಮೂರು ಬಂಧನಗಳು ಶಿಥಿಲವಾಗುತ್ತವೆ. ಮತ್ತು ಆರೂ ಚಕ್ರಗಳ ಸಮ್ಬಂಧವು ಇಲ್ಲದಂತೆ ಆಗುತ್ತದೆ. ॥ ೪೪ ॥ ಆ ಮೇಲೆ ಚಂದ್ರ ಸೂರ್ಯ ಹೀಗೆ ಹೆಸರು ಪಡೆದಂಥ ವಾಯುವನ್ನು ದೀಪದ ಬೆಳಕಿನ ಸಹಾಯದಿಂದ ನೋಡಲಾಗಿ ಕಾಣಿ ಸುವದಿಲ್ಲ. ॥ ೪೫ ॥ ಬುದ್ಧಿಯು ಜ್ಞಾನವು ತತ್ಕಾಲಕ್ಕೆ ಇಲ್ಲದಂತೆ ಆಗುತ್ತದೆ. ಮತ್ತು ಮೂಗಿನಲ್ಲಿ ಉಳಿದಿರುವಂಥ ಗಂಧವೂ ಕೂಡ ಕುಂಡಲಿನಿಯೊಂದಿಗೆ ಸುಷುಮ್ನೆಯಲ್ಲಿ ಹೋಗುತ್ತದೆ. ॥ ೪೬ ॥ ಆ ಕಾಲಕ್ಕೆ ಭ್ರುಕುಟಿ ಚಕ್ರ ದಲ್ಲಿ ಚಂದ್ರಾಮೃತದ ಕೆರೆಯು ಇರುತ್ತದೆ. ಅದಕ್ಕೆ ಮೆಲ್ಲನೆ ಭಾರಹತ್ತಿ ಅದು ಡೊಂಕಾಗುತ್ತದೆ. ಮತ್ತು ಅದರಲ್ಲಿಯ ಅಮೃತವು ಕುಂಡಲಿನಿಯ ಮುಖದಲ್ಲಿ ಬೀಳಹತ್ತುತ್ತದೆ. ॥ ೪೭ ॥ ಆ ಯೋಗದಿಂದ ಅದರಲ್ಲಿ ರಸತುಂಬಿ ಅದು ಸರ್ವಾಂಗದೊಳಗೆ ಭೇದಿಸುತ್ತದೆ. ಮತ್ತು ಅದು ಪ್ರಾಣವಾಯುವಿನಿಂದ ಎಲ್ಲಿದ್ದ ಸ್ಥಳದಲ್ಲಿಯೇ ಇಂಗುತ್ತದೆ. ॥೪೮॥ ಕಾಯಿದಂಥ ಮುಸಿಯಲ್ಲಿಯ ಮೇಣವು ಇಲ್ಲದಂತೆ ಆಗಿ. ಅದು ಯಾವಪ್ರಕಾರಾ ಸುರವಿದಂಥ ರಸದಿಂದ ಪೂರ್ಣವಾಗಿ ತುಂಬುತ್ತದೆ. ( ರಸಕ್ಕೆ ಮುಸಿಯ ಆಕಾರವು ಬರುತ್ತದೆ.) ॥ ೪೯ ॥ ಆ ಪ್ರಕಾರಾ ತೇಜವೇ ಅಲ್ಲಿ ಮೂರ್ತಿಮಂತ ಅವತರಿಸಿದೆಯೋ ಏನೋ, ಅನ್ನುವಂತೆ ಆ ಶರೀರವು ಇಷ್ಟು ತೇಜವುಳ್ಳದ್ದಾಗಿ ಕಾಣುತ್ತದೆ. ॥ ೨೫೦ ॥ ಸೂರ್ಯನು ಮೋಡಗಳಲ್ಲಿ ಅಡಗಿ ಹೋಗಿ ಅವು ಇಲ್ಲದಂತಾದಮೇಲೆ ತನ್ನ ಕಾಂತಿಯಿಂದ ಹೇಗೆ ಮೇಲೆ ಬರುವನೋ, ಅದರಂತೆ ಶರೀರದ ಮೇಲಿನ ತ್ವಚೆಯು ಹೊಟ್ಟನಂತೆ ಹಾರಿ ಹೋಗುತ್ತದೆ. ॥ ೫೨ ॥ ಆ ಮೇಲೆ ಕೇಶರದ ಸ್ವಯಂಬಣ್ಣದಂತೆ, ರತ್ನರೂಪ ಬೀಜಕ್ಕೆ ಹೊರಟಂಥ ಅಂಕುರದಂತೆ, ಆ ಅವಯವಗಳ ಕಾಂತಿಯು ಶೋಭಿಸುತ್ತದೆ. ॥ ೫೩ ॥ ಇಲ್ಲದಿದ್ದರೆ ಸಂಧ್ಯಾಕಾಲದ ಆಕಾಶದ ಕೆಂಪು ಬಣ್ಣದಿಂದಲೇ ಆ ಶರೀರವನ್ನು ಮಾಡಿರಬೇಕು. ಅಥವಾ ಆತ್ಮಚೈತನ್ಯದ ತೇಜ ದಿಂದ ಲಿಂಗವನ್ನು ಮಾಡಿರಬೇಕು. ॥ ೫೪ ॥ ಇಲ್ಲದೇ ಅದು ಕುಂಕುಮದಿಂದ ತುಂಬಿದ ಮತ್ತು ಆತ್ಮ ರಸದಿಂದ ಸುರವಿದ ಮೂರ್ತಿಮಂತ ಶಾಂತಿಯೇ ಇರಬೇಕೆಂದು ನನಗೆ ಅನಿಸುತ್ತದೆ. ॥ ೫೫ ॥ ಅದು ಅನಂದ ರೂಪಚಿತ್ರದ ಬಣ್ಣವು ಅಥವಾ ಪರಬ್ರಹ್ಮ ಸುಖದ ರೂಪವು ಸಂತೋಷರೂಪ ವೃಕ್ಷದ ಅಗಿಯು ಇರುತ್ತದೆಂದು ಕಾಣುತ್ತದೆ. ॥೫೬॥ ಅದು ಸಂಪಿಗೆಯ ಮೊಗ್ಗೆಯು, ಅಥವಾ ಅಮೃತದ ಗೊಂಬೆಯು, ಕೋಮಲತೆಯಿಂದ ಬೆಳೆದಿರುವ ತೋಟವು ॥೫೭॥ ಶರದೃತುವಿನ ಪಾರ್ಣಿಮೆಯ ಹಸಿಯಿಂದ ಚಂದ್ರ ಬಿಂಬವು ಶೋಭಿಸಬೇಕೋ, ಅಥವಾ ಮೂರ್ತಿಮಂತ ತೇಜವೇ ಆಸನ ಹಾಕಿ ಕುಳಿತಿರಬೇಕೋ, ॥೫೮॥ ಆ ಪ್ರಕಾರಾ ಕುಂಡಲಿನಿಯು ಚಂದ್ರಾಮೃತದ ಕೆರೆಯಲ್ಲಿಯ ಅಮೃತವನ್ನು ಕುಡಿದಮೇಲೆ ಶರೀರವು ಕಾಣಹತ್ತುತ್ತದೆ. ಆ ಶರೀರಕ್ಕೆ ಯಮನೂ ಕೂಡಾ ಭಯಪಡು ತ್ತಾನೆ. ॥೫೯॥ ವಾರ್ಧಕ್ಯವು ಹಿಂದೆ ತಿರುಗುತ್ತದೆ. ತಾರುಣ್ಯದ ಭೇದವು ಹೋಗುತ್ತದೆ. ಮತ್ತು ಕಳೆದು ಹೋದ ಬಾಲ್ಯಾವಸ್ಥೆಯು ಮರಳಿ ಬರುತ್ತದೆ. ॥೬೦॥ ವಯಸ್ಸಿನಿಂದ ನೋಡಿದರೆ ಸಣ್ಣವನೇ ಕಾಣುತ್ತಾನೆ. ಆದರೇ ಬಹಳೇ ಪರಾಕ್ರಮಿ ಇದ್ದು ಅವನ ಧೈರ್ಯವು ಅನುಪಮೇಯವಾಗಿರುತ್ತದೆ. ॥೬೧॥ ಸುವರ್ಣ ವೃಕ್ಷದಲ್ಲಿ ನವಪಲ್ಲವಗಳು ಚಿಗಿತು ನಿತ್ಯ ಹೊಸರತ್ನದ ಮೊಗ್ಗೆಯು ಹುಟ್ಟುವಂತೆ, ಹೊಸ ಉಗುರುಗಳು ಸತೇಜವಾಗಿ ಕಾಣುತ್ತವೆ. ॥ ೬೨ ॥ ನವ ದಂತ ಪಂಙ್ತಿಗಳು ಹುಟ್ಟಿ ಅವು ಬಹು ಸೂಕ್ಷ್ಮವಾದವು. ಮತ್ತು ಮೇಲೆ ಕೆಳಗಿನ ಪಂಙ್ತಿಗಳು ವಜ್ರದ ( ಸಣ್ಣ ) ಹರಳನ್ನು ಕೂಡಿಸಿದಂತೆ ಶೋಭಿಸುವವು. ॥ ೬೩ ॥ ಶರೀರದ ಮೇಲಿನ ಎಲ್ಲ ಕೂದಲುಗಳ ತುದಿಗಳು ಮಾಣಿಕಗಳ ತುದಿಗಳಂತೆ ಸತೇಜವಾಗಿ ಉದ್ಭವಿಸುತ್ತವೆ. ॥ ೬೪ ॥ ಕೈಕಾಲುಗಳ ತಳಭಾಗಗಳು ಕಮಲದಂತೆ ಕೆಂಪುವರ್ಣದವು ಆಗುತ್ತವೆ. ಮತ್ತು ಕಣ್ಣುಗಳು ಎಷ್ಟು ಸ್ವಚ್ಛವಾಗುತ್ತವೆಂಬದನ್ನು ಏನು ಹೇಳುವದು ? ॥ ೬೫ ॥ ಮುತ್ತುಗಳು

ಪಕ್ವದೆಶೆಯನ್ನು ಹೊಂದಿ ಉಬ್ಬುವ ಕಾರಣದಿಂದ ಅವು ಸಿಂಪಿನಲ್ಲಿ ಹಿಡಿಯುವದಿಲ್ಲ. ಶಿಂಪುಗಳು ಬಿಚ್ಚುತ್ತವೆ. ॥೬೬॥ ಆ ಪ್ರಕಾರಾ ದೃಷ್ಟಿಯು ರೆಪ್ಪೆಗಳ ಸಂದಿನಲ್ಲಿ ಹಿಡಿಸಲಾರದೆ ದೂರವರೆಗೆ ಹೋಗಿ ಹೊರಗೆ ಬರಹತ್ತುತ್ತದೆ. ಆ ದೃಷ್ಟಿ ನಿಜವಾಗಿ ಮೊದಲಿನದೇ ಆದರೂ, ಯಾವತ್ತೂ ಆಕಾಶವನ್ನು ವ್ಯಾಪಿಸುತ್ತದೆ. ॥ ೬೭ ॥ ಅರ್ಜುನನೇ ! ಕೇಳು, ದೇಹದ ಬಂಣವು ಸುವರ್ಣದಂತೆ ಆಗುತ್ತದೆ. ಆದರೆ ಅದೆಲ್ಲ ವಾಯುಮಯವಿರುತ್ತದೆ. ಅದರಲ್ಲಿ ಆಪ ಮತ್ತು ಪೃಥ್ವಿ ಇವುಗಳ ಅಂಶವಾದರೂ ಇರುವದಿಲ್ಲ. ॥ ೬೮ ॥ ಆಗ್ಗೆ ಅವನಿಗೆ ಸಮುದ್ರದ ಆಚೆಗಿರುವ ವಸ್ತುಗಳು ಸಹ ಕಾಣಿಸುತ್ತವೆ. ಸ್ವರ್ಗದಲ್ಲಿಯ ಆಲೋಚನೆಗಳು ತಿಳಿಯುತ್ತವೆ. ಮತ್ತು ಇರಿವೆ,ಗಳ ಮನದಲ್ಲಿಯ ಭಾವವನ್ನೂ ಕೂಡ ತಿಳಿದುಕೊಳ್ಳಲು ಬರುತ್ತದೆ. ॥ ೬೯ ॥ ಅವನು ಗಾಳಿಯ ಕುದುರೆಯಮೇಲೆ ಸಹ ಸ್ವಾರನಾಗುತ್ತಾನೆ. ನೀರಿನಮೇಲೆ ನಡೆಯುವಾಗ್ಗೆ ನೀರಿಗೆ ಅವನ ಕಾಲು ಹತ್ತುವದಿಲ್ಲ. ಈ ಪ್ರಕಾರ ಸಮಯಾನುಸಾರ ಅವನಿಗೆ ಬಹಳ ಸಿದ್ಧಿಗಳು ಪ್ರಾಪ್ತವಾಗುತ್ತವೆ. ॥ ೭೦ ॥ ನೋಡು, ಪ್ರಾಣವಾಯುವಿನ ಕೈ ಹಿಡಿದು ಮತ್ತು ಹೃದಯಾಕಾಶದ ಪಾವಟಿಗೆಗಳನ್ನು ಮಾಡಿ ಸುಷುಮ್ನೆ ಎಂಬ ಮೇಲಮಹಡಿಯಿಂದ ಹೃದಯಕ್ಕೆ ಬಂದಂಥ ॥ ೭೧ ॥ ಜೀವಾತ್ಮಕ್ಕೆ ಶೋಭಿಸುವಂಥ ಜಗದಂಬೆಯಾದ ಕುಂಡಲಿನಿಯು ಜಗದ್ಬೀಜದ ಅಂಕುರವಾದ ಜೀವದಮೇಲೆ ನೆರಳನ್ನು ಮಾಡುತ್ತದೆ. ॥ ೭೨ ॥ ನಿರಾಕಾರ ಬ್ರಹ್ಮನ ಸಾಕಾರಮೂರ್ತಿಯಾದ ಪರಮಾತ್ಮ ಶಿವನನ್ನು ಕೂಡಿಸುವ ಸುಂದರವಾದ ಸಂಪುಷ್ಟವು ಮತ್ತು ಓಂಕಾರದ ಕೇವಲ ಜನ್ಮಭೂಮಿಯು, ॥ ೭೩ ॥ ಹೆಚ್ಚಿಗೇನು ಹೇಳಬೇಕು? ಆ ಕುಂಡಲಿನಿಯು ಹೃದಯದಲ್ಲಿ ಬಂದಕೂಡ್ಲೆ ಅಖಂಡ ಓಂಕಾರದ ಧ್ವನಿಯಾಗ ಹತ್ತುತ್ತದೆ. ॥ ೭೪ ॥ ಆ ಕುಂಡಲಿನಿಯು ಹತ್ತರ ಬುದ್ಧಿ ಇರುವದರಿಂದ ಅದರ ಕಿವಿಗೆ ಓಂಕಾರದ ಧ್ವನಿಯು, ಸ್ವಲ್ಪ ಮಟ್ಟಿಗೆ ಕೇಳಿಸುತ್ತದೆ. ॥ ೭೫ ॥ ಕುಂಡಲಿನಿಯಲ್ಲಿ ಧ್ವನಿಯ ಮತ್ತು ನಾದರೂಪ ಓಂಕಾರದ ಆಕಾರ ಉಳ್ಳ ಚಿತ್ರ ತೆಗೆದಂಥ ರೂಪಗಳು ಪ್ರಗಟವಾಗುತ್ತವೆ. ॥ ೭೬ ॥ ಈ ಮಾತುಗಳು ಕಲ್ಪನೆಯಿಂದಲೇ ತಿಳಿಯಬರುತ್ತವೆ. ಆದರೆ ಕಲ್ಪನೆಯಿಂದ ತಿಳಿಯತಕ್ಕಂಥವನನ್ನು ಎಲ್ಲಿಂದ ತರಬೇಕು. ? ( ಯಾಕಂದರೆ ಜೀವಾತ್ಮನ ಕೂಡ ಅದರ ಐಕ್ಯವಾಗಿರುತ್ತದೆ. ) ಆಮದರಿಂದ ಆ ಹೃದಯಾಕಾಶದಲ್ಲಿ ಎಂಥಾ ಗರ್ಜನೆಯು ಆಗುತ್ತದೆಂಬದು ತಿಳಿಯುವದಿಲ್ಲ. ॥ ೭೭ ॥ ಅರ್ಜುನಾ ! ನಿನಗೆ ನಾನು ಒಂದು ಮಾತನ್ನು ಹೇಳುವದನ್ನು ಮರೆತೆನು. ಅದು ಯಾವದೆಂದರೆ ಎಲ್ಲೀವರೆಗೆ ಪ್ರಾಣ ಅಪಾನ ವಾಯುವುಗಳ ನಾಶವಾಗುವದಿಲ್ಲವೋ, ಅಲ್ಲಿಯವರೆಗೆ ಹೃದಯಾಕಾಶಕ್ಕೆ ವಾಚಾ ಇರುತ್ತದೆ. ಆ ಕಾರಣದಿಂದಲೇ ಶಬ್ದ ಉತ್ಪತ್ತಿಯಾಗುತ್ತದ. ॥ ೭೮ ॥ ಆ ಅಖಂಡವಾದ ಓಂಕಾರದ ಮೇಘದಂಥ ಧ್ವನಿಯಿಂದ ಹೃದಯಾಕಾಶವು ತುಂಬಿ ಹೋಗುತ್ತದೆ. ಆಗ್ಗೆ ಬ್ರಹ್ಮರಂಧ್ರದ ಕಿಡಿಕಿಯು ಸಹಜವಾಗಿ ತೆರೆಯುತ್ತದೆ. ॥ ೭೯ ॥ ನೋಡು, ಕಮಲದಲ್ಲಿಯ ಪೊಳ್ಳಿನಂತೆ ಹೃದಯಾಕಾಶದಲ್ಲಿರುವ ಪೊಳ್ಳು ಸ್ಥಳದಲ್ಲಿ ಚೈತನ್ಯವು ನಿರಾಶ್ರಿತವಾಗಿ ವಾಸ ಮಾಡುತ್ತಿರುತ್ತದೆ. ( ಪೂರ್ಣ ಇರುವದಿಲ್ಲ. ) ॥ ೮೦ ॥ ಆ ಆತ್ಮನ ಮಂದಿರದಲ್ಲಿ ಪರಮೇಶ್ವರಿ ಕುಂಡಲಿನಿಯು ಅತಿಥಿಯಾಗಿ ಬಂದನಂತರಾ ತೇಜರೂಪದ ಮೇಜವಾನಿಯು ಆಗುತ್ತದೆ. ॥ ೮೧ ॥ ಆ ಕಾಲಕ್ಕೆ ಬುದ್ಧಿರೂಪ ಶಾಖಾ ಪದಾರ್ಥ ಸಹಿತ ಎಲೆ ಬಡಿಸಿ ದ್ವೈತ ಭಾಸವನ್ನು ನೀಗುವಂಥ ಭೋಜನವನ್ನು ಉಣಿಸುವದು. ॥ ೮೨ ॥ ಕುಂಡಲಿನಿಯು ತನ್ನ ತೇಜರೂಪ ಕಾಂತಿಯನ್ನು ಬಿಟ್ಟು ವಾಯುರೂಪವನ್ನು ಹೊಂದಿದಾಗ ಹೇಗೆ ಕಾಣುತ್ತದೆ ಅಂದರೆ ಪ್ರತ್ಯಕ್ಷಗಾಳಿಯು ಪುಥ್ಥಳಿಯೇ ದಿವ್ಯವಾದ ಪೀತಾಂಬರ ಉಟ್ಟದ್ದನ್ನು ಒಂದುಕಡೆಗೆ ಇರಿಸಿದಂತೆ ಕಂಡಿತು. ॥ ೮೩ ॥ ಅಥವಾ ದೀವಿಗೆಯ ಪ್ರಕಾಶವು ಗಾಳಿಯ ಭರಕೆ ಅಡಗುವಂದದಿ, ಅಥವಾ ಮಿಂಚು ಹೊಳೆದು ಗಗನದಲ್ಲಿ ನಾಶವಾಗುವಂದದಿ, ॥ ೮೪ ॥ ಹೃದಯಕಮಲದವರೆಗೆ ಪ್ರವೇಶಿಸಿ ಅದು ಬಂಗಾರದ ಸರದಂತೆ ಸತೇಜವಾಗಿ ಅಥವಾ ತೇಜರೂಪ ನೀರಿನ ಝರಿಯು ಹರಿದು ಬರುವಂತೆ ಕಾಣಿಸುತ್ತದೆ. ॥ ೮೬ ॥ ಆ ಮೇಲೆ ಅದು ಹೃದಯರೂಪ ಪೊಳ್ಳಾದ ನೆಲದಲ್ಲಿ ಒಮ್ಮಿಂದೊಮ್ಮೆ ಇಂಗುತ್ತದೆ. ಆಗ್ಗೆ ಕುಂಡಲಿನಿಯ ಶಕ್ತಿರೂಪವು ಆ ಶಕ್ತಿಯಲ್ಲಿಯೇ ಲಯಹೊಂದುತ್ತದೆ. ॥ ೮೭ ॥ ಈ ಸ್ಥಿತಿ ಆದಮೇಲೆ ಇದಕ್ಕೆ ಶಕ್ತಿಯಂದೇ ಅನ್ನತಕ್ಕದ್ದು, ಅನ್ಯಪ್ರಸಂಗದಲ್ಲಿ ಅದು ನಿಜವಾಗಿ ಪ್ರಾಣವಾಯುವೇ ಆಗಿರುತ್ತದೆ. ಇನ್ನು ಮೇಲೆ ಅದಕ್ಕೆ ನಾದ, ಬಿಂದು, ಕಲಾ, ಮತ್ತು ಜ್ಯೋತಿ, ಈ ನಾಲ್ಕು ಧರ್ಮಗಳು ಅಲ್ಲಿ ಇರುವದಿಲ್ಲ. ॥ ೮೮ ॥ ಆ

ಮೇಲೆ ಮನಸ್ಸನ್ನು ಗೆಲ್ಲುವದು ಅಥವಾ ಪ್ರಾಣವಾಯುವಿನ ನಿರೋಧ ಮಾಡುವದು, ಇಲ್ಲವೇ ಧ್ಯಾನಮಾಡುವದು, ಇವು ಅಲ್ಲಿ ಇಲ್ಲದಂತೆ ಆಗುತ್ತವೆ. ॥ ೮೯ ॥ ಮತ್ತು ಕಲ್ಪನೆ ಮಾಡುವದು ಅಥವಾ ಬಿಡುವದು ಈ ಪ್ರಯತ್ನವು ಹೋಗುತ್ತದೆ. ಇಂಥ ವ್ಯಾಪಾರಗಳು ನಿಂತುಬಿಡುತ್ತವೆ. ಈ ಸ್ಥಿತಿಯು ಪಂಚ ಮಹಾಭೂತಗಳನ್ನು ಕೇವಲ ನಾಶಮಾಡುವಂಥಾದ್ದು ಆಗಿರುವದೆಂದು ನಂಬು. ॥ ೯೦ ॥ ಶರೀರದಿಂದ ಶರೀರವನ್ನು ಇಲ್ಲದಂತೆ ಮಾಡುವದು ಯೋಗಶಾಸ್ತ್ರದ ಧಣಿಯಾದ ಶ್ರೀ ಶಂಕರನು ಮಾಡಿದಂಥ ಸಿದ್ಧಾಂತದ ಅಭಿಪ್ರಾಯವಾಗಿರುತ್ತದೆ. ಶ್ರೀ ಮಹಾವಿಷ್ಣುವು ಅದರ ಉದ್ದೇಶವನ್ನು ತೋರಿಸಿಕೊಟ್ಟನು. ॥ ೯೧ ॥ ( ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ) ಆ ಮಹಾವಿಷ್ಣುವಿನ ಸಂಕೇತದ ಗಂಟನ್ನು ಬಿಚ್ಚಿ ಯಥಾರ್ಥರೂಪ ವಸ್ತ್ರದ ಘಳಿಗೆಯನ್ನು ಸಿದ್ಧಪಡಿಸಿ ಶ್ರೋತೃಗಳೇ ಈ ನಾಲಿನ ಗಿರಾಯಕಿಗಳೆಂದು ತಿಳಿದು ನಾನು ಅದನ್ನು ಅವರ ಮುಂದೆ ಬಿಚ್ಚಿ ಇಟ್ಟದ್ದೇನೆ. ॥ ೯೨ ॥

**ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

**[ ಯುಂಜನ್ನೇವಂ ಸದಾತ್ಮಾನಮಿತಿ ]** ಐಕೇ ಶಕ್ತೀಚೇ ತೇಜ ಜೆಂವ್ಹಾ ಲೋಪೇ । ತೇಥ ದೇಹಾಚೇ ರೂಪಹಾರಪೇ । ಮಗ ತೋಡೋಳ್ಯಾಮಾಜೀ ಲಪೇ । ಜಗಾಚಿಯಾ ॥ ೯೩ ॥ ಯೇರ್ಹವೀ ಆಥಿಲಾಚಿ ಐಸೇ । ಸಾವಯವ ತರೀ ದಿಸೇ । ಪರೀ ವಾಯೂ ಚೇ ಜೈಸೇ । ವಳಿಲೇ ಹೋಯ ॥ ೯೪ ॥ ನಾತರೀ ಕರ್ದಳೀಚಾ ಗಾಭಾ । ಬುಂಥೀ ಸಾಂಡೋನಿ ಉಭಾ । ಕಾ ಅವಯವಚಿ ನಭಾ । ಉದಯಲಾ ತೋ ॥ ೯೫ ॥ ತೈಸೇ ಹೋಯ ಶರೀರ । ತೈ ತೇ ಮ್ಹಣಿಜೇ ಖೇಚರ । ಹೇಪದ ಹೋತಾ ಚಮತ್ಕಾರ । ಪಿಂಡಜನೀ ॥ ೯೬ ॥ ದೇಖೇ ಸಾಧಕ ನಿಘೋನಿ ಜಾಯೇ । ಮಾಗಾ ಪಾವುಲಾಂಚೀ ವೋಳ ರಾಹೇ । ತೇಥ ಠಾಯೀ ಠಾಯೀ ಹೋಯೇ । ಅಣಿಮಾದಿಕ ॥ ೯೭ ॥ ಪರೀ ತೇಣೇ ಕಾಯ ಕಾಜ ಆಪಣ ಪಯಾ । ಅವಧಾರೋ ಐಸಾ ಧನಂಜಯಾ । ಲೋಪ ಆಥೀ ಭೂತತ್ರಯಾ । ದೇಹೀಂಚ್ಯಾ ದೇಹೀ ॥ ೯೮ ॥ ಪೃಥ್ವೀತೇ ಆಪ ವಿರವೀ । ಆಪಾತೇ ತೇಜ ಜಿರವೀ । ತೇಜಾತೇ ಪವನ ಹರವೀ । ಹೃದಯಾ ಮಾಜೀ ॥ ೯೯ ॥ ಪಾಠಾ ಆಪಣ ಏಕಲಾ ಉರೀ । ಪರೀ ಶರೀರಾಚೇನಿ ಅನುಕಾರೇ । ಮಗ ತೋಹೀನಿಗೇ ಅಂತರೇ । ಗಗನಾ ಮಿಳೇ ॥ ೩೦೦ ॥ ತೇ ವೇಳೀ ಕುಂಡಲಿನೀ ಹೇ ಭಾಷ ಜಾಯೇ । ಮಗ ಮಾರುತ ಐಸೇ ನಾಮ ಹೋಯೇ । ಪರೀ ಶಕ್ತಿಪಣ ತೇ ಆಹೇ । ಜವ ನ ಮಿಳೇ ಶಿವೀ ॥ ೧ ॥ ಮಗ ಜಾಲಂಧರ ಸಾಂಡೀ । ಕಕಾರಾಂತ ಫೋಡೀ । ಗಗನಾಚಿಯೇ ಪಾಡೀ । ಪೈಠೀ ಹೋಯ ॥ ೨ ॥ ತೇ ಓಂಕಾರಾಚಿಯೇ ಪಾಠೀ । ಪಾಯ ದೇತ ಉಠಾ ಉಠೀ । ಪಶ್ಯಂತೀಚಿಯೇ ಪಾವುಠೀ । ಮಾಗಾ ಘಾಲೀ ॥ ೩ ॥ ಪುಢೇ ತನ್ಮಾತ್ರಾ ಅರ್ಧವರೀ । ಆಕಾಶಾಚ್ಯಾ ಅಂತರೀ । ಭರತೀಗಮೇ ಸಾಗರೀ । ಸರಿತಾ ಜೇವೀ ॥ ೪ ॥ ಮಗ ಬ್ರಹ್ಮರಂಧ್ರೀ ಸ್ಥಿರಾವೋನೀ । ಸೋಹಂಭಾವಾಚ್ಯಾ ಬಾಹ್ಯಾ ಪಸರೂನೀ । ಪರಮಾತ್ಮಲಿಂಗಾ ಧಾವೋನೀ । ಆಂಘಾ ಘದೇ ॥ ೫ ॥ ತವ ಮಹಾಭೂತಾಂಚೀ ಜವನಿಕ ಫಿಟೇ । ಮಗ ದೋಹೀಹೋಂಸಿ ಹೋಯ ಝುಟೇ । ತೇಥ ಗಗನಾ ಸಕಟ ಆಟೇ । ಸಮರಸೋತಿಯೇ ॥ ೬ ॥ ಪೈ ಮೇಘಾಚೇನಿ ಮುಖೋ ನಿವಡಲಾ । ಸಮುದ್ರ ಕಾ ವೋಘೋ ಪಡಿಲಾ । ತೋ ಮಾಗುತಾ ಜೈಸಾ ಆಲಾ । ಆಪಣಪಯಾ ॥ ೭ ॥ ತೇವಿ ಪಿಂಡಾಚೇನಿ ಮಿಷೇ । ಪದೀ ಪದ ಪ್ರವೇಶೇ । ತೇ ಏಕತ್ವ ಹೋಯ ತೈಸೇ । ಪಾಂಡು ಕುಮರಾ ॥ ೮ ॥ ಆತಾ ದುಜೇ ಹನ ಹೋತೇ । ಕೀ ಏಕಚಿ ಹೇ ಆಇತೇ । ಐಶಿಯೇ ವಿವಂಚನೇ ಪುರತೇ । ಉರೇಚಿನಾ ॥ ೯ ॥ ಗಗನೀ ಗಗನ ಲಯಾ ಜಾಯೇ । ಐಸೇ ಜೇ ಕಾಹೀ ಆಹೇ । ತೇ ಅನುಭವೇ ಜೋ ಹೋಯೇ । ತೋ ಹೋವೂನಿ ಠಾಕೇ ॥ ೩೧೦ ॥ ಮ್ಹಣೋನಿ ತೇಥೀಂಚೀ ಮಾತ । ನ ಚಢೇಚಿ ಬೋಲಾಚಾ ಹಾತ ।

ಜೇಣೇ ಸಂವಾದಾಚಿಯಾ ಗಾಂವಾ ಆಂತ । ಪೈಠೀ ಕೀಜೇ ॥ ೧೧ ॥ ಅರ್ಜುನಾ ಯೇರ್ಹವೀ ತರೀ ।
ಇಯಾ ಅಭಿಪ್ರಾಯಾಚಾ ಜೇಗರ್ವ ಧರೀ । ತೇ ಪಾಹೇ ಪಾ ವೈಖರೀ । ದುರೀ ಠೇಲೀ ॥ ೧೨ ॥
ಭ್ರೂಲತಾ ಮಾಗಲೀ ಕಡೇ । ತೇಥ ಮಕಾರಾಚೇಂಚಿ ಆಂಗ ನ ಮಾಂಡೇ । ಸಡೇಯಾ ಪ್ರಾಣಾ
ಸಾಂಕಡೇ । ಗಗನಾಯೇತಾ ॥ ೧೩ ॥ ಪಾಠೀ ತೇಥೇಂಚೀ ತೋ ಭೇಸಳಲಾ । ತೈ ಶಬ್ದಾಚಾ
ದೇವ್ರೋ ಮಾವಳಲಾ । ಮಗ ತಯಾಹೀವರೀ ಆಟು ಭವಿನ್ನಲಾ । ಆಕಾಶಾಚಾ ॥ ೧೪ ॥ ಆತಾ
ಮಹಾಶೂನ್ಯಾಚಿಯಾ ಡೋಹೀ । ಜೇಥ ಗಗನಾಸೀಚೀ ಥಾವ್ರೋ ನಾಹೀ । ತೇಥ ತಾಗಾ ಲಾಗೇಲ
ಕಾಯೀ । ಬೋಲಾಚಾ ಇಯಾ ॥ ೧೫ ॥ ಮ್ಹಣೂನಿ ಆಖರಾ ಮಾಜೀ ಸಾಂಪಡೇ । ಕೀ ಕಾನಾವರೀ
ಜೋಡೇ । ಹೇ ತೈಸೇ ನವ್ಹೇ ಫುಡೇ । ತ್ರಿಶುದ್ಧೀ ಗಾ ॥ ೧೬ ॥ ಜೈಕಾಹೀದೈವೇ । ಅನುಭವಿಲಿ
ಫಾವೆ । ತೈ ಆಪಣಚಿ ಹೇಠಾಕಾವೆ । ಹೋವುನಿಯಾ ॥ ೧೭ ॥ ಪುಢತೀ ಜಾಣಣೇ ತೇ ನಾಹೀಚಿ ।
ಮ್ಹಣೋನಿ ಅಸೋ ಕಿತೀ ಹೇಂಚಿ । ಬೋಲಾವೇ ಆತಾ ವಾಯಾಂಚಿ । ಧನುರ್ಧರಾ ॥ ೧೮ ॥ ಐಸೇ
ಶಬ್ದ ಜಾತ ಮಾಘಾರಾತೇ ಸರೇ । ತೇಥ ಸಂಕಲ್ಪಾತೇ ಆಯುಷ್ಯಪುರೇ । ವಾರಾಹೀ ಜೇಥ ನ ಶಿರೇ ।
ವಿಚಾರಾಚಾ ॥ ೧೯ ॥ ಜೇ ಉನ್ಮನಿಯೇಚೇಂ ಲಾವಣ್ಯ । ಜೇ ತುರ್ಯೇಚೇಂ ತಾರುಣ್ಯ । ಅನಾದಿ ಜೇ
ಅಗಣ್ಯ । ಪರಮತತ್ವ ॥ ೩೨೦ ॥ ಜೇ ವಿಶ್ವಾಚೇಂ ಮೂಳ । ಜೇ ಯೋಗದ್ರುಮಾಚೇಂ ಫಳ ।
ಜೇ ಆನಂದಾಚೇಂ ಕೇವಳ । ಚೈತನ್ಯಗಾ ॥ ೨೧ ॥ ಜೇ ಆಕಾರಾಚಾ ಪ್ರಾಂತ । ಜೋ ಮೋಕ್ಷಾಚಾ
ಏಕಾಂತ । ಜೇಥ ಆದಿ ಆಣಿ ಅಂತ । ವಿರೋನಿ ಗೇಲೆ ॥ ೨೨ ॥ ಜೇ ಮಹಾಭೂತಾಂಚೇಂ ಬೀಜ । ಜೇ
ಮಹಾ ತೇಜಾಚೇಂ ತೇಜ । ಏವಂ ಪಾರ್ಥಾ ಜೇ ನಿಜ । ಸ್ವರೂಪ ಮಾಝೇಂ ॥ ೨೩ ॥ ತೇಹೇ
ಚತುರ್ಭುಜ ಕೋಂಭೇಲೀ । ಜಯಾಚೀ ಶೋಭಾ ರೂಪಾಸಿ ಆಲೀ । ದೇಖೋನಿ ನಾಸ್ತಿಕೀನೋಕಿಲೀ ।
ಭಕ್ತವೃಂದೇ ॥ ೨೪ ॥ ತೇ ಅನಿರ್ವಾಚ್ಯ ಮಹಾ ಸುಖ । ಪೈ ಆಪಣಚಿ ಜಾಹಲೇ ಜೇ ಪುರುಷ ।
ಜಯಾಂಚೇ ಕಾ ನಿಷ್ಕರ್ಷ । ಪ್ರಾಪ್ತಿವೇರೀ ॥ ೨೫ ॥ ಆಮ್ಹೀ ಸಾಧನ ಹೇ ಜೇ ಸಾಂಗಿತಲೇಂ । ತೇಚಿ
ಶರೀರಾಚೇಹೀ ಕೇಲೇಂ । ತೇ ಆಮುಚೇನಿ ಪಾಡೇ ಆಲೇ । ನಿರ್ವಾಳಲೇಲ್ಯಾ ॥ ೨೬ ॥ ಪರಬ್ರಹ್ಮಾಚೇನಿ
ರಸೇ । ದೇಹಾಕೃತೀಚಿಯೇನಿ ಮುಸೇ । ಮೋತೀವ ಜಾಹಾಲೇ ತೈಸೇ । ದಿಸತಿ ಆಂಗೇ ॥ ೨೭ ॥ ಜರೀ
ಹೇ ಪ್ರತೀತಿ ಹನ ಅಂತರೀ ಫಾಂಕೇ । ತರೀ ವಿಶ್ವಚಿ ಹೇ ಆಘವೇ ಝಾಂಕೇ । ತವ ಅರ್ಜುನ ಮ್ಹಣೇ ನಿಕೇ ।
ಸಾಚಚಿ ಜೀ ಹೇ ॥ ೨೮ ॥ ಕಾ ಜೇ ಆಪಣ ಆತಾದೇವ । ಹಾ ಬೋಲಿಲೇ ಜೋ ಉಪಾವ । ತೋ
ಪ್ರಾಪ್ತೀಚಾ ಠಾವ । ಮ್ಹಣೋನಿ ಘಡೇ ॥ ೨೯ ॥ ಇಯೇ ಅಭ್ಯಾಸೀ ಜೇದೃಢ ಹೋತೀ । ತೇ ಭರವಸೇನಿ
ಬ್ರಹ್ಮತ್ವಾಯೇತೀ । ಹೇ ಸಾಂಗತಿಯಾಚಿ ರೀತೀ । ಕಳಲೇ ಮಜ ॥ ೩೩೦ ॥ ದೇವಾ ಗೋಠೀಚಿ ಹೇ
ಐಕತಾ । ಬೋಧ ಉಪಜತಸೇ ಚಿತ್ತಾ । ಮಾ ಅನುಭವೇ ತಲ್ಲೀನತಾ । ನೋಹೇಲ ಕೇವೀ ॥ ೩೧ ॥
ಮ್ಹಣವೂನಿ ಏಥಕಾಹೀ । ಅನಾರಿಸೇ ನಾಹೀ । ಪರೀ ನಾವಭರೀ ಚಿತ್ತ ದೇಈ । ಬೋಲಾ ಏಕಾ ॥ ೩೨ ॥
ಆತಾ ಕೃಷ್ಣಾ ತುವಾ ಸಾಂಗಿತಲಾ ಯೋಗ । ತೋ ಮನಾ ತರೀ ಆಲಾಚಾಂಗ । ಪರೀ ನ ಶಕೇಕರೂ
ಪಾಂಗ । ಯೋಗ್ಯತೇಚಾ ॥ ೩೩ ॥ ಸಹಜೇ ಆಂಗಿಕ ಜೇ ತುಲೇ ಆಹೇ । ತೇತುಲಯಾಚಿ ಜರೀ ಸಿದ್ಧಿ
ಜಾಯೇ । ತರೀ ಹಾಚಿ ಮಾರ್ಗ ಸುಖೋಪಾಯೇ । ಅಭ್ಯಾಸೀನ ॥ ೩೪ ॥ ನಾತರೀ ದೇವ ಜೈಸೇ
ಸಾಂಗತೀಲ । ತೈಸೇ ಆಪಣಪೇ ಜರೀ ನ ಠಕೇಲ । ತರೀ ಯೋಗ್ಯತೇವೀಣ ಹೋಈಲ । ತೇಚಿ
ಪುಸೋ ॥ ೩೫ ॥ ಜೀವೀಂಚೀ ಐಸೀ ಧಾರಣಾ । ಮ್ಹಣೋನಿ ಪುಸಾವಯಾ ಜಾಹಾಲೇ ಕಾರಣ । ಮಗ
ಮ್ಹಣೇ ತರೀ ಆಪಣ । ಚಿತ್ತ ದೇಇಜೋ ॥ ೩೬ ॥ ಹಾ ಹೋ ಜೇ ಅವಧಾರಿಲೇ । ಜೇ ಹೇ ಸಾಧನ
ತುಮ್ಹೀ ನಿರೂಪಿಲೇ । ತೇ ಆವಡತಯಾಹಿ ಅಭ್ಯಾಸಿಲೇ । ಫಾವ್ರೋ ಶಕೇ ॥ ೩೭ ॥ ಕೀ ಯೋಗ್ಯತೇ
ವೀಣ ನಾಹೀ । ಐಸೇ ಹನ ಆಹೇ ಕಾಹೀ । ತೇಥ ಶ್ರೀಕೃಷ್ಣ ಮ್ಹಣತೀ ಕಾಇ । ಧನುರ್ಧರಾ ॥ ೩೮ ॥

ಹೇ ಕಾಜ ಕೀರ ನಿರ್ವಾಣ । ಪರೀ ಆಣಿಕಹೀ ಜೇ ಕಾಹೀ ಸಾಧಾರಣ । ತೇಹೀ ಅಧಿಕಾರಾಚೇ ಪೋಡ ವೇವಿಣ । ಕಾಯಸಿದ್ಧೀಜಾಯ ॥ ೩೯ ॥ ಪೈ ಯೋಗ್ಯತಾ ಜೇ ಮ್ಹಣಿಜೇ । ತೇ ಪ್ರಾಪ್ತೀಚಿ ಅಧೀನ ಜಾಣಿಜೇ । ಕಾ ಜೇ ಯೋಗ್ಯ ಹೋವೂನಿ ಕೀಜೇ । ತೇ ಆರಂಭಿಲೆ ಫಳೇ ॥ ೩೪೦ ॥ ತರೀ ತೈಸೀ ಏಥ ಕಾಹೀ । ಸಾವಿಯಾಚಿ ಕೇಣೇನಾಹೀ । ಆಣಿ ಯೋಗ್ಯತೇಚಿ ಕಾಈ । ಖಾಣೀ ಅಸೇ ॥ ೪೧ ॥ ನಾವೇಕ ವಿರಕ್ತ । ಜಾಹಲಾ ದೇಹ ಧರ್ಮಿಂ ನಿಯತ । ತರೀ ತೋಚಿ ನವ್ಹೇ ವ್ಯವಸ್ಥಿತ । ಅಧಿಕಾರಿಯಾ ॥೪೨॥ ಯೇ ತುಲಾಲಿಯೇ ಆಯಣೀ ಮಾಜೀ ಯೇವಡೇ। ಯೋಗ್ಯಪಣ ತೂಕೇಂಹೀ ಜೋಡೇ। ಐಸೇ ಪ್ರಸಂಗೇ ಸಾಂಕಡೇ । ಫೇಡಿಲೇ ತಯಾಚೇ ॥ ೪೩ ॥ ಮಗ ಮ್ಹಣೇ ಪಾರ್ಥಾ । ತೇಹೇ ಐಸೀ ವ್ಯವಸ್ಥಾ । ಅ ನಿಯತಾಸಿ ಸರ್ವಥಾ । ಯೋಗ್ಯತಾನಾಹೀ ॥ ೪೪ ॥

**ಅರ್ಥ**— ನೋಡು ಯಾವಾಗ್ಗೆ ಶಕ್ತಿಯ ತೇಜವು ಇಲ್ಲದಂತಾಗುವದೋ, ಆಗ್ಗೆ ದೇಹದ ರೂಪವು ಅಡಗುತ್ತದೆ. ಆ ಯೋಗಿಯು ಬಹಳೇ ಸೂಕ್ಷ್ಮರೂಪವನ್ನು ಧರಿಸಿ ಜನರಿಗೆ ಕಾಣದಂತೆ ಆಗುತ್ತಾನೆ. ॥ ೯೩ ॥ ಆದರೆ ಆ ಶರೀರವು ಮೊದಲಿನಂತೆ ಸಾವಯುವವಿರುತ್ತದೆ. ಅದು ಕೇವಲ ವಾಯುವಿನಿಂದಲೇ ಆಗಿರುತ್ತದೆ. ॥ ೯೪ ॥ ಅಥವಾ ಬಾಳಿಯಗಿಡವನ್ನು ಸುಲಿಯುತ್ತ ಹೋದ ಹೋದ ಹಾಗೆಲ್ಲ ಅದು ಸಣ್ಣದಾಗುತ್ತ ಹೋಗುತ್ತದೆ. ಮೂಲವನ್ನು ನಿಲ್ಲಿಸಬೇಕೆಂದರೆ ಅದರಲ್ಲಿ ಏನೂ ಉಳಿಯುವದಿಲ್ಲ. ಅಥವಾ ಆಕಾಶಕ್ಕೆ ಅವಯುವಗಳು ಹುಟ್ಟುವಂತೆ ಅವನ ಅವಯುವಗಳು ಇದ್ದೂ ಇಲ್ಲದಂತೆ ಆಗುತ್ತವೆ. ॥ ೯೫ ॥ ಅದೇ ರೀತಿ ಶರೀರದ ಆಕಾರವು ಉಂಟಾದಮೇಲೆ ಆ ಶರೀರಿಗೆ ಆಕಾಶದಲ್ಲಿ ಸಂಚಾರ ಮಾಡುವವನು ಅಂತಾ ಅನ್ನುತ್ತಾರೆ. ಮತ್ತು ಈ ಪ್ರಕಾರ ಸ್ವರೂಪವಾಗುವದರಿಂದ ಅವನ ದೇಹವು ಜನರಲ್ಲಿ ಆಶ್ಚರ್ಯಕಾರಕವಾಗಿ ಕಾಣಿಸುತ್ತದೆ. ॥ ೯೬ ॥ ನೋಡು, ಯೋಗಸಾಧಕನು ನಡೆದುಹೋದ ಅವನ ಪ್ರತಿಯೊಂದು ಹೆಜ್ಜೆಯಲ್ಲಿ ಅಣಿಮಾದಿ ಸಿದ್ಧಿಗಳು ಕೈಜೋಡಿಸಿಕೊಂಡು ನಿಂತಿರುತ್ತವೆ. ॥ ೯೭ ॥ ಆದರೆ ಧನಂಜಯನೇ ಕೇಳು, ಆ ಅಣಿಮಾದಿ ಸಿದ್ಧಿಗಳಿಂದ ನಮಗೆ ಯಾವ ಪ್ರಯೋಜನವಿರುವದು? ಪೃಥ್ವಿ, ಆಪ, ತೇಜ, ಈ ಮೂರು ಭೂತಗಳು ದೇಹದಲ್ಲಿರುವವೋ ಅವು ದೇಹದಲ್ಲಿಯೇ ಲೋಪಹೊಂದುತ್ತವೆ. ॥ ೯೮ ॥ ನೀರು ಪೃಥ್ವಿಯನ್ನು ಕರಗಿಸುತ್ತದೆ. ಅಗ್ನಿಯು ನೀರನ್ನು ಆಟ್ಟಿಸುತ್ತದೆ. ಮತ್ತು ಹೃದಯದಲ್ಲಿ ವಾಯುವು ಅಗ್ನಿಯ ನಾಶಮಾಡುತ್ತದೆ. ॥೯೯॥ ಹಿಂದೆ ವಾಯುಮಾತ್ರ ಒಂದೇ ಉಳಿಯುತ್ತದೆ. ಅದು ಶರೀರದ ಆಕೃತಿಯಂತೆ ಇರುತ್ತದೆ. ಆದರೆ ಅದೂ ಸಹ ಕೆಲವು ಕಾಲದಲ್ಲಿ ಹೊರಟು ಬ್ರಹ್ಮರಂಧ್ರ ಆಕಾಶದಲ್ಲಿ ಹೋಗಿ ಕೂಡುತ್ತದೆ. ॥ ೩೦೦ ॥ ಆ ಕಾಲಕ್ಕೆ ಕುಂಡಲಿನಿ ಎಂಬ ಹೆಸರು ಹೋಗಿ ಕೇವಲ ಮರುತ್ (ವಾಯುಮಯ) ಎಂಬ ಹೆಸರು ಪ್ರಾಪ್ತವಾಗುತ್ತದೆ. ಆದರೆ ಅದು ಬ್ರಹ್ಮಕ್ಕೆ ಕೂಡುವವರೆಗೆ ಅದರ ಶಕ್ತಿಯು ಹಾಗೆಯೇ ಇರುತ್ತದೆ. ॥ ೩೦೧ ॥ ಆ ಮೇಲೆ ಆ ವಾಯು, ಜಾಲಂದರ ಬಂಧವನ್ನು ಬಿಟ್ಟುಕಾಕಿ ಮುಖ (ಕಂಠಸ್ಥಾನ) ವನ್ನು ಒಡೆದು ಬ್ರಹ್ಮರಂಧ್ರ ಆಕಾಶದ ದಿನ್ನೆಯನ್ನು ಪ್ರವೇಶಿಸುತ್ತದೆ. ॥ ೨ ॥ ಅದು ಓಂಕಾರದ ಬೆನ್ನುಮೇಲೆ ಕಾಲು ಇಟ್ಟು ಪಶ್ಯಂತಿವಾಚಾದ ಪಾವಟಿಗೆಗಳನ್ನು ಹಿಂದೆ ಹಾಕುತ್ತದೆ. ॥ ೩ ॥ ಮುಂದೆ ಓಂಕಾರದೊಳಗಿನ ಅರ್ಧವರ್ತುಲಾಕಾರ ಮಾತ್ರೆಯನ್ನು ಹಿಂದೆ ಹಾಕಿ ನದಿಯು ಸಮುದ್ರವನ್ನು ಸೇರುವಂತೆ ಅದು ಬ್ರಹ್ಮಾಕಾಶದಲ್ಲಿ ಹೋಗಿ ಕೂಡುತ್ತದೆ. ॥ ೪ ॥ ಆ ಮೇಲೆ ಮಸ್ತಕದ ಪೊಳ್ಳು ಪ್ರದೇಶದಲ್ಲಿ (ಬ್ರಹ್ಮರಂಧ್ರದಲ್ಲಿ) ಸ್ಥಿರವಾಗಿ ನಾನು ಬ್ರಹ್ಮಸ್ವರೂಪನಿದ್ದೇನೆಂಬ ಭಾವನೆಯಿಂದ ಬಾಹುಗಳನ್ನು ಪಸರಿಸಿ ಪರಬ್ರಹ್ಮಕ್ಕೆ ತೆಕ್ಕೆಬಿದ್ದು ಒಂದುಗೂಡುತ್ತದೆ. ॥ ೫ ॥ ಆ ಕಾಲಕ್ಕೆ ಪಂಚಮಹಾಭೂತಗಳ ಪರದೆಯು ಇಲ್ಲದಂತೆ ಆಗಿ ಶಿವಶಕ್ತಿಯು ಐಕ್ಯವಾಗುತ್ತದೆ. ಅಲ್ಲಿ ಅದು ಆಕಾಶ ಸಹಿತವಾಗಿ ಬ್ರಹ್ಮಾನಂದದಲ್ಲಿ ಕೂಡಿ ಹೋಗುತ್ತದೆ. ॥ ೬ ॥ ಯಾವ ಪ್ರಕಾರಾ ಸಮುದ್ರದ ನೀರು ಮೇಘಗಳ ದ್ವಾರದಿಂದ ಭೂಮಿಯ ಮೇಲೆ ಬಿದ್ದು ನದಿಯ ಮಾರ್ಗದಿಂದ ಪುನಃ ಸಮುದ್ರಕ್ಕೆ ಹೋಗಿ ಕೂಡುವಂತೆ ॥ ೭ ॥ ಅರ್ಜುನಾ! ದೇಹದ ನಿಮಿತ್ಯದಿಂದ ಬ್ರಹ್ಮಪದದಲ್ಲಿ ಜೀವಾತ್ಮನು ಪ್ರವೇಶಮಾಡುತ್ತಾನೆ. ಆ ಐಕ್ಯವು ಕೂಡ ಸಮುದ್ರದ ನೀರಿನಂತೆಯೇ ಆಗಿರುವದು. ॥ ೮ ॥ ಆ ಮೇಲೆ ನಾನು ಬೇರೆ, ಆತ್ಮನು ಬೇರೆ, ಅಥವಾ

ಎರಡೂ ಒಂದೇ ಅನ್ನುವ (ದ್ವೈತಾದ್ವೈತದ) ವಾದವು ಅಲ್ಲಿ ಉಳಿಯುವದೇ ಇಲ್ಲ. ॥ ೯ ॥ ಆಕಾಶವು ಆಕಾಶದಲ್ಲಿ ಕೂಡುತ್ತದೆಂಬ ಒಂದು ತತ್ವವಿರುತ್ತದೆ. ಆ ತತ್ವದ ಅನುಭವವನ್ನು ಯಾವನು ತೆಗಿದುಕೊಳ್ಳುತ್ತಾನೋ, ಅವನಿಗೆ ಸಿದ್ಧಿಯು ಪ್ರಾಪ್ತವಾಗುವದು. ॥ ೧೦ ॥ ಆದುದರಿಂದ ಯಾವ ಶಬ್ದಗಳಿಂದ ಅಲ್ಲಿಯ ಬೇಕಾದಂಥ ಮಾತನ್ನು ವ್ಯಕ್ತಪಡಿಸಲು ಬರುತ್ತದೆ ಅದೇ ಶಬ್ದಗಳಿಂದ ಅಲ್ಲಿಯ ಮಾತನ್ನು ವ್ಯಕ್ತಪಡಿಸಲಿಕ್ಕೆ ಬರುವದಿಲ್ಲ ॥ ೧೧ ॥ ಅರ್ಜುನನೇ! ನಿಜವಾಗಿ ನೋಡಿದರೆ ಅಭಿಪ್ರಾಯವನ್ನು ತಿಳಿಸುವ ವಿಷಯವಾಗಿ ಗರ್ವಹೊಂದಿದ ವೈಖರಿ ವಾಣಿಗೆ ಸಹಾ ಈ ಬ್ರಹ್ಮಸ್ಥಿತಿಯು ಗೊತ್ತಾಗುವದಿಲ್ಲ. ॥ ೧೨ ॥ ಹುಬ್ಬಗಳ ವಳಗಿನ ಭಾಗದಲ್ಲಿ ಮಕಾರದ ಪ್ರವೇಶವು ಕೂಡ ಆಗುವದಿಲ್ಲ, ಅದೇ ಪ್ರಕಾರ ಒಂದೇ ಪ್ರಾಣವಾಯುವಿಗೆ ಸಹ ಬ್ರಹ್ಮಾಕಾಶದಲ್ಲಿ ಹೋಗಲು ಸಂಕಟ ಬೀಳುತ್ತದೆ. ॥ ೧೩ ॥ ಮುಂದೆ ಆ ವಾಯು ಅಲ್ಲಿ ಪ್ರವೇಶಿಸಿದ ಮೇಲೆ ತದಾಕಾರವಾಗುತ್ತದೆ. ಆಗ್ಗೆ ಶಬ್ದಗಳಿಂದ ಮಾತಾಡುವದು ನಿಲ್ಲುತ್ತದೆ. ಆ ಮೇಲೆ ಆಕಾಶತತ್ವವಾದರೂ ಲಯ ಹೊಂದುತ್ತದೆ. ॥ ೧೪ ॥ ಅವ್ಯಕ್ತಸ್ಥಿತಿಯು ಮಡುವಿನಲ್ಲಿ ಮಹದಾಕಾಶದ ಗೊತ್ತುಸಹ ಹತ್ತುವದಿಲ್ಲವೋ, ಆ ಸ್ಥಳದಲ್ಲಿ ಈ ಶಬ್ದಗಳ ಪಾಡೇನು? ॥ ೧೫ ॥ ಆದುದರಿಂದ ಈ ಬ್ರಹ್ಮವು ಅಕ್ಷರದಲ್ಲಿ ಸಿಗುವಂತೆ (ವರ್ಣನಮಾಡಲು) ಅಥವಾ ಕೇಳಲಿಕ್ಕೆ ಬರುವಂತೆ ಇರುವದಿಲ್ಲ. ಈ ಭಾಷಣವು ತ್ರಿವಾರ ಸತ್ಯವೆಂದು ನಂಬು. ॥ ೧೬ ॥ ಯಾವಾಗ್ಯೆ ಏನೋ, ದೈವಗತಿಯಿಂದ ಇದರ ಅನುಭವ ಬಂದರೆ, ಅನುಭವಿಯು ತದ್ರೂಪವಾಗುವನು. ॥ ೧೭ ॥ ಆ ಮೇಲೆ ಅಲ್ಲಿಯ ಸ್ಥಿತಿಯನ್ನು ತಿಳಕೊಳ್ಳುವದು ತನ್ನಿಂದ ತಾನೇ ನಿಲ್ಲುತ್ತದೆ. ಆದುದರಿಂದ ಧನುರ್ಧರನೇ! ಈ ವಿಷಯವಾಗಿ ಎಷ್ಟು ಮಾತಾಡಿದರೂ ಅದು ವ್ಯರ್ಥವೇ ಸರಿ. ॥ ೧೮ ॥ ಹೀಗೆ ಎಲ್ಲ ಮಾತುಗಳು ತಾವಾಗಿಯೇ ನಿಲ್ಲುತ್ತವೆ. ಆ ಸ್ಥಳದಲ್ಲಿ ಸಂಕಲ್ಪದ ಆಯುಷ್ಯವು ಮುಗಿಯುತ್ತದೆ. ಅಲ್ಲಿ ವಿಚಾರದ ಆಟವು ಸಾಗುವದಿಲ್ಲ. ॥ ೧೯ ॥ ಆ ಬ್ರಹ್ಮವು ಸಹಜ ಸ್ಥಿತಿಯ ಸೌಂದರ್ಯವು, ಮತ್ತು ಸಮಾಧಿ ಅವಸ್ಥೆಯ ತಾರುಣ್ಯವು, ಮತ್ತು ಯಾವದಕ್ಕೆ ಆದಿ ಇರುವದಿಲ್ಲ. ಮತ್ತು ಅದನ್ನು ಅಳತೆಮಾಡಲಿಕ್ಕೆ ಬರುವದಿಲ್ಲ. ॥ ೨೦ ॥ ಅದು ವಿಶ್ವದ ಆಧಾರವೂ, ಮತ್ತು ಯೋಗರೂಪವೃಕ್ಷದ ಫಲವು, ಮತ್ತು ಆನಂದದ ಕೇವಲ ಜೀವನವೇ ಆಗಿರುವದು. ॥ ೨೧ ॥ ಅಲ್ಲಿ ಆಕಾಶವು ಮುಗಿಯುತ್ತದೆ. ಅಂದರೆ ಅದು ಮೋಕ್ಷದ ಕೇವಲ ಸ್ಥಿತಿ ಇದ್ದು ಅಲ್ಲಿ ಆದಿ, ಮತ್ತು ಅಂತ್ಯ, ಇವುಗಳ ಲಯವಾಗುತ್ತದೆ. ॥ ೨೨ ॥ ಆ ಬ್ರಹ್ಮವು ಪಂಚಮಹಾಭೂತಗಳ ಮೂಲ ಕಾರಣವು. ಮಹಾ ತೇಜದ ತೇಜವು ಅದೆ. (ಪರಪ್ರಕಾಶನಾದ ಸೂರ್ಯನಿಗೆ ಯಾವಸಿಂದ ಪ್ರಕಾಶ ಉಂಟಾಗಿರುವದೋ,) ಪಾರ್ಥನೇ! ಸಾರಾಂಶ ಆ ಬ್ರಹ್ಮವು ನನ್ನ ಮೂಲ ಸ್ವರೂಪವೇ ಅದೆ. ॥ ೨೩ ॥ ನಾಸ್ತಿಕರು ಯಾವಾಗ್ಗೆ ಸಾಧುವೃಂದದ ಛಲವನ್ನು ಮಾಡಿ ಬಾಧೆಪಡಿಸುವರೋ ಆಗ್ಗೆ ಇದೇ ಚತುರ್ಭುಜ ಮೂರ್ತಿಯು ಈ ಸ್ವರೂಪದಿಂದ ಆಕಾರಕ್ಕೆ ಬಂದಿರುವದು. ॥ ೨೪ ॥ ಅರ್ಜುನನೆ! ಇಂಥ ಮಹಾಸುಖವು ಅವರ್ಣನೀಯವಾಗಿರುವದು. ಅಂದರೆ (ಸಗುಣ ಮೂರ್ತಿಯ ಸಂಗತಿಯ) ಸುಖದ ಪ್ರಾಪ್ತಿಯು ಆಗುವವರೆಗೆ ಯಾವ ಪುರುಷನ ಪ್ರಯತ್ನಗಳು ಅವ್ಯಾಹತವಾಗಿ ನಡೆದಿರುತ್ತವೆಯೋ, ಅವನು ಸ್ವಯಮೇವ ಸುಖಿಯಾಗುವನು. ॥ ೨೫ ॥ ನಾವು ಈಗ ಯಾವ ಅಷ್ಟಾಂಗಯೋಗವನ್ನು ಹೇಳಿದೆವೋ, ಅದನ್ನು ಯಾರು ಸ್ವತಃ ಮಾಡುವರೋ, ಅವರು ಯೋಗದಿಂದ ಪೂರ್ಣರೂ ಮತ್ತು ನಂನ ಯೋಗ್ಯತೆಯವರೇ ಸರಿ. ॥ ೨೬ ॥ ಆ ಯೋಗಿಗಳ ದೇಹವು ಪರಬ್ರಹ್ಮರಸದಿಂದ ದೇಹಾಕೃತಿಯ ಮುಸಿಯಲ್ಲಿ ಸುರವಿ ತೆಗೆದಂತೆ ಸತೇಜವಾಗಿ ಕಾಣುತ್ತದೆ ॥ ೨೭ ॥ ಈ ಅನುಭವವು ಅಂತರ್ಯಾಮಿ ಹುಟ್ಟಿದ್ದಾದರೆ ಅವನಿಗೆ ಎಲ್ಲ ವಿಶ್ವವು ಮುಳುಗುತ್ತದೆ. ಆಗ್ಗೆ ಅರ್ಜುನನು ಅನ್ನುತ್ತಾನೆ ತಾವು ಹೇಳುವದು ಸತ್ಯವಿದೆ. ॥ ೨೮ ॥ ದೇವಾ! ತಾವು ಈಗ ಯಾವ ಉಪಾಯವನ್ನು ಹೇಳಿದಿರಿ ಅದು ಬ್ರಹ್ಮಪ್ರಾಪ್ತಿಯ ಸ್ಥಳವಿರುವದರಿಂದಲೇ ಅಲ್ಲಿ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. ॥ ೨೯ ॥ ನೀವು ಯಾವ ಈ ಮಾರ್ಗವನ್ನು ಹೇಳಿದಿರಿ ಆ ಮಾರ್ಗದ ದೃಢವಾದ ಅಭ್ಯಾಸಮಾಡುವವರು ನಿಜವಾಗಿ ಬ್ರಹ್ಮಪದಕ್ಕೆ ಮುಟ್ಟುತ್ತಾರೆಂಬದನ್ನು ನೀವು ಹೇಳುವದರಿಂದ ನನಗೆ ಗೊತ್ತಾಯಿತು ॥ ೩೦ ॥ ದೇವಾ! ನೀವು ಹೇಳಿದ ಮಾತು ಕೇಳುತ್ತಿರುವಾಗಲೇ ಚಿತ್ತದಲ್ಲಿ ಜ್ಞಾನವಾಗುತ್ತದೆ. ಆದರೆ ಅದರ ಅನುಭವನ್ನು ತೆಗೆದುಕೊಳ್ಳುವವರಿಗೆ ತದ್ರೂಪತೆಯು ಹ್ಯಾಗೆ ಪ್ರಾಪ್ತವಾಗಲಿಕ್ಕಿಲ್ಲ? ॥ ೩೧ ॥ ಆದರೆ ನೀವು ಹೇಳಿದ್ದರಲ್ಲಿ ಏನೂ ಸಂಶಯವಿರುವದಿಲ್ಲ ದೇವಾ! ನನ್ನ ವಿನಂತಿ ಕಡೆಗೆ ಕ್ಷಣ

ಹೊತ್ತು ಲಕ್ಷಪೂರೈಸಬೇಕು. ॥ ೩೨ ॥ ಕೃಷ್ಣಾ ! ಈಗ ನೀವು ಹೇಳಿದ ಯೋಗವು ನಂನ ಮನಸಿಗೆ ಸಂದೋರಿತು. ಆದರೆ ನನ್ನ ಯೋಗ್ಯತೆಯು ಕಡಿಮೆ ಇದ್ದದರಿಂದ ನಂನ ಕಡೆಯಿಂದ ಅದು ಸಾಧ್ಯವಾಗಲಿಕ್ಕಿಲ್ಲ. ॥ ೩೩ ॥ ನಂನಲ್ಲಿ ಎಷ್ಟು ಶಕ್ತಿ ಇರುವದೋ ಅದನ್ನೆಲ್ಲ ಉಪಯೋಗಿಸಿದರೂ, ಅದು ಕೊನೆಗಾಣುವಂತೆ ಇದ್ದರೆ ನಾನು ಬಹಳೇ ಸವಾಧಾನದಿಂದ ಯೋಗಾಭ್ಯಾಸವನ್ನು ಮಾಡುವೆನು. ॥ ೩೪ ॥ ಅಥವಾ ದೇವಾ ! ತಾವು ಹೇಳಿದಂತೆ ಮಾಡುವದು ನಂನ ಕಡೆಯಿಂದಾಗದಿದ್ದರೆ ನಂನ ಯೋಗ್ಯತೆಯ ಮೇಲಿಂದಾ ನನಗೆ ಸಾಧ್ಯವಿದ್ದ ಮಾತನ್ನೇ ಹೇಳಬೇಕು . ೩೫ ॥ ಹೀಗೆ ನನ್ನ ಮನಸಿನಲ್ಲಿ ಅಪೇಕ್ಷೆಯು ಉಂಟಾದುದರಿಂದ ತನುಗೆ ಕೇಳುವ ಕಾರಣ ಉಂಟಾಯಿತು. ಆದರೆ ದೇವಾ ! ತಾವು ಇತ್ತಕಡೆಗೆ ಲಕ್ಷಕೊಡಬೇಕು. ॥ ೩೬ ॥ ಮಹಾರಾಜ ! ತಾವು ಈಗ ಯಾವ ಯೋಗಸಾಧನೆಯನ್ನು ಹೇಳಿದಿರಿ ಅದನ್ನು ಕೇಳಿದೆನು. ಆದರೆ ಪಾಮರನಾದ ನನಗೆ, ಅಥವಾ ಬೇಕಾದವರು ಸಹ ಅಭ್ಯಾಸಮಾಡಿದರೂ, ಯೋಗವು ಲಭಿಸುವದೇ ಹೇಗೆ ? ॥ ೩೭ ॥ ಅಥವಾ ಯೋಗ್ಯತೆಯು ಹೊರ್ತು ಆಗುವದೇ ಇಲ್ಲೆಂಬದು ನಿಜವೋ ಹೇಗೆ ? ಆಗ್ಗೆ ಶ್ರೀಕೃಷ್ಣನು ಅನ್ನುತ್ತಾನೆ. ಪಾರ್ಥಾ ! ಇದನ್ನು ನೀನು ಏನು ಕೇಳುತ್ತಿರುವಿ ? ॥ ೩೮ ॥ ಈ ಯೋಗಾಭ್ಯಾಸದ ಕಾರ್ಯವು ನಿಶ್ಚಯವಾಗಿ ಮೋಕ್ಷ ಕೊಡುವಂಥದ್ದಾಗಿರುವದು. ಆದರೆ ಸಾಧಾರಣ ಕೆಲಸವಿದ್ದರೆ ಅದೂ ಸಹ ಅಧಿಕಾರದ ಯೋಗ್ಯತೆಯ ಹೊರ್ತು ಸಿದ್ಧಿಗೆ ಹೋಗುವದೇನು ? ॥ ೩೯ ॥ ಆದರೆ ಯೋಗ್ಯತೆ ಎಂದು ಯಾವದಕ್ಕೆ ಅನ್ನುತ್ತಾರೆ. ಅದರ ಪ್ರಾಪ್ತಿಯಾಗುವ ಪೂರ್ವದಲ್ಲಿ ತಿಳಿಯುವದಿಲ್ಲ. ಮೊದಲು ತಾನು ಅಧಿಕಾರಿಯಾಗಿ ಪ್ರಾರಂಭಮಾಡಿದ ಕೆಲಸವು ತತ್ಕಾಲವೇ ಫಲದ್ರೂಪವಾಗುತ್ತದೆ. ॥ ೪೦ ॥ ಆದರೆ ಇಂಥ ಯೋಗ್ಯತೆಯು ಸಹಜವೇ ಸಂತೆಯಲ್ಲಿ ( ಮಾರಲಿಕ್ಕೆ) ಸಿಗುವ ವಸ್ತು ಇರುವದಿಲ್ಲ. ಮತ್ತು ಯೋಗ್ಯ ಪುರುಷರ ಖಣಿಯೇ ಇರುವದೇನು ? ॥ ೪೧ ॥ ಸ್ವಲ್ಪ ವಿರಕ್ತನಿದ್ದು ವಿಹಿತ ಧರ್ಮದಲ್ಲಿ ಯಾವನು ನಿರತನಾಗಿರುವನೋ, ಅವನೇ ಈ ಕೆಲಸದಲ್ಲಿ ಯೋಗ್ಯವ್ಯವಸ್ಥಿತ ಅಧಿಕಾರಿಯಾಗಿರುವನು. ॥ ೪೨ ॥ ಇದೇ ಯುಕ್ತಿಯಿಂದ ಇಂಥ ಯೋಗ್ಯತೆಯ ಅಧಿಕಾರವು ನಿನಗೂ ಪ್ರಾಪ್ತವಾದೀತು. ( ಶ್ರೀ ಜ್ಞಾನೇಶ್ವರರು ಅನ್ನುತ್ತಾರೆ. ) ಈ ಪ್ರಕಾರದ ( ಅರ್ಜುನನ ) ಸಂಶಯವನ್ನು ಭಗವಾನ್ ಶ್ರೀಕೃಷ್ಣನು ಸಹಜವೇ ಇಲ್ಲದಂತೆ ಮಾಡಿದನು. ॥ ೪೩ ॥ ಆ ಮೇಲೆ ಶ್ರೀಕೃಷ್ಣನು ಅನ್ನುತ್ತಾನೆ. ಪಾರ್ಥಾ ಅವರ ರೀತಿಯು ಹೇಗಿರುವದೆಂದರೆ ಇಂದ್ರಿಯಾಧೀನನಾದ ಪುರುಷನಿಗೆ ಮೂಲತ: ಅಯೋಗ್ಯತೆಯು ಎಂದಿಗೂ ಜರುವದಿಲ್ಲ. ॥ ೪೪ ॥

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

**[ ನಾತ್ಯಶ್ನತಸ್ತು ಯೋಗೋಸ್ತೀತಿ ]** ಜೋ ರಸನೇಂದ್ರಿಯಾಚಾ ಅಂಕಿಲಾ । ಕಾ ನಿದ್ರೇಸಿ ಜೀವೇ ವಿಕಲಾ । ತೋ ನಾಹೀ ಏಥ ಮ್ಹಣಿತಲಾ । ಅಧಿಕಾರಿಯಾ ॥ ೪೫ ॥ ಅಥವಾ ಆಗ್ರಹಾಚಿಯೇ ಬಾಂದೋಡೀ । ಕ್ಷುಧಾ ತೃಷಾ ಕೋಂಡೀ । ಆಹಾರಾತೇ ತೋಡೀ । ಮಾರೂನಿಯಾ ॥ ೪೬ ॥ ನಿದ್ರೇಚಿಯಾ ವಾಟಾ ನ ವಚೇ । ಐಸಾದೃಢಿವೇಚೇನಿ ಅವತರಣೀ ನಾಚೇ । ತೇ ಶರೀರಚಿ ನವ್ಹೇ ತಯಾಚೇ । ಮಗ ಯೋಗ ಕವಣಾಚಾ ॥ ೪೭ ॥ ಮ್ಹಣೋನಿ ಅತಿಶಯೇ ವಿಷಯಸೇವಾವಾ । ಐಸಾ ಬೋಧ ನೋಹಾವಾ । ಕಾ ಸರ್ವಥಾ ನಿರೋಧಾವಾ । ಹೇಹೀ ನಕೋ ॥ ೪೮ ॥

**ಅರ್ಥ**-- ಯಾವನು ರಸನೇಂದ್ರಿಯ ಅಧೀನನೂ ಸದಾ ನಿದ್ರಾಪ್ರಿಯನಿರುವನೋ, ಅವನು ಯೋಗಾಭ್ಯಾಸ ಮಾಡಲು ಅನಧಿಕಾರಿಯಾಗಿರುವನು. ॥ ೪೫ ॥ ಯಾವನು ದುರಾಗ್ರಹದ ಆವೇಶದಲ್ಲಿ ಹಸಿವೆ ನೀರಡಿಕೆಗಳನ್ನು ಪ್ರತಿಬಂಧಿಸಿ ಆಹಾರವನ್ನು ಕಡಿಮೆ ಮಾಡುವನೋ, ॥ ೪೬ ॥ ಮತ್ತು ಬಲವತ್ತರವಾದ ಅಭಿಮಾನದಿಂದ ಯುಕ್ತನಾಗಿ ನಿದ್ದೆಯ ಹಾದಿಗೆ ಹೋಗುವದಿಲ್ಲವೋ, ಅವನ ಶರೀರವು ಸಹಾ ಅಧೀನ ಉಳಿಯುವದಿಲ್ಲ. ಅಂಥವನಿಗೆ ಯೋಗವು ಹ್ಯಾಗೆ ಸಾಧ್ಯವಾದೀತು ? ॥ ೪೭ ॥ ಆದುದರಿಂದ ಅತಿಶಯವಾಗಿ ವಿಷಯಸೇವನೆ ಮಾಡುವದು ಅಥವಾ ಸರ್ವಥಾ ಬಿಟ್ಟುಬಿಡಬೇಕೆಂಬ ಬುದ್ಧಿಯೂ ಇರಬಾರದು. ಆದರೆ ಸರ್ವ ಮಾತುಗಳು ನಿಯಮಿತವಾಗಿರಬೇಕು. ॥ ೪೮ ॥

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥ ೧೭ ॥**

**[ ಯುಕ್ತಾಹಾರವಿಹಾರಸ್ಯೇತಿ ]** ಆಹಾರ ತರೀ ಸೇವಿಜೇ । ಪರೀ ಯುಕ್ತೀಚೇನಿ ಮಾಪೇ ಮವಿಜೇ । ಕ್ರಿಯಾಜಾತ ಆಚರಿಜೇ । ತಯಾಚಿ ಸ್ಥಿತೀ ॥ ೪೯ ॥ ಮಾಪಿತಲಾ ಬೋಲ ಬೋಲಿಜೇ । ಮಿತಲಿಯಾ ಪಾವುಲೀ ಚಾಲಿಜೇ । ನಿದ್ರೇಹೀ ಮಾನ ದೀಜೇ । ಅವಸರೀ ಏಕೇ ॥ ೩೫೦ ॥ ಜಾಗಣೇ ಜರೀ ಜಾಹಾಲೇ । ತರೀ ವ್ಹಾವೇತೇ ಮಿತಲೇ । ಯೇತುಲೇನಿಧಾತು ಸಾಮ್ಯ ಸಂಚಲೇ । ಅಸೇಲ ಸುಖ ॥ ೫೧ ॥ ಐಸೇ ಯುಕ್ತೀಚೇನಿ ಹಾತೇ । ಜೈ ಇಂದ್ರಿಯಾ ವೋಪಿಜೇ ಭಾತೇ । ತೈ ಸಂತೋಷಾಸೀ ವಾಢತೇ । ಮನಚಿ ಕರೀ ॥ ೫೨ ॥

**ಅರ್ಥ—** ಅನ್ನವನ್ನಾದರೂ ಸೇವನ ಮಾಡಬೇಕು. ಅದು ಯುಕ್ತಿ ಪ್ರಯುಕ್ತಿಯಿಂದ ಪರಿಮಿತವಾಗಿ ಮಾಡಬೇಕು. ಅದೇ ಪ್ರಕಾರಾ ಮಿಕ್ಕುಳಿದ ಕ್ರಿಯಾದಿಗಳನ್ನಾದರೂ ( ನೇಮಕ್ಕನುಸರಿಸಿ ) ಮಾಡಬೇಕು. ॥೩೪೯॥ ಮಿತವಾಗಿ ಮಾತಾಡಬೇಕು. ನಿಯಮಿತವಾದ ಪಾದಗಳಿಂದ ನಡಿಯಬೇಕು. ನಿದ್ದೆಯನ್ನಾದರೂ, ನಿಯಮಿತ ಕಾಲದಲ್ಲಿಯೇ ಮಾಡಬೇಕು. ॥ ೩೫೦ ॥ ಜಾಗ್ರತೆ ಇರುವದಾದರೂ ಪರಿಮಿತವಾದದ್ದಿರಬೇಕು. ಇಷ್ಟರಿಂದಲೆ ಅನಾಯಾಸದಿಂದ ಕಫವಾತಾದಿಸರ್ವಧಾತುಗಳು ಸಮಾನತ್ವದಿಂದ ಉಳಿಯುವವು. ॥ ೩೫೧ ॥ ಈರೀತಿ ನಿಯಮಿತತನದ ದ್ವಾರದಿಂದ ಇಂದ್ರಿಯಗಳಿಗೆ ವಿಷಯವನ್ನು ದೊರಕಿಸಿಕೊಡುವದರಿಂದ ಮನಸ್ಸೇ ಸಂತೋಷವನ್ನು ಬೆಳಿಸುತ್ತದೆ. ॥ ೩೫೨॥

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇತದಾ ॥ ೧೮ ॥**

**[ ಯದಾ ವಿನಿಯತ ಮಿತಿ ]** ಬಾಹೇರ ಯುಕ್ತೀಚೀ ಮುದ್ರಾಪಡೇ । ತವ ಆಂತ ಆಂತ ಸುಖವಾಢೇ । ತೇಥೇ ಸಹಜೇಂಚಿ ಯೋಗ ಘಡೇ । ನಾಭ್ಯಾಸಿತಾ ॥ ೫೩ ॥ ಜೈಸೇ ಭಾಗ್ಯಾಚಿಯೇ ಭಡಸೇ । ಉದ್ಯಮಾಚೇನಿ ಮಿಷೇ । ಮಗ ಸಮೃದ್ಧಿ ಜಾತ ಆಪೈಸೇ । ಘರರಿಘೇ ॥ ೫೪ ॥ ತೈಸೇ ಯುಕ್ತಿಮಂತ ಕೌತುಕೇ । ಅಭ್ಯಾಸಾಚಿಯಾ ಮೋಹರಾ ಠಾಕೇ । ಆಣಿ ಆತ್ಮಸಿದ್ಧೀಚೇ ಪಿಕೇ । ಅನುಭವ ತಯಾಚಾ ॥ ೫೫ ॥ ಮ್ಹಣೋನಿ ಯುಕ್ತಿ ಹೇ ಪಾಂಡವಾ । ಘಡೇ ಜಯಾ ಸದೈವಾ । ತೋ ಅಪವರ್ಗೀಚಿಯೇ ರಾಣಿವಾ । ಅಳಂಕರಿಜೇ ॥ ೫೬ ॥

**ಅರ್ಥ—** ಈ ಪ್ರಕಾರಾ ಬಾಹೇಂದ್ರಿಯಗಳ ಸ್ಥಿತಿ ನಿಯಮಿತವಾಗಿಡುವದರಿಂದ ಅಂತರ್ಯಾಮಿ ಸುಖವು ಉಂಟಾಗಿ ಆ ಮನುಷ್ಯನಿಗೆ ಅಭ್ಯಾಸದಕಷ್ಟವುಆಗದೇ ಯೋಗಾಭ್ಯಾಸವುಸಹಜವೇ ಸಾಧಿಸುತ್ತದೆ. ॥ ೫೩ ॥ ಯಾವ ಪ್ರಕಾರಾ ಭಾಗ್ಯೋದಯವಾಗಿರಲು ಆ ಮೇಲೆ ಉದ್ಯೋಗದ ನಿಮಿತ್ಯದಿಂದ ಸಕಲೈಶ್ವರ್ಯಗಳು ತನ್ನಿಂದ ತಾನೇಮನೆಗೆನಡೆದು ಬರುವಂತೆ, ॥ ೫೪ ॥ ನಿಯಮದಿಂದನಡಿಯುವಮನುಷ್ಯನು ಕೌತುಕದಿಂದಲಾದರೂ ಯೋಗಾಭ್ಯಾಸದಕಡೆಗೆಮೋರೆ ತಿರುವಿದರೆ, ಅವನಿಗೆಆತ್ಮಸ್ಥಿತಿಯಅನುಭವವುಬರುತ್ತದೆ. ॥ ೫೫ ॥ ಆದುದರಿಂದ ಅರ್ಜುನನೇ ! ಯಾವ ಭಾಗ್ಯಶಾಲಿ ಮನುಷ್ಯನಿಗೆ ಈ ಯುಕ್ತಿಯ ಸಹಾಯವು ದೊರಕುತ್ತದೆ. ಅವನು ಮೋಕ್ಷದ ರಾಜ್ಯದ ಮೇಲೆ ಶೋಭೆವಂತನಾಗುತ್ತಾನೆ. ॥ ೩೫೬ ॥

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥ ೧೯ ॥**

**[ ಯಥೇತಿ ]** ಯುಕ್ತಿ ಯೋಗಾಚೇ ಆಂಗ ಪಾವೇ । ಐಸೇ ಪ್ರಯಾಗ ಜೇಥ ಹೋಯ ಬರವೇ । ತೇಥ ಕ್ಷೇತ್ರ ಸಂನ್ಯಾಸೇ ಸ್ಥಿರಾವೇ । ಮಾನಸ ಜಯಾಚೇ ॥ ೫೭ ॥ ತಯಾತೇ ಯೋಗ

ಯುಕ್ತ ತೂಮ್ಹಣ । ಹೇಹೀ ಪ್ರಸಂಗೇ ಜಾಣ । ತೇದೀಪಾಚೇ ಉಪಲಕ್ಷಣ । ನಿರ್ವಾತೀಂಚಿಯಾ ॥ ೫೮ ॥ ಆತಾ ತುಝ್ಯೆ ಮನೋಗತ ಜಾಣೋನೀ । ಕಾಹೀ ಏಕ ಆಮ್ಹೀ ಮ್ಹಣೋನೀ । ತೇ ನಿಕೇ ಚಿತ್ತ ದೇವುನೀ । ಪರಿಸಾವೇಗಾ ॥ ೫೯ ॥ ತೂ ಪ್ರಾಪ್ತೀಚೀ ಚಾಡ ವಾಹಸೀ । ಪರೀ ಅಭ್ಯಾಸೀ ದಕ್ಷ ನ ಹೋಸೀ । ತೇ ಸಾಂಗಪಾ ಕಾಯ ಬಿಹಸೀ । ದುವಾಡಪಣೇ ॥ ೬೦ ॥ ತರೀ ಪಾರ್ಥ ಹೇ ಝುಣೇ । ಸಾಯಾಸ ಘೇಶೀ ಹೋಮನೇ । ವಾಯಾ ಬಾಗೂಲ ಇಯೇ ದುರ್ಜನೇ । ಇಂದ್ರಿಯೇ ಕರಿತೀ ॥ ೬೧ ॥ ಪಾಹೇ ಪಾ ಆಯುಷ್ಯಾತೇ ಅಢಳ ಕರಿ । ಜೇ ಸರತೇ ಜೀವಿತ ವಾರೀ । ತಯಾ ಔಷಧಾತೇ ವೈರೀ । ಕಾಯ ಜಿವ್ಹಾ ನ ಮ್ಹಣೇ ॥ ೬೨ ॥ ಐಸೇ ಹಿತಾಸಿ ಜೇಜೇ ನಿಕೇ । ತೇ ಸದಾಚಿ ಯಾ ಇಂದ್ರಿಯಾ ದುಖೇ । ಯೇರ್ಹವೀ ಸೋಪೇ ಯೋಗಾಸಾರಿಖೇ । ಕಾಹೀ ಆಹೇ ॥ ೬೩ ॥

**ಅರ್ಥ—** ನಿಯಮಿತದಿಂದ ನಡೆಯುವವನಿಗೆ ಒಂದು ವೇಳೆ ಯೋಗಾಭ್ಯಾಸ ಮಾಡುವ ಅಪೇಕ್ಷೆ ಉಂಟಾದರೆ ಆ ಯೋಗವು ಗಂಗಾ, ಮತ್ತು ಯಮುನಾ, ನದಿಗಳ ಸಂಗಮವಾದ ಪ್ರಯಾಗ ತೀರ್ಥದಂತೆ ಇರುತ್ತದೆ. ಆ ಆತ್ಮಸ್ವರೂಪದ ಪ್ರಯಾಗ ತೀರ್ಥದ ಸ್ಥಳದಲ್ಲಿ ಯಾವ ಮನುಷ್ಯನ ಮನಸ್ಸು ಕ್ಷೇತ್ರ ಸನ್ಯಾಸಿಯಂತೆ ಸ್ಥಿರವಾಗಿ ಉಳಿಯುತ್ತದೆ, ॥ ೩೫೭ ॥ ಅದೇ ಮನುಷ್ಯನಿಗೆ ನೀನು ಯೋಗಿ ಎಂದು ತಿಳಿ. ಮತ್ತು ಪ್ರಸಂಗಾನುಸಾರವಾಗಿ ಇದನ್ನಾದರೂ ಲಕ್ಷದಲ್ಲಿಡು. ಗಾಳಿಇಲ್ಲದಂಥ ಸ್ಥಳದಲ್ಲಿಯ ಹೊಯ್ದಾಡದಿರುವ ದೀವಿಗೆಯಂತೆ ಆ ಪುರುಷನ ಮನದ ಸ್ಥಿತಿಯು ನಿಶ್ಚಲವೂ ಶಾಂತವೂ, ಆಗಿರುವದು. ॥ ೩೫೮ ॥ ಈಗ ನಿನ್ನ ಮನಸ್ಸಿನಲ್ಲಿಯ ಭಾವವನ್ನು ತಿಳಿದು ನಾನು ನಿನಗೆ ಕೆಲವು ಮಾತುಗಳನ್ನು ಹೇಳುತ್ತೇನೆ. ಅವನ್ನು ಚಿತ್ತಕೊಟ್ಟು ಕೇಳು. ॥ ೩೫೯ ॥ ನೀನು ನಿನ್ನ ಮನಸಿನಲ್ಲಿ ಯೋಗಪ್ರಾಪ್ತಿಯ ಅಪೇಕ್ಷೆಯನ್ನಂತೂ ಮಾಡುತ್ತೀ, ಆದರೆ ಅದರ ಅಭ್ಯಾಸದ ಕಡೆಗೆ ನಿನ್ನ ಲಕ್ಷವಿರುವದಿಲ್ಲ, ಆದರೆ ಆ ಅಭ್ಯಾಸವು ಕಠಿಣವಿರುವದೆಂದು ನಿನ್ನ ಮನಸ್ಸಿನಲ್ಲಿ ಭೀತಿ ಉಂಟಾಗಿರುವದೇನು ? ಅದನ್ನು ನನಗೆ ಹೇಳು. । ೩೬ ॥ ಆದರೆ ಅರ್ಜುನನೇ ! ಇದರಲ್ಲಿ ಕಷ್ಟ ಇರುವದೆಂದು ಹೀಗೆ ನಿನ್ನ ಮನಸ್ಸಿನ ಗ್ರಹವು ಅಕಸ್ಮಾತ್ ಆಗಬಹುದು. ಆದರೆ ಹಾಗೆ ನಿನ್ನ ಮನಸ್ಸಿನಲ್ಲಿ ಭಾವನೆಯನ್ನು ತರಬೇಡ ಕಂಡಿಯಾ ! ಈ ದುಷ್ಟ ಇಂದ್ರಿಯಗಳು ಸುಮ್ಮಸುಮ್ಮನೆ ಈ ಅಭ್ಯಾಸ ಮಾಡುವವರಿಗೆ ಭಯವನ್ನುಂಟು ಮಾಡುತ್ತವೆ. ॥ ೩೬೧ ॥ ಹೀಗೆ ನೋಡು, ಆಯುಷ್ಯವನ್ನು ಸ್ಥಿರ ಮಾಡುವಂಥ ಮತ್ತು ಆಯುಷ್ಯದ ಮರ್ಯಾದೆಯು ಮುಗಿದು ಹೋದ ಜೀವಿತವನ್ನು ಹಿಂದಕ್ಕೆ ತಿರುಗಿಸಿ ( ಮೃತ್ಯುವಿನಿಂದ ತಪ್ಪಿಸುವಂಥ ) ಆ ದಿವ್ಯವಾದ ಔಷಧಕ್ಕೆ ಸಹ ಆ ನಾಲಿಗೆಯು ಶತ್ರುವಿನಂತೆ ತಿಳಿಯುವದಿಲ್ಲವೇನು ? ॥ ೩೬೨ ॥ ಅದೇ ಪ್ರಕಾರ ಪರಲೋಕದಲ್ಲಿ ಯಾವದು ಉತ್ತಮ ಹಿತಕರವಾಗಿರುವದೋ, ಅದು ಯಾವಾಗಲೂ ಈ ದುಷ್ಟ ಇಂದ್ರಿಯಗಳಿಗೆ ದುಃಖದಾಯಕವಾಗಿಯೇ ಕಂಡು ಬರುತ್ತದೆ. ಆದರೆ ಯೋಗ ಸಾಧನದಂಥ ಸುಲಭ ಸಾಧನವು ಏನಾದರೂ ದೊರಕುವದುಂಟೇ ? ॥ ೩೬೩ ॥

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**
**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**

[ **ಯತ್ರೋಪರಮತೇ ಚಿತ್ತಮಿತಿ** ] ಮ್ಹಣೋನಿ ಆಸನಾಚಿಯಾ ಗಾಢಿಕಾ । ಜೋ ಆಮ್ಹೀ ಅಭ್ಯಾಸ ಸಾಂಗಿತಲಾ ನಿಕಾ । ತೇಣೇ ಹೋಈಲ ತರೀ ಹೋಕಾ । ನಿರೋಧ ಯಯಾ ॥ ೬೪ ॥ ಯೇರವ್ಹೀ ತರೀ ಯೇಣೇ ಯೋಗೇ । ಜೈ ಇಂದ್ರಿಯಾ ವಿಂದಾಣ ಲಾಗೇ । ತೈ ಚಿತ್ತ ಭೇಟೋ ರಿಗೇ ।

ಆಪಣ ಪೇಯಾ ॥ ೬೫ ॥ ಪರತೋನಿ ಪಾಠೀ ಮೋರೇ ಠಾಕೇ ॥ ಆಣಿ ಆಪಣಿಯಾತೇ ಆಪಣ ದೇಖೇ ।
ದೇಖತ ಖೀವೋ ಪೋಳಖೇ । ಪ್ನಣೇ ತತ್ವ ಹೇ ಮೀ ॥ ೬೬ ॥ ತಿಯೇ ವೋಳಖೀಚಿ ಸರಿಸೇ ।
ಸುಖಾಚಿಯಾ ಸಾಮ್ರಾಜ್ಯೀ ಬೈಸೇ । ಮಗ ಆಪಣಪಾ ಸಮರಸೇ । ವಿರೋನಿ ಜಾಯ ॥ ೬೭ ॥ ಜಯಾ
ಪರತೇ ಆಣಿಕ ನಾಹೀ । ಜಯಾತೇ ಇಂದ್ರಿಯೇ ನೇಣತೀ ಕಾಹೀ । ತೇ ಆಪಣಚಿ ಆಪುಲಿಯಾ ಠಾಯೀ ।
ಹೋವುನಿ ಠಾಕೇ ॥ ೬೮ ॥

**ಅರ್ಥ:—** ಆದರೆ ಆಸನಬಲದಿಂದ ಪ್ರಾರಂಭಮಾಡಿ ನಿನಗೆ ಶ್ರೇಷ್ಠವಾದ ಯೋಗಾಭ್ಯಾಸವನ್ನು ಹೇಳಿರುವೆನು. ಆ ಯೋಗದಿಂದಲೇ ಈ ಇಂದ್ರಿಯಗಳ ನಿರೋಧವು ಆದರೆ ಆಗಬಹುದು ॥ ೩೬೪ ॥ ಇಲ್ಲದಿದ್ದರೆ ಈ ಯೋಗಸಾಧನ ದಿಂದ ಇಂದ್ರಿಯಗಳಿಗೆ ಯಾವಾಗ್ಗೆ ವೇಧಹತ್ತುವದೋ ಆಗ್ಗೆ ತನ್ನಿಂದ ತಾನೇ ಚಿತ್ತವು ಆತ್ಮದರ್ಶನದೆಶೆಯಿಂದ ಹೊರಡುತ್ತದೆ. ॥ ೬೫ ॥ ಚಿತ್ತದ ಧಾವನೆಯು ಯಾವಾಗಲೂ ಮುಂದೆ ಇರುತ್ತದೆ. ಅದು ಪರಾನ್ಮುಖವಾಗಿ ಯಾವಾಗ್ಗೆ ಚಿತ್ತಕ್ಕೆ ಆತ್ಮದರ್ಶನವಾಗುತ್ತದೆ ಆಗ್ಗೆ ಅಂತಃಕರಣದಲ್ಲಿ ಆತ್ಮತತ್ವವೇ ನಾನು ಇದ್ದೇನೆಂಬ ಸುಜ್ಞಾನವಾಗುತ್ತದೆ. ॥ ೬೬ ॥ ಆ ಪರಿಚಯವು ಆದ ಕೂಡಲೆ ಆತ್ಮಸುಖದ ರಾಜ್ಯದ ಮೇಲೆ ಆರೂಢನಾಗಿ ಅವನು ಆತ್ಮಾನಂದದಲ್ಲಿಯೇ ಲಯಹೊಂದುವನು. ॥ ೬೭ ॥ ಮತ್ತು ಪರಬ್ರಹ್ಮನ ಹೊರ್ತು ಎರಡನೇ ಹೆಚ್ಚಿನದು ಯಾವದೂ ಇರುವದಿಲ್ಲ. ಮತ್ತು ಇದನ್ನು ಇಂದ್ರಿಯಗಳು ಯಾವಾಗ್ಯೂ ತಿಳಿಯುವದಿಲ್ಲ. ಇಂಥ ಆತ್ಮಸ್ವರೂಪವು ಅಂದರೆ ಅವನು ಸ್ವತಃ ಬ್ರಹ್ಮ ರೂಪವೇ ಆಗಿರುತ್ತಾನೆ. ॥ ೬೮ ॥

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥ ೨೨ ॥**

**[ಯಮಿತಿ]** ಮಗ ಮೇರೂ ಪಾಸೂನಿ ಥೋರೇ । ದೇಹ ದುಃಖಾಚೇನಿ ಡೊಂಗರೇ । ದಾಟಿಜೋ
ಪಾ ಪರಿಭಾರೇ । ಚಿತ್ತ ನ ದಾಟೇ ॥ ೬೯ ॥ ಕಾ ಶಸ್ತ್ರೇ ಪರೀ ತೋಡಿಲಿಯಾ। ದೇಹ ಅಗ್ನಿಮಾಜೀ ಪಡ
ಲಿಯಾ। ಚಿತ್ತ ಮಹಾಸುಖೀ ಪಹುಡಲಿಯಾ। ಚೇವೋ ನಯೇ ॥೭೦॥ ಐಸೇ ಆಪಣಪಾ ರಿಗೋನಿ ಠಾಯೇ।
ಮಗ ದೇಹಾಚೀ ವಾಸ ನ ಪಾಹೇ । ಆಣಿಕಚಿ ಸುಖ ಹೋವುನಿ ಜಾಯೇ । ಪ್ನಣೂನಿ ವಿಸರೇ ॥ ೭೧ ॥

**ಅರ್ಥ:—** ಆ ಮೇಲೆ ಇಂಥ ಸ್ಥಿತಿಯು ಪ್ರಾಪ್ತವಾದಮೇಲೆ ಮೇರುಪರ್ವತದಕಿಂತಲೂ ದೊಡ್ಡದಾದ ದುಃಖವು ಪ್ರಾಪ್ತವಾದರೂ ಅವನ ಚಿತ್ತದಲ್ಲಿ ದುಃಖವು ಉಂಟಾಗುವದಿಲ್ಲ. ॥ ೩೬೯ ॥ ಅಥವಾ ಶಸ್ತ್ರದಿಂದ ಅವನ ದೇಹವನ್ನು ಕತ್ತರಿಸಿದರೂ ಇಲ್ಲವೇ ದೇಹವು ಅಗ್ನಿಯಲ್ಲಿ ಬಿದ್ದರೂ, ಮಹಾಸುಖದಲ್ಲಿ ಬೆರೆತುಹೋದ ಅವನ ಚಿತ್ತವು ಜಾಗೃತ ವಾಗುವದಿಲ್ಲ. ॥ ೭೦ ॥ ಈ ಪ್ರಕಾರಾ ಆತ್ಮಸುಖದಲ್ಲಿ ನಿಮಗ್ನನಾದಮೇಲೆ ಅವನಿಗೆ ದೇಹದ ವಿಸ್ಮೃತಿಯು ಆಗುತ್ತದೆ. ಇಂಥ ಅನಿರ್ವಾಚ್ಯ ಸುಖವು ಪ್ರಾಪ್ತವಾದುದರಿಂದ ಮಿಕ್ಕುಳಿದ ಮಾತಿನ ಸ್ಮರಣವೂ ಅವನಿಗೆ ಉಳಿಯುವದಿಲ್ಲ. ॥ ೩೭೧ ॥

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥ ೨೩ ॥**

**[ತಂ ವಿದ್ಯಾದಿತಿ]** ಜಯಾ ಸುಖಾಚಿಯಾ ಗೋಡೀ । ಮನ ಆರ್ತೀಚೀ ಸೇಚಿಸೋಡೀ ।
ಸಂಸಾರಾ ಚೇ ತೋಡೀ । ಗುಂತಲೇ ಜೇ ॥ ೭೨ ॥ ಜೇ ಯೋಗಾಚೀ ಬರವ । ಸಂತೋಷಾಚೀ ರಾಣೀ
ವ । ಜ್ಞಾನಾಚೀ ಜಾಣೀವ । ಜಯಲಾಗೀ ॥ ೭೩ ॥ ತೇ ಅಭ್ಯಾಸಿ ಲೇನಿ ಯೋಗೇ ಸಾವಯವ ದೇಖಾವೇ
ಲಾಗೇ । ದೇಖಿಲೇ ತರೀ ಅಂಗೇ । ಹೋಇಜೇಲಗಾ ॥ ೭೪ ॥

**ಅರ್ಥ—** ಯಾವ ಬ್ರಹ್ಮಸುಖದ ಸವಿಯಿಂದ ಸಂಸಾರತೊಡಕಿನಲ್ಲಿ ಲೀನವಾದ ಮನಸು ವಿಷಯ ಸುಖದ ಅಪೇಕ್ಷೆಯನ್ನೇ ಮರೆತು ಬಿಡುತ್ತದೆ. ॥ ೩೭೨ ॥ ಯಾವ ಸುಖವು. ಯೋಗದ ಸೌಭಾಗ್ಯವಿರುತ್ತದೋ, ಮತ್ತು ಸಂತೋಷದ ಕೇವಲ ರಾಜ್ಯವದೆಯೋ, ಯಾವದರ ದೆಶೆಯಿಂದ ಜ್ಞಾನದ ಅವಶ್ಯಕತೆಯು ಇರುತ್ತದೋ, ॥ ೩೭೩ ॥ ಆ ಬ್ರಹ್ಮಸುಖವು ಅಭ್ಯಾಸವ ಯೋಗದಿಂದ ಮೂರ್ತಿಮಂತವಾಗಿ ಕಣ್ಣಿಗೆ ಕಾಣಲಿಕ್ಕೆ ಹತ್ತುತ್ತದೆ. ಅದು ಕಾಣಲಿಕ್ಕೆ ಹತ್ತಿದಮೇಲೆ ನೋಡುವವನು ಸ್ವತಃ ತದ್ರೂಪವಾಗಿ ಹೋಗುತ್ತಾನೆ. ॥ ೩೭೪ ॥

**ಸಂಕಲ್ಪಪ್ರಭವಾನ್ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥**

**[ ಸಂಕಲ್ಪಪ್ರಭವಾನಿತಿ ]** ತರೀ ತೋಚಿ ಯೋಗ ಬಾಪಾ । ಏಕೇ ಪರೀ ಆಹೇ ಸೋಪಾ । ಜರೀ ಪುತ್ರ ಶೋಕ ಸಂಕಲ್ಪಾ । ದಾಖವಿಜೇ ॥ ೭೫ ॥ ಹಾ ವಿಷಯಾತೇ ನಿಮಾಲಿಯಾ ಆಇಕೇ । ಇಂದ್ರಿಯೇ ನೇಮಾಚಿಯಾ ಧಾರಣೀ ದೇಖೇ । ತರೀಹಿಯೇ ಫಾಲೂನ ಮುಕೇ । ಜೀವಿತ್ವಾಸೀ ॥ ೭೬ ॥ ಐಸೇ ವೈರಾಗ್ಯ ಹೇ ಕರೀ । ತರೀ ಸಂಕಲ್ಪಾಚೀ ಸರೇವಾರೀ । ಸುಖೇ ಧೃತೀಚಿಯಾ ಧವಳಾರೀ । ಬುದ್ಧಿನಾಂದೇ ॥ ೭೭ ॥

**ಅರ್ಥ—** ಆದರೆ ಅಪ್ಪಾ ಅರ್ಜುನನೇ ! ಆ ಯೋಗವು ಒಂದುರೀತಿಯಿಂದ ಸುಲಭವಾಗಿರುತ್ತದೆ. ಅದುಹೇಗಂದರೆ ಸಂಕಲ್ಪದಿಂದ ಜನಿಸಿದ ಕಾಮ, ಕ್ರೋಧಾದಿ, ಪುತ್ರರಿಗೆ ನಾಶಮಾಡಿ ಸಂಕಲ್ಪಗೆ ಪುತ್ರ ಶೋಕವನ್ನು ತೋರಿಸಬೇಕು. ಅಂದರೆ ಅದು ಸಹಜವೇ ಸಾಧ್ಯವಾಗುವದು. ॥ ೩೭೫ ॥ ವಿಷಯಗಳು ಮೃತ ಹೊಂದಿರುವವೆಂಬದನ್ನು ಕೇಳಿ, ಮತ್ತು ಇಂದ್ರಿಯಗಳು ನಿಯಮದಿಂದ ನಡೆಯುತ್ತವೆಂಬದನ್ನು ನೋಡಿ, ಸಂಕಲ್ಪದ ಹೃದಯವು ಬಿಚ್ಚಿಬಿದ್ದು ಅದು ಜೀವವನ್ನುಬಿಡುತ್ತದೆ. ॥ ೩೭೬ ॥ ಈ ರೀತಿಯಿಂದ ವೈರಾಗ್ಯಪ್ರಾಪ್ತವಾದ ಮೇಲೆ ಸಂಕಲ್ಪದ ಯಾತ್ರೆಯು ಮುಗಿದುಹೋಗುತ್ತದೆ. ಮತ್ತು ಧೈರ್ಯದ ಮಂದಿರದಲ್ಲಿ ಬುದ್ಧಿಯು ಸುಖದಿಂದ ವಾಸಮಾಡಲಿಕ್ಕೆ ಹತ್ತುತ್ತದೆ. ॥ ೩೭೭ ॥

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥**
**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

**[ ಶನೈರಿತಿ ]** ಬುದ್ಧಿ ಧೈರ್ಯಾ ಹೋಯ ವಸೌಟಾ । ತರೀ ಮನಾ ತೇ ಅನುಭವಾಚಿಯಾ ವಾಟಾ । ಹಳೂ ಹಳೂ ಆಣೂನಿ ಕರೀ ಪ್ರತಿಷ್ಠಾ । ಆತ್ಮಭುವನೀ ॥ ೭೮ ॥ ಯಾಹೀ ಏಕೇಪರೀ । ಪ್ರಾಪ್ತಿ ಆಹೇ ವಿಚಾರೀ । ಹೇ ನ ರಕೇ ತರೀ ಸೋಪಾರೀ । ಆಣಿಕ ಐಕೇ ॥ ೭೯ ॥ ಆತಾ ನಿಯಮುಚಿ ಹಾ ಏಕಲಾ ! ಜೀವೇ ಕರಾವಾ ಆಪುಲಾ । ಜೈಸಾ ಕೃತ ನಿಶ್ಚಯಾಚಿಯಾ ಬೋಲಾ । ಬಾಹೇರಾ ನೋಹೇ ॥ ೮೦ ॥ ಜರೀ ಯೇತುಲೇನಿ ಚಿತ್ತ ಸ್ಥಿರಾವೇ । ತರೀ ಕಾಜಾ ಆಲೇ ಸ್ವಭಾವೇ । ನಾಹೀ ತರೀ ಘಾಲಾವೇ । ಮೋಕಲನೀ ॥ ೮೧ ॥ ಮಗ ಮೋಕಲಿಲೇ ಜೇಥ ಜಾಈಲ । ತೇಥೂನಿ ನಿಯಮೂಚಿ ಘೇವುನಿ ಯೇಈಲ । ಐಸೇನಿ ಸ್ಥೈರ್ಯಾಚೀ ಹೋಈಲ । ಸವೇಚಿಯಯಾ ॥ ೮೨ ॥

**ಅರ್ಥ—** ಬುದ್ಧಿಗೆ ಧೈರ್ಯದ ಆಶ್ರಯವು ದೊರೆತಕೂಡಲೆ ಅದು ಮನಸಿಗೆ ಬ್ರಹ್ಮಾನುಭವದ ಹಾದಿ ಹಿಡಿಸಿ ಅದನ್ನು ಬ್ರಹ್ಮಸ್ವರೂಪದಲ್ಲಿ ಸ್ಥಾಪನೆಮಾಡುತ್ತದೆ. ॥ ೭೮ ॥ ಈ ಒಂದು ಮಾರ್ಗದಿಂದ ಬ್ರಹ್ಮ ಪ್ರಾಪ್ತಿಯು

ಆಗುತ್ತದೆ ಆದರೆ ಇದು ನಿನಗೆ ಸಾಧ್ಯವಾಗದೇ ಇದ್ದರೆ ಇನ್ನೂ ಒಂದು ಸುಲಭವಾದ ದಾರಿಯು ಅದೆ. ಅವನ್ನು ಹೇಳುವೆನು ಕೇಳು. ॥ ೭೯ ॥ ಸಾಧಕನು ಒಂದು ನಿಯಮವಮಾಡಿದ್ದನ್ನು ಒಂದಾವರ್ತಿ ನಿಶ್ಚಯುಮಾಡಿದಮೇಲೆ ಅದನ್ನು ಎಂದಿಗೂ ಬಿಡಬಾರದು. ॥ ೩೮೦ ॥ ಇಂಥಾ ನಿಶ್ಚಯದಿಂದ ಮಾಡುವದರಿಂದಲೇ ಅಂತಃಕರಣವು ಸ್ಥಿರವಾದರೆ ಅನಾಯಾಸವಾಗಿ ನಿನ್ನ ಕೆಲಸವು ಕೈಗೂಡೀತು ಹೀಗೆ ಸ್ಥಿರವಾಗದಿದ್ದರೆ ಅದನ್ನು ಕೈಬಿಟ್ಟು ಬಿಡಬೇಕು. ॥ ೮೧ ॥ ಆ ಮನಸಿಗೆ ಕೈಸಡಿಲು ಬಿಡುವದರಿಂದ ಎತ್ತೆತ್ತಲಾಗಿ ಹಿರಿದಾಡುವದೋ, ಅತ್ತತ್ತಲಾಗಿಂದ ನಿಯಮವೇ ಅದನ್ನು ( ಕಟ್ಟಿ ) ತಿರುಗಿಸಿ ತೆಗೆದುಕೊಂಡು ಬರುವದು. ಈ ರೀತಿಯಿಂದ ಆ ಚಂಚಲಮನಸ್ಸು (ಆತ್ಮಾನಂದವಲ್ಲಿ) ಸ್ಥಿರವಾಗಿ ನಿಲ್ಲುವದು.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ॥ ೨೭ ॥**

**[ ಪ್ರಶಾಂತಿತಿ ]** ಪಾಠೀ ಕೇತುಲೇನಿ ಏಕೇವೇಳೇ । ತಯಾ ಸ್ಥೈರ್ಯಾಚೇನಿ ಮೇಳೇ । ಆತ್ಮಸ್ವರೂಪಾ ಜವಳೇ । ಯೇಇಲ ಸಹಜೇ ॥ ೮೩ ॥ ತಯಾತೇ ದೇಖೋನಿ ಆಂಗಾಘಡೇಲ । ತೇಥ ಅದ್ವೈತೀ ದ್ವೈತ ಬುಡೇಲ । ಆಣಿ ಐಕ್ಯ ತೇಜೇ ಉಘಡೇಲ॥ ತ್ರೈಲೋಕ್ಯ ಹೇ ॥ ೮೪ ॥ ಆಕಾಶೀ ದಿಸೇ ದುಸರೇ । ತೇ ಅಭ್ರ ಜೈವಿರೇ । ತೈ ಗಗನಚಿ ಕಾಭರೇ । ವಿಶ್ವ ಜೈಸೇ ॥ ೮೫ ॥ ತೈಸೇ ಚಿತ್ತ ಲಯಾ ಜಾಯೇ । ಆಣಿ ಚೈತನ್ಯಚಿ ಅಘವೇ ಹೋಯೇ । ಐಸೀಪ್ರಾಪ್ತೀ ಸುಖೋಪಾಯೇ । ಆಹೇ ಯೇಣೇ ॥೮೬॥

**ಅರ್ಥ** – ಆ ಮೇಲೆ ಈ ಪ್ರಕಾರಾ ಎಷ್ಟೋಸಾರೆ ಸ್ಥಿರವಾಗುವದರಿಂದ ಅದು ಸಹಜ ಆತ್ಮಸ್ವರೂಪದ ಸಮೀಪದಲ್ಲಿ ಬರುವದು. ॥ ೩೮೩ ॥ ಮತ್ತು ಆತ್ಮಸ್ವರೂಪವನ್ನು ನೋಡಿ ಸ್ವತಃ ತದ್ರೂಪವಾದೀತು. ಆ ಮೇಲೆ ಅದ್ವೈತದಲ್ಲಿ ದ್ವೈತವು ಮುಳುಗಿಹೋಗುವದು. ಮತ್ತು ಐಕ್ಯದ ತೇಜದಿಂದ ಈ ಮೂರು ಲೋಕಗಳಲ್ಲಿಯೂ ಬ್ರಹ್ಮಪದವು ಕಂಡುಬರುವದು. ॥ ೩೮೪ ॥ ಆಕಾಶದಲ್ಲಿ ಉತ್ಪನ್ನವಾದ ಅಭ್ರಗಳು ಯಾವ ವೇಳೆಗೆ ಇಲ್ಲದಂತೆ ಆಗುತ್ತವೆ. ಆ ವೇಳ್ಯೆದಲ್ಲಿ ಎಲ್ಲಿ ನೋಡಿದಲ್ಲಿ ಶುದ್ಧ ಆಕಾಶವೇ ಕಂಡುಬರುತ್ತದೆ. ॥ ೩೮೫ ॥ ಅದೇ ಪ್ರಕಾರಾ ಆತ್ಮಸ್ವರೂಪದಲ್ಲಿ ಅಂತಃಕರಣವು ಲಯಹೊಂದಿದಮೇಲೆ ಸಂಪೂರ್ಣ ವಿಶ್ವವು ಚೈತನ್ಯಮಯವೇ ಆಗುತ್ತದೆ. ಈ ಸುಲಭ ಉಪಾಯದಿಂದ ಇಂಥ ಮಹತ್ವ ಲಾಭಪ್ರಾಪ್ತಿ ಯಾಗುತ್ತದೆ. ॥ ೩೮೬ ॥

**ಯುಂಜನ್ನೇವಂ ಸದಾಽಽತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

**[ ಯುಂಜನ್ನಿತಿ ]** ಯಾ ಸೋಪಯಾ ಯೋಗಸ್ಥಿತೀ । ಉಕಲದೇಖಿಲಾಗಾ ಬಹುತೀ । ಸಂಕಲ್ಪಾಚಿಯಾ ಸಂಪತ್ತೀ । ರುಸೋನಿಯಾ ॥ ೮೭ ॥ ತೇ ಸುಖಾಚೇನಿ ಸಾಂಗಾತೇ । ಆಲೇ ಪರಬ್ರಹ್ಮಆಂತೌತೇ । ತೇಥ ಲವಣ ಜೈಸೇ ಜಳಾತೇ । ಸಾಂಡೂನೇಣೇ ॥ ೮೮ ॥ ತೈಸೇ ಹೋಯತಿಯೇ ಮೇಳೀ । ಮಗ ಸಾಮರಸ್ಯಾಚಿಯಾ ರಾವುಳೀ । ಮಹಾಸುಖಾಚೇ ದಿವಾಳೀ । ಜಗೇಸೀ ದಿಸೇ ॥ ೮೯ ॥ ಐಸೇ ಆಪುಲೇ ಪಾಯವರೀ । ಚಾಲಿಜೇ ಆಪುಲೇ ಪಾಠೀವರೀ । ಹೇ ಪಾರ್ಥಾ ನಾಗವೇ ತರೀ । ಆನ ಐಕೇ॥೩೯೦॥

**ಅರ್ಥ**— ಮನಸಿನಲ್ಲಿಯ ಸಂಕಲ್ಪ ವಿಕಲ್ಪವನ್ನು ಬಿಟ್ಟು ಯಾರು ಈ ಸುಲಭವಾದ ಯೋಗಸ್ಥಿತಿಯ ಅನುಭವವನ್ನು ಪಡೆದು ಸುಖಿಗಳಾಗಿರುವರು. ॥ ೩೮೭ ॥ ಅವರು ಆ ಸಂಗತಿಯ ಸುಖದಿಂದ ಪರಬ್ರಹ್ಮಪದಕ್ಕೆ ಬಂದು ಮುಟ್ಟಿದರು ಉಪ್ಪು ನೀರಿನಲ್ಲಿ ಕೂಡಿದ ಕೂಡಲೇ ನೀರನ್ನು ಬಿಟ್ಟು ಅದು ಹ್ಯಾಗೆ ಬೇರೆಯಾಗಿ ಉಳಿಯುವದಿಲ್ಲ.॥ ೩೮೮॥ ಅದೇ ಪ್ರಕಾರಾ ಜೀವ ಮತ್ತು ಬ್ರಹ್ಮ ಇವುಗಳ ಐಕ್ಯವಾದಮೇಲೆ ಅವರ ಸ್ಥಿತಿಯಾದರೂ ಅದರಂತೆ ಆಗುತ್ತದೆ.

ಮತ್ತು ಆ ಮೇಲೆ ಬ್ರಹ್ಮಾನಂದದ ಮಂದಿರದಲ್ಲಿ ಮಹಾಸುಖದ ದೀಪಾವಳಿ ಹಬ್ಬವು ಸರ್ವ ಜಗತ್ತಿಗೆ ಆಗಿರುತ್ತದೆಂಬದನ್ನು ಅವರು ನೋಡುತ್ತಾರೆ. ॥ ೮೯ ॥ ಈ ಪ್ರಕಾರಾ ತಮ್ಮ ಕಾಲುಗಳನ್ನು ತೆಗಿದುಕೊಂಡು ತಮ್ಮ ಬೆನ್ನಮೇಲೆ ಯೋಗಿಗಳು ನಡಿಯುತ್ತಾರೆ. ಹೀಗೆ ಅನಘಡವಾದ ಯೋಗವು ಸಾಧ್ಯವಿರುವದಿಲ್ಲೆಂದು ನಿನಗೆ ಕಂಡರೆ ನಾನು ಬೇರೆ ಒಂದು ಸುಲಭ ಉಪಾಯವನ್ನು ಹೇಳುತ್ತೇನೆ. ॥ ೯೦ ॥

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**
**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

[ **ಸರ್ವ ಭೂತಸ್ಥಮಿತಿ** ] ತರೀ ಮೀ ತವ ಸಕಳ ದೇಹೀ । ಅಸೇ ಏಥ ವಿಚಾರ ನಾಹೀ । ಆಣಿ ತೈಸೇಚಿ ಮಾಝ್ಯಾ ಠಾಯೀ । ಸಕಳ ಅಸೇ ॥ ೯೧ ॥ ಹೇ ಐಸೇಚಿ ಸಂಚಲೇ । ಪರಸ್ಪರೇ ಮಿಸಳಲೇ । ಬುದ್ಧೀ ಘೇಪೇ ಏತುಲೇ । ಹೋಆವೇಗಾ ॥ ೯೨ ॥ ಯೆರ್ಹವೀ ತರೀ ಅರ್ಜುನಾ । ಜೋ ಏಕವಟಲಿಯಾ ಭಾವನಾ । ಸರ್ವಭೂತೀ ಅಭಿನ್ನಾ । ಮಾತೇ ಭಜೇ ॥ ೯೩ ॥ ಭೂತಾಂಚೇನಿ ಅನೇಕಪಣೇ । ಅನೇಕ ನೋಹೇ ಅಂತಃಕರಣೇ । ಕೇವಳ ಏಕತ್ವಚಿ ಮಾಝೇ ಜಾಣೇ । ಸರ್ವತ್ರ ಜೋ ॥ ೯೪ ॥ ಮಗ ತೋ ಏಕ ಹಾ ಮೀಯಾ । ಬೋಲತಾ ದಿಸತಸೇ ವಾಯಾ । ಯೇರ್ಹವೀ ನ ಬೋಲಿಜೇ ತರೀ ಧನಂಜಯಾ । ತೋ ಮೀಚಿ ಆಹೇ ॥ ೯೫ ॥ ದೀಪಾ ಆಣಿ ಪ್ರಕಾಶಾ । ಏಕವಂಕೀಚಾ ಪಾಡ ಜೈಸಾ । ತೋ ಮಜ ಆಣಿ ಮಾಝಾ ಠಾಯೀ ತೈಸಾ । ಮೀತಯಾ ಮಾಜೀ ॥ ೯೬ ॥ ಜೈಸಾ ಉದಕಾಚೇನಿ ಆಯುಷ್ಯೇ ರಸು । ಕಾ ಗಗನಾಚೇನಿ ಮಾನೇ ಅವಕಾಶು । ತೈಸಾ ಮಾಝೇನಿ ರೂಪೇ ರೂಪಸು । ಪುರುಷ ತೋ ಗಾ ॥ ೯೭ ॥

**ಅರ್ಥ**— ನಾನು ಸರ್ವಪ್ರಾಣಿಗಳ ದೇಹದಲ್ಲಿದ್ದೇನೆ. ನನ್ನಲ್ಲಿ ಸರ್ವವೂ ಅವೆ. ಈ ವಿಷಯುವಲ್ಲಿ ವಾದವೇ ಇರುವದಿಲ್ಲ. ॥ ೯೧ ॥ ಈ ರೀತಿಯಿಂದ ಸರ್ವಜಗತ್ತೂ, ಮತ್ತು ಪರಮೇಶ್ವರನೂ, ಒಂದರಲ್ಲೊಂದು ಕೂಡಿಕೊಂಡಿರುತ್ತವೆ. ಆದರೆ ಅದು ಸಾಧಕರ ಬುದ್ಧಿಯಲ್ಲಿ ಧೃಡವಾಗಲಿಕ್ಕೆ ಬೇಕು. ಇಷ್ಟೇ ! ॥ ೯೨ ॥ ಅರ್ಜುನಾ ! ಯಾವನು ಒಂದೇ ಭಾವನೆಯಿಂದ ಸರ್ವಭೂತಗಳಲ್ಲಿ ನಾನು ವ್ಯಾಪಕನಿದ್ದೇನೆಂಬದನ್ನು ತಿಳಿದು ನನ್ನನ್ನು ಭಜಿಸುತ್ತಾನೆ. ॥ ೯೩ ॥ ವ್ಯಕ್ತಿ ಮಾತ್ರದ ಅನೇಕತ್ವದಿಂದ ಯಾವನ ಅಂತಃಕರಣದಲ್ಲಿ ಅನೇಕತ್ವವು ಉತ್ಪನ್ನವಾಗುವದಿಲ್ಲ. ಮತ್ತು ಸರ್ವದರಲ್ಲಿಯೂ ನಾನೇ ವ್ಯಾಪಕನಿದ್ದೇನೆಂದು ತಿಳಿದಿರುತ್ತಾನೆ ॥ ೯೪ ॥ ಅವನು ಮತ್ತು ನಾನು ಒಂದೇ ಸ್ವರೂಪವೆಂದು ಮಾತಾಡುವದು ವ್ಯರ್ಥವೇ ಸರಿ. ಧನಂಜಯನೇ ! ಮಾತಾಡಿ ತೋರಿಸದೇ ಇದ್ದರೂ ಉಭಯುತರ ರೂಪವು ಒಂದೇ ಆಗಿರುತ್ತದೆ. ॥ ೯೫ ॥ ಹೇಗೆ ದೀವಿಗೆ ಮತ್ತು ಪ್ರಕಾಶದ ಏಕತ್ವದಲ್ಲಿ ಎಷ್ಟು ಅಂತರವಿರುವದೋ, ಅಷ್ಟೇ ಅವರಲ್ಲಿ ಮತ್ತು ನನ್ನಲ್ಲಿ ಅಂತರವು ಇರುತ್ತದೆ. ॥ ೯೬ ॥ ಹೇಗೆ ನೀರಿನ ಯೋಗದಿಂದ ರುಚಿಯು, ಇಲ್ಲವೆ ಆಕಾಶದ ಯೋಗದಿಂದ ಬೈಲು, ಇವುಗಳ ಅಸ್ತಿತ್ವವು ಇದ್ದಂತೆ ನನ್ನ ರೂಪದಿಂದಲೇ ಆ ಪುರುಷನು ರೂಪವಾನನಾಗಿ ಕಾಣುತ್ತಾನೆ. ॥ ೯೭ ॥

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥ ೩೧ ॥**

[ **ಸರ್ವಭೂತಸ್ಥಿತಮಿತಿ** ] ಜೇಣೇ ಐಕ್ಯಾಚಿಯೇ ದಿಠೀ । ಸರ್ವತ್ರ ಮಾತೇಚಿ ಕಿರೀಟೀ । ದೇಖಿಲಾ ಜೈಸಾ ಪಟೀ । ತಂತು ಏಕ ॥ ೯೮ ॥ ಕಾ ಸ್ವರೂಪೇ ತರೀ ಬಹುತೇ ಆಹಾತೀ । ಪರೀ ತೈಸೀ ಸೋನೀ ಬಹುವೇ ನ ಹೋತೀ । ಐಸೀ ಐಕ್ಯಾಚಳಾಚೀ ಸ್ಥಿತೀ । ಕೇಲೀ ಜೇಣೇ ॥ ೯೯ ॥ ನಾ ತರೀ ವೃಕ್ಷಾಂಚೇ ಪಾನೇ ಜೇತುಲೀ । ತೇ ತುಲೀ ರೋಪೇ ನಾಹೀ ಲಾವಿಲೀ । ಐಸೀ ಅದ್ವೈತ ದಿವಸೇ

ಸಾಹಲೀ। ರಾತ್ರೀ ಜಯಾ ॥ ೪೦೦ ॥ ತೋ ಪಂಚಾತ್ಮಕೀ ಸಾಂಪಡೇ । ತರೀ ಮಗ ಸಾಂಗ ಪಾ ಕೈಸೇನಿ ಅಡೇ । ಜೋ ಪ್ರತೀತೀಚೇನಿ ಪಾಡೇ । ಮಜಸೀ ತುಕೇ ॥ ೧ ॥ ಮಾಝೆ ವ್ಯಾಪಕಪಣ ಆಘವೇ । ಗವಸಲೇ ತಯಾಚೇನಿ ಅನುಭವೇ । ತರೀ ನ ಮ್ಹಣತಾ ಸ್ವಭಾವೇ । ವ್ಯಾಪಕ ಜಾಹಾಲಾ ॥ ೨ ॥ ಆತಾ ಶರೀರೀ ತರೀ ಆಹೇ । ಪರೀ ಶರೀರಾಚಾ ತೋ ನೋಹೇ । ಐಸೇ ಬೋಲಲನರೀ ಹೋಯೇ । ತೇ ಕರೂಯೇ ಕಾಯಿ ॥ ೩ ॥

**ಅರ್ಥ—** ಅರ್ಜುನನೇ ! ವಸ್ತ್ರದಲ್ಲಿ ತಂತು ಒಂದೇ ಆಗಿರುವಂತೆ ಯಾವನು ಐಕ್ಯದ ದೃಷ್ಟಿಯಿಂದ ಸರ್ವ ಸ್ಥಳದಲ್ಲಿ ನನ್ನ ವ್ಯಾಪ್ತಿ ಅದೆ ಎಂಬದನ್ನು ಅರಿತಿರುವನೋ ॥ ೩೯೮ ॥ ಇಲ್ಲವೇ, ಪರಿಪರಿಯ ಅಲಂಕಾರಗಳಿದ್ದರೂ, ಅನೇಕತ್ವ ಇಲ್ಲದೇ ಇರುವ ಬಂಗಾರದಂತೆ ಅವನಿಗೆ ಐಕ್ಯರೂಪ ಪರ್ವತಸಮಾನ ಸ್ಥಿತಿಯು ಉಂಟಾಗುತ್ತದೆ. ॥ ೯೯ ॥ ಅಥವಾ ಗಿಡದ ಎಲೆಗಳು ಎಷ್ಟು ಇರುತ್ತವೆ ಅಷ್ಟು ಅಗಿಗಳನ್ನು ಹಚ್ಚಿರುವದಿಲ್ಲ. ಇಂಥ ಅದ್ವೈತ ಪ್ರಕಾಶದಿಂದ ಯಾವನ ಅಜ್ಞಾನರಾತ್ರಿಯು ಕಳೆದು ಉದಯವಾಗಿರುತ್ತದೆ. ॥ ೪೦೦ ॥ ಅವನು ಪಂಚಮಹಾ ಭೂತಾತ್ಮಕ ದೇಹದಲ್ಲಿ ಹುಟ್ಟಿ ಬೆಳೆದರೂ, ಅನುಭವದ ಯೋಗದಿಂದ ಅವನು ನನ್ನ ಸಮಾನನೇ ಆಗಿರುವನು. ಅವನಲ್ಲಿ ಸ್ವಸ್ವರೂಪ ಉಂಟಾಗಲು ಪ್ರತಿಬಂಧವಾಗಬಹುದೇ ? ॥ ೧ ॥ ಅವನು ಅನುಭವದ ಯೋಗದಿಂದ ಸರ್ವ ಸ್ಥಳದಲ್ಲಿಯೂ ನನ್ನ ವ್ಯಾಪಕತ್ವ ಇರುತ್ತದೆಂಬದನ್ನು (ಪೂರ್ಣ) ಅರಿತಿರುವನು. ಆ ಮೇಲೆ ಅವನು ಸರ್ವವ್ಯಾಪಕ ನಾಗಿರುವನೆಂದು ಅನ್ನಲಿಕ್ಕೇಬೇಕು ಹೀಗೇನು ಇರುವದಿಲ್ಲ. ॥ ೨ ॥ ಈಗ ಅವನು ದೇಹಧಾರಿಇದ್ದಾಗ್ಯಾದರೂ ಶರೀರದ ಆಧೀನನಿರುವದಿಲ್ಲ. ಈ ತರದ ಅವನ ಸ್ಥಿತಿಯು ಶಬ್ದದಿಂದ ಹೇಳಲಿಕ್ಕೆ ಬರುವದಿಲ್ಲ. ಅದರ ವರ್ಣನ ಮಾಡಲು ಹೇಗೆ ಬಂದೀತು ? ॥ ೪೦೩ ॥

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥ ೩೨ ॥**

**[ ಆತ್ಮೌಪಮ್ಯೇನೇತಿ ]** ಮ್ಹಣೋನಿ ಅಸೋ ತೇ ವಿಶೇಷೇ । ಅಥವಾ ಆಪಣ ಪೇಯಾ ಸಾರಿಖೇ। ಜೋ ಚರಾಚರ ದೇಖೇ । ಅಖಂಡಿತ ॥ ೪ ॥ ಸುಖದುಃಖಾದಿ ವರ್ಮೇ । ಕಾ ಶುಭಾಶುಭೇ ಕರ್ಮೇ । ದೋನೀ ಐಸೀ ಮನೋಧರ್ಮೇ । ನೇಣೇಚಿ ಜೋ ॥ ೫ ॥ ಹೇ ಸಮ ವಿಷಮಭಾವ । ಆಣಿಕಹೀ ವಿಚಿತ್ರ ಜೇ ಸರ್ವ । ತೇ ಮಾಝೀ ಜೈಸೇ ಅವಯವ । ಆಪುಲೇ ಹೋತೀ ॥ ೬ ॥ ಹೇ ಏಕೈಕ ಕಾಯ ಸಾಂಗಾವೇ । ಜಯಾ ತ್ರೈಲೋಕ್ಯಚಿ ಆಘವೇ । ಮೀ ಐಸೇ ಸ್ವಭಾವೇ । ಬೋಧಾ ಆಲೇ ॥ ೭ ॥ ತಯಾಹೀ ದೇಹ ಏಕ ಕೀರ ಆಥೀ । ಲೌಕಿಕೀ ಸುಖದುಃಖೀ ತಯಾತೇ ಮ್ಹಣತೀ । ಪರೀ ಆಮ್ಹಾತೇ ಐಸೀ ಪ್ರತೀತೀ । ಪ್ರರಬ್ರಹ್ಮಚಿ ಹಾ ॥ ೮ ॥ ಮ್ಹಣೋನಿ ಆಪಣಪಾ ವಿಶ್ವದೇಖಿಜೇ । ಆಣಿ ಆಪಣ ವಿಶ್ವ ಹೋಇಜೇ । ಐಸೇ ಸಾಮ್ಯಚಿ ಏಕ ಉಪಾಸಿಜೇ । ಪಾಂಡವಾ ಗಾ ॥ ೯ ॥ ಹೇ ತೂ ತೇ ಬಹುತೀ ಪ್ರಸಂಗೀ । ಆಮ್ಹೀ ಮ್ಹಣೋ ಯಾಚಿ ಲಾಗೀ । ಜೇ ಸಾಮ್ಯಾಪರೌತೀ ಜಗೀ । ಪ್ರಾಪ್ತಿನಾಹೀ ॥೪೧೦॥

**ಅರ್ಥ—** ಆದುದರಿಂದ ಈ ವಿಷಯವಾಗಿ ಹೆಚ್ಚಿಗೆ ಹೇಳುವವಂತೂ ಇರಲಿ. ಆ ತತ್ವಶೀಲನು ಯಾವಾಗಲೂ ತನ್ನ ಆತ್ಮವತ್ ಸರ್ವಜಗತ್ತನ್ನು ನೋಡುತ್ತಾನೆ. ॥ ೪ ॥ ಸುಖದುಃಖಾದಿ ಕರ್ಮಗಳು ಮತ್ತು ಪುಣ್ಯ ಪಾಪಾದಿ ಕರ್ಮಗಳು ಈ ಎರಡೂ ಯಾವನು ತನ್ನ ಮನಸ್ಸಿನಲ್ಲಿ ಸಹ ತರುವದಿಲ್ಲ. ॥ ೪೦೫ ॥ ಈ, ಸಮ ವಿಷಮಭಾವ ( ಶುಭಾಶುಭ ) ಗಳೂ, ಮತ್ತು ಎಲ್ಲ ಬೇರೆ ಬೇರೆ ಪ್ರಕಾರದ ವಸ್ತುಗಳು, ತನ್ನ ಅವಯವಗಳೇ ಎಂದು ಯಾವನು ತಿಳದಿರುತ್ತಾನೆ. ॥ ೪೦೬ ॥ ಇದರಕಿಂತಲೂ ಒಂದೊಂದೇ ವಿಂಗಡಿಸಿ ಏನು ಹೇಳಬೇಕು ? ಯಾವನಿಗೆ ಮೂರು ಲೋಕಗಳೇ ನಾನೇ ಇರುವೆನೆಂಬ ಅನುಭವ ಜನ್ಯ ದಿವ್ಯಜ್ಞಾನವು ಪ್ರಾಪ್ತವಾಗಿರುತ್ತದೆ. ॥ ೪೦೭ ॥ ಅವನಿಗಾವದರೂ

ದೇಹವಿರುವದೇನೋ ನಿಜ. ಆದರೆ ಜನರಲ್ಲಿ ಇವನಿಗೆ ಸುಖ ದುಃಖ ಎಂದು ತಿಳಿಯುತ್ತಾರೆ. ನಮ್ಮ ಅನುಭವದಿಂದ ನೋಡಿದರೆ ಅವನು ಪರಬ್ರಹ್ಮಮೂರ್ತಿಯೇ ಇರುವನು. ॥ ೪೦೮ ॥ ಆದುದರಿಂದ ಅರ್ಜುನಾ ! ಯಾವ ಯೋಗದಿಂದ ತನ್ನಲ್ಲಿಯೇ ಸರ್ವ ವಿಶ್ವವನ್ನು ನೋಡಲಿಕ್ಕೆ ಬರುವದೋ, ಮತ್ತು ತಾನು ಸ್ವತಃ ವಿಶ್ವರೂಪವಾಗಲಿಕ್ಕೆ ಬಂದೀತು ಆ ಸಮದೃಷ್ಟಿಯ ಉಪಾಸನೆಯನ್ನು ನೀನು ಮಾಡು. ॥ ೪೦೯ ॥ ನಾವು ನಿನಗೆ ಬಹಳೊಂದು ಪ್ರಸಂಗದಲ್ಲಿ ಇದೇ ಕಾರಣದ ದೆಶೆಯಿಂದ ಹೀಗೆ ಹೇಳುತ್ತ ಬಂದಿರುವೆವು. ಸಮದೃಷ್ಟಿಯಕಿಂತಲೂ, ಈ ಜಗತ್ತಿನಲ್ಲಿ ಎರಡನೇ ಹೆಚ್ಚಿನ ಪ್ರಾಪ್ತಿಯು ಇನ್ನಾವದು ಇರುವದಿಲ್ಲ. ॥ ೪೧೦ ॥

**ಅರ್ಜುನ ಉವಾಚ—**

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ಸ್ಥಿತಿಂ ಸ್ಥಿರಾಮ್ ॥ ೩೩ ॥**
**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ॥ ೩೪ ॥**

**[ ಯೋಽಯಂ ಯೋಗ ಇತಿ ]** ತವ ಅರ್ಜುನ ಮ್ಹಣೇ ದೇವಾ । ತುಮ್ಹೀ ಸಾಂಗಾ ಕೀರ ಆಮುಚಾ ಕಣವಾ । ಪರೀ ನ ಪುರೋಜೇ ಸ್ವಭಾವಾ । ಮನಾಚಿಯಾ ॥ ೧೧ ॥ ಹೇ ಮನ ಕೈಸೇ ಕೇವಢೇ । ಐಸೇ ಪಾಹೋ ಮಣೋ ತರೀ ನ ಸಾಂಪಡೇ । ಯೇರವೀ ರಾಹಟಾವಯಾ ಥೋಡೇ । ತ್ರೈಲೋಕ್ಯಮಯಾ ॥ ೧೨ ॥ ಮ್ಹಣೋನಿ ಐಸೇ ಕೈಸೇ ಘಡೇಲ । ಜೇ ಮರ್ಕಟ ಸಮಾಧೀ ಯೇಈಲ । ಕಾ ರಾಹಾ ಮ್ಹಣೀತಲಿಯಾ ರಾಹೇಲ । ಮಹಾವಾತ ॥ ೧೩ ॥ ಜೇ ಬುದ್ಧೀ ತೇ ಸಳೀ । ನಿಶ್ಚಯಾತೇ ಟಾಳೀ । ಧೈರ್ಯೇಸೀ ಹಾತ ಫಳೀ । ಮಿಳವೂನಿ ಜಾಯ ॥ ೧೪ ॥ ಜೇ ವಿವೇಕಾತೇ ಭುಲವೀ । ಸಂತೋಷಾಸೀ ಚಾಡ ಲಾವೀ । ಬೈಸಿಜೇ ತರೀ ಹಿಂಡವೀ । ದಾಹೀ ದಿಶಾ ॥ ೧೫ ॥ ಜೇ ನಿರೋಧಲೇ ಘೇ ಉವಾಯೋ । ಜಯಾ ಸಂಯಮುಚಿ ಹೋಯ ಸಾವಾಯೋ। ತೆ ಮನ ಆಪುಲಾ ಸ್ವಭಾವೋ। ಸಾಂಡೀಲ ಕಾಯೀ ॥ ೧೬ ॥ ಮ್ಹಣೋನಿ ಮನ ಏಕನಿಶ್ಚಳ ರಾಹೇಲ । ಮಗ ಆಮ್ಹಾಸಿ ಸಾಮ್ಯ ಹೋಈಲ । ಹೇ ವಿಶೇಷೇಹಿ ನ ಘಡೇಲ । ಯಾಚಿ ಲಾಗೀ ॥ ೧೭ ॥

**ಅರ್ಥ—** ಆ ಮೇಲೆ ಅರ್ಜುನನು ಶ್ರೀಕೃಷ್ಣನಿಗೆ ಅನ್ನುತ್ತಾನೆ ದೇವಾ ! ನೀವು ನಮ್ಮ ಮೇಲಿನ ಅಂತಃಕರಣ ಮನಸಿನಲ್ಲಿ ತಂದು ಈ ಸಮದೃಷ್ಟಿಯ ಮಾರ್ಗವನ್ನು ಹೇಳಿರುವಿರಿ. ಆದರೆ ಈ ಮನಸಿನ ಚಂಚಲ ಸ್ವಭಾವದ ಮುಂದೆ ನಮ್ಮ ಪರಿಣಾಮವು ಗೊತ್ತಿಗೆ ಹತ್ತುವದಿಲ್ಲ. ॥ ೪೧೧ ॥ ಈ ಮನಸು ಹ್ಯಾಗೆ ಎಷ್ಟಿರುವದೆಂಬದನ್ನು ನೋಡಬೇಕೆಂದರೆ ಅದು ಸಿಗುವದಿಲ್ಲ. ಅದು ತಿರುಗಾಡಲಿಕ್ಕೆ ಈ ಮೂರು ಲೋಕಗಳು ಸಾಲುವದಿಲ್ಲ. ॥ ೪೧೨ ॥ ಆದುದರಿಂದ ಈ ಮಾತು ಹೇಗೆ ಸಾಧಿಸುವದು ? ಮರ್ಕಟನಿಗೆ ಸಮಾಧಿಯು ಉಂಟಾದೀತೆ ? ಇಲ್ಲವೇ ದೊಡ್ಡ ಬಿರುಗಾಳಿಗೆ ಸ್ಥಿರವಾಗು ಎಂದು ಹೇಳಿದ ಕೂಡಲೆ ಅದು ಶಾಂತವಾಗಬಹುದೋ ? ॥ ೧೩ ॥ ಆ ಮನಸು ಬುದ್ಧಿಗೆ ಛಲನಾಮಾಡುತ್ತದೆ. ಬುದ್ಧಿಯು ಮಾಡಿದ ನಿಶ್ಚಯವನ್ನು ಸಿದ್ಧಿಗೆ ಹೋಗಗೊಡುವದಿಲ್ಲ. ಮತ್ತು ಧೈರ್ಯವನ್ನು "ಹಾಹಾ" ಅಂಬುವಷ್ಟರಲ್ಲಿ ಠಕ್ಕಿಸಿ ಹೊರಟು ಹೋಗುತ್ತದೆ. ॥ ೪೧೪ ॥ ಯಾವದು ಸಾರಾಸಾರ ಬುದ್ಧಿಗೆ ಭ್ರಮೆಯಲ್ಲಿ ಕೆಡವುತ್ತದೆ. ಮತ್ತು ಸಂತೋಷಕ್ಕೆ ಆಶಾ ಹಚ್ಚುತ್ತದೆ. ಮನುಷ್ಯನು ಒಂದೇ ಸ್ಥಳದಲ್ಲಿ ಕುಳಿತುಕೊಂಡರೂ ಅವನಿಗೆ ಹತ್ತುದಿಕ್ಕುಗಳಲ್ಲಿ ತಿರುಗಿಸುತ್ತದೆ. ॥ ೪೧೫ ॥ ಅದನ್ನು ಬಂಧಿಸಿದರೆ ಅದು ಕೊಸರಿಕೊಂಡು ಬರುತ್ತದೆ. ಮತ್ತು ನಿಗ್ರಹ ಮಾಡಿದರೆ ಅದು ಅದರ ವಿರುದ್ಧವಾಗಿ ಅದಕ್ಕೇ ಸಹಾಯವಾಗುತ್ತದೆ. ಇಂಥ (ಮರ್ಕಟ) ಮನಸ್ಸು ತನ್ನ ಸ್ವಭಾವವನ್ನು ಬಿಡುವದೇನು ? ॥ ೧೬ ॥ ಆದುದರಿಂದ ಈ ಮನಸ್ಸೊಂದು ಸ್ಥಿರವಾದರೆ ನಮಗೆ ಸಮದೃಷ್ಟಿಯು ಸಹಜವೇ ಪ್ರಾಪ್ತವಾದೀತು. ಮನಸಿನಲ್ಲಿ ಇಂಥ ಚಂಚಲವೃತ್ತಿಯಿರುವದರಿಂದ ಅದು ಪ್ರಾಪ್ತವಾಗುವದು, ದುರ್ಘಟವದೆ. ॥ ೪೧೭ ॥

**ಶ್ರೀ ಭಗವಾನುವಾಚ—**

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**

**[ ಅಸಂಶಯಮಿತಿ ]** ತವ ಶ್ರೀಕೃಷ್ಣ ಮ್ಹಣತೀ ಸಾಚಚಿ । ಬೋಲತ ಆಹಾಸೀತೇ ತೈಸೇಚಿ । ಯಯಾ ಮನಾಚಾ ಕೀರ ಚಪಳಚಿ । ಸ್ವಭಾವೋ ಗಾ ॥ ೧೮ ॥ ಪರೀವೈರಾಗ್ಯಾಚೇನಿ ಆಧಾರೇ । ಜರೀ ಲಾವಿಲೇ ಅಭ್ಯಾಸಾಚಿಯೇ ಮೋಹರೇ । ತರೀ ಕೇತುಲೇನಿ ಏಕೇ ಅವಸರೇ । ಸ್ಥಿರಾವೇಲ॥ ೧೯ ॥ ಕಾ ಜೇ ಯಯಾ ಮನಾಚೇ ಏಕ ನಿಕೇ । ಜೇ ಖಿಲೇ ಗೋಡೀ ಚಿಯಾ ಠಾಯಾ ಸೋಕೇ ।ಮ್ಹಣೋನಿ ಅನುಭವ ಸುಖಚಿ ಕವತಿಕೇ । ದಾವೀತ ಜಾ ಇಜೇ ॥೪೨೦॥

**ಅರ್ಥ—** ಆಗ್ಗೆ ಶ್ರೀಕೃಷ್ಣನು ಅನ್ನುತ್ತಾನೆ. ನೀನು ಯಾವ ಮಾತನಾಡಿದಿ ಅದು ನಿಜವಾಗಿ ಹಾಗೇ ಇರುವದು. ಈ ಮನಸಿನ ಸ್ವಭಾವವು ಚಂಚಲವಾಗಿರುವದೇನೋ ನಿಜ. ॥ ೪೧೮ ॥ ಆದರೆ ಇದನ್ನು ವೈರಾಗ್ಯದ ಆಧಾರದಿಂದ ಅಭ್ಯಾಸದ ಮಾರ್ಗಕ್ಕೆ ಹಚ್ಚಿದರೆ ಸ್ವಲ್ಪು ಅವಕಾಶದಿಂದ ಈ ಮನಸ್ಸು ಸ್ಥಿರವಾದೀತು. ॥ ೪೧೯ ॥ ಕಾರಣವೇನಂದರೆ ಈ ಮನಸ್ಸಿನಲ್ಲಿ ಒಂದು ಉತ್ತಮವಾದ ಆಶ್ಚರ್ಯಕಾರಕ ಗುಣವು ಅದೆ. ಯಾವ ವ್ಯಸನವನ್ನು ಇದಕ್ಕೆ ಹಚ್ಚುವಿರೋ, ಅದೇ ವ್ಯಸನದಲ್ಲಿ ಇದು ಅಂಟಿಕೊಳ್ಳುವದು. ಆದುದರಿಂದ ಈ ಮನಸ್ಸನ್ನು ಕೌತುಕದಿಂದ ಆತ್ಮಸುಖದ ಕಡೆಗೆಯೇ ಮೇಲಿಂದಮೇಲೆ ತಿರುಗಿಸಬೇಕು. ॥ ೪೨೦ ॥

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥ ೩೬ ॥**

**[ ಅಸಂಯತಾತ್ಮನೇತಿ ]** ಯೇರ್ಹವೀ ವಿರಕ್ತಿ ಜಯಾಸಿ ನಾಹೀ । ಜೇ ಅಭ್ಯಾಸೀ ನ ರಿಘತೀ ಕಹೀ । ತಯಾ ನಾಕಳೇ ಹೇ ಆಮ್ಹೀಹೀ । ನ ಮನೂಕಾಯೀ ॥ ೨೧ ॥ ಪರೀ ಯಮ ನಿಯಮಾ ಚಿಯಾ ವಾಟಾನ ವಚಿಜೇ । ಕಹೀ ವೈರಾಗ್ಯಾಚೀ ಸೇ ನ ಕರಿಜೇ । ಕೇವಳ ವಿಷಯಜಳೀ ಠಾಕಿಜೇ । ಬುಡೀ ದೇವೂನ ॥ ೨೨ ॥ ಯಯಾ ಜಾಲಿಯಾ ಮಾನಸಾ ಕಹೀ । ಯುಕ್ತೀಚೀ ಕಾಂಬೀ ಲಾಗಲೀ ನಾಹೀ । ತರೀ ನಿಶ್ಚಳ ಹೋಈಲ ಕಾಈ । ಕೈಸೇನಿ ಸಾಂಗೇ ॥ ೨೩ ॥ ಮ್ಹಣೋನಿ ಮನಾಚಾ ನಿಗ್ರಹ ಹೋಯೇ । ಐಸಾ ಉಪಾಯ ಜೋ ಆಹೇ । ತೋ ಆರಂಭೀ ಮಗ ನೋಹೇ । ಕೈಸಾಪಾಹೋ ॥ ೨೪ ॥ ತರೀ ಯೋಗಸಾಧನ ಚಿತುಕೇ । ತೇ ಆಘವೇಚಿ ಕಾಯ ಲಟಿಕೇ । ಪರೀ ಆವಣಯಾ ಅಭ್ಯಾಸೇ ನಟಕೇ । ಹೇಚಿಮ್ಹಣೇ ॥ ೨೫ ॥ ಆಂಗೀ ಯೋಗಾಚೇ ಹೋಯಬಳ । ತರೀ ಮನ ಕೇತುಲೇ ಚಪಳ । ಕಾಯ ಮಹದಾದಿ ಹೇ ಸಕಳ । ಆಪುನೋಹೇ ॥ ೨೬ ॥ ತೇಥ ಅರ್ಜುನ ಮ್ಹಣೇ ನಿಕೇ । ದೇವೋ ಬೋಲತೀ ತೇ ನ ಚುಕೇ । ಸಾಚಚಿ ಯೋಗ ಬಳೇಸೀ ನ ತುಕೇ । ಮನೋಬಳ ॥ ೨೭ ॥ ತರೀ ತೋಚಿಯೋಗ ಕೈಸಾ ಕೇವೀ ಜಾಣೋ । ಆಮ್ಹೀ ಯೇತುಲೇ ದಿವಸ ಯಾಚೀ ಮಾತುಹೀ ನೇಣೋ । ಮ್ಹಣೋನಿ ಮನಾತೇ ಜೇ ಮ್ಹಣೋ । ಅನಾವರ ॥೨೮॥ ಹಾ ಆತಾ ಆಘವೇಯಾ ಜನ್ಮಾ । ತುರ್ಝೇನಿ ಪ್ರಸಾದೇ ಪುರುಷೋತ್ತಮಾ । ಯೋಗಪರಿಚಯ ಆಮ್ಹಾ । ಜಾಹಲಾ ಆಜೀ ॥ ೨೯ ॥

**ಅರ್ಥ—** ಇಲ್ಲವೆ, ಯಾವನಿಗೆ ವೈರಾಗ್ಯವಿರುವದಿಲ್ಲ, ಅವನು ಯಾವಾಗ್ಯೂ ಅಭ್ಯಾಸವಂತೂ ಮಾಡುವದೇ ಇಲ್ಲ. ಅವನಿಗೆ ಈ ಮನಸ್ಸನ್ನು ನಿಗ್ರಹಮಾಡುವದಾಗುವದಿಲ್ಲವೆಂಬದನ್ನು ನಾವಾದರೂ ಮಾನ್ಯಮಾಡುವದಿಲ್ಲೇನು ? ॥ ೨೧ ॥ ಆದರೆ ಯಾವನು ಯಮ ನಿಯಮ ಪ್ರಾಣಾಯಾಮ ಮುಂತಾದವುಗಳ ಅಭ್ಯಾಸಮಾಡುವದಿಲ್ಲ, ಅವನಿಗೆ ವೈರಾಗ್ಯದ ಸ್ಮರಣವು ಎಂದಿಗೂ ಆಗುವದಿಲ್ಲ, ಮತ್ತು ಕೇವಲ ವಿಷಯರೂಪಿ ಜಲದಲ್ಲಿಯ ಮೀನುಗಳಂತೆ ಮುಳಗಿಕೊಂಡಿರುತ್ತಾನೆ.

॥ ೪೨೨ ॥ ಈ ಪ್ರಕಾರಾ ವಿಷಯುಲಂಪಟನಾದ ಮನುಷ್ಯನ ಮನಸಿಗೆ ಯುಕ್ತಿಯು ಹಂಚಿಕೆಯು ಎಂದೂ ದೊರತಿರುವದಿಲ್ಲ. ಅವನ ಮನಸ್ಸು ಸ್ಥಿರವಾಗುವ ಬಗೆ ಹೇಗೆ ? ॥ ೨೩ ॥ ಆದುದರಿಂದ ಮನೋನಿಗ್ರಹ ಮಾಡುವ ಯಾವ ಉಪಾಯವು ಅದೆ ಅದನ್ನು ನೀನು ಪ್ರಾರಂಭಮಾಡು. ಆಮೇಲೆ ಆ ಮನಸ್ಸು ಹ್ಯಾಗೆ ನಿಶ್ಚಲವಾಗುವದಿಲ್ಲವೆಂಬದನ್ನು ನೋಡುವೆನು. ॥ ೨೪ ॥ ಆದರೆ ಯೋಗಸಾಧನಗಳೆಂದು ಎಷ್ಟಿರುವವೋ, ಅವೆಲ್ಲವು ಅಸತ್ಯವೋ ? ಆದರೆ ನಮ್ಮ ಕಡೆಯಿಂದ ಅಭ್ಯಾಸಮಾಡುವದಾಗುವದಿಲ್ಲವೆಂದು ಹೀಗೆ ಅನ್ನು. ॥ ೪೨೫ ॥ ಮೈಯಲ್ಲಿ ಯೋಗಸಾಧನದ ಸಾಮರ್ಥ್ಯ ಇದ್ದರೆ ಅದರ ಮುಂದೆ ಈ ಮನಸಿನ ಚಪಲತ್ವವು ಎಷ್ಟರಮಟ್ಟಿಗೆ ನಡೆದೀತು. ಈ ಮಹತ್ವವಾದ ತತ್ವಾದಿಗಳೆಲ್ಲವು ನಮ್ಮ ಸ್ವಾಧೀನವಾಗುವದು ಅಸಾಧ್ಯವೋ ? ॥ ೪೨೬ ॥ ಆ ಪ್ರಸಂಗದಲ್ಲಿ ಅರ್ಜುನನು ಅನ್ನುತ್ತಾನೆ ದೇವಾ ನೀವು ಯಾವದನ್ನು ಹೇಳಿದಿರಿ ಅದು ಸತ್ಯವಿರುವದು ನಿಜವಾಗಿ ಯೋಗಬಲದ ಮುಂದೆ ಮನಸಿನ ಪರಾಕ್ರಮವು ಎಂದಿಗೂ ನಡಿಯಲಾರದು. ॥ ೪೨೭ ॥ ಆದರೆ ಆ ಯೋಗವು ಹೇಗಿರುವದು ಮತ್ತು ಅದನ್ನು ಯಾವರೀತಿಯಿಂದ ತಿಳಕೊಳ್ಳಬೇಕು. ಆಮಾತು ಇಷ್ಟು ದಿವಸಗಳ ವರೆಗೆ ನಮಗೆ ಗೊತ್ತೇ ಇದ್ದಿಲ್ಲ. ಅಂತೇ ಮನಸ್ಸು ಅನಾವರವಾಗಿರುವದೆಂದು ನಾನು ಅನ್ನುತ್ತಿದ್ದೆನು. ॥ ೪೨೮ ॥ ಎಲೋ ಪುರುಷೋತ್ತಮನೇ ! ನಮ್ಮ ಎಲ್ಲ ಜನ್ಮದಲ್ಲಿಯೂ ಪ್ರಾಪ್ತವಾಗದೇ ಇದ್ದ ಈ ಯೋಗದ ಪರಿಚಯವು ನಿನ್ನ ಪ್ರಸಾದದಿಂದ ಈ ಹೊತ್ತಿನ ದಿವಸ ನಮಗೆ ಲಭಿಸಿರುವದು. ॥ ೪೨೯ ॥

**ಅರ್ಜುನ ಉವಾಚ—**

**ಅಯುತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣಗಚ್ಛತಿ ॥ ೩೭ ॥**
**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥ ೩೮ ॥**
**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

**[ ಅಯುತಿರಿತಿ ]** ಪರೀ ಆಣೀಕ ಏಕ ಗೋಸಾವಿಯಾ । ಮಜ ಸಂಶಯು ಅಸೇ ಸಾವಿಯಾ । ತೋ ತೂವಾಂಚೂನಿ ಫೇಡಾವಯಾ । ಸಮರ್ಥನಾಹೀ ॥ ೪೩೦ ॥ ಮ್ಹಣೋನಿಸಾಂಗೇ ಶ್ರೀ ಗೋವಿಂದಾ । ಕವಣ ಏಕ ಮೋಕ್ಷಪದಾ । ಝೋಂಬತ ಹೋತಾ ಶ್ರದ್ಧಾ । ಉಪಾಯೇ ವಿಣ ॥ ೩೧ ॥ ಇಂದ್ರಿಯ ಗ್ರಾಮೋನಿ ಸಿಗಾಲಾ । ಆಸ್ಥೇಚಿಯೇಮಾಟಾ ಲಾಗಲಾ । ಆತ್ಮಸಿದ್ಧೀಚಿಯಾ ಪುಢಿಲಾ । ನಗರಾಯಾವಯಾ ॥೩೨ ॥ ತವ ಆತ್ಮಸಿದ್ಧಿ ನ ಠಕೇಚಿ । ಆಣಿ ಮಾಗುತೇ ನ ಯೇವವೇಚಿ । ಐಸಾ ಅಸ್ತು ಗೇಲಾ ಮಾಝಾರೀಂಚಿ । ಆಯುಷ್ಯಭಾನು ॥ ೩೩ ॥ ಜೈಸೇ ಅಕಾಳೀ ಆಭಾಳ । ಅಳು ಮಾಳ ಸಪಾತಳ । ವಿಪಾಯೇ ಆಲೇ ಕೇವಳ । ವಸೇ ನಾ ವರ್ಷೇ ॥ ೩೪ ॥ ತೈಸೀ ದೋನ್ಹೀ ದುರಾವಲೀ । ಜೇ ಪ್ರಾಪ್ತೀ ತವ ಅಲಗ ಠೇಲೀ । ಆಣಿ ಅಪ್ರಾಪ್ತಿಹೀ ಸಾಂಡವಲೀ । ಶ್ರದ್ಧಾ ತಯಾ ॥ ೩೫ ॥ ಐಸಾದೋಹೋಲಾ ಅಂತರಲಾ ಕಾ ಜೇ । ಜೋಶ್ರದ್ಧೇಚಾ ಸಮಾಜೇ । ಬುಡಾಲಾ ತಯಾಹೋಚೇ । ಕವಣಗತಿ ॥ ೩೬ ॥

**ಅರ್ಥ:—** ಆದರೆ ಎಲೈ ಪ್ರಭೋ ! ಇಂನೂ ಒಂದು ಸಂಶಯವು ಸಹಜವೇ ಉಂಟಾಗಿರುತ್ತದೆ. ಅದನ್ನು ನಿವಾರಣ ಮಾಡುವದಕ್ಕೆ ನಿಮ್ಮ ಹೊರತು ಅನ್ಯರಾರೂ ಸಮರ್ಥರಿರುವದಿಲ್ಲ. ॥೪೩೦॥ ಆದುದರಿಂದ ಗೋವಿಂದನೇ ! ಹೇಳು. ಯಾವನಾದರೊಬ್ಬನು ಮೋಕ್ಷ ಪ್ರಾಪ್ತಿಯ ದೆಸೆಯಿಂದ ಭಕ್ತಿಯುಕ್ತ ಅಂತಃಕರಣ ಉಳ್ಳವನಾಗಿ ಉಪಾಯದ ಹೊರ್ತು ಇಚ್ಛಾ ಮಾಡುತ್ತಿದ್ದನು. ॥ ೪೩೧ ॥ ಇಂದ್ರಿಯರೂಪಿ ಗ್ರಾಮದಿಂದ ಹೊರಟು ಮೋಕ್ಷರೂಪಿ ಗ್ರಾಮಕ್ಕೆ ಮುಟ್ಟುವದರ ದೆಸೆಯಿಂದ ಅವನು ಭಕ್ತಿರೂಪ ಮಾರ್ಗವನ್ನು ಹಿಡಿದನು. ॥೪೩೨॥ ಅವನಿಗೆ ಮೋಕ್ಷ ಪ್ರಾಪ್ತಿಯು ಆಗುವದಿಲ್ಲ. ಮತ್ತು

ತಿರುಗಿ ಬರುವದಾಗುವದಿಲ್ಲ. ಇಂಥ ಸ್ಥಿತಿಯಲ್ಲಿ ಅವನ ಆಯುಷ್ಯರೂಪಿ ಸೂರ್ಯನು ಮಧ್ಯದಲ್ಲಿಯೇ ಮುಳುಗಿದನು. ॥ ೩೩ ॥ ಸಹಜ ಆ ಕಾಲದಲ್ಲಿ ಬಂದ ಸಣ್ಣ ತೆಳ್ಳನ್ನ ಮೋಡವು ಯಾವ ಪ್ರಕಾರ ಉಳಿಯುವದಿಲ್ಲ. ಅದು ಮಳೆಗರಿಯುವದೂ ಇಲ್ಲ. ॥ ೩೪ ॥ ಅದರಂತೆ ಅವನಿಗೆ ವಿಷಯಸುಖವು, ಮತ್ತು ಮೋಕ್ಷವು, ಈ ಎರಡೂ ದೊರಕುವದಿಲ್ಲ. ಅಂದ ಬಳಿಕ ಮೋಕ್ಷ ಪ್ರಾಪ್ತಿಯಂತೂ ದೂರೀ ಉಳಿಯಿತು. ಭಕ್ತಿಯ ಅವಲಂಬನ ಮಾಡಿ ಬಿಟ್ಟಂಥ ಸಂಸಾರದಿಂದಲೂ, ಅವನು ಮುಕ್ತನಾಗಿರುವನು. ॥ ೩೫ ॥ ಹೀಗೆ ಇಹ ಪರ ಎರಡೂ ಮಾತುಗಳಿಂದ ಮುಕ್ತನಾಗಿರುವನು. ಆದರೆ ಅವನು ಭಕ್ತಿಯಲ್ಲಿಯೇ ಬೆರೆತು ಹೋಗಿರುವನು. ಅವನಿಗೆ ಯಾವ ಗತಿ ದೊರಕುತ್ತದೆಂಬದನ್ನು ಹೇಳಬೇಕು. ॥ ೪೩೬ ॥

**ಶ್ರೀ ಭಗವಾನುವಾಚ:—**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ।**
**ನಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ॥ ೪೦ ॥**

**[ ಪಾರ್ಥ ಇತಿ ]** ತವ ಶ್ರೀಕೃಷ್ಣ ಮ್ಹಣತೀ ಪಾರ್ಥಾ । ಜಯಾ ಮೋಕ್ಷ ಸುಖೀ ಆಸ್ಥಾ । ತಯಾ ಮೋಕ್ಷಾವಾಂಚೂನಿ ಅನ್ಯಥಾ । ಗತಿ ಆಹೇಗಾ ? ॥ ೩೭ ॥ ಪರೀ ಏತುಲೇ ಹೇಚಿ ಏಕ ಘಡೇ । ಜೇಮಾರ್ಗುಣಾರೀ ವಿಸಾವಾವೇ ಪಡೇ । ತೇಹೀ ಪರೀ ಐಸೇನಿ ಸುರವಾಡೇ । ಜೋ ದೇವಾ ನಾಹೀ ॥ ೩೮ ॥ ಯೇರ್ಹವೀ ಅಭ್ಯಾಸಾಚಾ ಉಚಲತಾ । ಪಾವುಲೀ ಜರೀ ಚಾಲತಾ । ತರೀ ದಿವಸಾ ಆಧೀ ಠಾಕಿತಾ । ಸೋಹಂ ಸಿದ್ಧೀತೇ ॥ ೩೯ ॥ ಪರೀ ತೇತುಲಾ ವೇಗ ನಪ್ಹೋಚಿ । ಮ್ಹಣವೂನಿ ವಿಸಾವಾ ತರೀ ನಿಕಾಚಿ । ಪಾಠೀ ಮೋಕ್ಷ ತವ ತೈಸಾಚೀ । ಠೇವಿಲಾ ಅಸೇ ॥ ೪೪೦ ॥

**ಅರ್ಥ:—** ಆಗ್ಗೆ ಶ್ರೀಕೃಷ್ಣನು ಅನ್ನುತ್ತಾನೆ. ಪಾರ್ಥಾ! ಯಾವನಿಗೆ ಮೋಕ್ಷ ಪ್ರಾಪ್ತಿಯ ಇಚ್ಛೆಯು ಉಂಟಾಗಿರುತ್ತದೆ. ಅವನಿಗೆ ಮೋಕ್ಷದ ಹೊರತು ಅನ್ಯ ಗತಿ ಇರುವದೇನು? ॥೪೩೭॥ ಆದರೆ ಮಧ್ಯದಲ್ಲಿ ವಿಶ್ರಾಂತಿ ತೆಗಿದುಕೊಳ್ಳಬೇಕಾಗುತ್ತದೆ. ಇಷ್ಟೇ ಅದರಲ್ಲಿಯ ಮಾತು, ಆದರೆ ಆವಿಶ್ರಾಂತಿಯಲ್ಲಿ ಅವನಿಗೆ ಯಾವ ಸುಖವು ದೊರಕುತ್ತದೆ ಅದು ದೇವತೆಗಳಿಗೆ ಸಹ ದೊರಕುವದಿಲ್ಲ. ॥ ೪೩೮ ॥ ವಿಚಾರಮಾಡಿ ನೋಡಲು ಅಭ್ಯಾಸದ ಪಾದಗಳಿಂದ ಬಹು ತೀವ್ರವಾಗಿ ಹಾದಿ ನಡೆದಿದ್ದರೆ, ಅವನು ಮರಣ ಕಾಲದ ಪೂರ್ವದಲ್ಲಿಯೇ ಮೋಕ್ಷ ಪ್ರಾಪ್ತಿಯ ಗ್ರಾಮದಲ್ಲಿ ಬಂದು ಸೇರುತ್ತಿದ್ದನು. ॥೪೩೯॥ ಆದರೆ ಅಷ್ಟು ವೇಗದಿಂದ ಅಭ್ಯಾಸ ನಡಿಯದೇ ಇದ್ದದರಿಂದ ವಿಶ್ರಾಂತಿ ತೆಗಿದುಕೊಳ್ಳುವದಾದರೂ ಯೋಗ್ಯವಾಗಿರುವದು. ಆದರೆ ಹಿಂದಿನಿಂದ ಅವನಿಗೆ ಮೋಕ್ಷ ಪ್ರಾಪ್ತಿಯ ಲಾಭವು ಇಟ್ಟೇ ಇರುತ್ತದೆ. ॥ ೪೪೦ ॥

**ಪ್ರಾಪ್ಯ ಪುಣ್ಯಕೃತಾಂಲ್ಲೋಕಾನುಷಿತ್ವಾ ಶಾಶ್ವತೀಃ ಸಮಾಃ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥ ೪೧ ॥**

**[ ಪ್ರಾಪ್ಯ ಪುಣ್ಯಕೃತಾಮಿತಿ ]** ಐಕೇ ಕವತಿಕ ಹೇ ಕೈಸೇ । ಜೇ ಶತಮುಖಾ ಲೋಕ ಸಾಯಾಸೇ । ತೇ ತೋ ಪಾವೇ ಅನಾಯಾಸೇ । ಕೈವಲ್ಯಕಾಮು ॥ ೪೧ ॥ ಮಗ ತೇಥಿಂಚೇ ಜೇ ಅಮೋಘ । ಅಲೌಕಿಕ ಭೋಗ । ಭೋಗಿ ತಾಹೀ ಸಾಂಗ । ಕಾಂಟಾಳೇ ಮನ ॥ ೪೨ ॥ ಹಾ ಅಂತರಾಯ ಅವಚಿತಾ । ಕಾ ಮೋಢವಲಾ ಶ್ರೀ ಭಗವಂತಾ । ದಿವೀ ಭೋಗ ಭೋಗಿತಾ । ಅನುತಾಪೀ ನಿತ್ಯ ॥ ೪೩ ॥ ಪಾಠೀ ಜನ್ಮೇ ಸಂಸಾರೀ । ಪರೀ ಸಕಳ ಧರ್ಮಾಚಿಯಾ ಮಾಹೇರೀ । ಲಾಂಬಾ ಉಗವೇ ಆಗರೀ । ವಿಭವ ಶ್ರಿಯೆಚಾ ॥ ೪೪ ॥ ಜಯಾತೇ ನೀತಿ ಪಂಥೇ ಚಾಲಿಜೇ । ಸತ್ಯಧೂತ ಬೋಲಿಜೇ । ದೇಖಾವೆ ತೇ ದೇಖಿಜೇ । ಶಾಸ್ತ್ರದೃಷ್ಟೀ । ೪೫ ॥ ವೇದ ತೋ ಜಾಗೇಶ್ವರೂ । ಜಯಾ ವ್ಯವಸಾಯ ನಿಜಾಚಾರೂ

ಸಾರಾಸಾರ ವಿಚಾರೂ । ಮಂತ್ರೀ ಜಯಾ ॥ ೪೬ ॥ ಜಯಾಚ್ಯಾ ಕುಳೀ ಚಿಂತಾ । ಜಾಲೀ ಈಶ್ವರಾಚೀ ಪತಿವ್ರತಾ । ಜಯಾತೇ ಗ್ರಹದೇವತಾ । ಆದಿಋದ್ಧಿ ॥ ೪೭ ॥ ಐಸೀ ನಿಜ ಪುಣ್ಯಾಚೀ ಜೋಡೀ । ವಾಧಿನ್ನಲೀ ಸರ್ವ ಸುಖಾಚೀ ಕುಳವಾಡೀ । ತಿಯೇ ಜನ್ಮೇ ತೋ ಸುರವಾಡೀ । ಯೋಗಚ್ಯುತ ॥ ೪೮ ॥

**ಅರ್ಥ—** ಎಲೋ, ಈ ಆಶ್ಚರ್ಯವನ್ನು ನೋಡು. ಯಾವ (ಸ್ವರ್ಗ) ಲೋಕದ ಪ್ರಾಪ್ತಿಯಾಗುವದರದೆಶೆಯಿಂದ ನೂರು ಯಜ್ಞಗಳನ್ನು ಮಾಡಿ ಇಂದ್ರನಿಗೆ ಕಷ್ಟಪಡಬೇಕಾಗುತ್ತದೆ. ಅದು ಆ ಮೋಕ್ಷದ ಅಪೇಕ್ಷೆ ಮಾಡುವ ಪುರುಷನಿಗೆ ಅನಾಯಾಸವಾಗಿ ಪ್ರಾಪ್ತಿಯಾಗುತ್ತದೆ. ॥ ೪೪೧ ॥ ಆ ಮೇಲೆ ಆ ಸ್ಥಳದಲ್ಲಿಯು ನಿಷ್ಫಲವಾಗದೇ ಇರುವ ದಿವ್ಯ ಅಪ್ರತಿಮವಾದ ಭೋಗಗಳನ್ನು ಯಥಾಸ್ಥಿತವಾಗಿ ಭೋಗಿಸುತ್ತಿದ್ದರೂ ಅವರ ಮನಸ್ಸಿಗೆ ಬೇಸರವಾಗುತ್ತದೆ. ॥ ೪೪೨ ॥ ಆ ದಿವ್ಯ ಭೋಗಗಳನ್ನು ಭೋಗಿಸುವಾಗ್ಗೆ ಅಲ್ಲಿ ಅವರಿಗೆ ಸುಖವಾಗುವದಿಲ್ಲ. ಮತ್ತು ಎಲೋ ದೇವಾ ! ಈ ಸ್ವರ್ಗದಲ್ಲಿಯು ಭೋಗಗಳನ್ನು ಭೋಗಿಸುವ ವಿಘ್ನಗಳನ್ನು (ಉಪಾಧಿಯನ್ನು) ನಮ್ಮ ಹಿಂದೆ ಯಾಕೆ ಹಚ್ಚಿರುವಿ ಎಂದು ಅವರು ಯಾವಾಗಲೂ ಪಶ್ಚಾತ್ತಾಪಪಡುತ್ತಿರುತ್ತಾರೆ. ॥ ೪೪೩ ॥ ಆ ಮೇಲೆ ಅವರು ಮೃತ್ಯುಲೋಕದಲ್ಲಿ ಮರಳಿ ಜನ್ಮವನ್ನೆತ್ತುವರು. ಆದರೆ ಸರ್ವ ಧರ್ಮದ ತೌರುಮನೆಯಾಗಿರುವ ಸಜ್ಜನರ ಸತ್ಕುಲದಲ್ಲಿ ಜನ್ಮತೆಗೆದುಕೊಳ್ಳುತ್ತಾರೆ. ಹೊಲದಲ್ಲಿಯು ಬೆಳೆಕೊಯ್ದಮೇಲೆ ಚಿಗಿತು ಭರದಿಂದ ಬಂದ ಬೆಳೆಯಂತೆ ಅವನ ಐಶ್ವರ್ಯವು ವೃದ್ಧಿಹೊಂದುತ್ತದೆ. ॥ ೪೪ ॥ ಆ ಸತ್ಕುಲವು ನೀತಿಮಾರ್ಗದಿಂದ ನಡಿಯುವಂಥದೂ, ಸತ್ಯ ಮತ್ತು ಪವಿತ್ರ ಭಾಷಣಮಾಡುವಂಥದೂ, ಶಾಸ್ತ್ರಾನುಸಾರ ನಡಿಯುವಂಥದಿರುವದೋ, ॥೪೫॥ ಮತ್ತು ಯಾವ ಕುಲದಲ್ಲಿ ವೇದಾಧ್ಯಯನವು ನಿತ್ಯದಲ್ಲಿ ಜಾಗ್ರತವಿರುವದೋ, ಮತ್ತು ಸ್ವಧರ್ಮದ ಆಚರಣವು ಯಾವ ಕುಲದ ವ್ಯವಸಾಯವಾಗಿರುವದೋ, ಸಾರಾಸಾರ ವಿಚಾರವು ಯೋಗ್ಯ ಸಲಹೆ ಕೊಡುವ ಮಂತ್ರಿಯಾಗಿರುವದು. ॥ ೪೬ ॥ ಯಾವ ಕುಲದಲ್ಲಿ ಚಿಂತನವು ಈಶ್ವರನ ಏಕನಿಷ್ಠಪತ್ನಿಯಾಗಿರುವದೋ, (ಈಶ ಚಿಂತನದ ಹೊರ್ತು ಅನ್ಯವಿಷಯದ ಚಿಂತೆಯೇ ಇರುವದಿಲ್ಲ.) ಗುರುಹಿರಿಯರು ಪೂಜ್ಯ ದೈವತವಾಗಿ ಇದೇ ಯಾವನ ಐಶ್ವರ್ಯವಾಗಿರುವದೋ, ॥ ೪೭ ॥ ಹೀಗೆ ಯಾವ ಕುಲದಲ್ಲಿ ಪುಣ್ಯ ದೊರಕಿಸಿರುವರೋ, ಮತ್ತು ಎಲ್ಲಿ ಸುಖದ ಸಮೃದ್ಧಿಯಾಗಿರುವದೋ, ಇಂಥ ಸಜ್ಜನರ ಕುಲದಲ್ಲಿ ಆ ಯೋಗಭ್ರಷ್ಟ ಪುರುಷರು ಸುಖದಿಂದ ಜನ್ಮತೆಗೆದುಕೊಳ್ಳುತ್ತಾರೆ. ॥ ೪೪೮ ॥

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ॥ ೪೨ ॥**
**ತತ್ರ ತಂ ಬುದ್ಧಿ ಸಂಯೋಗಂ ಲಭತೇ ಪೌರ್ವದೇಹಿಕಂ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ॥ ೪೩ ॥**

**[ಅಥವಾ ಯೋಗಿನಾಮಿತಿ]** ಅಥವಾ ಜ್ಞಾನಾಗ್ನಿ ಹೋತ್ರೀ । ಜೇ ಪರಬ್ರಹ್ಮ ಶ್ರೋತ್ರಿ । ಮಹಾಸುಖ ಕ್ಷೇತ್ರೀ । ಆದಿವಂತ ॥ ೪೯ ॥ ಜೇ ಸಿದ್ಧಾಂತಾಚಿಯಾ ಸಿಂಹಾಸನೀ । ರಾಜ್ಯ ಕರಿತೀ ತ್ರಿಭುವನೀ । ಜೇ ಕುಜತೀ ಕೋಕಿಲವನೀ । ಸಂತೋಷಾಚ್ಯಾ ॥ ೪೫೦ ॥ ಜೇ ವಿವೇಕ ದ್ರುಮಾಚೇ ಮುಳೀ । ಬೈಸಲೇ ಆಹಾತೀ ನಿತ್ಯ ಫಳೀ। ತಯಾ ಯೋಗಿಯಾಂಚಿಯಾ ಕುಳೀ। ಜನ್ಮ ಪಾವೇ ॥೫೧॥ ಮೋಟಕೀ ದೇಹಾಕೃತಿ ಉಮಟೇ । ಆಣಿ ನಿಜಜ್ಞಾನಾಚೀ ಪಹಾಂಟ ಫುಟೇ । ಸೂರ್ಯಾಪುಢೇ ಪ್ರಗಟೇ । ಪ್ರಕಾಶ ಜೈಸಾ ॥೫೨॥ ತೈಸೀ ದಶೇಚೀ ವಾಟ ನ ಪಾಹತಾ । ವಯಸೇಚಿಯಾ ಗಾವಾ ನ ಯೇತಾ । ಬಾಳಪಣೀಚ ಸರ್ವಜ್ಞತಾ । ವರೀ ತಯಾತೇ ॥ ೫೩ ॥ ತಿಯೇ ಸಿದ್ಧ ಪ್ರಜ್ಞೇಚೇನಿ ಲಾಭೇ । ಮನಚಿ ಸಾರಸ್ವತೇ ದುಭೇ । ಮಗ ಸಕಲ ಶಾಸ್ತ್ರೇ ಸ್ವಯಂಭೇ । ನಿಘತೀ ಮುಖೇ ॥ ೫೪ ॥ ಐಸೆ ಜೇ ಜನ್ಮ । ಜಯಾಲಾಗೀ ದೇವ ಸಕಾಮ । ಸ್ವರ್ಗೀ ಠೇಲೇ ಜಪ ಹೋಮ । ಕರಿತೀ ಸದಾ ॥ ೫೫ ॥ ಅಮರೀ ಭಾಟ ಹೋಇಜೇ । ಮಗ ಮೃತ್ಯು ಲೋಕಾತೇ ವಾನಿಜೇ । ಐಸೇ ಜನ್ಮ ಪಾರ್ಥಾ ಗಾ ಜೇ । ತೇ ತೋ ಪಾವೇ ॥ ೫೬ ॥

**ಅರ್ಥ**— ಅಥವಾ ಜ್ಞಾನರೂಪಿ ಅಗ್ನಿಯಲ್ಲಿ ಹವನ ಮಾಡುವವನೂ, ಮತ್ತು ಅಧ್ಯಾತ್ಮ ಸಿದ್ಧಾಂತದಲ್ಲಿ ನಿಷ್ಣಾತನೂ, ಮತ್ತು ಪರಬ್ರಹ್ಮ ರೂಪಕ್ಷೇತ್ರದ ಆದಿವತನದಾರನು, ॥ ೪೯ ॥ ಮತ್ತು ಆತ್ಮ ಪ್ರಾಪ್ತಿಯ ಸಿದ್ಧಾಂತದ ಸಿಂಹಾಸನದಲ್ಲಿ ಆರೂಢನಾಗಿ ತ್ರಿಭುವನದ ರಾಜ್ಯವಾಳುವವನು ಮತ್ತು ಸಂತೋಷ ರೂಪವನವಲ್ಲಿಯ ಕೋಕಿಲವಂತೆ ಮಧುರ ಧ್ವನಿಯನ್ನು ಮಾಡುತ್ತ ॥ ೫೦ ॥ ಯಾವನು ವಿವೇಕರೂಪ ವೃಕ್ಷದ ಬೊಡ್ಡಿಯಹತ್ತರ ಕುಳಿತು ಬ್ರಹ್ಮರೂಪಿ ಫಲಗಳನ್ನು ನಿತ್ಯ ಸೇವಿಸುತ್ತಾನೋ, ಇಂಥ ಯೋಗಿಗಳ ಕುಲದಲ್ಲಿ ಆಯೋಗ ಭ್ರಷ್ಟ ಪುರುಷನು ಜನ್ಮಕ್ಕೆ ಬರುತ್ತಾನೆ. ॥ ೫೧ ॥ ಜನ್ಮ ಪ್ರಾಪ್ತವಾದಕೂಡಲೆ ಚಿಕ್ಕವಯಸ್ಸಿನಲ್ಲಿಯೇ ಅವನಲ್ಲಿ ಆತ್ಮಜ್ಞಾನದ ಪ್ರಕಾಶವು ಬೀಳುತ್ತದೆ. ಯಾವ ಪ್ರಕಾರಾ ಸೂರ್ಯೋದಯವಾಗುವ ಪೂರ್ವದಲ್ಲಿ ನಾಲ್ಕೂಕಡೆಗೆ ಪ್ರಕಾಶವು ವಿಸ್ತಾರವಾಗುವಂತೆ ॥ ೫೨ ॥ ವಯಸ್ಸಿಗೆ ಬರುವ ಮಾರ್ಗವನ್ನು ನಿರೀಕ್ಷಿಸದೇ ಜ್ಞಾನವು ಚಿಕ್ಕತನದಲ್ಲಿಯೇ ಅವನ ಕೊರಳಿಗೆ ಮಾಲೆಯನ್ನು ಹಾಕುತ್ತದೆ. ॥ ೫೩ ॥ ಪೂರ್ವಜನ್ಮದಲ್ಲಿ ಸಿದ್ಧವಾದಂಥ ಬುದ್ಧಿಯಯೋಗದಿಂದ ಸರ್ವ ವಿದ್ಯೆಗಳು ಅವನಿಗೆ ಲಭಿಸುತ್ತವೆ. ಮತ್ತು ಅವನ ಮುಖದಿಂದ ಸರ್ವ ಶಾಸ್ತ್ರಗಳು ತನ್ನಿಂದತಾನೇ ಹೊರಡಲಿಕ್ಕೆ ಹತ್ತುತ್ತವೆ. ॥ ೫೪ ॥ ಇಂಥ ಯಾವ ಉತ್ತಮ ಕುಲದಲ್ಲಿ ಜನ್ಮ ಪ್ರಾಪ್ತವಾಗಬೇಕೆಂದು ಸ್ವರ್ಗವಾಸಿ ದೇವತೆಗಳುಸಹ ಮನಸ್ಸಿನಲ್ಲಿ ಅಪೇಕ್ಷೆ ಮಾಡುತ್ತಾರೆ ಮತ್ತು ಯಾವಾಗಲೂ ಇದೇ ಪ್ರಾಪ್ತಿಯ ಸಲುವಾಗಿ ಜಪ ಹೋಮಾದಿಗಳನ್ನು ಮಾಡುತ್ತಾರೆ. ॥ ೫೫ ॥ ಪಾರ್ಥಾ! ದೇವತೆಗಳು ಸ್ತುತಿಪಾಠಕರಾಗಿ ಮೃತ್ಯುಲೋಕದ ವರ್ಣನನನ್ನು ಮಾಡುವರೋ, ಇಂಥ ಉತ್ತಮ ಕುಲದಲ್ಲಿ ಆ ಯೋಗ ಭ್ರಷ್ಟ ಪುರುಷನು ಜನ್ಮತೆಗಿದುಕೊಳ್ಳುತ್ತಾನೆ. ॥ ೫೬ ॥

**ಪೂರ್ವಾಭ್ಯಾಸೇನ ತೇನೈವ ಹ್ರಿಯತೆ ಹ್ಯವಶೋಽಪಿಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

**[ ಪೂರ್ವಾಭ್ಯಾಸೇನೇತಿ ]** ಆಣಿ ಮಾಗೀಲ ಜೇ ಸದ್ಬುದ್ಧಿ । ಜೇಥ ಜೀವಿತ್ವಾ ಜಾಹಾಲೀ ಹೋತೀ ಅವಧಿ । ಮಗ ತೇಚಿ ಪುಢತೀ ನಿರವಧಿ । ನವೀ ಲಾಹೇ ॥೫೭॥ ತೇಥ ಸದೈವಾ ಆಣಿ ಪಾಯಾಳಾ । ವರೀ ದಿವ್ಯಾಂಜನ ಹೋಯ ಡೋಳಾ । ಮಗ ದೇಖೇ ಜೈಸೀ ಅವಲೀಳಾ । ಪಾತಾಳಧನೇ ॥ ೫೮ ॥ ತೈಸೇ ದುರ್ಭೇದ ಜೇ ಅಭಿಪ್ರಾಯ । ಕಾ ಗುರುಗಮ್ಯ ಹನ ಠಾಯ । ತೇಥ ಸಂಸರೇ ವೀಣ ಜಾಯ । ಬುದ್ಧಿ ತಯಾಚೀ ॥ ೫೯ ॥ ಬಳಿಯೇ ಇಂದ್ರಿಯೇ ಯೇತೀ ಮನಾ । ಮನ ಏಕವಟೇ ಪವನಾ । ಪವನ ಸಹಜೇ ಗಗನಾ । ಮಿಳೋಂಚಿ ಲಾಗೇ ॥ ೬೦ ॥ ಐಸೇ ನೇಣೋ ಕಾಯ ಆಪೈಸೇ । ತಯಾತೇಂಚಿ ಕೀಜೇ ಅಭ್ಯಾಸೇ । ಸಮಾಧಿ ಘರ ಪುಸೇ । ಮಾನಸಾಚೇ ॥ ೬೧ ॥ ಜಾಣಿಜೇ ಯೋಗ ಪೀಠೀಂಚಾ ಭೈರವ । ಕಾಯ ಹಾ ಆರಂಭ ಭರೀಚಾ ಗೌರವ । ಕೀ ವೈರಾಗ್ಯ ಸಿದ್ಧೀಚಾ ಅನುಭವ । ರೂಪಾ ಆಲಾ ॥ ೬೨ ॥ ಹಾ ಸಂಸಾರ ಉಮಾಣಿತೇ ಮಾಪ । ಕಾ ಅಷ್ಟಾಂಗ ಸಾಮುಗ್ರೀಚೆ ದ್ವೀಪ । ಜೈಸೇ ಪರಿಮಳೇಂಚಿ ಧರಿಜೇ ರೂಪ । ಚಂದನಾಚೇ ॥ ೬೩ ॥ ತೈಸಾ ಸಂತೋಷಾಚಾ ಕಾಯ ಘಡಿಲಾ । ಕೀ ಸಿದ್ಧ ಭಾಂಡಾರೀ ಹುನೀ ಕಾಢಿಲಾ । ದಿಸೇ ತೇಣೇ ಮಾನೇ ರೂಢಲಾ । ಸಾಧಕದಶೇ ॥ ೬೪ ॥

**ಅರ್ಥ**— ಮತ್ತು ಯಾವ ಪೂರ್ವಜನ್ಮದಲ್ಲಿ ಆಯುಷ್ಯವು ಮುಗಿದಿತ್ತೋ, ಆ ಕಾಲದಲ್ಲಿಯ ಸದ್ಬುದ್ಧಿಯು ಅವನಿಗೆ ಪುನ್ಹಾ ಪ್ರಾಪ್ತವಾಗುತ್ತದೆ. ॥ ೫೭ ॥ ಆ ಸಮಯದಲ್ಲಿ ಮೊದಲಿಗೆ ದೈವಶಾಲಿಯೂ ಕಾಲುಮುಂದಾಗಿ ಹುಟ್ಟಿದವನೂ, ಮತ್ತು ಕಣ್ಣುಗಳಲ್ಲಿ ದಿವ್ಯಾಂಜನವನ್ನು ಹಾಕಿಕೊಂಡಂಥ ಪುರುಷನಿಗೆ ಹ್ಯಾಗೆ ಭೂಮಿಗತ ದ್ರವ್ಯವು ಸಹಜವೇ ದೃಷ್ಟಿಗೆ ಬೀಳುವಂತೆ, ॥ ೫೮ ॥ ಗುರು ಮುಖದ ಹೊರ್ತು ತಿಳಿಯದೇ ಇದ್ದಂಥ ಕಠಿಣವಾದ ವಿಷಯದ ಅಭಿಪ್ರಾಯದ ಸ್ಥಳದಲ್ಲಿ ಅವನ ಬುದ್ಧಿಯು ಅನಾಯಸವಾಗಿ ಪ್ರಯತ್ನ ಪಡದ ಹೊರ್ತು ಪ್ರವೇಶ ಮಾಡುತ್ತದೆ. ॥ ೫೯ ॥ ಬಲಿಷ್ಟವಾದ ಇಂದ್ರಿಯಗಳು ಅವನ ಮನಸಿನ ಸ್ವಾಧೀನವಾಗುತ್ತವೆ. ಮನಸ್ಸು ಪ್ರಾಣವಾಯುವಿನಲ್ಲಿ ಐಕ್ಯ ಹೊಂದುತ್ತದೆ, ಮತ್ತು ಪ್ರಾಣವಾಯು ಅನಾಯಾಸವಾಗಿ ಮೂರ್ಧನಿ ಆಕಾಶದಲ್ಲಿ ಕೂಡ ಹತ್ತುತ್ತದೆ.

॥ ४६० ॥ ಹೀಗೆ ಸಹಜವೇ ಯಾವರೀತಿಯಿಂದ ಹೇಗೆ ಆಗುತ್ತದೆಂಬದು ತಿಳಿಯುವದಿಲ್ಲ. ಅದಂತಿರಲಿ ಯೋಗಾಭ್ಯಾಸವು ಸಹಾ ತನ್ನಿಂದತಾನೇ ಪ್ರಾಪ್ತವಾಗುತ್ತದೆ. ಮತ್ತು ಸಮಾಧಿಯಾದರೂ ಅವನ ಮಾನಸಿನ ಗೃಹವನ್ನು ಹುಡಕುತ್ತ ಬರುತ್ತದೆ. ॥ ४६१ ॥ ಈ ಯೋಗಭ್ರಷ್ಟ ಪುರುಷನು ಯೋಗರೂಪಿ ಆಸನದಮೇಲೆ ಭೈರವ ದೈವತವೋ, ಅಥವಾ ಯೋಗಾರಂಭರೂಪಿ ರಂಭಾವೃಕ್ಷದ ಶೋಭೆಯೋ, ಇಲ್ಲವೇ ವೈರಾಗ್ಯರೂಪಿ ಸಿದ್ಧಿಯ ಮೂರ್ತಿಮಂತ ಅನುಭವವೇ ಪ್ರಗಟವಾಗಿರುವದೋ ಏನೋ, ॥ ४६२ ॥ ಇಲ್ಲವೇ ಈ ಪುರುಷನು ಅಂದರೆ ಸಂಸಾರದ ಅಳತೆಯನ್ನು ಮಾಡುವಂಥ ಮಾಪವೇ ಆಗಿರುವನು. ಇಲ್ಲವೇ ಅಷ್ಟಾಂಗಯೋಗದ ಸಾಮುಗ್ರಿಗಳನ್ನು ತೋರಿಸುವಂಥ ದಿಶವೇ ಆಗಿರುವನು. ಮತ್ತು ಸುಗಂಧವೇ ಚಂದನದರೂಪವನ್ನು ಧಾರಣ ಮಾಡಬೇಕೋ, ॥ ४६३ ॥ ಅದೇ ಪ್ರಕಾರಾ ಈ ಪುರುಷನು ಸಾಧಕನಿದ್ದು, ಸಿದ್ಧ ಪುರುಷನಂತೆ ಕಾಣುತ್ತಾನೆ. ಈ ಯೋಗದಿಂದ ಇಷ್ಟು ಧೈರ್ಯಯುಕ್ತ ಯೋಗಾಭ್ಯಾಸಿಯಾಗಿ ಇಲ್ಲವೇ ಸಂತೋಷದಿಂದ ಮಾಡಿದ ಪುತ್ಥಳಿಯಂತೆ ಸಿದ್ಧರ ಸಮುದಾಯದೊಳಗಿಂದ ಆರಿಸಿಕೆಗಿದವನಂತೆ ಇರುತ್ತಾನೆ. ಹೀಗೆ ಅವನು ಸಾಧಕದಶೆಯಲ್ಲಿಯೇ ಇಷ್ಟು ಯೋಗ್ಯತೆಯನ್ನು ಪಡೆದಿರುವನು ॥ ४६४ ॥

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ॥ ४५ ॥**

[ **ಪ್ರಯತ್ನಾದ್ಯತಮಾನ ಇತಿ** ] ಜೇವರ್ಷ ಶತಾಂಚಿಯಾ ಕೋಡೀ । ಜನ್ಮ ಸಹಸ್ರಾಂಚಿಯಾ ಆಡೀ । ಲಂಘಿತಾ ಪಾತಲಾ ಥಡೀ । ಆತ್ಮಸಿದ್ಧೀಚೀ ॥ ४५ ॥ ಮ್ಹಣೋನಿ ಸಾಧನ ಜಾತ ಆಘವೇ । ಅನುಸರೇ ತಯಾ ಸ್ವಭಾವೇ । ಮಗ ಆಯುತಿಯೇ ಬೈಸೇ ರಾಣಿವೇ । ವಿವೇಕಾಚಿಯೇ ॥ ६६ ॥ ಪಾಠೀ ವಿಚಾರಿತಯಾ ವೇಗಾ । ತೋವಿವೇಕಹೀ ಠಾಕೇ ಮಾಗಾ । ಮಗ ಅವಿಚಾರಣೀಯ ತೇ ಅಂಗಾ । ಘಡೋನಿ ಜಾಯ ॥ ६೭ ॥ ತೇಥ ಮನಾಚೀ ಮೇಹುಡೇ ವಿರೇ । ಪವನಾಚೇ ಪವನ ಪಣ ಸರೇ । ಆಪಣ ಪಾ ಆಪಣ ಮುರೇ । ಆಕಾಶಹೀ ॥ ६८ ॥ ಪ್ರಣವಾಚಾ ಮಾಥಾ ಬುಡೇ । ಐತುಲೇನಿ ಅನಿರ್ವಾಚ್ಯ ಸುಖ ಜೋಡೇ । ಮ್ಹಣೋನಿ ಆಧೀಂಚಿ ಬೋಲ ಬಹುಡೇ । ತಯಾ ಲಾಗೀ ॥ ६९ ॥ ಐಸೀ ಬ್ರಹ್ಮೀಂಚೀ ಸ್ಥಿತೀ । ಜೇ ಸಕಳಾ ಗತೀಸೀ ಗತೀ । ತಯಾ ಅಮೂರ್ತಿಚೀ ಮೂರ್ತೀ । ಹೋವೂನಿ ಠಾಕೇ ॥ ७೦ ॥ ತೇಣೇ ಬಹುತೀ ಜನ್ಮೀ ಮಾಗಿಲೀ । ವಿಕ್ಷೇಪಾಂಚೀ ಪಾಣಿವಳೀ ಝಾಡಿಲೀ । ಮ್ಹಣೋನಿ ಉಪಜತ ಖೇವೋ ಬುಡಾಲೀ । ಲಗ್ನ ಘಟಿಕಾ ॥ ७೧ ॥ ಆಣಿ ತದ್ರೂಪ ತೇಸೀ ಸುಲಗ್ನ । ಲಾಗೋನಿ ಠೇಲೇ ಅಭಿನ್ನ । ಜೈಸೇ ಲೋಪಲೇ ಅಭ್ರ ಗಗನ । ಹೋವೂನಿ ಠಾಕೇ ॥ ७२ ॥ ತೈಸೇ ವಿಶ್ವ ಜೇಥ ಹೋಯೇ । ಮಾಗೌತೀ ಜೇಥ ಲಯಾಜಾಯೇ । ತೇ ವಿದ್ಯಮಾನೇಚಿ ದೇಹೇ । ಜಾಹಲಾ ತೋ ಗಾ ॥ ७३ ॥

**ಅರ್ಥ**— ಕಾರಣ ಕೋಟ್ಯಾವಧಿ ವರ್ಷದಿಂದ ಸಾವಿರಾರು ಜನ್ಮದ ಪ್ರತಿಬಂದ ಮಾಡಿ ಅವನು ಆತ್ಮಸಿದ್ಧಿಯ ದಂಡಿಯ ಮೇಲೆ ಬಂದು ಮುಟ್ಟಿರುತ್ತಾನೆ. ॥ ४६५ ॥ ಆದುದರಿಂದ ಸರ್ವ ಸಾಧನಗಳು ಅವನಿಗೆ ಸ್ವಭಾವತ ಪ್ರಾಪ್ತವಾಗುತ್ತವೆ. ಆಮೇಲೆ ಅವನು ವಿವೇಕದ ರಾಜ್ಯದ ಮೇಲೆ ಕೂತುಕೊಳ್ಳುತ್ತಾನೆ. ॥ ४६६ ॥ ಆ ಮೇಲೆ ವಿಚಾರ ಮಾಡುವದರಲ್ಲಿ ಶ್ರೇಷ್ಠವೆನಿಸಿಕೊಂಡ ವಿವೇಕವಾದರೂ ಹಿಂದೆ ಉಳಿಯುತ್ತದೆ. ಮತ್ತು ವಿಚಾರಕ್ಕೆ ನಿಲುಕದೇ ಇದ್ದ ಬ್ರಹ್ಮಸ್ವರೂಪದ ರಾಜ್ಯದ ಮೇಲೆ ಅವನು ಆರೂಢನಾಗುತ್ತಾನೆ. ॥ ४६೭ ॥ ಆ ಸ್ಥಳದಲ್ಲಿ ಮನೋರೂಪಿ ಮೇಘವು ಇಲ್ಲದಂತೆ ಆಗುತ್ತದೆ. ಮತ್ತು ಪ್ರಾಣವಾಯು ಅಲ್ಲಾಡುವನು ನಿಲ್ಲುತ್ತದೆ. ಮತ್ತು ಆಕಾಶವು ತನ್ನಲ್ಲಿಯೇ ಲೀನವಾಗುತ್ತದೆ. ॥ ४६८ ॥ ಓಂಕಾರದ ಅರ್ಧ ಬಿಂದುವಿನಲ್ಲಿ ಪ್ರಣವ ಇದ್ದು ಇಲ್ಲದಂತೆ ಆಗುತ್ತದೆ. ಈ ರೀತಿಯಿಂದ ಅವನಿಗೆ ಅವರ್ಣನೀಯ ಸುಖವು ಪ್ರಾಪ್ತಿಯಾಗುತ್ತದೆ. ಆದುದರಿಂದ ಆ ಸ್ಥಳದಲ್ಲಿ ಸಂಭಾಷಣವೇ ನಿಂತುಬಿಡುತ್ತದೆ. ॥ ४६९ ॥ ಆ ಮೇಲೆ ಎಲ್ಲ ಗತಿಗಳಿಗೂ ಗತಿ ಕೊಡುವಂಥ

ಯಾವ ಬ್ರಹ್ಮ ಸ್ಥಿತಿಯು ಆ ನಿರಾಕಾರ ರೂಪದ ಸ್ಥಿತಿಯ-ರೂಪವನ್ನೇ ಧರಿಸಿರುತ್ತದೆ. ॥ ೪೨೦ ॥ ಅವನು ಹಿಂದಿನ ಅನೇಕ ಜನ್ಮದಲ್ಲಿ ವಿಕ್ಷೇಪರೂಪಿ ಇದೇ ಒಂದು ನೀರಿನ ಮೇಲಿನ ಪಾಚಿಯನ್ನು ತೆಗೆದು ಒಗೆದಿರುತ್ತಾನೆ. ಅಂತಾ ಅವನ ಲಗ್ನ ಘಟಿಕಾ ಅವನ ಜನ್ಮ ಆದಕೂಡ್ಲೇ ಮುಳಗುತ್ತದೆ. ॥ ೨೧ ॥ ಮತ್ತು ತದ್ರೂಪತೆಯ ಸಂಗಡ ಶುಭಲಗ್ನವಾಗಿ ಅದು ಅಭಿನ್ನತ್ವವನ್ನು ಹೊಂದುತ್ತದೆ. ಅಭ್ರಗಳು ಇಲ್ಲವಂತೆ ಆದಕೂಡ್ಲೇ ಯಾವ ಪ್ರಕಾರಾ ಶುದ್ಧ ಆಕಾಶರೂಪವೇ ಉಳಿಯುತ್ತದೆ. ॥ ೪೨೨ ॥ ಅದೇ ಪ್ರಕಾರಾ ( ವಿಕ್ಷೇಪಾದಿ ವಿಘ್ನಗಳು ಇಲ್ಲದಂತೆ ಆದವೆಂದರೆ ) ಯಾವದರಿಂದ ವಿಶ್ವದ ಉತ್ಪನ್ನವಾಗುತ್ತದೋ, ಮತ್ತು ಯಾವ ಸ್ಥಳದಲ್ಲಿ ಅದು ಪುನ್ಹಾ ಲಯಹೊಂದುತ್ತದೋ, ಆ ಬ್ರಹ್ಮವು ಈ ವಿದ್ಯಾಮಾನ ದೇಹದಲ್ಲಿರುವಾಗ್ಗೆನೇ ಸಿದ್ಧವಾಗುತ್ತದೆ. ॥೪೨೩॥

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥ ೪೬ ॥**

**[ ತಪಸ್ವಿಭ್ಯೋಽಧಿಕ ಇತಿ ]** ಜಯಾ ಲಾಭಾಚಿಯಾ ಆಶಾ । ಕರೂನಿ ಧೈರ್ಯ ಬಾಹೂಚಾ ಭರವಸಾ । ಘಾಲೀತಷಟ್ ಕರ್ಮಾಂಚಾ ಧಾರಸಾ । ಕರ್ಮನಿಷ್ಠ ॥ ೨೪ ॥ ಕಾಜೆಯೇ ಏಕ ವಸ್ತುಲಾಗೀ । ಬಾಣೋನಿ ಜ್ಞಾನಾಚೀ ವಜ್ರಾಂಗೀ । ಝುಂಝುತ ಪ್ರಪಂಚೇಸೀ ಸಮರಂಗೀ ಜ್ಞಾನಿಯೇಗಾ ॥ ೨೫ ॥ ಅಥವಾ ನಿಲಾಗೇ ನಿಸರಡಾ । ತಪೋ ದುರ್ಗಾಚಾ ಆಡಕಡಾ । ಝೋಂಬತೀ ತಪಿಯೇ ಚಾಡಾ । ಜಯಾಚಿಯಾ ॥ ೨೬ ॥ ಜೇಭಜತಿಯಾ ಭಜ್ಯ । ಯಾಜ್ಞಿಕಾಂಚೇ ಯಾಜ್ಯ । ಏವಂ ಜೇ ಪೂಜ್ಯ । ಸಕಳಾ ಸದಾ ॥ ೨೭ ॥ ತೇಚಿತೋ ಆಪಣ । ಸ್ವಯೇ ಜಾಹಾಲಾ ನಿರ್ವಾಣ । ಜೇ ಸಾಧಕಾಂಚೇ ಕಾರಣ । ಸಿದ್ಧತತ್ವ ॥ ೨೮ ॥ ಮ್ಹಣೋನಿ ಕರ್ಮನಿಷ್ಠಾ ವಂದ್ಯ । ತೋ ಜ್ಞಾನಿಯಾಸಿ ವೇದ್ಯ । ತಾಪಸಾಂಚಾ ಆದ್ಯ । ತಪೋನಾಥ ॥ ೨೯ ॥ ಸೈ ಜೀವ ಪರಮಾತ್ಮ ಸಂಗಮಾ । ಜಯಾಚೇ ಯೇಣೇ ಜಾಹಾಲೇ ಮನೋಧರ್ಮಾ । ತೋ ಶರೀರೀಚಿ ಪರೀ ಮಹಿಮಾ । ಐಸೀ ಪಾವೇ ॥ ೪೩೦ ॥ ಮ್ಹಣೋನಿ ಯಾ ಕಾರಣೇ । ತೂತೇಮೀ ಸದಾ ಮ್ಹಣೇ । ಯೋಗೀ ಹೋಈ ಅಂತಃಕರಣೇ । ಪಾಂಡು ಕುಮರಾ ॥ ೩೧ ॥

**ಅರ್ಥ—** ಯಾವ ಲಾಭದ ಆಶಾದಿಂದ ಕರ್ಮನಿಷ್ಠ ಪುರುಷರು ಧೈರ್ಯರೂಪಿ ಬಾಹುಗಳ ವಿಶ್ವಾಸವನ್ನು ಹಿಡಿದು ಷಟ್ಕರ್ಮದ ಪ್ರವಾಹದಲ್ಲಿ ಹಾರಿಕೊಳ್ಳುತ್ತಾರೆ. ॥ ೪೨೪ ॥ ಇಲ್ಲವೇ ಯಾವ ಒಂದು ವಸ್ತುವಿನ ದೆಶೆಯಿಂದ ಜ್ಞಾನಿ ಪುರುಷರು ಜ್ಞಾನರೂಪ, ಕವಚವನ್ನು ಮೈಯಲ್ಲಿ ಧರಿಸಿಕೊಂಡು ಸಮರಾಂಗಣದ ಮಧ್ಯದಲ್ಲಿ ಪ್ರಪಂಚ ಶತ್ರುವಿನ ಸಂಗಡ ಹೋರಾಡುತ್ತಾರೆ. ॥ ೪೨೫ ॥ ಅಥವಾ ಯಾವ ಸ್ವರೂಪ ಪ್ರಾಪ್ತಿಯ ದೆಶೆಯಿಂದ ತಪಸ್ವಿ ಜನರು ನಿರಾಧಾರ ಜಾರಿ ಬೀಳುವಂಥ ತಪೋರೂಪ ಪರ್ವತದ ದಂಡೆಯ ಮೇಲೆ ಹತ್ತಿ ಪ್ರವಾಸ ಮಾಡುತ್ತಾರೆ. ॥ ೪೨೬ ॥ ಯಾವ ಸ್ವರೂಪವು ಭಜನ ಮಾಡುವ ಜನರ ಭಜನದ ಅಧಿಷ್ಠಾನ ವಿಷಯವಾಗಿದೆ. ಮತ್ತು ಯಾಜ್ಞಿಕರ ಯಜ್ಞದ ವಿಷಯವಾಗಿದೆ, ಈ ರೀತಿಯಿಂದ ಆ ಸ್ವರೂಪವು, ಸರ್ವರಿಗೆ ಸರ್ವಕಾಲದಲ್ಲಿಯೂ, ಪೂಜ್ಯವಾಗಿರುತ್ತದೆ. ॥ ೪೨೭ ॥ ಯಾವದು ಸಾಧಕರ ಶುದ್ಧ ತತ್ವವಾಗಿರುತ್ತದೋ, ಆ ನಿರ್ವಾಣ ಪರಬ್ರಹ್ಮ ಸ್ವರೂಪವೇ ಯೋಗಿಯು ಸ್ವತಃ ಆಗುತ್ತಾನೆ. ॥ ೪೨೮ ॥ ಆದುದರಿಂದ ಅವನು ಕರ್ಮನಿಷ್ಠರಿಗೆ ವಂದ್ಯನೂ, ಜ್ಞಾನಿಗಳಿಗೆ ವಿಚಾರಣೀಯನು, ತಪಸ್ವಿಗಳಿಗೆ ಮೂಲ ತಪೋನಾಥನು ಆಗಿರುವನು. ॥೪೨೯॥ ಆಸರಿ ಜೀವಪರಮಾತ್ಮರ ಸಂಗಮದಲ್ಲಿ ಅವನ ಅಂತಃಕರಣವು ಐಕ್ಯವಾದುದರಿಂದ ಅವನು ದೇಹಧಾರಿಯಿದ್ದಾಗ್ಯಾದರೂ ಇಂಥ ( ಅಪ್ರತಿಮ ) ಯೋಗ್ಯತೆಗೆ ಮುಟ್ಟುತ್ತಾನೆ. ॥ ೪೩೦ ॥ ಅರ್ಜುನನೇ ! ಈ ಕಾರಣದ ದೆಶೆಯಿಂದ ನೀನು ಯೋಗಿ ಆಗು ಎಂದು ಮನಃಪೂರ್ವಕವಾಗಿ ನಾನು ಯಾವಾಗಲೂ ನಿನಗೆ ಹೇಳುತ್ತಿರುತ್ತೇನೆ. ॥ ೪೩೧ ॥

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥ ೪೭ ॥**

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅಭ್ಯಾಸಯೋಗೋ, ನಾಮ ಷಷ್ಠೋಽಧ್ಯಾಯಃ ॥ ೬ ॥**

[ **ಯೋಗಿನಾಮಪೀತಿ** ] ಆಗಾ ಯೋಗೀ ಜೋ ಮ್ಹಣಿಜೇ । ತೋ ದೇವಾಚಾ ದೇವ ಜಾಣಿಜೇ । ಆಣಿ ಸುಖ ಸರ್ವಸ್ವ ಮಾಝೆಂ । ಚೈತನ್ಯ ತೋ ॥ ೮೨ ॥ ತೇಥ ಭಜತಾ ಭಜನ ಭಜಾವೇ । ಹೇಭಕ್ತಿ ಸಾಧನ ಜೇ ಆಘವೇ । ತೋ ಮೀಚಿ ಜಾಹಾಲೋ ಅನುಭವೇ । ಅಖಂಡಿತ ॥೮೩॥ ಮಗ ತಯಾ ಆಮ್ಹಾ ಪ್ರೀತೀಚೇ । ಸ್ವರೂಪ ಬೋಲೀ ನಿರ್ವಚೇ । ಐಸೇ ನವ್ಹೇ ಗಾ ತೇ ಸಾಚೇ । ಸುಭದ್ರಾಪತೀ ॥ ೮೪ ॥ ತಯಾ ಏಕವಟಲಿಯಾ ಪ್ರೇಮಾ । ಜರೀ ಪಾಡೇ ಪಾಹಿಜೇ ಉಪಮಾ । ತರೀ ಮೀ ದೇಹ ತೋ ಆತ್ಮಾ । ಹೇಚಿ ಹೋಯ ॥೮೫॥ ಐಸೇ ಭಕ್ತ ಚಕೋರ ಚಂದ್ರೇ । ಬೋಲಿಲೇ ಗುಣ ಸಮುದ್ರೇ । ತ್ರಿಭುವನೈಕನರೇಂದ್ರೇ । ಸಂಜಯು ಮ್ಹಣೇ ॥ ೮೬ ॥ ತೇಥ ಆದಿಪಾಸೋನಿ ಪಾರ್ಥಾ । ಐಕಿಜೇ ಐಸೇಚಿ ಆಸ್ಥಾ । ದುಣಾವಲೀ ಹೇ ಯದುನಾಥಾ, ಭಾವೋ ಸರಲೇ ॥ ೮೭ ॥ ಕೀ ಸಾವಿಯಾಚಿ ಮನೀ ಸಂತೋಷಲಾ । ಜೇ ಬೋಲಾ ಆರಿಸಾ ಜೋಡಲಾ । ತೇಣೇ ಹರಿಖೇ ಆತಾ ಉಪಲವಲಾ । ನಿರೂಪೀಲ ॥ ೮೮ ॥ ತೋ ಪ್ರಸಂಗ ಆಹೇ ಫುಡಾ । ಜೇಥ ಶಾಂತದಿಸೇಲ ಉಘಡಾ । ತೋ ಪಾಲವಿಜೇಲ ಮುಡಾ। ಪ್ರಮೇಯ ಬೀಜಾಚಾ ॥ ೮೯ ॥ ಜೇ ಸಾತ್ವಿಕಾ ಚೇನಿ ವಡಪೇ । ಗೇಲೇ ಆಧ್ಯಾತ್ಮಿಕ ಖರಪೇ । ಸಹಜೇ ನಿಡಾರಲೇ ವಾಫೇ । ಚತುರ ಚಿತ್ತಾಚೇ ॥ ೯೦ ॥ ವರೀ ಅವಧಾನಾಚಾ ವಾಫಸಾ । ಲಾಧಲಾ ಸೋನಯಾ ಐಸಾ । ಮ್ಹಣೋನಿ ಪೇರಾದಯಾ ಧಿಂವಸಾ । ಶ್ರೀನಿವೃತ್ತೀಸೀ ॥ ೯೧ ॥ ಜ್ಞಾನದೇವ ಮ್ಹಣೇ ಮೀಚಾಡೇ । ಸದ್ಗುರೂನೀ ಕೇಲೇ ಕೋಡೇ । ಮಾಥಾ ಹಾತ ಠೇವಿಲಾ ತೇಫುಡೇ । ಬೀಜಚಿ ವಾಇಲೇ ॥ ೯೨॥ ಮ್ಹಣವೂನಿ ಯೇಣೇ ಮುಖೇ ಜೇಜೇ ನಿಗೇ । ತೇ ಸಂತಾಚ್ಯಾ ಹೃದಯೀ ಸಾಚೇಂಚಿ ಲಾಗೇ । ಹೇ ಅಸೋ ಸಾಂಗೋ ಶ್ರೀರಂಗೇ । ಬೋಲಿಲೇ ಜೇ ॥ ೯೩ ॥ ಪರೀ ತೇ ಮನಾಚ್ಯಾ ಕಾನೀ ಐಕಾವೇ । ಬೊಲು ಬುದ್ಧೀಚ್ಯಾ ಡೋಳಾ ದೇಖಾವೇ । ಹೇ ಸಾಟೋ ವಾಟೇ ಘ್ಯಾವೇ । ಚಿತ್ತಾಚಿಯಾ ॥ ೯೪ ॥ ಅವಧಾನಾಚೇನಿ ಹಾತೇ । ನೇ ಯಾವೇ ಹೃದಯಾ ಆಂತೌತೇ । ಹೇರಿರ್ಝುವೀಲ ಆಯಣೀತೇ ಸಜ್ಜ ನಾಂಚಿಯೇ ॥ ೯೫ ॥ ಹೇ ಸ್ವಹಿತಾತೇ ನಿವವಿತೀ । ಪರಿಣಾಮಾತೇ ಜೇವವಿತೀ । ಸುಖಾಚೀ ವಾಹತೀ । ಲಾಖೋಲೀ ಜೀವಾ ॥ ೯೬ ॥ ಆತಾ ಅರ್ಜುನೇಸೀ ಶ್ರೀ ಮುಕುಂದೇ । ನಾಗರ ಬೋಲಿಜೇಲ ವಿನೋದೇ । ತೇ ವೋವಿಯೇಚೇನಿ ಪ್ರಬಂಧೇ । ಸಾಂಗೇನ ಮೀ ॥ ೯೭ ॥

**ಇತಿ ಶ್ರೀ ಜ್ಞಾನದೇವ ಕೃತಾಯಾಂ ಭಾವಾರ್ಥದೀಪಿಕಾಯಾಂ ಷಷ್ಠೋಽಧ್ಯಾಯಃ ॥ ೬ ॥**

**ಅರ್ಥ—** ಎಲೋ ಯೋಗಿಯೆಂದರೆ ದೇವರ ದೇವನು, ನನ್ನ ಸರ್ವ ಸುಖದ ವಾಸಸ್ಥಾನವು, ಮತ್ತು ಕೇವಲ ನನ್ನ ಪಂಚಪ್ರಾಣವೇ ಇರುವನೆಂದು ತಿಳಿಯುವನಾಗು. ॥ ೪೮೨ ॥ ಅವನ ಸ್ಥಳದಲ್ಲಿ ಭಜನ ಮಾಡುವವನೂ ಭಜನ ಕ್ರಿಯೆಯು ಮತ್ತು ಭಜನ ಸಾಮಗ್ರಿಗಳು ಈ ಭಕ್ತಿಯ ತ್ರಿಪುಟಿಯು ಅವನ ಅನುಭವದಿಂದ ನಾನೇ ಆಗಿದ್ದೇನೆ.॥೪೮೩॥ ಎಲೋ ಸುಭದ್ರಾಪತೇ ! ಆಮೇಲೆ ಅವನ ಮತ್ತು ನಂನ ಮಧ್ಯದಲ್ಲಿರುವ ಪ್ರೀತಿಯು ಸ್ವರೂಪದ ವರ್ಣನೆಯನ್ನು ಮಾಡ ಲಿಕ್ಕೆ ಬರುವಂತೆ ಇರುವದಿಲ್ಲ. ಆದರೆ ಆ ಭಕ್ತನು ಪ್ರತ್ಯಕ್ಷ ನಾನೇ ಆಗಿರುವೆನು. ॥ ೪೮೪ ॥ ಈ ರೀತಿಯಿಂದ ಯಾವನು ಪ್ರೇಮದಿಂದ ಐಕ್ಯವಾಗಿರುವನೋ, ಅವನ ತುಲನೆಗೆ ಉಪಮೆಯು ಬೇಕಾಗಿದ್ದರೆ, ನಾನು ದೇಹ ಮತ್ತು ಅವನು ಆತ್ಮ ಆಗಿರುವನು. ಇದರಕಿಂತಲೂ ಅನ್ಯ ಉಪಮೆಯು ಇರುವದಿಲ್ಲ. ॥ ೪೮೫ ॥ ಸಂಜಯನು ಅನ್ನುತ್ತಾನೆ,

ಭಕ್ತರೂಪ ಚಕೋರ ಚಂದ್ರನೂ, ಇಲ್ಲವೇ ಸರ್ವ ತ್ರಿಭುವನದ ರಾಜನೂ, ಮತ್ತು ಗುಣಸಮುದ್ರನೂ, ಆದ ಭಗವಾನ ಶ್ರೀಕೃಷ್ಣ ಪರಮಾತ್ಮನು ಹೀಗೆ ಮಾತನಾಡುತ್ತಿರಲು, ॥ ೪೮೬ ॥ ಅಲ್ಲಿ ಪಾರ್ಥನಿಗೆ ಪೂರ್ವದಿಂದ ಯೋಗದ ಐಶ್ವರ್ಯವನ್ನು ಕೇಳುವ ಅಪೇಕ್ಷೆಯು ಇದ್ದೇ ಇತ್ತು. ಅದು ಪುನಃ ಇಂಮಡಿಯಾಯಿತೆಂಬದನ್ನು ಯದುಕುಲತಿಲಕನು ತಂನ ಮನಸಿನಲ್ಲಿ ಕಂಡುಹಿಡಿದನು. ॥೪೮೭॥ ಮತ್ತು ಅದನ್ನು ನೋಡಿ, ಶ್ರೀಕೃಷ್ಣನ ಮನಸಿನಲ್ಲಿ ಆನಂದ ಉಂಟಾಗಿ ಅನ್ನುತ್ತಾನೆ. ನಾನು ಏನು ಹೇಳುತ್ತೆನೆ, ಅದು ಪ್ರತ್ಯಕ್ಷ ನೋಡುವಂಥ ಕಂನಡಿಯೇ ಅರ್ಜುನನು ಆಗಿರುವನು. ಆಗ್ಗೆ ಇನ್ನು ಮೇಲೆ ಆ ಆನಂದದ ಭರದಲ್ಲಿ ಮುಂದಿನ ಕಥೆಯನ್ನು ಹೇಳುವನು. ॥ ೪೮೮ ॥ ಆ ಪ್ರಸಂಗವು ಮುಂದೆ ಬರುತ್ತಿದ್ದು ಆದರಲ್ಲಿ ಶಾಂತಿರಸವು ನಿಚ್ಚಳವಾಗಿ ಕಾಣುವದು. ಮತ್ತು ಜ್ಞಾನರೂಪಿ ಬೀಜದ ಭಾಂಡಾರವು ತೆರೆದೀತು. ॥ ೪೮೯ ॥ ಆ ಜ್ಞಾನ ಬೀಜವನ್ನು ಬಿತ್ತುವದರ ದೆಶೆಯಿಂದ ಸತ್ವಗುಣದ ಪುಷ್ಟಿಯಾಗಿ ಮತ್ತು ಅಧ್ಯಾತ್ಮಿಕ ಮುಂತಾದ ತ್ರಿವಿಧತಾಪತ್ರಾಯದ ತೊಡಕು ತೇಲಿಹೋಗಿ ಜಾಣರಾದ ಶ್ರೋತೃಗಳ ಚಿತ್ತದಲ್ಲಿಯ ಶುದ್ಧಹವೆಯು ಸಿದ್ಧವಾಗಿರುವದು. ॥೪೯೦॥ ಆಮೇಲೆ ಭಂಗಾರದಂಥ ಅವಧಾನದ ಕಡೆಗೆ ಲಕ್ಷವು ಕುಳಿತದ್ದರಿಂದ ಶ್ರೀ ನಿವೃತ್ತಿನಾಥರಿಗೆ ಆ ಜ್ಞಾನರೂಪ ಬೀಜಗಳನ್ನು ಬಿತ್ತುವ ಉತ್ಕಂಠಾ ಉಂಟಾಯಿತು. ॥ ೪೯೧ ॥ ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ, ಆ ಬೀಜಗಳನ್ನು ಬಿತ್ತುವದರ ದೆಶೆಯಿಂದ ಸದ್ಗುರುಗಳು ಬಹಳೇ ಕೌತುಕದಿಂದ ಬಿತ್ತುವ ಕೋಲುಗಳ ಮೇಲೆ ಇರುವ (ಬಟ್ಟಲದ) ಸ್ಥಳದಲ್ಲಿಯೇ ನನ್ನನ್ನು ಯೋಜನೆಮಾಡಿ, ನನ್ನ ಮಸ್ತಕದ ಮೇಲೆ ತಮ್ಮ ಹಸ್ತವನ್ನಿಟ್ಟರು. ಅವರು ಬರೇ ಕೈಯನ್ನಿಟ್ಟರು ಇಷ್ಟೇ ಅಲ್ಲ! (ನನ್ನ ಮಸ್ತಕರೂಪಿ) ಬಟ್ಟಲದಲ್ಲಿ ತಮ್ಮ ಸ್ವಹಸ್ತದಿಂದಲೇ ಬೀಜಗಳನ್ನು ಹಾಕಿದರು. ॥ ೪೯೨ ॥ ಆದುದರಿಂದ ನನ್ನ ಬಾಯಿಯಿಂದ ಏನೇನು ಶಬ್ದಗಳು ಹೊರಡುವವು, ಅವು ಸಂತರ ಮನಸ್ಸಿಗೆ ರುಚಿಸುವದು. ಇದಂತೂ ಇರಲಿ, ಇನ್ನು ಮೇಲೆ ಶ್ರೀರಂಗನು ಯಾವ ಮಾತುಗಳನ್ನಾಡಿದನು ಆ ಮಾತುಗಳನ್ನು ನಾನು ಮುಂದೆ ಹೇಳುತ್ತೇನೆ. ॥ ೪೯೩ ॥ ಆದರೆ ಶ್ರೋತೆಗಳಿರಾ! ಆ ಮಾತುಗಳನ್ನು ಮನಸ್ಸಿನ ಕಿವಿಗಳಿಂದ ಕೇಳಿರಿ. ಮತ್ತು ಬುದ್ಧಿಯ ಕಣ್ಣುಗಳಿಂದ ನೋಡಿರಿ. ಮತ್ತು ಅದರ ಊಹಾಪೋಹದ ಕಡೆಗೆ ಲಕ್ಷವನ್ನಿಡಿರಿ. ॥ ೪೯೪ ॥ ಶ್ರವಣದ ಕೈಯಿಂದ ಹೃದಯದಲ್ಲಿ ಕೂಡಹಾಕಿರಿ. ಅಂದರೆ ಅದು ಸಜ್ಜನರ ಮನಸಿಗೆ ರಮಿಸುವಂಥಾದ್ದು ಆದೀತು. ॥ ೪೯೫ ॥ ಈ ಸಂಭಾಷಣದಿಂದ ನಿತ್ಯ ಆತ್ಮಪ್ರಾಪ್ತಿಯಾದೀತು. ಮತ್ತು ಸಂಕಟದೊಳಗಿಂದ ಮುಕ್ತತಾ ಆದೀತು. ಮತ್ತು ಜೀವನಕ್ಕೆ ಸುಖಪ್ರಾಪ್ತಿ ಉಂಟಾದೀತು. ॥ ೪೯೬ ॥ ಇನ್ನುಮೇಲೆ ಶ್ರೀ ಮುಕುಂದನು ಅರ್ಜುನನಿಗೆ, ವಿನೋದದಿಂದ ಯಾವ ಕೆಲವು ಸರ್ವೋತ್ಕೃಷ್ಟ ಜ್ಞಾನವನ್ನು ಹೇಳಿರುವನೋ, ಅದನ್ನು ನಾನು ನಿಮಗೆ ಓವಿ ರೂಪದಿಂದ ಹೇಳುತ್ತೇನೆ. ॥ ೪೯೭ ॥

**ಶ್ರೀಮದ್ಭಗವದ್ಗೀತೆಯ ಮತ್ತು ಶ್ರೀ ಜ್ಞಾನೇಶ್ವರಿಯ ಸುಲಭ, ಸರಲ ಕನ್ನಡ ಅನುವಾದದ ಆರನೆಯ ಅಧ್ಯಾಯವು ಮುಗಿದುದು.**

## ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**



# ಜ್ಞಾನೇಶ್ವರೀ

## ಏಳನೆಯ ಅಧ್ಯಾಯವು

**ಶ್ರೀಭಗವಾನುವಾಚ:—**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥ ೧ ॥**

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯ ಜ್ಞಾತವ್ಯಮವಶಿಷ್ಯತೇ ॥ ೨ ॥**

**[ ಮಯ್ಯಾಸಕ್ತಮನ ಇತಿ ]** ಆಇಕಾ ಮಗ ತೋ ಶ್ರೀ ಅನಂತ । ಪಾರ್ಥಾತೇ ಅಸೇ ಮ್ಹಣತ । ಪೈ ಗಾ ತೂ ಯೋಗ ಯುಕ್ತ । ಜಾಲಾಸಿ ಆತಾ ॥ ೧ ॥ ಮಜ ಸಮಗ್ರಾತೇ ಜಾಣಸೀ ಐಸೇಂ । ಆಪಲಿಯಾ ತಳಹಾತೀಂಚೇಂ ರತ್ನ ಜೈಸೇ । ತುಜ ಜ್ಞಾನ ಸಾಂಗೇನ ತೈಸೇ ॥ ವಿಜ್ಞಾನೇಸೀ ॥ ೨ ॥ ಏಥ ವಿಜ್ಞಾನೇಂ ಕಾಯ ಕರಾವೇ । ಐಸೇ ಘೇಸೀ ಜರೀ ಮನೋಭಾವೇ । ತರೀ ಪೈ ಆಧೀ ಜಾಣಾವೇ । ತೇಚೀ ಲಾಗೇ ॥ ೩ ॥ ಮಗ ಜ್ಞಾನಾಚಿಯೇ ವೇಳೇ । ಝಾಂಕತೀ ಜಾಣಿವೇಚೇ ಡೋಳೇಂ । ಜೈಸೀ ತೀರೀ ನಾವ ನ ಢಳೇ । ಟೇಂಕಲೀ ಸಾಂತೀ ॥ ೪ ॥ ತೈಸೀ ಜಾಣೀವ ಜೇಥ ನ ರಿಗೇ । ವಿಚಾರ ಮಾಗುತಾ ಪಾಉಲೀ ನಿಘೇಂ । ತರ್ಕ ಆಯಣೀ ನೇಘೇಂ । ಆಂಗೀ ಜಯಾಚ್ಯಾ ॥ ೫ ॥ ಅರ್ಜುನಾ ತಯಾನಾವ ಜ್ಞಾನ ! ಯೇರ ಪ್ರಪಂಚ ಹೇ ವಿಜ್ಞಾನ । ತೇಥ ಸತ್ಯಬುದ್ಧಿ ತೇ ಅಜ್ಞಾನ । ಹೇಹೀ ಜಾಣ ॥ ೬ ॥ ಆತಾ ಅಜ್ಞಾನ ಅಘೇಂ ಹಾರಪೇ । ವಿಜ್ಞಾನ ನಿಃಶೇಷ ಕರಪೇ । ಆಣಿ ಜ್ಞಾನ ತೇ ಸ್ವರೂಪೇ । ಹೋಂವೂನಿ ಜಾಇಜೇ ॥ ೭ ॥ ಜೇಣೇ ಸಾಂಗತಯಾಚೇಂ ಬೋಲಣೇ ಖುಂಟೇಂ । ಐಕತಯಾಚೇ ವ್ಯಸನ ತುಟೇ । ಹೇ ಜಾಣಣೇ ಸಾನೇ ಮೋಟೇ । ಉರೋನೇದೀ ॥ ೮ ॥ ಐಸೇ ವರ್ಮ ಜೇ ಗೂಢ । ತೇ ಕಿಜೇಲ ವಾಕ್ಯಾರೂಢ । ಜಣೇ ಥೋಡೇನಿ ಪುರೇ ಕೋಡ । ಬಹುತ ಮನೀಂಚೆ ॥ ೯ ॥

**ಅರ್ಥ**— ಎಲೈ ಶ್ರೋತೃಗಳಿರಾ ! ಕೇಳಿರಿ— ಆ ಮೇಲೆ ಶ್ರೀಕೃಷ್ಣನು ಅರ್ಜುನನಿಗೆ ಅನ್ನುತ್ತಾನೆ—ಎಲೋ, ನೀನು ಈಗ ನಿಶ್ಚಯವಾಗಿ ಯೋಗಜ್ಞಾನ ಸಂಪನ್ನನಾಗಿರುವಿ. ॥ ೧ ॥ ಇನ್ನುಮೇಲೆ ನಾನು ನಿನಗೆ ಪ್ರಪಂಚ ಜ್ಞಾನವನ್ನೂ, ಅದರೊಂದಿಗೆ ಬ್ರಹ್ಮಜ್ಞಾನವನ್ನೂ ಬೋಧಿಸುತ್ತೇನೆ. ಆ ಯೋಗದಿಂದ, ‘ ಅಂಗೈಯೊಳಗಿನ ರತ್ನವನ್ನು ಸಹಜವಾಗಿಯೇ ಮನುಷ್ಯನು ಕಂಡು ಹಿಡಿಯುವಂತೆ ’ ನೀನು ನನ್ನ ಸ್ವರೂಪಜ್ಞಾನವನ್ನು ಸುಲಭವಾಗಿಯೇ ಕಂಡು ಹಿಡಿಯುವೆ. ॥ ೨ ॥ ಈ ಸ್ಥಳದಲ್ಲಿ ಪ್ರಪಂಚ ಜ್ಞಾನದಿಂದಾಗುವದೇನು ಪ್ರಯೋಜನ ? ಎಂಬ ಭಾವವು ನಿನ್ನಲ್ಲಿ ಜನಿಸಬಹುದು ; ಆದರೆ ಮೊದಲು ಅದರ ಜ್ಞಾನವಾಗಲೇಬೇಕೆಂದು ನಾನು ನಿನಗೆ ಒತ್ತಿ ಹೇಳುತ್ತೇನೆ. ॥ ೩ ॥ ಆ ಮೇಲೆ ಜ್ಞಾನಸಾಕ್ಷಾತ್ಕಾರವಾಗಿ ಅಲ್ಲಿ ಬುದ್ಧಿಯ ದೃಷ್ಟಿಯು ಕುಂಠಿತವಾಗುತ್ತದೆ. ಯಾವ ಪ್ರಕಾರ ನಾವೆಯು ದಡವನ್ನು ತಲುಪಿದಮೇಲೆ ಅಲುಗಾಡುವದಿಲ್ಲವೋ, ॥ ೪ ॥ ಅದೇ ಪ್ರಕಾರ ಎಲ್ಲಿ ಬುದ್ಧಿಯು ಕುಂಠಿತವಾಗುವದೋ, ವಿಚಾರಶಕ್ತಿಯು ಹಿಂತಿರುಗುವದೋ, ಮತ್ತು ತರ್ಕದ ಉಬ್ಬು ಮುರಿದು ಬೀಳುವದೋ, ॥ ೫ ॥ ಆ ಸ್ಥಾನಕ್ಕೇ

ಜ್ಞಾನವೆನ್ನುವರು. ಅರ್ಜುನಾ, ಉಳಿದ ಸರ್ವ ಪ್ರಪಂಚಜ್ಞಾನವು ವಿಜ್ಞಾನವೆಂದು ಕರಿಯಲ್ಪಡುವದು. ಮತ್ತು ಆ ಪ್ರಪಂಚವು ನಿಜವೆಂದು ತಿಳಿಯುವದು ಕೇವಲ ಅಜ್ಞಾನವಾಗಿರುವದೆಂದು ನಂಬು, ॥ ೬ ॥ ಇನ್ನುಮೇಲೆ ಸರ್ವ ಅಜ್ಞಾನವು ಇಲ್ಲದಂತಾಗುವದು. ವಿಜ್ಞಾನವು ಸಂಪೂರ್ಣವಾಗಿ ಸುಟ್ಟುಹೋಗುವದು. ಮತ್ತು ಮೂರ್ತಿಮಂತ ಜ್ಞಾನವು ಪ್ರಕಟವಾಗುವದು. ॥ ೭ ॥ ಯಾವ ಯೋಗದಿಂದ ಹೇಳುವವರ ಮಾತು ನಿಂತು ಹೋಗುತ್ತದೋ, ಕೇಳುವವರ ಅಪೇಕ್ಷೆಯು ಕಡಿಮೆಯಾಗುತ್ತದೋ, ಇದು ದೊಡ್ಡದು, ಇದು ಚಿಕ್ಕದು ಎಂಬ ಭೇದವೇ ಅಡಗಿ ಹೋಗುವದೋ, ॥ ೮ ॥ ಇಂಥ ಗುಪ್ತತತ್ವದ ಮಾತು ಶಬ್ದದಲ್ಲಿ ತಂದಿರುವೆನು. ಇದರ ತುಸುಮಾತ್ರ ಪ್ರತಿಪಾದನದಿಂದಲೇ, ಮನಸಿನ ಬಹಳೊಂದು ಅಪೇಕ್ಷೆಗಳು ತೃಪ್ತಿಹೊಂದುವವು. (ಮನಸಿಗೆ ಪೂರ್ಣ ಸಮಾಧಾನವಾದೀತು.) ॥೯॥

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ವತಃ ॥ ೩ ॥**

**[ ಮನುಷ್ಯಾಣಾಂ ಸಹಸ್ರೇಷ್ವಿತಿ ]** ಪೈಗಾ ಮನುಷ್ಯಾಂಚಿಯಾ ಸಹಸ್ರಶಾ । ಮಾಜೀ ವಿಪಾಯಿಲೇಚಿಯಾ ಯೇಥ ಧಿಂವಸಾ । ತೈಸೇಯಾ ಧಿಂವಸೇಕರಾ ಬಹುವಸಾ । ಮಾಜೀ ವಿರಳಾ ಜಾಣೇ ॥ ೧೦ ॥ ಜೈಸಾ ಭರಲೇಯಾ ತ್ರಿಭುವನಾ । ಆಂತ ಏಕ ಏಕ ಚಾಂಗ ಅರ್ಜುನಾ । ನಿವಡೂನಿ ಕೀಜೇ ಸೇನಾ । ಲಕ್ಷವರೀ ॥ ೧೧ ॥ ಕೀ ತಯಾಹೀ ಪಾಠೀ ! ಜೇ ವೇಳೀ ಲೋಹ ಮಾಸಾತೇ ಘಾಂಟೇ । ತೇ ವೇಳೀ ವಿಜಯ-ಶ್ರೀಯೇಚ್ಯಾ ಪಾಟೇ । ಏಕಚಿ ಬೈಸೇ ॥ ೧೨ ॥ ತೈಸೇ ಆಸ್ಥೇಚ್ಯಾ ಮಹಾಪುರೀ । ರಿಘತಾತಿ ಕೋಟಿವರೀ । ಪರೀ ಪ್ರಾಪ್ತೀಚ್ಯಾ ಪೈಲತೀರೀ । ವಿಪಾಇಲಾ ನಿಗೇ ॥ ೧೩ ॥ ಮ್ಹಣವೂನಿ ಸಾಮಾನ್ಯ ಗಾ ನೋಹೇ । ಹೇ ಸಾಂಗತಾ ವಡೀಲ ಗೋಠಿ ಗಾ ಆಹೇ । ಪರೀ ತೇ ಬೋಲೋ ಯೇಈಲ ಪಾಹೇ । ಆತಾ ಪ್ರಸ್ತುತ ಐಕೇ ॥ ೧೪ ॥

**ಅರ್ಥ—** ಎಲೈ ಅರ್ಜುನನೇ ! ನಿಜವಾಗಿ ಸಾವಿರಾರು ಜನರಲ್ಲಿ ಎಲ್ಲಿಯೋ ಯಾವನಾದರೊಬ್ಬನಿಗೆ ಈ ಜ್ಞಾನ ಪ್ರಾಪ್ತಿಯ ಅಪೇಕ್ಷೆಯು ಉಂಟಾಗುತ್ತದೆ. ಮತ್ತು ಅಂಥ ಜ್ಞಾನದ ಅಪೇಕ್ಷೆಯಾದ ಬಹಳೊಂದು ಜನರಲ್ಲಿ, ನನ್ನ ಪ್ರಾಪ್ತಿಗಾಗಿ ಹೆಣಗಿ ನನ್ನನ್ನು ತಿಳಿಯುವವರು ಕ್ವಚಿತವೇ ದೊರಕುವರು. ॥ ೧೦ ॥ ಅರ್ಜುನಾ ! ಯಾವ ಪ್ರಕಾರ ಮನುಷ್ಯರಿಂದ ತುಂಬಿದ ತ್ರಿಭುವನದಲ್ಲಿ ದಂಡನ್ನು ಕೂಡಿಸಬೇಕಾದರೆ ಒಬ್ಬೊಬ್ಬ ಉತ್ತಮ ಸಶಕ್ತ ಶೂರರನ್ನು ಆರಿಸಿ ಲಕ್ಷಾವಧಿ ದಂಡನ್ನು ಕೂಡಿಸುತ್ತಾರೆ. ॥ ೧೧ ॥ ಮತ್ತು ಅದರೊಳಗಿಂದ ಯಾವ ಕಾಲಕ್ಕೆ ಶಸ್ತ್ರಾಸ್ತ್ರಗಳ ಹೊಡೆತವು ಕುತ್ತಿಗೆಯಮೇಲೆ ಬೀಳುತ್ತದೋ, ಆ ರಣಾಂಗಣದಲ್ಲಿ ಒಬ್ಬನೇ ವಿಜಯಲಕ್ಷ್ಮಿಯ ಅಧಿಕಾರಿಯಾಗುತ್ತಾನೆ. ॥ ೧೨ ॥ ಅದೇ ಪ್ರಕಾರ ನನ್ನ ಜ್ಞಾನ ಪ್ರಾಪ್ತಿಯ ಆಸ್ಥಾದ ಮಹಾಪೂರದಲ್ಲಿ ಕೋಟ್ಯಾವಧಿ ಜನರು ಧುಮುಕುತ್ತಾರೆ. ಆದರೆ ಅದರಲ್ಲಿ ಎಲ್ಲಿಯೋ ಒಬ್ಬನು ಮಹಾಪೂರವನ್ನು ದಾಟ ( ನಾನಿರುವ ) ದಡವನ್ನು ಸೇರುತ್ತಾನೆ. ಅದರಂತೆ ಎಲ್ಲಿಯೋ ಒಬ್ಬನಿಗೆ ( ಮಾತ್ರ ) ನನ್ನ ಪ್ರಾಪ್ತಿಯಾಗುತ್ತದೆ. ॥ ೧೩ ॥ ಆದುದರಿಂದ ಇದು ಸಾಮಾನ್ಯವಾದ ಮಾತಾಗಿರದೇ ಬಹಳೇ ಮಹತ್ವವಾದದ್ದೂ, ಶ್ರೇಷ್ಠವಾದದ್ದೂ ಇರುತ್ತದೆ. ಆದರೆ ಅವನ್ನು ಮುಂದೆ ಹೇಳುವವರಲ್ಲಿ ಬರುವದು. ಪ್ರಸ್ತುತ ವಿಜ್ಞಾನದ ರೂಪವನ್ನು ಹೇಳುತ್ತೇನೆ. ಅದನ್ನು ಕೇಳು. ॥ ೧೪ ॥

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

**[ ಭೂಮಿರಿತಿ ]** ತರೀ ಅವಧಾರೀ ಗಾ ಧನಂಜಯಾ । ಹೇ ಮಹದಾದಿಕ ಮಾಝೀ ಮಾಯಾ । ಜೈಸೀ ಪ್ರತಿಬಿಂಬೇ ಛಾಯಾ ! ನಿಜಾಂಗಾ ಚೀ ॥ ೧೫ ॥ ಆಣಿ ಇಯೇತೇ ಪ್ರಕೃತಿ ಮ್ಹಣಿಜೇ । ಜೇ ಅಷ್ಟಧಾ ಭಿನ್ನ ಜಾಣಿಜೇ । ಲೋಕತ್ರಯ ನಿಫಜೇ । ಇಯೇಸ್ತವ ॥ ೧೬ ॥ ಹೇ ಅಷ್ಟಧಾ ಭಿನ್ನ

ಕೈಸೀ । ಐಸಾಧ್ವನಿ ಧರಿಸಿ ಜರೀ ಮಾನಸೀ । ತರೀ ತೇಚಿ ಗಾ ಅತಾ ಪರಿಯೇಸೀ । ವಿವಂಚನಾ ॥೧೭॥
ಆಪ ತೇಜ ಗಗನ । ಮಹೀ ಮಾರುತ ಮನ । ಬುದ್ಧಿ ಅಹಂಕಾರ ಹೇ ಭಿನ್ನ । ಆಠೈ ಭಾಗ ॥ ೧೮ ॥

**ಅರ್ಥ**— ಎಲೋ ಧನಂಜಯನೇ, ಕೇಳು-ನಮ್ಮ ಮೈ ನೆರಳು ಹೇಗೆ ಇರುತ್ತದೋ, ಅದೇ ಪ್ರಕಾರ ಈ ಮಹಾದಾದಿ ತತ್ವಗಳು ಕಾರ್ಯ ರೂಪದಿಂದ ನನ್ನ ಮಾಯೆಯೇ ಇರುತ್ತವೆ. ॥ ೧೫ ॥ ಇದಕ್ಕೆ ಪ್ರಕೃತಿ ಎಂದೆನ್ನುತ್ತಾರೆ. ಈ ಪ್ರಕೃತಿಯು ಎಂಟು ಪ್ರಕಾರದ ಬೇರೆ ಬೇರೆ ಭಾಗಗಳಾಗಿರುತ್ತವೆ. ಮತ್ತು ಇದರಿಂದಲೇ ಈ ಮೂರು ಲೋಕಗಳು ಉತ್ಪನ್ನವಾಗುತ್ತವೆ. ॥ ೧೬ ॥ ಈ ಪ್ರಕೃತಿ ಎಂಟು ಪ್ರಕಾರಹೇಗಿರುವುವೆಂದು ನೀನು ನಿನ್ನ ಮನಸ್ಸಿನಲ್ಲಿ ಸಂದೇಹ ಪಡುತ್ತಿರಬಹುದು. ಆದರೆ ಅದೇ ವಿಚಾರವನ್ನು ನಿನ್ನ ಮುಂದೆ ಹೇಳುತ್ತೇನೆ ಕೇಳು. ॥ ೧೭ ॥ ಆಪ, ( ನೀರು ) ತೇಜ, ಆಕಾಶ, ಪೃಥ್ವಿ, ವಾಯು, ಮನ, ಬುದ್ಧಿ, ಮತ್ತು ಅಹಂಕಾರ ಇವುಗಳೇ ಪ್ರಕೃತಿಯ ಬೇರೆ ಬೇರೆ ಯಾದ ಎಂಟು ಪ್ರಕಾರಗಳು. ॥ ೧೮ ॥

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ ೫ ॥**

**[ ಅಪರೇಯಮಿತಿ ]** ಯಾ ಆಠಾಂಚೀ ಜೇ ಸಾಮ್ಯಾವಸ್ಥಾ । ತೇ ಮಾಝಿ ಪರಮ ಪ್ರಕೃತಿ ಪಾರ್ಥಾ । ತಿಯೇ ನಾಮ ವ್ಯವಸ್ಥಾ । ಜೀವ ಐಸೀ ॥ ೧೯ ॥ ಜೇ ಜಡಾತೇ ಜೀವವೀ । ಚೇತನೇ ತೇ ಚೇತವೀ । ಮನಾಕರವೀ ಮಾನಸೀ । ಶೋಕ ಮೋಹೋ ॥ ೨೦ ॥ ಪೈಬುದ್ಧೀಚ್ಯಾ ಅಂಗೀ ಜಾಣಣೇ । ತೇ ಜಿಯೇ ಜವಳಿಕೇಚೇ ಕರಣೇ ॥ ಜಿಯಾ ಅಹಂಕಾರಾಚೇ ವಿಂದಾಣೇ । ಜಗಚಿ ಧರಿಜೇ ॥ ೨೧ ॥

**ಅರ್ಥ**— ಪಾರ್ಥಾ ! ಈ ಎಂಟು ಭಾಗದ ಸಾಮ್ಯಸ್ಥಿತಿ ಎಂದರೆ ಐಕ್ಯವು. ಅದು ನನ್ನ ಪರಮ ಪ್ರಕೃತಿಯಾಗಿರುವದು. ಮತ್ತು ಅದೇ ಪರಮಾತ್ಮನ ಸ್ಥಳದಲ್ಲಿ ಜೀವ ಭಾವವನ್ನು ಉತ್ಪನ್ನಮಾಡುತ್ತದೆ. ಆದ್ದರಿಂದಲೇ ಅದಕ್ಕೆ ಜೀವಭೂತವೆಂದು ಹೆಸರಿದೆ. ॥ ೧೯ ॥ ಇದು ಅಚೇತನ ಶರೀರ ಮುಂತಾದವುಗಳಿಗೆ ಜೀವಕಳೆಯನ್ನು ಕೊಡುತ್ತದೆ. ಜ್ಞಾನಕ್ಕೆ ಚೇತನ ಕೊಡುತ್ತದೆ ಮತ್ತು ಮನಸ್ಸನ್ನು ಶೋಕ, ಮತ್ತು ಮೋಹದಲ್ಲಿ ತೊಡಗಿಸುತ್ತದೆ. ॥ ೨೦ ॥ ಆದರೆ ಬುದ್ಧಿಯ ಅಂಗದಲ್ಲಿ ಇದರ ಸಂಗತಿಯಿಂದ ಜ್ಞಾನವುಂಟಾಗುತ್ತದೆ. ಮತ್ತು ಅಹಂಕಾರದ ಕುಶಲತೆಯಿಂದ ಈ ಜಗತ್ತನ್ನು ಧಾರಣಮಾಡುತ್ತದೆ. ॥ ೨೧ ॥

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪ ಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥**

**[ ಏತದಿತಿ ]** ತೇ ಸೂಕ್ಷ್ಮ ಪ್ರಕೃತಿ ಕೋಡೇ । ಜೈ ಸ್ಥೂಳಾಚಿಯಾ ಆಂಗಾ ಘಡೇ । ತೈ ಭೂತ ಸೃಷ್ಟೀಚೇ ಪಡೇ । ಟಂಕಸಾಳ ॥ ೨೨ ॥ ಚತುರ್ವಿಧರಸಾ । ಉಮಟೋ ಲಾಗೇ ಆಪೈಸಾ । ಮೋಲಾ ತರೀ ಸರಿಸಾ । ಪರೀ ಥರಚಿ ಆನಾನ ॥ ೨೩ ॥ ಹೋತೀ ಚೌರ್ಯಾಐಂಸೀ ಲಕ್ಷಥರಾ । ಯೇರಾಮಿತೀ ನೇಣಿಜೇ ಭಾಂಡಾರಾ । ಭರೇ ಆದಿ ಶೂನ್ಯಾಚಾ ಗಾಭಾರಾ । ನಾಣೇಯಾಂಸೀ ॥ ೨೪ ॥ ಐಸೇ ಏಕತುಕೇ ಪಾಂಚ ಭೌತಿಕ । ಪಡತೀ ಬಹುವಸ ಟಾಂಕ । ಮಗ ತಿಯೇ ಸಮೃದ್ಧೀಚೇ ಲೇಖ । ಪ್ರಕೃತೀಚಿ ಧರೀ ॥ ೨೫ ॥ ಜೇ ಆಂಖೂನಿ ನಾಣೇ ವಿಸ್ತಾರೀ । ಪಾಠೀ ತಯಾಚೀ ಆಟಣೀ ಕರೀ । ಮಾಜೀ ಕರ್ಮಾ ಕರ್ಮಾಚಿಯಾ ವ್ಯವಹಾರೀ । ಪ್ರವರ್ತು ದಾವೀ ॥ ೨೬ ॥ ಹೇ ರೂಪಕ ಪರೀ ಅಸೋ । ಸಾಂಗೋ ಉಘಡ ಜೈಸೇ ಯೇ ಪರಿಯೇಸೋ । ತರೀ ನಾಮ ರೂಪಾಚಾ ಅತಿಸೋ । ಪ್ರಕೃತೀಚ ಕೀಜೇ ॥೨೭॥ ಆಣಿ ಪ್ರಕೃತಿ ತವ ಮಾಝ್ಯಾರಾಯೀ । ಬಿಂಬೀ ಯೇಥ ಆನನಾಹೀ । ಮ್ಹಣೋನಿ ಆದಿ ಮಧ್ಯ ಅವಸಾನ ಪಾಹೀ । ಜಗಾಸೀ ಮೀ ॥ ೨೮ ॥

**ಅರ್ಥ—** ಈ ಸೂಕ್ಷ್ಮ (ಪರಾ) ಪ್ರಕೃತಿ ಯಾವಾಗ ಸ್ವೇಚ್ಛೆಯಿಂದ ಸ್ಥೂಲ ಪ್ರಕೃತಿಗೆ ಸಂಯುಕ್ತವಾಗುತ್ತದೋ, ಆವಾಗ್ಗೇ ಪೃಥ್ವಿಯೊಳಗಿನ ಪ್ರಾಣಿಗಳ ಟಂಕಸಾಲೆಯು ಪ್ರಾರಂಭವಾಗುತ್ತದೆ. ॥ ೨೨ ॥ ಆ ಟಂಕಸಾಲೆಯಲ್ಲಿ ತನ್ನಿಂದತಾನೇ ನಾಲ್ಕು ಪ್ರಕಾರದ ಮುದ್ರೆಗಳು ಮೂಡಲಿಕ್ಕೆ ಹತ್ತುತ್ತವೆ. ಅವರೊಳಗಿನ ಪಂಚಮಹಾಭೂತಗಳ ಯೋಗ್ಯತೆಯು ಸಮಾನವಾಗಿದ್ದರೂ, ಜಾತಿಗಳು ಮಾತ್ರ ಭಿನ್ನವಾಗಿರುತ್ತವೆ. ॥ ೨೩ ॥ ಅವುಗಳ ಎಂಭತ್ತುನಾಲ್ಕು ಲಕ್ಷ ಜಾತಿಗಳಿದ್ದು, ಆ ಜಾತಿಗಳಲ್ಲಿಯೂ ಇನ್ನೆಷ್ಟೋ ಜಾತಿಗಳಿವೆ. ಇವುಗಳ ಗಣಿತೆಯೇ ಇರುವದಿಲ್ಲ. ಹೀಗೆ ಬಹಳೇ ನಾಣ್ಯಗಳಿಂದ (ಜಾತಿಗಳಿಂದ) ಆದಿಶೂನ್ಯದ (ಆಕಾಶದ) ಮನೆಯು ತುಂಬಿಹೋಗುತ್ತದೆ. ॥ ೨೪ ॥ ಈ ಪ್ರಕಾರ ಪಂಚಮಹಾಭೂತಗಳ ಮುದ್ರೆಗಳು ಒಂದೇಸವನೇ ಅವೆಷ್ಟೋ ಮೂಡುತ್ತವೆ. ಮೂಲಪ್ರಕೃತಿ (ಮಾಯಾ) ಇದೇ ಅವುಗಳ ಗಣಿತೆಯನ್ನು ಇಡುತ್ತದೆ. ॥ ೨೫ ॥ ಅದು ನಾಣ್ಯದ ಮೇಲೆ ಗುರ್ತುಮಾಡಿ ಅವುಗಳ ವಿಸ್ತಾರಮಾಡುತ್ತದೆ. ಮತ್ತು ಹಿಂದಿನಿಂದ ಅವುಗಳನ್ನು ಕರಗಿಸಿ ಅಟ್ಟಸಿಬಿಡುತ್ತವೆ. ಹೀಗೆ ಕರ್ಮಾಕರ್ಮದ ಪ್ರಕಾರ ಹುಟ್ಟು, ಸಾವುಗಳು ಮಾಯೆಯು ಪ್ರವೃತ್ತಿ ಇರುತ್ತದೆ. ॥೨೬॥ ಈ ರೂಪಕ ಉದಾಹರಣೆಯು ಹಾಗೇ ಇರಲಿ; ನಿನಗೆ ತಿಳಿಯುವಂತೆ ಪ್ರಕಟವಾಗಿ ಹೇಳುವದೆಂದರೆ ಈ ಪ್ರಕೃತಿಯೇ ಪ್ರಾಣಿಗಳ ನಾಮರೂಪದ ವಿಸ್ತಾರಮಾಡುತ್ತದೆ. ॥ ೨೭ ॥ ಮತ್ತು ಪ್ರಕೃತಿಯು ನಿಃಸಂಶಯವಾಗಿ ನನ್ನಲ್ಲಿಯೇ ಪ್ರತಿಬಿಂಬರೂಪದಿಂದ ಭಾಸವಾಗುತ್ತಿದ್ದು ಅದು ನನ್ನಿಂದ ಬೇರೆ ಇರುವದಿಲ್ಲ. ಆದ್ದರಿಂದ ಜಗತ್ತಿನ ಆದಿ-ಮಧ್ಯ ಅವಸಾನ (ಉತ್ಪತ್ತಿ, ಸ್ಥಿತಿ, ಲಯ;) ಗಳಿಗೆ ನಾನೇ ಕಾರಣನಾಗಿದ್ದೇನೆ. ॥ ೨೮ ॥

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

**[ ಮತ್ತಃ ಪರತರಮಿತಿ ]** ಹೇ ರೋಹಿಣೀಚೇ ಜಳ । ತಯಾಚೇ ಪಾಹಾತಾ ಯೇಇಜೇ ಮೂಳ। ತೈರಶ್ಮಿ ನಸ್ಪತೀ ಕೇವಳ । ಹೋಯ ತೇ ಭಾನು ॥ ೨೯ ॥ ತಯಾಚಿಪರೀ ಕಿರೀಟೀ । ಇಯಾ ಪ್ರಕೃತೀ ಜಾಲಿಯೇ ಸೃಷ್ಟೀ । ಜೈ ಉಪಸಂಹರೂನಿ ಕೀಜೇಲ ಠೀ । ತೈ ಮೀಚಿ ಆಹೇ ॥ ೩೦ ॥ ಐಸೇ ಹೋಯ ದಿಸೇ ನ ದಿಸೇ । ಹೇ ಮಜಚಿ ಮಾಜೀ ಅಸೇ । ಮಿಯಾ ವಿಶ್ವ ಧರಿಜೇ ಜೈಸೇ । ಸೂತ್ರೇ ಮಣಿ ॥ ೩೧ ॥ ಸುವರ್ಣಾಚೇ ಮಣಿ ಕೇಲೇ । ತೇ ಸೋನಿಯಾಚೇ ಸುತೀ ವೋವಿಲೇ । ತೈಸೇ ಮ್ಯಾ ಜಗ ಧರಿಲೇ । ಸಬಾಹ್ಯಾಭ್ಯಂತರೀ ॥ ೩೨ ॥

**ಅರ್ಥ—** ಈ ದೃಶ್ಯವಾದ ವಿಶ್ವವು ಮೃಗಜಲದಂತೆ ಇರುತ್ತದೆ. ಮೃಗಜಲದ ಮೂಲವನ್ನು ನೋಡಲಿಕ್ಕೆ ಹೋದರೆ, ಅದು ಕೇವಲ ಸೂರ್ಯಕಿರಣವಿರದೇ ಪ್ರತ್ಯಕ್ಷ ಸೂರ್ಯನೇ ಇರುವನು. ॥ ೨೯ ॥ ಅದೇ ಪ್ರಕಾರ ಅರ್ಜುನಾ! ಯಾವ ಪ್ರಕೃತಿಯಿಂದ ಸೃಷ್ಟಿಯು ಉಂಟಾಗಿರುವದೋ, ಆ ಪ್ರಕೃತಿ ಮತ್ತು ಸೃಷ್ಟಿ ಇವೆರಡೂ ಕಣ್ಣಿಗೆ ಕಾಣುತ್ತಿದ್ದಾಗ್ಯೂ ಅವು ನಾಶವಂತವಿರುತ್ತವೆಂಬದು ದೃಢನಿಶ್ಚಯವಾಗಿದ್ದರೂ, ಅದರ ಅಧಿಷ್ಠಾನ ತತ್ವವು ಬೊಡ್ಡೆಯು ನಾನೇ ಇದ್ದೇನೆ. (ಅಂದರೆ ಜಗನ್ಮಿಥ್ಯವಿರದೇ, ಜಗತ್‌ಸತ್ಯವೆಂಬುದೇ ತಾತ್ಪರ್ಯವು) ॥ ೩೦ ॥ ಇದೇ ಪ್ರಕಾರ ಯಾವದು ಉತ್ಪನ್ನವಾಗಿ ಕಾಣುತ್ತದೋ, ಮತ್ತು ಇಲ್ಲದಂತಾಗುತ್ತದೋ ಅದೆಲ್ಲವೂ ನನ್ನಿಂದಲೇ ಉಂಟಾಗುತ್ತದೆ. ಯಾವ ಪ್ರಕಾರ ಧಾರದಲ್ಲಿ ಮಣಿಗಳು ಪೋಣಿಸಿರುವದರಿಂದ ಆ ಧಾರವೇ ಮಣಿಗಳಿಗೆ ಆಧಾರಭೂತವಾಗಿರುವದೋ, ಅದೇ ಪ್ರಕಾರ ನಾನು ಈ ಜಗತ್ತಿಗೆ ಆಧಾರಭೂತನಾಗಿರುವೆನು. (ಜಗತ್ತನ್ನು ನಾನೇ ಹಿಡಿದಿರುವೆನು) ॥ ೩೧ ॥ ಬಂಗಾರದ ಮಣಿಗಳನ್ನು ಮಾಡಿ ಅವುಗಳನ್ನು ಬಂಗಾರದ ತಂತಿಯಲ್ಲಿಯೇ ಪೋಣಿಸಿದಂತೆ ಈ ಸರ್ವ ಜಗತ್ತಿನಲ್ಲಿ ಅಂತರ್ಬಾಹ್ಯ ನಾನೇ ವ್ಯಾಪಿಸಿದ್ದೇನೆ. ॥ ೩೨ ॥

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

**ಪುಣ್ಯೋ ಗಂಧಃ ಪ್ರಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

**[ ರಸೋಽಹಮಪ್ಸ್ವಿತಿ ]** ಮ್ಹಣೋನಿ ಉದಕೀ ರಸ । ಕಾ ಪವನೀ ಜೋ ಸ್ಪರ್ಶ । ಶಶಿಸೂರ್ಯೀ ಜೋ ಪ್ರಕಾಶ । ತೋ ಮೀಚಿ ಜಾಣ ॥ ೩೩ ॥ ತೈಸಾಚಿ ನೈಸರ್ಗಿಕ ಶುದ್ಧ । ಮೀ ಪ್ರಥ್ವೀಚ್ಯಾ ಠಾಯೀ ಗಂಧ । ಗಗನೀ ಮೀ ಶಬ್ದ । ವೇದೀ ಪ್ರಣವ ॥ ೩೪ ॥ ನರಾಂಚ್ಯಾ ಠಾಯೀ ನರತ್ವ । ಜೆ ಅಹಂಭಾವಿಯೇ ಸತ್ವ । ತೇ ಪೌರುಷ ಮೀ ಹೇ ತತ್ವ । ಬೋಲಿಜಿತ ಅಸೇ ॥ ೩೫ ॥ ಅಗ್ನಿ ಐಸೇ ಆಹಾಚ । ತೇ ಜೇ ನಾವಾಚೇ ಆಹೇ ಕವಚ । ತೇ ಪರತೇ ಕೇಲಿಯಾ ಸಾಚ । ನಿಜ ತೇಜ ತೇ ಮೀ ॥ ೩೬ ॥ ಆಣಿ ನಾನಾವಿಧ ಯೋನೀ । ಜನ್ಮೋನಿ ಭೂತೇ ತ್ರಿಭುವನೀ । ವರ್ತತ ಆಹಾತೀ ಜೀವನೀ । ಆಪುಲಾಲ್ಯಾ ॥ ೩೭ ॥ ಏಕೇ ಪವನೇಂಚಿ ಪಿತೀ । ಏಕೇ ತೃಣಾಸ್ತವ ಜಿತೀ । ಏಕೇ ಅನ್ನಾಧಾರೇ ರಾಹತೀ । ಜಳೀ ಏಕೇ ॥ ೩೮ ॥ ಐಸೇ ಭೂತಪ್ರತಿ ಆನಾನ । ಜೇ ಪ್ರಕೃತಿವಶೇ ದಿಸೆಜೀವನ । ತೇ ಆಘವಾಠಾಯಿ ಅಭಿನ್ನ । ಮೀಚಿ ಏಕ ॥ ೩೯ ॥

**ಅರ್ಥ—** ಆದುದರಿಂದ ನೀರಿನಲ್ಲಿ ಯಾವ ರಸವಿದೆ, ಇಲ್ಲವೇ ಗಾಳಿಯಲ್ಲಿ ಯಾವ ಸ್ಪರ್ಶವಿದೆ, ಮತ್ತು ಚಂದ್ರ ಸೂರ್ಯರಲ್ಲಿ ಯಾವ ಪ್ರಕಾಶವಿದೆ ಅದೆಲ್ಲವೂ ನಾನೇ ಎಂದು ತಿಳಿ. ॥ ೩೩ ॥ ಅದೇ ಪ್ರಕಾರ ಪೃಥ್ವಿಯ ಸ್ಥಳದಲ್ಲಿ ಸ್ವಭಾವತಃ ಇರುವ ಸುವಾಸನೆಯೂ, ನಾನೇ. ಆಕಾಶದಲ್ಲಿ ಉಂಟಾಗುವ ಶಬ್ದವೂ ನಾನು. ಅದರಂತೆಯೇ ವೇದದಲ್ಲಿಯ ಓಂಕಾರವೂ (ಪ್ರಣವ) ನಾನು. ॥ ೩೪ ॥ ಮನುಷ್ಯರಲ್ಲಿ ಇರತಕ್ಕ ಮಾನವತೆಯೂ, ಅವನಲ್ಲಿದ್ದ ಅಹಂಭಾವ ಸತ್ವದ ಪೌರುಷ್ಯವೂ ನಾನೇ! ಎಂಬ ಈ ತತ್ವವನ್ನು ನಾನು ಈಗ ಹೇಳಿಡುತ್ತೇನೆ. ॥ ೩೫ ತೇಜಕ್ಕೆ ಅಗ್ನಿಯೆಂಬ ಹೆಸರಿನ ಕವಚವು ( ಹೊದಿಕೆಯು ) ಇದೆ. ಅದನ್ನು ದೂರಮಾಡುವವರಿಂದ ಉಳಿಯುವ ಮೂಲ ತೇಜವೇ ನಾನು. ॥ ೩೬ ॥ ಮತ್ತು ಈ ತ್ರಿಭುವನದಲ್ಲಿ ಪ್ರಾಣಿಗಳು ಬಹಳ ಪ್ರಕಾರದ ಜಾತಿಯಲ್ಲಿ ಜನ್ಮವನ್ನೆತ್ತಿ ತಮ್ಮ ತಮ್ಮ ಜಾತಿಯ ಅನುರೋಧದಿಂದಲೂ, ಅನ್ನವುಂತಾದುದರಿಂದ ಬದುಕುತ್ತವೆ. ॥ ೩೭ ॥ ಕೆಲವು ಗಾಳಿಯನ್ನು ಕುಡಿದು ಜೀವಿಸುತ್ತವೆ. ಕೆಲವು ಹುಲ್ಲಿನ ಮೇಲೆ ಉಪಜೀವನವನ್ನು ಮಾಡುತ್ತವೆ. ಕೆಲವು ಅನ್ನದ ಮೇಲೆ ಜೀವಿಸುತ್ತವೆ. ಕೆಲವು ನೀರಿನ ಮೇಲೆ ತಮ್ಮ ಉಪಜೀವನವನ್ನು ಮಾಡುತ್ತವೆ. ॥ ೩೮ ॥ ಹೀಗೆ ಪ್ರತಿಯೊಂದು ಪ್ರಾಣಿಯೂ ತನ್ನ ತನ್ನ ಪ್ರಕೃತಿಮಾನದಿಂದ ಭಿನ್ನವಾಗಿ ತೋರಿದರೂ ಆ ಎಲ್ಲ ಸ್ಥಳದಲ್ಲಿಯೂ ಅಭಿನ್ನನಾದ ನಾನೇ ಇದ್ದೇನೆ. ॥ ೩೯ ॥

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥ ೧೦ ॥**
**ಬಲಂ ಬಲವತಾಂಚಾಹಂ ಕಾಮರಾಗವಿವರ್ಜಿತಂ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥**

**[ ಬೀಜಂ ಮಾಂ ಸರ್ವಭೂತಾನಾಮಿತಿ ]** ಪೈ ಆದೀಚೇನಿ ಅವಸರೇ । ವಿರೂಢೇ ಗಗನಾಚೇನಿ ಅಂಕುರೇ । ಜೇ ಅಂತೀ ಗಿಳೀ ಅಕ್ಷರೇ । ಪ್ರಣವ ಪೀಠೀಂಚೀ ॥ ೪೦ ॥ ಜಂವ ಹಾ ವಿಶ್ವಾಕಾರ ಅಸೇ । ತವ ಜೇ ವಿಶ್ವಾಚಿ ಸಾರಿಖೇ ದಿಸೇ । ಮಗ ಮಹಾ ಪ್ರಳಯದಶೇ । ಕೈಸೇನಿ ದಿಸೇ ॥ ೪೧ ॥ ಐಸೇ ಅನಾದಿ ಜೇ ಸಹಜ । ತೇ ಮೀ ಗಾ ವಿಶ್ವಬೀಜ । ಹೇ ಹಾತಾ ತಳೀ ತುಜ । ದೇಇಜತ ಅಸೇ ॥ ೪೨ ॥ ಮಗ ಉಘಡ ಕರೂನಿ ಪಾಂಡವಾ । ಜೈ ಹೇ ಆಣಿಶೀ ಸಾಂಖ್ಯಾಚಿಯಾ ಗಾಂವಾ । ತೈ ಯುಯಾಚಾ ಉಪೇಗ ಬರವಾ । ದೇಖಸೀಲ ॥ ೪೩ ॥ ಪರೀ ಹೇ ಅಪ್ರಾಸಂಗಿಕ ಆಲಾಪ । ಆತಾ ಅಸತು

**ಬೋಲಿಲೋ ಸಂಕ್ಷೇಪ । ಜಾಣ ತಪಿಯಾಂಚ್ಯಾ ಠಾಯೀ ತಪ । ತೇ ರೂಪ ಮಾಝೋ ॥ ೪೪ ॥ ಬಳಿಯಾ ಮಾಜೀ ಬಳ ॥ ತೇ ಮೀ ಜಾಣ ಅಢಳ । ಬುದ್ಧಿಮಂತೀ ಕೇವಳ । ಬುದ್ಧಿ ತೇ ಮೀ ॥ ೪೫ ॥** ಭೂತಾಂಚ್ಯಾ ಠಾಯೀ ಕಾಮು । ತೋ ಮೀ ಮ್ಹಣೇ ಆತ್ಮಾರಾಮು । ಜೇಣೇ ಅರ್ಥಾಸ್ತವ ಧರ್ಮು । ಥೋರ ಹೋಯ ॥ ೪೬ ॥ ಯೇರ್ಹವೀ ವಿಕಾರಾಚೇನಿ ಪೈಸೇ । ಕರೀ ಕೀರ ಇಂದ್ರಿಯಾಂಚ್ಯಾಚಿ ಐಸೇ । ಪರೀ ಧರ್ಮಾಸೀ ವೇಖಾಸೇ । ಜಾವೋ ನೇದೀ ॥ ೪೭ ॥ ಜೋ ಅಪ್ರವೃತ್ತೀಚಾ ಅವ್ಹಾಂಟಾ । ಸಾಂಡೂನಿ ವಿಧಿಚಿಯಾ ನಿಫೇವಾಟಾ । ತೇವೀಂಚಿ ನಿಯಮಾಚಾ ದಿವಟಾ । ಸವೇ ಚಾಲೇ ॥ ೪೮ ॥ ಕಾಮು ಐಶಿಯಾ ಪೋಜಾ ಪ್ರವರ್ತೇ । ಮ್ಹಣೋನಿ ಧರ್ಮಾಸಿ ಹೋಯ ಪುರತೇ । ಮೋಕ್ಷ ತೀರ್ಥೀಂಚೇ ಮುಕ್ತೇ । ಸಂಸಾರ ಭೋಗೀ ॥ ೪೯ ॥ ಜೋ ಶ್ರುತಿ ಗೌರವಾಚ್ಯಾ ಮಾಂಡವೀ । ಕಾಮು ಸೃಷ್ಟೀಚಾ ವೇಲ ವಾಢವೀ । ಜಂವ ಕರ್ಮಫಳೇಸಿ ಪಾಲವೀ । ಅಪವರ್ಗೀಂ ಟೇಂಕೇ ॥ ೫೦ ॥ ಐಸಾ ನಿಯುತ ಕಾ ಕಂದರ್ಪ । ಜೋ ಭೂತಾಯಾ ಬೀಜರೂಪ । ತೇ ಮೀ ಮ್ಹಣೇ ಬಾಪ । ಯೋಗಿಯಾಂಚಾ ॥ ೫೧ ॥ ಹೇ ಏಕೇಕ ಕಿತೀ ಸಾಂಗಾವೇ । ಆತಾ ವಸ್ತುಜಾತಚಿ ಆಘವೇ । ಮಜಪಾಸೂನಿ ಜಾಣಾವೇ । ವಿಕಾರಲೇ ಅಸೇ ॥ ೫೨ ॥

**ಅರ್ಥ—** ಯಾವದು (ಆತ್ಮತತ್ವ) ಸೃಷ್ಟಿಯ ಉತ್ಪತ್ತಿ ಕಾಲವಲ್ಲಿ ಆಕಾಶದ ಅಂಕುರದಿಂದ ಬೆಳೆಯುತ್ತದೆ. ಯಾವದು ಸೃಷ್ಟಿಲಯ ಕಾಲದಲ್ಲಿ ಓಂಕಾರದ ಅಕ್ಷರದ ಗ್ರಾಸಮಾಡುತ್ತದೆ. ॥ ೪೦ ॥ ಎಲ್ಲಿಯ ವರೆಗೆ ಈ ವಿಶ್ವಾಕಾರವು ಇರುತ್ತದೋ, ಅಲ್ಲಿಯ ವರೆಗೆ ಆ ಆತ್ಮತತ್ವವು ವಿಶ್ವಾಕಾರದಂತೆ ತೋರುತ್ತದೆ. ಆ ಮೇಲೆ ಮಹಾ ಪ್ರಳಯಕಾಲದಲ್ಲಿ ಅದು ಯಾವ ಆಕಾರದಂತೆಯೂ ಇರುವದಿಲ್ಲ. ॥ ೪೧ ॥ ಹೀಗೆ ಸ್ವಭಾವತಃ ಈ ಜಗತ್ಯದ ಅನಾದಿ, (ಉತ್ಪತ್ತಿ ನಾಶ ರಹಿತ) ಮತ್ತು ಸ್ವತಃ ಸಿದ್ಧಬೀಜವೇ ನಾನು ಇದ್ದೇನೆ. ಇದನ್ನು ನಾನು ನಿನಗೆ ಸ್ಪಷ್ಟವಾಗಿ ತಿಳಿಯುವಂತೆ ಹೇಳುತ್ತೇನೆ. ॥ ೪೨ ॥ ಆ ಮೇಲೆ ಅರ್ಜುನನೇ ! ಅದನ್ನು ತಿಳಿದುಕೊಂಡು ಒಂದುವೇಳೆ ನೀನು ವಿಚಾರಮಾಡಿದರೆ ಅದರ ಫಲವು ಎಂತಹ ಶ್ರೇಷ್ಠತಮವಾಗಿರುವುದೆಂಬುದು ನಿನಗೆ ತೋಚುವದು. ॥ ೪೩ ॥ ಈಗ ಅಪ್ರಸಂಗಿಕವಾದ ಈ ಮಾತು ಒತ್ತಟ್ಟಿಗಿರಲಿ ಇನ್ನು ಮೇಲೆ ವಿಭೂತಿ ಸಂಬಂಧಿಕವಾದ ವಿಷಯವನ್ನು ಸ್ವಲ್ಪದರಲ್ಲಿಯೇ ಹೇಳುತ್ತೇನೆ. ತಪಸ್ವೀ ಜನರಲ್ಲಿ ಇರುವ ತಪವು ನನ್ನ ವಿಭೂತಿಯೆಂದೇ ತಿಳಿ. ॥ ೪೪ ॥ ಬಲವಾನರಲ್ಲಿ ಯಾವ ಬಲವು ಕಂಡುಬರುತ್ತದೋ ಅದು ನನ್ನ ವಿಭೂತಿಯೇ ಇದೆ. ಮತ್ತು ಬುದ್ಧಿವಂತರಲ್ಲಿರುವ ಬುದ್ಧಿಯೂ ಕೂಡ ನನ್ನ ವಿಭೂತಿಯೇ ಇರುತ್ತದೆ. ॥ ೪೫ ॥ ಆತ್ಮರಾಮನಾದ (ಸ್ವರೂಪದಲ್ಲಿ ರಮಮಾಣನಾದ) ಶ್ರೀಕೃಷ್ಣ ಪರಮಾತ್ಮನು ಅನ್ನುತ್ತಾನೆ— ಯಾರ ಆಚರಣೆಯಿಂದ ಧರ್ಮ ಅರ್ಥ ಈ ಪುರುಷಾರ್ಥಗಳು ಸಾಧ್ಯವಾಗುತ್ತವೆಯೋ, ಆ ಪ್ರಾಣಿಮಾತ್ರಗಳ ಸ್ಥಳದಲ್ಲಿರತಕ್ಕ ಕಾಮವಾಸನೆಯೂ ನಾನೇ ಎಂದು ತಿಳಿ. ॥ ೪೬ ॥ ಸಹಜವಾಗಿ ವಿಚಾರಿಸಿ ನೋಡಲು, ವಿಕಾರದ ಪ್ರಸಾರದಿಂದ ಇಂದ್ರಿಯಗಳ ಅನುಕೂಲವಾಗಿಯೇ ಆಚರಣೆ ಮಾಡಿದಾಗ್ಯೂ ವಿಧಿಯುಕ್ತ ಮಾರ್ಗಕ್ರಮಣದಿಂದ (ಆ ಕಾಮನೆಗಳು) ಧರ್ಮ ವಿರುದ್ಧ ಹೋಗಗೊಡುವದಿಲ್ಲ. ॥ ೪೭ ॥ ಕಾರಣವೇನೆಂದರೆ (ಕಾಮವು) ನಿಷೇಧದ ಅಡ್ಡಮಾರ್ಗವನ್ನು ಬಿಟ್ಟು ವಿಧಿಯುಕ್ತಮಾರ್ಗದಿಂದ ಸರಳವಾಗಿ ಹೋಗುವಾಗ, ನಿಯಮರೂಪವಾದ ದೀವಟಗೆಯು ಹಿಂಬಾಲಿಸಿಯೇ ಇರುತ್ತದೆ. ॥ ೪೮ ॥ ಇಂಥ ರೀತಿಯಿಂದ ಈ ಕಾಮವು ನಡೆಯುತ್ತಿರುವದರಿಂದ ಧರ್ಮಾಚರಣೆಯು ಪೂರ್ಣವಾಗುತ್ತದೆ. ಹೀಗೆ ಸಂಸಾರದಲ್ಲಿರುವವರಿಗೆ ಮೋಕ್ಷರೂಪೀ ತೀರ್ಥದಲ್ಲಿ ಮುಕ್ತಿ ಪ್ರಾಪ್ತಿಯಾಗುತ್ತದೆ. ॥ ೪೯ ॥ ಆ ಕಾಮವಲ್ಲರಿಯನ್ನು ವೇದವೂ ವರ್ಣಿಸಿದ್ದೂ, ಅದು ಕರ್ಮಫಲ ಪತ್ರದೊಂದಿಗೆ ಕರ್ಮ ಮಂಟಪದ ಮೇಲೆ ಹಬ್ಬುತ್ತ ಕೊನೆಗೆ ಮೋಕ್ಷ ಪದವನ್ನು ತನ್ನ ವಲ್ಲರಿ ಜಾಲದಿಂದ ಮುತ್ತುತ್ತದೆ. ॥ ೫೦ ॥ ಯೋಗಿಗಳ ಜನಕ ಶ್ರೀಕೃಷ್ಣ ಭಗವಾನನು ಅನ್ನುತ್ತಾನೆ— ಇಂಥ ನಿಯಮದಿಂದ ಇರುವವನೂ, ಮತ್ತು ಪ್ರಾಣಿಮಾತ್ರಗಳ ಬೀಜರೂಪವಾದ ಕಾಮವೂ ನಾನೇ ಇದ್ದೇನೆ. ॥ ೫೧ ॥ ಇವುಗಳು ಒಂದೊಂದೇ ನಿನಗೆ ಎಲ್ಲಿಯವರೆಗೆ ಹೇಳಲಿ ? ಆದರೆ ವಸ್ತುಮಾತ್ರವೆಂದು ಯಾವದು ಎಷ್ಟು ಪ್ರಕಾರವಿರುವದೋ, ಅವೆಲ್ಲವೂ ನನ್ನಿಂದಲೇ ವಿಸ್ತಾರವಾಗಿರುವದೆಂದು ತಿಳಿ. ॥ ೫೨ ॥

**ಯೇ ಚೈವ ಸಾತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

**[ ಯೇಚೈವ ಸಾತ್ವಿಕಾ ಭಾವಾ ಇತಿ ]** ಜೇ ಸಾತ್ವಿಕ ಹನ ಭಾವ । ಕಾ ರಜತಮಾದಿ ಸರ್ವ। ತೇ ಮಮರೂಪ ಸಂಭವ । ಪೋಳಖೇ ತೂ ॥ ೫೩ ॥ ತೇ ಹೇ ಜಾಲೇ ತರೀ ಮಾಝ್ಯಾ ಠಾಯೀ । ಪರೀ ತಯಾಮಾಜೀ ಮೀ ನಾಹೀ । ಜೈಸೀ ಸ್ವಪ್ನೀಂಚ್ಯಾ ಡೋಹೀ । ಜಾಗೃತೀ ನ ಬುಡೇ ॥ ೫೪ ॥ ಜೈಸೀ ರಸಾಚೀಚ ಸುಘಟ । ಬೀಜ ಕಣಿಕಾ ಘನವಟ । ಪರೀ ತಿಯೇಸ್ತವ ಹೋಯ ಕಾಷ್ಟ । ಅಂಕುರದ್ವಾರೇ ॥ ೫೫ ॥ ಮಗ ತಯಾ ಕಾಷ್ಟಾಚ್ಯಾ ಠಾಯೀ । ಸಾಂಗ ಪಾ ಬೀಜಪಣ ಅಸೇ ಕಾಈ । ತೈಸಾ ಮೀ ವಿಕಾರ ನಾಹೀ । ಜರೀ ವಿಕಾರಲಾದಿಸೇ ॥ ೫೬ ॥ ಪೈಗಗನೀ ಉಪಜೇ ಆಭಾಳ । ಪರೀ ತೇಥ ಗಗನ ನಾಹೀ ಕೇವಳ । ಅಥವಾ ಆಭಾಳೀ ಹೋಯ ಸಲಿಲ । ತೇಥ ಅಭ್ರ ನಾಹೀ ॥ ೫೭ ॥ ಮಗ ತ್ಯಾ ಉದಕಾಚೇನಿ ಆವೇಶೇ । ಪ್ರಗಟಲೇ ತೇಜ ಜೇ ಲಖಲಖೀತ ದಿಸೇ । ತಿಯೇ ವಿಜೂಮಾಜೀ ಅಸೇ । ಸಲಿಲ ಕಾಯಿ ॥ ೫೮ ॥ ಸಾಂಗೇ ಅಗ್ನಿಸ್ತವ ಧೂಮು ಹೋಯೇ । ತಿಯೇ ಧೂಮೀ ಕಾಯ ಅಗ್ನಿ ಆಹೇ । ತೈಸಾ ವಿಕಾರ ಹಾ ಮೀ ನೋಹೇ । ಜರೀ ವಿಕಾರಲಾ ಅಸೇ ॥ ೫೯ ॥

**ಅರ್ಥ—** ಯಾವದು ಸಾತ್ವಿಕ ಇಲ್ಲವೇ ರಜತಮ ಮುಂತಾದ ವಿಕಾರದಿಂದ ಉಂಟಾಗುವ ಪದಾರ್ಥವೆಲ್ಲವೂ, ನನ್ನ ರೂಪದಿಂದಲೇ ಹುಟ್ಟಿರುವದೆಂದು ತಿಳಿ. ॥ ೫೩ ॥ ಈ ಪದಾರ್ಥವು ನನ್ನಲ್ಲಿಯೇ ಉತ್ಪನ್ನವಾಗಿರುವದು ನಿಜ. ಆದರೆ ಅಲ್ಲಿ ಮಾತ್ರ ನಾನಿರುವದಿಲ್ಲ. ಜಾಗ್ರತೆಯಿಂದ ಸ್ವಪ್ನವು ಉಂಟಾದರೂ ಸ್ವಪ್ನದಲ್ಲಿ ಜಾಗ್ರತೆಯು ಕಾಣುವದೇ? ( ಇಲ್ಲ ವೆಂದರ್ಥ ) ॥ ೫೪ ॥ ಅಥವಾ ಯಾವ ಪ್ರಕಾರ ಬೀಜವು ರಸದಿಂದ ಪೂರ್ಣ ತುಂಬಿರುತ್ತದೆ ಮತ್ತು ಅದರಿಂದ ಅಂಕುರಿಸಿದ ಅಗಿಯು ದೊಡ್ಡದಾಗಿ ಕಟ್ಟಿಗೆಯಲ್ಲಿ ಪರಿಣಮಿಸುತ್ತದೆ. ॥ ೫೫ ॥ ಆವಾಗ ಆ ಕಟ್ಟಿಗೆಯಲ್ಲಿ ಬೀಜವು ಸಿಕ್ಕ ಬಹುದೇ ? ( ಇಲ್ಲವೆಂದೇ ಅರ್ಥ ) ಅದೇ ಪ್ರಕಾರ ಸಾತ್ವಿಕ ಮೊದಲಾದ ವಿಕಾರಗಳು ನನ್ನಿಂದಲೇ ಹುಟ್ಟಿರುತ್ತವೆ. ಆದರೆ ಅಲ್ಲಿ ಮಾತ್ರ ನಾನು ಸಿಕ್ಕಲಾರೆ ॥ ೫೬ ॥ ನಿಜವಾಗಿ ಆಕಾಶದಲ್ಲಿ ಮೋಡಗಳು ಹುಟ್ಟುವವೇನೋ ನಿಜ. ಆದರೆ ಮೋಡಗಳಲ್ಲಿ ಆಕಾಶವನ್ನು ಹುಡುಕಿದರೆ ಸಿಕ್ಕುವ ಬಗೆ ಹೇಗೆ ? ಮೋಡಗಳಲ್ಲಿ ನೀರಿರುತ್ತವೆ. ಆದರೆ ಆ ನೀರಿನಲ್ಲಿ ಮೋಡಗಳಿರುವವೇ ? ( ಇಲ್ಲ ) ॥ ೫೭ ॥ ಆ ಮೇಲೆ ನೀರಿನ ಘರ್ಷಣದಿಂದ ಮಿಂಚು ಉತ್ಪನ್ನವಾಗುತ್ತದೆ. ಆವಾಗ ಆ ಮಿಂಚಿನಲ್ಲಿ ನಿರನ್ನರಿಸಿದರೆ ಸಿಕ್ಕಬಹುದೇ ? ( ಇಲ್ಲ. ) ॥ ೫೮ ॥ ಅಗ್ನಿಯಿಂದ ಹೊಗೆಯು ಉತ್ಪನ್ನವಾಗುತ್ತದೆ. ಆದರೆ ಆ ಹೊಗೆಯಲ್ಲಿ ಅಗ್ನಿಯಿರುವದೇ ? ಅದೇ ಪ್ರಕಾರ ಸಾತ್ವಿಕ ಮೊದಲಾದ ಸರ್ವವಿಕಾರಗಳು ನನ್ನಿಂದಲೇ ಉತ್ಪನ್ನವಾಗಿದ್ದರೂ ನಾನು ಅವುಗಳಲ್ಲಿರುವದಿಲ್ಲ. ॥ ೫೯ ॥

**ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥ ೧೩ ॥**

**[ ತ್ರಿಭಿರ್ಗುಣ ಮಯೈರ್ಭಾವೈರಿತಿ ]** ಪರೀ ಉದಕೀ ಜಾಲೀ ಬಾಬುಳೀ । ತೇ ಉದಕಾತೇ ಜೈಸೀ ಝಾಂಕೋಳೀ । ಕಾ ವಾಯಾಂಚೀ ಆಭಾಳಿ । ಆಕಾಶ ಲೋಪೇ ॥ ೬೦ ॥ ಹಾ ಗಾ ಸ್ವಪ್ನ ಲಟಿಕೇ ಮ್ಹಣೋಯೇ । ಪರಿ ನಿದ್ರಾವಶೇ ಬಾಣಲೇ ಹೋಯೇ । ತವ ಆತವ ಕಾಯ ದೇತ ಆಹೇ । ಆಪಣ ಪೇಯಾ ॥ ೬೧ ॥ ಹೇ ಅಸೋ ಡೋಳ್ಯಾಂಚೇ । ಡೋಳಾಂಚೀ ಪಡಳ ರಚೇ । ತೇಣೇ ದೇಖಣೇಪಣ ಡೋಳ್ಯಾಂಚೇ । ನ ಗಿಳಿಜೇ ಕಾಯೀ ? ॥ ೬೨ ॥ ತೈಸೀ ಹೇ ಮಾಝೀಚ ಬಿಂಬಲೀ । ತ್ರಿಗುಣಾತ್ಮಕ ಸಾವುಲೀ । ಕೀ ಮಜಚೀ ಆಡಪೋಡವಲೀ । ಜವನಿಕಾ ಜೈಸೀ ॥ ೬೩ ॥ ಮ್ಹಣಮೂನಿ ಭೂತೇ ಮಾತೇ ನೇಣತೀ । ಮಾಝೀಜಪರೀ ಮೀ ನವ್ಹತೀ । ಜೈಸೀ ಜಳೀಂಚಿ ಜಳೀನ ವಿರತೀ ।

ಮುಕ್ತಾಫಳೇ ॥೬೪॥ ಪೈ ಪೃಥ್ವಿಯೇಚಾ ಘಟ ಕೀಜೇ । ಸವೇಂಚಿ ಪೃಥ್ವೀಸಿ ಮಿಳೇ ಜರೀ ಮೇಳ
ವಿಜೇ । ಯೇರ್ಹವೀ ತೋಚಿ ಅಗ್ನಿ ಸಂಗೇ ಸಿಜೇ । ತರೀ ವೇಗಳಾ ಹೋಯ ॥ ೬೫ ॥ ತೈಸೇ
ಭೂತ ಜಾತ ಸರ್ವ । ಹೆ ಮಾಝೇಚಿ ಕೀರ ಅವಯವ । ಪರೀ ಮಾಯಾ ಯೋಗೇ ಜೀವ- ।
ದಶೇ ಆಲೇ ॥ ೬೬ ॥ ಮ್ಹಣೋನಿ ಮಾಝೇಚಿ ಮೀ ನವ್ಹತೀ । ಮಾಝೇಚೆ ಮಜ ನೋಳಖತೀ ।
ಅಹಂಮಮತಾ ಭ್ರಾಂತೀ । ವಿಷಯಾಂಧ ಜಾಲೇ । ೬೭ ॥

**ಅರ್ಥ** – ಆದರೂ ನೀರಿನಿಂದಲೇ ಹುಟ್ಟಿದ ನೀರುಗಂಗೆಯು ( ಒಂದು ತರಹದ ಹಸುರು ಹುಲ್ಲು. ) ನೀರನ್ನು ಆಚ್ಛಾದಿಸುತ್ತದೆ. ಮೋಡಗಳಯೋಗದಿಂದ ಆಕಾಶವು ವ್ಯರ್ಥವಾಗಿ ಮುಚ್ಚಿ ಹೋಗುತ್ತದೆ. ॥ ೬೦ ॥ ಇದಂತೂ ಇರಲಿ; ಸ್ವಪ್ನವು ಅಸತ್ಯವಿರುತ್ತದೆ. ಆದರೆ ನಿದ್ರೆಯ ಆಧೀನವಾಗಿರುವಕಾಲದಲ್ಲಿ ಆ ಸ್ವಪ್ನವೇ ಸತ್ಯವೆಂದು ತೋರುತ್ತದೆ. ಆ ಸಮಯದಲ್ಲಿ ನಮ್ಮದು ನಮಗೇ ವಿಸ್ಮೃತಿಯಾಗುವದಿಲ್ಲೇ ಹೇಗೆ ? ॥೬೧॥ ಅಥವಾ ಕಣ್ಣೊಳಗಿನ ನೀರಿನಿಂದ ಪರೆಯು ಬೆಳೆಯುತ್ತದೆ. ಅದು ಕಣ್ಣನ್ನು ಆಚ್ಛಾದಿಸಿ ದೃಷ್ಟಿಯನ್ನು ನಷ್ಟ ಮಾಡುವದಿಲ್ಲವೇ ? ॥ ೬೨ ॥ ಅದೇ ಪ್ರಕಾರ ನನ್ನಲ್ಲಿಯೇ ಭಾಸಮಾನವಾದ ಸತ್ವ-ರಜ-ತಮ ಈ ಗುಣಗಳಿಂದ ಯುಕ್ತವಾದ ನನ್ನ ನೆರಳು, ಪರದೆಯಂತೆ ನನ್ನ ಸ್ವರೂಪವನ್ನೇ ಆವರಿಸಿರುವದು. ॥ ೬೩ ॥ ಆದುದರಿಂದ ಪ್ರಾಣಿಗಳು ನನ್ನನ್ನು ತಿಳಿಯಲಾರವು. ಮತ್ತು ಪ್ರಾಣಿಗಳು ನನ್ನಿಂದಲೇ ಉದ್ಭವಿಸಿ, ನನ್ನವೇ ಅವಯವಗಳಾಗಿ, ನನ್ನನ್ನೇ ಮರೆತಿರುವದರಿಂದ ನನ್ನ ಸ್ವರೂಪವನ್ನು ಹೊಂದುವದಿಲ್ಲ. ನೀರಿನಿಂದ ಮುತ್ತುಗಳು ಉತ್ಪನ್ನವಾದರೂ, ನೀರಿನಲ್ಲಿ ಬೆರೆಯಲಾರವು. ॥ ೬೪ ॥ ಅಥವಾ ಮಣ್ಣಿನ ಕೊಡವನ್ನು ಮಾಡಿ ಅದನ್ನು ಅಗ್ನಿ ಸಂಸ್ಕರಣವಿಲ್ಲದಲೇ ಮಣ್ಣಿನಲ್ಲಿ ಕೂಡಿಸಿದರೆ ಕೂಡುತ್ತದೆ. ಆದರೆ ಆ ಪಾತ್ರೆಯನ್ನು ಸುಟ್ಟು ಮಣ್ಣಿನಲ್ಲಿ ಬೆರಿಸಹೋದರೆ ಅದೆಂದಿಗೂ ಬೆರೆಯಲಾರದು; ॥ ೬೫ ॥ ಅದೇ ಪ್ರಕಾರ ಸರ್ವ ಪ್ರಾಣಿಮಾತ್ರಗಳೂ ನನ್ನ ಅವಯವಗಳೇ ಇರುತ್ತವೆ. ಆದರೆ ಮಾಯಾ ಯೋಗದಿಂದ ಅವುಗಳು ಜೀವ ದೆಶೆಗೆ ಬಂದಿರುವವು. ॥ ೬೬ ॥ ಆದುದರಿಂದ ಆ ಪ್ರಾಣಿಗಳು ನನ್ನಿಂದಲೇ ಹುಟ್ಟಿದ್ದರೂ ಅವು ನನ್ನವೇ ಇದ್ದರೂ ನನ್ನನ್ನು ಗುರ್ತಿಸಲಾರವು. ಮತ್ತು ನಾನು ನನ್ನದು ಎಂಬ ( ಅಹಂಮಮತಾರೂಪಿ ) ಭ್ರಮೆಯಿಂದ ವಿಷಯಾಂಧವಾಗಿರುವವು. ॥ ೬೭ ॥

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥**

[ **ದೈವೀ ಹ್ಯೇಷೇತಿ** ] ಆತಾ ಮಹದಾದಿ ಹೇ ಮಾಝೀ ಮಾಯಾ । ಉತರೋನಿಯಾ
ಧನಂಜಯಾ । ಮೀ ಹೋಇಜೇ ಹೇ ಆಯಾ । ಕೈಸೇನಿಯೇ ॥ ೬೮ ॥ ಜೆಯೇ ಬ್ರಹ್ಮಾಚಳಾಚಾ
ಅಘಾಡಾ । ಪಹಿಲ್ಯಾ ಸಂಕಲ್ಪ ಜಲಾಚಾ ಉಭಡಾ । ಸವೇಂಚಿ ಮಹಾಭೂತಾಂಚಾ ಬುಡಬುಡಾ ।
ಸಾನಾ ಆಲಾ ॥ ೬೯ ॥ ಜೇ ಸೃಷ್ಟಿವಿಸ್ತಾರಾಚೇನಿ ಮೋಘೇ । ಚಢತ ಕಾಳ ಕಲನೇಚೇನಿ ವೇಗೇ ।
ಪ್ರವೃತ್ತೀ ನಿವೃತ್ತೀಚೀ ತುಂಗೇ । ತಟೇ ಸಾಂಡೀ ॥ ೭೦ ॥ ಜೇ ಗುಣಘನಾಚೇನಿ ವೃಷ್ಟಿಭರೇ । ಭರಲೀ
ಮೋಹಾಚೇನಿ ಮಹಾಪುರೇ । ಘೇವೂನಿ ಜಾತ ನಗರೇ । ಯಮನಿಯಮಾಂಚೀ ॥ ೭೧ ॥ ದ್ವೇಷಾಚ್ಯಾ
ಆವರ್ತೀ ದಾಟತ । ಮತ್ಸರಾಚೇ ವಳಸೇ ಪಡತ । ಮಾಜೇ ಪ್ರಮಾದಾದಿ ತಳಪತ । ಮಹಾಮೀನ
॥ ೭೨ ॥ ಜೇಥ ಪ್ರಪಂಚಾಚೀ ವಳಣೇ । ಕರ್ಮಾಕರ್ಮಾಚೀ ಮೋಭಾಣೇ । ವರೀ ತರ್ತಾತೀ
ಮೋಸಾಣೇ । ಸುಖದುಃಖಾಚೀ ॥ ೭೩ ॥ ರತೀಚಿಯಾ ಬೇಟಾ । ಆದಳತೀ ಕಾಮಾಚಿಯಾ ಲಾಟಾ ।
ಜೇಥ ಜೀವ ಫೇನ ಸಂಘಾಟಾ । ಸೈಂಘದಿಸೇ ॥ ೭೪ ॥ ಅಹಂಕಾರಾಚಿಯಾ ಚಳಿಯಾ । ವರೀ ಮದ
ತ್ರಯಾಚಿಯಾ ಉಕಳಿಯಾ । ಜೇಥ ವಿಷಯೋರ್ಮೀಚ್ಯಾ ಆಕಳಿಯಾ ॥ ಉಲ್ಲಾಳ ಘೇತೀ ॥ ೭೫ ॥
ಉದಯಾಸ್ತಾಚೇ ಲೋಂಢೇ । ಪಾಡಿತ ಜನ್ಮ ಮರಣಾಚೇ ಚೋಂಢೇ । ಜೇಥ ಪಾಂಚ ಭೌತಿಕ

ಬುಡಬುಡೇ । ಹೋತೀ ಜಾತೀ ॥೭೬॥ ಸಂಮೋಹ ವಿಭ್ರಮುಮಾಸೇ। ಗಳಿತಾತಿ ಧೈರ್ಯಾಚೀ ಆಮಿಷೇ। ತೇಥ ದೇವ್ಹಡೇ ಭೋವತ ವಳಸೇ । ಅಜ್ಞಾನಾಚೇ ॥೭೭॥ ಭ್ರಾಂತಿಚೇನಿ ಖಡುಳೇ । ರೇವಲೇ ಆಸ್ಥೇಚೆ ಅವಗಾಳೇ। ರಜೋಗುಣಾಚೇನಿ ಖಳಾಲೇ। ಸ್ವರ್ಗ ಗಾಜೇ ॥೭೮॥ ತಮಾಚೇ ಧಾರಸೇವಾಡ। ಸತ್ವಾಚೇ ಸ್ಥಿರ ಪಣ ಜಾಡ। ಕಿಂಬಹುನಾ ಹೇ ದುವಾಡ । ಮಾಯಾ ನದೀ ।೭೯॥ ಪೈ ಪುನರಾವೃತ್ತಿಚೇನಿ ಉಭಡೇ । ಝಳಂಬತೀ ಸತ್ಯಲೋಕೀಂಚೇ ಹುಡೆ । ಘಾಯೇ ಗಡಬಡತೀ ಧೊಂಡೇ । ಬ್ರಹ್ಮಗೋಳಕಾಚೆ ॥ ೮೦ ॥ ತಯಾ ಪಾಣಿಯಾಚೇನಿ ವಹಿಲೇಪಣೇ । ಅಝುನೀ ನ ಧರಿತೀ ವೋಭಾಣೇ । ಐಸಾ ಮಾಯಾಪೂರ ಹಾ ಕವಣೇ । ತರಿಜೇಲಗಾ ॥ ೮೧ ॥ ಯೇಥ ಏಕನವಲಾವೋ । ಜೋ ಜೋ ಕೀಜೇ ತರುಣೋಪಾವೊ । ತೋ ತೋ ಅಪಾವೋ । ಹೋಯ ತೇ ಏಕ ॥ ೮೨ ॥ ಏಕ ಸ್ವಯಂ ಬುದ್ಧೀಚ್ಯಾಬಾಹೀ । ರಿಗಾಲೇ ತಯಾಂಚೀ ಶುದ್ಧಿಚೀ ನಾಹೀ । ಏಕ ಜಾಣಿವೇಂಚೇ ಡೋಹೀ । ಗರ್ವೇಚಿ ಗಿಳಿಲೇ ॥ ೮೩ ॥ ಏಕೀ ವೇದತ್ರಯಾಚಿಯಾ ಸಾಂಗಡೀ । ಘೇತಲ್ಯಾ ಅಹಂಭಾವಾಚಿಯಾ ಧೋಂಡೀ । ತೇ ಮದ ಮೀನಾಚ್ಯಾ ತೋಂಡೀ । ಸಗಳೇಚಿ ಗೇಲೇ ॥ ೮೪ ॥ ಏಕೀ ವಯಸೇಚೇ ಜಾಡ ಬಾಂಧಲೇ । ಪುಗ ಮನ್ಮಥಾಚಿಯೇ ಕಾಂಸೇ ಲಾಗಲೇ । ತೇ ವಿಷಯ ಮಗರೀ ಸಾಂಡಿಲೇ । ಚಘುಳೂನಿಯಾ ॥ ೮೫ ॥ ಆತಾ ವಾರ್ಧಕ್ಯಾಚ್ಯಾ ತರಂಗಾ । ಮಾಜೀ ಮತಿ ಭ್ರಂಶಾಚಾ ಜರಂಗಾ । ಕವಳಿಜತಾತಿ ಪೈಗಾ । ಚಹೂಕಡೇ ॥ ೮೬ ॥ ಆಣಿ ಶೋಕಾಚಾ ಕಡಾ ಉಪಡತ ॥ ಕ್ರೋಧಾಚ್ಯಾ ಆವರ್ತೀ ದಾಟತ । ಆಪದಾಗಿಧೀ ಚುಂಬಿಜತ । ಉಥವಲಾ ಠಾಯೀ ॥ ೮೭ ॥ ಮಗ ದುಃಖಾಚೇನಿ ಬರಬಟೇ ಬೋಬಲೇ। ಪಾಠೀ ಮರಣಾಚೇ ರೇವೇ ರೇಂವಲೇ। ಐಸೇ ಕಾಮಾಚೇ ಕಾಂಸೇ ಲಾಗಲೇ । ತೇ ಗೇಲೇ ವಾಯಾ । ೮೮ ॥ ಏಕೀ ಯಜನ ಕ್ರಿಯೇಚೇ ಪೆಟೇ। ಬಾಂಧೋನಿ ಘಾತಲೀ ಪೋಟೇ। ತೇ ಸ್ವರ್ಗ ಸುಖಾಚ್ಯಾ ಕಪಾಟೇ । ಶಿರಕೋನಿ ಠೇಲೇ॥ ೮೯ ॥ ಏಕೀ ಮೋಕ್ಷೀ ಲಾಗಾವಯಾಚಿಯು ಆಶಾ । ಕೇಲಾ ಕರ್ಮಬಾಹ್ಯಾಂಚಾ ಭರವಸಾ । ಪರೀ ತೇ ಪಡಿಲೇ ವಳಸಾ । ವಿಧಿ ನಿಷೇಧಾಂಚ್ಯಾ ॥ ೯೦ ॥ ಜೇಥ ವೈರಾಗ್ಯಾಚೀ ನಾವ ನ ರಿಗೇ । ವಿವೇಕಾಚಾ ತಾಗಾ ನ ಲಗೇ । ವರೀ ಕಾಂಹೀ ತರೋ ಯೇ ಯೋಗೇ । ತರೀ ವಿಪಾಯ ತೋ ॥ ೯೧ ॥ ಐಸೇ ತರೀ ಜೀವಾಚಿಯೇ ಆಂಗವಣೇ । ಇಯೇ ಮಾಯಾನದೀಚೇ ತರಣೇ । ಹೇ ಕಾಸಯಾ ಸಾರಿಖೇ ಬೋಲಣೇ । ಮ್ಹಣಾವೇ ಪಾ ॥ ೯೨ ॥ ಜರೀ ಅಪಥ್ಯ ಶೀಳಾವ್ಯಾಧೀ । ಆಕಳೇ ಸಾಧೂಂಸಿ ದುರ್ಜನಾಚೀ ಬುದ್ಧೀ । ಕೀ ರಾಗೀ ಸಾಂಡೀ ಸಿದ್ಧೀ । ಆಲೀ ಸಾಂತೀ ॥ ೯೩ ॥ ಜರೀ ಚೋರಾ ಸಭಾ ದಾಟೇ । ಅಥವಾ ಮೀನಾಗಳ ಘಾಟೇ । ನಾತರೀ ಭೇಡಾ ಉಲಟೇ । ಪಿಸಾಸೀ ಜರೀ ॥ ೯೪ ॥ ಪಾಡಸ ವಾಗುರ ಕರಾಂಡೀ । ಕಾ ಮುಂಗೀ ಮೇರೂ ವೋಲಾಂಡೀ । ತರೀ ಮಾಯೇಚೀ ಪೈಲಥಡೀ । ದೇಖತೀ ಜೀವ ॥ ೯೫ ॥ ಮ್ಹಣವೊನ ಗಾ ಪಾಂಡು ಸುತಾ । ಜೈಸೀ ಸಕಾಮಾ ನ ಜಿಣವೇಚೀ ವನಿತಾ । ತೇವೀ ಮಾಯಾಮಯು ಹೇ ಸರಿತಾ । ನ ತರವೇ ಜೀವಾ ॥ ೯೬ ॥ ಯೇಥ ಏಕಚಿ ಲೀಲಾ ತರಲೇ। ಜೇ ಸರ್ವಭಾವೇ ಮಜ ಭಜಲೇ । ತಯಾ ಐಲೀಚ ಥಡೀ ಸರಲೇ । ಮಾಯಾಜಳ ॥ ೯೭ ॥ ಜಯಾ ಸದ್ಗುರೂ ತಾರೂ ಪುಡೇ । ಜೇ ಅನುಭವಾಚೇ ಕಾಂಸೇ ಗಾಢೇ । ಜಯಾ ಆತ್ಮನಿವೇದನ ತರಾಂಡೇ । ಆಕಳಲೇ ॥ ೯೮ ॥ ಜೇ ಅಹಂಭಾವಾಚೇ ವೋಝೇ ಸಾಂಡುನೀ । ವಿಕಲ್ಪಾಚಿಯಾ ಝುಳಕಾ ಚುಕಾವುನಿ । ಅನುರಾಗಾಚಾ ನಿರುತಾ ಹೋವುನೀ । ಪಾಣಿಢಾಳ ॥ ೯೯ ॥ ಜಯಾ ಐಕ್ಯಾಚಿಯಾ ಉತಾರಾ । ಬೋಧಾಚಾ ಜೋಡಲಾ ತಾರಾ । ಮಗ ನಿವೃತೀಚಿಯಾ ಪೈಲ ತೀರಾ । ಝೋಂಪಾವಲೇ ಜೇ ॥ ೧೦೦ ॥ ತೇ ಉಪರತೀಚ್ಯಾ ವಾಂವೀ ಸಲತ । ಸೋಹಂಭಾವಾಚೇನಿ ಥಾವೇ ಪೇಲತ । ಮಗ ನಿಘಾಲೇ ಅನಕಳಿತ । ನಿವೃತ್ತೀ ತಟೇ ॥ ೧ ॥ ಯೇಣೇ ಉಪಾಯೇ ಮಜ ಭಜಲೇ । ತೇ ಹೇ ಮಾಝೀ ಮಾಯಾ ತರಲೇ । ಪರೀ ಐಸೇ ಭಕ್ತ ವಿಪಾಇಲೇ । ಬಹುವಸ ನಾಹೀ ॥ ೨ ॥

**ಅರ್ಥ—** ಆದುದರಿಂದ ಈಗ ಧನಂಜಯನೇ ! ಈ ನನ್ನ ಮಹಾತತ್ವಾದಿ ಮಾಯಾ ನದಿಯನ್ನು ದಾಟಿ ನನ್ನನ್ನು ಸೇರುವದು ಸಾಧ್ಯವಾಗುವ ಬಗೆ ಹೇಗೆ ? ॥ ೬೮ ॥ ಆ ಮಾಯಾ ನದಿಯು ಬ್ರಹ್ಮರೂಪೀ ಪರ್ವತದ ಕೊರಕಲಿನಲ್ಲಿ ಹಾಯ್ದು ಹರಿಯುತ್ತಿರಲು, ಸಂಕಲ್ಪರೂಪೀ ನೊರೆಯು ಬರಲು, ಪಂಚಮಹಾಭೂತಗಳೆಂಬ ಗುಳ್ಳೆಗಳು ಉತ್ಪನ್ನ ವಾದವು. ॥ ೬೯ ॥ ಅವು ಸೃಷ್ಟಿವಿಸ್ತಾರವೆಂಬ ಓಘದೊಂದಿಗೆ, ಕಾಲಗತಿಯ ವೇಗದಿಂದ, ಕರ್ಮ ಮತ್ತು ಶಕ್ತಿ ಗಳೆಂಬ ಎರಡೂ ದಂಡೆಗಳನ್ನು ಅತಿಕ್ರಮಿಸುತ್ತ ಭರದಿಂದ ಸಾಗಿವೆ. ॥ ೭೦ ॥ ಗುಣರೂಪೀ ಮೇಘದಿಂದ ಬೀಳುವ ಭಯಂಕರ ಮಳೆಯಿಂದ ಮೋಹರೂಪೀ ಮಹಾಪೂರವು ಏರಿ ಬಂದು, ಯಮನಿಯಮ ರೂಪೀ ಪಟ್ಟಣಗಳನ್ನು ತೇಲಿಸಿಕೊಂಡೊಯ್ಯುತ್ತವೆ. ॥ ೭೧ ॥ ಯಾವದು ದ್ವೇಷರೂಪೀ ತಿರುಗಣೆಮಡುವಿನಿಂದಲೂ ಮತ್ಸರರೂಪೀ ಸೆಳವಿ ನಿಂದಲೂ, ಹೊನ್ನು-ಹೆಣ್ಣುಗಳೆಂಬ ತಿಮಿಂಗಿಲ ಮೀನಗಳಿಂದಲೂ ಮಿಂಚುತ್ತಿರುವದೋ, ॥ ೭೨ ॥ ಯಾವುದು ಪ್ರಪಂಚರೂಪವಾದ ಓಘವನ್ನು ಅನುಸರಿಸಿರುವದೋ, ಯಾವುದು ಕರ್ಮಾಕರ್ಮರೂಪೀ ಮಹಾಪೂರದಿಂದ ತುಂಬಿ ಕೊಂಡಿರುವದೋ, ಅದರಲ್ಲಿ ಸುಖದುಃಖರೂಪೀ ಕಸಕಡ್ಡಿಗಳು ಬಂದು ಸೇರಿರುತ್ತವೆ. ॥ ೭೩ ॥ ಮತ್ತು ವಿಷಯ ಸುಖರೂಪವೆಂಬ ಪರ್ವತಕ್ಕೆ ಕಾಮರೂಪ ತೆರೆಗಳು ಅಪ್ಪಳಿಸುತ್ತಿವೆಯೋ, ಅಲ್ಲಿ ಜೀವಸಮುದಾಯರೂಪೀ ಖುರುಗು ಒಂದೇಸವನೆ ಕಾಣುತ್ತಿರುವದು. ॥ ೭೪ ॥ ಮತ್ತು ಯಾವದರಲ್ಲಿ ಅಹಂಕಾರದ ದರ್ಪವು ತುಂಬಿರುವದೋ, ಯಾವದರಲ್ಲಿ ವಿದ್ಯಾ-ಧನ-ಕುಲ ಈ ಮೂರು ಮದಗಳ ತೆರೆಗಳು ಏರಿಬರುತ್ತವೆಯೋ, ಮತ್ತು ಯಾವ ನದಿಯಲ್ಲಿ ವಿಷಯರೂಪೀ ಮಹಾತೆರೆಗಳು ವಿಸ್ತಾರವಾಗಿ ಹೊರಚಲ್ಲುತ್ತವೆಯೋ, ಮತ್ತು ಉದಯ ಅಸ್ತಗಳೆಂಬ ಬಂಡೆಗಲ್ಲು ಗಳೂ, ಜನ್ಮಮೃತ್ಯುರೂಪೀ ಆಳವಾದ ತೆಗ್ಗುಗಳು ಬಿದ್ದಿರುವವೋ, ಅಲ್ಲಿ ಪಂಚಮಹಾಭೂತದಿಂದ ಉಂಟಾದ ಶರೀರ ರೂಪೀ ನೀರಗುಳ್ಳೆಗಳು ಆಗುತ್ತವೆ; ನುತ್ತು ಹೋಗುತ್ತವೆ. ॥೭೬॥ ಅದರಲ್ಲಿ ಅವಿವೇಕ, ಮೋಹ, ಭ್ರಾಂತಿ, ಮುಂತಾದ ಮೀನುಗಳು ಧೈರ್ಯ-ಸಾತ್ವಿಕರೂಪವಾದ ಅಮಿಷವನ್ನು ನುಂಗುತ್ತವೆ. ಆ ನದಿಯಲ್ಲಿ ಅಜ್ಞಾನದ ತಿರುಗಣೆಗಳು ಗರ ಗರ ತಿರುಗುತ್ತಿರುತ್ತವೆ. ॥ ೭೭ ॥ ಅದರಲ್ಲಿ ಭ್ರಾಂತಿರೂಪ ಹೊಲಸು ನೀರಿನಿಂದ, ಆಸ್ಥಾರೂಪ ಕೆಸರಿನಲ್ಲಿ ಶಿಲುಕಿ ಬಿದ್ದು ಪ್ರಾಣಿಗಳು ಮೋಸಹೋದವು. ಮತ್ತು ರಜೋಗುಣದ ಖಳಖಳ ಶಬ್ದದಿಂದ ಸ್ವರ್ಗವು ಗರ್ಜಿಸಹತ್ತಿತು. ॥ ೭೮ ॥ ಇಂಥ ಮಾಯಾ ನದಿಯಲ್ಲಿ ತಮೋಗುಣದ ಪ್ರವಾಹವು ಇರುತ್ತದೆ. ಸತ್ವಗುಣದ ಸ್ಥಿರವಾದ ನೀರಿನ ಮಡುವನ್ನು ದಾಟಿ ಪಾರಾಗುವದು ಅಸಾಧ್ಯವಾಗಿರುವದು. ಬಹಳ ಹೇಳುವದೇನು ? ಈ ಮಾಯಾ ನದಿಯು ಬಹಳ ಘಾತುಕ ವಾದದ್ದಿದೆ. ॥ ೭೯ ॥ ನಿಜವಾಗಿ ಇದರಲ್ಲಿ ಜನ್ಮಮೃತ್ಯುವಿನ ಮಹಾಪೂರದ ಸೆಳೆವಿಗೆ ಸತ್ಯಲೋಕದ ದುರ್ಗವು ತೇಲಿ ಹೋಗುತ್ತದೆ. ಮತ್ತು ಬ್ರಹ್ಮಾಂಡರೂಪೀ ಬಂಡೆಗಳು ಆಗ್ಗೆ ಗಡಬಡಿಸಿ ಹರಿದುಹೋಗುತ್ತವೆ. ॥ ೮೦ ॥ ಆ ಮಹಾ ಪೂರದ ಪ್ರವಾಹವು ನೀರಿನ ವೇಗದಿಂದ ಈ ಹೊತ್ತಿನ ವರೆಗೆ ಹರಿಯುವದು ಕಡಿಮೆಯಾಗಿರುವದಿಲ್ಲ. ಇಂಥ ಈ ಮಾಯಾನದಿಯ ಮಹಾಪೂರವನ್ನು ದಾಟುವದು ಯಾರಿಗೆ ಸಾಧ್ಯ ? ॥ ೮೧ ॥ ಈ ಮಾಯಾನದಿಯ ಸಂಬಂಧವಾಗಿ ಆಶ್ಚರ್ಯವಾದ ಸಂಗತಿಯೊಂದಿದೆ. ಅದಾವುದೆಂದರೆ, ಇದರೊಳಗಿಂದ ದಾಟಿಹೋಗುವದಕ್ಕೆ ಯಾವ ಯಾವ ಉಪಾಯ ಗಳನ್ನು ಯೋಚಿಸಬೇಕೋ, ಅವೆಲ್ಲಾ ಉಪಾಯಗಳೂ ಅಪಾಯಕಾರಕವೇ ಆಗುತ್ತವೆ. ಆ ಪ್ರಕಾರವು ಹೇಗಿರುವ ದೆಂಬದನ್ನು ಹೇಳುತ್ತೇನೆ ಕೇಳು. ॥ ೮೨ ॥ ಕೆಲವರು ತಮ್ಮ ಬುದ್ಧಿರೂಪೀ ಬಾಹುಬಲದಿಂದ ಈ ನದಿಯನ್ನು ದಾಟಿ ಪಾರುಗಾಣಬೇಕೆಂದು ಧುಮುಕಿದರು. ಅವರು ಎಲ್ಲಿ ಹೋದರು ಎಂಬುದರ ಸುಳಿವೇ ಇಲ್ಲದಾಯಿತು. ಮತ್ತೆ ಕೆಲವರು ಜ್ಞಾನಬಲದಿಂದ ಈ ಮಾಯಾ ನದಿಯನ್ನು ದಾಟಲು ಮುಂದುವರಿದರು. ಅವರು ಅಹಂಕಾರ ಮಡುವಿನಲ್ಲಿ ಮುಣುಗಿ ಹೋದರು. ॥ ೮೩ ॥ ಇನ್ನು ಕೆಲ ಸಾಹಸಿಗರು ಈ ಮಹಾನದಿಯನ್ನು ದಾಟುವೆವೆಂದು ವೇದತ್ರಯದ ಸಿಂಗಡಿಯನ್ನು ಕಟ್ಟಿಕೊಂಡು ಹೊರಟದ್ದೇನೋ ನಿಜ. ಆದರೆ ಅವರು ಅಭಿಮಾನವೆಂಬ ಬಂಡೆಗಲ್ಲನ್ನು ಹೊತ್ತುಕೊಂಡು ಈಸಿ ಪಾರಾಗಿ ಹೋಗಬೇಕೆಂದು ಹೊರಟರು. ಈ ಸಾಹಸಿಗಳು ಮದರೂಪಿ ಮೀನಗಳ ಬಾಯಿಯಲ್ಲಿ ಪೂರ್ಣವಾಗಿ ನಾಶಹೊಂದಿದರು. ॥ ೮೪ ॥ ಕೆಲಜನರು ತಾರುಣ್ಯದ ಬಲದಿಂದ ದಾಟುವೆವೆಂದು ಟೊಂಕಕಟ್ಟಿ ಇಳಿದರು. ಅವರು ಮನ್ಮಥರೂಪೀ ದಡ

ವನ್ನು ಸೇರಿದರೇನೋ ನಿಜ. ಆದರೆ ಅಲ್ಲಿಯೇ ಅವಿತು ಕುಳಿತಿದ್ದ ವಿಷಯವೆಂಬ ಮೊಸಳೆಯು ಹಿಂಡಿ ಹಿಪ್ಪೆ ಮಾಡಿತು. ॥ ೮೫ ॥ ಮುಂದೆ ಅವರು ವಾರ್ಧಿಕ್ಯರೂಪೀ ತೆರೆಯಲ್ಲಿ ತೇಲುತ್ತಿರಲು, ಮತಿಭ್ರಂಶರೂಪ ಜಾಲದಲ್ಲಿ ಶಿಲುಕಿ ಬೀಳಬೇಕಾಯಿತು. ಹೀಗೆ ನಾಲ್ಕೂಕಡೆಯಿಂದ ಮುತ್ತಲ್ಪಟ್ಟವರಾಗಿ, ॥ ೮೬ ॥ ಶೋಕರೂಪೀ ದಂಡೆಗೆ ಅಪ್ಪಳಿಸಲ್ಪಡುತ್ತಾರೆ. ಇವರು ಕ್ರೋಧ ರೂಪೀ ತಿರಗಣಿ ಮಡುವಿನಲ್ಲಿ ಶಿಕ್ಕು ತೊಳಲಿ ಪಾರಾಗಬೇಕೆಂದು ಮುಖ ವನ್ನು ಮೇಲಕ್ಕೆತ್ತುವಷ್ಟರಲ್ಲಿಯೇ, ಆಪದರೂಪೀ ರಣಹದ್ದುಗಳು, ಚುಚ್ಚಿ, ಚುಚ್ಚಿ ಹಿಂಸಿಸಹತ್ತುತ್ತವೆ. । ೮೭ ॥ ಆ ಮೇಲೆ ಅವರು ದುಃಖರೂಪೀ ಕೆಸರಿನಲ್ಲಿ ಉರಳ್ಯಾಡಿ ಮರಣರೂಪೀ ಉಸುಬಿನಲ್ಲಿ ಹೂಳಲ್ಪಡುತ್ತಾರೆ. ಹೀಗೆ ಯಾರು ವಿಷಯುಗಳನ್ನು ಹಿಂಬಾಲಿಸಿದರೋ ಅವರು ವ್ಯರ್ಥವಾಗಿ ತಮ್ಮ ಜೀವಿತವನ್ನು ಹಾಳುಮಾಡಿಕೊಂಡರು. ।೮೮॥ ಕೆಲವರು ಯಜ್ಞಾದಿಕ್ರಿಯಾ ರೂಪೀ ಪೆಟ್ಟಗೆಗಳನ್ನು ತಮ್ಮ ಹೊಟ್ಟೆಗೆ ಕಟ್ಟಿಕೊಂಡು (ಮಾಯಾನದಿಯನ್ನು) ದಾಟಲು ಯತ್ನಿಸಿದರು. ಅವರು ಸ್ವರ್ಗಸುಖರೂಪೀ ಗೂಹೆಯಲ್ಲಿ ಸಿಕ್ಕು ಬೀಳಬೇಕಾಯಿತು. ॥ ೮೯ ॥ ಕೆಲವರು ಮೋಕ್ಷ ಪ್ರಾಪ್ತಿಯ ಆಶೆಗಾಗಿ ಕರ್ಮರೂಪೀ ಬಾಹುಬಲದಲ್ಲಿ ನಂಬಿಗೆಯನ್ನಿಡುತ್ತಾರೆ. ಆದರೆ ಅವರು ವಿಧಿ ನಿಷೇಧದ (ಕರ್ತವ್ಯಾಕರ್ತವ್ಯ) ಗೊಂದಲದಲ್ಲಿ ಶಿಲುಕುತ್ತಾರೆ. ॥ ೯೦ ॥ ಯಾವ (ಮಾಯಾ) ನದಿಯಲ್ಲಿ ವೈರಾಗ್ಯರೂಪೀ ನೌಕೆಯು ನಡೆಯುವದಿಲ್ಲವೋ, ಮತ್ತು ಯಾವುದಕ್ಕೆ ವಿವೇಕದ ನೆಲೆಯು ಹತ್ತುವದಿಲ್ಲವೋ, ಇಂತಹ ನದಿಯನ್ನು ಇನ್ನಾವ ಉಪಾಯದಿಂದಲಾದರೂ ದಾಟಿ ಪಾರುಗಾಣಲು ಸಾಧ್ಯವಾಗಬಹುದೇ ? ॥ ೯೧ ॥ ಆದರೆ ಜೀವದ ಸ್ವಪರಾಕ್ರಮದಿಂದ ಈ (ಮಾಯಾ) ನದಿಯನ್ನು ದಾಟಿ ಪಾರಾಗಲು ಬರುತ್ತದೆಂದು ಹೇಳುವದು ಎಂತಹ ಪ್ರಕಾರದ್ದೆಂದು ಹೇಳುತ್ತೇನೆ ಕೇಳು ॥ ೯೨ ॥ ಪಥ್ಯ ಮಾಡದೇ ಇದ್ದವರ ಬೇನೆಯು ವಾಸಿಯಾಗಬಹುದಾದರೆ? ದುರ್ಜನರ ಹೃದಯು ವನ್ನು ಅರಿಯಲು ಸಾಧುಗಳಿಗೆ ಸಾಧ್ಯವಾದರೆ ? ವಿಷಯಾಸಕ್ತ ಪುರುಷನಿಗೆ ಐಶ್ವರ್ಯ ಪ್ರಾಪ್ತವಾಗಲು ಅದನ್ನು ಅವನು ತ್ಯಾಗಮಾಡಬಹುದಾದರೆ ? ॥ ೯೩ ॥ ಅಥವಾ ಕಳ್ಳರ ಸಭೆಯು ನೆರೆಯಲು ಸಾಧ್ಯವಾದರೆ ? ಮೀನುಗಳಿಗೆ 'ಗಾಣ' ವನ್ನು ನುಂಗಲಿಕ್ಕೆ ಬರುವದಾದರೆ ? ಮತ್ತು ಅಂಜುಬುರುಕನು ಭೂತವನ್ನು ಅಂಜಿಸಬಲ್ಲನಾದರೆ ? ॥ ೯೪ ॥ ಇಲ್ಲವೇ ಚಿಗುರೆಯ ಚಿಕ್ಕ ಮರಿಯು ಬಲೆಯನ್ನು ಕತ್ತರಿಸಿ ಬಂಧನದಿಂದ ಮುಕ್ತವಾಗಬಹುದಾದರೆ? ಇರುವೆಯು ಮೇರುಪರ್ವತವನ್ನು ಉಲ್ಲಂಘಿಸಬಹುದಾದರೆ? ಮಾತ್ರ ಜೀವರುಗಳಿಗೆ ತಮ್ಮ ಸ್ವಯಂಬುದ್ಧಿ ಬಲದಿಂದ ಈ (ಮಾಯಾ) ನದಿಯನ್ನು ದಾಟಿ ಪಾರಾಗಲು ಸಾಧ್ಯವಾಗಬಹುದು. ॥ ೯೫ ॥ ಆದುದರಿಂದ ಎಲೈ ಪಂಡುಪುತ್ರನೇ ! ಯಾವ ಪ್ರಕಾರ ವಿಷಯದಲ್ಲಿ ಆಸಕ್ತನಾದ ಪುರುಷನಿಗೆ ಸ್ತ್ರೀಯಳನ್ನು ಜಯಿಸುವದು ಆಗುವದಿಲ್ಲವೋ, ಅದೇ ಪ್ರಕಾರ ಈ ಮಾಯಾರೂಪ ನದಿಯನ್ನು ಜೀವರುಗಳಿಗೆ ಸ್ವಸಾಮರ್ಥ್ಯದಿಂದ ದಾಟಿ ಹೋಗುವದಾಗುವದಿಲ್ಲ. ॥ ೯೬ ॥ ಆದರೆ ಯಾರು ನನಗೆ ಅನನ್ಯಭಾವದಿಂದ ಶರಣುಬಂದಿರುವರೋ, ಮತ್ತು ನನ್ನನ್ನು ಭಜಿಸುವರೋ ಅವರೋಬ್ಬರೇ ಮಾತ್ರ ಈ ಮಾಯಾನದಿಯನ್ನು ದಾಟಿ ಹೋಗಿರುವರು. ಅವರು ಈಚೆಯ ದಂಡೆಗೆ ಇರುವಾಗಲೇನೇ ಮಾಯಾನದಿಯ ನೀರು ಮಾಯವಾಗಿ (ಇಲ್ಲದಂತಾಗಿ) ಹೋಗಿರುವದು. ॥ ೯೭ ॥ ಯಾವನಿಗೆ ಧೃಢಮನಸ್ಕರಾದ ಸದ್ಗುರುಗಳು, ನೌಕೆ ಯನ್ನು ನಡಿಸಬಲ್ಲ ಅಂಬಿಗರಾಗಿರುವರೋ; ಯಾವ ಸಾಧಕನಿಗೆ ಆತ್ಮಾನುಭವರೂಪೀ ಹಿಡಿತವು ಸಿಕ್ಕಿರುವದೋ, ಯಾವನಿಗೆ ಆತ್ಮನಿವೇದನರೂಪೀ ನೌಕೆಯು ಸಹಾಯವು ದೊರಕಿರುವದೋ, ॥ ೯೮ ॥ ಯಾವನಿಗೆ ಅಹಂಭಾವದ ಭಾರವು ತಪ್ಪಿ ಹೋಗಿರುವವೋ, ವಿಕಲ್ಪರೂಪೀ ಗಾಳಿಯ ಝುಳುಕು ತಪ್ಪಿಸಿ ಮತ್ತು ಹೆಂಡರು ಮಕ್ಕಳ ಮೇಲಿನ ಪ್ರೇಮರೂಪ ನೀರಿನ ಧಾರೆಯು ತಡೆಯಲ್ಪಟ್ಟಿರುವದೋ, ॥ ೯೯ ॥ ಮತ್ತು ಯಾವನಿಗೆ ಜೀವಪರಮಾತ್ಮರ ಐಕ್ಯ ರೂಪದ ಕಿರಿನೀರಿನಲ್ಲಿ ಜ್ಞಾನರೂಪೀ ಸುಲಭವಾದ ಕಾಲುದಾರಿಯು ದೊರಕಿರುವದೋ, ಅಂತಹರಿಗೆ ಮಾತ್ರ ನಿವೃತ್ತಿ ರೂಪಿ (ಆಚೆಯ) ದಡವನ್ನು ಸುಲಭವಾಗಿ ಸೇರಲು ಸಾಧ್ಯ. ॥ ೧೦೦ ॥ ಅವರು ವೈರಾಗ್ಯರೂಪೀ ಕೈಗಳಿಂದ ನೀರನ್ನು ಕಡಿಯುತ್ತ, (ಈಸುತ್ತ) 'ನಾನು ಪರಮಾತ್ಮ ಸ್ವರೂಪ' ನೆಂಬ ಭಾವನೆಯ ಬಲದಿಂದ ಸಾವಧಾನದಿಂದ ಸಾಗುತ್ತ, ಯಾವುದೊಂದೂ ತೊಂದರೆಗಳಿಲ್ಲದಲೇನೆ, ಸುರಕ್ಷಿತರಾಗಿ ನಿವೃತ್ತಿರೂಪೀ ದಡವನ್ನು ಸೇರುವರು. ॥೧೦೧॥ ಈ ಮಾರ್ಗದಿಂದ ಯಾರು ನನ್ನನ್ನು ಭಜಿಸುತ್ತಾರೋ ಅವರೇ ಈ (ದುರ್ಧರವಾದ) ಮಾಯಾರೂಪ ನದಿಯನ್ನು

ದಾಟ ಪಾರಾಗುತ್ತಾರೆ. ಆದರೆ ಇಂಥ ಭಕ್ತರು ಬಹುವಾಗಿ ಸಿಕ್ಕಲಾರರು. ಎಲ್ಲಿಯೋ ಒಬ್ಬರು ದೊರಕ ಬಹುದು. ॥ ೧೦೨ ॥

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥**
**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

**[ ನ ಮಾಮಿತಿ ]** ಜೇ ಬಹುತಾ ಏಕಾ ಅವಾಂತರ । ಅಹಂಕಾರಾಚಾ ಭೂತ ಸಂಚಾರ । ಜಾಹಾಲಾ ಮ್ಹಣೋನಿ ವಿಸರ । ಆತ್ಮ ಬೋಧಾಚಾ ॥ ೩ ॥ ತೇ ವೇಳೀ ನಿಯಮಾಚೇ ವಸ್ತ್ರ ನಾಠವೇ । ಪುಢೀಲ ಅಧೋಗತೀಚೀ ಲಾಜ ನೇಣವೇ । ಆಣಿ ಕರಿತಾತ ಜೇ ನ ಕರಾವೇ । ವೇದ ಮ್ಹಣೇ ॥ ೪ ॥ ಪಾಹೇ ಪಾ ಶರೀರಾಚಿಯಾ ಗಾಂವಾ । ಜಯಾಲಾಗೀ ಆಲೇ ಪಾಂಡವಾ । ತೋ ಕಾರ್ಯಾರ್ಥ ಆಘವಾ । ಸಾಂಡೂನಿಯಾ ॥ ೫ ॥ ಇಂದ್ರಿಯ ಗ್ರಾಮಿಂಚೇ ರಾಜಬಿದೀ । ಅಹಂ ಮಮತೇಚಿಯಾ ಜಲ್ಪವಾದೀ । ವಿಕಾರಾಂತರಾಂಚೀ ಮಾಂದೀ । ಮೇಳವೂನಿಯಾ ॥ ೬ ॥ ದುಃಖಶೋಕಾಂಚ್ಯಾ ಘಾಂಈ । ಮಾರಲಿಯಾಚೀ ಸೇಚಿ ನಾಹೀ । ಹೇ ಸಾಂಗಾವಯಾ ಕಾರಣ ಕಾಈ । ಜೇ ಗ್ರಾಸಿಲೇ ಮಾಯಾ ॥ ೭ ॥ ಮ್ಹಣೋನಿ ತೇ ನಾತೇ ಚುಕಲೇ । ಏಕ ಚತುರ್ವಿಧ ಮಜ ಭಜಲೆ । ಜಿಂ ಹೀ ಆತ್ಮ ಹಿತಕೇಲೆ । ವಾಢತೇಗಾ ॥ ೮ ॥ ತೋ ಪಹಿಲಾ ಆರ್ತ ಮ್ಹಣಿಜೆ । ದುಸರಾ ಜಿಜ್ಞಾಸು ಬೋಲಿಜೇ । ತಿಜಾ ಅರ್ಥಾರ್ಥಿ ಜಾಣಿಜೆ । ಜ್ಞಾನಿಯಾ ಚೌಥಾ ॥ ೯ ॥

**ಅರ್ಥ**— ಆದಕಾರಣ ಆ ಒಬ್ಬ ಸಾಧಕಪುರುಷನಹೊರ್ತು ಇನ್ನುಳಿದ ಎಲ್ಲ ಪ್ರಾಣಿಗಳಿಗೆ ಅನಾದಿಕಾಲದಿಂದ ಅಹಂಕಾರರೂಪಭೂತ ಸಂಚಾರವಾದುದರಿಂದ ಅವರಿಗೆ ಆತ್ಮಸ್ವರೂಪದ ವಿಸ್ಮೃತಿಯು ಆಗುತ್ತದೆ. ॥ ೩ ॥ ಆ ಕಾಲದಲ್ಲಿ ಅವರಿಗೆ ನಿಯಮರೂಪೀವಸ್ತ್ರದ ಹೊದಿಕೆಯ ಅರಿವು ಕೂಡ ಇರುವದಿಲ್ಲ. ಮುಂದೆ ಬರುವ ಅಧೋಗತಿಯ ಲಜ್ಜಾಹೀನಸ್ಥಿತಿಯ ಆಭಾಸವೂ ಅವರಿಗೆ ಇರುವದಿಲ್ಲ. ಅವರು ವೇದಬಾಹ್ಯ (ನಾಸ್ತಿಕ)ರಾಗಿ ವರ್ತಿಸುತ್ತಾರೆ. ॥ ೪ ॥ ಅರ್ಜುನಾ, ಹೀಗೆ ನೋಡು! ಈ ಶರೀರರೂಪ ಗ್ರಾಮದಲ್ಲಿ ಯಾವ ಕಾರ್ಯಕ್ಕಾಗಿ ಅವತರಿಸಿರುವರೋ, ಆ ಎಲ್ಲ ಕಾರ್ಯಗಳನ್ನು ಬಿಟ್ಟುಕೊಟ್ಟು, ॥ ೫ ॥ ಇಂದ್ರಿಯ ಸಮುದಾಯರೂಪ ರಾಜಮಾರ್ಗದ ಮೇಲೆ ನಾನು–ನನ್ನದು ಎಂಬ ಬಡಬಡಿಕೆಗಾಗಿ, ಕಾಮಕ್ರೋಧ ಮೊದಲಾದ ವಿಕಾರಗಳನ್ನು ಕೂಡಿಹಾಕುತ್ತಾರೆ. ॥೬॥ ಮತ್ತು ದುಃಖ, ಶೋಕ ಮೊದಲಾದ ಗಾಯಗಳಾಗಿದ್ದರೂ ಅವರಿಗೆ ಅದರ ಸ್ಮರಣೆಸಹ ಇರುವದಿಲ್ಲ. ಇದನ್ನು ಹೇಳುವ ಕಾರಣವೇನೆಂದರೆ, ಆ ಪ್ರಾಣಿಗಳು ಮಾಯಾಮೋಹದಲ್ಲಿ ಮುಳುಗಿಹೋಗಿರುವರು. ॥ ೭ ॥ ಅಂತೆಯೇ ಅವರು ನನ್ನನ್ನು ಕಳೆದುಕೊಳ್ಳುತ್ತಾರೆ. ಆದರೆ ನಾಲ್ಕು ಜನರು ಮಾತ್ರ ನನ್ನ ಭಜನೆಯನ್ನು ಮಾಡಿ ಆತ್ಮಹಿತವನ್ನು ಹೆಚ್ಚಿಸಿಕೊಂಡರು ॥ ೮ ॥ ಅವರಲ್ಲಿ ಮೊದಲನೆಯವನು 'ಆರ್ತ' (ದುಃಖಪೀಡಿತ)ನೆಂದೂ ಎರಡನೆಯವನು 'ಜಿಜ್ಞಾಸು' (ಜ್ಞಾನದ ಇಚ್ಛೆಯನ್ನು ಮಾಡುವವನು). ಎಂದೂ ಮೂರನೆಯವನು 'ಅರ್ಥಾರ್ಥಿ' (ದ್ರವ್ಯದ ಅಪೇಕ್ಷೆಮಾಡುವವನು) ಎಂದೂ ಮತ್ತು ನಾಲ್ಕನೆಯವನು 'ಜ್ಞಾನಿ' ಎಂದೂ ತಿಳಿಯಬೇಕು. ॥ ೯ ॥

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹೀ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥ ೧೭ ॥**

**[ತೇಷಾಮಿತಿ]** ತೇಥ ಆರ್ತ ತೋ ಆರ್ತೀಚೇನಿ ವ್ಯಾಜೇ । ಜಿಜ್ಞಾಸು ತೋ ಜಾಣಾವಯಾಲಾಗೀ ಭಜೇ । ತಿಜೇನಿ ತೇಣೇ ಇಚ್ಛಿಜೇ । ಅರ್ಥಸಿದ್ಧಿ ॥ ೧೧೦ ॥ ಮಗ ಚೌಥಿಯಾಚ್ಯಾ ಠಾಯೀ । ಕಾಹೀಂಚಿ

ಕರಣೇ ನಾಹೀ । ಮ್ಹಣೋನಿ ಭಕ್ತ ಏಕ ಸಾಹೀ । ಜ್ಞಾನಿಯಾ ಜೋ ॥ ೧೧ ॥ ಜೇ ತಯಾ ಜ್ಞಾನಾಚೇನಿ ಪ್ರಕಾಶೇ । ಫಿಟಲೇ ಭೇದಾಚೇ ಕಡವಸೇ । ಮಗ ಮೀಚಿ ಜಾಹಾಲಾ ಸಮರಸೇ । ಆಣಿ ಭಕ್ತಹೀ ತೇಮಿಂಚಿ ॥ ೧೨ ॥ ಪರೀ ಆಣಿಕಾಂಚಿಯೇ ದಿಠೀ ನಾವೇಕ । ಜೈಸಾ ಸ್ಫಟಿಕಚೀ ಭಾಸೇ ಉದಕ । ತೈಸಾ ಜ್ಞಾನೀ ನವ್ಹೇ ಕೌತುಕ । ಸಾಂಗತಾ ತೋ ॥ ೧೩ ॥ ಜೈಸಾ ವಾರಾ ಕಾ ಗಗನೀವಿರೇ। ಮಗ ವಾರೇಪಣ ವೇಗಳೇ ನುರೇ । ತೇವೀ ಭಕ್ತ ಹೇ ಪೈಜ ನ ಸರೇ । ಜರೀ ಐಕ್ಯಾಆಲಾ ॥ ೧೪ ॥ ಜರೀ ಪವನ ಹಾಲವೂನಿ ಪಾಹಿಜೇ । ತರೀ ಗಗನಾ ವೇಗಳಾ ದೇಖಿಜೇ । ಯೇರ್ಹವೀ ಗಗನ ತೋ ಸಹಜೇ । ಅಸೇ ಜೈಸೇ ॥ ೧೫ ॥ ತೈಸೇ ಶರೀರೀ ಹನ ಕರ್ಮೇ । ತೋ ಭಕ್ತ ಐಸಾ ಗಮೇ । ಪರೀ ಅಂತರ ಪ್ರತೀತೀ ಧರ್ಮೇ । ಮೀಚಿ ಜಾಲಾ ॥ ೧೬ ॥ ಆಣಿ ಜ್ಞಾನಾಚೇನಿ ಉಜಿಡಲೇಪಣೇ । ಮೀ ಆತ್ಮಾ ಐಸೇ ತೋ ಜಾಣೇ । ಮ್ಹಣವೂನೀ ಮಿಹೀ ತೈಸೇಂಚಿ ಮ್ಹಣೇ । ಉಚಂಬಳಲಾಸಾಂತಾ ॥ ೧೭ ॥ ಹಾಗಾ ಜೀವಾ ಪೈಲೀಕಡಿಲೀ ಖುಣೇ । ಜೋ ಪಾವೋನಿ ವಾವರೋ ಜಾಣೇ । ತೋ ದೇಹಾಚೇನಿ ವೇಗಳೇಪಣೇ । ಕಾಯವೇಗಳಾ ಹೋಯ ? ॥ ೧೮ ॥

**ಅರ್ಥ—** ಅವರಲ್ಲಿ ಆರ್ತಭಕ್ತನು ತನ್ನ ದುಃಖಗಳ ನಿವಾರಣಾರ್ಥವಾಗಿ ನನ್ನನ್ನು ಭಜಿಸುತ್ತಾನೆ. ಜಿಜ್ಞಾಸುವು ಜ್ಞಾನಪ್ರಾಪ್ತಿಗಾಗಿ ನನ್ನನ್ನು ಭಜಿಸುತ್ತಾನೆ. ಮೂರನೆಯವನಾದ ಅರ್ಥಾರ್ಥಿಯು ಧನಾಪೇಕ್ಷೆಯಿಂದ ನನ್ನನ್ನು ಭಜಿಸುತ್ತಾನೆ. । ೧೧೦ ॥ ಆದರೆ ಕಡೆಯವನಾದ ಜ್ಞಾನಿಯು ಮಾತ್ರ ಯಾವ ಕರ್ತವ್ಯಕ್ಕೂ ಅಂಟಿರದಿದ್ದರೂ ( ನನ್ನ ಪ್ರಾಪ್ತಿಯ ದೆಸೆಯಿಂದಲೇ ) ನನ್ನನ್ನು ಭಜಿಸುತ್ತಾನೆ. ಆದ್ದರಿಂದ ಆ ಜ್ಞಾನಿಪುರುಷನೇ ನನ್ನ ಭಕ್ತನಾಗಿರುವನೆಂಬುದನ್ನು ನೀನು ಜ್ಞಾಪಕದಲ್ಲಿಡು. ॥ ೧೧ ॥ ಕಾರಣವೇನೆಂದರೆ ಅವನ ಜ್ಞಾನಪ್ರಕಾಶದಿಂದ ಭೇದಾಭೇದರೂಪೀ ಅಂಧಃಕಾರವು ಮಾಯವಾಗುತ್ತದೆ. ಮತ್ತು ಆ ಮೇಲೆ ( ಪರಸ್ಪರರಲ್ಲಿ ಪ್ರೇಮವು ಹೆಚ್ಚಾಗಿ ) ಅವನು ನನ್ನ ಸ್ವರೂಪವನ್ನು ಹೊಂದುತ್ತಾನೆ. ನನ್ನ ಸಂಗಡ ಐಕ್ಯಹೊಂದಿದಾಗ್ಯಾದರೂ ನನ್ನಲ್ಲಿ ಅವನ ಪ್ರೇಮಯುಕ್ತ ಭಕ್ತಿಯು ( ಸೇವ್ಯ-ಸೇವಕತ್ವಭಾವವು ) ಹಾಗೆಯೇ ಸ್ಥಿರವಾಗಿ ನಿಲ್ಲುತ್ತದೆ. ॥ ೧೨ ॥ ಆದರೆ ಅನ್ಯರ ದೃಷ್ಟಿಗೆ ಕ್ಷಣಹೊತ್ತು ಸ್ಫಟಿಕಮಣಿಯು ಹೇಗೆ ಉದಕಮಯವಾಗಿ ತೋರುತ್ತದೊ, ಅದರಂತೆಯೇ ಇತರರ ದೃಷ್ಟಿಗೆ ಆ ಜ್ಞಾನೀಪುರುಷನು ( ಭಜನ-ಪೂಜನ ಮುಂತಾದ ಶಾರೀರಿಕ ಕ್ರಿಯೆಗಳಿಂದ ) ನನ್ನಿಂದ ಬೇರೆಯಾಗಿ ಕಾಣುತ್ತಾನೆ. ಆದರೆ ಅವನು ಹಾಗೆ ಇರದೇ ನನ್ನ ಸ್ವರೂಪವೇ ಆಗಿರುತ್ತಾನೆ. ಅದರ ವರ್ಣನೆಯನ್ನು ಮಾಡಬೇಕಾದರೆ ಬಹಳೇ ಆಶ್ಚರ್ಯವೆನಿಸುತ್ತದೆ. ॥ ೧೩ ॥ ಯಾವ ಪ್ರಕಾರ ಗಾಳಿಯು ಆಕಾಶದಲ್ಲಿ ಶಾಂತವಾದಮೇಲೆ ಆ ಗಾಳಿಯು ಬೇರೆ ಉಳಿಯುವದಿಲ್ಲವೋ, ಅದೇ ಪ್ರಕಾರ ಜ್ಞಾನಿಯು ಒಂದು ವೇಳೆ ನನ್ನ ಸಂಗಡ ಐಕ್ಯಹೊಂದಿದಾಗ್ಯಾದರೂ ಅವನು ಭಕ್ತನೆಂಬ ಪ್ರತಿಜ್ಞೆಯು ಹೋಗುವದಿಲ್ಲ. ॥ ೧೪ ॥ ಒಂದು ವೇಳೆ ಗಾಳಿಯನ್ನು ಅಲ್ಲಾಡಿಸಿ ನೋಡಿದರೆ ಅದು ಆಕಾಶದಿಂದ ಭಿನ್ನವಾಗಿರುವದೆಂಬದು ಸಹಜವೇ ತೋರುತ್ತದೆ. ಆದರೆ ಗಾಳಿಯು ಸ್ವಭಾವತಃ ಆಕಾಶರೂಪವೇ ಆಗಿರುತ್ತದೆ. ॥ ೧೫ ॥ ಅದೇ ಪ್ರಕಾರ ಜ್ಞಾನೀಪುರುಷನು ಯಾವಾಗ್ಯೆ ಶರೀರಸಂಬಂಧಿಯ ಸರ್ವಕರ್ಮದ ( ಭಜನಪೂಜನಾದಿ ) ಆಚರಣವನ್ನು ಮಾಡುತ್ತಾನೋ, ಆವಾಗ್ಯೆ ಅವನು ನನ್ನ ಭಕ್ತನಂತೆ ಕಾಣುತ್ತಾನೆ. ಆದರೆ ಸ್ವಾನುಭವದ ಯೋಗದಿಂದ ಅವನು ಮದ್ರೂಪನೇ ಆಗಿರುತ್ತಾನೆ. ॥ ೧೬ ॥ ಮತ್ತು ಜ್ಞಾನೋದಯವಾದುದರಿಂದ ಅವನು ನನಗೆ ತನ್ನ ಆತ್ಮವೇ ಇರುವೆನೆಂದು ತಿಳಿಯುತ್ತಾನೆ. ಆದುದರಿಂದ ನಾನು ಸಂತೋಷಗೊಂಡು ಜ್ಞಾನಿಯೂ ಕೂಡ ನನ್ನ ಆತ್ಮನಾಗಿರುವನೆಂದು ತಿಳಿಯುತ್ತೇನೆ. ॥ ೧೭ ॥ ಯಾವನು ಜೀವಪಣದ ಆಚೆಯಕಡೆಯ ಆತ್ಮಸ್ವರೂಪದ ಗುಟ್ಟನ್ನು ಕಂಡುಹಿಡಿದು ವ್ಯವಹಾರದಲ್ಲಿ ಅದರಂತೆ ವರ್ತಿಸುತ್ತಾನೋ, ಅವನು ದೇಹಧಾರಣಮಾಡಿದ್ದರಿಂದಷ್ಟೇ ನನ್ನಿಂದ ಬೇರೆ ಹೇಗಾಗುವನು ? ॥ ೧೮ ॥

**ಉದಾರಾಃ ಸರ್ವಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ ।**
**ಅಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥ ೧೮ ॥**

**[ ಉದಾರಾಃ ಇತಿ ]** ಮ್ಹಣೋನಿ ಆಪುಲಾಲ್ಯಾ ಹಿತಾಚೇನಿ ಲೋಭೆ । ಮಜ ಆವಡೇತೋಹೀ ಭಕ್ತ ಝೋಂಬೇ । ಪರೀ ಮೀಚಿ ಕರೀ ವಾಲಭೇ । ಏಸಾ ಜ್ಞಾನಿಯಾ ಏಕ ॥ ೧೯ ॥ ಪಾಹೇ ಪಾದುಭತೇ ಯಾಚಿಯಾ ಆಶಾ । ಜಗಧೇನೂಸಿ ಕರೀತಸೇ ಫಾಂಸಾ । ಪರೀ ದೋರೇವೀಣ ಕೈಸಾ । ವತ್ಸಾಚಾ ಬಳೀ ॥ ೧೨೦ ॥ ಕಾ, ಜೇ, ತನುಮನ ಪ್ರಾಣೇ । ತೇ ಆಣಿಕ ಕಾಂಹೀಂಚಿ ನೇಣೇ । ದೇಖತ ಸಾಂತೇ ಮ್ಹಣೇ । ಹೇ ಮಾಯ ಮಾಝೀ ॥ ೨೧ ॥ ತೇ ಯೇಣೇ ಮಾನೇ ಅನನ್ಯಗತೀ । ಮ್ಹಣವೂನಿ ಧೇನೂಹೀ ತೈಸೀಚಿ ಪ್ರೀತಿ । ತಯಾಲಾಗೀ ಲಕ್ಷ್ಮೀಪತೀ । ಬೋಲಿಲೇ ಸಾಚೇ ॥ ೨೨ ॥ ಹೇಅಸೋ ಮಗ ಮ್ಹಣಿತಲೇ । ಜೇ ಕಾ ತುಜ ಸಾಂಗಿತಲೇ । ತೇಹೀ ಭಕ್ತ ಭಲೇ । ಪಢಿಯಂತೇ ಆಮ್ಹಾ ॥ ೨೩ ॥ ಪರೀ ಜಾಣೋನಿಯಾ ಮಾತೇ । ಜೇ ಪಾಹೋ ವಿಸರಲೇ ಮಾಘಾತೇ । ಜೈಸೇ ಸಾಗರಾ ಯೇವೂನಿ ಸರಿತೇ । ಮುರಡಾವೇ ಠೇಲೇ ॥ ೨೪ ॥ ತೈಸೀ ಅಂತಃಕರಣ ಕುಹರೀ ಜನ್ಮಲೀ । ಜಯಾಚೀ ಪ್ರತೀತಿಗಂಗಾ ಮಜ ಮೀನಲೀ । ತೋಮೀ ಹೇ ಕಾಯಬೋಲೀ । ಫಾರಕರೂ ॥ ೨೫ ॥ ಯೇರ್ಹವೀ ಜ್ಞಾನಿಯಾ ಜೋ ಮ್ಹಣಿಜೇ । ತೋ ಚೈತನ್ಯಚಿ ಕೇವಳ ಮಾಝೋ । ಹೇ ನ ಮ್ಹಣಾವೇ ಪರೀ ಕಾಯಕೀಜೇ । ನ ಬೋಲಣೇ ಬೋಲೋ ॥ ೨೬ ॥

**ಅರ್ಥ—** ಆದ್ದರಿಂದ ಯಾವನಾದರೂ ಒಬ್ಬ ಮನುಷ್ಯನು ತನ್ನ ಹಿತದ ಸಲುವಾಗಿ ನನ್ನನ್ನು ಅಂಟಿಕೊಳ್ಳುತ್ತಾನೆ. ಆದರೆ ನಾನು ಮಾತ್ರ ಜ್ಞಾನೀಭಕ್ತನೊಬ್ಬನಲ್ಲಿಯೇ ಪ್ರೇಮವನ್ನಿಟ್ಟಿರುತ್ತೇನೆ. ॥ ೧೯ ॥ ಅರ್ಜುನಾ । ಹೀಗೆ ನೋಡು. ಹಾಲಿನ ಆಶೆಯಿಂದ ಸರ್ವಜನರು ತಾವಾಗಿಯೇ ಆಕಳಿಗೆ 'ದಳಿ' ಹಾಕುತ್ತಿರುತ್ತಾರೆ. ಆದರೆ ಆಕಳಿಗೆ ಅದರ ಕರುವಿನ ಪ್ರೇಮಪಾಶವು ಎಷ್ಟು ಬಿಗಿಯಾಗಿರುತ್ತದೆಂಬುದನ್ನು ನೋಡು. ಆಕಳು ತನ್ನ ಕರುವಿಗೆ ದಳಿಯ ಹೊರ್ತು ಸಹಜವೇ ಹಾಲು ಕುಡಿಸುತ್ತದೆ. ॥೧೨೦॥ ಇದರ ಕಾರಣವೇನೆಂದರೆ ಆ ಕರುವು, ಶರೀರದಿಂದಲೂ, ಮನಸಿನಿಂದಲೂ, ಪ್ರಾಣದಿಂದಲೂ ( ತನ್ನ ತಾಯಿಯನ್ನೇ ಆಶ್ರಯಿಸಿದ್ದು ) ಎರಡನೇ ಯಾರನ್ನೂ ಅರಿಯದು. ಯಾವದು ಅದರ ಮುಂದೆ ಕಾಣುವದೋ ಅದು ತನ್ನ ತಾಯಿಯೇ ಇರುವದೆಂದು ನಂಬುತ್ತದೆ. ॥ ೨೧ ॥ ಆ ಕರುವು ಆಕಳ ವಿಷಯದಲ್ಲಿ ಇಷ್ಟು ಅನನ್ಯ ಪ್ರೇಮವನ್ನಿಟ್ಟಿರುತ್ತದೆ. ಅಂತೆಯೇ ಆ ಕರುವಿನ ಮೇಲೆ ಆಕಳು ಕೂಡಾ ತನ್ನ ಜೀವದ ಕಿಂತಲೂ ಹೆಚ್ಚಾದ ಪ್ರೇಮ-ವಿಶ್ವಾಸವನ್ನಿಟ್ಟಿರುತ್ತದೆ. ಆ ಕಾರಣದ ದೆಶೆಯಿಂದಲೇ ಮೇಲೆ ಭಗವಾನ್ ಶ್ರೀಕೃಷ್ಣನು ಏನು ಮಾತನಾಡಿದನೋ ಅದು ನಿಜವಿರುವದು. ( ಎಂದು ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ. ) ॥ ೨೨ ॥ ಆ ಮೇಲೆ ಭಗವಂತನು ಅನ್ನುತ್ತಾನೆ, ಇದಂತೂ ಇರಲಿ, ಜ್ಞಾನಿಗಳ ಹೊರ್ತು ನಿನಗೆ ಹೇಳಿದ ಬೇರೆ ಮೂರು ಪ್ರಕಾರದ ಭಕ್ತರನ್ನೂ ಕೂಡ ನಾನು ಪ್ರೀತಿಸುವೆನೆಂದೂ ತಿಳಿ. ॥ ೨೩ ॥ ಆದರೆ ನನ್ನನ್ನು ತಿಳಿದು ಯಾವನು ( ಜ್ಞಾನೀಭಕ್ತನು ) ಹಿಂದೆ ನೋಡುವದನ್ನು ಮರೆತಿರುವನೋ ( ದೇಹ ಇಂದ್ರಿಯಾದಿ ಪ್ರಪಂಚವನ್ನು ಮರೆತಿರುವನೋ, ) ಯಾವ ಪ್ರಕಾರ ನದಿಯು ಸಮುದ್ರಕ್ಕೆ ಕೂಡಿದಮೇಲೆ, ಅದು ಹಿಂದಕ್ಕೆ ತಿರುಗುವದು ನಿಂತು ಹೋಗುತ್ತದೋ, ॥ ೨೪ ॥ ಅದೇ ಪ್ರಕಾರ ಯಾವನ ಅಂತಃಕರಣರೂಪೀ (ಹೃದಯ) ಗುಹೆಯೊಳಗಿಂದ, ಅನುಭವರೂಪೀ ಗಂಗೆಯು ಹೊರಬಿದ್ದು ನನ್ನನ್ನು ಕೂಡಿರುವಳೋ, ಆ ಗಂಗೆಯು ಮದ್ರೂಪವೇ ಆಗಿರುವಳೆಂಬದನ್ನು ಶಬ್ದದಿಂದ ವಿಸ್ತಾರಮಾಡಿ ಏನು ಹೇಳಲಿ ? ॥ ೨೫ ॥ ನಿಜವಾಗಿ ನೋಡಿದರೆ ಜ್ಞಾನಿಯೆಂದು ಯಾರಿಗೆ ಅನ್ನುವರೋ ಅವರು ಕೇವಲ ನನ್ನ ಜೀವ ಇಲ್ಲವೇ ಪ್ರಾಣವೇ ಆಗಿರುತ್ತಾರೆ. ಈ ಮಾತನ್ನು ಶಬ್ದದಿಂದೇನೂ ಹೇಳಬೇಕಾಗಿಲ್ಲ. ಆದರೆ ಏನು ಮಾಡಬೇಕು ? ಇದು ಮಾತಾಡದೇ ಇದ್ದ ಮಾತಾಗಿದ್ದರೂ, ಪ್ರಸಂಗ ಬಿದ್ದದರಿಂದ ಹೇಳಬೇಕಾಯಿತು. ॥ ೨೬ ॥

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

**[ ಬಹೂನಾಂ ಜನ್ಮನಾಮಿತಿ ]** ಜೇ ತೋ ವಿಷಯಾಚೀ ಮೋರೀರ್ಝಾಡೀ । ಮಾಜೀ ಕಾಮಕ್ರೋಧಾಂಚೀ ಸಾಂಕಡೀ । ಚುಕಾವೂನಿ ಆಲಾ ಘಾಡೀ । ಸದ್ವಾಸನೇಚಿಯಾ ॥ ೨೭ ॥ ಮಗ ಸಾಧು

ಸಂಗೇ ಸುಭಟಾ । ಉಜೂ ಸತ್ಕರ್ಮಾಚಿಯಾ ವಾಟಾ । ಅಪ್ರವೃತ್ತೀಚಾ ಅವ್ಹಾಂಟಾ । ಡಾವಲೂನೀ ॥ ೨೮ ॥ ಆಣಿ ಜನ್ಮಶತಾಂಚಾ ವಾಹತವಣಾ । ತೇವೀ ಆಸ್ಥೇಚಿಯಾ ನ ಲೇಚಿ ವಾಹಣಾ । ತೇಥ ಫಲಹೇತೂಚಾ ಉಗಾಣಾ । ಕವಣ ಚಾಳೀ ॥ ೨೯ ॥ ಐಸಾ ಶರೀರ ಸಂಯೋಗಾಚಿಯೇ ರಾತೀ । ಮಾಜೀ ಧಾವತಾ ಸಡಿಯಾ ಆಯುತೀ । ತವ ಕರ್ಮ ಕ್ಷಯಾಚೀ ಪಾಹಾತೀ । ಪಾಹಾಂಟ ಜಾಲಿ ॥೩೦॥ ತೈಸೀಚ ಗುರುಕೃಪಾ ಉಖಾ ಉಜಳಲೀ । ಜ್ಞಾನಾಚೀ ವೋತವಲೀ ಪಡಲೀ । ತೇಥ ಸಾಮ್ಯಾಚೀ ಋದ್ಧಿ ಉಘಡಲೀ । ತಯಾಚಿಯೇ ದೃಷ್ಟಿ ॥ ೩೧ ॥ ತೇ ವೇಳೀ ಜಯಾಕಡೇ ವಾಸಪಾಹೇ । ತೇವುತಾ ಮೀಚಿತಯಾ ಏಕ ಆಹೇ । ಅಥವಾ ಸಿವಾಂತ ಜರೀ ರಾಹೇ । ತರ್ಹೀಮೀಚಿ ತಯಾ ॥ ೩೨ ॥ ಹೇ ಅಸೋ ಆಣಿಕ ಕಾಂಹೀ । ತಯಾಸರ್ವತ್ರ ಮೀವಾಂಚೂನಿ ನಾಹೀ । ಜೈಸೇ ಸಬಾಹ್ಯ ಜಳಡೋಹೀ । ಬುಡಾಲಿಯಾ ಘಟಾ ॥ ೩೩ ॥ ತೈಸಾ ತೋ ಮಜಭೀತರೀ । ಮೀ ತಯಾ ಆಂತಬಾಹೇರೀ । ಹೇ ಸಾಂಗಿಜೇಲ ಬೋಲವರೀ । ತೈಸೇ ನವ್ಹೇ ॥೩೪॥ ಮ್ಹಣೋನಿ ಅಸೋ ಹೇ ಇಯಾಪರೀ । ತೋದೇಖೇ ಜ್ಞಾನಾಚೀ ವಾಖಾರೀ । ತೇಣೇ ಸಂಸರಲೇನಿ ಕರೀ । ಆಪ ವಿಶ್ವ ॥ ೩೫ ॥ ಹೇ ಸಮಸ್ತಹೀ ಶ್ರೀ ವಾಸುದೇವ । ಐಸಾ ಪ್ರತೀತಿ ರಸಾಚಾ ವೋತಲಾ ಭಾವ । ಮ್ಹಣೋನಿಭಕ್ತಾಮಾಜೀ ರಾವ । ಆಣಿ ಜ್ಞಾನಿಯಾ ತೋಚಿ ॥ ೩೬ ॥ ಜಯಾಚಿಯೇ ಪ್ರತೀತೀಚ್ಯಾ ವಾಖಾರಾ । ಪವಾಡ ಹೋಯ ಚರಾಚರಾ । ತೋ ಮಹಾತ್ಮಾ ಧನುರ್ಧರಾ । ದುರ್ಲಭ ಆಥೀ ॥ ೩೭ ॥ ಯೇರ ಬಹುತ ಜೋಡತೀ ಕಿರೀಟೀ । ಜಯಾಂಚೀ ಭಜನೇ ಭೋಗಾಸಾಠೀ । ಜೇ ಆಶಾ ತಿಮಿರೇ ದೃಷ್ಟೀ । ಮುಂದಜಾಲೇ ॥ ೩೮ ॥

**ಅರ್ಥ—** ಯಾವನು ವಿಷಯರೂಪ ಗಡುಚಾದ ಗಿಡಗಳ ಗುಂಪಿನಲ್ಲಿ ಕಾಮ ಕ್ರೋಧಾದಿಕ ಸಂಕಟಗಳನ್ನು ತಪ್ಪಿಸಿ. ಸದ್ವಾಸನೆಯ ಪರ್ವತದ ಮೇಲೆ ಹತ್ತಿ ಬಂದಿರುವನು. ಆ ಮೇಲೆ ಅರ್ಜುನನೇ । ಸಾಧುಗಳ ಸಂಗತಿಯಿಂದ ವಿಹಿತಕರ್ಮದ ಸರಳವಾದ ಮಾರ್ಗದಿಂದ ದುರಾಚಾರದ ನೀಚಮಾರ್ಗವನ್ನು ಬಿಟ್ಟುಕೊಟ್ಟು, ।೨೮। ಮತ್ತು ನೂರು ಜನ್ಮಗಳವರೆಗೆ ( ಕರ್ಮಮಾರ್ಗದ ) ಪ್ರವಾಸ ಮಾಡುತ್ತಿರಲಿಕ್ಕಾಗಿಯೂ, ಅವನು ಫಲಾಪೇಕ್ಷಾರೂಪೀ ಪಾದರಕ್ಷೆಗಳನ್ನು ( ಅಂತಃಕರುಣರೂಪೀ ) ಕಾಲುಗಳಲ್ಲಿ ಹಾಕುವದಿಲ್ಲ. ಇಂಥ ಸ್ಥಿತಿಯಲ್ಲಿ ಜ್ಞಾನೀ ಭಕ್ತನು ಸ್ವರ್ಗಾದಿ ಫಲದ ಅಪೇಕ್ಷೆಯ ದೇಶೆಯಿಂದ, ( ಸಾಧನದ ) ಗಣಿತೆಯನ್ನು ಯಾಕೆ ಮಾಡುತ್ತ, ಕೂಡುವನು? ॥ ೨೯ ॥ ಇದೇ ಪ್ರಕಾರ ಶರೀರ ಸಂಬಂಧಿ ಅಜ್ಞಾನರೂಪ ರಾತ್ರಿಯಲ್ಲಿ ಉಪಾಧಿರಹಿತನಾಗಿ ಒಬ್ಬನೇ ಹಾದೀ ನಡೆಯುತ್ತಿರಲಿಕ್ಕಾಗಿ, ಸಹಜವೇ ಕರ್ಮಕ್ಷಯವಾಗಿ, ಜ್ಞಾನೋದಯದ ಪ್ರಾತಃಕಾಲವು (ಸೂರ್ಯೋದಯವು) ಆಗುತ್ತದೆ.॥೩೦॥ ಅದೇಕಾಲಕ್ಕೆ ಗುರುಕೃಪಾರೂಪೀ ಉಷಃಕಾಲವೂ ಆಗುತ್ತದೆ. ಮತ್ತು ಆ ಮೇಲೆ ಜ್ಞಾನರೂಪೀ ಸೂರ್ಯಪ್ರಕಾಶದ ಎಳೆ ಬಿಸಿಲು ಬಿದ್ದು, ಸಮದೃಷ್ಟಿಯ ಐಶ್ವರ್ಯವು ಅವನ ಕಣ್ಣಿಗೆ ಕಾಣುತ್ತದೆ. ॥ ೩೧ ॥ ಆವಾಗ ಅವನು ಯಾವ ಯಾವ ಕಡೆಗೆ ನೋಡುತ್ತಾನೋ, ಆ ಎಲ್ಲ ಸ್ಥಳದಲ್ಲಿ ನನ್ನ ಹೊರ್ತು ಇನ್ನಾವುದೂ ಕಾಣುವದಿಲ್ಲ. ಅಥವಾ ಅವನು ಒಂದು ವೇಳೆ ಸ್ವಸ್ಥವಾಗಿ ಕುಳಿತುಕೊಂಡರೂ, ನಾನಾಗಿಯೇ ಅವನಿಗೆ ಕಾಣಿಸಿಕೊಳ್ಳುತ್ತೇನೆ. ॥ ೩೨ ॥ ಬಹಳ ಹೇಳುವದೇನು, ಅವನಿಗೆ ಸರ್ವಸ್ಥಳದಲ್ಲಿ ನನ್ನ ಹೊರ್ತು ಎರಡನೆಯದ್ಯಾವುದೂ ಕಾಣುವದಿಲ್ಲ. ಯಾವ ಪ್ರಕಾರ ನೀರಿನಲ್ಲಿ ಮುಳುಗಿದ ಕೊಡದಲ್ಲಿ ಒಳಗೆ ಹೊರಗೆ ನೀರೇ ತುಂಬಿರುತ್ತದೋ, ॥ ೩೩ ॥ ಅದೇ ಪ್ರಕಾರ ಅವನು ನನ್ನೊಳಗೆ ಮತ್ತು ನಾನು ಅವನ ಅಂತರ್ಬಾಹ್ಯ ತುಂಬಿಕೊಂಡಿದ್ದೇನೆ, ಈ ಸ್ಥಿತಿಯನ್ನು ಶಬ್ದದಿಂದ ಹೇಳಿ ತೋರಿಸುವಂತದೇನೂ ಅಲ್ಲ. ॥ ೩೪ ॥ ಅದು ಹಾಗೇ ಇರಲಿ; ಈ ಪ್ರಕಾರ ಅವರಿಗೆ ಜ್ಞಾನ ಭಾಂಡಾರವನ್ನಿಡುವ ಒಂದು ದೊಡ್ಡ ಕೊಠಡಿಯೇ ದೃಷ್ಟಿಗೆ ಬೀಳುತ್ತದೆ. ಮತ್ತು ಅಜ್ಞಾನದಿಂದ ಕೂಡಿ ಹೋದಮೇಲೆ ಯಾವ ಯಾವ ಕಡೆಗೆ ಸಂಚಾರ ಮಾಡುತ್ತಾನೋ, ಆ ಆ ಸ್ಥಳದಲ್ಲಿ ಅವನಿಗೆ ನಾನೇ ವಿಶ್ವವಿರುವನೆಂದು ಭಾಸವಾಗುತ್ತದೆ. ॥ ೩೫ ॥ ಈ ಸರ್ವ ವಿಶ್ವದಲ್ಲಿ ವಾಸುದೇವನು ತುಂಬಿಕೊಂಡಿರುವನೆಂಬ ಬಗ್ಗೆ ಅವನಿಗೆ ಪೂರ್ಣ ಅನುಭವ ಇರುತ್ತದೆ. ಆದ್ದರಿಂದ ಭಕ್ತ

ರೊಳಗೆ ಅವನೇ ಸರ್ವಶ್ರೇಷ್ಠ ಮತ್ತೂ ಅವನೇ ಜ್ಞಾನಿಯೂ ಆಗಿರುವನು. ॥ ೩೬ ॥ ಧನುರ್ಧರನೇ ! ಯಾವನ ಅನುಭವದಕೊಠಡಿಯಲ್ಲಿ ಸರ್ವಚರಾತ್ಮಕ ವಿಶ್ವವು ತುಂಬಿಕೊಂಡಿರುತ್ತದೋ, ಇಂಥ ಮಹಾತ್ಮರು ಬಹಳೇ ದುರ್ಲಭರಾಗಿದ್ದಾರೆ. ॥೩೭॥ ಇವರ ಹೊರ್ತು ಅರ್ಜುನಾ ! ಬಹಳೇ ಜನರು ನನ್ನನ್ನು ಭಜಿಸುತ್ತಾರೆ. ಆದರೆ ಅವರ ಭಕ್ತಿಯು ಕೇವಲ ವಿಷಯಸುಖದ ಆಶೆಗಾಗಿಯೇ ಇರುತ್ತದೆ. ಕಾರಣ ಆಶಾರೂಪೀ ಕತ್ತಲೆಯಿಂದ ಅವರ ದೃಷ್ಟಿಯು ವಿಷಯಾಂಧವಾಗಿರುತ್ತದೆ.॥ ೩೮ ॥

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

**[ಕಾಮೈರಿತಿ]** ಆಣಿ ಫಳಾಚಿಯಾ ಹಾಂವಾ । ಹೃದಯೀ ಕಾಮಾ ಜಾಲಾ ರಿಗಾವಾ । ಕೀ ತಯಾ
ಚಿಯೇ ಘುಸಣೀ ದಿವಾ । ಜ್ಞಾನಾಚಾ ಗೇಲಾ ॥ ೩೯ ॥ ಐಸೇ ಉಭಯತಾ ಅಂಧಾರೀ ಪಡಲೇ ।
ಮ್ಹಣೋನಿ ಪಾಸೀಂಚೀ ಮಾತೇ ಚುಕಲೆ । ಮಗ ಸರ್ವಭಾವೇ ಅನುಸರಲೇ । ದೇವತಾಂತರಾ ॥೧೪೦॥
ಆಧೀಂಚ ಪ್ರಕೃತೀಚೇ ಪಾಯಿಕ । ವರೀ ಭೋಗಾಲಾಗೀ ತವ ರಂಕ । ಮಗ ತೇಣೇ ಲೋಲುಪತ್ವೇ
ಕೌತುಕ । ಕೈಸೇನಿ ಭಜತೀ ॥ ೪೧ ॥ ಕವಣೀ ತಿಯಾ ನಿಯಮು ಬುದ್ಧಿ । ಕೈಸಿಯಾ ಹನ ಉಪಚಾರ
ಸಮೃದ್ಧಿ । ಕಾ ಅರ್ಪಣ ಯಥಾ ವಿಧಿ । ವಿಹಿತ ಕರಣೇ ॥ ೪೨ ॥

**ಅರ್ಥ—** ಮತ್ತು ಫಲದ ಇಚ್ಛೆಯಿಂದ ಅವರ ಹೃದಯದಲ್ಲಿ ಕಾಮವು ಉದ್ಭವಿಸಿ ಅದರ ಸಂಗತಿಯಿಂದ ಜ್ಞಾನರೂಪೀ ದಿವಿಗೆಯು ಆರಿಹೋಗುತ್ತದೆ. ॥ ೩೯ ॥ ಈ ರೀತಿಯಿಂದ ಅವನಿಗೆ ಒಳಗೆ ಹೊರಗೆ ಕೂಡಿಯೇ ಕತ್ತಲೆಯು ಬೀಳುತ್ತದೆ. ಆದುದರಿಂದ ನಾನು ಅವರ ಹತ್ತರ ಇದ್ದಾಗ್ಯಾದರೂ, ಅವರು ನನ್ನಿಂದ ದೂರವಾಗಿರುತ್ತಾರೆ. ಮತ್ತು ಆ ಮೇಲೆ ಸರ್ವಭಾವದಿಂದ ಅನ್ಯ ದೇವತೆಗಳನ್ನು ಭಜಿಸಲಿಕ್ಕೆ ಹತ್ತುತ್ತಾರೆ. ॥ ೧೪೦ ॥ ಮೊದಲಿಗೇ ಅವರು ಪ್ರಕೃತಿಯ ಆಧೀನರಾದವರು. ಮತ್ತು ಅದರಲ್ಲಿ ಭೋಗಫಲ ಪ್ರಾಪ್ತಿಯ ದೆಶೆಯಿಂದ ದೀನರಾದವರು. ಆ ಮೇಲೆ ಕೇಳುವದೇನಿದೆ ? ಅವರು ಲಂಪಟರಾಗಿ ಕೌತುಕದಿಂದ ದೇವರ ಭಕ್ತಿಯನ್ನು ಹೇಗೆ ಮಾಡುತ್ತಾರೆಂಬುದನ್ನು ನೋಡು ॥ ೪೧ ॥ ಆ ದೇವತೆಗಳ ಆರಾಧನೆಯ ವಿಷಯದಲ್ಲಿ ಯಾವ ಯಾವ ನಿಯಮಗಳು ಪ್ರಸಿದ್ಧವಿರುತ್ತವೆಯೋ, ಆ ಎಲ್ಲವುಗಳ ಆಶ್ರಯವನ್ನು ಮಾಡಿ ಯಾವ ಯಾವ ಉಪಚಾರಗಳು ಹತ್ತುತ್ತವೆಯೋ, ಅವುಗಳನ್ನು ಸಹ ಕೂಡಹಾಕಿ ಅಥವಾ ಆ ಉಪಚಾರಗಳನ್ನು ಹೇಗೆ ಮಾಡಬೇಕೆಂಬುದನ್ನು ತಿಳಿದುಕೊಂಡು, ಶಾಸ್ತ್ರದಿಂದ ಹೇಳಿದ ವಿಧಿಯಿಂದ ಕರ್ಮಗಳನ್ನು ಮಾಡುತ್ತಾರೆ. ॥ ೪೨ ॥

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ೨೧ ॥**

**[ಯೋ ಯೋ ಇತಿ]** ಪೈ ಜೋ ಜಿಯೇ ದೇವತಾಂತರೀ । ಭಜಾವಯಾಂಚೀ ಚಾಡಕರೀ ।
ತಯಾಚೀ ತೇ ಚಾಡಪುರೀ । ಪುರವಿತಾ ಮೀ ॥ ೪೩ ॥ ದೇವೋ ದೇವೀ ಮೀಚಿ ಪಾಹೀ । ಹಾಹೀ
ನಿಶ್ಚಯ ತ್ಯಾಸೀ ನಾಹೀ । ಭಾವ ತೇ ತೇ ಠಾಯೀ । ವೇಗಳಾಲಾ ಧರೀ ॥ ೪೪ ॥

**ಅರ್ಥ—** ಆದರೆ ಯಾರು ಅನ್ಯದೇವತೆಗಳನ್ನು ಭಜಿಸುವ ಇಚ್ಛೆಮಾಡುತ್ತಾರೋ, ಅವರ ಎಲ್ಲ ಇಚ್ಛೆಗಳನ್ನು ಸಂಪೂರ್ಣವಾಗಿ ಪೂರೈಸುವವನು ನಾನೇ ಆಗಿರುವೆನು. ॥ ೪೩ ॥ ದೇವ-ದೇವಿ ಎಲ್ಲವೂ ನಾನೇ ಆಗಿದ್ದೇನೆ. ಆದರೆ ಅವರಿಗೆ ಈ ಮಾತಿನ ವಿಷಯವಾಗಿ ಧೃಡವಾದ ನಂಬುಗೆ ಇರುವದಿಲ್ಲ. ಆ ದೇವತೆಗಳ ವಿಷಯದಲ್ಲಿ ಅವರು ಭಿನ್ನ ಭಿನ್ನವಾದ ಭಾವನೆಯನ್ನು ಇಟ್ಟಿರುತ್ತಾರೆ. ॥ ೪೪ ॥

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿತಾನ್ ॥ ೨೨ ॥**

**[ಸ ತಯೇತಿ]** ಮಗ ತಿಯಾ ಶ್ರದ್ಧಾಯುಕ್ತ । ತೇಥೀಂಚೇ ಆರಾಧನ ಜೇ ಉಚಿತ । ತೇ ಸಿದ್ಧಿ ವರೀ ಸಮಸ್ತ । ವರ್ತೋನೀ ಲಾಗೇ ॥ ೪೫ ॥ ಐಸೇ ಜೇಣೇ ಜೇ ಭಾವಿಜೇ । ತೇ ಫಳ ತೇಣೇ ಪಾವಿಜೇ । ಪರೀ ತೇಂಹೀ ಸಕಳ ನಿಪಜೇ । ಮಜಚಿಸ್ತವ ॥ ೪೬ ॥

**ಅರ್ಥ—** ಆ ಮೇಲೆ ಅವರಿಗೆ ಯಾವ ಯಾವ ದೇವತೆಗಳ ವಿಷಯವಾಗಿ ಶ್ರದ್ಧೆ ಉಂಟಾಗುವದೋ ಆ, ಆ ದೈವತೆಗಳನ್ನು ತಮ್ಮ ಕಾರ್ಯಸಿದ್ಧಿಯಾಗುವ ವರೆಗೆ ಅವರು ಯಥಾವಿಧಿಯಿಂದ ಪೂಜಿಸುತ್ತಾರೆ. ॥ ೪೫ ॥ ಇದೇ ಪ್ರಕಾರ ಯಾವನು ಯಾವ ಫಲವನ್ನು ಅಪೇಕ್ಷೆ ಮಾಡುವನೋ, ಅವನು ಇಚ್ಛಾ ಮಾಡಿದ ಫಲವು ಅವನಿಗೆ ಪ್ರಾಪ್ತ ವಾಗುವದೇನೋ ನಿಜ. ಆದರೆ ಅವರ ಮನೋರಥದ ಫಲವು ನನ್ನಿಂದಲೇ ಅವರಿಗೆ ದೊರಕುತ್ತದೆ. ॥ ೪೬ ॥

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**
**ದೇವಾನ್ದೇವಯಜೋ ಯಾಂತಿಮದ್ಭಕ್ತಾ ಯಾಂತಿ ಮಾಮಪಿ ॥ ೨೩ ॥**

**[ಅಂತವತ್ತುಫಲಂ ತೇಷಾಮಿತಿ]** ಪರೀ ತೇ ಭಕ್ತ ಮಾತೇ ನೇಣತೀ । ಜೇ ಕಲ್ಪನೇ ಬಾಹೇರೀ ನ ನಿಘತೀ । ವ್ಹಣೋನಿ ಕಲ್ಪಿತ ಫಳಾ ಪಾವತೀ । ಅಂತವಂತ ॥ ೪೭ ॥ ಕಿಂಬಹುನಾ ಐಸೇ ಭಜನ । ತೇ ಸಂಸಾರಾಚೇಂಚಿ ಸಾಧನ । ಯೇರ ಫಳಭೋಗ ತೋ ಸ್ವಪ್ನ । ನಾವಭರೀ ದಿಸೇ । ೪೮ ॥ ಹೇ ಅಸೋ ಪರೌತೇ । ಮಗ ಹೋ ಕಾ ಆವಡತೇ । ಪರೀ ಯಜೀ ಜೋ ದೇವತಾಂತೇ । ತೋ ದೇವತ್ವಾಸೀಚಿಯೇ ॥ ೪೯ ॥ ಯೇರ ತನುಮನ ಪ್ರಾಣೇ । ಜೇ ಅನುಸರಲೇ ಮಾರ್ಝಿಯಾಚಿ ವಾಹಣೇ । ತೇ ದೇಹಾಚ್ಯಾ ನಿರ್ವಾಣೀ । ಮೀಚಿ ಹೋತಿ ॥ ೫೦ ॥

**ಅರ್ಥ—** ಆದರೆ ಆ ಭಕ್ತರು ನನನ್ನು ತಿಳಿಯುವದಿಲ್ಲ. ಕಾರಣ, ಆ ಭಕ್ತರು ಆಶಾಪಾಶದೊಳಗಿಂದ ಮುಕ್ತ ರಾಗುವದಿಲ್ಲ. (ಅದರಲ್ಲಿಯೇ ಶಿಲುಕಿ ಬೀಳುತ್ತಾರೆ.) ಮತ್ತು ಅದೇ ಕಾರಣದಿಂದ ನಾಶವಂತವಾದ ಅವರ ಇಚ್ಛಿತ ಫಲಗಳು ಅವರಿಗೆ ಪ್ರಾಪ್ತವಾಗುತ್ತವೆ. ॥ ೪೭ ॥ ಇಲ್ಲವೇ, ಇಂಥ ಪ್ರಕಾರದ ಈ ಭಜನೆಯು ಸಂಸಾರದ ಸಾಧನವೇ ಆಗಿರುವದು. ಅವರಿಂದ ದೊರೆತ ಫಲ ಭೋಗಗಳು ಸ್ವಪ್ನದೊಳಗಿನ ಕ್ಷಣಿಕ ಸುಖದಂತೆ ಇರುವದು. ॥ ೪೮ ॥ ಈ ಫಲಭೋಗದ ಮಾತು ಒಂದು ಕಡೆಗೆ ಇರಲಿ; ಆ ಭಕ್ತರ ಪ್ರೀತಿಯು ಉಪಾಸನಾ ದೈವತವು ಯಾವದೇ ಆಗಿರಲಿ, ಆದರೆ ಯಾವನು ಯಾವ ದೈವತವನ್ನು ಭಜಿಸುತ್ತಾನೋ, ಅವನು ಆ ದೇವತ್ವವನ್ನು ಹೊಂದುತ್ತಾನೆ. ॥ ೪೯ ॥ ಮಿಕ್ಕಾ ದವರು ತನುಮನ ಪ್ರಾಣವನ್ನು ನನಗೆ ಅರ್ಪಣ ಮಾಡಿ, ನನ್ನನ್ನೇ ಆಶ್ರಯಿಸಿ ನನ್ನ ಭಕ್ತಿಮಾರ್ಗಕ್ಕೆ ಹತ್ತಿದರು. ಅವರು ದೇಹಾಂತದಲ್ಲಿ ನನ್ನನ್ನೇ ಹೊಂದುತ್ತಾರೆ. ॥ ೧೫೦ ॥

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ ॥ ೨೪ ॥**

**[ಅವ್ಯಕ್ತ ಮಿತಿ]** ಪರೀ ತೈಸೇ ನ ಕರಿತೀ ಪ್ರಾಣಿಯೇ । ವಾಯಾ ಆಪುಲ್ಯಾ ಹಿತೀ ವಾಣಿಯೇ ಜೇ ಪೋಹತಾತಿ ಪಾಣಿಯೇ । ತಳಹಾತೀಂಚೇಸೀ ॥ ೫೧ ॥ ನಾನಾ ಅಮೃತಾಚ್ಯಾ ಸಾಗರೀ ಬುಡಿಜೇ । ಮಗ ತೋಂಡಾ ಕಾ ವಜ್ರಮಿಠೀ ಪಾಡಿಜೇ । ಆಣಿ ಮನೀ ತರೀ ಆಠವೀಜೇ ॥ ಥಿಲ್ಲರೋದಕಾತೇ ॥ ೫೨ ॥ ಹೇ ಐಸೇ ಕಾಸಯಾ ಕರಾವೇ । ಜೇ ಅಮೃತೀಹೀ ರಿಗೋನಿ ಮರಾವೇ । ತೇ ಸುಖೇ ಅಮೃತ ಹೊವೂನಿ ಕಾ ನಸಾವೇ । ಅಮೃತಾಮಾಜೀ ॥ ೫೩ ॥ ತೈಸಾ ಫಳ ಹೇತೂಚಾ ಪಾಂಜರಾ । ಸಾಂಡೂನಿಯಾ ಧನು ರ್ಧರಾ । ಕಾ ಪ್ರತೀತಿಪಾಖೀ ಚಿದಂಬರಾ । ಗೋಸಾವಿಯಾ ನೋಹಾವೇ ॥ ೫೪ ॥ ಜೇಥ ಉಂಚಾವ ಲೇಸಿ ಪವಾಡೇ । ಸುಖಾಚೇ ಪೈಸಾರ ಜೋಡೇ । ಆಪುಲೇನಿ ಸುರವಾಡೇ । ಉಡೋಯೇ ಐಸಾ ॥ ೫೫ ॥ ತಯಾ ಉಪಮಾ ಮಾಪ ಕಾ ಸುವಾಕಾವೇ । ಮಜ ಅವ್ಯಕ್ತಾ ವ್ಯಕ್ತ ಕಾ ಮಾನಾವೇ । ಸಿದ್ಧ ಅಸತಾ

ಕಾ ನಿಮಾವೇ । ಸಾಧನವರೀ ॥ ೫೬ ॥ ಪರೀ ಹಾ ಬೋಲ ಅಘವಾ । ಜರೀ ವಿಚಾರಿಜತ ಅಸೇ ಪಾಂಡವಾ ।
ತರೀ ವಿಶೇಷೇ ಯಾ ಜಿವಾ । ನ ಚೋಜವೇಗಾ ॥ ೫೭ ॥

**ಅರ್ಥ—** ಆದರೆ ಪ್ರಾಣಿಗಳು ಹಾಗೆ ಮಾಡುವದಿಲ್ಲ. ಮತ್ತು ವ್ಯರ್ಥವಾಗಿ ತಮ್ಮ ಕಲ್ಯಾಣದ ವಿಷಯದಲ್ಲಿ, ಪುಕ್ಕಟೆಯಾಗಿ ತಮ್ಮ ಹಿತದ ಹಾನಿ ಮಾಡಿಕೊಂಡು ( ಅನ್ಯದೈವತಗಳ ಪೂಜಾ ಅರ್ಚಾದಿಗಳನ್ನು ಮಾಡಿ ) ನಾಶವಂತ ಕ್ಷಣಿಕವಾದ ಫಲಪ್ರಾಪ್ತಿಯನ್ನು ಹೊಂದುತ್ತಾರೆ. ಅವರ ಈ ಕೃತ್ಯವು ಒಂದು ಮೊಳಕಿರಿದಾದ ನೀರಿನಲ್ಲಿ ಈಸಿದಂತೆ ಇರುತ್ತದೆ. ॥ ೫೧ ॥ ಇಲ್ಲವೇ ಅಮೃತದ ಸಮುದ್ರದಲ್ಲಿಯೇ ಹಾರಿಕೊಂಡಿದ್ದರೂ ತನ್ನ ಬಾಯಿಯನ್ನು ಗಟ್ಟಿಯಾಗಿ ಏಕೆ ಮುಚ್ಚಿಕೊಳ್ಳಬೇಕು ? ಮತ್ತು ಗಟಾರದಲ್ಲಿಯ ಮಲಯುಕ್ತ ಕೊಳಚಿನೀರಿನ ಸ್ಮರಣವನ್ನು ಮನಸ್ಸಿನಲ್ಲಿ ತಂದುಕೊಳ್ಳುವದೇಕೆ ? ॥ ೫೨ ॥ ಅಮೃತದಲ್ಲಿ ಪ್ರವೇಶಮಾಡಿಯೂ ಬಾಯಿಯಲ್ಲಿ ಅಮೃತವನ್ನು ಹೋಗಗೊಡದೇ ಸಾವನ್ನು ತಂದು ಕೊಳ್ಳುವದೇಕೆ ? ಆದರೆ ಅಮೃತದಲ್ಲಿ ಸುಖದಿಂದ ಅಮರನಾಗಿ ಏಕೆ ಇರಕೂಡದು ? ॥ ೫೩ ॥ ಅದೇ ಪ್ರಕಾರ ಧನುರ್ಧರಾ ! ಫಲಾಶಾರೂಪವಾದ ಶರೀರವನ್ನು ಬಿಟ್ಟುಕೊಟ್ಟು ಆತ್ಮಾನುಭವರೂಪ ಪಕ್ಕಗಳಿಂದ ( ಉಡ್ಡಾಣ ಮಾಡಿ ) ಚಿದಾಕಾಶದಲ್ಲಿ ಬೇಕಾದತ್ತ ಸಂಚಾರ ಮಾಡಲು ಏಕೆ ಸಮರ್ಥನಾಗಬಾರದು ? ॥ ೫೪ ॥ ಆ ಚಿದಾಕಾಶದಲ್ಲಿ ಎಷ್ಟೆಷ್ಟು ನಾವು ಮೇಲಕ್ಕೆ ದೂರವಾಗಿ ಹೋಗುವೆವೋ, ಆ ಮಾನದಿಂದ ನಮಗೆ ಸುಖವಾಗಿ ಸಂಚಾರ ಮಾಡಲಿಕ್ಕೆ ಬರುವಂತೆ ಅದು ಬೇಕಾದಷ್ಟು ವಿಸ್ತಾರವಾಗಿರುವದು. ॥ ೫೫ ॥ ಆ ಅಮರ್ಯಾದ ಸ್ವರೂಪಕ್ಕೆ ಅಳತೆಯನ್ನು ಏಕೆ ಮಾಡಬೇಕು ? ನಿರಾಕಾರನಾದ ನನಗೆ ಸರಕಾರನೆಂದು ಏಕೆ ತಿಳಿಯಬೇಕು ? ನಾನು ಸ್ವಯಂಸಿದ್ಧನಿರಲು ನನ್ನ ಪ್ರಾಪ್ತಿಯ ದೆಶೆಯಿಂದ ಸಾಧನೆಗಳನ್ನು ಮಾಡಿಮಾಡಿ ಏಕೆ ದಣಿಯಬೇಕು ? ॥ ೫೬ ॥ ಆದರೆ ಅರ್ಜುನಾ ! ನಿಜವಾಗಿ ವಿಚಾರ ಮಾಡಿ ನೋಡಿದರೆ, ಈ ಮೇಲಿನ ನನ್ನ ಸಂಭಾಷಣವು ಜೀವರುಗಳಿಗೆ ಬಹಳ ಮಾಡಿ ಸೇರುವದಿಲ್ಲ. ॥೫೭॥

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ ॥ ೨೫ ॥**

**[ ನಾಹಂ ಪ್ರಕಾಶ ಇತಿ ]** ಕಾ ಜೇ ಯೋಗ ಮಾಯಾ ಪಡಳೇ । ಹೇ ಜಾಲೇ ಆಹಾತೀ ಆಂಧಳೇ । ಮ್ಹಣೋನಿ ಪ್ರಕಾಶಾಚೇನಿ ದೇಹಬಳೇ । ನ ದೇಖತೀ ಮಾತೇ ॥ ೫೮ ॥ ಯೇರ್ಹವೀ ಮೀ ನಸೇ ಐಸೇ । ಕಾಯ ವಸ್ತು ಜಾತ ಅಸೇ ? । ಪಾಹೇ ಪಾ ಕವಣ ಜಳ ರಸೇ । ರಹಿತ ಆಹೇ ॥ ೫೯ ॥ ಪವನ ಕವಣಾತೇ ನ ಶಿವೇಚೀ । ಆಕಾಶಕೇ ನ ಸಮಾಯೇಚಿ । ಹೇ ಅಸೋ ಏಕ ಮೀಚಿ । ವಿಶ್ವೀ ಆಹೇ ॥ ೧೬೦ ॥

**ಅರ್ಥ—** ಕಾರಣವೇನೆಂದರೆ, ಅವರು ಯೋಗಮಾಯೆಯಪರದೆಯಿಂದ ಆವೃತರಾಗಿ ಅಂಧರಾಗಿರುವರು. ಆದುದರಿಂದ ಅವರು ಪ್ರಕಾಶಮಂತನಾದ ನನ್ನನ್ನು ದೇಹಬುದ್ಧಿಯ ಬಲದಿಂದ ನೋಡಲು ಅಶಕ್ತರಾಗಿರುವರು. ॥೫೮॥ ಆದರೆ ನಾನು ವಾಸವಾಗಿ ಇಲ್ಲದೇ ಇರುವ ವಸ್ತುವು ಒಂದಾದರೂ ಸಿಕ್ಕಬಹುದೇ ? ಹೀಗೆ ನೋಡು ಯಾವದಾದರೂ ನೀರು ರಸ ವಿರಹಿತವಾಗಿರುವುದೇ ? ॥ ೫೯ ॥ ಗಾಳಿಯು ಯಾರಿಗೆ ಸ್ಪರ್ಶಮಾಡುವದಿಲ್ಲ ? ಆಕಾಶವು ಎಲ್ಲಿಗೆ ಮುಗಿಯುವದು ? ಇದಂತೂ ಇರಲಿ, ಎಲ್ಲ ವಿಶ್ವವನ್ನೇ ನಾನು ವ್ಯಾಪಿಸಿದ್ದೇನೆ. ॥ ೧೬೦ ॥

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

**[ ವೇದಾಹಂ ಸಮತೀತಾನೀತಿ ]** ಯೆಥೇ ಭೂತೇ ಜೇಯೇ ಅತೀತಲೀ । ತಿಯೇ ಮೀಚಿ ಹೋವುನಿ ಠೇಲೀ । ಆಣಿ ವರ್ತತ ಆಹಾತಿ ಜೇತುಲೀ । ತಿಹೀ ಮೀಚಿ ॥ ೬೧ ॥ ಕಾ ಭವಿಷ್ಯಮಾಣೇ

ಜಿಯೇಹೀ । ತಿಹೀ ಮಜ ವೇಗಳೀ ನಾಹೀ । ಹಾ ಬೋಲಚಿ ಯೇರ್ಥವೀ ಕಾಂಹೀ । ಹೋಯ ನಾ ಜಾಯ ॥ ೬೨ ॥ ದೋರಾಚಿಯಾ ಸಾಪಾಸೀ । ಡೊಂಬಾ ಬಡಿಯಾ ಐಸೀ । ಸಂಖ್ಯಾ ನ ಕರವೇ ಕೋಣ್ಹಾಸೀ । ತೇವೀ ಭೂತಾಂಸೀ । ಮಿಥ್ಯತ್ವೇ ॥ ೬೩ ॥ ಐಸಾ ಮೀ ಪಾಂಡುಸುತಾ । ಅನುಸ್ಯೂತ ಸದಾ ಅಸತಾ । ಯಾ ಸಂಸಾರ ಜೋ ಭೂತಾ । ತೋ ಆನೇ ಬೋಲೇ ॥ ೬೪ ॥ ತರೀ ತೇಚಿ ಆತಾ ಥೋಡೇಸೀ । ಗೋಠೀ ಸಾಂಗಿಜೇಲ ಪರಿಯೇಸೀ । ಜೇಥ ಅಹಂಕಾರತನೂಂಸೀ । ವಾಲಭ ಪಡಿಲೇ ॥ ೬೫ ॥

**ಅರ್ಥ**— ಈ ಜಗತ್ತಿನಲ್ಲಿ ಎಷ್ಟೋ ಪ್ರಾಣಿಗಳು ಆಗಿ ಹೋಗಿರುವವು. ಅವೆಲ್ಲವುಗಳಲ್ಲಿಯೂ ನಾನೇ ವ್ಯಾಪಿಸಿದ್ದೆನು. ಮತ್ತು ಈಗ ಇರುವವರಲ್ಲಿಯೂ ನಾನಿದ್ದೇನೆ. ॥ ೬೧ ॥ ಅಲ್ಲದೇ ಮುಂದೆ ಹುಟ್ಟುವ ಪ್ರಾಣಿಗಳಾದರೂ ನನ್ನಿಂದ ಬೇರೆಯಾಗಿರಲಾರವು. ಹೀಗೆ ಇದೆಲ್ಲವೂ ಬರಿಯ ಮಾತೇ ಹೊರ್ತು, ಯಾವುದೂ ಆಗುವಂತಿಲ್ಲ; ಮತ್ತು ಹೋಗುವಂತೂ ಇಲ್ಲ. ॥ ೬೨ ॥ ಹಗ್ಗದ ಮೇಲಿಂದ ಭಾಸಮಾನವಾದ ಹಾವಿಗೆ, ಅದು ಯಾವ ಜಾತಿಯದು ? ಮತ್ತು ಅದು ಕರಿಯದು, ಬಿಳಿಯದು ಮುಂತಾದ ಅದರ ಬಣ್ಣಗಳ ಕಲ್ಪನೆಯು ಹೇಗೆ ಮಾಡಲು ಬರಲಾರದೋ, ಅದೇ ಪ್ರಕಾರ ಪ್ರಾಣಿಮಾತ್ರಗಳು ಮಿಥ್ಯ ( ನಾಶವಂತ ) ವಾದವುಗಳಿರುವದರಿಂದ ಆ ಸಂಬಂಧವಾಗಿ ಯಾವ ಕಲ್ಪನೆಯನ್ನೂ ಮಾಡಲು ಬರಲಾರದು. ॥ ೬೩ ॥ ಎಲೈ ಪಾಂಡುಸುತನೇ ! ಈ ಪ್ರಕಾರವಾಗಿ ನಾನು ಯಾವಾಗಲೂ ಅಖಂಡ ವ್ಯಾಪಕನಾಗಿರುತ್ತೇನೆ. ಹೀಗಿರಲು ಈ ಸಂಸಾರವು ಪ್ರಾಣಿಮಾತ್ರಗಳ ಬೆನ್ನು ಹತ್ತಿದುದರ ಕಾರಣವು ಬೇರೆಯಾಗಿರುತ್ತದೆ. ॥ ೬೪ ॥ ಇನ್ನು ಆ ವಿಷಯವಾಗಿ ಸ್ವಲ್ಪ ಮಾತನ್ನು ನಾನು ಹೇಳುತ್ತೇನೆ. ಅದನ್ನು ಕೇಳು.— ಅಹಂಕಾರ ಮತ್ತು ಶರೀರ, ಇವುಗಳಲ್ಲಿ ಪ್ರೇಮವು ಅನ್ಯೂನ್ಯವಾಗಿ ಯಾವಾಗ ಕೂಡುವದೋ, ॥ ೬೫ ॥

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

**[ ಇಚ್ಛಾದ್ವೇಷ ಸಮುತ್ಥೇನೇತಿ ]** ತೇಥ ಇಚ್ಛಾ ಹೇ ಕುಮಾರೀ ಜಾಲೀ । ಮಗ ತೇ ಕಾಮಾಚಿಯಾ ತಾರುಣ್ಯ ಆಲೀ । ತೇಥ ದ್ವೇಷೇಂಸೀ ಮಾಂಡಿಲೀ । ವರಾಡಿಕ ॥ ೬೬ ॥ ತಯಾ ದೋಘಾಸ್ತವ ಜನ್ಮಲಾ । ಐಸಾ ದ್ವಂದ್ವ ಮೋಹ ಜಾಲಾ । ಮಗ ತೋ ಆಜೇಯಾನೇ ವಾಢವಿಲಾ । ಅಹಂಕಾರೇ ॥ ೬೭ ॥ ತೋ ಧೃತೀಸಿ ಸದಾ ಪ್ರತಿಕೂಳ । ನಿಯಮಾಹೀ ನಾಗವೇ ಸ್ಥೂಳ । ಆಶಾರಸೇ ದೊಂದೀಲ । ಜಾಲಾ ಸಾಂತಾ ॥ ೬೮ ॥ ಅಸಂತುಷ್ಟೀಚಿಯಾ ಮದಿರಾ । ಮತ್ತ ಹೋವೋನಿ ಧನುರ್ಧರಾ । ವಿಷಯಾಚೇ ವೋವರಾ । ವಿಕೃತೀಸೀ ಅಸೇ ॥ ೬೯ ॥ ತೇಣೇ ಭಾವಶುದ್ಧೀಚಿಯಾ ವಾಟೇ । ವಿಖುರ ಲೇ ವಿಕಲ್ಪಾಚೇ ಕಾಂಟೇ । ಮಗ ಚಿರಿಲೇ ಅವ್ಹಾಂಟೇ । ಅಪ್ರವೃತ್ತೀಚೇ ॥ ೭೦ ॥ ತೇಣೇ ಭೂತೇ ಭಾಂಬಾವಲೀ । ಮ್ಹಣೋನಿ ಸಂಸಾರಾಚಿಯಾ ಆಡವಾ ಮಾಜೇ ಪಡಿಲೀ । ಮಗ ಮಹಾ ದುಃಖಾಚ್ಯಾ ಘೇತಲೀ । ಮೋರ್ಝಾಂವರೀ ॥ ೭೧ ॥

**ಅರ್ಥ**— ಆವಾಗ ಆ ಉಭಯತರ ಪ್ರೀತಿಯಿಂದ ಅಲ್ಲಿ ಇಚ್ಛಾರೂಪ ಕನ್ಯೆಯು ಉದಯವಾದಳು. ಅವಳು ಕಾಮದ ತಾರುಣ್ಯಾವಸ್ಥೆಯಲ್ಲಿ ಪೂರ್ಣವಾಗಿ ಪ್ರವೇಶಿಸಿ ದೊಡನೆಯೇ, ದ್ವೇಷನನ್ನು ಲಗ್ನಮಾಡಿಕೊಂಡಳು. ॥ ೬೬ ॥ ಆ ಉಭಯತರಿಂದ ( ಸುಖದುಃಖರೂಪ ) ದ್ವಂದ ಮೋಹನೆಂಬ ಪುತ್ರನು ಜನಿಸಿದನು. ಆಮೇಲೆ ಅವನನ್ನು ಅತನ ಅಜ್ಜನಾದ ಅಹಂಕಾರನು ಜೋಕೆ ಮಾಡಿ ಬೆಳೆಸಿದನು. ॥ ೬೭ ॥ ಆ ದ್ವಂದ ಮೋಹವು ಯಾವಾಗಲೂ ಸಾತ್ವಿಕ ಧೈರ್ಯಕ್ಕೆ ಪ್ರತಿಕೂಲ ಇರುತ್ತದೆ. ಮತ್ತು ಆಶಾರೂಪ ಹಾಲನ್ನು ಕುಡಿದು ಪುಷ್ಟನಾದುದರಿಂದ, ಛಲನಾ ಮಾಡುವ ಸ್ವಭಾವದವನಾದ ದ್ವಂದ-ಮೋಹನು ಇಂದ್ರಿಯಗಳ ನಿಯಮಗಳಿಗೆ ಬದ್ಧನಾಗಿರುವದಿಲ್ಲ. ॥ ೬೮ ॥ ಧನುರ್ಧರನೇ !

ಅಸಂತೋಷರೂಪೀ ಮದ್ಯವನ್ನು ಕುಡಿದು ಉನ್ಮತ್ತನಾದುದರಿಂದ ಅವನು ಪಂಚವಿಷಯ (ಶಬ್ದ–ಸ್ಪರ್ಶ–ರೂಪ–ರಸ–ಗಂಧ) ರೂಪೀ ಕೋಣೆಯಲ್ಲಿ ವಿಕಾರರೂಪೀ ಸ್ತ್ರೀಯನ್ನು ಕೂಡಿಕೊಂಡಿರುತ್ತಾನೆ. ॥ ೬೯ ॥ ಆ ದ್ವಂದ ಮೋಹನು ಶುದ್ಧ ಭಕ್ತಿಯ ಹಾದಿಯಮೇಲೆ ವಿಕಲ್ಪದ ಮುಳ್ಳುಗಳನ್ನು ಹರವಿ, ಅಲ್ಲಿ ತಿರುಗಾಡಲು ಬಾರದಂತೆ ಮಾಡಿ, ಕುಮಾರ್ಗದ ಅಡ್ಡ ಹಾದಿಯನ್ನು ಮಾತ್ರ ತೆರವು ಮಾಡಿದನು. ॥ ೧೭೦ ॥ ಆ ಯೋಗದಿಂದ ಪ್ರಾಣಿಮಾತ್ರಗಳು ಭ್ರಮೆಹೊಂದಿ ಸಂಸಾರರೂಪ ಅರಣ್ಯವನ್ನು ಸೇರುತ್ತಾರೆ. ಹೀಗೆ ಅವರು ಸಂಕಟಗಳನ್ನು ಅನುಭವಿಸಬೇಕಾಗುತ್ತದೆ. ॥ ೭೧ ॥

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ಧೃಢವ್ರತಾಃ॥ ೨೮ ॥**

**[ ಯೇಷಾಂ ತ್ವಂತಗತಮಿತಿ ]** ಐಸೇ ವಿಕಲ್ಪಚಿ ವಾಯಾಣೇ । ಕಾಂಟೇ ದೇಖೋನಿ ಸಿಸಾಣೇ। ಜೇ ಮತಿ ಭ್ರಮಾಚೇ ಪಾಸಾವಣೇ । ಘೇತೀಚಿ ನಾ ॥ ೭೨ ॥ ಉಜೂ ಏಕ ನಿಷ್ಠೆಚ್ಯಾ ಪಾವುಲೀ । ರಗಡೂನಿ ವಿಕಲ್ಪಾಚಿಯಾ ಭಾಲೀ । ಮಹಾ ಪಾತಕಾಂಚೀ ಸಾಂಡಿಲೀ । ಆಟವೀ ಜೇಹೀ ॥ ೭೩ ॥ ಮಗ ಪುಣ್ಯಾಚಿ ಧಾವಾ ಘೇತಲೇ। ಆಣಿ ಮಾಝಿಯೇ ಜವಳಿಕ ಪಾವಲೇ। ಕಿಂಬಹುನಾ ತೇ ಚುಕಲೇ। ವಾಟ ವಧೇಯಾ ॥೭೪॥

**ಅರ್ಥ—** ಈ ಪ್ರಕಾರ ವಿಕಲ್ಪದ ತೀಕ್ಷ್ಣ ಮತ್ತು ಪೊಳ್ಳು ಮುಳ್ಳುಗಳನ್ನು ನೋಡಿ ಯಾವನ ಬುದ್ಧಿಯು ಭ್ರಂಶವಾಗುವದಿಲ್ಲವೋ, ಅವನು ಮತಿ ಭ್ರಂಶದ ಪಾಶದಲ್ಲಿ ಶಿಕ್ಕು ಬೀಳುವದಿಲ್ಲ. ॥ ೭೨ ॥ ಅವನು ಸರಳ ಭಕ್ತಿಯ ಏಕನಿಷ್ಠಾರೂಪೀ ಪಾದಗಳಿಂದ, ವಿಕಲ್ಪರೂಪೀ ಭಲ್ಲೆಗಳಂತಹ ಹರಿತಾದ ಮುಳ್ಳುಗಳನ್ನು ಪ್ರೌಢತನದಿಂದ ಮೆಟ್ಟುತ್ತ ಎಲ್ಲ ಮಹಾ ಪಾತಕಗಳ ಅರಣ್ಯವನ್ನು ದಾಟ ಪಾರಾಗಿ ಹೋಗುತ್ತಾನೆ. ॥೭೩॥ ಆಮೇಲೆ ಪುಣ್ಯದ ಮಾರ್ಗದಿಂದ ತೀವ್ರವೇ ನಡೆದು ಬಂದು ನನ್ನ ಸನ್ನಿಧಿಯನ್ನು ಸೇರುತ್ತಾನೆ. ಮತ್ತು ಈ ರೀತಿಯಿಂದ ಅವನು ಹಾದೀ ಹೊಡೆಯುವ ಕಳ್ಳರನ್ನು (ಕಾಮ ಕ್ರೋಧಾದಿಗಳನ್ನು) ಜೈಸಿ ಮುಕ್ತನಾಗುತ್ತಾನೆ ॥ ೭೪ ॥

**ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ ॥ ೨೯ ॥**

**[ ಜರಾ ಮರಣ ಮೋಕ್ಷಾಯೇತಿ ]** ಯೇರವ್ಹೀ ತರೀ ಪಾರ್ಥಾ । ಜನ್ಮ ಮರಣಾಚೀ ನಿಮೇ ಕಥಾ । ಐಸಿಯಾ ಪ್ರಯತ್ನಾತೇ ಆಸ್ಥಾ । ವಿಯೇ ಜಯಾಂಚೀ ॥೭೫॥ ತಯಾ ತೋ ಪ್ರಯತ್ನಚಿ ಏಕೇ ವೇಳೀ । ಮಗ ಸಮಗ್ರ ಪರಬ್ರಹ್ಮ ಫಳೇ । ಜಯಾ ಪಿಕಲೇಯಾ ರಸಗಳೇ । ಪೂರ್ಣತೇಚಾ ॥ ೭೬ ॥ ತೇ ವೇಳೀ ಕೃತಕೃತ್ಯ ತಾ ಜಗಭರೇ । ತೇಥ ಅಧ್ಯಾತ್ಮಾಚೇ ನವಲ ಪಣ ಪುರೇ । ಕರ್ಮಾಚೇ ಕಾಮ ಸರೇ । ವಿರಮೇ ಮನ ॥ ೭೭ ॥ ಐಸಾ ಅಧ್ಯಾತ್ಮ ಲಾಭ ತಯಾ। ಹೋಯ ಗಾಧನಂಜಯಾ। ಭಾಂಡವಲ ಜಯಾ । ಉದ್ಯಮೀ ಮೀ ॥ ೭೮ ॥ ತಯಾತೇ ಸಾಮ್ಯಾಚಿಯೇ ವಾಢೀ । ಐಕ್ಯಾಚೀ ಸಾಂದೇ ಕುಲವಾಡೀ । ತೇಥ ಭೇದಾಚಿಯಾ ದುಬಳವಾಡೀ । ನೇಣಿಜೇ ತಯಾ ॥ ೭೯ ॥

**ಅರ್ಥ—** ಆವರೆ ಪಾರ್ಥಾ, ಜನನ ಮರಣಗಳ ಭ್ರಮಣದಿಂದ ಮುಕ್ತನಾಗಬೇಕಾದರೆ ಇಂಥ ಯಾವ ಸಾಧನೆಯು ಉಂಟೋ ಅದರ ಪ್ರಾಪ್ತಿಗಾಗಿ ಯಾವನು ಅಪೇಕ್ಷಿಸುತ್ತಾನೋ, ॥ ೭೫ ॥ ಅವನಿಗೆ ಆ ಪ್ರಯತ್ನವು ಯಾವಾಗಾದರೂ ಫಲದ್ರೂಪವಾಗಿ ಬ್ರಹ್ಮಪ್ರಾಪ್ತಿ ಆಗುತ್ತದೆ. ಆ ಪರಬ್ರಹ್ಮರೂಪ ಫಲವು ಪಕ್ವವಾದುದರಿಂದ ಅದರೊಳಗಿಂದ ಪೂರ್ಣತೆಯ ರಸವು ಸೋರಲಿಕ್ಕೆ ಹತ್ತುತ್ತದೆ, ॥ ೭೬ ॥ ಆವಾಗ ಅವರಿಗೆ ತಾವು ಧನ್ಯರೆಂಬುದು ತಿಳಿಯುವದು. ಅಖಿಲ ಪ್ರಪಂಚವೇ ಆನಂದದಿಂದ ತುಂಬಿದಂತೆ ಕಾಣುತ್ತದೆ. ಆಮೇಲೆ ಆತ್ಮಜ್ಞಾನದ ಉತ್ಸಾಹವು ಪೂರ್ಣವಾಗುತ್ತದೆ. ಅಲ್ಲದೇ ಕರ್ಮಗಳು ಅಲ್ಲಿಂದಲ್ಲೇ ನಿಂತು ಅವನ ಮನಸ್ಸು ಶಾಂತಿಯನ್ನು ಹೊಂದುತ್ತದೆ. ॥ ೭೭ ॥ ಎಲೈ ಧನಂಜಯನೇ ! ಇದೇ ರೀತಿಯಿಂದ ಅವನಿಗೆ ಆತ್ಮಜ್ಞಾನ ಲಾಭವು ಪ್ರಾಪ್ತವಾಗುತ್ತದೆ. ಕಾರಣ ಅವರ ಈ

ಪಾರಮಾರ್ಥ ರೂಪ ವ್ಯವಹಾರದಲ್ಲಿ ನಾನೇ ‘ ಭಾಂಡವಲು ’ ಆಗಿದ್ದೇನೆ. ॥ ೭೮ ॥ ಅವರಿಗೆ ‘ ಸಮದೃಷ್ಟಿ ’ ಯೆಂಬ ಬಡ್ಡಿಯು ದೊರಕಿ ‘ ಐಕ್ಯರೂಪ ಸಂಪತ್ತಿಯ ಸಮೃದ್ಧಿಯಾಗುತ್ತದೆ. ಇದರಿಂದ ಭೇದರೂಪ ದರಿದ್ರತನವು ಅವರಲ್ಲಿ ಗುರ್ತಿಗೆ ಸಹ ಉಳಿಯುವದಿಲ್ಲ. ॥ ೭೯ ॥

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥**

**ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ‘ ಜ್ಞಾನ ವಿಜ್ಞಾನ ’ ಯೋಗೋ ನಾಮ ಸಪ್ತಮೋಽಧ್ಯಾಯಃ ॥ ೭ ॥**

**[ಸಾಧಿಭೂತಾಧಿದೈವಮಿಂ ತಿ]** ಜೇಹೀ ಸಾಧಿಭೂತಾಮಾತೇ । ಪ್ರತೀತೀಚೇನಿ ಹಾತೇ । ಧರೂನಿ ಅಧಿದೈವಾತೇ। ಶಿವತಲೇ ಗಾ ॥ ೧೮೦ ॥ ಜಯಾ ಜಾಣಿವೇಚೇನಿ ವೇಗೇ । ಮೀ ಅಧಿಯಜ್ಞ ದೃಷ್ಟೀರಿಗೇ । ತೇ ತನೂಚೇನಿ ವಿಯೋಗೇ । ವಿರ್ಧಯೇ ನವ್ಹತೀ ॥೮೧॥ ಯೇರ್ಧವೀ ಆಯುಷ್ಯಾಚೇ ಸೂತ್ರ ವಿಘಡತಾ । ಭೂತಾಂಚೀ ಉಮಟೇ ಖಡಾಡಿತಾ । ಕಾಯ ನ ಮರತಯಾಹಿ ಚಿತ್ತಾ । ಯುಗಾಂತ ನೋಹೇ ॥ ೮೨ ॥ ಪರೀ ನೇಣೋ ಕೈಸೇ ಪೈ ಗಾ । ಜೇ ಜಡೋನಿ ಗೇಲೇ ಮಾಝಿಯಾ ಅಂಗಾ । ತೇ ಪ್ರಯಾಣೀಚಿಯಾ ಲಗಬಗಾ । ನ ಸಾಂಡಿತೀಚಿ ಮಾತೇ ॥ ೮೩ ॥ ಯೇರ್ಧವೀ ತರೀ ಜಾಣ । ಐಸೇ ಜೇ ನಿಪುಣ । ತೇಚಿ ಅಂತಃಕರಣ । ಯುಕ್ತಯೋಗೀ ॥ ೮೪ ॥ ತವ ಇಯೇ ಶಬ್ದಕುಪಿಕೇತಳೀ । ನೋಡವೇಚಿ ಅವಧಾನಾಚೀ ಅಂಜುಳೀ । ಜೇ ನಾವೇಕ ಅರ್ಜುನ ತಯೇ ವೇಳೀ । ಮಾಗಾಂಚಿ ಹೋತಾ ॥ ೮೫ ॥ ಜೇಥ ತದ್ಬ್ರಹ್ಮ ವಾಕ್ಯಫಳೇ । ಭರಿಯೇ ನಾನಾರ್ಥ ರಸೇ ರಸಾಳೇ । ಬಹಕತೇ ಆ ಹಾತಿ ಪರಿಮಳೇ । ಭಾವಾಚೇನಿ ॥ ೮೬ ॥ ಸಹಜ ಕೃಪಾ ಮಂದಾನಿಳೇ । ಶ್ರೀಕೃಷ್ಣದ್ರುಮಾಚೀ ವಚನಫಳೇ । ಅರ್ಜುನ ಶ್ರವಣಾಚಿಯೇ ಖೋಳೇ। ಅವಚಿತ ಪಡಲೀ ॥ ೮೭ ॥ ತಿಯೇ ಪ್ರಮೇಯಾಂಚೀ ಹೋ ಕಾ ವಳಲೀ । ಕೀ ಬ್ರಹ್ಮರಸಾಚ್ಯಾ ಸಾಗರೀ ಚುಬುಕಳಿಲೀ । ಮಗ ತೈಸೀಂಚ ಕಾ ಘೋಳಿಲೀ । ಪರಮಾನಂದೇ ॥ ೮೮ ॥ ತೇಣೇ ಬರವೇ ಪಣೇ ಸಿರ್ಮಳೀ । ಅರ್ಜುನಾ ಉನ್ಮೇಷಾಚೇ ಡೋಹಳೇ । ಘೇತಾತಿ ಗಳಾಳೇ । ವಿಸ್ಮಯಾಮೃತಾಚೇ ॥ ೮೯ ॥ ತಿಯಾ ಸುಖ ಸಂಪತ್ತಿ ಜೋಡಲಿಯಾ । ಮಗ ಸ್ವರ್ಗಾವಾಯೇ ವಾಂಕುಲಿಯಾ । ಹೃದಯಾಚ್ಯಾ ಜೀವೀ ಗುತಕುಲಿಯಾ । ಹೋತ ಆಹಾತೀ ॥ ೧೯೦ ॥ ಐಸೇ ವರಚಿಲೀಚೀ ಬರವಾ । ಸುಖ ಜಾಪ್ರೋ ಲಾಗಲೇ ಫಾವಾ । ತವ ರಸಸ್ವಾದಾಚಿಯಾ ಹಾಂವಾ । ಲಾಹೋ ಕೇಲಾ ॥ ೯೧ ॥ ಝಡಕರೀ ಅನುಮಾನಾಚೇನಿ ಕರತಳೇ । ಘೇವೂನಿ ತಿಯೇ ವಾಕ್ಯಫಳೇ । ಪ್ರತೀತಿ ಮುಖೀ ಏಕೇ ವೇಳೇ । ಘಾಲೂ ಪಾಹೇ ॥ ೯೨ ॥ ತವ ವಿಚಾರಾಚಿಯಾ ರಸನಾ ನ ದಾಟತಿ । ಪರೀ ಹೇತೂಚ್ಯಾ ದಶನೀ ನ ಫುಟತೀ । ಐಸೇ ಜಾಣೋನಿ ಸುಭದ್ರಾಪತೀ । ಚುಂಬೀಚಿನಾ ॥ ೯೩ ॥ ಮಗ ಚಮತ್ಕಾರಲಾ ಮ್ಹಣೇ। ಇಯೇ ಜಳೀಂಚೀ ಮಾ ತಾರಾಗಣೇ । ಕೈಸಾ ಝಕವಿಲೋ ಅಸಲಾಗಪಣೇ । ಅಕ್ಷರಾಂಚೇನಿ ॥ ೯೪ ॥ ಇಯೇ ಪದೇ ನವ್ಹತೀ ಫುಡಿಯಾ । ಗಗನಾಚಿಯಾ ಘಡಿಯಾ । ಯೇಥ ಆಮುಚೀ ಮತೀ ಉಡಾಲಿಯಾ। ಥಾವ ನ ನಿಘೇ ॥ ೯೫ ॥ ವಾಂಚೂನಿ ಜಾಣಾವಯಾಚೀ ಕೇ ಗೋಠೀ । ಐಸೇ ಜೀವಿ ಕಲ್ಪೂನಿ ಕಿರೀಟೀ। ತಿಯಾ ಪುನರಪಿ ಕೇಲೀ ದೃಷ್ಟೀ । ಯಾದವೇಂದ್ರಾ ॥ ೯೬ ॥ ಮಗ ವಿನವಲೇ ಸುಭಟೇ । ಹಾ ಹೋ ಜೇ ಯೇ ಏಕವಾಟೇ । ಸಾತಹೀ ಪದೇ ಅನುಚ್ಛಿಷ್ಟೇ । ನವಲೇ ಆಹಾತೀ ॥ ೯೭ ॥ ಯೇರ್ಧವೀ ಅವಧಾನಾಚೇನಿ ವಹಿಲೇಪಣೇ । ನಾನಾ ಪ್ರಮೇಯಾಂಚೇ ಉಗಾಣೇ । ಕಾಯ ಶ್ರವಣಾಚೇನಿ ಆಂಗವಣೇ । ಬೋಲೋ ರಾಹತೀ ॥ ೯೮ ॥ ಪರೀ ತೈಸೇ ಹೇ ನೋಹೇಚಿ ದೇವಾ । ದೇಖಿಲಾ ಅಕ್ಷರಾಂಚಾ ಮೇಳಾವಾ ಆಣಿ ವಿಸ್ಮಯಾಚಿಯಾ ಜೀವಾ । ವಿಸ್ಮಯೋ ಜಾಲಾ ॥ ೯೯ ॥ ಕಾನಾಚೇನಿ ಗವಾಕ್ಷದ್ವಾರೇ ।

ಬೋಲಾಚೀರಶ್ಮೀ ಅಭ್ಯಂತರೀ । ಸಾಹೇ ನಾ ತಂವ ಚಮತ್ಕಾರೀ । ಅವಧಾನ ಠಾಕಲೀ ॥ ೨೦೦ ॥
ತೇವ್ಹಿಂಚಿ ಅರ್ಥಾಚೀ ಚಾಡ ಮಜ ಆಹೇ । ತೇ ಸಾಂಗತಾಂಹೀವೇಳ ನ ಸಾಹೇ । ಮ್ಹಣೂನಿ
ನಿರೂಪಣ ಲವಲಾಹೇ । ಕಿ ಜೋ ದೇವಾ ॥ ೧ ॥ ಐಸಾ ನಾಗೀಲ ಪಡಕಾಳಾ ಘೇವುನೀ ।
ಪುಢಾ ಅಭಿಪ್ರಾಯ ದೃಷ್ಟೀಸುನೀ । ತೇವ್ಹಿಂಚಿ ಮಾಜೀ ಶಿರವೂನಿ । ಆರ್ತೀ ಆಪುಲೀ ॥ ೨ ॥
ಕೈಸೀ ಪುಸತೀ ಪಾಹೇ ಪಾ ಜಾಣಿವ । ಭಿಡೇಚೀ ತರೀ ಲಂಘೋ ನೇದೀ ಶಿವ । ಯೇರ್ಹವೀ
ಶ್ರೀಕೃಷ್ಣಹೃದಯಾಸಿ ಖೇವ । ದೇವೋ ಸರಲಾ ॥ ೩ ॥ ಅಹೋ ಶ್ರೀಗುರೂತೇ ಜೈ ಪುಸಾವೇ । ತೇ
ಯೇಣೇ ಮಾನೇ ಸಾವಧ ಹೋಆವೇ । ಹೇ ಏಕಚಿ ಜಾಣೇ ಆಘವೇ । ಸವ್ಯಸಾಚೀ ॥ ೪ ॥
ಆತಾ ತಯಾಚೇ ತೇ ಪ್ರಶ್ನ ಕರಣೇ । ವರೀ ಸರ್ವಜ್ಞ ಶ್ರೀ ಹರೀಚೇಂ ಬೋಲಣೇ । ಹೇ
ಸಂಜಯೋ ಆವಡತೇಪಣೇ । ಸಾಂಗೇಲ ಕೈಸೇ ॥ ೫ ॥ ತಿಯೇ ಅವಧಾನ ದ್ಯಾವೇಂ ಗೋಠೀ ।
ಬೋಲಿಜೇಲ ನೀಟ ಮರ್ಹಾಠೀ । ಜೈಸೀ ಕಾನಾಚೇ ಆಧೀ ದೃಷ್ಟೀ । ಉಪೇಗಾ ಜಾಯೇ ॥ ೬ ॥
ಬುದ್ಧೀಚಿಯಾ ಜಿಭಾ । ಬೋಲಾಚಾ ನ ಚಾಖತಾ ಗಾಭಾ । ಅಕ್ಷರಾಂಚಿಯಾ ಭಾಂಬಾ । ಇಂದ್ರಿಯೇಂ
ಜಿತೀ ॥ ೭ ॥ ಪಾಹಾ ಪಾ ಮಾಲತೀಚೇ ಕಳೇ । ಘ್ರಾಣಾಸಿ ಕೀರ ವಾಟಲೇ ಪರಿಮಳೆ । ಪರೀ
ವರಚಿಯಾ ಬರವಾ ಕಾಇ ಡೋಳೇ । ಸುಖಿಯೇ ನವ್ಹತೀ ॥ ೮ ॥ ತೈಸೇ ದೇಶಿಯೇಂಚಿಯಾ
ಹವಾವಾ । ಇಂದ್ರಿಯೇ ಕರಿತೀ ರಾಣಿವಾ । ಮಗ ಪ್ರಮೆಯಾಚಿಯಾ ಗಾಂವಾ । ಲೇಸಾ
ಜಾಇಜೇ ॥ ೯ ॥ ಐಸೇನಿ ನಾಗರಪಣೇ । ಬೋಲನಿವೋ ತೇ ಬೋಲಣೇಂ । ಐಕಾ ಜ್ಞಾನದೇವ ಮ್ಹಣೇ ।
ನಿವೃತ್ತೀಚಾ ॥ ೨೧೦ ॥

ಇತಿ ಶ್ರೀ ಜ್ಞಾನದೇವ ವಿರಚಿತಾಯಾಂ ಭಾವಾರ್ಥ ದೀಪಿಕಾಯಾಂ ಸಪ್ತಮೋಽಧ್ಯಾಯಃ ॥ ೭ ॥ ಶ್ಲೋಕ ೩೦. ಓವಿಗಳು ೨೧೦

**ಅರ್ಥ—** ಅವನು ಆಧಿ ಭೂತ ಸಹವಾಗಿ ( ಶರೀರ ಸಹ ) ನನಗೆ ಅನುಭವದ್ವಾರದಿಂದ ಯಥಾರ್ಥವಾಗಿ ತಿಳಿದು ಯಾವನು ಆಧಿದೈವತ ( ಜೀವನಿಗೆ ) ಆಕಲನಮಾಡಿದನು. ॥ ೧೮೦ ॥ ಮತ್ತು ಆ ಜ್ಞಾನದ ಬಲದಿಂದ ನನಗೆ ಆಧಿಯಜ್ಞ ( ಪರಮಾತ್ಮ ) ನಿರುವನೆಂಬ ಅನುಭವದ ಪ್ರಷ್ಟಿಯಿಂದ ನೋಡುತ್ತಾನೆ. ಅವನಿಗೆ ಶರೀರದ ವಿಯೋಗದಿಂದ ಮರಣಕಾಲದಲ್ಲಿ ದುಃಖವಾಗುವದಿಲ್ಲ. ॥ ೮೧ ॥ ಆದರೆ ಆಯುಷ್ಯದ ಧಾರವು ಹರಿಯುವ ಹವಣಿಕೆಯಲ್ಲಿದ್ದಾಗ, ಪಡುವ ಪ್ರಾಣಿಗಳ ಸಂಕಟವನ್ನು ಕಂಡು ಸಾವನ್ನರಿಯದ ಬೇರೆ ಜನರಿಗೆ ಕೂಡ ಪ್ರಳಯಕಾಲದಲ್ಲಿ ತೋರಿಬರುವ ಭೀತಿಯು ಉದಯವಾಗಲಾರದೇ ? ॥ ೮೨ ॥ ಆದರೆ ಅವರು ನನ್ನೊಂದಿಗೆ ಒಂದುಗೂಡಿರುವ ಸೊಬಗನ್ನು ಹೇಗೆ, ಯಾವರೀತಿಯಿಂದಲೂ ಬಣ್ಣಿಸಲು ಬರಲಾರದು. ಏಕೆಂದರೆ ಅವರು ಮರಣದಂತಹ ನಿಕಟಕಾಲದಲ್ಲಿಯೂ ನನ್ನನ್ನು ಮರೆತಿರಲಾರರು. ॥ ೮೩ ॥ ಇಲ್ಲವೇ ಯಾರು ಇಂಥ ಪ್ರಕಾರದ ಪೂರ್ಣ ಜ್ಞಾನಿಗಳಾಗಿರುವರೋ, ಅವರೇ ( ನನ್ನಲ್ಲಿ ) ಸ್ಥಿರ ಅಂತಃಕರಣವುಳ್ಳ ಯೋಗಿಗಳಾಗಿರುವರೆಂದು ತಿಳಿ. ॥ ೮೪ ॥ ( ಇಲ್ಲಿಂದ ಟೀಕಾಕಾರರ ಭಾಷಣವು ಪ್ರಾರಂಭವಾಗುತ್ತದೆ. ) ಆ ಸಮಯದಲ್ಲಿ ಶ್ರೀ ಕೃಷ್ಣನ ಮುಖದಿಂದ ಹೊರಟ ಶಬ್ದರೂಪೀ ಪಾತ್ರೆಯು ಕೆಳಗೆ ಅರ್ಜುನನು ' ಅವಧಾನರೂಪೀ ' ಬೊಗಸೆಯನ್ನು ಒಡ್ಡಿರಲಿಲ್ಲ. ಕಾರಣವೇನೆಂದರೆ, ಅವನ ಅಂತಃಕರಣವು ಹಿಂದಿನ ( ೨೯ ನೇ ಶ್ಲೋಕಾರ್ಥದ ) ಚಿಂತನೆಯಲ್ಲಿ ತೊಡಗಿದ್ದಿತು. ಆದುದರಿಂದ ಭಗವಾನನು ಹೇಳುವ ಮಾತಿನ ಕಡೆಗೆ ಅರ್ಜುನನ ಲಕ್ಷವಿರಲಿಲ್ಲ. ॥ ೮೫ ॥ ಆ ಸ್ಥಳದಲ್ಲಿ ಈ ಬ್ರಹ್ಮಪ್ರತಿಪಾದಕ ವಾಕ್ಯವೆಂಬ ಫಲವು ಚನ್ನಾಗಿ ರಸಭರಿತವಾಗಿದ್ದಿತು. ಮತ್ತು ಅದರ ಭಕ್ತಿರೂಪ ಸುಗಂಧವಾಸನೆಯು ನಾಲ್ಕು ಕಡೆಗೆ ಹಬ್ಬಿದ್ದಿತು. ॥ ೮೬ ॥ ಆವಾಗ ಕೃಷ್ಣಕೃಪಾರೂಪ ಮಂದವಾಯುವು ಬೀಸಿ, ಶ್ರೀ ಕೃಷ್ಣರೂಪೀ ವೃಕ್ಷದಿಂದ, ವಚನರೂಪೀ ಫಲಗಳು, ಅರ್ಜುನನ ಶ್ರವಣರೂಪೀ ಉಡಿಯಲ್ಲಿ ಸಹಜವಾಗಿಯೇ ಬಿದ್ದವು. ॥ ೮೭ ॥ ಈ ವಾಕ್ಯರೂಪೀ ಫಲಗಳನ್ನು ತತ್ವಜ್ಞಾನದ ಸಿದ್ಧಾಂತದಿಂದಲೇ ಮಾಡಿ, ಬ್ರಹ್ಮರಸರೂಪೀ ಸಮುದ್ರದಲ್ಲಿ ಅದ್ದಿ, ಪರಮಾನಂದರೂಪೀ ಸಕ್ಕರೆಯಲ್ಲಿ ಉರುಳಾಡಿಸಿರುವರೋ, ಎಂದು ತೋರು

ತ್ರಿದ್ದವು. ॥ ೮೮ ॥ ಇಂಥ ರೀತಿಯಿಂದ ಸಿದ್ಧಪಡಿಸಿದ ಈ ನಿರ್ಮಲ ಫಲಗಳಲ್ಲಿಯ ಅರ್ಥರೂಪೀ ಗರ್ಭದ (ಜ್ಞಾನದ) ಲಾಭಮಾಡಿಕೊಳ್ಳಬೇಕೆಂಬ ಇಚ್ಛೆಯು ಅರ್ಜುನನಲ್ಲಿ ಉತ್ಪನ್ನನಾಗಿ, ಅವನು ವಿಸ್ಮಯರೂಪೀ ಅಮೃತದ ಗುಟುಕು ತೆಗೆದುಕೊಳ್ಳಲಾಂಭಿಸಿದನು. ॥೮೯॥ ಹೀಗೆ ಸುಖಸಂಪತ್ತಿಯು ಲಾಭಕ್ಕೋಸುಗ ಅರ್ಜುನನ ಅಂತಃಕರಣದಲ್ಲಿ ಆದ ಆನಂದದ ಭರತಿಯು, ಅವನನ್ನು ಸ್ವರ್ಗಸುಖವು ತುಚ್ಛವೆಂದು ತಿಳಿಯುವಂತೆ ಮಾಡಿತು. ॥ ೯೦ ॥ ಈ ಪ್ರಕಾರ ಆ ಫಲದ ಬಾಹ್ಯ ಸೌಂದರ್ಯ ಸುಖದ ಅನುಭವವನ್ನು ಅರ್ಜುನನು ಕಾಣಹತ್ತಿದನು. ಅವನು ಕೂಡಲೇ ಆ ಫಲದ ರಸವನ್ನು ಸವಿಯಬೇಕೆಂಬ ಪ್ರಬಲ ಇಚ್ಛೆಯಿಂದ ತ್ವರೆಮಾಡಿದನು. ॥ ೯೧ ॥ ತೀವ್ರವೇ ಅನುಮಾನರೂಪೀ ಕರದಲ್ಲಿ ಆ ಕೃಷ್ಣರೂಪೀ ವಾಕ್ಯದ ಫಲವನ್ನು ಹಿಡಿದುಕೊಂಡು, ಅದನ್ನು ಅನುಭವರೂಪೀ ಮುಖದಲ್ಲಿ ಒಮ್ಮೆಲೇ ಇಟ್ಟು ಕೊಳ್ಳಲು ಹವಣಿಸಿದನು. ॥ ೯೨ ॥ ಆ ಸಮಯದಲ್ಲಿ ವಿಚಾರರೂಪಿ ಬಾಯಿಯಲ್ಲಿ ಆ ಫಲವು ಹಿಡಿಯದಾಯಿತು. ಮತ್ತು ಹೇತೂರೂಪ ಹಲ್ಲುಗಳಿಂದ ನುರಿಯಲೂ ಬರದಾಯಿತು. ಇದನ್ನು ತಿಳಿದು ಸುಭದ್ರಾಪತಿಯು ಆ ವಾಕ್ಯರೂಪೀ ಫಲವನ್ನು ಬಾಯಿಯಲ್ಲಿಡಲಿಲ್ಲ. ॥ ೯೩ ॥ ಆ ಚಮತ್ಕಾರವನ್ನುಕಂಡು ಅರ್ಜುನನು ಅನ್ನುತ್ತಾನೆ, ನೀರಿನಲ್ಲಿ ಬಿದ್ದಿರುವ ನಕ್ಷತ್ರದ ಪ್ರತಿಬಿಂಬದೋಪಾದಿಯಲ್ಲಿರುವ ಆ ವಾಕ್ಯಾಕ್ಷರಗಳ ಸೌಂದರ್ಯವನ್ನು ನೋಡಿ, ಆ ಅಕ್ಷರಗಳು ಹಣ್ಣು ಗಳೆಂದು ನಾನು ಭ್ರಮಿಸಿದುದು ಹೇಗೆ? ॥ ೯೪ ॥ ಇವು ನಿಜವಾಗಿ ವಾಕ್ಯಗಳಾಗಿರದೇ ಆಕಾಶದ ಮಡಿಕೆಗಳೇ ಆಗಿರುವವು. ಅಲ್ಲಿ ನಾವು ನಮ್ಮ ಬುದ್ಧಿಯಿಂದ ಎಷ್ಟು ಒದ್ದಾಡಿದರೂ ಅದರ ನೆಲೆಯನ್ನು ಹೊಂದಲಾರೆವು. ॥ ೯೫ ॥ ಹೀಗಿದ್ದಮೇಲೆ ಆ ವಾಕ್ಯವನ್ನು ತಿಳಿಯುವ ಬಗೆ ಹೇಗೆ ? ಎಂದು ಅರ್ಜುನನು ಮನದಲ್ಲಿ ವಿಚಾರಮಾಡಿ, ಪುನಃ ಯಾದವೇಂದ್ರನಾದ ಶ್ರೀ ಕೃಷ್ಣನಕಡೆಗೆ ನೋಡಿದನು. ॥ ೯೬ ॥ ಆಮೇಲೆ ಅರ್ಜುನನು ಭಗವಾನ್ ಶ್ರೀ ಕೃಷ್ಣನಿಗೆ ವಿನಯದಿಂದ ಬೇಡಿಕೊಳ್ಳುತ್ತಾನೆ — ಈ ಒಂದಾಗಿ ಕೂಡಿ ಹೋಗಿರುವ ಏಳು ಪದಗಳ ( (೧) ಬ್ರಹ್ಮ (೨) ಅಧ್ಯಾತ್ಮ (೩) ಕರ್ಮ (೪) ಅಧಿಭೂತ (೫) ಅಧಿದೈವತ (೬) ಅಧಿಯಜ್ಞ (೭) ಪ್ರಯಾಣಕಾಲ ದಲ್ಲಿ ಯೋಗಿಗಳಿಗೆ ಆಗುವ ನಿನ್ನ ಸ್ಮರಣ. ) ಸ್ವಾದವನ್ನು ಯಾರೂ ಎಂದೂ ತೆಗೆದುಕೊಂಡಿರುವದಿಲ್ಲ. ಇದು ಬಹಳೇ ಆಶ್ಚರ್ಯವಾಗುವಂತಹದು ! ॥ ೯೭ ॥ ಸಹಜವಾಗಿ ವಿಚಾರಮಾಡಿ ನೋಡಿದರೆ ಈ ಏಳು ವಾಕ್ಯಗಳೊಳ ಗಿನ ಬೇರೆಬೇರೆ ಪ್ರಮೇಯಗಳನ್ನು ತೀವ್ರವಾಗಿ ಅವಧಾನ ಕೊಟ್ಟು ಶ್ರವಣಮಾಡುವದರಿಂದ, ಆ ಶ್ರವಣದ ಬಲದಿಂದ ಏನಾದರೂ ಮಾತನಾಡಲು ಬರಬಹುದು. ಎಂದು ನನಗೆ ತೋರಿತು. ॥ ೯೮ ॥ ಆದರೆ ದೇವಾ, ಈ ಸಂಭಾಷಣವು ಸಾಧಾರಣವಾದುದಲ್ಲ. ಈ ಅಕ್ಷರಗಳು ಸಹಜವಾಗಿಯೇ ನೋಡಿದರೆ ವಿಸ್ಮಯಕ್ಕೇ ವಿಸ್ಮಯವಾಗಿ ತೋರುವವು. ॥೯೯॥ ಕಿವಿಗಳ ರಂಧ್ರಗಳೊಳಗಿಂದ ಭಾಷಣರೂಪೀ ಕಿರಣಗಳು ಇನ್ನೂ ಒಳಗೆ ಪ್ರವೇಶವಾಗಿರುವದಿಲ್ಲ. ಅಷ್ಟರಲ್ಲಿಯೇ ಆಶ್ಚರ್ಯವು ಮೈದೋರಿ ನನ್ನ ಲಕ್ಷವು ಮಂದವಾಯಿತು, ॥ ೧೦೦ ॥ ಈ ಶಬ್ದದ ಅರ್ಥವನ್ನು ತಿಳಿದುಕೊಳ್ಳ ಬೇಕೆಂದು ನನಗೆ ಉತ್ಕಟವಾದ ಇಚ್ಛೆಯು ಹುಟ್ಟಿದೆ. ಹೀಗೆ ಹೇಳುವಾಗ ಹಿಡಿಯುವ ವೇಳೆಯನ್ನು ಕಳೆಯಲು ಕೂಡಾ ನನಗೆ ಸಾಧ್ಯವಾಗಲಾರದಾಗಿದೆ. ಅದು ಕಾರಣ ದೇವಾ, ಅದರ ಅರ್ಥವನ್ನು ತೀವ್ರವಾಗಿ ಹೇಳುವದಾಗ ಬೇಕು. ಈ ಪ್ರಕಾರ ಹಿಂದಿನ ಸಂಗತಿಯನ್ನು ತೆಗೆದುಕೊಂಡು ಮುಂದಿನ ಅಭಿಪ್ರಾಯದ ಮೇಲೆ ದೃಷ್ಟಿಯನ್ನಿಟ್ಟು ಮಧ್ಯದಲ್ಲಿಯೇ ಕೇಳಬೇಕೆಂಬ ತನ್ನ ಅಪೇಕ್ಷೆಯನ್ನು ತೋರಿಸಿ, ಅರ್ಜುನನು ವಿಚಾರ ಮಾಡಿದನು ॥ ೨ ॥ ಅರ್ಜುನನಲ್ಲಿ ಪ್ರಶ್ನೆಮಾಡುವ ಶೈಲಿಯು ಹೇಗಿರುವುದು ನೋಡಿರಿ ? ಮರ್ಯಾದೆಯ ಉಲ್ಲಂಘನೆಯನ್ನು ಮಾಡದೇ, ಶ್ರೀಕೃಷ್ಣನ ಹೃದಯಕ್ಕೆ ಪ್ರೇಮಾಲಿಂಗನವನ್ನು ಕೊಡಲಿಕ್ಕೆ ಸಿದ್ಧನಾದನು. ॥ ೩ ॥ ಶ್ರೀ ಗುರುಗಳಿಗೆ ಯಾವ ಕಾಲಕ್ಕೆ ಕೇಳಬೆಕೋ ಆವಾಗ ಇಂಥ ಮರ್ಯಾದೆಯಿಂದಲೇ ಕೇಳಬೇಕು. ಅವರ ಮರ್ಯಾದೆಯನ್ನು ಸ್ಥಿರವಾಗಿ ಇಟ್ಟು ತನ್ನ ಶಂಕೆಯನ್ನು ಕೇಳುವ ಶೈಲಿಯ ಬಗೆಯನ್ನು ಅರ್ಜುನನೊಬ್ಬನೇ ಬಲ್ಲನು. ॥೪॥ ಈಗ ಅವನ ಆ ಪ್ರಶ್ನೆಮಾಡುವದನ್ನೂ, ಆ ಪ್ರಶ್ನೆಗೆ ಸರ್ವಜ್ಞ ಶ್ರೀಹರಿಯು ಉತ್ತರಕೊಡುವದನ್ನೂ ಆ ಸಂಜಯನು ಹೇಗೆ ಪ್ರೇಮದಿಂದ ಹೇಳುವನೆಂಬುದನ್ನು ನೋಡಿರಿ. ॥೫॥ ಯಾವ ಮಾತು ನೆಟ್ಟಗೆ ಮಹಾರಾಷ್ಟ್ರ ಭಾಷೆಯಲ್ಲಿ ಹೇಳಲು ಬರುವದೋ, ಅದರ ಕಡೆಗೆ ಚನ್ನಾಗಿ ಲಕ್ಷವನ್ನು ಕೊಡ ಬೇಕು. ಏಕೆಂದರೆ ಆ ಯೋಗದಿಂದ ಕಿವಿಗಳ ದೃಷ್ಟಿಗೆ ಮೊದಲಿಗೇ ಅರ್ಥವು ಕಾಣ ಹತ್ತುವದು. ॥ ೬ ॥ ಬುದ್ಧಿರೂಪ

ನಾಲಿಗೆಯಿಂದ ಆ ಶಬ್ದರಸವನ್ನು ಕುಡಿಯದೇ, ಅಕ್ಷರದ ಸೌಂದರ್ಯದಿಂದ ಇಂದ್ರಿಯಗಳು ತಟಸ್ಥವಾಗುವವು. ॥೭॥ ಹೀಗೆ ನೋಡು, ಮಲ್ಲಿಗೆಯ ಹೂವಿನ ಸುಗಂಧವು ಘ್ರಾಣೇಂದ್ರಿಯಕ್ಕೆ ಬರುವದು ಸಹಜವು. ಆದರೆ ಆ ಪುಷ್ಪದ ಹೊರಗಿನ ಸೌಂದರ್ಯವನ್ನು ನೋಡಿ ಕಣ್ಣುಗಳಿಗೆ ಸುಖವು ಆಗದಿರುವುದೇ ಹೇಗೆ ? ॥೮॥ ಅದೇ ಪ್ರಕಾರ ಮಹಾರಾಷ್ಟ್ರ ಭಾಷೆಯ ಶೋಭೆಯಿಂದ ಇಂದ್ರಿಯಗಳು ಸುಖದ ಸಾಮ್ರಾಜ್ಯವನ್ನು ಭೋಗಿಸುವವು. ಮತ್ತು ಆಮೇಲೆ ತೀವ್ರವೇ ಸಿದ್ಧಾಂತರೂಪೀ ಗ್ರಾಮದಲ್ಲಿ ಪ್ರವೇಶವಾಗುವವು. ॥ ೯ ॥ ಇಂಥ ಸೌಂದರ್ಯದಿಂದ ತುಂಬಿದ ಈ ಸಂಭಾಷಣವನ್ನು ಕೇಳಿದಕೂಡಲೇ ಮಾತುಗಳೇ ನಿಂತು ಹೋಗುತ್ತವೆ. ಇಂತಹ ಸುರಸ ಸಂಭಾಷಣೆಯನ್ನು ಕೇಳಿರಿ, ಎಂದು ನಿವೃತ್ತಿ ದಾಸರಿಗೆ ಜ್ಞಾನದೇವ ಮಹಾರಾಜರು ಅನ್ನುತ್ತಾರೆ. ॥ ೨೧೦ ॥

**ಶ್ರೀಮದ್ಭಗವದ್ಗೀತೆ ಅರ್ಥಾತ್ ಜ್ಞಾನೇಶ್ವರಿಯ ಸುಲಭ, ಸರಲ ಕನ್ನಡ ಅನುವಾದದ ಏಳನೆಯ ಅಧ್ಯಾಯವು ಮುಗಿದುದು.**

## ಸಮಾಪ್ತವು

ಶ್ರೀಕೃಷ್ಣಾರ್ಪಣಮಸ್ತು



# ಜ್ಞಾನೇಶ್ವರೀ

## ಎಂಟನೆಯ ಅಧ್ಯಾಯವು

**ಅರ್ಜುನ ಉವಾಚ—**

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥**

[ **ಕಿಂತದ್ಬ್ರಹ್ಮೇತಿ** ] ಮಗ ಅರ್ಜುನೇ ಮ್ಹಣಿತಲೇ । ಹಾ ಹೋಜೀ ಅವಧಾರಿಲೇ । ಜೇ ಮ್ಯಾ ಪುಸಿಲೇ । ತೇನಿರೂಪಿಜೇ ॥ ೧ ॥ ಸಾಂಗಾ ಕವಣ ತೇಬ್ರಹ್ಮ । ಕಾಯ ಸಯಾ ನಾಮ ಕರ್ಮ । ಅಥವಾ ಅಧ್ಯಾತ್ಮ । ಕಾಯ ಮ್ಹಣಿಪೇ ॥ ೨ ॥ ಅಧಿಭೂತ ತೇ ಕೈಸೇ । ಏಥ ಅಧಿ ದೈವತ ತೇ ಕವಣ ಅಸೇ । ಹೇ ಉಘಡ ಮೀ ಪರಿಯೇಸೇ । ಐಸೇ ಬೋಲಾ ॥ ೩ ॥

**ಅರ್ಥ—** ಆ ಮೇಲೆ ಅರ್ಜುನನು ಅನ್ನುತ್ತಾನೆ: ಎಲೋ ದೇವನೆ ! ಕೇಳಿದಿರೇನು. ಯಾವದು ನಿಮಗೆ ವಿಚಾರಿಸಿರುವೆನು, ಅದನ್ನು ನನಗೆ ವಿಸ್ತಾರದಿಂದ ಹೇಳಬೇಕು. ॥ ೧ ॥ ಆ ಬ್ರಹ್ಮವು ಯಾವದು ? ಕರ್ಮವೆಂದು ಯಾವದಕ್ಕೆ ಕರಿಯುವರು ? ಅಧ್ಯಾತ್ಮವೆಂದರೆ ಯಾವದು ? ॥ ೨ ॥ ಅಧಿಭೂತವೆಂದೆನ್ನುತ್ತಾರೆ, ಅದು ಹೇಗೆ ಇರುವದು? ಇದರಲ್ಲಿ ಅಧಿದೈವತವು ಯಾವದು ? ಇದು ನನಗೆ ನಿಚ್ಚಳವಾಗಿ ತಿಳಿಯುವಂತೆ ಹೇಳಬೇಕು. ॥ ೩ ॥

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

[ **ಅಧಿಯಜ್ಞಃ ಇತಿ** ] ದೇವಾ ಅಧಿಯಜ್ಞ ತೋ ಕಾಇ । ಕವಣ ಪಾ ಇಯೇ ದೇಹೀ । ಹೇ ಅನುಮಾನಾಸಿ ಕಾಂಹೀ । ದಿಸೀ ನ ಭರೇ ॥ ೪ ॥ ಆಣಿ ನಿಯತಾ ಅಂತಃಕರಣೀ । ತೂಜಾಣಿಜಸೀ ದೇಹ ಪ್ರಯಾಣೀ । ತೇ ಕೈಸೇನಿ ಹೇ ಶಾರ್ಙಪಾಣೀ । ಪರಿಸವಾ ಮಾತೇ ॥ ೫ ॥ ದೇಖಾ ಧನಳಾರೀ ಚಿಂತಾಮಣೀಚಾ । ಜರೀ ಪಹುಡಲಾ ಹೋಯ ದೈವಾಚಾ । ತರೀ ಓಸಣ ತಾಹೀ ಬೋಲ ತಯಾಚಾ । ಸೋಪ ನ ವಚೇ ॥ ೬ ॥ ತೈಸೇ ಅರ್ಜುನಾಚಿಯಾ ಬೋಲಾಸವೇ । ಆಲೇ ತೇಚಿ ಮ್ಹಣಿತಲೇ ದೇವೇ । ಪರಿಯೇಸೇ ಗಾ ಬರವೇ । ಜೇ ಪುಸಿಲೇ ತುವಾ ॥ ೭ ॥ ಕಿರೀಟೀ ಕಾಮಧೇನೂಚಾ ಪಾಡಾ । ವರೀ ಕಲ್ಪ ತರೂಚಾ ಆಹೇ ಮಾಂದೋಡಾ । ಮ್ಹಣೋನಿ ಮನೋರಥ ಸಿದ್ಧೀಚಿಯಾ ಚಾಡಾ । ತೋ ನವಲ ನೋಹೇ ॥ ೮ ॥ ಶ್ರೀಕೃಷ್ಣ ಕೋಪೋನಿ ಜ್ಯಾಸಿ ಮಾರೀ । ತೋ ಪಾವೇ ಪರಬ್ರಹ್ಮ ಸಾಕ್ಷಾತ್ಕಾರೀ । ಮಾ ಕೃಪೇನೇ ಉಪದೇಶ ಕರೀ । ತೋ ಕೈಶಾಪರೀ ನ ಪವೇಲ ॥ ೯ ॥ ಜೈ ಕೃಷ್ಣಚಿ ಹೋಇಜೇ ಆಪಣ । ತೈ ಕೃಷ್ಣ ಹೋಯ ಆಪುಲೇ ಅಂತಃಕರಣ । ತೇಧವಾ ಸಂಕಲ್ಪಾಚೇ ಅಂಗಣ । ವೋಳಗತೀ ಸಿದ್ಧೀ ॥ ೧೦ ॥ ಪರೀ ಐಸೇ ಜೇ ಪ್ರೇಮ । ತೇ ಅರ್ಜುನೀಂಚಿ ಅಥಿ ನಿಃಸ್ಸೀಮ । ಮ್ಹಣವೂನಿ ತಯಾತೇ ಕಾಮ । ಸದಾ ಸಫಳ ॥ ೧೧ ॥ ಯಾ ಕಾರಣೇ ಶ್ರೀ ಅನಂತೇ । ತೇ ಮನೋಗತ ತಯಾಚೇ ಪುಸತೇ । ಹೋಇಲ ಜಾಣೂನಿ ಆಇತೇ । ವೋಗರೂನಿ ಠೇವಿಲೇ ॥ ೧೨ ॥ ಜೇ ಅಪತ್ಯ ಥಾನೀ ನಿಗೇ ।

ತಯಾಚೀ ಭೂಕ ತೇ ಮಾತೇಸೀಚಿ ಲಾಗೇ । ಯೇರ್ಹವೀ ತೇ ಶಬ್ದೇ ಕಾಯ ಸಾಂಗೇ । ಮಗ, ಸ್ತನ್ಯ ದೇಯೇರೀ ॥ ೧೩ ॥ ಮ್ಹಣವೋನಿ ಕೃಪಾಳುವಾ ಗುರೂಚಿಯಾ ಠಾಯೀ । ಹೇ ನವಲ ನೋಹೇ ಕಾಂಹೀ । ಪರೀ ತೇ ಅಸೋ ಆಇಕಾ ಕಾಇ । ಜೇ ದೇವ ಬೋಲತೇ ಜಾಹಾಲೇ ॥ ೧೪ ॥

**ಅರ್ಥ—** ದೇವಾ ! ಅಧಿಯಜ್ಞ ಯಾವದು ಮತ್ತು ಅದು ಈ ದೇಹದಲ್ಲಿ ಹೇಗೆ ಶೋಭಿಸುವದು ? ಇದು ಅನುಮಾನ ಯೋಗದಿಂದ ಚನ್ನಾಗಿ ಲಕ್ಷದಲ್ಲಿ ಬರುವದಿಲ್ಲ. ॥೪॥ ಎಲೋ ಶಾರ್ಙಪಾಣಿಯೇ ! ಯಾವನು ಅಂತಃಕರಣವನ್ನು ಸ್ವಾಧೀನಮಾಡಿಕೊಂಡಿರುತ್ತಾನೋ, ಅವನು ಮರಣ ಕಾಲದಲ್ಲಿ ನಿಮ್ಮನ್ನು ಹೇಗೆ ಅರಿವನು ಎಂಬದನ್ನು ನನಗೆ ಸ್ಪಷ್ಟ ಮಾಡಿ ವಿಸ್ತಾರವಾಗಿ ಹೇಳು. ॥ ೫ ॥ (ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ) ನೋಡು. ಚಿಂತಾಮಣಿಯ ಮಂದಿರ ದಲ್ಲಿ ಅಕಸ್ಮಾತ್ ಒಬ್ಬ ಭಾಗ್ಯವಾನ್ ಪುರುಷನು ಮಲಗಿರಲು ಅವನು ನಿದ್ರೆಯಲ್ಲಿ ಬಡಬಡಿಸಿದರೂ, ಅವನ ಬಡಬಡಿಸುವಿಕೆಯು ವ್ಯರ್ಥವಾಗದೇ ಸಾರ್ಥಕವಾಗುವದು. ॥೬॥ ಅದೇ ಪ್ರಕಾರ ಅದನ್ನು ನನಗೆ ಹೇಳಬೇಕೆಂದು ಅರ್ಜುನನ ಮಾತಿನ ಸಂಗಡವೇ ಶ್ರೀಕೃಷ್ಣನು ಅನ್ನುತ್ತಾನೆ. ಎಲೋ ಪಾರ್ಥನೇ ! ಯಾವದನ್ನು ನೀನು ವಿಚಾರಿಸಿದಿ ಅದನ್ನು ಚನ್ನಾಗಿ ಕೇಳು. ॥ ೭ ॥ ಅರ್ಜುನನು ಕಾಮಧೇನುವಿನ ಕರವು, ಅದರ ಮೇಲೆ ಕಲ್ಪತರುವಿನ ಮಂಟಪವು ಅದೆ. ಅಂದಬಳಿಕ ಅರ್ಥಾತ್ ಅವನ ಮನಸಿನಲ್ಲಿಯ ಸರ್ವ ಮನೋರಥಗಳು ಸಿದ್ಧಿಗೆ ಹೋಗುತ್ತವೆಂಬುದರಲ್ಲಿ ಆಶ್ಚರ್ಯವೇನು ! ॥ ೮ ॥ ಶ್ರೀಕೃಷ್ಣನು ಯಾರನ್ನು ಕ್ರೋಧದಿಂದ ಕೊಲ್ಲುವನೋ, ಅವರು ಪರಬ್ರಹ್ಮಸ್ವರೂಪ ಸಾಕ್ಷಾತ್ಕಾರ ಪಡೆಯುತ್ತಾರೆ. ಆದರೆ ಯಾವನಿಗೆ ಭಗವಂತನು ಕೃಪಾದೃಷ್ಟಿಯಿಂದ ಉಪದೇಶಮಾಡುತ್ತಾನೆ, ಅವನಿಗೆ ಯಾವದು ದೊರಕಲಿಕ್ಕಿಲ್ಲ ? ॥ ೯ ॥ ಯಾವಾಗ್ಗೆ ಕೃಷ್ಣಸ್ವರೂಪವೇ ನಾನು ಇರುವೆನೆಂಬ ನಿಶ್ಚಯವಾದ ಭಾವನೆಯು ಉಂಟಾಗುತ್ತದೆ. ಆಗ್ಗೆ ಅವನ ಅಂತಃಕರಣವು ಕೃಷ್ಣಸ್ವರೂಪವಾಗುತ್ತದೆ. ಆಮೇಲೆ ಸಂಕಲ್ಪರೂಪಿ ಅಂಗಳದಲ್ಲಿ ( ತನ್ನ ಮನಸಿನಲ್ಲಿ ಯಾವ ಯಾವ ಸಂಕಲ್ಪಗಳು ಉಂಟಾಗುವವು, ಆ ಎಲ್ಲ ಮನೋರಥಗಳನ್ನು ಪೂರ್ಣ ಮಾಡುವದರ ದೆಶೆಯಿಂದ) ಅಷ್ಟ ಮಹಾಸಿದ್ಧಿಗಳು ಅಲ್ಲಿ ಸೇವೆ ಮಾಡುತ್ತಿರುತ್ತವೆ. ॥ ೧೦ ॥ ಇಂಥ ಪ್ರಕಾರದ ನಿಸ್ಸೀಮ ಪ್ರೇಮವು ಒಬ್ಬ ಅರ್ಜುನನಲ್ಲಿಯೇ ಕಂಡು ಬರುತ್ತದೆ. ಆದುದರಿಂದ ಅವನ ಮನೋರಥಗಳು ಯಾವಾಗಲೂ ಪೂರ್ಣವಾಗುತ್ತಿರುತ್ತವೆ. ॥೧೧॥ ಅರ್ಜುನನು ಇನ್ನು ಮೇಲೆ ತನ್ನ ಮನಸಿನೊಳಗಿನ ಮಾತು ನನಗೆ ವಿಚಾರ ಮಾಡುವನೆಂಬದನ್ನು ಮೊದಲಿಗೇ ತಿಳಿದು, ಭಗವಾನ್ ಶ್ರೀಕೃಷ್ಣನು ಮುಂಚಿತವಾಗಿಯೇ ಉತ್ತರರೂಪಿ ಪಕ್ವಾನ್ನವನ್ನು ಸುವರ್ಣದ ಪಾತ್ರೆಯಲ್ಲಿ ನೀಡಿ ತುಂಬಿಯಿಟ್ಟಿದ್ದನು. ॥ ೧೨ ॥ ಸ್ತನಪಾನವನ್ನು ಮಾಡಿ ದೂರ ಆಡುತ್ತಿರುವ ಬಾಲಕನಿಗೆ ಹಸಿವೆ ಆಗಿರುವದೆಂಬದು ಆ ಕೂಸಿನ ತಾಯಿಯೊಬ್ಬಳಿಗೇ ಮಾತ್ರ ತಿಳಿಯುತ್ತದೆ. ಆ ಕೂಸು ಹಾಲು ಕುಡಿಸೆಂದು ತನ್ನ ತಾಯಿಗಾದರೂ ಹೇಳುವದೇನು ? ಇಲ್ಲ. ಆದರೆ, ತಾಯಿಯು ತಾನಾಗಿಯೇ ಸ್ತನಪಾನವನ್ನು ಮಾಡಿಸುವಳು. ॥ ೧೩ ॥ ಅರ್ಥಾತ್, ಕೃಪಾಳುವಾದ ಗುರುಗಳ ಸ್ಥಳದಲ್ಲಿ, ( ತಮ್ಮ ಶಿಷ್ಯನ ಸಮ್ಬಂಧವಾಗಿ ) ಇಂಥ ನಿಸ್ಸೀಮವಾದ ಪ್ರೇಮವಿರುವದು ಆಶ್ಚರ್ಯವೇನು ? ಅದಂತೂ ಇರಲಿ. ಭಗವಂತನು ಏನು ಮಾತಾಡಿದನು ಅದನ್ನು ಹೇಳುವೆನು (ಶ್ರವಣಮಾಡಿರಿ.) ॥ ೧೪ ॥

**ಶ್ರೀ ಭಗವಾನುವಾಚ—**

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

**[ ಅಕ್ಷರಮಿತಿ ]** ಮಗ ಮ್ಹಣಿತಲೇ ಸರ್ವೇಶ್ವರೇ । ಆಕಾರೀ ಇಯೇ ಖೋಕರೇ । ಕೊಂದಲೇ ಅಸತ ನ ಖಿರೇ । ಕವಣೇ ಕಾಳೀ ॥ ೧೫ ॥ ಯೇರ್ಹವೀ ಸಪುರಪಣ ತಯಾಚೇ ಸಾಹಾವೇ । ತರಿ ಶೂನ್ಯಚಿ ನವ್ಹೇ ಸ್ವಭಾವೇ । ವರೀ ಗಗನಾಚೇನಿ ಪಾಲವೇ । ಗಾಳೂನಿ ಘೇತಲೇ ॥ ೧೬ ॥ ಜೇ ಐಸೇಹೀ ಪರೀ ವಿರುಳೇ । ಇಯೇ ವಿಜ್ಞಾನಾಚಿಯೇ ಖೋಳೇ । ಹಾಲವಲೇಹೀ

ನ ಗಳೇ । ತೇಪರಬ್ರಹ್ಮ ॥ ೧೭ ॥ ಆಣೀ ಆಕಾರಾಚೇನಿ ಜಾಲೀ ಪಣೇ । ಜನ್ಮಧರ್ಮಾತೇ ನೇಣೇ । ಆಕಾರ ಲೋಪೀ ನಿಮಣೇ । ನಾಹೀ ಕಹೀ ॥ ೧೮ ॥ ಐಸಿಯಾ ಆಪುಲಿಯಾಚೆ ಸಹಜ ಸ್ಥಿತೀ । ಜಯಾ ಬ್ರಹ್ಮಾಚೀ ನಿತ್ಯತಾ ಅಸತೀ । ತಯಾನಾಮ ಸುಭದ್ರಾಪತೀ । ಅಧ್ಯಾತ್ಮ ಗಾ ॥ ೧೯ ॥ ಮಗ ಗಗನೀ ಜೇವೀ ನಿರ್ಮಳೇ । ನೇಣೋ ಕೈಚಿ ಏಕ ವೇಳೇ । ಉಠತೀ ಘನಪಟಳೇ । ನಾನಾವರ್ಣೇ ॥ ೨೦ ॥ ತೈಸೇ ಅಮೂರ್ತೀ ತಿಯೇ ವಿಶುದ್ಧೇ । ಮಹದಾದಿಭೂತಭೇದೇ । ಬ್ರಹ್ಮಾಂಡಾಚೇ ಬಾಂಧೇ । ಹೋಚಿ ಲಾಗತೀ ॥೨೧॥ ಪೈ ನಿರ್ವಿಕಲ್ಪಾಚಿಯೇ ಬರಡೀ । ಫುಟೇ ಆದಿ ಸಂಕಲ್ಪಾಚೀ ವಿರೂಢೀ । ಆಣಿ ತೇ ಸವೇಂಚಿ ಮೋಡೋನೀ ಯೇ ಢೋಂಡೀ । ಬ್ರಹ್ಮಗೋಳಕಾಂಚ್ಯಾ ॥ ೨೨ ॥ ತಥಾ ಏಕ್ಯೈಕಾಚೇ ಭೀತರೀ ಪಾಹಿಜೇ । ತವ ಬೀಜಾಚಾಚ ಭರಿಲಾದೇಖಿಜೇ । ಮಾಜೀ ಹೋತಿಯಾ ಜಾತಿಯಾ ನೇಣಿಜೇ । ಲೇಖ ಜೀವಾ ॥ ೨೩ ॥ ಮಗ ತಯಾ ಬ್ರಹ್ಮಗಾಳಕಾಂಚೇ ಅಂಶಾಂಶ । ಪ್ರಸವತೀ ಆದಿಸಂಕಲ್ಪ ಅಸಮಾಸ । ಹೇ ಅಸಾ ಐಸೀ ಬಹುವಸ । ಸೃಷ್ಟಿವಾಢೇ ॥ ೨೪ ॥ ಪರೀ ದುಜೇನ ವೀಣ ಏಕಲಾ । ಪರಬ್ರಹ್ಮಚಿ ಸಂಚಲಾ । ಅನೇಕತ್ವಾಚಾ ಆಲಾ । ಪೂರ ಜೈಸಾ ॥ ೨೫ ॥ ತೈಸೇ ಸಮ ವಿಷಮತ್ವ ನೇಣೋ ಕೈಚೇ । ವಾಯಾಂಚಿ ಚರಾಚರ ರಚೇ । ಪಾಹಾತಾ ಪ್ರಸವತಿಯಾ ಯೋನಿಚೇ । ಲಕ್ಷ ದಿಸತೇ ॥ ೨೬ ॥ ಯೇರಿೀ ಜೀವ ಭಾವಾಚಿಯೇ ಪಾಲವಿಯೇ । ಕಾಹೀ ಮರ್ಯಾದಾ ಕರೂನಯೇ । ಪಾಹಿಜೇ ಕವಣಹೇ ಆಘವೇ ವಿಯೇ । ತವ ಮೂಳ ತೇ ಶೂನ್ಯ ॥ ೨೭ ॥ ವ್ಹೂಣೂನಿ ಕರ್ತಾ ಮುದಲ ನ ದಿಸೇ । ಆಣಿ ಸೇಖೀ ಕಾರಣಹೀ ಕಾಹೀ ನಸೇ । ಮಾಜೀ ಕಾರ್ಯಚಿ ಆಪೈಸೇ । ವಾಢೋಂಚಿ ಲಾಗೇ ॥ ೨೮ ॥ ಐಸಾ ಕರಿತೇ ನ ವೀಣಗೋಚರ । ಅವ್ಯ ಕ್ತೀ ಹಾ ಆಕಾರ । ನಿಪಜೇ ಜೋ ವ್ಯಾಪಾರ । ತಯಾ ನಾಮಕರ್ಮ ॥ ೨೯ ॥

**ಅರ್ಥ**— ಆಮೇಲೆ ಸರ್ವೇಶ್ವರ ಶ್ರೀಕೃಷ್ಣ ಪರಮಾತ್ಮನು ಅನ್ನುತ್ತಾನೆ. ಯಾವದು ನವಛಿದ್ರವಾದ ಆಕಾರದ ದೇಹದಲ್ಲಿ ಓತಪ್ರೋತ ತುಂಬಿಕೊಂಡಿದ್ದು ಅದು ಯಾವ ಕಾಲದಲ್ಲಿಯೂ ಸೋರಿ ಹೋಗುವದಿಲ್ಲ. ॥ ೧೫ ॥ ಅದರ ಸೂಕ್ಷ್ಮತನವನ್ನು ಸಹಜವೇ ನೋಡಲಿಕ್ಕೆ ಹೋದರೆ, ಅದು ಶೂನ್ಯವೇ ಇರುತ್ತದೆಂಬದನ್ನು ಕಾಣಬಹುದು. ಆದರೆ ಹಾಗೆ ಅನ್ನಲಿಕ್ಕೆ ಬರುವದಿಲ್ಲ. ಅದು ಎಷ್ಟು ಸೂಕ್ಷ್ಮವಿರುತ್ತದೆಂದು ವಿಚಾರಮಾಡಿ ನೋಡಿದರೆ, ಆಕಾಶದ ಪದರಿನಲ್ಲಿ ಅದನ್ನು ಸೋಸಿ ತೆಗೆದುಕೊಂಡಿರುತ್ತದೆ. ॥ ೧೬ ॥ ಅದು ಇಷ್ಟು ಸೂಕ್ಷ್ಮವಿದ್ದರೂ ನವಛಿದ್ರವಾಗಿರುವ ಈ ಪ್ರಪಂಚ ರೂಪ ವಸ್ತ್ರದಲ್ಲಿಂದ (ಶರಿರದಲ್ಲಿ) ಅಲ್ಲಾಡಿಸಿದರೂ ಅದು ಸೋರಿಹೋಗುವದಿಲ್ಲ. ಅದಕ್ಕ ಪರಬ್ರಹ್ಮ ವೆಂದೆನ್ನುತಾರೆ. ॥ ೧೭ ॥ ಮತ್ತು ಆಕಾರ ಅಂದರೆ ಶರೀರವು ಜನ್ಮಕ್ಕೆ ಬರುವದರಿಂದ ಅದು ಜನ್ಮರೂಪಿ ವಿಕಾರವನ್ನು ತಿಳಿಯುವದಿಲ್ಲ. ಮತ್ತು ಶರೀರವು ನಾಶಹೊಂದಿದ ಮೇಲೆ ಆದರೂ ಅದು ಯಾವಾಗ್ಯೂ ನಾಶಹೊಂದುವದಿಲ್ಲ. ॥ ೧೮ ॥ ಎಲೋ ಸುಭದ್ರಾಪತೇ ! ಈರೀತಿ ಯಾವ ಬ್ರಹ್ಮಸ್ವರೂಪವು ತನ್ನ ಸ್ಥಳದಲ್ಲಿಯೇ ನಿರಂತರ ಸಹಜಸ್ಥಿತಿ ಯಿರುತ್ತದ. ಅದರ ಹೆಸರು “ಅಧ್ಯಾತ್ಮ” ವೆಂದು ಅನ್ನುತ್ತಾರೆ. ॥ ೧೯ ॥ ಆಮೇಲೆ ನಿರ್ಮಲವಾದ ಆಕಾಶದಲ್ಲಿ ಒಂದೇಕಾಲಕ್ಕೆ ಅನೇಕಬಣ್ಣದ ಮೋಡಗಳು ಹೇಗೆ ಬರುತ್ತವೆಂಬದು ತಿಳಿಯುವದಿಲ್ಲ ॥ ೨೦ ॥ ಅದೇಪ್ರಕಾರಾ ನಿರಾಕಾರ ಶುದ್ಧ ಬ್ರಹ್ಮನಲ್ಲಿ ಪ್ರಕೃತಿ ಅಹಂಕಾರ ಮುಂತಾದ ಭೇದದಿಂದ ಬ್ರಹ್ಮಾಂಡದ ಆಕಾರಗಳು ವೃದ್ಧಿಪಿಸಲಿಕ್ಕೆ ಹತ್ತುತ್ತವೆ. ॥ ನಿರ್ವಿಕಲ್ಪ ಪರಬ್ರಹ್ಮರೂಪಿ ಬೈಲುಭೂಮಿಯಲ್ಲಿ ಮೂಲಸಂಕಲ್ಪ ( ಏಕೋಽಹಂಬಹುಶ್ಯಾಮ್ ) ರೂಪಿ ಅಂಕುರವು ಹುಟ್ಟುತ್ತದೆ. ಮತ್ತು ಅದರ ಸಂಗಡವೇ ಬ್ರಹ್ಮಗೋಲಕದ ಆಕಾರವು ದಟತವಾಗುತ್ತದೆ. ॥ ೨೨ ॥ ಆ ...ಂಬೊಂದು ಬ್ರಹ್ಮಾಂಡದಲ್ಲಿ ನೋಡಿದರೆ ಅದು ಬ್ರಹ್ಮಾಂಡದ ಬೀಜದಿಂದಲೇ ( ಮೂಲ ಸಂಕಲ್ಪದಿಂದಲೇ ) ತುಂಬಿ ೦ ಕಾಣುತ್ತದೆ. ಮತ್ತು ಒಂದೊಂದು ಬ್ರಹ್ಮಾಂಡದಲ್ಲಿ ಆಗುವ ಹೋಗುವ ಜೀವರುಗಳಂತೂ ಗಣತೆಯೇ ಇರುವದಿಲ್ಲ. ॥ ೨೩ ॥ ಆಮೇಲೆ ಆ ಬ್ರಹ್ಮಾಂಡಗೋಲದ ಪ್ರತಿ ಒಂದು ಅಂಗದಿಂದ ಅಂಶರೂಪಿ ಜೀವವು ಅಸಂಖ್ಯಾ

ಗಿರುತ್ತವೆ. ಮತ್ತು ಆದಿಸಂಕಲ್ಪ ಉತ್ಪನ್ನವಾಗುತ್ತದೆ. ಇದಂತೂ ಇರಲಿ, ಈ ರೀತಿಯಿಂದ ಸೃಷ್ಟಿಯು ಬಹಳೀ ವಿಸ್ತಾರವಾಗಿ ಬೆಳೆಯಲಿಕ್ಕೆ ಹತ್ತುತ್ತದೆ. ॥ ೨೪ ॥ ಆದರೆ ಅನ್ಯ ಯಾರದೂ ಸಂಬಂಧವಿಲ್ಲದೇ ಒಂದು ಪರಬ್ರಹ್ಮವೇ ಸರ್ವದರಲ್ಲಿಯು ತುಂಬಿಕೊಂಡಿದ್ದು ಅನೇಕ ರೂಪದಿಂದ ನಟಿಸಿ ಮಹಾಪೂರ ಬಂದಂತೆ ಭಾಸವಾಗುತ್ತದೆ. ॥ ೨೫ ॥ ಅದರಂತೆ ಸ್ಥಾವರ ಜಂಗಮದ ವಿಶ್ವದ ರಚನೆಯು ಕಾರಣವಿಲ್ಲದೇ, ಸಹಜವೇ ಆಗಿ ಅದರಲ್ಲಿ ಸಮ ವಿಷಮತ್ವವು ಹೇಗೆ ಆಗಿರುವದೆಂಬದು ಮಾತ್ರ ತಿಳಿಯುವದಿಲ್ಲ. ಆದರೆ ನೋಡುತ್ತಿರಲಿಕ್ಕಾಗಿ ಅನಂತ ಯೋನಿಗಳಿಂದ ಲಕ್ಷಾವಧಿ ಜಾತಿಗಳು ಉತ್ಪನ್ನವಾದದ್ದು ಕಂಡುಬರುತ್ತದೆ. ॥ ೨೬ ॥ ಇದರ ಹೊರ್ತು ವಿಡಿಸಿ ನಾನಾ ಪ್ರಕಾರದ ಜೀವರುಗಳ ವಿಸ್ತಾರದ ಮರ್ಯಾದೆಯು ಗಣನೆಯನ್ನು ಮಾಡಲಿಕ್ಕೆ ಬರುವದಿಲ್ಲ. ಇವು ಯಾರಿಂದ ಉತ್ಪನ್ನವಾಗುತ್ತವೆಂಬದನ್ನು ನೋಡಿದರೆ, ಅದರ ಮೂಲವು ಅವ್ಯಕ್ತರೂಪ ಪರಬ್ರಹ್ಮನ ಮಾಯಾ ಆಗಿರುವದು. ॥ ೨೭ ॥ ಆದುದರಿಂದ ಮೂಲದಲ್ಲಿ ಕರ್ತುವಿನ ಗೊತ್ತು ಇಲ್ಲದೇ ಕಟ್ಟಕಡಿಗೆ ಏನೂ ಕಾರಣವಿಲ್ಲದೇ, ಮಧ್ಯದಲ್ಲಿ ತನ್ನಿಂದ ತಾನೇ ಕಾರ್ಯ ವೃದ್ಧಿ ಹೊಂದುತ್ತದೆ. ॥ ೨೮ ॥ ಈ ಪ್ರಕಾರಾ ಅವ್ಯಕ್ತದ ಸ್ಥಳದಲ್ಲಿ ಕರ್ತುವಿನ ಹೊರ್ತು ಪ್ರತ್ಯಕ್ಷ ಕಾಣಿಸುವಂಥ ಆಕಾರ ಉತ್ಪನ್ನ ಮಾಡುವ ಯಾವ ವ್ಯಾಪಾರವು ಅದೆ. ಅದಕ್ಕೆ "ಕರ್ಮ"ವೆಂದೆನ್ನುತ್ತಾರೆ. ॥ ೨೯ ॥

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂವರ ॥ ೪ ॥**

[ **ಅಧಿಭೂತಮಿತಿ** ] ಆತಾ ಅಧಿಭೂತ ಜೇ ಮ್ಹಣಿಪೇ । ತೇಹೀ ಸಾಂಗೋಂ ಸಂಕ್ಷೇಪೇ ತರೀ ಹೋಯ ಆಣಿ ಹಾರಪೇ । ಅಭ್ರಜೈಸೇ ॥ ೩೦ ॥ ತೈಸೇ ಅಸತೇಪಣ ಆಹಾಚ । ನಾಹೀ ಹೋಇಜೇ ಹೇಸಾಚ । ಜಯಾತೇ ರೂಪಾ ಆಣಿತೀ ಪಾಂಚ ಪಾಂಚ । ಮಿಳೋನಿಯಾ ॥ ೩೧ ॥ ಭೂತಾಂತೇ ಅಧಿಕರೂನಿ ಅಸೇ । ಆಣಿ ಭೂತ ಸಂಯೋಗೇ ತರೀ ದಿಸೇ । ಜೇ ವಿಯೋಗ ವೇಳೇ ಭ್ರಂಶೇ । ನಾಮ ರೂಪಾದಿಕ ॥ ೩೨ ॥ ತಯಾತೇ ಅಧಿಭೂತ ಮ್ಹಣಿಜೇ । ಮಗ ಅಧಿದೈವತ ಪುರುಷ ಜಾಣಿಜೇ । ಜೇಣೇ ಪ್ರಕೃತೀಚೇ ಭೋಗಿಜೇ । ಉಪಾರ್ಜಿಲೇ ॥ ೩೩ ॥ ಜೋ ಚೇತನೇಚಾ ಚಕ್ಷು । ಜೋ ಇಂದ್ರಿಯ ದೇಶೀಂಚಾ ಅಧ್ಯಕ್ಷು । ಜೋ ದೇಹಾಸ್ತಮಾನೀ ವೃಕ್ಷು । ಸಂಕಲ್ಪವಿಹಂಗಮಾಚಾ ॥ ೩೪ ॥ ಜೋ ಪರಮಾತ್ಮಾಚಿ ಪರೀ ದುಸರಾ । ಜೇ ಅಹಂಕಾರ ನಿದ್ರಾನಿದಸುರಾ । ಮ್ಹಣೋನಿ ಸ್ವಪ್ನಾಚಿಯಾ ಪೋರಬಾರಾ । ಸಂತೋಷೇ ಶಿಣೇ ॥ ೩೫ ॥ ಜೀವ ಯೆಣೇ ನಾವೇ । ಜಯಾತೇ ಅಳವಿಜೇ ಸ್ವಭಾವೇ । ತೇ ಅಧಿದೈವತ ಜಾಣಾವೇ । ಪಂಚಾಯತನೀಚೇ ॥ ೩೬ ॥ ಆತಾ ಇಯೇಚಿ ಶರೀರ ಗ್ರಾಮೀ । ಜೋ ಶರೀರ ಭಾವಾತೇ ಉಪಶಮೀ । ತೋ ಅಧಿಯಜ್ಞ ಏಥ ಗಾಮೀ । ಪಾಂಡು ಕುಮರಾ ॥ ೩೭ ॥ ಯೇರ ಅಧಿದೈವಾಧಿಭೂತ । ತೇಹೀ ಮೀಚಿ ಕೀರ ಸಮಸ್ತ । ಪರಿ ಪಂಧರೇ ಕಿಡಾಳಾ ಮಿಳತ । ತೇ ಕಾಯ ಸಾಂಕೇ ನೋಹೇ ॥ ೩೮ ॥ ತರೀ ತೇ ಪಂಧರೇ ಪಣ ನ ಮೈಳೇ । ಆಣಿ ಕಿಡಾಳಾಚಿಯಾಹೀ ಅಂಶಾ ನ ಮಿಳೇ । ಪರೀ ಜವ ಅಸೇ ತಯಾಚೇನಿ ಮೇಳೇ । ತವ ಸಾಂಕೇಚಿ ಮ್ಹಣಿಜೇ ॥ ೩೯ ॥ ತೈಸೇ ಅಧಿಭೂತಾದಿ ಆಘವೇ । ಹೇ ಅವಿದ್ಯೇಚೇನಿ ಪಾಲವೇ । ಝಾಂಕಲೇ ತವ ಮಾನಾವೇ । ವೇಗಳೇ ಐಸೇ ॥ ೪೦ ॥ ತೇಚ ಅವಿದ್ದೇಚೀ ಜವನೀಕ ಫಿಟೇ । ಆಣಿ ಭೇದಭಾವಾಚೀ ಅವಧೀ ತುಟೇ । ಮಗ ಮ್ಹಣೋ ಏಕ ಹೋವೂನಿ ಜರೀ ಆಟೇ । ತರೀ ದೋನೀ ಕಾಯ ಹೋತೀ ॥ ೪೧ ॥ ಪೈ ಕೇಶೀಚಾ ಗುಂಡಾಳಾ । ವರೀ ಠೇವಿಲೀ ಸ್ಫಟಿಕ ಶಿಳಾ । ತೇಜವ ಪಾಹಿಜೇ ಡೋಳಾ । ತವ ಭೇದಲೀ ಗಮತೀ ॥ ೪೨ ॥ ಪಾಠೀ ಕೇಶ ಪರೌತೇ ನೇಲೇ । ಆಣಿ ಭೇದಲೇ ಪಣ ಕಾಯ ನೇಣೋ ಜಾಹಾಲೇ । ತರಿ ಢಾಂಕ ದೇವೂನಿ ಸಾಂದಿಲೇ । ಶಿಳೇ ತೇ ಕಾಈ ॥ ೪೩ ॥ ನಾ ತೇ

ಅಖಂಡಚಿ ಆಯತೀ । ಪರೀ ಸಂಗೇ ಭಿನ್ನ ಗಮಲೀ ಹೋತೀ । ತೇ ಸಾರಿಲಿಯಾ ಮಾಗೌತೀ । ಜೈಸೀ ಕಾ ತೈಸೀ ॥ ೪೪ ॥ ತೇವಿಂಚಿ ಅಹಂಭಾವ ಜಾಯೇ । ತರೀ ಐಕ್ಯ ತೇ ಆಧೀಚಿ ಆಹೇ । ಹೇಚಿ ಸಾಚೇ ಜೇಥ ಹೋಯೇ । ತೋ ಅಧಿಯಜ್ಞುಮೀ ॥ ೪೫ ॥ ಪೈಗಾ ಆಮ್ಹೀ ತುಜ । ಸಕಳಯಜ್ಞ ಕರ್ಮಜ । ಸಾಂಗಿತಲೇ ಜೇ ಕಾಜ । ಮನೀ ಧರೂನಿ ॥ ೪೬ ॥ ತೋ ಹಾ ಸಕಳ ಜೀವಾಂಚಾ ವಿಸಾವಾ । ನೈಷ್ಕರ್ಮ್ಯ ಸುಖಾಚಾ ಠೇವಾ । ಪರೀ ಉಘಡ ಕರೂನಿ ಪಾಂಡವಾ । ದಾವಿಜತ ಅಸೇ ॥ ೪೭ ॥ ಪಹಿಲೇ ವೈರಾಗ್ಯ ಇಂಧನ ಪರಿಪೂರ್ತೀ । ಇಂದ್ರಿಯಾ ನಳೀ ಪ್ರದೀಪ್ತೀ । ವಿಷಯ ದ್ರವ್ಯಾಂಚಿಯಾ ಆಹುತೀ । ದೇವೂನಿಯಾ ॥ ೪೮ ॥ ಮಗ ವಜ್ರಾಸನ ತೇಚಿ ಉರ್ವೀ । ಶೋಧೂನಿ ಆಧಾರ ಮುದ್ರಾ ಬರವೀ । ವೇದಿಕಾ ರಚೇ ಮಾಂಡವೀ । ಶರೀರಾಚ್ಯಾ ॥ ೪೯ ॥ ತೇಥ ಸಂಯುಮಾಗ್ನೀಚೀ ಕುಂಡೇ । ಇಂದ್ರಿಯ ದ್ರವ್ಯಾಚೇನಿ ಪವಾಡೇ । ಪೂಜಿಜತಿ ಉದಂಡೇ । ಯುಕ್ತಿ ಘೋಷೇ ॥ ೫೦ ॥ ಮಗ ಮನ ಪ್ರಾಣ ಸಂಯಮು । ಹಾಚಿ ಹವನ ಸಂಪದೇಚಾ ಸಂಭ್ರಮು । ಯೇಣೇ ಸಂತೋಷ ವಿಜೇ ನಿರ್ಧೂಮು । ಜ್ಞಾನಾನಳ ॥ ೫೧ ॥ ಐಸೇ ನಿಹೇ ಸಕಳ ಜ್ಞಾನೀ ಸಮರ್ಪೇ । ಮಗ ಜ್ಞಾನ ತೇ ಜ್ಞೇಯೀ ಹಾರಪೇ । ಪಾಠೀ ಜ್ಞೇಯಚೀ ಸ್ವರೂಪೇ । ನಿಖಿಲ ಉರೇ ॥ ೫೨ ॥ ತಯಾ ನಾವ ಗಾ ಅಧಿಯಜ್ಞ । ಐಸೇ ಬೋಲಿಲಾ ಜವ ಸರ್ವಜ್ಞ । ತವ ಅರ್ಜುನ ಅತಿ ಪ್ರಾಜ್ಞ । ತಯಾ ಪಾತಲೇ ತೇ ॥ ೫೩ ॥ ಹೇ ಜಾಣೋನಿ ಮ್ಹಣಿತಲೇ ದೇವೇ । ಪಾರ್ಥಾ ಪರಿಸತ ಆಹಾಸಿ ಬರವೇ । ಯಾ ಕೃಷ್ಣಾಚಿಯಾ ಬೋಲಾಸವೇ । ಯೇರೂ ಸುಖಾಚಾ ಜಾಹಾಲಾ ॥ ೫೪ ॥ ದೇಖಾ ಬಾಳಕಾಚಿಯಾ ಧಣೀ ಧಾಇಜೇ । ಕಾಶಿಷ್ಯಾಚೇನಿ ಜಾಹಾಲೇ ಪಣೇ ಹೋಇಜೇ । ಹೇ ಸದ್ಗುರೂಚಿ ಏಕಲೇನಿ ಜಾಣಿಜೇ । ಕಾ ಪ್ರಸವತಿಯಾ ॥ ೫೫ ॥ ಮ್ಹಣೋನಿ ಸಾತ್ವಿಕ ಭಾವಾಂಚೇ ಮಾಂದೀ । ಕೃಷ್ಣಾ ಆಂಗೀ ಅರ್ಜುನಾ ಆಧೀ । ನ ಸಮಾತಸೇ ಪರೀ ಬುದ್ಧೀ । ಸಾವರೂನಿ ದೇವೇ ॥ ೫೬ ॥ ಮಗ ಪಿಕಲಿಯಾ ಸುಖಾಚಾ ಪರಿಮಳ । ಕೀ ನಿವಾಲಿಯಾ ಅಮೃತಾಚಾ ಕಲ್ಲೋಳ । ತೈಸಾ ಕೋವಳಾ ಆಣಿ ರಸಾಳ । ಬೋಲ ಬೋಲಿಲಾ ॥ ೫೭ ॥ ಮ್ಹಣೇ ಪರಿಸಣೇಯಾಂಚ್ಯಾ ರಾಯಾ । ಆಇಕೇ ಬಾಪಾ ಧನಂಜಯಾ । ಐಸೇ ಜಳೋ ಸರಲಿಯಾ ಮಾಯಾ । ತೇಥ ಜಾಳಿತೇ ತೇಹೀ ಜಳೇ ॥ ೫೮ ॥

**ಅರ್ಥ**— ಇನ್ನುಮೇಲೆ ಅಧಿಭೂತವೆಂದು ಯಾವದಕ್ಕೆ ಅನ್ನುತ್ತಾರೆ, ಅವನ್ನಾದರೂ ಸ್ವಲ್ಪದರಲ್ಲಿಯೇ ಹೇಳುತ್ತೇನೆ ಕೇಳು. ಆದರೆ ಮೋಡಗಳು ಹ್ಯಾಗೆ ಹುಟ್ಟಿ ಲಯ ಹೊಂದುತ್ತವೋ, ॥ ೩೦ ॥ ಅದೇಪ್ರಕಾರಾ ಯಾವದರ ಅಸ್ತಿತ್ವವು ಅಸತ್ಯವಾಗಿರುತ್ತದೆ. ಮತ್ತು ಅದು ( ತೋರಿಕೆಗೆ ಮಾತ್ರ ಕಾಣುತ್ತದೆ.) ನಿಜವಾಗಿ ನೋಡಲಿಕ್ಕೆ ಹೋದರೆ ಆಗದೇ ಇರುವದೇ ಯಾವದರ ನಿಜವಾದ ಸ್ವರೂಪವಿರುವದೋ, ಮತ್ತು ಯಾವದಕ್ಕೆ ಪಂಚಮಹಾಭೂತಗಳು ಏಕತ್ರವಾಗಿ ರೂಪಕ್ಕೆ ತರುತ್ತವೆ. ॥ ೩೧ ॥ ಯಾವದು ಪಂಚಮಹಾಭೂತಗಳ ಆಶ್ರಯದಿಂದ ಇರುತ್ತದೋ, ಮತ್ತು ಪಂಚಮಹಾಭೂತದ ಸಂಯೋಗ ( ಪಂಚೀಕರಣ ) ಆದರೆ ಮಾತ್ರ ಯಾವದು ಕಂಣಿಗೆ ಕಾಣುತ್ತದೋ, ಮತ್ತು ಪಂಚಮಹಾಭೂತಗಳ ವಿಯೋಗವಾಗುತ್ತಿರಲು ನಾಮರೂಪಾತ್ಮಕವಾದ ಶರೀರವು ನಾಶಹೊಂದುತ್ತದೆ. ॥ ೩೨ ॥ ಆ ಶರೀರಕ್ಕೆ ಅಧಿ ಭೂತವೆಂದು ಹೆಸರು. ಮತ್ತು ಅಧಿ ದೈವತವೆಂದರೆ ಜೀವವೆಂದು ತಿಳಿಯಬೇಕು. ಅದು ಪ್ರಕೃತಿಜನ್ಯ ಭೋಗಗಳ ಉಪಭೋಗವನ್ನು ತೆಗಿದುಕೊಳ್ಳುತ್ತದೆ. ॥ ೩೩ ॥ ಯಾವನು ಚೇತನದ ಪ್ರಕಾಶಕವಾಗಿರುವನೋ, ಮತ್ತು ಯಾವನು ಇಂದ್ರಿಯರೂಪ ದೇಶದ ಸ್ವಾಮಿಯಾಗಿರುವನೋ, ಮತ್ತು ಯಾವ ದೇಹವು ಬಿದ್ದು ಹೋಗುವಾಗ್ಗೆ ಸಂಕಲ್ಪರೂಪ ಪಕ್ಷಿಯು ವಾಸಮಾಡಿಕೊಂಡಿರುವ ವೃಕ್ಷವಾಗಿರುವನೋ, ॥ ೩೪ ॥ ಯಾವನು ನಿಜವಾಗಿ ಪರಮಾತ್ಮತತ್ವಸೇ ಆಗಿರುವನೋ, ಅವನು ಅಹಂಕಾರ ರೂಪ ನಿದ್ದೆಯಲ್ಲಿ ಮಲಗಿಕೊಂಡದ್ದರಿಂದ ಅವನಿಗೆ ಸ್ವಪ್ನದ ಕಷ್ಟದಿಂದ

ಸಂತೋಷವೂ ಶ್ರಮವು ಆಗುತ್ತದೆ. ॥ ೩೫ ॥ ಯಾವನಿಗೆ ಸ್ವಭಾವಿಕವಾಗಿ ಜೀವ ಈ ಹೆಸರಿನಿಂದ ಕರೆಯುವರೋ, ಅವನು ಪಂಚಮಹಾಭೂತಾತ್ಮಕರೂಪಿ ಮನೆಯೊಳಗಿನ "ಅಧಿದೈವತ"ವೆಂದು ತಿಳಿಯಬೇಕು. ॥ ೩೬ ॥ ಇನ್ನು ಮೇಲೆ ಪಂಡುನಂದನನೇ ! ಇದೇ ಶರೀರರೂಪಿ ಗ್ರಾಮದಲ್ಲಿ ಯಾವನು ಶಾರೀರಿಕ ಉಪಾಧಿ "ದೇಹ ಅಹಂಕಾರಾದಿ" ಗಳಿಗೆ ಇಲ್ಲದಂತೆ ಮಾಡುತ್ತಾನೋ ! ಅವನ ದೇಹದಲ್ಲಿಯು ಅಧಿಯಜ್ಞವು ನಾನೇ ಇರುವೆನು. ॥ ೩೭ ॥ ಇನ್ನುಳಿದ ಅಧಿದೈವ, ಅಧಿಭೂತ, ಇವುಗಳಾದರೂ ನಿಜವಾಗಿ ನಾನೇ ಇರುತ್ತೇನೆ. ಆದರೆ ಚೀಪಗಟ್ಟ ಶುದ್ಧ ನಂಬರಿನ ಬಂಗಾರದಲ್ಲಿ ಹೀನ ಬಂಗಾರವು ಮಿಶ್ರವಾಗುವದರಿಂದ ಅದು ಹೀನತ್ವವನ್ನು ಹೊಂದುವದಿಲ್ಲೋ ಹ್ಯಾಗೆ ? ॥ ೩೮ ॥ ಆದರೆ ನಿಜವಾಗಿ ಆ ಬಂಗಾರದ ಶುದ್ಧತ್ವವು ಮಲಿನ ಹೊಂದುವದಿಲ್ಲ. ಮತ್ತು ಆ ಬಂಗಾರವು ಹೀನ ಬಂಗಾರದ ಭಾಗದಲ್ಲಿ ತದ್ರೂಪವಾಗುವದಿಲ್ಲ ಆದರೂ ಎಲ್ಲಿಯುವರೆಗೆ ಆ ಉತ್ತಮ ಬಂಗಾರವು ಹೀನ ಧಾತುವಿನ ಸಂಗಡ ಕೂಡಿ ಹೋಗಿರುತ್ತದೆ, ಅಲ್ಲಿಯುವರೆಗೆ ಅದಕ್ಕೆ ಹೀನ ಬಂಗಾರವೇ ಎಂದು ಅನ್ನಬೇಕಾಗಿರುವದು. ॥ ೩೯ ॥ ಅದೇ ಪ್ರಕಾರಾ ಅಧಿಭೂತ ಮುಂತಾದವು ಮತ್ತು ಈ ಸರ್ವವೂ ಎಲ್ಲಿಯುವರೆಗೆ ಅಜ್ಞಾನದ ಪದರನಲ್ಲಿ ಮುಚ್ಚಿ ಹೋಗಿರುತ್ತವೆ, ಅಲ್ಲಿಯುವರೆಗೆ ಅವು ಬೇರೆ ಬೇರೆ ಎಂದು ತಿಳಿಯಬೇಕು. ॥ ೪೦ ॥ ಅವೇ ಅಜ್ಞಾನದ ಪಡದೆಯನ್ನು ತೆಗೆವಕೂಡಲೆ ಭೇದ ಭಾವನೆಯ ಸೀಮೆಯು ಮುಗಿಯುತ್ತದೆ. ಆ ಮೇಲೆ ಒಂದರಲ್ಲೊಂದು ಕೂಡಿ ತದ್ರೂಪವಾಯಿತೆಂದು ಹೀಗೆ ಒಂದು ವೇಳೆ ಅನಬೇಕೆಂದರೆ ಮೊದಲಿಗೆ ಅವು ಎರಡು ಇದ್ದವೋ ? ( ಇಲ್ಲೇ ಇಲ್ಲ. ) ॥ ೪೧ ॥ ಕೂದಲದ ಸುರಳಿಯ ಮೇಲೆ ಸ್ಫಟಿಕ ಶಿಲೆಯನ್ನಿಟ್ಟರೆ ಅದು ಮೇಲಿಂದಮೇಲೆ ನೋಡಿದರೆ ಕಂಣಿಗೆ ಒಡೆದಂತೆ ಕಾಣುತ್ತದೆ. ॥ ೪೨ ॥ ಆ ಮೇಲೆ ಕೂದಲವನ್ನು ಆ ಸ್ಫಟಿಕ ಶಿಲೆಯಿಂದ ಬೇರೆ ತೆಗೆದು ನೋಡಿದರೆ ಆ ಅದರ ಒಡಕು. ( ಗೆರಿಯು ) ಯಾವ ಕಡೆಗೆ ಹೋಗಿರುವದೆಂಬದು ತಿಳಿಯುವದಿಲ್ಲ. ಆದರೆ ಸ್ಪಟಿಕ ಶಿಲೆಯ ಒಡಕು ಚೂರಗಳನ್ನು ಬೆಸೆದು ಒಂದಕ್ಕೊಂದು ಜೋಡಿಸಿದ್ದರೇನು ? ॥ ೪೩ ॥ ಆದರೆ ಅದು ಹಾಗೆ ಇದ್ದೇ ಇಲ್ಲ. ಅದು ಮೂಲತಃ ಅಖಂಡವೇ ಇತ್ತು. ಈಗಾದರೂ ಹಾಗೇ ಅದೆ. ಆದರೆ ಅದು ಕೂದಲದ ಸಂಗತಿಯಿಂದ ಮಾತ್ರ ಒಡೆದಂತೆ ಕಾಣುತ್ತಿತ್ತು. ಆ ಕೂದಲವನ್ನು ಬೇರೆ ಮಾಡಿದಮೇಲೆ, ಪುನ್ಹಾ ಮೂಲತಃ ಮೊದಲಿಗೆ ಹ್ಯಾಗೆ ಅಖಂಡವಾಗಿತ್ತೋ ಅದರಂತೆ ಇರುವದು. ॥೪೪॥ ಅದೇ ಪ್ರಕಾರಾ ಅಹಂಕಾರವು ಹೋದಕೂಡಲೇ ಐಕ್ಯವು ಮೊದಲಿನಿಂದೇ ಅದೆ. ಈ ಪ್ರಕಾರವು ಎಲ್ಲಿ ನಿಜವಾಗಿ ಉಂಟಾಗುತ್ತದೋ ಆ ಅಧಿ ಯಜ್ಞವು ನಾನೇ ಇದ್ದೇನೆ. ಎಲೋ ಅರ್ಜುನನೇ ! ಯಾವ ಹೇತು ಮನಸಿನಲ್ಲಿ ಹಿಡಿದು ಸರ್ವ ಯಜ್ಞಗಳು ಕರ್ಮದಿಂದ ಆಗಿರುವವೆಂದು ಹೀಗೆ ( ೪ನೇ ಅಧ್ಯಾಯದಲ್ಲಿ ) ನಿನಗೆ ಹಿಂದೆ ಹೇಳಿದ್ದೇನೆ. ॥೪೫॥ ಅದು ಇದೇ ಅಧಿ ಯಜ್ಞವು. ಅದು ಸರ್ವ ಜೀವರುಗಳಿಗೆ ವಿಶ್ರಾಮವಾಗಿರುವದು. ಮತ್ತು ನೈಷ್ಕರ್ಮ್ಯ ಸುಖದ ( ಸಿಧಿ ) ಮೂಲ ಧನವೇ ಆಗಿರುವದು. ಆದರೆ ಅರ್ಜುನನೇ ! ನಿನಗೆ ನಾನು ಸ್ಪಷ್ಟಮಾಡಿ ತೋರಿಸುತ್ತಿರುವೆನು. ॥೪೬॥ ಪ್ರಥಮದಲ್ಲಿ ವೈರಾಗ್ಯರೂಪಿ ಕಟ್ಟಿಗೆಗಳನ್ನು ಪೂರ್ಣವಾಗಿ ಕೂಡಹಾಕಿಟ್ಟು ಚನ್ನಾಗಿ ಉರಿಯುವಂಥ ಇಂದ್ರಿಯರೂಪಿ ಅಗ್ನಿಯಲ್ಲಿ ಶಬ್ದಾದಿ ವಿಷಯರೂಪ ಆಹುತಿಯನ್ನು ಕೊಟ್ಟು, ॥ ೪೭ ॥ ಆ ಮೇಲೆ ವಜ್ರಾಸನವೆಂಬ ಭೂಮಿಕೆಯನ್ನು ಶುದ್ಧಮಾಡಿ, ಶಾರೀರ ರೂಪಿ ಮಂಟಪದಲ್ಲಿ ಆಧಾರ ಮುದ್ರಾರೂಪಿ ಉತ್ತಮವಾದ ಆಸನವನ್ನು ( ವೇದಿಕಾ ರಚನೆಯನ್ನು ) ಹಾಕಿರುತ್ತಾರೆ. ಅದರಮೇಲೆ ಶರೀರದ ಮಂಟಪವನ್ನು ನಿಲ್ಲಿಸುತ್ತಾರೆ. ॥ ೪೮ ॥ ಅಲ್ಲಿ ಜ್ಞಾನ, ಧಾರಣ, ಸಮಾಧಿ, ರೂಪಿ ಅಗ್ನಿಕುಂಡದಲ್ಲಿ ಬಂಧತ್ರಯದ ಮಂತ್ರಘೋಷದಿಂದ ಇಂದ್ರಿಯ ರೂಪಿ ವಿಪುಲವಾದ ದ್ರವ್ಯದ ಸಹಾಯದಿಂದ ಯಜನ ಮಾಡುತ್ತಾರೆ. ॥ ೪೯ ॥ ಆ ಮೇಲೆ ಮನ, ಪ್ರಾಣ, ಮತ್ತು ಸಂಯಮ, ಮುಂತಾದ ಯಜ್ಞಸಂಪತ್ತಿಯ ಸಮಾರಂಭದಿಂದ ನಿರ್ಧೂಮ ( ಹೊಗೆಯಿಲ್ಲದ ) ನಿರ್ದೋಷವಾದ ಜ್ಞಾನರೂಪ ಅಗ್ನಿಗೆ ಸಂತೃಪ್ತ ಮಾಡುತ್ತಾರೆ. ॥ ೫೧ ॥ ಈ ರೀತಿಯಿಂದ ಈ ಮೇಲೆ ಹೇಳಿದ ಸಾಹಿತ್ಯವನ್ನು ಜ್ಞಾನರೂಪ ಅಗ್ನಿಯಲ್ಲಿ ಸಮರ್ಪಣ ಮಾಡಿದಮೇಲೆ ಆ, ಜ್ಞಾನವಾದರೂ ಜ್ಞೇಯದಲ್ಲಿ ಲಯ ಹೊಂದುತ್ತದೆ, ಆ ಮೇಲೆ ಜ್ಞೇಯವೇ ಸ್ವರೂಪದಿಂದ ನಿಲ್ಲುತ್ತದೆ. ॥ ೫೨ ॥ ಅದಕ್ಕೆ 'ಅಧಿಯಜ್ಞ,ವೆಂದು ಹೆಸರು ಅದೆ. ಹೀಗೆ ಸರ್ವಜ್ಞನಾದಂಥ ಶ್ರೀ ಕೃಷ್ಣನು ಯಾವ ವೇಳೆಯಲ್ಲಿ ಈ ವಿಷಯವನ್ನು ಹೇಳಿದನೋ, ಆಗ್ಗೆ ಅರ್ಜುನನು ತೀಕ್ಷ್ಣ ಬುದ್ಧಿಯವನಾದುದರಿಂದ ಆ ವಿಷಯವು

ಅವನ ಲಕ್ಷದಲ್ಲಿ ಬಂದಿತು. ॥ ೫೩ ॥ ಇದನ್ನು ತಿಳಿದು ಭಗವಾನನು ಅನ್ನುತ್ತಾನೆ. ಅರ್ಜುನನೇ ! ನಾನು ಹೇಳಿದ್ದನ್ನು ನೀನು ಉತ್ತಮ ರೀತಿಯಿಂದ ಶ್ರದ್ಧಾಪೂರ್ವಕವಾಗಿ ಕೇಳುತ್ತಿರುವಿ- ಎಂಬ ಈ ಶ್ರೀಕೃಷ್ಣನ ವಾಕ್ಯವನ್ನು ಕೇಳಿ ಅರ್ಜುನನು ಆನಂದಭರಿತನಾದನು. ॥ ೫೪ ॥ ನೋಡು, ಸಣ್ಣ ಮಗುವಿನ ತೃಪ್ತಿಯಿಂದ ನಾವು ತೃಪ್ತರಾಗುವದಿಲ್ಲೇ ಹ್ಯಾಗೆ ? ಶಿಷ್ಯನು ಪೂರ್ಣಜ್ಞಾನಿಯಾಗುವದರಿಂದ ತಾವು ಕೃತಾರ್ಥರಾಗಬೇಕೆಂಬುದೊಂದು ಜನ್ಮಕೊಟ್ಟಂಥ ತಾಯಿಯೂ ಇಲ್ಲವೇ ಸದ್ಗುರುಗಳು ಮಾತ್ರ ತಿಳಿಯುತ್ತಾರೆ. ॥ ೫೫ ॥ ಆದುದರಿಂದ ಅಷ್ಟಸಾತ್ವಿಕ ಭಾವದ ಸಮುದಾಯವು ಅರ್ಜುನನಕಿಂತಲೂ ಮೊದಲು ಶ್ರೀಕೃಷ್ಣನ ಮೈಯಲ್ಲಿ ತುಂಬಿ ತುಳುಕಿತು. ( ಆದರಿಂದ ಆನಂದ ಭಾಷ್ಪಗಳು ಸುರಿದವು ) ಆದರೆ ಭಗವಂತನು ಅದನ್ನು ತನ್ನ ಬುದ್ಧಿಯಿಂದ ಆವರಿಸಿದನು. ॥ ೫೬ ॥ ಮತ್ತು ಪೂರ್ಣತೆಗೆ, ಮುಟ್ಟಿದ ಸುಖದ ಸುಗಂಧದಂತೆ ಇಲ್ಲವೇ ತಂಪಾಗೆ ಮಾಡಿದಂಥ ಅಮೃತದ ಥೆರೆಗಳಂತೆ ಕೋಮಲ ಮತ್ತು ಸರಳ ಸುಂದರವಾದ ಸಂಭಾಷಣವನ್ನು ಮಾಡಲಿಕ್ಕೆ ಪ್ರಾರಂಭಮಾಡಿದನು. ॥ ೫೭ ॥ ಆ ಮೇಲೆ ಶ್ರೀಕೃಷ್ಣ ಪರಮಾತ್ಮನು ಅನ್ನುತ್ತಾನೆ. ಶ್ರವಣಮಾಡುವವರಲ್ಲಿ ಶ್ರೇಷ್ಠನಾದ ಅರ್ಜುನನೇ ! ಅಪ್ಪಾ, ಕೇಳು ಈ ಪ್ರಕಾರಾ ಮಾಯೆಯನ್ನು ಸುಡುವದು ಸಾಧ್ಯವಾದಮೇಲೆ ಅದನ್ನು ಸುಟ್ಟು ಬಿಡುವಂಥ ಯಾವ ಜ್ಞಾನವು ಅದು ಸಹಾ ಆ ಪ್ರಸಂಗದಲ್ಲಿ ನಾಶವಾಗುತ್ತದೆ. ॥ ೫೮ ॥

**ಅಂತ ಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥**

**[ ಅಂತಕಾಲೇಚೇತಿ ]** ಜೇ ಆತಾಂಚಿ ಸಾಂಗಿತಲೇ ಹೋತೇ । ಅಗಾ ಅಧಿಯಜ್ಞ ಮ್ಹಣಿತಲಾ ಜಯಾತೇ । ಜೇ ಆದಿಂಚಿ ತಯಾ ಮಾತೇ । ಜಾಣೋನಿ ಅಂತಿ ॥ ೫೯ ॥ ತೇ ದೇಹ ಝೋಳ ಐಸೇ ಮಾನುನೀ । ಠೇಲೇ ಆಪಣಪೇ ಆಪಣ ಹೋವುನೀ । ಜೈಸಾ ಮಠ ಗಗನಾ ಭರೂನೀ । ಗಗನೀಂಚಿ ಅಸೇ ॥ ೬೦ ॥ ಯೇ ಪ್ರತೀತೀಚಿಯಾ ಮಾಜಘರೀ । ತಯಾ ನಿಶ್ಚಯಾಚೇ ಮೋವರೀ । ಆಲೀ ಮ್ಹಣೋನಿ ಬಾಹೇರೀ । ನಪ್ಹೇಚಿಸೇ ॥ ೬೧ ॥ ಐಸೇ ಸಬಾಹ್ಯ ಐಕ್ಯ ಸಂಚಲೇ । ಮೀಚಿ ಹೋವೂನಿ ಅಸತಾ ರಚಿಲೇ । ಬಾಹೇರಿ ಭೂತಾಂಚೀ ಪಾಂಚಹೀ ಖವಳೇ । ನೇಣತಾಂಚೆ ಪಡಲೀ ॥ ೬೨ ॥ ಆತಾ ಉಭೇಯಾ ಉಭೇಪಣ ನಾಹೀ ಜಯಾಚೇ । ಮಾ ಪಡಲಿ ಯಾ ಗಹನ ಕವಣ ತಯಾಚೇ । ಮ್ಹಣೋನಿ ಪ್ರತೀತಿಚಿಯೇ ಪೋಟೀಂಚೇ । ಪಾಣೀ ನ ಹಾಲೇ ॥ ೬೩ ॥ ತೇ ಐಕ್ಯಾಚೀ ಆಹೇ ಓತಿಲೀ । ಕೀ ನಿತ್ಯತೇಚಿಯಾ ಹೃದಯೀ ಘಾತಲೀ । ಜೈಸೀ ಸಮರಸ ಸಮುದ್ರೀ ಧುತಲೀ । ರುಳೇಚಿನಾ ॥ ೬೪ ॥ ಪೈ ಅಥಾವೀ ಘಟ ಬುಡಾಲಾ । ತೋ ಆಂತ ಬಾಹೇರಿ ಉದಕೇ ಭರಲಾ । ಪಾಠೀ ದೈವಗತ್ಯಾ ಜರೀ ಫುಟಲಾ । ತರೀ ಉದಕ ಕಾಯ ಫುಟೇ ॥ ೬೫ ॥ ನಾತರೀ ಸರ್ಪೇ ಕವಚ ಸಾಂಡಿಲೇ । ಕಾ ಉಬಾರೇನೇ ವಸ್ತ್ರ ಫೇಡಿಲೇ । ತರೀ ಸಾಂಗ ಪಾ ಕಾಯ ಮೋಡಲೇ । ಅವೇವಾಮಾಜೀ ॥ ೬೬ ॥ ತೈಸಾ ಆಕಾರ ಹಾ ಆಹಾಚ ಭ್ರಂಶೇ । ವಾಂಚೂನಿ ವಸ್ತು ತೇ ಸಾಂಚಲೀಚಿ ಅಸೇ । ತೇಚಿ ಬುದ್ಧಿ ಜಾಲಿಯಾ ವಿಸುಕುಸೇ । ಕೈಸೇನಿ ಆತಾ ॥ ೬೭ ॥ ಮ್ಹಣೋನಿ ಯಾಪರೀ ಮಾತೇ । ಅಂತಕಾಳೀ ಜಾಣತಸಾತೇ । ಜೇ ಮೋಕಲಿತೀ ದೇಹಾತೇ । ತೇ ಮೀಚಿ ಹೋತೀ ॥ ೬೮ ॥ ಯೇರ್ಹವೀ ತರೀ ಸಾಧಾರಣ । ಉಠೀ ಆದಳಲಿಯಾ ಮರಣ । ಜೋ ಆಠವ ಧರೀ ಅಂತಃಕರಣ । ತೇಚಿ ಹೋಇಜೇ ॥ ೬೯ ॥ ಜೈಸಾ ಕವಣ ಏಕ ಕಾಕುಳತೀ । ಪಳತಾ ಪವನ ಗತೀ । ದುಪಾವಲೀ ಅವಿಚಿತೀ । ಕುಹಾಮಾಜೀ ಪಡಿಯೇಲಾ ॥ ೭೦ ॥ ಆತಾ ತಯಾ ಪಡಣಯಾ ಆರೌತೇ । ಪಡಣ ಚುಕವಾವಯಾ ಪರೌತೇ । ನಾಹೀ ಮ್ಹಣೋನಿ ತೇಥೇ । ಪಡಾವೇಚಿ

ಪಡೇ ॥ ೭೧ ॥ ತೇವೀ ಮೃತ್ಯೂಚೇನಿ ಅವಸರೇ ಏಕೇ । ಜೇ ಯೇವೂನಿ ಜೀವಾಸಮೋರ
ಠಾಕೇ । ತೇ ಹೋಣೇ ಮಗ ನ ಚುಕೇ । ಭಲತಯಾಪರೀ ॥ ೭೨ ॥ ಆಣಿ ಜಾಗತಾ ಜವ ಅಸಿಜೇ ।
ತವ ಜೇಣೇ ಧ್ಯಾನೇ ಭಾವನಾ ಭಾವಿಜೇ। ಡೋಳಾ ಲಾಗತ ಖೇವೋ ದೇಖಿಜೇ। ತೋಚಿ ಸ್ವಪ್ನೀ । ೭೩॥

**ಅರ್ಥ—** ಅರ್ಜುನನೇ ! ಯಾವದಕ್ಕೆ ಅಧಿಯಜ್ಞವೆಂದೆನ್ನುತ್ತಾರೆಂಬದನ್ನು ಇದೀಗ ನಾನು ನಿನಗೆ ಹೇಳಿದೆನು, ಆ ಅಧಿಯಜ್ಞವೇ ನಾನು. ಆ ಪರಮಾತ್ಮನಾದ ನಂನನ್ನು ಯಾವ ಪುರುಷರು ಜೀವದಿಂದ ತಾವು ಇರುವಾಗ್ಗೆಯೇ ಅರಿತು ಮರಣಕಾಲದಲ್ಲಿಯೂ ಅರಿತಿರುತ್ತಾರೆ, ॥ ೫೯ ॥ ಯಾವ ಪ್ರಕಾರಾ ಮನಿಯು ( ಬೈಲಿನಿಂದ ) ತುಂಬಿ ಬೈಲಿನಲ್ಲಿಯೇ ಇರುವಂತೆ ಆ ಪುರುಷನ ದೇಹವು ಅನಿತ್ಯವಾದದ್ದಿರುತ್ತದೆ. ಇಂಥ ವಿಚಾರದಿಂದ ತಿಳಿದು ತಾನೇ ( ಆತ್ಮರೂಪವಾಗಿ ) ತಂನ ಸ್ಥಳದಲ್ಲಿಯೇ ಇರುತ್ತಾನೆ. ॥ ೬೦ ॥ ಹೀಗೆ ಈ ಮೇಲಿನ ಅನುಭವದ ನಡುಮನೆಯಲ್ಲಿ ನಿಶ್ಚಯರೂಪಿ ಕೋಣೆಯಲ್ಲಿ ಅವನಿಗೆ ಸಿದ್ದಿಯು ( ಸ್ಥಿರತೆಯು ) ಉಂಟಾಗಿರುವದು ಆದುದರಿಂದ ಅವನಿಗೆ ಹೊರಗಿನ ವಿಷಯಗಳ ಸ್ಮರಣವೇ ಆಗುವದಿಲ್ಲ. ॥ ೬೧ ॥ ಈ ಪ್ರಕಾರಾ ಆಂತರ್ಬಾಹ್ಯ ಐಕ್ಯವು ತುಂಬಿಕೊಂಡಿದ್ದು ಆ ಪುರುಷನು ಮದ್ರೂಪ ಉಳ್ಳವನಾಗಿರುವದರಿಂದ, ಅವನು ಹೊರಗಿನ ಪಂಚಮಹಾಭೂತದ ಐದು ಕವಚಗಳಿಂದಾದ ಈ ಶರೀರವು ಅವನಿಗೆ ತಿಳಿಯದೇ ಬಿದ್ದು ಹೋಗುತ್ತದೆ. ॥ ೬೨ ॥ ಯಾವ ಶರೀರವು ಜೀವಂತ ಇದ್ದು ( ಸರ್ವವ್ಯವಹಾರ ಮಾಡುತ್ತಿರುವಾಗ್ಗೆ ) ಸಹಾ ಆ ಶರೀರದ ಸ್ಮರಣವು ಅವನಿಗೆ ಇರುವದಿಲ್ಲ, ಅಂದ ಬಳಿಕ ಶರೀರವು ಪತನವಾಗುವಕಾಲಕ್ಕೆ ಆದ ಸಂಕಟವು ಅವನಿಗೆ ಏನು ಮಾಡೀತು ? ಆದುದರಿಂದ ಇಂಥ ( ಕಠಿಣ ) ಪ್ರಸಂಗದಲ್ಲಿ ಅವನ ಸ್ವರೂಪಾನುಭವದ ಹೊಟ್ಟೆಯೊಳಗಿನ ( ನಿಶ್ಚಯರೂಪಿನೀರು ) ಅಲ್ಲಾಡುವದಿಲ್ಲ. ॥ ೬೩ ॥ ಆ ಅನುಭವವು. ಕೇವಲ ಐಕ್ಯಭಾವನೆಯುಂಬ ರಸವನ್ನು ಸುರಿವಿ ಅವಿನಾಶದಿಂದ ಯುಕ್ತವಾದ ಹೃದಯದಲ್ಲಿ ಹಾಕಿರುತ್ತದೆ, ಮತ್ತು ಪೂರ್ಣಾನಂದ ಸಮುದ್ರದಲ್ಲಿ ತೊಳೆದು ( ಸ್ವಚ್ಛ ) ಮಾಡಿರುತ್ತದೆ. ಆದುದರಿಂದ ಕಾಮ—ಕ್ರೋಧ ಮುಂತಾದ ಮಲಿನತ್ವದಿಂದ ಅದು ಮಲಿನವಾಗುವದಿಲ್ಲ. ॥ ೬೪ ॥ ಹೀಗೆ ನೋಡು, ಆಳವಾದ ನೀರಿನಲ್ಲಿ ಕೊಡವು ಮುಳುಗಿದರೆ ಅದರವಳಗೆ ಮತ್ತು ಹೊರಗೆ ಕೂಡೇ ನೀರೇ ಇರುತ್ತದೆ. ಮತ್ತು ದೈವಗತ್ಯವಾಗಿ ಅದು ಅಕಸ್ಮಾತ ಹಿಂದಿನಿಂದ ಒಡೆದರೆ ನೀರು ನಾಶವಾಗಿ ಹೋಗುವದೇನು ? ॥ ೬೫ ॥ ಇಲ್ಲವೇ ಹಾವಿನ ಪರೆಯು ಉಚ್ಚಿಬೀಳಲು, ಅಥವಾ ಬಸಲಿನ ತಾಪದಿಂದ ಮೈಮೇಲಿನ ವಸ್ತ್ರಗಳನ್ನೆಲ್ಲ ಕಳೆದೂಗೆದರೆ, ಅವಯವಗಳಲ್ಲಿ ಏನಾದರೂ ಹೆಚ್ಚು ಕಡಿಮೆ ಆಗಿರುವದೇನು ? ॥ ೬೬ ॥ ಅದೇ ಪ್ರಕಾರಾ ಮೇಲಿಂದ ಮೇಲೆ ಕಾಣುವ ಮಿಥ್ಯವಾದ ಶರೀರವು ನಾಶ ಹೊಂದಿದರೆ ಸಹಾ ಬ್ರಹ್ಮವು ಸರ್ವತ್ರದಲ್ಲಿಯೂ ತುಂಬಿಕೊಂಡೆ ಇರುತ್ತದೆ. ಆ ಸ್ಥಳದಲ್ಲಿ ಬುದ್ಧಿಯು ನಿಪುಣತ್ವವನ್ನು ಹೊಂದಿದರೆ ಮಾತ್ರ ಯಾವಮಾತಿನ ಭಯವೂ ಇರುವದಿಲ್ಲ. ॥ ೬೭ ॥ ಆದುದರಿಂದ ಈ ರೀತಿಯಿಂದ ಅಂತ್ಯಕಾಲದಲ್ಲಿ ನನ್ನ ಸ್ಮರಣವನ್ನು ಧೃಡಪಡಿಸಿ ಯಾರು ದೇಹವನ್ನು ಬಿಡುತ್ತಾರೆ. ಅವರು ನನ್ನ ಸ್ವರೂಪವನ್ನು ಪಡೆಯುತ್ತಾರೆ. ॥ ೬೮ ॥ ವಿಚಾರಮಾಡಿ ನೋಡಿದರೆ ಸಾಧಾರಣ ನಿಯಮವು ಹೇಗಿರುವದೆಂದರೆ ಮರಣ ಸಮಯವು ಬಂದೊದಗಿರಲು ಮನುಷ್ಯನ ಅಂತಃಕರಣದಲ್ಲಿ ಯಾವದರ ಸ್ಮರಣ ಉಂಟಾಗುತ್ತದೆ. ಅದೇ ವಸ್ತುವಿನ ಸ್ವರೂಪವು ಆ ಪ್ರಾಣಿಗೆ ಪ್ರಾಪ್ತವಾಗುತ್ತದೆ. ॥ ೬೯ ॥ ಯಾವ ಪ್ರಕಾರಾ ಒಬ್ಬಾನೊಬ್ಬ ಮನುಷ್ಯನು ಭಯದಿಂದ ದೀನನಾಗಿ ವಾಯುವೇಗದಿಂದೋಡುತ್ತಿರಲು, ಮಾರ್ಗದಲ್ಲಿ ಅಕಸ್ಮಾತ್ ಎರಡೂ ಕಾಲುಗಳು ಜಾರಿ ಬಾವಿಯಲ್ಲಿ ಬೀಳುತ್ತಾನೆ. ॥ ೭೦ ॥ ಆ ಸ್ಥಿತಿಯಲ್ಲಿ ಅವನಿಗೆ ಬೀಳುವದರ ಪೂರ್ವದಲ್ಲಿ ಓಡುವ ವೇಗವನ್ನು ಆವರಿಸಿ ಹಿಡಿಯುವದು. ಮತ್ತು ಬೀಳುವದನ್ನು ತಪ್ಪಿಸಲು ಸಾಧ್ಯವಿರುವದಿಲ್ಲ. ಆದುದರಿಂದ ಅವನು ಬಾವಿಯಲ್ಲಿಯೇ ಬೀಳಬೇಕಾಗುತ್ತದೆ. ॥ ೭೧ ॥ ಅದರಂತೆ ಮೃತ್ಯು ಸಮಯದಲ್ಲಿ ಜೀವದ ಎದುರಿಗೆ ಯಾವ ವಸ್ತು ಬಂದು ನಿಲ್ಲುತ್ತದೆ. ಅದರಂತೆ ತದ್ರೂಪವೇ ( ಮರಣದನಂತರ ) ಅವನಿಗೆ ಆಗಬೇಕಾಗುತ್ತದೆ. ಅದು ಯಾವ ಉಪಾಯದಿಂದಲೂ ತಪ್ಪಿಸುವದಾಗುವದಿಲ್ಲ. ॥ ೭೨ ॥ ಮನುಷ್ಯನು ಜಾಗ್ರತನಾಗಿರಲು ಅವನ ಮನಸಿನಲ್ಲಿ ಯಾವ ಕಲ್ಪನೆಯು ಬರುತ್ತದೆ. ಅದೇ ಕಲ್ಪನೆಯು ನಿದ್ದೆಹತ್ತಿದಮೇಲೆ ಸ್ವಪ್ನದಲ್ಲಿ ಕಾಣಲಿಕ್ಕೆ ಹತ್ತುತ್ತದೆ. ॥ ೭೩ ॥

**ಯಂ ಯಂ ವಾಽಪಿ ಸ್ಮರನ್‌ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವ ಭಾವಿತಃ ॥ ೬ ॥**

ತೇವಿಜಿತೇಸಿ ಅವಸರೀ । ಜೆ ಅವಡೋನಿ ಜೀವಿಉರೀ । ತೇಚಿ ಮರಣಾಚೆಯೀ ಮೇರೀ । ಫಾರ ಹೋಲಾಗೇ ॥ ೭೪ ॥ ಆಣಿ ಮರಣೀ ಜಯಾಜೇ ಆಠವೇ । ತೋ ತೇಚಿಗತಿತೇ ಪಾವೆ ।

**ಅರ್ಥ—** ಅದೇ ಪ್ರಕಾರಾ ಜೀವಂತ ಇರುವಾಗ್ಗೆ ಅಂತಃಕರಣದಲ್ಲಿ ಯಾವದರ ವಿಷಯವಾಗಿ ಪ್ರೇಮವಿ ಪದೋ, ಅದೇ ವಿಷಯದಲ್ಲಿ ಪ್ರೇಮವು ಅಂತ್ಯಕಾಲ ಸಮಯದಲ್ಲಿ ವೃದ್ಧಿಂಗತವಾಗುತ್ತದೆ. ॥ ೭೪ ॥ ಮ: *ಮರಣಸಮಯದಲ್ಲಿ ಯಾವ ಮಾತಿನ ಸ್ಮರಣ ಉಂಟಾಗುತ್ತದೆ ಅದೇಗತಿಗೆ ಅವನು (ಮರಣದ ನಂತರಾ) ತಪ್ಪ ಮುಟ್ಟುತ್ತಾನೆ ॥

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಂ ॥ ೭ ॥**

**[ ತಸ್ಮಾದಿತಿ ]** ಮ್ಹಣೋನಿ ಸದಾ ಸ್ಮರಾವೇ । ಮಾತೇಚಿ ತುವಾ ॥ ೭೫ ॥ ಡೋಳಾ ಜೇ ದೇಖಾವೇ । ಕಾ ಕಾನೀ ಹನ ಐಕಾವೇ । ಮನೀ ಜೇ ಭಾವಾವೇ । ಬೋಲಾವೇ ವಾಚೇ ॥ ೭೬ ॥ ತೇ ಆಂತ ಬಾಹೇರೀ ಆಘವೇ । ಮೀಚಿ ಕರೂನಿ ಘಾಲಾವೇ । ಮಗ ಸರ್ವಿ ಕಾಳೀ ಸ್ವಭಾವೇ । ಮೀಚಿ ಆಹೇ ॥ ೭೭ ॥ ಅರ್ಜುನಾ ಐಸಾ ಜಾಹಾಲಿಯಾ । ಮಗ ನ ಮರಿಜೇ ದೇಹ ಗೇಲಿಯಾ । ಮಾ ಸಂಗ್ರಾಮು ಕೇಲಿಯಾ । ಭಯ ಕಾಯ ತುಜ ॥ ೭೮ ॥ ತೂ ಮನ ಬುದ್ಧೀ ಸಾಚೇಸೀ । ಜರೀ ಮಾಝಿಯಾ ಸ್ವರೂಪೀ ಅರ್ಪಿಸೀ । ತರೀ ಮಾತೇಚಿಗಾ ಪಾವಸೀ । ಹೇ ಮಾಝೀ ಭಾಕ ॥ ೭೯ ॥ ಹೇಚಿ ಕಾಯಸಯಾವರೀ ಹೋಯೇ । ಐಸಾ ಜರೀ ಸಂದೇಹ ವರ್ತತ ಆಹೇ । ತರೀ ಅಭ್ಯಾಸೂನಿ ಆದೀ ಪಾಹೇ । ಮಗ ನವ್ಹೇ ತರೀ ಕೋಪೇ ॥ ೮೦ ॥

---

**ಟೀಪು—** ಮರಣಸಮಯದಲ್ಲಿ ಪರಮೇಶ್ವರನನ್ನೂ, ಸ್ಮರಿಸುವ ಅವಶ್ಯಕತೆಯನ್ನೂ, ಮತ್ತು ಆ ಸ್ಮರಣದ ಫಲವನ್ನೂ, ಈ ಮೆ ಹೇಳಿದ ೫ನೇ ಶ್ಲೋಕದಲ್ಲಿ ಹೇಳಿ ಮುಂದೆ ೬ನೇ ಶ್ಲೋಕದಲ್ಲಿ ಅದರ ಸ್ಪಷ್ಟೀಕರಣವನ್ನು ಮಾಡಿದ್ದಾರೆ. ಅಂದರೆ ಈ ಮಾತಿನಿಂ ಮರಣಸಮಯದಲ್ಲಿಯೇ ಪರಮೇಶ್ವರನ ಸ್ಮರಣವನ್ನು ಮಾಡಿದರೆ ತೀರಿತೆಂದು ಜನರು ತಪ್ಪುತಿಳುವಳಿಕೆಮಾಡಿಕೊಳ್ಳುವ ಸಂಭವವಿದೆ. ಆ ಯಾವದು ಯಾವಜ್ಜೀವವಾಗಿ ಮನಸ್ಸಿನಲ್ಲಿ ವಾಸಮಾಡಿಕೊಂಡಿರುವದೋ, ಅದು ಅಂತ್ಯಕಾಲದಲ್ಲಿಯೂ ಅಂಟಿಕೊಂಡಿರುವದರಿಂದ ಆ ಕಾಲದಲ್ಲೊಮ್ಮೆ ಮಾತ್ರವಲ್ಲ. ಆಯುಷ್ಯವಿಡೀ ಮಹಾಗಳೆಲ್ಲ ಪರಮೇಶ್ವರನ ಸ್ಮರಣ ಉಪಾಸನೆಗಳನ್ನು ಮಾಡುತ್ತಿರುವದು ಅವಶ್ಯವಾಗಿ ದೆಂಬದು ಸಿದ್ಧಮಾಡಿ ತೋರಿಸಿದ್ದಾರೆ. (ಗೀ. ಅ. ೩—೨೩ ಅ—೧೩,೯—೨೫, ನೋಡಿರಿ) ಜನ್ಮದಲ್ಲೆಲ್ಲ ಒಂದೇ ಭಾವನೆಯಲ್ಲಿ ಮ ರತವಾಗಿ ಹೋಗದಿದ್ದರೆ ಅಂತ್ಯಕಾಲದ ಯಾತನೆಯಲ್ಲಿರುವಾಗ ಅದೇ ಭಾವನೆಯು ಹುಟ್ಟುವದು ಅಸಂಭವವೆಂದು ಗೀತೆಯು ಹೇಳುವ ಅದಕ್ಕಾಗಿ ಅಂತ್ಯಕಾಲದಲ್ಲಿ ಪರಮೇಶ್ವರನ ಸ್ಮರಣವು ತಪ್ಪಬೇಕಾದರೆ ಯಾವ ಜ್ಜೀವವು ಪರಮೇಶ್ವರನ ಧ್ಯಾನಮಾಡುವದು ಅವಶ್ಯವು. ಸಿದ್ಧಾಂತಕ್ಕನುಸರಿಸಿ ಭಗವಂತನು ಅರ್ಜುನನ ಮುಂದೆ "ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುದ್ಧ್ಯಚ" ಈ ಶ್ಲೋಕ ಸ್ಪಷ್ಟಮಾಡಿ ಹೇಳಿದ್ದಾನೆ. ಜೀವನು ಪರಲೋಕಕ್ಕೆ ಹೋಗುವಾಗ ಬುದ್ಧೀಂದ್ರಿಯಾದಿಗಳು ಅವನೊಡನೆ ಕಲೆತುಬರುವವೆಂದು ಸೂಚಿ

( ಭ. ಗೀ ಅ. ೧೫ ಶ್ಲೋಕ ೭–೮ )

"ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ । ಶರೀರಂ ಯದವಾಪ್ನೋತಿ ಯಚ್ಚಾ
ಪ್ಯುತ್ಕ್ರಾಮತೀಶ್ವರಃ । ಗೃಹೀತ್ವೈತಾನಿ ಸಂಯಾತಿವಾಯುರ್ಗಂಧಾನಿವಾಶಯಾತ್ "

ಎಂದು ಇಲ್ಲಿ ಪ್ರಮಾಣವು. ಇದರಿಂದ ಜೀವನಿಗೆ ಪ್ರಾಣೋತ್ಕ್ರಮಣಕಾಲದಲ್ಲಿ ಯಾವ ಭಾವನೆಯುಂಟಾಗುವದೋ ಅದಕ್ಕೆ ತಕ್ಕ

**ಅರ್ಥ—** ಆದುದರಿಂದ ಸರ್ವ ಕಾಲದಲ್ಲಿಯೂ ನನ್ನನ್ನು ಸ್ಮರಿಸುವವನಾಗು. ॥ ೭೫ ॥ ಕಣ್ಣಿನಿಂದ ಯಾವದನ್ನು ನೋಡುತ್ತಿರುವಿಯೋ ಕಿವಿಯಿಂದ ಯಾವದನ್ನು ಕೇಳುವಿಯೋ, ಅಥವಾ ಮನಸಿನಲ್ಲಿ ಯಾವದನ್ನು ಕಲ್ಪನೆ ಮಾಡುವಿಯೋ, ವಾಣಿಯಿಂದ ಯಾವದನ್ನು ಮಾತಾಡುವಿಯೋ, ॥ ೭೬ ॥ ಹೀಗೆ ಮೇಲೆ ಹೇಳಿದ ಸರ್ವ ವ್ಯವಹಾರಗಳಲ್ಲಿ ಅಂತರ್ಬಾಹ್ಯ ನಾನೇ ಇರುವೆನೆಂದು ನಂಬು. ಆ ಮೇಲೆ ಸರ್ವದರಲ್ಲಿಯೂ ನಾನೇ ವ್ಯಾಪಕನಾಗಿರುವೆನೆಂಬದು ನಿನಗೆ ಸಹಜವೇ ಕಂಡುಬರುವದು. ॥ ೭೭ ॥ ಅರ್ಜುನನೇ ! ಹೀಗೆ ಸರ್ವವೂ ನನ್ನ ಸ್ವರೂಪವೇ ಇರುವದೆಂಬ ಜ್ಞಾನವು ಆದಕೂಡಲೆ ದೇಹವು ನಾಶವಾಗಿ ಹೋದರೂ ಅವನು ಸಾಯುವದಿಲ್ಲ. ಅಂದಬಳಿಕ ಯುದ್ಧ ಮಾಡುವದರಿಂದ ನಿನಗೆ ಯಾವ ಭಯವಿರುವದು ಹೇಳು ? ॥ ೭೮ ॥ ನೀನು ಮನ ಬುದ್ಧಿ ಇವುಗಳನ್ನು ನಿಜವಾಗಿ ನನ್ನ ಸ್ವರೂಪದಲ್ಲಿ ಅರ್ಪಣೆ ಮಾಡಿದರೆ, ಆ ಮೇಲೆ ನನ್ನ ಸ್ವರೂಪವನ್ನೇ ಹೊಂದುವಿ. ಇದು ನನ್ನ ಪ್ರತಿಜ್ಞಾಪೂರ್ವಕವಾದ ಭಾಷಣವು ಇರುವದು ॥ ೭೯ ॥ ಇಂಥಾ ಸ್ಥಿತಿಯು ಯಾವದರಿಂದ ಆದೀತೆಂಬ ಸಂಶಯವು ನಿನ್ನ ಮನಸಿನಲ್ಲಿ ಬರಬಹುದು. ಆದರೆ ಮುಂಚಿತವಾಗಿ ( ನಾನು ಹೇಳಿದಂತೆ ಅದರ ) ಅಭ್ಯಾಸ ಮಾಡಿ ನೋಡು. ಆ ಮೇಲೆ ಆ ಬ್ರಹ್ಮಸ್ಥಿತಿಯು ನಿನಗೆ ಪ್ರಾಪ್ತವಾಗದಿದ್ದರೆ ಮಾತ್ರ ( ನನ್ನ ಮೇಲೆ ) ಸಿಟ್ಟಿಗೇಳು. ॥ ೮೦ ॥

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥**

**[ ಅಭ್ಯಾಸಯೋಗೇತಿ ]** ಯೇಣೇಚಿ ಅಭ್ಯಾಸೇಸಿ ಯೋಗೂ । ಚಿತ್ತಾಸಿ ಕರೀ ಪಾ ಚಾಂಗೂ । ಅಗಾ ಉಪಾಯ ಬಳೇ ಪಂಗೂ । ಪಹಾಡ ಠಾಕೀ ॥ ೮೧ ॥ ತೇವೀ ಸದಭ್ಯಾಸೇ ನಿರಂತರ । ಚಿತ್ತಾಸಿ ಪರಮಪುರುಷಾಚೀ ಮೋಹರ । ಲಾವೀಮಗ ಶರೀರ । ರಾಹೋ ಅಥವಾ ಜಾವೋ ॥ ೮೨ ॥ ಜೇ ನಾನಾ ಗತೀತೇ ಪಾವವಿತೇ । ತೇಚಿತ್ತ ವರೀಲ ಆತ್ಮಯಾತೇ । ಮಗ ಕವಣ ಆಠವೀ ದೇಹಾತೇ । ಗೇಲೇಕೀ ಆಹೇ ॥ ೮೩ ॥ ಪೈಸರಿತೇಚೇನಿ ಓಘೇ । ಸಿಂಧುಜಳಾ ಮೀನಲೇ ಘೋಘೇ । ತೇ ಕಾಯ ವರ್ತತ ಆಹೇ ಮಾಗೇ । ಮ್ಹಣೋನಿ ಪಾಹೋ ಯೇತೀ ॥ ೮೪ ॥ ನಾ ತೇ ಸಮುದ್ರುಚಿ ಹೋವೂನಿ ಠೇಲೇ । ತೇವೀ ಚಿತ್ತಾಚೇ ಚೈತನ್ಯ ಜಾಹಾಲೇ । ಜೇಥ ಯಾತಾಯಾತ ನಿಮಾಲೇ । ಘನಾನಂದ ಜೇ ॥ ೮೫ ॥'

**ಅರ್ಥ** - ಈ ಕಾರಣದಿಂದ ಚಿತ್ತಗೊಟ್ಟು ಮನಃಪೂರ್ವಕವಾಗಿ ಅಭ್ಯಾಸಮಾಡಿದರೆ, ಸತತ ಉದ್ಯೋಗ ಬಲದಿಂದ ಹೆಳವನು ಸಹಜವೇ ಪರ್ವತವನ್ನು ಹತ್ತುತ್ತಾನೆ. ॥ ೮೧ ॥ ಅದರಂತೆ ಯಾವಾಗಲೂ ಬ್ರಹ್ಮಚಿಂತನದ ಅಭ್ಯಾಸದಿಂದ, ನಿನ್ನ ಅಂತಃಕರಣದಲ್ಲಿ ಪರಮ ಪುರುಷನ ಧ್ಯಾನದ ( ಧೃಡವಾದ ) ವ್ಯಸನವನ್ನು ಹಚ್ಚಿಕೊಳ್ಳುವವನಾಗು. ಹೀಗೆ ಆದಮೇಲೆ ಶರೀರವು ಇದ್ದರೇನು ? ಅಥವಾ ಹೋದರೇನು ? ॥ ೮೨ ॥ ನಾನಾತರದ ಗತಿಯನ್ನು ಪ್ರಾಪ್ತಮಾಡಿಕೊಡುವಂಥ ಈ ನಿನ್ನ ಚಿತ್ತವು ( ಅಕಸ್ಮಾತ ) ಒಂದು ವೇಳೆ ಆತ್ಮನನ್ನು ಕೂಡಿಕೊಂಡರೆ, ಆ ಮೇಲೆ ದೇಹವು ಅದೆಯೋ ಅಥವಾ ನಾಶಹೊಂದಿರುವದೆಂಬದರ ಸ್ಮರಣವನ್ನು ಯಾರು ಇಡಬೇಕು ? ॥ ೮೩ ॥ ನದಿಯು ಪ್ರವಾಹದ ಯೋಗದಿಂದ ಘೋ, ಘೊ, ಎಂಬ ಶಬ್ದಮಾಡುತ್ತ ಸಮುದ್ರರಾಜನನ್ನು ಕೂಡುವದಕ್ಕೆ ಹೊರಟರಲು ಹಿಂದೆ ಏನು ನಡೆದಿರುವದೆಂಬದನ್ನು ನೋಡುವದರ ದೆಶೆಯಿಂದ ತಿರುಗಿ ಹೋಗುವದೇ ಹೇಗೆ ? ॥ ೮೪ ॥ ಇಲ್ಲ ! ಆದರೆ ಅದು ಸಮುದ್ರ ರೂಪವೇ ಆಗಿ ಹೋಗುತ್ತದೆ. ಅದರಂತೆ ಚಿತ್ತವು ಆತ್ಮರೂಪವಾದರೆ ಜನನ ಮರಣದ ಸಂಕಟವು ಮತ್ತು ( ಬರಹೋಗುವ ಯಾತನೆಯು ) ತಪ್ಪಿ ಹೋಗುತ್ತದೆ. ಕಾರಣವೇನಂದರೆ ಆ ಸ್ಥಳದಲ್ಲಿ ಪರಮಾನಂದವೇ ತುಂಬಿಕೊಂಡಿರುತ್ತದೆ. ॥ ೮೫ ॥

**ಕವಿಂ ಪುರಾಣಮನುಶಾಸಿತಾರಮಣೋರಣೀಯಾಂಸಮನುಸ್ಮರೇದ್ಯಃ ॥**
**ಸರ್ವಸ್ಯ ಧಾತಾರಮಚಿಂತ್ಯರೂಪಮಾದಿತ್ಯವರ್ಣಂ ತಮಸಃ ಪರಸ್ತಾತ್ ॥೯॥**

**[ ಕವಿಮಿತಿ ]** ಜಯಾಚೇ ಆಕಾರೀವೀಣ ಅಸಣೇ. ಜಯಾಜನ್ಮ ನಾ ನಿಮಣೇಜೆಅಘವೇಂಚಿ ಅಘವೇಪಣೇ । ದೇಖತ ಅಸೇ ॥ ೮೬ ॥ ಜೇ ಗಗನಾಹೂನಿ ಜುನೇ । ಜೇ ಪರಮಾಣೂಹೂನಿಸಾನೇ । ಜಯಾಚೇನಿ ಸನ್ನಿಧಾನೇ । ವಿಶ್ವಚಳೇ ॥ ೮೭ ॥ ಜೇ ಸರ್ವಾತೇ ಯಯಾವಿಯೇ । ವಿಶ್ವಸರ್ವ ಜೇಣೇ ಜಿಯೇ । ಹೇತು ಜಯಾ ಬಿಹೇ । ಅಚಿಂತ್ಯ ಜೇ ॥ ೮೮ ॥ ದೇಖೇ ವೋಳಂಬಾ ಇಂಗಳ ನಚರೇ । ತೇಜೀ ತಿಮಿರ ನಶಿರೇ । ಜೇ ದಿಹಾಚಿ ಆಂಧಾರೇ । ಚರ್ಮ ಚಕ್ಷೂಸೀ ॥ ೮೯ ॥ ಸುಸಡಾ ಸೂರ್ಯ ಕಣಾಂಚ್ಯಾರಾಶೀ । ಜೋನಿತ್ಯ ಉದೋ ಜ್ಞಾನಿಯಾಸೀ । ಅಸ್ತಮಾನಾಚೇ ಜಯಾಸೀ । ಅಡನಾವ ನಾಹೀ ॥ ೯೦ ॥

**ಅರ್ಥ—** ಯಾವವರ ಅಸ್ತಿತ್ವವು ಆಕಾರದ ಹೊರ್ತು ಅದ. ಮತ್ತು ಯಾವದು ಜನ್ಮಮೃತ್ಯು ರಹಿತವಿದ್ದು ಅದು ಸರ್ವ ವ್ಯಾಪಕತ್ವದಿಂದ ಸರ್ವವನ್ನೂ ನೋಡುತ್ತದೆ. ॥ ೮೬ ॥ ಮತ್ತು ಯಾವದು ಆಕಾಶದಕಿಂತಲೂ ಪುರಾತನವಾದದ್ದಿರುತ್ತದೆ. ಮತ್ತು ಯಾವದು ಪರಿಮಾಣುವಿನಕಿಂತಲೂ. ಸಂಣದಿದ್ದು ಯಾವದರ ಸಾನ್ನಿಧ್ಯದಿಂದ ವಿಶ್ವದ ಚಲನ ವಲನವು ನಡೆದಿರುತ್ತದೆ. ॥ ೮೭ ॥ ಮತ್ತು ಯಾವದರಿಂದ ಈ ಸರ್ವ ಜಗತ್ತಿನ ಘಟನಾ ಘಟನೆಗಳು (ಉತ್ಪತ್ತಿಯು) ಆಗುತ್ತವೆ. ಮತ್ತು ಈ ಸರ್ವ ಜಗತ್ತು ಅವರಿಂದಲೆ ಬದುಕಿ ಇರುತ್ತದೆ. ಮತ್ತು ಯಾವದರ ಅನುಮಾನವನ್ನು ಮಾಡಲಿಕ್ಕೆ ಬರುವದಿಲ್ಲ. ಕಾರಣವೇನಂದರೆ ಅದು ಅಚಿಂತ್ಯವಿರುತ್ತದೆ. ॥ ೮೮ ॥ ಹೀಗೆ ನೋಡು, ಬೆಂಕಿಯನ್ನು ಹೇಗೆ ಗೊರ್ಲಿ ತಿನ್ನುವದಿಲ್ಲ, ಮತ್ತು ಪ್ರಕಾಶದಲ್ಲಿ ಕತ್ತಲೆಯು ಹೇಗೆ ಪ್ರವೇಶಮಾಡುವದಿಲ್ಲ; ದೇಹದ ವಿಷಯದಲ್ಲಿರುವ ಅಜ್ಞಾನವು ಯಾವನ ಚರ್ಮ ಚಕ್ಷುವಿಗೆ ಸಹಾ ಕಾಣುವದಿಲ್ಲ, ॥ ೮೯ ॥ ಯಾವದು ನಿರ್ಮಳ ಸೂರ್ಯರೂಪ ಕಣಗಳ ರಾಶಿಯಂತೆ ಇರುವದು, ಮತ್ತು ಜ್ಞಾನಿಗಳಿಗೆ ನಿತ್ಯಪ್ರಕಾಶ ಮಾಡುವಂಥದು ಅದೆ. ಮತ್ತು ಆ ಸ್ಥಳದಲ್ಲಿ ಅಸ್ತವಾಗುವಂಥ ಗುಣವು ಹೆಸರಿಗೆ ಸಹಾ ಇರುವದಿಲ್ಲ. ॥ ೯೦ ॥

**ಪ್ರಯಾಣಕಾಲೇ ಮನಸಾಽಚಲೇನ । ಭಕ್ತ್ಯಾಯುಕ್ತೋ ಯೋಗಬಲೇನ ಚೈವ ॥**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್ । ಸ ತಂ ಪರಂ ಪುರುಷಮುಪೈತಿ ದಿವ್ಯಂ ॥೧೦॥**

**[ ಪ್ರಣಯಕಾಲೇ ಇತಿ ]** ತಯಾ ಅವ್ಯಂಗ ವಾಣೇಯಾ ಬ್ರಹ್ಮಾತೇ । ಪ್ರಯಾಣಕಾಲೇಪ್ರಾಪ್ತೇ । ಜೋ ಸ್ಥಿರಾವಲೇನಿ ಚಿತ್ತೇ । ಜಾಣೋನಿ ಸ್ಮರೇ ॥ ೯೧ ॥ ಬಾಹೇರ ಪದ್ಮಾಸನ ರಚುನೀ । ಉತ್ತರಾಭಿಮುಖ ಬೈಸೋನಿ । ಜೇವೀ ಸುಖಸೂನೀ । ಕರ್ಮಯೋಗಾಚೇ ॥ ೯೨ ॥ ಆಂತು ಮಿನಲೇನಿ ಮನೋಧರ್ಮೇ । ಸ್ವರೂಪ ಪ್ರಾಪ್ತೀ ಚೇನಿ ಪ್ರೇಮೇ । ಆಪೇ ಆಪ ಸಂಭ್ರಮೇ । ಮಿಳಾವಯಾ ॥೯೩॥ ಆಕಳಲೇನಿ ಯೋಗೇ । ಮಧ್ಯಮಾ ಮಧ್ಯಮಾರ್ಗೇ । ಅಗ್ನಿಸ್ಥಾನೌನಿ ನಿಗೇ । ಬ್ರಹ್ಮರಂಧ್ರಾ ॥ ೯೪ ॥ ತೇಥ ಅಚೇತ ಚಿತ್ತಾಚಾ । ಸಾಂಗಾತ । ಅಹಾಚವಾಚಾ ದಿಸೇ ಮಾಂಡತ । ಜೇಥ ಪ್ರಾಣ ಗಗನಾ ಅಂತ । ಸಂಚರೇಕಾ ॥ ೯೫ ॥ ಪರೀ ಮನಾಚೇನಿ ಸ್ಥೈರ್ಯ ಧರಿಲಾ ಭಕ್ತಿಚಿಯಾ ಭಾವನಾ ಭರಲಾ । ಯೋಗಬಳೇ ಆವರಲಾ । ಸಜ್ಜ ಹೋವುನಿ ॥ ೯೬ ॥ ತೋ ಜಡಾ ಜಡಾ ತೇ ವಿರವಿತೂ । ಭ್ರೂಲತಾ ಮಾಜೀ ಸಂಚರತು । ಜೈಸಾ ಘಂಟಾನಾದ ಲಯಸ್ತು । ಘಂಟೇಸೀಚ ಹೋಯ ॥ ೯೭ ॥ ಕಾರ್ಝಾಂಕಲಿಯೇ ಘಟೇಂಚಾ ದಿವಾ । ನೇಣಿಜೇ ಕಾಯ ಜಾಹಲಾ ಕೆಂವ್ಹಾ । ಯಾ ರೀತಿ ಜೋ ಪಾಂಡವಾ । ದೇಹ ಠೇವೀ ॥ ೯೮ ॥ ತೋ ಕೇವಳ ಪರಬ್ರಹ್ಮ । ಜಯಾ ಪರಮ ಪುರುಷ ಐಸೇ ನಾಮ । ತೇ ಮಾಝೇ ನಿಜಧಾಮ । ಹೋವೂನಿ ಠಾಕೇ ॥ ೯೯ ॥

**ಅರ್ಥ—** ಮರಣಕಾಲವು ಸಮೀಪ ಬಂದಿರಲು ಸ್ಥಿರವಾದ ಅಂತಃಕರಣದಿಂದ ಯಾವನು ಪರಿಪೂರ್ಣನಾದ ಅವ್ಯಕ್ತ ಬ್ರಹ್ಮನನ್ನು ತಿಳಿದು ಸ್ಮರಿಸುತ್ತಾನೆ. ॥ ೯೧ ॥ ಹೊರಗೆ ಪದ್ಮಾಸನವನ್ನು ಹಾಕಿ ಉತ್ತರಕ್ಕೆ ಮೋರೆಯನ್ನು ಮಾಡಿ ಕುಳಿತುಕೊಂಡು, ಮತ್ತು ಯೋಗಾಭ್ಯಾಸದ ಕ್ರಮದಲ್ಲಿ ಪ್ರಾಪ್ತವಾದಂಥ ಸುಖವನ್ನು ಅಂತಃಕರಣದಲ್ಲಿ ಕೂಡಹಾಕಿಟ್ಟು, ॥ ೯೨ ॥ ಅಂತರ್ಯಾಮಿ ಏಕಾಗ್ರ ಚಿತ್ತದಿಂದ ಸ್ವರೂಪ ಪ್ರಾಪ್ತಿಯ ಪ್ರೇಮದಿಂದ ತನ್ನಿಂದ ತಾನೇ ತ್ವರೆಯಾಗಿ ಪರಬ್ರಹ್ಮ ಸ್ವರೂಪದಲ್ಲಿ ಕೂಡಿ ಹೋಗುವದರ ದೆಶೆಯಿಂದ, ॥ ೯೩ ॥ ಸಂಪಾದನಮಾಡಿದ ಯೋಗದ್ವಾರದಿಂದ ಸುಷುಮ್ನಾನಾಡಿಯ ಮಧ್ಯಮಾರ್ಗದಲ್ಲಿ ಅಗ್ನಿ ಸ್ಥಾನದಿಂದ ಬ್ರಹ್ಮರಂಧ್ರದಲ್ಲಿ ಪ್ರವೇಶಮಾಡುವದರ ದೆಶೆಯಿಂದ ಹೊರಡುತ್ತಾನೆ. ॥ ೯೪ ॥ ಪ್ರಾಣ, ಮತ್ತು ಚಿತ್ತ, ಇವುಗಳ ಒಂದಕ್ಕೊಂದು ಸಂಗತಿ ಅದೆಂಬದು ಸುಮ್ಮನೇ ಬಹಿರಂಗವಾಗಿ ತೋರಿಕೆಗೆ ಮಾತ್ರ ಕಾಣುತ್ತದೆ. ಮತ್ತು ಪ್ರಾಣದ ಲಯವು ಆಕಾಶದಲ್ಲಿ ಆಗುತ್ತದೆ. ॥೯೫॥ ಆದರೆ ಮನಸ್ಸಿನ ಸ್ಥಿರತೆಯಿಂದ ಯಾವನು ಬಂಧಿಸಲ್ಪಟ್ಟಿರುವನೋ ಮತ್ತು ಯಾವನ ಅಂತಃಕರಣವು ಭಕ್ತಿಯುಕ್ತವಾಗಿರುವದೋ, ಮತ್ತು ಯಾವನು ಯೋಗಬಲದಿಂದ ಸಿದ್ಧವಾಗಿ ತನ್ನ ಮನಸ್ಸು ಸ್ವಾಧೀನದಲ್ಲಿಟ್ಟುಕೊಳ್ಳುತ್ತಾನೋ, ।೯೬॥ ಆ ಯೋಗಿಯ ಪ್ರಾಣವಾಯು ಚೇತನ ಅಚೇತನ ಪದಾರ್ಥಕ್ಕೆ ಇಲ್ಲದಂತೆ ಮಾಡಿ ಭ್ರುಕುಟಿಯಲ್ಲಿ ಸಂಚಾರ ಮಾಡಿ ಘಂಟೆಯನಾದ ಗಂಟೆಯಲ್ಲಿಯೇ ಲಯಹೊಂದುವಂತೆ ಪ್ರಾಣವಾಯು ಅಲ್ಲಿಯೇ ಲಯಹೊಂದುತ್ತದೆ. ॥ ೯೭ ॥ ಇಲ್ಲವೆ ಗಡಿಗೆಯ ಕೆಳಗೆ ಮುಚ್ಚಿದಂಥ ದೀವಿಗೆಯು ಯಾವಾಗ್ಗೆ ಇಲ್ಲದಂತೆ ಆಗುತ್ತದೋ ಇದು ಯಾವ ಪ್ರಕಾರಾ ತಿಳಿಯುವದಿಲ್ಲ. ಅದರಂತೆ ಅರ್ಜುನನೇ ಯಾವನು ( ಬ್ರಹ್ಮಾಕಾಶದಲ್ಲಿ ಪ್ರಾಣವಾಯು ಮೈದು ಅದು ಆತ್ಮಸ್ವರೂಪದಲ್ಲಿ ಯಾವಾಗ್ಗೆ ಲೀನವಾಗುತ್ತದೆಂಬದನ್ನು ತಿಳಿಯಗೊಡದೇ ತನ್ನ ದೇಹವನ್ನು ಇಡುತ್ತಾನೆ. ) ೯೮ ॥ ಅವನಿಗೆ ಕೇವಲ ಪರಬ್ರಹ್ಮಮೂರ್ತಿ ಪರಮ ಪುರುಷನೆಂಬ ಹೆಸರು ಅದೆ; ಅವನು ನನ್ನ ನಿಜ ಸ್ವರೂಪದವರೆಗೆ ಹೋಗಿ ಮುಟ್ಟುತ್ತಾನೆ. ॥ ೯೯ ॥

**ಯದಕ್ಷರಂ ವೇದವಿದೋ ವದಂತಿ । ವಿಶಂತಿ ಯದ್ಯತಯೋ ವೀತರಾಗಾಃ ॥**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ। ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥೧೧॥**

**[ ಯದಕ್ಷರಮಿತಿ ]** ಸಕಳಾ ಜಾಣಣೇಯಾ ಜೇಲಾಣೀ । ತಿಯೇ ಜಾಣಿವೇಚೀ ಜೇ ಖಾಣೀ । ತಯಾ ಜ್ಞಾನಿಯಾಂಚಿಯೇ ಆಯಣೀ । ಜಯಾತೇ ಅಕ್ಷರ ಮ್ಹಣಿಪೇ ॥ ೧೦೦ ॥ ಚಂಡವಾತೇಹೀ ನ ಮೋಡೇ । ತೇ ಗಗನಚಿಕೀ ಫುಡೇ । ವಾಂಚೂನಿ ಜರೀ ಹೋಈಲ ಜರೀ ಮೇಹುಡೇ । ತರೀ ಉರೇಲ ಕೈಂಚೇ ॥ ೧೦೧ ॥ ತೇವೀ ಜಾಣಣೇಯಾ ಜೇ ಆಕಳಲೇ । ತೇ ಜಾಣಿವಲೇಪಣೇಂಚಿ ಉಮಾಣಲೇ । ಮಗ ನೇಣವೇಚಿ ತಯಾ ಮ್ಹಣಿತಲೇ । ಅಕ್ಷರ ಸಹಜೇ ॥ ೨ ॥ ಮ್ಹಣೋನಿ ವೇದವಿದ ನರ । ಮ್ಹಣತೀ ಜಯಾತೇ ಅಕ್ಷರ ! ಜೇ ಪ್ರಕೃತೀಸೀ ಪರ । ಪರಮಾತ್ಮರೂಪ ॥ ೩ ॥ ಆಣಿ ವಿಷಯಾಂಚೇ ವಿಷ ಉಲಂಡೂನಿ । ಜೇ ಸರ್ವೇಂದ್ರಿಯಾ ಪ್ರಾಯಶ್ಚಿತ್ತ ದೇವೂನಿ । ಆಹಾತಿ ದೇಹಾಚಿಯಾ ಬೈಸೋನಿ । ಝಾಡಾತಳೀ ॥ ೪ ॥ ತೇ ಯಾ ಪರೀ ವಿರಕ್ತ । ಜಯಾಚೀ ನಿರಂತರ ವಾಟ ಪಹಾತ । ನಿಷ್ಕಾಮಾಸೀ ಅಭಿಪ್ರೇತ । ಸರ್ವದಾಜೇ ॥ ೫ ॥ ಜಯಾಚಿಯಾ ಆವಡೀ । ನ ಗಣಿತಿ ಬ್ರಹ್ಮಚರ್ಯಾಚೀ ಸಾಂಕಡೀ । ನಿಷ್ಠುರ ಹೋವೂನಿ ಬಾ ಪುಡೀ । ಇಂದ್ರಿಯೇ ಕರಿತೀ ॥ ೬ ॥ ಐಸೇ ಜೇ ಪದ । ದುರ್ಲಭ ಆಣಿ ಅಗಾಧ । ಜಯಾಚಿಯೇ ಥಡಿಯೇ ವೇದ । ಚುಬುಕಳಿಲೇ ಠೇಲೇ ॥ ೭ ॥ ತೇ ತೇ ಪುರುಷ ಹೋತೀ । ಜೇ ಯಾಪರೀ ಲಯಾ ಜಾತೀ । ತರೀ ಪಾರ್ಥಾ ಹೇಚಿ ಸ್ಥಿತಿ । ಏಕ ವೇಳ ಸಾಂಗೇನ ॥ ೮ ॥ ತೇಥ ಅರ್ಜುನೇ ಮ್ಹಣಿತಲೇ ಸ್ವಾಮೀ । ಹೇಚ ಮ್ಹಣಾವಯಾ ಹೋತೋ ಪಾ ಮೀ । ತವ ಸಹಜೇ ಕೃಪಾ ಕೇಲೀ ತುಮ್ಹೀ । ತರೀ ಬೋಲಿಜೋ ಕಾ ॥ ೯ ॥ ಪರೀ

ಬೋಲಾವೇ ತೇ ಅತಿ ಸೋಹೋಪೇ । ತೇಥೇ ಮ್ಹಣಿತಲೇ ತ್ರಿಭುವನ ದೀಪೇ । ತುಜ ಕಾಯ ನೇಣೋ ಸಂಕ್ಷೇಪೇ । ಸಾಂಗೇಕ ಐಕ ॥ ೧೦ ॥ ತರೀ ಮನಾ ಬಾಹೇರಿಲೀ ಕಡೇ । ಯೇಯಾಚೀ ಸಾವಿಯಾ ಸವೇ ಮೋಡೇ । ಹೇ ಹೃದಯಾಚಿಯಾ ಡೋಹೀ ಬುಡೇ । ತೈಸೇ ಕೀಜೇ ॥ ೧೧ ॥

**ಅರ್ಥ—** ಯಾವ ಜ್ಞಾನವು ಸಂಪೂರ್ಣ ಜ್ಞಾನದ ಕಡೆಯದು ಮತ್ತು ಸರ್ವ ಜ್ಞಾನದ ಖಣಿಯು ಆಗಿರುವದು. ಇಂಥ ಬುದ್ಧಿ ಮಾನ ಜ್ಞಾನಿಪುರುಷರು ಸಹ ಯಾವದಕ್ಕೆ ಅಕ್ಷರವೆಂದು ಅಂದಿರುತ್ತಾರೆ. ॥೧೦೦॥ ಪ್ರಚಂಡವಾದ ಗಾಳಿಯಿಂದ ಯಾವದು ಇಲ್ಲದಂತೆ ಆಗುವದಿಲ್ಲವೋ, ಅದು ನಿಜವಾಗಿ ಆಕಾಶವೇ ಆಗಿರಬೇಕು. ಇಲ್ಲದೇ ಅದು ಮೋಡವಾಗಿದ್ದರೆ ಪ್ರಚಂಡವಾದ ಗಾಳಿಯಿಂದ ಹೇಗೆ ತಡೆದೀತು ? ॥ ೧೦೧ ॥ ಆ ಪ್ರಕಾರಾ ಜ್ಞಾನಿಗಳಿಗೆ ಯಾವದು ತಿಳಿದಿರುವದು ಅದು ಜ್ಞಾನದ ಅಳತೆಯಲ್ಲಿ ಬಂದಿರುವದು. ಆದುದರಿಂದ ಅದು ಕ್ಷರ (ನಾಶಿವಂತ) ವಾಗಿರುವದು. ಯಾವದು ತಿಳಿಯಲಿಕ್ಕೆ ಅಶಕ್ಯವಾಗಿರುವದು. ಅದಕ್ಕೆ ಸಹಜವೇ "ಅಕ್ಷರ" (ಅವಿನಾಶಿ) ಹೀಗೆ ಅನ್ನುತ್ತಾರೆ. ॥ ೨ ॥ ಆದುದರಿಂದ ವೇದ ಪಾರಾಂಗತ ಪುರುಷರು ಯಾವದಕ್ಕೆ ಅಕ್ಷರ ( ಬ್ರಹ್ಮ ) ವೆಂದು ಕರೆಯುತ್ತಾರೆ, ಮತ್ತು ಯಾವದು ಮಾಯಾದ ಆಚೆ ಕಡೆಗೆ ಇದ್ದು ಸಚ್ಚಿದಾನಂದರೂಪವಾಗಿರುತ್ತದೆ, ॥ ೩ ॥ ಮತ್ತು ವಿಷಯದ ಅಪೇಕ್ಷೆಯನ್ನು ಬಿಟ್ಟು ಸರ್ವ ಇಂದ್ರಿಯಗಳ ದಮನ ಮಾಡಿ ದೇಹರೂಪಿ ವೃಕ್ಷದ ಕೆಳಗೆ ಉದಾಸೀನ ವೃತ್ತಿಯಿಂದ ಕುಳಿತಿರುವ, ॥ ೪ ॥ ವಿರಕ್ತ ಪುರುಷರು ಸಹಾ ಯಾವಾಗಲೂ ಯಾವದರ ಹಾದಿ ನೋಡುತ್ತಿರುತ್ತಾರೆ, ಮತ್ತು ಅದು ಯಾವಾಗಲೂ ನಿರೀಚ್ಛ ಪುರುಷರಿಗೆ ಪ್ರೀಯವಾಗಿರುತ್ತದೆ. ॥ ೫ ॥ ಯಾವದರ ಪ್ರೇಮದ ದೆಶೆಯಿಂದ ಯೋಗೀ ಜನರು ಬ್ರಹ್ಮಚರ್ಯ ಮುಂತಾದ ಸಂಕಟಗಳನ್ನು ಗಣನೆಗೆ ತರುವದಿಲ್ಲ. ಮತ್ತು ನಿಷ್ಠುರತನದಿಂದ ಇಂದ್ರಿಯಗಳ ನಿಗ್ರಹವನ್ನು ಮಾಡುತ್ತಾರೆ. ॥ ೬ ॥ ಇಂಥ ಯಾವ ದುರ್ಲಭ ಪದದ ಅಂತವು ಹತ್ತುವದಿಲ್ಲವೋ. ವೇದಗಳ ಕಡೆಯಿಂದಲೂ ತಿಳಿಯುವದಾಗುವದಿಲ್ಲವೋ, ಅದು (ಅಗಮ್ಯವಾಗಿರುವದು). ॥ ೧೦೭ ॥ ಆ ಪರಬ್ರಹ್ಮಪದಕ್ಕೆ ನಾನು ಹೇಳಿದಂತೆ ಯಾರು ದೇಹನನ್ನಿಡುತ್ತಾರೆ, ಅವರು ಬ್ರಹ್ಮಸ್ವರೂಪವೇ ಆಗುತ್ತಾರೆ. ಆದುದರಿಂದ ಪಾರ್ಥಾ ! ಅದರ ವಿಷಯವಾಗಿ ಇನ್ನೂ ಒಂದು ವೇಳೆ ನಿನಗೆ ಹೇಳುತ್ತೇನೆ ಕೇಳು. ॥ ೮ ॥ ಆ ವೇಳೆಕ್ಕೆ ಅರ್ಜುನನು ಅನ್ನುತ್ತಾನೆ, ಎಲೈ ಪ್ರಭುವೇ ! ನಾನು ನಿಮಗೆ ಈಗ ಇದನ್ನೇ ಕೇಳಬೇಕೆಂದಿದ್ದೆನು. ಅದನ್ನು ಹೇಳಲು ನೀವೇ ನನ್ನ ಮೇಲೆ ಅನುಗ್ರಹ ಮಾಡಿರುವಿರಿ. ಆದರೆ ಇನ್ನು ಮೇಲೆ ಹೇಳಲಿಕ್ಕೆ ಪ್ರಾರಂಭ ಮಾಡಿರಿ. ॥ ೯ ॥ ಆದರೆ ಏನು ಹೇಳತಕ್ಕದ್ದದೆ. ಅದು ಕೇವಲ ಸುಲಭ ಶೈಲಿಯಿಂದ ಮಾತ್ರ ಹೇಳಬೇಕು. ಆ ವೇಳೆದಲ್ಲಿ ತ್ರಿಭುವನ ಜ್ಯೋತಿಯಾದ ಭಗವಾನ ಶ್ರೀಕೃಷ್ಣನು ಅನ್ನುತ್ತಾನೆ, ನಿನ್ನ (ಮನಸಿನಲ್ಲಿರುವ) ಅಭಿಪ್ರಾಯವು ನಮಗೆ ತಿಳಿಯುವದಿಲ್ಲೇನು ? ನಿನಗೆ ಸಂಕ್ಷೇಪವಾಗಿಯೂ ಸುಲಭವಾಗಿಯೂ, ಹೇಳುತ್ತೇನೆ. ಅದನ್ನು ( ಶ್ರದ್ಧಾಪೂರ್ವಕವಾಗಿ ) ಕೇಳು. ॥ ೧೧೦ ॥ ಆದರೆ ಆ ಮೇಲೆ ನೀನು ಹೊರಗೆ ಓಡ್ಯಾಡುವ ಮನಸಿನ ಸ್ವಭಾವಿಕ ವ್ಯಸನವನ್ನು ಮುರಿದು ಅದು ಹೃದಯದಲ್ಲಿಯೇ ಸ್ಥಿರವಾಗಿ ಇರುವಂತೆ ಮಾಡು. ॥ ೧೧ ॥

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ ॥ ೧೨ ॥**

**[ ಸರ್ವದ್ವಾರಾಣಿ ಸಂಯಮ್ಯೇತಿ ]** ಪರೀ ಹೇ ತರೀಚ ಘಡೇ । ಜರೀ ಸಂಯಮಾಚೀ ಅಖಂಡೇ । ಸರ್ವ ದ್ವಾರೀ ಕವಾಡೇ । ಕಳಾಸತೀ ॥ ೧೨ ॥ ತರೀ ಸಹಜೇ ಮನ ಕೋಂಡಲೇ । ಹೃದಯೀಂಚಿ ಅಸೇಲ ಉಗಲೇ । ಜೈಸೇ ಕರಚರಣೀ ಮೋಡಲೇ । ಪರಿವರ ನ ಸಂಡೀ ॥ ೧೩ ॥ ತೈಸೇ ಚಿತ್ತ ರಾಹಿಲ್ಯಾ ಪಾಂಡವಾ । ಪ್ರಾಣಾಂಚಾ ಪ್ರಣವಚಿ ಕರಾವಾ । ಮಗ ಅನುವೃತ್ತಿ ಪಂಥೇ ಆಣಾವಾ । ಮೂರ್ಧ್ನಿವರೀ ॥ ೧೪ ॥ ತೇಥ ಆಕಾಶೀ ಮಿಳೇ ನ ಮಿಳೇ । ತೈಸಾ ಧರಾವಾ

ಧಾರಣಾ ಬಳೇ । ಜವ ಮಾತ್ರಾತ್ರಯ ಮಾವಳೇ । ಅರ್ಧ ಬಿಂಬೀ ॥ ೧೫ ॥ ತವವರೀ ತೋ ಸಮೀರೂ ।
ನಿರಾಳೀ ಕೀಜೇ ಸ್ಥಿರೂ । ಮಗ ಲಗ್ನೀ ಜೇವೀ ಓಂಕಾರೂ । ಬಿಂಬೀಚಿ ವಿಲಸೇ ॥ ೧೬ ॥

**ಅರ್ಥ—** ಆದರೆ ಯಾವ ವೇಳೆಕ್ಕೆ ಇಂದ್ರಿಯಗಳ ದ್ವಾರಗಳು ನಿಗ್ರಹದಿಂದ ಮುಚ್ಚಿ ಹೋಗುತ್ತವೆ, ಆಗ್ಗೆ ಮಾತ್ರ ಈ ಮಾತು ಸಾಧ್ಯವಾಗುತ್ತದೆ. ॥ ೧೨ ॥ ಹೀಗೆ ಆಗುವದರಿಂದ ಸಹಜವೇ ಮನಸು ಪ್ರತಿಬಂಧ ವಾಗಿ ಹೃದಯದಲ್ಲಿಯೇ ಸ್ವಸ್ಥವಾಗಿ ಸ್ಥಿರವಾಗಿ ನಿಲ್ಲುತ್ತದೆ. ಯಾವ ಪ್ರಕಾರಾ ಕೈ ಕಾಲುಗಳು ಮುರಿದಂಥ ಮನುಷ್ಯನು ತನ್ನ ಮನೆಯನ್ನು ಬಿಟ್ಟು ಎಲ್ಲಿಯೂ ಹೋಗುವದಿಲ್ಲವೋ, ॥ ೧೩ ॥ ಅದೇ ಪ್ರಕಾರಾ ಅರ್ಜುನಾ! ಚಿತ್ತದಲ್ಲಿ ( ಅಕಸ್ಮಾತ್ ) ಸ್ಥಿರತೆಯು ಉಂಟಾದ ಮೇಲೆ ಪ್ರಾಣಾಯಾಮದಿಂದ ಓಂಕಾರದ ಧ್ಯಾನವನ್ನು ಮಾಡಬೇಕು ಆಮೇಲೆ ಪ್ರಾಣವಾಯುವನ್ನು ಕ್ರಮ ಕ್ರಮದಿಂದ ಬ್ರಹ್ಮರಂಧ್ರದ ವರೆಗೆ ಒಯ್ಯಬೇಕು. ॥ ೧೪ ॥ ಆ ಮೇಲೆ ಆಕಾರ, ಉಕಾರ, ಮಕಾರ, ಈ ತ್ರಯಿ ಅರ್ಧ ಮಾತ್ರೆಯಲ್ಲಿ ಕೂಡುವವರೆಗೆ ಧಾರಣಾ ಶಕ್ತಿಯ ಬಲದಿಂದ ಪ್ರಾಣವು ಬ್ರಹ್ಮಾಕಾಶದಲ್ಲಿ ಕೂಡುತ್ತದೆ. ಅರ್ಥಾತ್ ಇನ್ನೂ ಕೂಡಬೇಕೆಂಬುವಷ್ಟರಲ್ಲಿ ಸಾಧಿಸಿ ಆ ವಾಯುವಿನನ್ನು ಇಂಥ ಯುಕ್ತಿಯಿಂದ ಹಿಡಿಯಬೇಕು. ॥ ೧೫ ॥ ಅಲ್ಲೀವರೆಗೆ ಆ ವಾಯು ಮಸ್ತಕಾಕಾಶ ದಲ್ಲಿ ಸ್ಥಿರಪಡಿಸಬೇಕು. ಆ ಮೇಲೆ ಓಂಕಾರದ ಮತ್ತು ಅದರ ಸಂಯೋಗವು ಆದ ಮೇಲೆ ಮೂಲ ಸ್ವರೂಪ ವಾದ ಯಾವ ಬ್ರಹ್ಮವು ಅದರಲ್ಲಿ ಅದು ( ಪ್ರಾಣವು ) ರಮಮಾಣವಾಗುತ್ತದೆ. (ಲಯಹೊಂದುತ್ತದೆ) ॥ ೧೬॥

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್‌ದೇಹಂ ಸ ಯಾತಿ ಪರಮಾಂ ಗತಿಂ ॥ ೧೩ ॥**

**[ ಓಮಿತಿ ]** ತೈಸೇ ಓಮ್ ಹೇ ಸ್ಮರೋ ಸರೇ । ಆಣಿ ತೇಥೇಂಚಿ ಪ್ರಾಣ ಪುರೇ । ಮಗ ಪ್ರಣವಾತೀತ ಉರೇ । ಪೂರ್ಣಘನ ಜೇ ॥ ೧೭ ॥ ಮ್ಹಣೋನಿ ಪ್ರಣವೈಕ ನಾಮ । ಹೇ ಏಕಾಕ್ಷರ ಬ್ರಹ್ಮ । ಜೋ ಮಾಝೇ ಸ್ವರೂಪ ಪರಮ । ಸ್ಮರತ ಸಾಂತಾ ॥ ೧೮ ॥ ಯಾ ಪರೀ ತ್ಯಜೀ ದೇಹಾತೇ । ತೋ ತ್ರಿಶುದ್ಧೀ ಪಾವೇ ಮಾತೇ । ಯಯಾ ಪಾವಣಿಯಾ ಪರೌತೇ । ಆಣಿಕ ಪಾವಣೇ ನಾಹೀ ॥ ೧೯ ॥ ತೇಥ ಅರ್ಜುನಾ ಜರೀ ವಿಪಾಯೇ । ತುಝ್ಯಾ ಜೀವೀ ಹನ ಐಸೇ ಜಾಯೇ ॥ ನಾಹೇ ಸ್ಮರಣ ಮಗ ಹೋಯೇ । ಕಾಯಸಯಾವರೀ ಅಂತೀ ॥ ೧೨೦ ॥ ಇಂದ್ರಿಯಾ ಅನಘಡ ಪಡಿಲಿಯಾ । ಜೀವಿತಾಚೇ ಸುಖ ಬುಡಾಲಿಯಾ । ಅಂತ ಬಾಹೇರೀ ಉಘುಡಲಿಯಾ । ಮೃತ್ಯು ಚಿನ್ಹೇ ॥ ೨೧ ॥ ತೇ ವೇಳೀ ಬೈಸಾವೇಚಿ ಕವಣೇ । ಮಗ ಕವಣ ನಿರೋಧೀ ಕರಣೇ । ತೇಥ ಕಾಹ್ಯಾ ಚೇನಿ ಅಂತಃಕರಣೇ । ಪ್ರಣವ ಸ್ಮರಾವಾ ॥ ೨೨ ॥ ತರೀಗಾ ಐಸಿಯಾ ಹೋ ಧ್ವನೀ । ಝಣೇ ಥಾರಾ ದೇಶೀ ಗಾ ಮನೀ । ಪೈ ನಿತ್ಯ ಸೇವಿಲಾ ಮೀ ನಿದಾನೀ ಸೇವಕ ಹೋಯ ॥ ೨೩ ॥

**ಅರ್ಥ—** ಅದರ ಸಂಗಡವೇ ಓಂಕಾರದ ಸ್ಮರಣವು ಬಂದಬೀಳುತ್ತದೆ. ಅದೇ ಕಾಲಕ್ಕೆ ಪ್ರಾಣದ ಅಂತ್ಯವು ಆಗುತ್ತದೆ. ಓಂಕಾರದ ಆಚೆಕಡೆಗೆ ಇರುವ ಯಾವ ಬ್ರಹ್ಮಾನಂದಸ್ವರೂಪವು ಅದೇ ಕಟ್ಟಕಡೆಗೆ ಉಳಿಯುತ್ತದೆ. ॥ ೧೭ ॥ ಆದುದರಿಂದ ಯಾವದಕ್ಕೆ "ಪ್ರಣವ"ವೆಂದೆನ್ನುತ್ತಾರೆ. ಮತ್ತು ಯಾವದು ಏಕಾಕ್ಷರ ಬ್ರಹ್ಮವಿರುತ್ತದೆ, ಆ ನನ್ನ ಪರಮಸ್ವರೂಪದ ಸ್ಮರಣಮಾಡುತ್ತಿರಲಾಗಿ, ॥ ೧೮ ॥ ಯಾವನು ಇಂಥ ಸ್ಥಿತಿಯಲ್ಲಿಯೇ ದೇಹತ್ಯಾಗ ಮಾಡುವನು, ಅವನು ನಿಶ್ಚಯದಿಂದ ನನ್ನಲ್ಲಿ ಬಂದು ಸೇರುತ್ತಾನೆ. ಕಾರಣವೇನಂದರೆ ಅವನಿಗೆ ನನ್ನ ಪ್ರಾಪ್ತಿಯ ಹೊರ್ತು ಅನ್ಯ ಯಾವ ಶ್ರೇಷ್ಠವಾದ ಗತಿಯೇ ಇರುವದಿಲ್ಲ. ॥ ೧೯ ॥ ಅರ್ಜುನನೇ! ನಿನ್ನ ಮನಸಿನಲ್ಲಿ ಒಂದು ವೇಳೆ ಹೀಗೆ ಸಂಶಯ ಬರಬಹುದು. ಮರಣಸಮಯದಲ್ಲಿ ನನ್ನ ಸ್ಮರಣವು ಹೇಗೆ ಆಗಬೇಕು ? ( ಅದು ಸಾಧ್ಯವೇ

ಇರುವದಿಲ್ಲ! ವೆಂದು ಅನಬಹುದು.) ॥ ೧೨೦ ॥ ಜೀವಿತದ ಸುಖವು ಇಲ್ಲದಂತಾಗಿ ಮತ್ತು ಇಂದ್ರಿಯಗಳು ಸಂಕಟದಲ್ಲಿ ಬಿದ್ದಿರಲು, ಅಂತರ್ಯಾಮಿ ಮತ್ತು ಹೊರಗೆ ಮೃತ್ಯುವಿನ ಲಕ್ಷಣಗಳು ಪ್ರತ್ಯಕ್ಷ ಸ್ಪಷ್ಟವಾಗಿ ಕಾಣಲಿಕ್ಕೆ ಹತ್ತಿದ ಮೇಲೆ, ॥ ೧೨೧ ॥ ಆ ವೇಳೆದಲ್ಲಿ ಎದ್ದು ಕೂತುಕೊಳ್ಳಲಿಕ್ಕಾದರೂ, ಹೇಗೆ ಸಾಧ್ಯವಾದೀತು? ಆಗ್ಗೆ ಇಂದ್ರಿಯಗಳ ಸಂಯಮನಮಾಡುವ ಬಗೆ ಹೇಗೆ? ಈ ಮಾತು ಯಾರಿಂದ ಸಾಧ್ಯವಾದೀತು? (ಅಂಥ ಕಠಿಣ ಕಾಲದಲ್ಲಿ.) ಅಂತಃಕರಣಪೂರ್ವಕವಾಗಿ ಓಂಕಾರದ (ಮೂಲ ಪರಬ್ರಹ್ಮ ಶ್ರೀಪಾಂಡುರಂಗನ) ಸ್ಮರಣಮಾಡುವ ದಾದರೂ ಯಾರಿಂದ ಹೇಗೆ ಸಾಧಿಸೀತು? (ಅಸಾಧ್ಯವೇ ಸರಿ.) ॥ ೨೨ ॥ ಆದರೆ ಅಪ್ಪಾ ಅರ್ಜುನನೇ! ಇಂಥ ಸಂಶಯವನ್ನು ನಿನ್ನ ಅಂತಃಕರಣದಲ್ಲಿ ಪ್ರವೇಶಮಾಡಗೊಡಬೇಡ ಕಂಡಿಯಾ! ಹೀಗೆ ನೋಡು, ನನ್ನ ಸೇವೆಯನ್ನು ನಿತ್ಯ (ಭಕ್ತಿಪೂರ್ವಕವಾಗಿ) ಯಾರು ಮಾಡುವರೋ, ಅವರ ಮರಣಸಮಯದಲ್ಲಿ ನಾನು ಅವರ ದಾಸನಾಗಿ (ಅವರ ಸೇವೆಯಲ್ಲಿ ನಿರತನಾಗಿ)ರುತ್ತೇನೆ. ॥ ೨೩ ॥

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**
**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

**[ಅನನ್ಯಚೇತಾ ಇತಿ]** ಜೇ ವಿಷಯಾಸಿ ತಿಳಾಂಜಳೀ ದೇವುನೀ । ಪ್ರವೃತ್ತಿವರೀ ನಿಗಡವಾವುನೀ । ಮಾತೇ ಹೃದಯೀ ಸುನೀ । ಭೋಗಿತಾತೀ ॥ ೨೪ ॥ ಪರಿ ಭೋಗಿತಯಾ ನಾರಾಣುಕಾ । ಭೇಟಣೇ ನಾಹೀ ಕ್ಷುಧಾದಿಕಾ । ತೇಥ ಚಕ್ಷುರಾದಿರಂಕಾ । ಕವಣ ಪಾಡ ॥ ೨೫ ॥ ಐಸೇ ನಿರಂತರ ಏಕವಟಲೇ । ಜೇ ಅಂತಃಕರಣೀ ಮಜಶೀ ಲಿಗಟಲೇ । ಮೀಚಿ ಹೋವೂನಿ ಆಂತಲೇ । ಉಪಾಸಿತೀ ॥ ೨೬ ॥ ತಯಾ ದೇಹಾವಸಾನ ಜೈ ಪಾವೇ । ತೈ ತಿಹೀ ಮಾತೇ ಸ್ಮರಾವೇ । ಮಗ ಮ್ಯಾ ಜರೀ ನ ಪಾವಾವೇ । ತರೀ ಉಪಾಸ್ತಿ ತೇ ಕಾಯಸೀ ॥ ೨೭ ॥ ಪೈರಂಕ ಏಕ ಆಡಲೇಪಣೀ । ಕಾಕುಳತೀ ಧಾವ ಗಾ ಧಾವ ಮ್ಹಣೇ। ತರೀ ತಯಾಚಿಯೇ ಗ್ಲಾನೀ ಧಾವಣೇ । ಕಾಯ ನ ಘಡೇ ಮಜ ॥ ೨೮ ॥ ಆಣಿ ಭಕ್ತಾಹೀ ತೇಚಿ ದಶಾ। ತರೀ ಭಕ್ತೀಚಾ ಸೋಸ ಕಾಯಸಾ । ಮ್ಹಣವೂನಿ ಹಾ ಧ್ವನೀ ಐಸಾ । ನ ವಾಖಾಣಾವಾ ॥ ೨೯ ॥ ತಿಹೀ ಜೇ ವೇಳೀ ಮೀ ಸ್ಮರಾವಾ । ತೇ ವೇಳೀ ಸ್ಮರಿಲಾ ಕೀ ಪಾವಾವಾ । ತೋ ಆಭಾರಹೀ ಜೀವಾ । ಸಾಹವೇಚಿ ನಾ ॥ ೧೩೦ ॥ ತೇ ರುಣವೈಪಣ ದೇಖೋನಿ ಆಂಗೀ । ಮೀ ಆಪುಲಿಯಾಚಿ ಉತ್ತೀರ್ಣ ತ್ವಾ ಲಾಗೀ । ಭಕ್ತಾಚಿಯಾ ತನುತ್ಯಾಗೀ । ಪರಿ ಚರ್ಯಾ ಕರೀ ॥ ೩೧ ॥ ದೇಹವೈಕಲ್ಯಾಚಾ ವಾರಾ । ಝುಣೇ ಲಾಗೇಲ ಯಾ ಸುಕುಮಾರಾ । ಮ್ಹಣೋನಿ ಆತ್ಮಬೋಧಾಚೀ ಪಾಂಜಿರಾ । ಸುಯೇ ತಯಾತೇ ॥ ೩೨ ॥ ವರೀ ಆಪುಲಿಯಾ ಸ್ಮರಣಾಚೀ ಉಮಾಇಲೀ । ಹೀವ ಐಸೀ ಕರೀ ಸಾವುಲೀ । ಐಸೇನಿ ನಿತ್ಯ ಬುದ್ಧಿ ಸಂಚಲೀ । ಮೀ ಆಣೀ ತಯಾತೇ ॥ ೩೩ ॥ ಮ್ಹಣೋನಿ ದೇಹಾಂತೀಚೇ ಸಾಂಕಡೇ । ಮಾಝಿಯಾ ಕಾಹೀಚಿ ನ ಪಡೇ । ಮೀ ಆಪುಲಿಯಾಂತೇ ಆಪುಲೀಕಡೇ । ಸುಖೇಂಚೀ ಆಣೀ ॥ ೩೪ ॥ ವರಚೀಲ ದೇಹಾಚೀ ಗವಸಣೀ ಫೇಡುನೀ । ಆಹಾಚ ಅಹಂಕಾರಾಚೇ ರಜ ಝಾಡುನೀ।ಶುದ್ಧ ವಾಸನಾ ನಿವಡುನೀ । ಆಪಣಪಾ ಮೇಳವೀ ॥ ೩೫ ॥ ಆಣಿ ಭಕ್ತ ತರೀ ದೇಹೀ । ವಿಶೇಷ ಏಕವಂಕೀಚಾ ಠಾವ ನಾಹೀ । ಮ್ಹಣವೂನಿ ಅವ್ಹೇರ ಕರಿತಾ ಕಾಹೀ । ವಿಯೋಗ ಐಸಾ ನ ವಾಟೇ ॥ ೩೬ ॥ ನಾ ತರೀ ದೇಹಾಂತೀಚಿ ಮಿಯಾ ಯಾವೇ । ಮಗ ಆಪಣಪೇ ಯಾತೇ ನ್ಯಾವೇ । ಹೇಹೀ ನಾಹೀ ಜೇ ಸ್ವಭಾವೇ। ಜೇ ಆಧೀಂಚಿ ಮಜ ಮಿನಲೇ ॥ ೩೭ ॥ ಯೇರೀ ಶರೀರಾಚಿಯಾ ಸಲಿಲೀ । ಅಸತೇಪಣ ಹೇಚಿ ಸಾವುಲೀ । ವಾಚೂನಿ ಚಂದ್ರಿಕಾ ತೇ ಠೇಲೀ । ಚಂದ್ರೀಚ ಆಹೇ ॥ ೩೮ ॥ ಐಸೇ ಜೇ ನಿತ್ಯಯುಕ್ತ ।

ತಯಾಸಿ ಸುಲಭ ಮೀ ಸತತ । ಮ್ಹಣವೂನಿ ದೇಹಾಂತೀ ನಿಶ್ಚಿತ । ಮೀಚಿ ಹೋತೀ ॥ ೩೯ ॥ ಮಗ ಕ್ಲೇಶ ತರೂಚೀ ವಾಡೀ । ಜೇ ತಾಪತ್ರಯಾಗ್ನೀಚೀ ಸಗಡೀ । ಜೇ ಮೃತ್ಯುಕಾಕಾಸಿ ಕುರೋಂಡೀ । ಸಾಂಡಿಲೀ ಆಹೇ ॥ ೧೪೦ ॥ ಜೇ ದೈನ್ಯಾಚೇ ದುಭತೇ । ಜೇ ಮಹಾಭಯಾತೇ ವಾಢವಿತೇ । ಜೇ ಸಕಳ ದುಃಖಾಚೇ ಪುರತೇ । ಭಾಂಡವಲ ॥ ೪೧ ॥ ಜೇ ದುರ್ಮತೀಚೇ ಮೂಳ । ಜೇ ಕುಕರ್ಮಾಚೇ ಫಳ । ಜೇ ವ್ಯಾಮೋಹಾಚೇ ಕೇವಳ । ಸ್ವರೂಪಚಿ ॥ ೪೨ ॥ ಜೇ ಸಂಸಾರಾಚೇ ಬೈಸಣೇ । ಜೇ ವಿಕಾರಾಚೇ ಉದ್ಯಾನೇ । ಜೇ ಸಕಳ ರೋಗಾಂಚೇ ಭಾಣೇ । ವಾಢಿಲೇ ಆಹೇ ॥ ೪೩ ॥ ಜೇ ಕಾಳಾಚಾ ಖಿಚ ಉಶಿಟಾ । ಜೇ ಆಶೇಚಾ ಆಂಗವಟಾ । ಜನ್ಮಮರಣಾಚಾ ವೋಲಿವಟಾ । ಸ್ವಭಾವೇ ಜೇ ॥ ೪೪ ॥ ಜೇ ಭುಲೀಚೇ ಭರಿವ । ಜೇ ವಿಕಲ್ಪಾಚೇ ವೋತಿವ । ಕಿಂಬಹುನಾ ಪೇವ । ವಿಂಚುವಾಂಚೇ ॥ ೪೫ ॥ ಜೇ ವ್ಯಾಘ್ರಾಚೇ ಕ್ಷೇತ್ರ । ಜೇ ಪಣ್ಯಾಂಗನಾಚೇ ಮಿತ್ರ । ಜೇ ವಿಷಯವಿಜ್ಞಾನಯಂತ್ರ । ಸುಪೂಜಿತ ॥ ೪೬ ॥ ಜೇ ಲಾವೇಚಾ ಕಳವಳಾ । ನಿವಾಲಿಯಾ ವಿಷೋದಕಾಚಾ ಗಳಾಳಾ । ಜೇ ವಿಶ್ವಾಸು ಆಂಗವಳಾ । ಸಂವಚೋರಾಚಾ ॥ ೪೭ ॥ ಜೇ ಕೋಢಿಯಾಚೇ ಖೇವ । ಜೇ ಕಾಳಸರ್ಪಾಚಾ ಮಾರ್ದವ । ಗೋರಿಯೇಚೇ ಸ್ವಭಾವ । ಗಾಯನ ಜೇ ॥ ೪೮ ॥ ಜೇ ವೈರಿಯಾಚಾ ಪಾಹುಣೇರ । ಜೇ ದುರ್ಜನಾಚಾ ಆದರ । ಹೇ ಅಸೋ ಜೇ ಸಾಗರ । ಅನರ್ಥಾಚಾ ॥ ೪೯ ॥ ಜೇ ಸ್ವಪ್ನೀ ದೇಖಿಲೇ ಸ್ವಪ್ನ । ಜೇ ಮೃಗಜಳೇ ಸಾಸಿನ್ನಲೇ ವನ । ಜೇಧೂಮ್ರರಜಾಚೇ ಗಗನ । ಓತಲೇ ಆಹೇ ॥ ೫೦ ॥ ಐಸೇ ಜೇ ಹೇ ಶರೀರ । ತೇ ತೇ ನ ಪವತೀಚಿ ಪುಢತೀ ಸರ । ಜೇ ಹೋವೂನಿ ಠೇಲೆ ಅಪಾರ । ಸ್ವರೂಪ ಮಾಝೇ ॥ ೫೧ ॥

**ಅರ್ಥ**— ಯಾವನು ವಿಷಯಸುಖಕ್ಕೆ ತಿಲಾಂಜಲಿಯನ್ನಿತ್ತು ವಿಷಯ ಸಂಗತಿಯಿಂದ ಉಂಟಾಗುವ ಎಲ್ಲ ಮನೋಬಯಕೆಗಳನ್ನು ಆವರಿಸಿ ಪ್ರತಿಬಂದಿಸಿ ನನ್ನನ್ನು ತನ್ನ ಹೃದಯದಲ್ಲಿಟ್ಟುಕೊಂಡು ಆ ಸುಖದ ಉಪಭೋಗವನ್ನು ತೆಗಿದುಕೊಳ್ಳುತ್ತಾನೆ. ಅವನಿಗೆ ಆ ಶಾಂತಿ ಸಮಾಧಿ ಸುಖದಲ್ಲಿ ಕ್ಷುಧಾ, ತೃಷಾ, ಮುಂತಾದವುಗಳ ಸ್ಮರಣವು ಸಹಾ ಉಳಿಯುವದಿಲ್ಲ. ಅಂದಬಳಿಕ ಯಃಕಚ್ಚಿತ ಆ ಬಡ ನೇತ್ರಗಳು ಮುಂತಾದವುಗಳ ಪಾಡೇನು ? ॥ ೨೫ ॥ ಈ ರೀತಿಯಿಂದ ನಿರಂತರ ನನ್ನ ಅನನ್ಯ ಭಕ್ತರಾಗಿ ತಮ್ಮ ಅಂತಃಕರಣದಲ್ಲಿ ಸದಾ ನನ್ನ ಚಿಂತನ ಒಂದನ್ನೇ ನೆಲೆಗೊಳಿಸಿ ಅದರಲ್ಲಿಯೇ ತಲ್ಲೀನರಾಗಿ, ಅವರು ಮದ್ರೂಪವಾಗಿಯೂ ಯಾರು ನನ್ನ ಸೇವಾ ಮಾಡುತ್ತಾರೋ, ॥ ೨೬ ॥ ಆ ನನ್ನ ಭಕ್ತರಿಗೆ ಯಾವಾಗ್ಗೆ ಅಂತ್ಯಕಾಲ ಸಮಿಾಪಬರುವದೋ, ಆಗ್ಗೆ ಅವರು ನನ್ನ ಸ್ಮರಣ ಮಾಡುತ್ತಿರಲಿಕ್ಕಾಗಿ ನಾನು ಒಂದು ವೇಳೆ ಅವರ ಸಂಕಟ ಸಮಯಕ್ಕೆ ಒದಗದಿದ್ದರೆ ಅವರು ನನ್ನ ಭಕ್ತಿಯನ್ನು ಏಕೆ ಮಾಡಬೇಕು ! ಮತ್ತು ಅವರು ಮಾಡಿದ ಭಕ್ತಿಯ ಮಹತ್ವವೇನು ? ॥ ೧೨೭ ॥ ಹಾಗಾದರೂ ಯಾಕೆ, ಒಬ್ಬಾನೊಬ್ಬ ದರಿದ್ರನು (ಅಭಕ್ತನು) ಅನಾಥನಾಗಿ ಸಂಕಟಪಡುವ ಸಮಯದಲ್ಲಿ ಬಹಳೇ ದೀನವಾಣಿಯಿಂದ ದೇವಾ ಓಡಿಬಾ ( ಅಂತ್ಯಕಾಲದ ಈ ಸಂಕಟದಲ್ಲಿಂದ ನನ್ನನ್ನು ಮುಕ್ತನನ್ನಾಗಿ ಮಾಡು.) ಎಂದು ಕೂಗಿಕೊಂಡ ಕೂಡಲೆ ಅವನ ದುಃಖನಿವಾರಣೆ ಮಾಡುವದಕ್ಕಾಗಿ ಅವನ ಹತ್ತರ ನಾನು ಅವಶ್ಯವಾಗಿ ಹೋಗಬೇಕಾಗಿರುವದಿಲ್ಲೇನು ? ॥ ೨೮ ॥ ಮತ್ತು ನನ್ನ ಭಕ್ತರಿಗಾದರೂ ಅದೇ ಅವಸ್ಥೆಯು ಪ್ರಾಪ್ತವಾದರೆ, ಭಕ್ತಿಯ ಅಪೇಕ್ಷೆಯನ್ನಾದರೂ ಏಕೆ ಮಾಡಬೇಕು ? ಕಾರಣ ಭಕ್ತರು ಇಂಥ ಸಂಶಯವನ್ನು ಎಂದಿಗೂ ತಮ್ಮ ಮನಸಿನಲ್ಲಿ ತರಬಾರದು. ॥ ೨೯ ॥ ಅವರು ಯಾವ ವೇಳೆಗೆ ನನ್ನ ಸ್ಮರಣಮಾಡುತ್ತಾರೋ, ಅದೇ ವೇಳೈಕ್ಕೆ ಅವರ ಆ ಸ್ಮರಣಕ್ಕೆ ನಾನು ನಿಶ್ಚಯವಾಗಿ ಒದಗುತ್ತೇನೆ. ಅವರ ಉಪಕಾರದ ಭಾರವು ನನ್ನ ಜೀವಕ್ಕೆ ಸ್ವಲ್ಪವಾದರೂ ಸಹನವಾಗುವದಿಲ್ಲ. ॥ ೩೦ ॥ ಆ ಸಾಲದ ಭಾರವನ್ನು (ನನ್ನ ಭಕ್ತರು) ನನ್ನ ತಲೆಯಮೇಲೆ ಹೊರಿಸಿರುತ್ತಾರೆಂದು ತಿಳಿದು, ಅವರ ಋಣದಿಂದ ಮುಕ್ತನಾಗುವದಕ್ಕಾಗಿ ನಾನು ಪರಾಧೀನನಂತೆ ಭಕ್ತರಿಗೆ ಅಡಿಯಾಳಾಗಿ ಭಕ್ತರ ಮರಣ ಕಾಲಕ್ಕೆ ನಾನು ಅವರ ಹತ್ತರದಲ್ಲಿಯೇ ಕುಳಿತು ಅವರ ಸೇವೆಯನ್ನು ಮಾಡುತ್ತೇನೆ. ॥ ೩೧ ॥ ಆ

ನನ್ನ ಪ್ರೀತಿಯ ಸುಕುಮಾರ ಭಕ್ತರಿಗೆ ದೇಹಪತನವಾಗುವ ಕಾಲಕ್ಕೆ ಆಗುವ ಸಂಕಟವೂ ಮರಣಭಯವೂ, ಆಗ ಬಾರದೆಂದು ನಾನು ಅವರಿಗೆ ಆತ್ಮಬೋಧದ ಕವಚವನ್ನು ಹಾಕಿ ಅದರಲ್ಲಿ ಇಡುತ್ತೇನೆ ॥ ೩೨ ॥ ಇದರ ಹೊರತು ಆ ಕವಚದ ಪಿಂಜರದಲ್ಲಿ ನನ್ನ ಸ್ಮರಣದ ಅಲ್ಹಾದಕಾರಕ ಶೀತಲವಾದ ಗಾರ ನೆರಳನ್ನು ಕೆಡವುತ್ತೇನೆ. ಹೀಗೆ ಆಗು ವದರಿಂದ ಅವರ ಬುದ್ಧಿಯು ಯಾವಾಗಲೂ ನನ್ನ ಸ್ಮರಣದಲ್ಲಿ ಸ್ಥಿರವಾಗಿ ಉಳಿಯುತ್ತದೆ. ಅವರಿಗೆ ನಾನು ನನ್ನ ಸ್ವರೂಪ ( ಸಾಯುಜ್ಯ ) ಮುಕ್ತಿಯನ್ನು ಕೊಡುತ್ತೇನೆ. ॥ ೩೩ ॥ ಆದುದರಿಂದ ದೇಹದ ಅಂತ್ಯಕಾಲದ ದುಃಖವು ನನ್ನ ಭಕ್ತರಿಗೆ ಎಂದಿಗೂ ಆಗುವದಿಲ್ಲ. ಮತ್ತು ಯಾವನು ನನ್ನ ಭಕ್ತನಿರುವನು ಅವನಿಗೆ ನಾನು ಸುಖದಿಂದ ನನ್ನ ( ಮೋಕ್ಷ ) ಸ್ಥಾನದ ಕಡೆಗೆ ತರುತ್ತೇನೆ ॥ ೩೪ ॥ ಆತ್ಮದ ಮೇಲಿನ ದೇಹರೂಪಿ ಗವಸಣಿಕೆಯನ್ನು ತೆಗಿದು ಅಹಂ ಕಾರದ ಧೂಳಿಯನ್ನು ಝಾಡಿಸಿ, ( ನಿರ್ಮಲಮಾಡಿ ) ಕೇವಲ ಭಗವತ್ ಪ್ರಾಪ್ತಿಯ ವಾಸನೆಯಿಂದ ಅವನನ್ನು ಮದ್ರೂಪನನ್ನಾಗಿ ಮಾಡುತ್ತೇನೆ. ॥ ೩೫ ॥ ಮತ್ತು ಭಕ್ತರಿಗಾದರೂ ( ಅನಿತ್ಯವಾದ ) ದೇಹದ ಸ್ಥಳದಲ್ಲಿ ಆಸಕ್ತಿ ( ಪ್ರೇಮವು ) ಇಲ್ಲದೇ ಇದ್ದದರಿಂದ ದೇಹತ್ಯಾಗವಾಗುವಾಗ್ಗೆ, ದೇಹವು ತಮ್ಮಿಂದ ವಿಯೋಗವಾಗುವದೆಂದು ಅವರಿಗೆ ದುಃಖವೆನಿಸುವದಿಲ್ಲ. ॥ ೩೬ ॥ ಕಾರಣ ದೇಹದ ಅಂತ್ಯಕಾಲ ಸಮಯದಲ್ಲಿ ಭಗವಂತನು ( ನಾನು ) ಬರಬೇಕು ಅವನು ತನ್ನ ಹತ್ತರ ಕರದೊಯ್ಯಬೇಕು ಎಂಬುವದಾದರೂ ಅವರ ಮನಸಿನಲ್ಲಿ ಬರುವದಿಲ್ಲ. ಯಾಕಂದರೆ ಅವರು ಪೂರ್ವದಲ್ಲಿಯೇ ನನ್ನನ್ನು ಕೂಡಿಕೊಂಡಿರುತ್ತಾರೆ. ॥ ೩೭ ॥ ಸಹಜನೇ ಅವರ ಶರೀರರೂಪಿ ನೀರಿನಲ್ಲಿ ಆತ್ಮಾ ಅದೆ ಎಂಬುವದು ಕಾಣುತ್ತಿರುವದೇನೋ ನಿಜ. ಆದರೆ ಅದು ಪ್ರತಿಬಿಂಬದಂತೆ ಮಿಥ್ಯವಾದದ್ದಿರುತ್ತದೆಂಬ ಭಾವನೆಯು ಅವ ರಲ್ಲಿರುತ್ತದೆ. ಯಾವ ಪ್ರಕಾರಾ ಬೆಳದಿಂಗಳು ಹೊರಗೆ ವಿಸ್ತಾರವಾದದ್ದು ಕಣ್ಣಿಗೆ ಕಾಣುತ್ತದೆ, ಆದರೂ ನಿಜವಾಗಿ ನೋಡಿದರೆ ಚಂದ್ರನ ಸ್ಥಳದಲ್ಲಿಯೇ ಅದು ಇರುತ್ತದೆ. ॥ ೩೮ ॥ ಈ ತರದ ಬೋಧದಿಂದ ನನ್ನ ಸಂಗಡ ಯಾರು ಐಕ್ಯ ಹೊಂದಿರುತ್ತಾರೆ, ಅವರಿಗೆ ನಾನು ಯಾವಾಗಲೂ ಹತ್ತರವೇ ಇದ್ದೇನೆ. ಆದುದರಿಂದ ಅವರು ಮರಣದನಂತರ ನಿಶ್ಚಯದಿಂದ ನಂನನ್ನೇ ಆಶ್ರಯಿಸುತ್ತಾರೆ. ॥ ೩೯ ॥ ಆಮೇಲೆ ಯಾವ ಶರೀರವು ಕ್ಲೇಶರೂಪಿ ವೃಕ್ಷಗಳಿಂದ ಕೂಡಿದ ವನವು, ಮತ್ತು ಅಧ್ಯಾತ್ಮ ಮುಂತಾದ ತ್ರಿವಿಧ ತಾಪತ್ರಯರೂಪಿ ಅಗ್ನಿಯ ( ಉರಿಯುವ ) ಅಗಿಷ್ಟಿಗೆಯು, ಮತ್ತು ಮೃತ್ಯುರೂಪಿ ಕಾಗೆಗೆ ನಿವಾಳಿ ಮಾಡಿ ಒಗೆದ ( ಕಾಕ ) ಬಲಿಯು, ॥ ೧೪೦ ॥ ದೀನತ್ವವನ್ನು ಹುಟ್ಟಿಸುವಂಥದು ಮತ್ತು ಮೃತ್ಯುವಿನ ಭಯವನ್ನು ಬೆಳೆಸುವಂಥದು ಮತ್ತು ಸರ್ವ ದುಃಖದ ಪೂರ್ಣ ಭಾಂಡವಲವು ಇರುತ್ತದೆ. ॥೧೪೧॥ ಯಾವದು ದುಷ್ಟ ಬುದ್ಧಿಯ ಉತ್ಪತ್ತಿಸ್ಥಾನವು, ಮತ್ತು ಕೆಟ್ಟ ಬುದ್ಧಿಯ ಮೂಲವು, ಪೂರ್ವ ಜನ್ಮದ ಕೆಟ್ಟ ಕರ್ಮದ ಫಲವು, ಮತ್ತು ಅವಿವೇಕದ ( ಭ್ರಾಂತಿಯ ) ಕೇವಲ ಮೂರ್ತಿಮಂತ ಸ್ವರೂಪವು ಅದೆ. ॥ ೧೪೨ ॥ ಸಂಸಾರ ಸ್ಥಾಪನಾ ಮಾಡುವ ಸ್ಥಳವು ಮತ್ತು ಅಹಂಕಾರಮುಂತಾದ ವಿಕಾರರೂಪಿ ವೃಕ್ಷದ ವನವು, ಮತ್ತು ಸರ್ವ ರೋಗಗ ಳನ್ನು ಉಣ ಬಡಿಸಲಿಕ್ಕೆ ಇಟ್ಟ ಪಾತ್ರೆಯೇ ಆಗಿರುವದು. ॥ ೧೪೩ ॥ ಯಾವದು ಮೃತ್ಯುರೂಪಿ ಕಾಲನು ತಿಂದು ಉಳಿದ ( ಯಂಜಲ ) ಕಿಚಡಿಯು ಅದೆ. ಮತ್ತು ಯಾವದು ಮೂರ್ತಿಮಂತ ಆಶಾದ ಅಂಗ ಬಲವು ಮತ್ತು ಜನ್ಮ ಮೃತ್ಯುವಿನ ಸ್ವಭಾವಿಕವಾಗಿ ಹೋಗಿಬರುವ ( ಲೈನ ) ಮಾರ್ಗವಾಗಿರುವದು. ॥ ೧೪೪ ॥ ಮತ್ತು ಯಾವದು ಭ್ರಾಂತಿ ಯಿಂದ ತುಂಬದ, ಕೆಟ್ಟ ಸಂಶಯದಿಂದ ಸುರುವಿದ ( ರಸವು ) ಆಗಿರುವದು. ಬಹಳೇ ಹೇಳುವದೇನು ಚೇಳಿನಿಂದ ತುಂಬಿದಹಗೆಯೇ ಆಗಿರುವದು. ॥ ೧೪೫ ॥ ಶರೀರವು ಹುಲಿಯ ವಸತಿಸ್ಥಾನವಾಗಿರುವದು. ಮತ್ತು ವೇಶ್ಯಾಸ್ತ್ರೀಯಳ ಸ್ನೇಹದಂತೆ ( ಮನೋಹರ ) ವಾಗಿರುವದು. ಮತ್ತು ವಿಷಯದ ಅನುಭವ ಮಾಡಿಕೊಡುವಂಥ ಉತ್ತಮ ಯಂತ್ರವೇ ಆಗಿರುವದು. ॥ ೧೪೬ ॥ ಯಾವದು ರಾಕ್ಷಸೀಯ ( ಕಪಟ ) ಕಳವಳವು ಅದೆ. ಮತ್ತು ವಿಷವನ್ನು ಬೆರಸಿದ ಶೀತಲ ವಾದ ಗಾರ ವಿಷೋದಕದ ಗುಟಕು, ಮತ್ತು ಸ್ನೇಹ ಭಾವದಿಂದ ನಡೆಯುವ ಸೋಗು ಹಾಕಿಕೊಂಡ ಮಹಾನುಭಾವ ಕಳ್ಳರ ವಿಶ್ವಾಸ ಸ್ಥಳವು ಇರುವದು. ॥ ೧೪೭॥ ಮತ್ತು ಅದು ರಕ್ತಪಿತ್ತ (ಮಹಾರೋಗ) ದಿಂದ ಗ್ರಸ್ತನಾದ ಮನುಷ್ಯನ ಆಲಿಂಗನದಂತೆ ಅದೆ. ॥ ೧೪೮ ॥ ಮತ್ತು ಅದು ನಿಶ್ಚಯವಾಗಿ ಮರಣವನ್ನು ತರುವಂಥ ಸರ್ಪನ ಅಂಗದ ಮೃದುತನ ದಂತೆ ಇರುತ್ತದೆ. ಬೇಟಗಾರರು ಚಿಗರೆಯನ್ನು ಮೋಹಿಸಿ ಬಂಧನದಲ್ಲಿ ಕೆಡವುವ ಸ್ವಾಭಾವಿಕ ಗಾಯನವು ಅದೆ.

ಯಾವದು ಶತ್ರುವಿನ ಆದರ ಉಪಚಾರವು. ಮತ್ತು ದುಷ್ಟಜನರ ಸನ್ಮಾನವು ಆಗಿರುತ್ತದೆ. ಇದಂತೂ ಇರಲಿ ಬಹಳ ಹೇಳುವದೇನು ? ಅನರ್ಥದ ಸಮುದ್ರವೇ ಆಗಿರುವದು. । ೧೪೯ ॥ ಈ ಶರೀರವು ಸ್ವಪ್ನದಲ್ಲಿ ನೋಡಿದ ಸ್ವಪ್ನವು, ಅಥವಾ ಮೃಗಜಲದ ನೀರಿನಿಂದ ಬೆಳೆದು ಭರಕ್ಕೆ ಬಂದ ವನವು ಅದೆ. ಈ ಶರೀರವು ಅಂದರೆ ಹೊಗೆಯ ಧೂಮ್ರದಿಂದ ಮಾಡಿದ ಆಕಾಶವಿರುತ್ತದೆ. ॥ ೧೫೦ ॥ ಹೀಗೆ ( ಅನರ್ಥಕಾರಕವಾದ ಮತ್ತು ಅಸತ್ಯವಾದ ) ಯಾವ ಶರೀರವು, ಅದು ಯಾವ ಪುರುಷನು ನಂನ ಅಮರ್ಯಾದ ಸ್ವರೂಪ ಜ್ಞಾನದಿಂದ ಮದ್ರೂಪವಾಗಿ ಹೋಗಿರುವನೋ, ಅವನಿಗೆ ಇಂಥ ( ನರಕರೂಪವಾದ ) ಶರೀರವು ಪುನ್ಹಾ ಪ್ರಾಪ್ತಿಯಾಗುವದಿಲ್ಲ. ॥ ೧೫೧ ॥

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

**[ ಆ ಬ್ರಹ್ಮೇತಿ ]** ಯೇರ್ಹವೀ ಬ್ರಹ್ಮಪಣಾಚಿಯೇ ಭಡಸೇ । ನ ಚುಕತೀಚಿ ಪುನರಾವೃತ್ತೀಚೆ ವಳಸೇ । ಪರೀ ನಿವಟಲಿಯಾಚೇ ಜೈಸೇ । ಪೋಟ ನ ದುಖೇ ॥ ೫೨ ॥ ನಾತರೀ ಚೇಈಲಿಯಾ ನಂತರೀ । ನ ಬುಡಿಜೇ ಸ್ವಪ್ನೀಚೇನಿ ಮಹಾಪೂರೆ । ತೇವೀ ಮಾತೇ ಪಾವಲೇ ತೇ ಸಂಸಾರೇ । ಲಿಂಪತೀಚಿ ನಾ ॥ ೫೩ ॥ ಯೇರವೀ ಜಗದಾಕಾರಾಚೇ ಸಿರೇ । ಜೇ ಚಿರಸ್ಥಾಈಯಾಂಚೇ ಧುರೇ । ಬ್ರಹ್ಮ ಭುವನಗಾ ಚವರೇ । ಲೋಕಾಚಳಾಚೇ ॥ ೫೪ ॥ ಜೆಯೇ ಗಾಂವೀಚಾ ಪಹಾರ ದಿವೋಪರೀ । ಏಕಾ ಅಮರೇಂದ್ರಾಚೇ ಆಯುಷ್ಯ ನ ಧರೀ । ವಿಳೋನಿ ಪಾಂತಿ ಉಠೀ ಏಕ ಸರೀ ! ಚವದಾ ಜಣಾಂಚೀ ॥ ೫೫ ॥

**ಅರ್ಥ**— ಸಹಜ ಬ್ರಹ್ಮಪದದ ಅಗ್ರಸ್ಥಾನವು ( ಮಹತ್ವವು ) ಒಂದುವೇಳೆ ಪ್ರಾಪ್ತವಾದರೂ ಅಹಂಕಾರ ಇರೋವರೆಗೆ ( ಬ್ರಹ್ಮದೇವರಿಗೆ ಸಹಾ ) ಪುನರ್ಜನ್ಮದ ಬರಹೋಗುವ ದಾರಿಯು ಬಿಡುಗಡೆಯಾಗುವದಿಲ್ಲ. ಆದರೆ ಮೃತಹೊಂದಿದ ಮನುಷ್ಯನ ಹೊಟ್ಟೆಯು ಹೇಗೆ ನೋಯುವದಿಲ್ಲವೋ, ॥ ೫೨ ॥ ಇಲ್ಲವೆ ಜಾಗ್ರತವಾದಮೇಲೆ ಸ್ವಪ್ನದೊಳಗಿನ ಮಹಾಪೂರ ನದಿಯಲ್ಲಿ ಹೇಗೆ ಯಾರೂ ಮುಳಗುವದಿಲ್ಲವೋ, ಅದೇ ಪ್ರಕಾರಾ ಯಾರು ನಂನ ಸ್ವರೂಪ ಪ್ರಾಪ್ತಿಮಾಡಿಕೊಂಡರು, ಆ ಪರಮಪುರುಷರು ಸಂಸಾರದ ಬಂಧನದಲ್ಲಿ ಶಿಗುವದೇ ಇಲ್ಲ. ॥ ೧೫೩ ॥ ಸಹಜವೇ ಜಗದಾಕಾರದ ಶಿರೋಭಾಗವು, ಮತ್ತು ಸರ್ವ ಚಿರಸ್ಥಾಯಿ ಪದಾರ್ಥದಲ್ಲಿ ಅಗ್ರಗಣ್ಯವು, ಮತ್ತು ಸ್ವರ್ಗಾದಿ ಲೋಕ ರೂಪಿ ಪರ್ವತದ ಶಿಖರವು, ಯಾವ ಬ್ರಹ್ಮ ಭುವನವು ಅಂದರೆ ಸತ್ಯಲೋಕವು, ॥ ೧೫೪ ॥ ಆ ಸತ್ಯಲೋಕದ ಒಂದು ಪ್ರಹರದಿವಸದಲ್ಲಿ ಒಬ್ಬನಾದರೂ ಇಂದ್ರನ ಆಯುಷ್ಯವು ಉಳಿಯುವದಿಲ್ಲ ( ಮುಗಿಯುತ್ತದೆ ) ಆದರೆ ಯಾವ ಗ್ರಾಮದ ಒಂದು ಪ್ರಹರ ದಿವಸದಲ್ಲಿ ಒಂದೇ ಕಾಲಕ್ಕೆ ೧೪ ಮಂದಿ ಇಂದ್ರರು ಮೃತ್ಯು ಮುಖದಲ್ಲಿ ಬೀಳುತ್ತಾರೆ. ೫೫॥

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂ ತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

**[ ಸಹಸ್ರಯುಗಪರ್ಯಂತಮಿತಿ ]** ಜೈ ಚೌಕಡಿಯಾ ಸಹಸ್ರ ಜಾಯೇ । ತೈ ತಾಯೇ ತಾವೋ ವಿಳಚಿ ಹೋಯೇ । ಆಣಿ ತೈಸೇಂಚಿ ಸಹಸ್ರವರಿಯೇ ಪಾಹೇ । ರಾತ್ರೀ ಜೇಥ ॥ ೫೬ ॥ ಯೇವಢೇ ಅಹೋರಾತ್ರ ಜೇಥೀಂಚೇ । ತೇಣೇ ನ ಲೋಟತೀ ಜೇ ಭಾಗ್ಯಾಚೇ । ದೇಖತೀ ತೆ ಸ್ವರ್ಗೀಚೇ । ಚಿರಂಜೀವ ॥ ೫೭ ॥ ಯೇರಾ ಸುರಗಣಾಂಚೀ ನವಾಈ । ವಿಶೇಷ ಸಾಂಗಾವೀ ತೇಥ ಕಾಯೀ । ಮುದಲ ಇಂದ್ರಾಚೀಚಿ ದಶಾ ಪಾಹೀ । ಜೇ ದಿಹಾಚೇ ಚೌದಾ ॥೫೮॥ ಪರೀ ಬ್ರಹ್ಮಯಾಚಿಯಾಹಿ ಆತಾ ಪ್ರಹರಾಂತೇ । ಆಪುಲಿಯಾ ಡೋಳಾ ದೇಖತೇ । ಜೇ ಅಹಾತಿ ಗಾ ತಯಾಂತೇ । ಅಹೋರಾತ್ರವಿದ ಮ್ಹಣಿಜೇ ॥ ೫೯ ॥

**ಅರ್ಥ—** ಯಾವಾಗ್ಗೆ ನಾಲ್ಕು ಯುಗಗಳು ಸಾವಿರಸಾರೆ ತಿರಗುವವು ಆಗ್ಗೆ ಬ್ರಹ್ಮನಿಗೆ ನಿಜವಾಗಿ ಒಂದು ದಿವಸವಾಗುತ್ತದೆ. ಅದರಂತೆ ನಾಲ್ಕು ಯುಗಗಳು ಒಂದು ಸಾವಿರಸಾರೆ ತಿರುಗಿ ಬಂದಾಗ್ಗೆ, ಬ್ರಹ್ಮದೇವನಿಗೆ ಒಂದು ರಾತ್ರಿಯು ಆಗುತ್ತದೆ. ॥ ೧೫೬ ॥ ಇಷ್ಟು ದಿವಸ ಮತ್ತು ರಾತ್ರಿಯು ( ಕೂಡಿ ೮೦೦೦ ಯುಗಗಳ ಪ್ರಮಾಣವು ) ಎಲ್ಲಿ ಅದೆ ಅದನ್ನು ಭಾಗ್ಯವಾನ ಪುರುಷನು ಸಾಯದೇ ಆ ದಿವಸ ರಾತ್ರಿಗಳನ್ನು ನೋಡುತ್ತಾನೆ. ಅವನಿಗೆ ಸ್ವರ್ಗಲೋಕದ ಚಿರಂಜೀವನೆಂದು ಅಂನುತ್ತಾರೆ. ॥ ೧೫೭ ॥ ಸಹಜವೇ ಎಲ್ಲಿ ಮೂಲತಃ ಒಂದು ದಿವಸದಲ್ಲಿ ೧೪ ಮಂದಿ ಇಂದ್ರರು ಆಗಿ ಹೋಗುತ್ತಾರೆ ( ಹೀಗೆ ಇಂದ್ರನ ಅವಸ್ಥೆಯೇ ಆದಮೇಲೆ) ಅಲ್ಲಿ ದೇವತಾಗಳ ಪ್ರತಿಷ್ಠೆಯ ವರ್ಣನವನ್ನು ಏನು ಮಾಡಬೇಕು ? ॥ ೫೮ ॥ ಆದರೆ ಬ್ರಹ್ಮದೇವರ ಎಂಟು ಪ್ರಹರಕ್ಕೆ ಯಾರು ತಂಮ ಕಂಣಿನಿಂದ ಪ್ರತ್ಯಕ್ಷ ನೋಡುತ್ತಾರೋ, ಅವರಿಗೆ ಬ್ರಹ್ಮದೇವರ ದಿವಸ ಮತ್ತು ರಾತ್ರಿಯನ್ನು ತಿಳಿಯುವವರೆಂದು ಅನ್ನುತ್ತಾರೆ. ॥ ೫೯ ॥

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**
**ಭೂತ ಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೆ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

**[ ಅವ್ಯಕ್ತಾದ್ವ್ಯಕ್ತಯ ಇತಿ ]** ತಯೆ ಬ್ರಹ್ಮ ಭುವನೀ ದಿವಸೇ ಪಾಹೇ । ತೇ ವೇಳೀ ಗಣನಾ ಕೇಹೀ ನ ಸಮಾಯೇ । ಐಸೇ ಅವ್ಯಕ್ತಾಚೇ ಯೋಯೇ । ವ್ಯಕ್ತ ವಿಶ್ವ ॥ ೧೬೦ ॥ ಪುಢತಿ ದಿಹಾಚೀ ಚೌಪಾಹಾರೀ ಫಿಟೇ । ಆಣಿ ಹಾ ಆಕಾರ ಸಮುದ್ರ ಆಟೇ । ಪಾಠೀ ತೈಸಾಚಿ ಮಗ ಪಾಹಾಟೇ । ಭರೋ ಲಾಗೇ ॥ ೬೧ ॥ ಶಾರದೀಯೇಚಿಯೇ ಪ್ರವೇಶೀ । ಅಭ್ರೇ ಜಿರತೀ ಆಕಾಶೀ । ಮಗ ಗ್ರಿಷ್ಮಾಂತೀ ಜೈಸೀ । ನಿಗತೀ ಪುಢತೀ ॥ ೬೨ ॥ ತೈಸೀ ಬ್ರಹ್ಮದಿನಾಚಿಯೇ ಆದೀ । ಹೆ ಭೂತ ಸೃಷ್ಟೀಚೀ ಮಾಂದೀ । ಮಿಳೇ ಜವ ಸಹಸ್ರಾವಧೀ । ನಿಮಿತ್ತ ಪುರೇ ॥ ೬೩ ॥ ಪಾಠೀ ರಾತ್ರೀಚಾ ಅವಸರ ಹೋಯೇ । ಆಣಿ ವಿಶ್ವ ಅವ್ಯಕ್ತೀ ಲಯಾ ಜಾಯೇ । ತೋಹೀ ಯುಗಸಹಸ್ರ ಮೋಟಕಾ ಪಾಹೇ । ಆಣಿ ತೈಸೇಂಚಿ ರಚೇ ॥ ೬೪ ॥ ಹೇ ಸಾಂಗಾವಯಾ ಕಾಯ ಉಪಪತ್ತೀ । ಜೇ ಜಗಾಚಾ ಪ್ರಳಯೋ ಆಣಿ ಸಂಭೂತೀ । ಇಯೇ ಬ್ರಹ್ಮಭುವನೀಂಚಿಯಾ ಹೋತಿ । ಅಹೋ ರಾತ್ರಾಮಾಜೀ ॥ ೬೫ ॥ ಕೈಸೇ ಥೋರಿಯೇಚೇ ಮಾನ ಪಾಹೇ ಪಾ । ತೋ ಸೃಷ್ಟಿ ಬೀಜಾಚಾ ಸಾಂಟೋಪಾ । ಪರೀ ಪುನರಾವೃತ್ತೀಚಿಯಾ ಮಾಪಾ । ಶೀಗ ಜಾಹಾಲಾ ॥ ೬೬ ॥ ಯೇಗ್ಹವೀ ತ್ರೈಲೋಕ್ಯ ಹೇ ಧನುರ್ಧರಾ । ತಿಯೇ ಗಾವೀಂಚಾ ಗಾ ಪಸಾರಾ । ತೋ ಹಾ ದಿನೋದಯೀ ಏಕಸರಾ । ಮಾಂಡತ ಅಸೇ ॥ ೬೭ ॥ ಪಾಠೀ ರಾತ್ರೀಜಾ ಸಮೋಪಾವೇ । ಆಣಿ ಆಪೈಸಾಚೀ ಸಾಂತವೇ । ಮ್ಹಣಿಯೇ ಜೇಥೀಂಚೇ ತೇಥ ಸ್ವಭಾವೇ । ಸಾಮ್ಯಾಸಿಯೇ ॥ ೬೮ ॥ ಜೈಸೇ ವೃಕ್ಷಪಣ ಬೀಜಾಸಿ ಆಲೇ । ಕೀ ಮೇಘ ಹೇ ಗಗನ ಜಾಹಾಲೇ । ತೈಸೇ ಅನೇಕತ್ವ ಜೇಥ ಸಾಮಾವಲೇ । ತೇ ಸಾಮ್ಯ ಮ್ಹಣಿಪೇ ॥ ೬೯ ॥

**ಅರ್ಥ—** ಆ ಬ್ರಹ್ಮಲೋಕದಲ್ಲಿ ದಿವಸವು ಯಾವಾಗ್ಗೆ ಉದಯವಾಗುತ್ತದೆ. ಆ ವೇಳೆಕ್ಕೆ ನಿರಾಕಾರದಿಂದ ಸಾಕಾರವಿಶ್ವವು ಯಾವರೀತಿಯಿಂದ ಉತ್ಪನ್ನವಾಗುವದೆಂಬವಂನು ನೋಡಿದರೆ, ಅದರ ಪ್ರಮಾಣದ ಗಣಿತೆಯನ್ನು ಮಾಡಲು ಬರುವಂತೆ ಇರುವದಿಲ್ಲ. ॥೧೬೦॥ ಮುಂದೆ ಆ ದಿವಸದ ನಾಲ್ಕು ಪ್ರಹರಗಳು ಮುಗಿದು ಹೋದಮೇಲೆ, ಈ ವಿಶ್ವವು ಇಲ್ಲದಂತೆ ಆಗುತ್ತದೆ. ಮತ್ತೆ ಮರಳಿ ಸೂರ್ಯೋದಯವಾದಮೇಲೆ ಮೊದಲಿನಂತೆ ತುಂಬಲಿಕ್ಕೆ ಹತ್ತುತ್ತದೆ. ॥೧೬೧॥ ಶರತ್ಕಾಲದ ಆರಂಭದಲ್ಲಿ ಅಭ್ರಗಳು ಆಕಾಶದಲ್ಲಿ ಇಲ್ಲದಂತೆ ಆಗುತ್ತವೆ. ಅವೇ ಮರಳಿ ಗ್ರೀಷ್ಮಋತುವು ಮುಗಿ

ಯುವ ಸಂಧಿಗೆ ಉತ್ಪನ್ನವಾಗುತ್ತವೆ. ॥ ೧೬೨॥ ಅದೇ ಪ್ರಕಾರಾ ಬ್ರಹ್ಮದೇವರ ದಿವಸದ ಆರಂಭದಲ್ಲಿ ಭೂತ ಸೃಷ್ಟಿಯ ಸಮುದಾಯವು ಏಕತ್ರವಾಗುತ್ತದೆ. ಅದು ನಾಲ್ಕು ಯುಗಗಳು ಸಾವಿರಸಾರೆ ತಿರುಗಿ ಬರೋವರೆಗೆ ಇರುತ್ತದೆ. ॥ ೧೬೩ ॥ ಹಿಂದಿನಿಂದ ಬ್ರಹ್ಮದೇವರ ರಾತ್ರಿ ಸಮಯ ಬರಲು, ಈ ವಿಶ್ವವು ನಿರಾಕಾರದಲ್ಲಿ ಲಯವನ್ನು ಹೊಂದುತ್ತದೆ. ಅದಾದರೂ ಪೂರ್ವೋಕ್ತ ಕಾಲವು ಹೋದಮೇಲೆ ಉದಯಕಾಲದಲ್ಲಿ ಪೂರ್ವದಂತೆ ಆಗುತ್ತದೆ. ॥ ೧೬೪ ॥ ಈ ರೀತಿಯಿಂದ ವಿಶ್ವದ ರಚನೆಯು ಆಗುತ್ತಿರುತ್ತದೆ. ಆದನ್ನು ಹೇಳುವ ಉದ್ದಿಶ್ಯವು ಯಾವದೆಂದರೆ ಈ ಬ್ರಹ್ಮದೇವರ ದಿವಸ ಮತ್ತು ರಾತ್ರಿಯಲ್ಲಿ ಈಜಗತ್ಯದ ಉತ್ಪತ್ತಿ ಮತ್ತು ನಾಶವು ಆಗುತ್ತಿರುತ್ತದೆ. ॥ ೧೬೫ ॥ ಅದರ ಮಹತ್ವವು ಯೋಗ್ಯತೆಯು ಹೇಗೆ ಇರುವದೆಂದು ನೋಡಲಿಕ್ಕೆ ಹೋದರೆ ಆ ಬ್ರಹ್ಮದೇವನು ಸೃಷ್ಟಿಯ ಬೀಜದ ಭಾಂಡಾರವೇ ಆಗಿರುವನು. ಆದರೆ ಅವನೂಸಹಾಜನನಮರಣದಆಧೀನನಾಗಿರುತ್ತಾನೆ. ॥ ೧೬೬ ॥ ಎಲೋ ಧನುರ್ಧರನೇ ! ವಿಚಾರಮಾಡಿ ನೋಡಲು ಈ ಮೂರೂ ಲೋಕ ಸೃಷ್ಟಿಯ ವಿಸ್ತಾರವು ಸತ್ಯಲೋಕ ನಾಯಕನ ಭಾಂಡಾರವು ಇದ್ದು ಬ್ರಹ್ಮದೇವರ ದಿವಸವು ಉದಯವಾದಕೂಡಲೆ ಇದು ಒಂದೇ ಸವನೆ ತುಂಬ ಲಿಕ್ಕೆ ಹತ್ತುತ್ತದೆ. ॥ ೧೬೭ ॥ ಹಿಂದಿನಿಂದ ರಾತ್ರಿಆಗುವ ಸಮಯ ಬಂದೊದಗಲು, ಅದು ತನ್ನಿಂದ ತಾನೇ ಅವ್ಯಕ್ತದಲ್ಲಿ ಲಯಹೊಂದುತ್ತದೆ. ಮತ್ತು ಈಪಂಚ ಮಹಾಭೂತ ಮುಂತಾದವುಗಳು ಬ್ರಹ್ಮದೇವರ ಆಜ್ಞೆಯಿಂದ ಸಹಜವಾಗಿ ಅಲ್ಲಿಂದಲ್ಲೆ ಲಯಹೊಂದುತ್ತವೆ. ॥ ೧೬೮ ॥ ಯಾವಪ್ರಕಾರ ಗಿಡವು ಬೀಜ ರೂಪದಿಂದ ಅಡಗುತ್ತದೆ, ಇಲ್ಲವೇ ಮೇಘವು ಆಕಾಶ ರೂಪವಾಗುತ್ತದೆ, ಅದೇಪ್ರಕಾರ ಪ್ರಕೃತಿಯ ಸ್ಥಳದಲ್ಲಿ ಬಹಳೊಂದು ವಸ್ತುವಿನ ಸಮಾವೇಶ ವಾಗುತ್ತದೆ. ಅದಕ್ಕೆ ಸಾಮ್ಯವೆಂದು ಅನ್ನುತ್ತಾರೆ. ॥ ೧೬೯ ॥

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽ ವ್ಯಕ್ತಾತ್ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

**[ ಪರಸ್ತಸ್ಮಾತ್ತು ಭಾವ ಇತಿ ]** ತೇಧ ಸಮವಿಷಮ ನದಿಸೇ ಕಾಹೀ । ಮ್ಹಣೋನಿ ಭೂತೇ ಹೀ ಭಾಷನಾಹೀ । ಜೇವೀ ದುಧಚಿ ಜಾಹಾಲಿಯಾ ದಹೀ ನಾಮರೂಪ ಜಾಯ ॥ ೧೭೦ ॥ ತೇವೀ ಆಕಾರ ಲೋಪಾ ಸರಿಸೇ । ಜಗಾಚೇ ಜಗಪಣ ಭ್ರಂಶೇ । ಪರೀ ಜೇಥೇ ಜಾಹಾಲೇ ತೇ ಜೈಸೇ । ತೈಸೇಂಚಿ ಅಸೇ ॥ ೭೧ ॥ ತೈ ತಯಾ ನಾವ ಸಹಜ ಅವ್ಯಕ್ತ । ಆಣಿ ಆಕಾರಾಯೇ ತೇಚಿವ್ಯಕ್ತ । ಹೇ ಏಕಾಸ್ತವ ಏಕ ಸೂಚಿತ । ಯೇರ್ಹವೀ ದೋನೀ ನಾಹೀ ॥ ೭೨ ॥ ಜೈಸೇ ಆಟಲಿಯಾ ರುಪೇ । ಆಟಲೇಪಣ ತೇ ಖೋಟೇ ಮ್ಹಣಿಪೇ । ಪುಢತೀ ತೋ ಘನಾಕಾರ ಹಾರಪೇ । ಜೇ ವೇಳೀ ಅಳಂಕಾರ ಹೋತೀ ॥ ೭೩ ॥ ಹೀ ದೋನ್ಹೀ ಜೈಸೀ ಹೋಣೀ । ಏಕೀ ಸಾಕ್ಷೀಭೂತ ಸುವರ್ಣೀ । ತೈಸೀ ವ್ಯಕ್ತಾವ್ಯಕ್ತಾಚೀ ಕಡಸಣೀ । ವಸ್ತೂಚ್ಯಾ ಠಾಯೀ ॥ ೭೪ ॥ ತೇ ತರೀ ವ್ಯಕ್ತನಾ ಅವ್ಯಕ್ತ । ನಿತ್ಯನಾ ನಾಶವಂತ । ಯಾದೋಹೀ ಭಾವಾ ಅತೀತ । ಅನಾದಿಸಿದ್ಧ ॥ ೭೫ ॥ ಜೇ ಹೇ ವಿಶ್ವಚಿ ಹೋವೂನಿ ಅಸೇ । ಪರೀ ವಿಶ್ವಪಣ ನಾಸಲೇನಿ ನ ನಾಸೇ । ಅಕ್ಷರೇ ಪುಸಿಲ್ಯಾ ನ ಪುಸೇ । ಅರ್ಥ ಜೈಸಾ ॥ ೭೬ ॥ ಪಾಹೇ ಪಾ ತರಂಗ ತರೀ ಹೋತ ಜಾತ । ಪರೀ ತೇಥ ಉದಕ ತೇ ಅಖಂಡ ಅಸತ । ತೇವೀ ಭೂತಾಭಾವೀ ನ ನಾಶತ । ಅವಿನಾಶ ಜೇ ॥ ೭೭ ॥ ನಾತರೀ ಆಟತಿಯೇ ಅಳಂಕಾರೀ । ನಾಟತೇ ಕನಕ ಅಸೇ ಜಯಾ ಪರೀ । ತೇವೀ ಮರತಿಯೇ ಜೀವಕಾರೀ । ಅಮರ ಜೇ ಆಹೇ ॥ ೭೮ ॥

**ಅರ್ಥ** – ಆ ಸಾಮ್ಯದಲ್ಲಿ ನ್ಯೂನಾಧಿಕವೇನೂ ಕಂಡುಬರುವದಿಲ್ಲ. ಆದುದರಿಂದ ಅದು ಭೂತವೆಂಬ ಹೆಸರು ಹೊಂದುವದಿಲ್ಲ. ಹಾಲಿನಿಂದ ಮೊಸರು ಆದಮೇಲೆ ಆ ಹಾಲಿನ ಹೆಸರು ಮತ್ತು ರೂಪಗಳು ಇಲ್ಲದಂತೆ ಆಗುತ್ತವೆ. ॥ ೧೭೦ ॥ ಅದೇ ಪ್ರಕಾರಾ ಆಕಾರದ ನಾಶ ಆದಕೂಡಲೆ ಜಗತ್ಯದ ಜಗತ್ಯವೆಂಬ ಹೆಸರು ಇಲ್ಲದಂತೆ ಆಗುತ್ತದೆ. ಆದರೆ ಯಾವದರಿಂದ ಇದು ಆಗಿರುತ್ತದೆ. ಆಸ್ಥಳದಲ್ಲಿ ಅದು ಇದ್ದಕ್ಕಿದ್ದಂತೆ ಇರುತ್ತದೆ. ॥ ೧೭೧ ॥

ಆಗ್ಗೆ ಸ್ವಾಭಾವಿಕವಾಗಿ ಅದರ ಹೆಸರು ಅವ್ಯಕ್ತವೆಂದೆನ್ನುತ್ತಾರೆ. ಇವುಗಳು ಒಂದನ್ನೊಂದು ತೋರಿಸುವಂಥ ವಾಗಿರುತ್ತವೆ. ಆದರೆ ಸ್ವರೂಪ ದೃಷ್ಟಿಯಿಂದ ನೋಡಲು ಎರಡು ಇರುವದಿಲ್ಲ. । ೧೭೨ ॥ ಯಾವಪ್ರಕಾರ ಅಲಂಕಾರಗಳನ್ನು ಕರಗಿಸಿದ ಮೇಲೆ ಅದರ ಆಕಾರಕ್ಕೆ ಘಟ್ಟಿ ಎಂದೆನ್ನುತ್ತಾರೆ, ಮುಂದೆ ಆಘಟ್ಟಿಯನ್ನು ಕರಗಿಸಿ ಅಲಂಕಾರ ಮಾಡಿದಬಳಿಕ ಘಟ್ಟಿಎಂಬ ಹೆಸರು ಲೋಪಹೊಂದುತ್ತದೆ. ॥ ೧೭೩ ॥ ಅಲಂಕಾರ ಮತ್ತು ಘಟ್ಟಿ ಈ ಎರಡು ರೂಪಾಂತರಗಳು ಒಂದು ಆಧಾರ ಭೂತವಾದ ಬಂಗಾರವೇ ಇರುತ್ತದೆ. ಅದರಂತೆ ಆಕಾರ ( ಜಗ ) ಮತ್ತು ನಿರಾಕಾರ ( ಮಾಯಾ ) ಇವುಗಳ ವಿಚಾರವು ಪರಬ್ರಹ್ಮನ ಸ್ಥಳದಲ್ಲಿಯೇ ಉಂಟಾಗುತ್ತದೆ. ॥ ೧೭೪ ॥ ಆಬ್ರಹ್ಮವು ಮಾತ್ರ ವ್ಯಕ್ತಇರುವದಿಲ್ಲ. ಮತ್ತು ಅವ್ಯಕ್ತವೂ, ಇರುವದಿಲ್ಲ. ಅದು ಉತ್ಪನ್ನ ಮತ್ತು ನಾಶ ಹೊಂದುವದಿಲ್ಲ. ಆದರೆ ಆ ಎರಡೂ ಸ್ಥಿತಿಯು ಆಚೆಕಡೆಗೆ ಅನಾದಿ ಸಿದ್ಧವಾದದ್ದಿರುತ್ತದೆ. ॥ ೭೫ ॥ ಆ ಬ್ರಹ್ಮವು ವಿಶ್ವಾಕಾರವಾಗಿರುತ್ತದೆ. ಆದರೆ ವಿಶ್ವತನವು ಲಯಕ್ಕೆ ಹೊಂದಿದರೂ ಅದು ಲಯ ಹೊಂದುವದಿಲ್ಲ. ಯಾವ ಪ್ರಕಾರಾ ಬರೆದ ಅಕ್ಷರಗಳನ್ನು ವರಸಿ ಬಿಟ್ಟರೂ, ಅದರಿಂದ ಆಗುವ ಬೋಧವು ಇಲ್ಲದಂತೆ ಆಗುವದಿಲ್ಲ ॥ ೭೬ ॥ ಹೀಗೆ ನೋಡು, ನೀರಿನ ಮೇಲೆ ಥೆರೆಗಳು ಬರುತ್ತವೆ ಮತ್ತು ಹೋಗುತ್ತವೆ. ನೀರು ಯಾವಾಗಲೂ ಸ್ಥಿರವಾಗಿರುತ್ತದೆ. ಅದರಂತೆ ನಾಶಿವಂತ ಪ್ರಾಣಿಮಾತ್ರಗಳಲ್ಲಿ ಅವುಗಳಿಗೆ ಆಧಾರಭೂತವಾದಂಥ ಯಾವ ಬ್ರಹ್ಮವು ಅದು ಅವಿನಾಶವೇ ಇರುತ್ತದೆ. ॥ ೧೭೭ ॥ ಇಲ್ಲವೇ ಅಲಂಕಾರವು ಅಟ್ಟಿಸಿ ಹೋದ ಮೇಲೆ ಬಂಗಾರವು ಹೇಗೆ ಅಟ್ಟಿಸಿ ಹೋಗುವದಿಲ್ಲ. ಅದರಂತೆ ಮೃತ್ಯು ಮುಖದಲ್ಲಿ ಬೀಳುವಂಥ ಈ ಶರೀರದಲ್ಲಿ ಅವರು ಅಮರರಾಗಿದ್ದಾರೆ ॥೧೭೮॥

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**
**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥ ೨೨ ॥**

**[ ಅವ್ಯಕ್ತ ಇತಿ ]** ಜಯಾತೇ ಅವ್ಯಕ್ತ ಮ್ಹಣೋ ಯೇ ಕೋಡೇ । ಮ್ಹಣತಾ ಸ್ತುತಿ ಹೇ ಐಸೇ ನಾವಡೇ । ಜೇ ಮನಬುದ್ಧೀ ನ ಸಾಂಪಡೇ । ಮ್ಹಣವೂನಿಯಾ ॥ ೭೯ ॥ ಆಣಿ ಆಕಾರಾ ಆಲಿಯಾ ಜಯಾಚೀ । ನಿರಾಕಾರ ಪಣ ನ ವಚೇ । ಆಕಾರ ಲೋಪೇ ನ ವಿಸಂಚೇ । ನಿತ್ಯತಾಗಾ ॥ ೮೦ ॥ ಮ್ಹಣೋನಿ ಅಕ್ಷರ ಜೇ ಮ್ಹಣಿಜೇ । ತೇವೀಂಚಿ ಮ್ಹಣತಾ ಬೋಧಹೀ ಉಪಜೇ । ಜಯಾ ಪರೌತಾ ಪೈಸ ನ ದೇಖಿಜೇ । ಯಾ ನಾಮ ಪರಮಗತೀ ॥ ೮೧ ॥ ಪರೀ ಆಘವಾ ಇಹೀ ದೇಹ ಪುರೀ । ಆಹೆ ನಿಜೇಲಿಯಾಚೇ ಪರೀ । ಜೇ ವ್ಯಾಪಾರ ಕರವಿ' ನಾ ಕರೀ । ಮ್ಹಣವೂನಿಯಾ ॥ ೮೨ ॥ ಯೇರ್ಹವಿ ಜೇ ಶಾರೀರ ಚೇಷ್ಟಾ । ತ್ಯಾ ಮಾಜೀ ಏಕಿಹೀ ನ ಠಕೇ ಗಾ ಸುಭಟಾ । ದಾಹೀ ಇಂದ್ರಿಯಾಚಿಯಾ ವಾಟಾ । ವಾಹತಚಿ ಆಹಾತೀ ॥ ೮೩ ॥ ಉಕಲೂನಿ ವಿಷಯಾಂಚಾ ಪೇಟಾ । ಹೋತ ಮನಾಚಾ ಚೋಹಟಾ । ತೋ ಸುಖದುಃಖಾಚಾ ರಾಜವಾಟಾ । ಭಿತರಾಹೀ ಪಾವೇ ॥ ೮೪ ॥ ಪರೀ ರಾವೋ ಪಹುಡಲಿಯಾ ಸುಖೇ । ಜೈಸಾ ದೇಶೀಂಚಾ ವ್ಯಾಪಾರ ನ ಠಕೇ । ಪ್ರಜಾಆಪುಲಾಲೇನಿ ಅಭಿಲಾಖೇ । ಕರಿತೀಚ ಅಸತೀ ॥ ೮೫ ॥ ತೈಸೇ ಬುದ್ಧೀಚೇ ಹನ ಜಾಣಣೇ । ಕಾ ಮನಾಚೇ ದೇಣೇ ಘೇಣೇ । ಇಂದ್ರಿಯಾಂಚೇ ಕರಣೇ । ಸ್ಫುರಣ ವಾಯೂಚೇ ॥ ೮೬ ॥ ಹೇ ದೇಹಕ್ರಿಯಾ ಆಘವೀ । ನ ಕರಿತಾ ಹೋಯ ಬರವೀ । ಜೈಸಾ ನ ಚಲವಿತೇನಿ ರವೀ । ಲೋಕಚಾಲೇ ॥ ೮೭ ॥ ಅರ್ಜುನಾ ತಯಾ ಪರೀ । ಸುತಲಾ ಐಸಾ ಆಹೇ ಶರೀರೀ । ಮ್ಹಣೋನಿ ಪುರುಷಗಾ ಅವಧಾರೀ । ಮ್ಹಣಿಪೇ ಜಯಾತೇ ॥ ೮೮ ॥

**ಆಣಿ ಪ್ರಕೃತಿ ಪತಿವೃತೇ । ಪಡಿಲಾ ಏಕ ಪತ್ನೀ ವೃತೇ । ಯೇಣೇಹೀ ಕಾರಣೇ ಜಯಾತೇ ।** ಪುರುಷ ವ್ಹಣೋಯೇ ॥ ೮೯ ॥ ಪೈ ವೇದಾಂಚೇ ಬಹುವಸ ಪಣ । ದೇಖೇಚಿನಾ ಜಯಾಂಚೇ ಆಂಗಣ । ಹೇ ಗಗನಾಚೇ ಪಾಂಘುರಣ । ಹೋಯು ದೇಖಾ ॥ ೯೦ ॥ ಐಸೇ ಜಾಣೂನಿ ಯೋಗೇಶ್ವರ । ಜಯಾತೇ ವ್ಹಣತೀ ಪರಾತ್ಪರ । ಜೇ ಅನನ್ಯ ಗತೀಚೇ ಘರ । ಗಿವಸೀತಯೇ ॥ ೯೧ ॥ ಜೇ ತನೂವಾಚಾ ಚಿತ್ತೇ । ನಾಇಕತೀ ದುಜಿಯೇ ಗೋಷ್ಟೀತೇ । ತಯಾ ಏಕನಿಷ್ಠಾಂಚೇ ಪಿಕತೇ । ಸುಕ್ಷೇತ್ರ ಜೇ ॥ ೯೨ ॥ ಹೇ ತ್ರೈಲೋಕ್ಯಚಿ ಪುರುಷೋತ್ತಮು । ಐಸಾ ಸಾಚಾ ಜಯಾಚಾ ಮನೋಧರ್ಮು । ತಯಾ ಆಸ್ತಿಕಾಚಾ ಆಶ್ರಮು । ಪಾಂಡವಾ ಗಾ ॥ ೯೩ ॥ ಜೇ ನಿಗರ್ವಾಚೇ ಗೌರವ । ಜೇ ನಿರ್ಗುಣಾಚೀ ಜಾಣಿವ । ಜೇ ಸುಖಾಚೀ ರಾಣಿವ । ನಿರಾಶಾಂಸೀ ॥ ೯೪ ॥ ಜೇ ಸಂತೋಷಿಯಾ ವಾಢಿಲೇ ತಾಟ । ಜೇ ಅಚಿಂತಾ ಅನಾಥಾ ಚೇ ಮಾಯು ಪೋಟ । ಭಕ್ತೀಸೀ ಉಜೂ ವಾಟ । ಜಯಾ ಗಾಂವಾ ॥ ೯೫ ॥ ಹೇ ಏಕೈಕ ಸಾಂಗೋನಿ ವಾಯಾ । ಕಾಯ ಫಾರ ಕರೂ ಧನಂಜಯಾ । ಪೈ ಗೇಲಿಯಾ ಜಯಾ ಠಾಯಾ । ತೋ ಠಾವೋಚಿ ಹೋಇಜೇ ॥ ೯೬ ॥ ಹಿವಾಚಿಯಾ ಝುಳುಕಾ । ಜೈಸೇ ಹಿವಚಿ ಪಡೇ ಉಷ್ಣೋದಕಾ । ಕಾ ಸಮೋರಾ ಜಾಲಿಯಾ ಅರ್ಕಾ । ತಮುಚಿ ಪ್ರಕಾಶ ಹೋಯೇ ॥ ೯೭ ॥ ತೈಸಾ ಸಂಸಾರ ಜಯಾ ಗಾಂವಾ । ಗೇಲಾ ಸಾಂತಾ ಪಾಂಡವಾ । ಹೋವೂನಿ ಠಾಕೇ ಆಘವಾ । ಮೋಕ್ಷಾಚಾಚಿ ॥ ೯೮ ॥ ತರೀ ಅಗ್ನಿ ಮಾಜೀ ಆಲೇ । ಜೈಸೇ ಇಂಧನಚೀ ಅಗ್ನಿ ಜಾಹಾಲೇ । ಪಾಠಿ ನ ನಿವಡೇಚಿ ಕಾಂಹೀ ಕೇಲೇ । ಕಾಷ್ಟ ಪಣ ॥ ೯೯ ॥ ನಾತರೀ ಸಾಖರೇಚಾ ಮಾಘೌತಾ । ಬುಧ್ಧಿವಂತ ಪಣೇ ಹೀ ಕರಿತಾ । ಫಿರೀ ಊಂಸ ನವ್ಹೇ ಪಾಂಡುಸುತಾ । ಜಿಯಾ ಪರೀ ॥ ೧೦೦ ॥ ಲೋಹಾಚೇ ಕನಕ ಜಾಹಾಲೇ । ಹೇ ಏಕೇ ಪರಿಸೇಂಚಿ ಕೇಲೇ । ಆತಾ ಆಣಿಕ ಕೈಚೇ ತೇ ಗೇಲೇ । ಲೋಹತ್ವ ಆಣಿ ॥ ೧ ॥ ವ್ಹಣೋನಿ ತೂಪ ಹೋವೂನಿ ಮಾಘೌತೇ । ಜೇವೀ ದೂಧಪಣಾ ನ ಯೇಚಿ ನಿರುತೇ । ತೇವಿ ಪಾವೋನಿಯಾ ಜಯಾತೇ ಪುನರಾವೃತ್ತಿ ನಾಹೀ ॥ ೨ ॥ ತೇ ಮಾಝೇ ಪರಮ । ಸಾಚೋ ಕಾರೇ ನಿಜಧಾಮು । ಹೇ ಅಂತುವಟ ತುಜ ವರ್ಮು ದಾವಿಜತ ಅಸೇ ॥ ೩ ॥

**ಅರ್ಥ—** ಕೌತುಕದೋಳ್ ಅವ್ಯಕ್ತವೆಂದರೆ ಆ ಪರಬ್ರಹ್ಮನ ಸ್ತೋತ್ರವಾಗಲಾರದು. ಕಾರಣವೇನಂದರೆ ಅದು ಮನಬುದ್ಧಿಗೆ ಅಗೋಚರವಾಗಿರುವದು. ॥ ೧೮೯ ॥ ಅರ್ಜುನನೇ ! ಆಕಾರಕ್ಕೆ ಬರುವದರಿಂದ ಯಾವದರ ನಿರಾಕಾರತ್ವವು ನಾಶಹೊಂದುವದಿಲ್ಲ. ಮತ್ತು ಆಕಾರದ ಲೋಪವಾಗಲು ಅದರ ನಿತ್ಯತೆಯು ಹಾಳಾಗಿ ಹೋಗುವದಿಲ್ಲ. ॥೧೯೦॥ ಆದುದರಿಂದ ಯಾವ ( ಬ್ರಹ್ಮನಿಗೆ ) 'ಅಕ್ಷರ, ಅವಿನಾಶಿ ಎಂದೆನ್ನುತ್ತಾರೆ. ಅಕ್ಷರವೆಂಬುದರಿಂದಲೇ ಬ್ರಹ್ಮಬೋಧ ಉಂಟಾಗುತ್ತದೆ. ಅದರ ಆಚೆಕಡೆಗೆ ಯಾವದಾದರೂ ವಿಸ್ತಾರವು ಕಾಣುವದರಲ್ಲಿ ಬರುವದಿಲ್ಲ. ಮತ್ತು ಇದರ ಹೆಸರೇ ಪರಮಗತಿಯಾಗಿರುವದು. ॥ ೧೯೧ ॥ ಆದರೆ ಸಂಪೂರ್ಣದೇಹರೂಪಿ ನಗರದಲ್ಲಿ ಅವನು ಮಲಗಿಕೊಂಡಂತೆ ಇರುತ್ತಾನೆ. ಮತ್ತು ( ಉದಾಸೀನನಾಗಿದ್ದಾನೆ. ) ಕಾರಣವೇನಂದರೆ ಆ * ಪರಮಾತ್ಮನು ಯಾವದಾದರೂ ವ್ಯವಹಾರ ಮಾಡುವದಿಲ್ಲ ಮತ್ತು ಮಾಡಿಸುವದೂ ಇಲ್ಲ. ॥ ೯೨ ॥ ಸಹಜವೇ ಶರೀರದ ಯಾವ ವ್ಯಾಪಾರಗಳು ಇರುತ್ತವೆ. ಅವುಗಳಲ್ಲಿ ಅರ್ಜುನನೇ ! ಒಂದೂ ನಿಲ್ಲುವದಿಲ್ಲ ಕಂಡಿಯಾ ! ಆದರೆ ದಶ ಇಂದ್ರಿಯಗಳ ವ್ಯವಹಾರಗಳು ನಡದೇ ಇರುತ್ತವೆ. ॥ ೯೩ ॥ ವಿಷಯರೂಪಿ ಸಂತೆಯು ತೆರೆದು ಮನೋರೂಪಿ ಅಂಗಳದಲ್ಲಿ ವ್ಯವಹಾರವು ಪ್ರಾರಂಭವಾಗುವದರಿಂದ ಉಂಟಾಗುವ ಸುಖ ದುಃಖದ ಪ್ರಾಪ್ತಿಯೊಳಗಿನ ಮುಖ್ಯ ಲಾಭವು ಅಂತರ್ಯಾಮಿ ಜೀವನಿಗೂ

---

ಟೀಪು— ಅಗ್ನಿ ವಾಯುಗಳು ಸೃಷ್ಟಿಯಲ್ಲಿ ಅನೇಕ ರೂಪಗಳನ್ನು ಧರಿಸಿದರೂ, ತಾವು ಅಲಿಪ್ತರಾಗಿಯೇ ಇರುವಂತೆ ಪರಮಾತ್ಮನು ವಿಶ್ವದ ಅಣುರೇಣುಗಳಲ್ಲಿ ತುಂಬಿದ್ದರೂ, ಅಲಿಪ್ತನೇ ಇರುವನು. ( ಕಠೋಪನಿಷತ್ತು' ಅಂ, ೨ ವ ೫ ವಂ, ೯—೧೦ )

ದೊರಕುತ್ತದೆ. ॥ ೮೪ ॥ ಆದರೆ ರಾಜನು ಸುಖದಿಂದ ಮಲಗಿರಲು ಯಾವಪ್ರಕಾರಾ ದೇಶದ ವ್ಯಾಪಾರವು ನಿಲ್ಲುವದಿಲ್ಲ. ಆದರೆ ಆ ರಾಜನ ಪ್ರಜೆಗಳು ತಮ್ಮ ತಮ್ಮ ಇಚ್ಛಾನುರೂಪವಾಗಿ ಯಾವಾಗಲೂ ವ್ಯಾಪಾರವನ್ನು ನಡಿಸೇ ನಡಿಸುತ್ತಾರೆ. ॥ ೮೫ ॥ ಅದೇಪ್ರಕಾರಾ ಬುದ್ಧಿಯಿಂದ ತಿಳಿದುಕೊಳ್ಳುವ ಕ್ರಿಯೆಗಳು ಅಥವಾ ಮನಸಿನ ಸಂಕಲ್ಪ ವಿಕಲ್ಪರೂಪ ಕೊಡತಗೊಂಬುವ ಕ್ರಿಯೆಗಳು, ಮತ್ತು ಇಂದ್ರಿಯಗಳ ವ್ಯಾಪಾರಗಳು, ಮತ್ತು ಪ್ರಾಣವಾಯುವಿನ ಸ್ಫುರಣವು ॥ ೮೬ ॥ ಈ ಸರ್ವದೇಹ ಕರ್ಮಗಳನ್ನು ( ಪರಮಾತ್ಮನು ಸ್ವತಃ ) ಮಾಡಿಸದೇ ಉತ್ತಮವಾಗಿ ನಡಿಯುತ್ತವೆ. ಸೂರ್ಯನು ಸ್ವತಃ ಜನರಿಗೆ ಉದ್ಯೋಗ ಮಾಡಲು ಹಚ್ಚದೇ ಜನರ ಉದ್ಯೋಗ ವ್ಯಾಪಾರಗಳು ಹೇಗೆ ಚನ್ನಾಗಿ ನಡೆಯುತ್ತವೆ, ॥ ೮೭ ॥ ಅದೇ ಪ್ರಕಾರಾ ಅರ್ಜುನನೇ ! ಆತ್ಮಾ ಇದು ಶರೀರದಲ್ಲಿ ಸ್ವಸ್ಥ ಮಲಗಿಕೊಂಡಂತೆ ಇರುತ್ತಾನೆ, ಆದುದರಿಂದ ಅವರ ಹೆಸರು ಪುರುಷವೆಂದೆನ್ನುತ್ತಾರೆ. ॥ ೮೮ ॥ ಮತ್ತು ಆತ್ಮನು ಪ್ರಕೃತಿರೂಪ ಪತಿವ್ರತೆಯ ಸಂಗತಿಯಿಂದ ಏಕಪತ್ನಿವ್ರತಸ್ಥನಾಗಿರುವದರಿಂದ ಇವನಿಗೆ ಪುರುಷನೆಂಬ ಹೆಸರು ಉಂಟಾಗಿದೆ. ॥ ೧೮೮ ॥ ಆದರೆ ನಾಲ್ಕು ವೇದಗಳು ಬಹಳೇ ರೀತಿಯಿಂದ ವಿಚಾರಮಾಡಿದರೂ ಆ ಪರಮಾತ್ಮನ ಅಂಗಳವು ಸಹ ದೃಷ್ಟಿಗೆ ಬೀಳುವದಿಲ್ಲ. ಆ ಪರಮಾತ್ಮನು ಆಕಾಶದ ಹೊದಿಕೆ ಯಾಗಿರುವನು. ॥ ೧೯೦ ॥ ಹೀಗೆ ತಿಳಿದು ಯೋಗಿಜನರು ಅವನಿಗೆ ಜೀವ ಪ್ರಕೃತಿಗಳ ಆಚೆಕಡೆಯವನಾದ ಪರಾತ್ಪರ ಪರಬ್ರಹ್ಮನೆಂದೆನ್ನುತ್ತಾರೆ. ಅವನು ಏಕನಿಷ್ಠಭಕ್ತರ ಶೋಧಮಾಡುತ್ತ ಅವರ ಮನೆಗೆ ಬರುತ್ತಾನೆ. ॥ ೧೯೧ ॥ ಯಾರು ಕಾಯಾವಾಚಾ ಮನಸ್ಸಿನಿಂದ ಪರಮಾತ್ಮನ ಹೊರ್ತು ಅನ್ಯ ಭಾಷಣಗಳನ್ನೇ ಕೇಳುವದಿಲ್ಲ ಅಂಥ ಮಹಾಭಕ್ತರಿಗೆ ಪರಮಾತ್ಮನು ಏಕನಿಷ್ಠೆಯ ಬೆಳಿಯ ಫಲವನ್ನು ಕೊಡುವಂಥ ಉತ್ತಮ ಭೂಮಿಯೇ ಆಗಿರುವನು. ॥ ೧೯೨ ॥ ಎಲೋ, ಪಾಂಡವನೇ ! ಈ ಮೂರು ಲೋಕಗಳು ಭಗವದ್ರೂಪ ವಾಗಿರುವವೆಂದು ನಿಜವಾಗಿ ಯಾರ ಮನೋಭಾವನೆ ಇರುವದೋ, ಆ, ಆಸ್ತಿಕ, ಭಕ್ತನಿಗೆ ಇವನು ಆಶ್ರಮವೇ ಆಗಿರುವನು ॥ ೧೯೩ ॥ ಯಾವದು ನಿರಾಭಿಮಾನಿಗಳ ವೈಭವವು, ಗುಣಾತೀತನ ಜ್ಞಾನವು ಮತ್ತು ಯಾವದು ನಿಸ್ಪೃಹನು ಸುಖೋಪಭೋಗ ತೆಗೆದುಕೊಳ್ಳುವ ಸ್ಥಾನವು ( ರಾಜ್ಯವು ) ॥ ೧೯೪ ॥ ಯಾವದು ( ಪರಮಾತ್ಮ ರೂಪದಲ್ಲಿ ) ಸಂತೋಷಉಳ್ಳ ಪುರುಷರಿಗೆ ಪಕ್ವಾನ್ ಬಡಿಸಿ ಇಟ್ಟ ಪಾತ್ರೆಯು ಮತ್ತು ಸಂಸಾರ ಚಿಂತೆಯನ್ನು ಮಾಡದೇ ನಂನನ್ನೇ ಆಶ್ರಯಿಸಿ ನನಗೆ ಶರಣಾಗತರಾದ ಭಕ್ತರ ತಾಯಿಯ ಹೊಟ್ಟೆಯು ಅಥವಾ ತೌರಮನೆಯು ಆಗಿರುವದು. ಮತ್ತು ಅದು ಭಕ್ತಿಯಿಂದ ನಡೆಯುವವರಿಗೆ ಮೋಕ್ಷರೂಪಿ ಗ್ರಾಮಗಳ ಸರಳಮಾರ್ಗವು ಆಗಿರುವದು. ॥ ೧೯೫ ॥ ಧನಂಜಯನೇ ! ಹೀಗೆ ಒಂದೊಂದೇ ಹೇಳಿ ಸುಮ್ಮನೇ ವ್ಯರ್ಥವಾಗಿ ಎಷ್ಟು ವರ್ಣನ ಮಾಡಬೇಕು ? ಆದರೆ ಯಾವ ಸ್ಥಾನದಲ್ಲಿ ಹೋಗುವದರಿಂದ ಮನುಷ್ಯನು ನಂನ ಸ್ವರೂಪವನ್ನು ಹೊಂದುತ್ತಾನೆ. ॥ ೯೬ ॥ ಥಂಡಿಯ ಸುಳಿದಾಟದಿಂದ ಹೇಗೆ ಬಿಸಿನೀರು ತಣ್ಣಗಾಗುತ್ತದೆ. ಇಲ್ಲವೇ ಸೂರ್ಯೋದಯವಾದಮೇಲೆ ಕತ್ತಲೆಯು ಹೇಗೆ ಪ್ರಕಾಶರೂಪ ವಾಗುತ್ತದೆ. ॥ ೯೭ ॥ ಅದೇ ಪ್ರಕಾರಾ ಪಾಂಡವನೇ ! ಅಜ್ಞಾನ ಮತ್ತು ಅದರ ಕಾರ್ಯ ಜಗತ್ತು ಯಾವ ಪರಮಾತ್ಮರೂಪಿ ಗ್ರಾಮಕ್ಕೆ ಹೋಗುವದರಿಂದ ಅವು ತಾವೇ ಮೋಕ್ಷರೂಪ ವಾಗುತ್ತವೆ. ॥ ೯೮ ॥ ಅದರಂತೆ ಕಟ್ಟಿಗೆಗಳು ಬೆಂಕಿಯಲ್ಲಿ ಹಾಕುವದರಿಂದ ಆ ಕಟ್ಟಿಗೆಗಳು ಬೆಂಕಿಯ ಸ್ವರೂಪವೇ ಆಗುತ್ತವೆ. ಆಮೇಲೆ ಅವುಗಳನ್ನು ಬೇರೆ ಮಾಡಬೇಕೆಂದರೆ ಅಲ್ಲಿ ಕಟ್ಟಿಗೆಯ ಗುರ್ತು ಸಹಾ ದೃಷ್ಟಿಗೆ ಬೀಳುವದಿಲ್ಲ. ॥ ೧೯೯ ॥ ಇಲ್ಲವೇ ಅರ್ಜುನನೇ ! ಒಂದು ವೇಳೆ ಸಕ್ಕರಿ ಆದಮೇಲೆ ಯಾವ ಪ್ರಕಾರಾ ಪುನಃ ಅದನ್ನು ಚಾತುರ್ಯದಿಂದ ಕಬ್ಬುಮಾಡಲು ಬರುವದುಂಟೇ ? ॥ ೨೦೦ ॥ ಕಬ್ಬಿಣವು ಒಂದುವೇಳೆ ಪರೀಸಮಣಿಯ ಸ್ಪರ್ಶದಿಂದ ಬಂಗಾರವಾದಮೇಲೆ ಕಳೆದುಹೋದ ಕಬ್ಬಿಣತ್ವವನ್ನು ತಿರುಗಿ ತಂದು ಕೊಡುವಂಥ ಸಾಮರ್ಥ್ಯವು ಇನ್ಯಾವ ಅನ್ಯ ಪದಾರ್ಥದಲ್ಲಿ ಉಂಟಾದೀತು ? ॥ ೧ ॥ ತುಪ್ಪವು ಮರಳಿ ಹಾಲು ಆಗುವದುಂಟೇ ? ಅದೇ ಪ್ರಕಾರ ಯಾವದರ ಹತ್ತರ ಹೋಗುವದರಿಂದ (ಅದನ್ನೇ ಆಶ್ರಯಿಸುವದರಿಂದ) ಪುನರ್ಜನ್ಮವು ಉಂಟಾಗುವದಿಲ್ಲ. ॥ ೨೦೨ ॥ ಅದೇ ನನ್ನ ನಿಜವಾದ ಉತ್ತಮ ( ಶ್ರೇಷ್ಠ ) ಸ್ಥಾನವಾಗಿರುವದು. ಈ ಗುಪ್ತವಾದ ರಹಸ್ಯವನ್ನು ನಿನಗೆ ಸ್ಪಷ್ಟಮಾಡಿ ಒಡೆದು ಕಾಣುವಂತೆ ಹೇಳಿರುತ್ತೇನೆ. ॥ ೨೦೩ ॥

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

**[ ಯತ್ರ ಕಾಲೇ ತ್ವನಾವೃತ್ತಿ ಮಿತಿ ]** ತೇವಿಂಚಿ ಆಣಿಕೇಹೀ ಏಕೇ ಪ್ರಕಾರೇ । ಹೇ ಜಾಣತಾ ಆಹೇ ಸೋಪಾರೇ । ತರೀ ದೇಹ ಸಾಂಡಿತೇಸಿ ಅವಸರೇ । ಜೇಥೇ ಮಿಳತೀ ಯೋಗೀ ॥ ೪ ॥ ಅಥವಾ ಅವಚಟೇ ಐಸೇ ಘಡೇ । ಜೇ ಅನವಸರೇ ದೇಹ ಸಾಂಡೇ । ತರೀ ಮಾಘೌತೇ ಯೇಣೇ ಘಡೇ । ದೇಹಾಸೀಚಿ ॥ ೫ ॥ ಮ್ಹಣೋನಿ ಕಾಳಶುದ್ಧೀ ಜರೀ ದೇಪ ಠೇವಿತೀ । ತರೀ ಠೇವಿತ ಖೇವೀ ಬ್ರಹ್ಮಚಿ ಹೋತೀ । ಏರವೀ ಅಕಾಳೀ ತರೀ ಯೇತೀ । ಸಂಸಾರಾ ಪುಢತೀ । ೬ ॥ ತೈಸೇ ಸಾಯುಜ್ಯ ಆಣಿ ಪುನರಾವೃತ್ತೀ । ಯಾ ದೋನ್ಹೀ ಅವಸರಾ ಆಹಾತೀ । ತೋಚಿ ಅವಸರ ತುಜ ಪ್ರತೀ । ಪ್ರಸಂಗೇ ಸಾಂಗೋ ॥ ೭ ॥ ತರೀ ಐಕೇ ಗಾ ಸುಭಟಾ । ಪಾತಲಿಯಾ ಮರಣಾಚಾ ಮಾಜೀವಟಾ । ಪಾಂಚೈ ಆಪುಲಾಲಿಯಾ ವಾಟಾ । ನಿಘತೀ ಅಂತೀ ॥ ೮ ॥ ಐಸಾ ಪರಿ ವೇಳೀ ಪಡಿಲಾ ಪ್ರಯಾಣ ಕಾಳೀ । ಬುದ್ಧಿತೇ ಭ್ರಮು ನ ಗಿಳೀ । ಸ್ಮೃತಿ ನವ್ಹೇ ಆಂಧಳೀ । ನ ಮರೇ ಮನ ॥ ೯ ॥ ಹಾ ಚೇತನಾ ವರ್ಗ ಆಘವಾ । ಮರಣೀ ದಿಸೇ ಠವ ಠವಾ । ಪರೀ ಅನುಭವಿಲಿಯಾ ಬ್ರಹ್ಮಭಾವಾ । ಗವಸಣೀ ಹೋಊನಿ ॥ ೧೦ ॥ ಐಸಾ ಸಾವಧಹಾ ಸಮಾ ಭಾವೋ । ಆಣೀ ನಿರ್ವಾಣ ವೇರ್ಷ್ಹೀ ನಿರ್ವಾಹೋ । ಹೇ ತರೀಚ ಘಡೇ ಸಾವಾವೋ । ಅಗ್ನೀಚಾ ಆಥೀ ॥ ೧೧ ॥ ಪಾಹಾ ಪಾ ವಾರೇನೇ ಕಾ ಉದಕೇ । ಜೈ ದಿವಿಯಾಚೇ ದಿವೇ ಪಣ ಝಾಂಕೇ । ತೈ ಅಸತೀಚ ಕಾಯ ದೇಖೇ । ದಿಠೀ ಆಪುಲೀ ॥ ೧೨ ॥ ತೈಸೇ ದೇಹಾಂತೀಚೇನಿ ವಿಷಮ ವಾತೇ । ದೇಹ ಆಂತ ಬಾಹೇರಿ ಶ್ಲೇಷ್ಮಾ ಆತೇ । ತೈ ವಿಝೋನಿ ಜಾಯ ಉಚಿತೇ । ಅಗ್ನೀಚೇ ತೇಂವ್ಹಾ ॥ ೧೩ ॥ ತೇ ವೇಳೀ ಪ್ರಾಣಾಸಿ ಪ್ರಾಣ ನಾಹೀ । ತೇಥ ಬುದ್ಧಿ ಅಸೋನಿ ಕರೀಲ ಕಾಇ । ಮ್ಹಣೋನಿ ಅಗ್ನೀ ವೀಣ ದೇಹೀ । ಚೇತನಾ ನ ಥಾರೇ ॥ ೧೪ ॥ ಅಗಾ ದೇಹೀಂಚಾ ಅಗ್ನಿ ಜರೀ ಗೇಲಾ । ತರೀ ದೇಹ ನವ್ಹೇ ಚಿಖಲ ವೋಲಾ । ವಾಯಾ ಆಯುಷ್ಯ ವೇಳ ಆಪುಲಾ । ಅಂಧಾರೇ ಗಿಂವಸೀ ॥ ೧೫ ॥ ಆಣಿ ಮಾಗಿಲ ಸ್ಮರಣ ಆಘವೇ । ತೇ ತೇಣೇ ಅವಸರೇ ಸಾಂಭಾಳಾವೇ । ಮಗ ದೇಹ ತ್ಯಜೂನಿ ಮಿಳಾವೆ । ಸ್ವರೂಪೀ ಕೀ ॥ ೧೬ ॥ ತವ ತಯಾ ದೇಹ ಶ್ಲೇಷ್ಮಾಚೇ ಚಿಖಲೀ । ಚೇತನಾಚೀ ಬುಡೋನಿ ಗೇಲೀ । ತೇಥ ಮಾಗಿಲೀ ಪುಢಿಲೀ ಠೇಲೀ । ಆಠವಣ ॥ ೧೭ ॥ ಮ್ಹಣೋನಿ ಆಧೀ ಅಭ್ಯಾಸ ಜೋ ಕೇಲಾ । ತೋ ಮರಣ ನ ಯೇತಾ ನಿಮೋನಿ ಗೇಲಾ । ಜೈಸೇ ಠೇವಣೇ ನ ದಿಸತಾ ಮಾಲವಲಾ । ದೀಪ ಹಾತೀಚಾ ॥ ೧೮ ॥ ಆತಾ ಅಸೋ ಹೇ ಸಕಳ । ಜಾಣ ಪಾ ಜ್ಞಾನಾಸೀ ಅಗ್ನಿ ಮೂಳ । ತಯಾ ಅಗ್ನೀಚೇ ಪ್ರಯಾಣೀ ಬಳ । ಸಂಪೂರ್ಣ ಆಥೀ ॥ ೧೯ ॥

**ಅರ್ಥ—** ಅದೇ ರೀತಿಯಿಂದ ಯೋಗಿಗಳು ದೇಹಾವಸಾನದ ನಂತರಾ ಯಾವ ಸ್ವರೂಪಕ್ಕೆ ಹೋಗಿ ಮುಟ್ಟುತ್ತಾರೆ ಆ ಗುಪ್ತ ರಹಸ್ಯವು ಇನ್ನೂ ಒಂದು ಪ್ರಕಾರದಿಂದ ತಿಳಕೊಳ್ಳುವದಕ್ಕೆ ಸುಲಭವಾಗಿರುತ್ತದೆ. ॥೨೦೪॥ ಅಥವಾ ಅಕಸ್ಮಾತ ಹೀಗೆ ಪ್ರಸಂಗವು ಒದಗುತ್ತದೆ. ಯಾವ ಯೋಗಿಗಳು ಅಕಾಲದಲ್ಲಿ ದೇಹತ್ಯಾಗ ಮಾಡುತ್ತಾರೆ ಅವರಿಗೆ ಪುನ್ಹಾ ದೇಹಧಾರಣ ಮಾಡಬೇಕಾಗುತ್ತದೆ. ॥ ೨೦೫ ॥ ಆದುದರಿಂದ ಶಾಸ್ತ್ರೋಕ್ತ ಶುದ್ಧ ಕಾಲದಲ್ಲಿ ದೇಹದ ಅವಸಾನವಾದರೆ ಆ ಕ್ಷಣದಲ್ಲಿ ಆ ಯೋಗಿಗಳು ಬ್ರಹ್ಮಸ್ವರೂಪವಾಗುತ್ತಾರೆ. ಇಲ್ಲವೇ ಅಕಾಲದಲ್ಲಿ ದೇಹಾವಸಾನವಾದಮೇಲೆ ತಿರುಗಿ ಜನ್ಮಕ್ಕೆ ಬರುತ್ತಾರೆ. ॥ ೨೦೬ ॥ ಆದರಂತೆ ಮೋಕ್ಷ ಮತ್ತು ಪುನರ್ಜನ್ಮಗಳು ಇವು ಎರಡೂ ಕಾಲಾಧೀನವಾಗಿರುತ್ತವೆ. ಇಂಥ ಕಾಲವಾದರು ಯಾವದೆಂಬದನ್ನು ಪ್ರಸಂಗಾನುಸಾರವಾಗಿ ನಿನಗೆ ಹೇಳುತ್ತೇನೆ. ॥೭॥ ಆದರೆ ಎಲೋ ಮಹಾವೀರ ಅರ್ಜುನನೇ ! ಕೇಳು, ಮರಣಕಾಲವು ಸಮೀಪ ಬಂದಿರಲು ಕಟ್ಟಕಡೆಗೆ ಪಂಚಮಹಾ

ಭೂತಗಳು ತಮ್ಮ ತಮ್ಮ ಮಾರ್ಗದಿಂದ ಹೊರಟು ಹೋಗುತ್ತವೆ. ॥ ೮ ॥ ಇಂಥ ಮರಣಕಾಲವು ಪ್ರಾಪ್ತವಾಗಿರಲು, ಬುದ್ಧಿಗೆ ಭ್ರಾಂತಿಯು ಗ್ರಾಸಮಾಡುವದಿಲ್ಲ. ಸ್ಮರಣಶಕ್ತಿಯು ಕುರುಡವಾಗುವದಿಲ್ಲ. ( ನಾಶಹೊಂದುವದಿಲ್ಲ ) ಮತ್ತು ಮನಸು ಸಾಯುವದಿಲ್ಲ. ॥ ೯ ॥ ಹೀಗೆ ಸರ್ವ ಜ್ಞಾನ ಸಮುದಾಯಗಳು ತವತವಿತವಾಗಿ ಇದ್ದು ಅನುಭವ ತೆಗೆದುಕೊಂಡ ಬ್ರಹ್ಮಭಾವನೆಯ ಬೋಧವೇ ಅಲ್ಲಿ ಇರುತ್ತದೆ. ॥ ೨೧೦ ॥ ಈ ರೀತಿಯಿಂದ ಈ ಸಮುದಾಯಗಳು ಸಾವಧವಾಗಿರುತ್ತವೆ. ಆದರೆ ಹೊರಗಿನ ಜಠರಾಗ್ನಿಯು ಪ್ರದೀಪ್ತವಾಗಿದ್ದರೆ ಮಾತ್ರ ಅವನಿಗೆ, ಸಾಯುವರೆಗೆ ಇಂದ್ರಿಯಗಳ ಸಹಾಯವು ದೊರಕುತ್ತದೆ. ॥ ೨೧೧ ॥ ಹೀಗೆ ನೋಡು ಗಾಳಿಯಿಂದ ಇಲ್ಲವೇ ನೀರಿನಿಂದ ಯಾವ ವ್ಯಾಳೆಕ್ಕೆ ದೀವಿಗೆಯ ಪ್ರಕಾಶವು ನಾಶಹೊಂದುತ್ತದೆ, ಆ ಕಾಲಕ್ಕೆ ತಮ್ಮ ಕಣ್ಣುಗಳು ನೆಟ್ಟಗೆಯಿದ್ದರೂ, ಅವನಿಗೆ ಏನಾದರೂ ಕಾಣುವದೋ, ಹ್ಯಾಗೆ ? ॥ ೧೨ ॥ ಅದೇ ಪ್ರಕಾರಾ ದೇಹಾವಸಾನದ ಗಾಳಿಯು ಬೆಳೆದು ವಿಸ್ತಾರವಾದುದರಿಂದ ಶರೀರವು ತ್ರಿದೋಷದಿಂದ ಕೂಡಿ ಒಳಗೆ ಹೊರಗೆ ಕಫದಿಂದ ವ್ಯಾಪ್ತವಾಗುತ್ತದೆ. ಆಗ್ಗೆ ಜಠರಾಗ್ನಿಯ ತೇಜವು ಆರಿಹೋಗುತ್ತದೆ. ॥ ೧೩ ॥ ಆ ಕಾಲದಲ್ಲಿ ಪ್ರಾಣಕ್ಕೆ ಅವಸಾನವು ಇರುವದಿಲ್ಲ. ಆದುದರಿಂದ ಬುದ್ಧಿಯು ಇದ್ದಾಗ್ಯಾದರೂ, ಅದು ಏನುಮಾಡಬಹುದು ? ಆದುದರಿಂದ ಅಗ್ನಿಯ ಹೊರ್ತು ದೇಹದಲ್ಲಿ ಚೇತನಾ ಉಳಿಯುವದಿಲ್ಲ. ॥ ೧೪ ॥ ಹೀಗೆ ನೋಡು, ಶರೀರದೊಳಗಿನ ಜಠರಾಗ್ನಿಯು ಇಲ್ಲದಂತೆ ಆದಮೇಲೆ ಅದು ದೇಹವಿರದೇ ಕೆಸರಿನ ಮುದ್ದಿಯೇ ಆಗಿರುವದು. ಹೀಗೆ ಆಗುವದರಿಂದ ಆಯುಷ್ಯವು ತನ್ನ ಕಾಲವನ್ನು ವ್ಯರ್ಥವಾಗಿ ಕತ್ತಲೆಯಲ್ಲಿ ಶೋಧಮಾಡುತ್ತದೆ. ॥೧೫॥ ಇಂಥ ಸ್ಥಿತಿಯಲ್ಲಿ ಹಿಂದಿನ ಅಭ್ಯಾಸದ ಸ್ಮರಣ ಇಟ್ಟುಕೊಂಡು ದೇಹವನ್ನು ಬಿಟ್ಟು ಸ್ವರೂಪದ ಸ್ಥಳದಲ್ಲಿ ಕೂಡಬೇಕೆಂಬುವದು ಸಾಧಿಸುವ ಬಗೆ ಹ್ಯಾಗೆ ? ॥ ೧೬ ॥ ಆ ವೇಳೆದಲ್ಲಿ ಆ ದೇಹದೊಳಗಿನ ಕಫದ ಕೆಸರಿನಲ್ಲಿ ಚೇತನವು ಮುಳುಗಿ ಹೋಗುವದರಿಂದ ಹಿಂದಿನ ಅಥವಾ ಮುಂದಿನ ಮಾತುಗಳ ಸ್ಮರಣವು ಇಲ್ಲದಂತೆ ಆಗುತ್ತದೆ. ॥ ೧೭ ॥ ಆದುದರಿಂದ ಪೂರ್ವದಲ್ಲಿ ಯಾರು ಯೋಗಾಭ್ಯಾಸ ಮಾಡಿದರು ಅವರು ತಮ್ಮ ಮರಣ ಬರುವ ಪೂರ್ವದಲ್ಲಿಯೇ, ತಮ್ಮ ಕಾರ್ಯವನ್ನು ಸಾಧಿಸಿಕೊಂಡು ದೇಹವನ್ನಿಡುತ್ತಾರೆ. ( ಅದು ಹೇಗಂದರೆ ) ನಾವು ಕತ್ತಲೆಯಲ್ಲಿಟ್ಟಂಥ ವಸ್ತು ದೊರಕುವ ಪೂರ್ವದಲ್ಲಿ ದೀವಿಗೆಯು ಆರಿಹೋಗಬೇಕು, ಅದರಂತೆ ಆಗುತ್ತದೆ. ॥ ೧೮ ॥ ಇನ್ನು ಮೇಲೆ ಈ ಸರ್ವ ಮಾತುಗಳು ಹಾಗೇ ಇರಲಿ, ಜ್ಞಾನಕ್ಕೆ ಮೂಲಕಾರಣವು ಜಠರಾಗ್ನಿಯೇ ಇರುತ್ತದೆ. ಸಾರಾಂಶ ಮರಣ ಸಮಯದಲ್ಲಿ ಆ, " ಜಠರಾಗ್ನಿಯ " ಪೂರ್ಣ ಸಹಾಯವು ( ಬಲವು ) ಇರಬೇಕಾಗುತ್ತದೆ. ॥ ೧೯ ॥

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥**

**[ ಅಗ್ನಿರ್ಜ್ಯೋತಿರಿತಿ ]** ಅಂತ ಅಗ್ನಿಜ್ಯೋತೀಚಾ ಪ್ರಕಾಶ । ಬಾಹೇರಿ ಶುಕ್ಲಪಕ್ಷ ಆಣಿ ದಿವಸ । ಆಣಿ ಸಾಮಾಸಾಮಾಜೀ ಮಾಸ । ಉತ್ತರಾಯಣ ॥ ೨೨೦ ॥ ಐಸಿಯಾ ಸಮಯೋಗಾ ಚೀ ನಿರುತೀ । ಲಾಹೋನಿ ಜೇ ದೇಹ ಠೇವಿತೀ । ತೇ ಬ್ರಹ್ಮಚೀ ಹೋತೀ । ಬ್ರಹ್ಮವಿದ ॥ ೨೧ ॥ ಅವಧಾರೀ ಗಾ ಧನುರ್ಧರಾ । ಯೇಥವರೀ ಸಾಮರ್ಥ್ಯ ಯಯಾ ಅವಸರಾ । ತೇವೀಂಚಿ ಹಾಉಜಾ ಮಾರ್ಗ ಸ್ವಪುರಾ । ಯಾವಯಾ ಪೈ ॥ ೨೨ ॥ ಏಥ ಅಗ್ನೀ ಹೇ ಪಹಿಲೀ ಪಾಯತರೀ । ಜ್ಯೋತಿರ್ಮಯ ಹೇ ದುಸರೀ । ದಿವಸ ಜಾಣೇ ತಿಸರೀ । ಚೌಥೇ ಶುಕ್ಲಪಕ್ಷ ॥ ೨೩ ॥ ಆಣಿ ಸಾಮಾಸ ಉತ್ತರಾಯಣ । ತೇ ವರಚೀಲಗಾ ಸೋಪಾನ । ಯೇಣೇ ಸಾಯುಜ್ಯ ಸಿದ್ಧಿಸದನ । ಪಾವತೀ ಯೋಗೀ ॥ ೨೪ ॥ ಹಾ ಉತ್ತಮ ಕಾಳ ಜಾಣಿಜೇ । ಯಾತೇ ಅರ್ಚಿರಾದಿ ಮಾರ್ಗ ಮ್ಹಣಿಜೇ । ಆತಾ ಅಕಾಳ ತೋಹೀ ಸಹಜೇ । ಸಾಂಗೇನ ಆಇಕ ॥ ೨೫ ॥

**ಅರ್ಥ—** ಶರೀರದಲ್ಲಿ ಜಠರಾಗ್ನಿ ( ಜೋತಿ ) ಯ ಪ್ರಕಾಶವು ಹೊರಗೆ ಉತ್ತರಾಯಣದಲ್ಲಿಯ ಯಾವದಾದರೊಂದು ತಿಂಗಳ ಶುದ್ಧಪಕ್ಷದ ದಿವಸವು, ( ರಾತ್ರಿ ಇರಬಾರದು ) ॥ ೨೨೦ ॥ ಈ ರೀತಿಯಿಂದ ಸರ್ವದರಿಂದ

ಉತ್ತಮವಾದ ಯೋಗವು ಬರುತ್ತಿರಲು ಯಾವ ಬ್ರಹ್ಮಾಭ್ಯಾಸಿ ಪುರುಷನು ತನ್ನ ದೇಹವನ್ನಿಡುತ್ತಾನೆ ಅವನು ಬ್ರಹ್ಮ ಸ್ವರೂಪನೇ ಆಗುತ್ತಾನೆ. ॥ ೨೨೧ ॥ ಧನುರ್ಧರನೇ ! ಕೇಳು, ಈ ಕಾಲದ ಯೋಗದಿಂದ ( ತತ್ಕಾಲಾಭಿಮಾನಿ ದೇವತೆಗಳಲ್ಲಿ ) ಇಂಥ ವಿಲಕ್ಷಣವಾದ ಸಾಮರ್ಥ್ಯವಿರುತ್ತದೆ! ಆದರಿಂದಲೇ, ಮೋಕ್ಷಾಭಿಲಾಷೆಯುಳ್ಳವರಿಗೆ ಸ್ವಸ್ವ ರೂಪದಲ್ಲಿ ಪ್ರವೇಶ ಮಾಡಲು ಇದು ಸರಳವಾದ ಮಾರ್ಗವು ಅದೆ. ॥ ೨೨ ॥ ಈ ಮಾರ್ಗದಲ್ಲಿ ಜಠರಾಗ್ನಿಯು ಮೊದಲನೇ ಪಾವಟಿಗೆಯಾಗಿರುವದು. ಅಗ್ನಿಯ ಸತೇಜತನವು ಎರಡನೇ ಪಾವಟಿಗೆ ಯಾಗಿರುವದು. ದಿವಸವು ( ಹಗಲು ) ಮೂರನೇ ಪಾವಟಿಗೆ ಯಾಗಿರುವದು. ॥ ೨೩ ॥ ಮತ್ತು ಉತ್ತರಾಯಣದ ಆರು ತಿಂಗಳಲ್ಲಿ ಒಂದು ತಿಂಗಳವು ಇದು ಮೇಲೆ ಏರಿ ಹೋಗುವ ಮೆಟ್ಟಲು ಆಗಿರುವದು. ಹೀಗೆ ಕ್ರಮದಿಂದ ಒಂದೊಂದು ಮೆಟ್ಟಲು ಗಳನ್ನು ಹತ್ತಿ ಹೋಗುವದರಿಂದ, ಯೋಗಿಯು ಮೋಕ್ಷ ಸಿದ್ಧಿರೂಪವಾದ ಗ್ರಹದಲ್ಲಿ ಪ್ರವೇಶ ಮಾಡುತ್ತಾನೆ. ॥ ೨೪ ॥ ಇದು ಉತ್ತಮಕಾಲವೆಂದು ನಂಬು. ಮತ್ತು ಇದಕ್ಕೇ ಅರ್ಚಿ*ರಾದಿ ಮಾರ್ಗವೆಂದು ಶಾಸ್ತ್ರದಲ್ಲಿ ಅಂದಿರುತ್ತಾರೆ. ಯೋಗಿಗಳಿಗೆ ಮತ್ತು ಸಾಧಕರಿಗೆ ಇನ್ನು ಮೇಲೆ ದೇಹವನ್ನಿಡಲಿಕ್ಕೆ ಅಯೋಗ್ಯ ಕಾಲವು ಯಾವದೆಂಬದನ್ನು ಪ್ರಸಂಗಾನುಸಾರವಾಗಿ ನಿನಗೆ ಹೇಳುತ್ತೇನೆ ಕೇಳು. ॥ ೨೨೫ ॥

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ ೨೫ ॥**

**[ ಧೂಮ ಇತಿ ]** ತರೀ ಪ್ರಯಾಣಾಚಿಯಾ ಅವಸರೇ । ವಾತಶ್ಲೇಷ್ಮಾ ಸುಭರೇ । ತೇಣೇ ಅಂತಃ ಕರಣೀ ಆಂಧಾರೇ । ಕೊಂದಲೇ ಠಾಕೇ ॥ ೨೬ ॥ ಸರ್ವೇಂದ್ರಿಯಾ ಲಾಂಕುಡಪಡೇ । ಸ್ಮೃತಿ ಭ್ರಮಾ ಮಾಜೀ ಬುಡೇ । ಮನ ಹೋಯ ವೇಡೇ । ಕೋಂಡೇ ಪ್ರಾಣ ॥ ೨೭ ॥ ಅಗ್ನೀಚೇ ಅಗ್ನಿಪಣಜಾಯೇ । ಮಗ ತೋ ಧೂಮಚಿ ಅವಘಾ ಹೋಯೇ । ತೇಣೇ ಚೇತನಾ ಗಿಂವಸಿಲೀ ಠಾಯೇ । ಶರೀರಿಂಚೀ ॥೨೮॥ ಜೈಸೇ ಚಂದ್ರಾಆಡ ಆಭಾಳ । ಸದಟ ದಾಟೇ ಸಜಳ । ಮಗ ಗಡದ ನಾ ಉಜಾಳ । ಐಸೇ ಝಾಂಬಳೇ ಹೋಯ ॥ ೨೯ ॥ ಕಾ ಮರೀ ನಾ ಸಾವಧ । ಐಸೇ ಜೀವಿತಾಸೀ ಪಡೇ ಸ್ತಬ್ಧ । ಆಯುಷ್ಯ ಮರ ಣಾಚೀ ಮರ್ಯಾದ । ವೇಳೂಠಾಕೀ ॥ ೨೩೦ ॥ ಐಸೀ ಮನಬುದ್ಧಿಕರಣೇ । ಸಭೋಂವತೀ ಧುಮ ಕುಳಾಚೀ ಕೋಂದಣೇ । ತೇಥ ಜನ್ಮೇ ಜೋಡಲಿಯೇ ವಾಹಣೇ । ಯುಗಾಚೆ ಬುಡೇ ॥ ೩೧ ॥ ಹಾಗಾ ಹಾತೀಚೇ ಜೇ ವೇಳೀ ಜಾಯೇ । ತೇ ವೇಳೀ ಆಣಿಕಾ ಲಾಭಾಚೀ ಗೋಠಿ ಕೇ ಆಹೇ । ಮ್ಹಣ ವೂನಿ ಪ್ರಯಾಣೀ ತವ ಹೋಯೆ । ಯೇತುಲೀ ದಶಾ ॥ ೩೨ ॥ ಐಸೀ ದೇಹಾ ಅಂತ ಸ್ಥಿತೀ । ಬಾಹೇರೀ ಕೃಷ್ಣಪಕ್ಷವರೀ ರಾತೀ । ಆಣಿ ಸಾಮಾಸಹೀ ಮೋಡವತೀ । ದಕ್ಷಿಣಾಯನ ॥ ೩೩ ॥ ಇಯೇ ಪುನರಾ ವೃತ್ತೀಚೀ ಘರಾಣೀ । ಆಘವೀ ಏಕವಟತೀ ಜಯಾಚಿಯಾ ಪ್ರಯಾಣೀ । ತೋ ಸ್ವರೂಪ ಸಿದ್ಧೀಚೀ ಕಹಾಣೀ । ಕೈಸೇನಿ ಆಇಕೇ ॥ ೩೪ ॥ ಐಸಾ ಜಯಾಚಾ ದೇಹ ಪಡೇ । ತಯಾ ಯೋಗೀ ಮ್ಹಣೋನಿ ಚಂದ್ರವರೀ ಜಾಣೇ ಘಡೇ । ಮಗ ತೇಥೂನಿ ಮಾಗುತಾ ಬಹುಡೇ । ಸಂಸಾರಾಯೇ ॥ ೩೫ ॥ ಅಮ್ಹೀ ಅಕಾಳ ಜೋ ಪಾಂಡವಾ । ಮ್ಹಣಿತಲಾ ತೋ ಹಾ ಜಾಣಾವಾ । ಆಣಿಹಾಚಿ ಧೂಮ್ರಮಾರ್ಗ ಗಾಂವಾ । ಪುನರಾವೃತ್ತೀಚಿಯಾ ॥ ೩೬ ॥ ಯೇರ ತೋ ಅರ್ಚಿರಾದಿ ಮಾರ್ಗ । ತೋ ವಸತಾ ಆಣಿ ಅಸಲಗ । ಸಾವಿಯಾ ಸ್ವಸ್ವತಾಂಗ । ನಿವೃತ್ತೀವರೀ ॥ ೩೭ ॥

**ಅರ್ಥ—** ಮರಣ ಸಮಯದಲ್ಲಿ ಕಫ ವಾತಾದಿ ತ್ರಿದೋಷಗಳು ಅತಿಭರದಿಂದ ಕೂಡಲು ಅಂತಃಕರಣದಲ್ಲಿ ಕತ್ತಲೆಯಾಗಿ ಹೋಗುತ್ತದೆ. ॥ ೨೬ ॥ ಮತ್ತು ಸರ್ವ ಇಂದ್ರಿಯಗಳ ಗತಿಯು ಕುಂಠಿತವಾಗಿ ಸ್ಮೃತಿಗೆ ಭ್ರಮೆಯುಂ

ಟೀಪು— « ಜ್ಯೋತಿ ( ಜ್ವಾಲೆ ) ಈ ಶಬ್ದದ ಬದಲು ಉಪನಿಷತ್ತಿನಲ್ಲಿ ಅರ್ಚಿ ( ಜ್ವಾಲೆ ) ಈ ಶಬ್ದವಿರುವಕಾರಣ ಮೊದಲನೇ ಮಾರ್ಗಕ್ಕೆ « ಅರ್ಚಿರಾದಿ » ಎಂತಲೂ ಎರಡನೇದಕ್ಕೆ "ಧೂಮ್ರಾದಿ" ಯೆಂತಲೂ ಹೆಸರುಗಳಿವೆ.

ಟಾಗುತ್ತದೆ. ಮನಸಿಗೆ ಹುಚ್ಚುಹಿಡಿದು ಪ್ರಾಣವು ಗೊಂದಲದಲ್ಲಿ ಬೀಳುತ್ತದೆ. ॥ ೨೭ ॥ ಜಠರಾಗ್ನಿಯು ಆರಿ ಹೋಗಿ ಅದರ ಹೊಗೆಯು ನಾಲ್ಕೂಕಡೆಗೆ ಮುಸುಕುವದರಿಂದ ಶರೀರದೊಳಗಿನ ಜ್ಞಾನವು ಆಚ್ಛಾದಿತವಾಗುತ್ತದೆ. ॥ ೨೮ ॥ ಹೇಗೆ ಚಂದ್ರನಿಗೆ ಅಡ್ಡವಾಗಿ ದಟ್ಟವಾದ ನೀರಿನಿಂದ ತುಂಬಿದ ಮೋಡವು ಬರುವದರಿಂದ ಇತ್ತ ಕಗ್ಗತ್ತಲೆಯೂ ಇರುವದಿಲ್ಲ, ಇತ್ತ ಸ್ವಚ್ಛವಾದ ಪ್ರಕಾಶವು ಬೀಳುವದಿಲ್ಲ, ಮಬ್ಬು ಕತ್ತಲೆಯೇ ಉಂಟಾಗುತ್ತದೆ. ॥ ೨೯ ॥ ಅದೇ ಪ್ರಕಾರಾ ಅವನು ಸಾಯುವದೂ ಇಲ್ಲ, ಮತ್ತು ಸಾವಧನೂ ಇರುವದಿಲ್ಲ, ಈ ರೀತಿಯಿಂದ ಜೀವಿತದ ಸ್ಥಿತಿಯು ಆಗುತ್ತದೆ. ಆಯುಷ್ಯವು ಮರಣ ಕಾಲವನ್ನು ನಿರೀಕ್ಷಣಮಾಡುತ್ತಿರುತ್ತದೆ. ॥ ೩೦ ॥ ಈ ರೀತಿ ಮನ, ಬುದ್ಧಿ, ಇಂದ್ರಿಯಗಳ ಸುತ್ತಮುತ್ತಲೆ ಹೊಗೆಯು ದಟ್ಟವಾಗಿ ಮುಸುಕಿಕೊಳ್ಳುತ್ತದೆ. ಆ ಕಾಲದಲ್ಲಿ ಅವನು ಜನ್ಮ ಇರೋವರೆಗೆ ದೊರಕಿಸಿದ ಸರ್ವ ಲಾಭಗಳು ನಾಶ ಹೊಂದುತ್ತವೆ. ॥ ೩೧ ॥ ಹೀಗೆ ನೋಡು, ಯಾವ ವೇಳೆಕ್ಕೆ ಕೈಯೊಳಗಿದ್ದದ್ದೇ ಹೋಗುತ್ತದೆ. ಅಂದಬಳಿಕ ಮರಣ ಸಮಯದಲ್ಲಿ ಇಂಥ ಅವಸ್ಥೆಯು ಪ್ರಾಪ್ತವಾದಮೇಲೆ ಎರಡನೆಯ ಕಡೆಯಿಂದ ಮತ್ತೇನಾದರೂ ಲಾಭವಾದೀತೇನು ? ॥ ೩೨ ॥ ಈ ಪ್ರಕಾರಾ ದೇಹದೊಳಗಿನ ಸ್ಥಿತಿಯು ಇದ್ದು ಹೊರಗೆ ಕೃಷ್ಣಪಕ್ಷದ ಹದಿನೈದು ದಿವಸಗಳು, ಅದರಲ್ಲಿ ರಾತ್ರಿ, ಮತ್ತು ದಕ್ಷಿಣಾಯನದೊಳಗಿನ ಆರುತಿಂಗಳದಲ್ಲೊಂದು ತಿಂಗಳ ಪ್ರಾಪ್ತವಾಗುತ್ತದೆ. ॥ ೩೩ ॥ ಈ ಎಲ್ಲ ಕುಯೋಗಗಳು ಜನನ ಮರಣದ ಪುನರಾವೃತ್ತಿಯಲ್ಲಿ ತೊಡಕಿಸುವಂಥವು, ಯಾರ ಮರಣ ಸಮಯದಲ್ಲಿ ಒಂದೇ ಕಾಲಕ್ಕೆ ಬಂದೊದಗುತ್ತವೆಯೋ, ಅವರ ಕಿವಿಗೆ ಮೋಕ್ಷ ಪ್ರಾಪ್ತಿಯು ಶಬ್ದವಾದರೂ ಹೇಗೆ ಬಿದ್ದೀತು ? ॥ ೩೪ ॥ ಇಂಥಕಾಲದಲ್ಲಿ ಯಾವನ ದೇಹಾವಸಾನವಾಗುತ್ತದೆ ಅವನು ಯೋಗಿ ಇರುವದರಿಂದ ಅವನಿಗೆ ಚಂದ್ರಲೋಕದವರೆಗೆ ಹೋಗಲಿಕ್ಕೆ ಬರುತ್ತದೆ. ಅಲ್ಲಿಂದ ಹಿಂದಕ್ಕೆ ತಿರುಗಿ ಅವನು ಭವಚಕ್ರದ ಪಾಶದಲ್ಲಿ ಶಿಗುವನು. ॥ ೩೫ ॥ ಎಲೋ ಪಂಡು ಪುತ್ರನೇ ! ಮರಣಕ್ಕೆ ಅಯೋಗ್ಯ ಕಾಲವೆಂದು ನಾವು ಹಿಂದೆ ಏನು ಹೇಳಿದ್ದೆವು ಅದು ಇದೇ ಇರುವದೆಂದು ತಿಳಿದುಕೊಳ್ಳುವವನಾಗು. ಜನನ ಮರಣದಲ್ಲಿ ತೊಡಕಿಸುವ ಧೂಮ್ರ ಮಾರ್ಗವು ಇದೇ. ॥ ೩೬ ॥ ಎರಡನೆಯ “ಅರ್ಚಿರಾದಿ” ಮಾರ್ಗವು ಅದು ಸುಲಭ ಮತ್ತು ಸುಗಮವಾದದ್ದು ಅದೆ. ಮತ್ತು ಅದು ಸಹಜವಾಗಿ ಕಲ್ಯಾಣ ಕಾರಕವಾದದ್ದಿದ್ದು ಮೋಕ್ಷ ಪ್ರಾಪ್ತಿಯನ್ನು ಮಾಡಿಕೊಡಲಿಕ್ಕೆ ಉತ್ತಮವಾದದ್ದು ಅದೆ. ॥ ೩೭ ॥

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾऽವರ್ತತೇ ಪುನಃ ॥ ೨೬ ॥**

**[ ಶುಕ್ಲ ಕೃಷ್ಣೇ ಇತಿ ]** ಐಸಿಯಾ ಅನಾದಿಯಾ ದೋನೀ ವಾಟಾ । ಏಕೀ ಉಜೂ ಏಕೀ ಅವ್ಹಾಂಟಾ । ಮ್ಹಣವೂನಿ ಬುದ್ಧಿಪೂರ್ವಕ ಸುಭಟಾ । ದಾವಿಲಿಯಾ ತುಜ ॥ ೩೮ ॥ ಕಾಜೇ ಮಾರ್ಗಾ ಮಾರ್ಗ ದೇಖಾವೇ । ಸಾಚ ಲಟಿಕೇ ಓಳಖಾವೇ । ಹಿತಾಹಿತ ಜಾಣಾವೇ । ಹಿತಾಚಿ ಲಾಗೀ ॥ ೩೯ ॥ ಪಾಹೇ ಪಾ ನಾವ ದೇಖತಾ ಬರವೀ । ಕೋಣೀ ಆಡ ಘಾಲೀಕಾಯ ಅಥಾವೀ । ಕಾ ಸುಪಂಥ ಜಾಣೋನಿ ಅಡವೀ । ರಿಗವತ ಅಸೇ ॥ ೪೦ ॥ ಜೋ ವಿಷ ಅಮೃತ ಓಳಖೇ । ತೋ ಅಮೃತ ಕಾಯ ಸಾಂಡೂ ಶಕೇ । ತೇವೀ ಜೋ ಉಜೂವಾಟ ದೇಖೇ । ತೋ ಅವ್ಹಾಂಟಾ ನ ಪಚೇ ॥ ೪೧ ॥ ಮ್ಹಣೋನಿ ಪುಢೇ । ಪಾರಖಾವೇ ಖರೇ ಕುಡೇ । ಪಾರಖಿಲೇ ತರೀ ನ ಪಡೇ । ಅನವಸರೇ ಕಾಂಹೀ ॥ ೪೨ ॥ ಏರ್ಹವೀ ದೇಹಾಂತೀ ಥೋರ ವಿಷಮು । ಯಾ ಮಾರ್ಗಾಚೇ ಆಹೇ ಸಂಭ್ರಮು । ಜನ್ಮೀ ಅಭ್ಯಾಸಿಲಿಯಾಚೇ ಹನಕಾಮು । ಜಾಈಲ ವಾಯಾ ॥ ೪೩ ॥ ಜರೀ ಅರ್ಚಿರಾದಿ ಮಾರ್ಗ ಚುಕಲಿಯಾ । ಅವಚಟೇ ಧೂಮ್ರಪಂಥೀ ಪಡಿಲಿಯಾ । ತರೀ ಸಂಸಾರ ಪಾಂತೀ ಜುಂತಲಿಯಾ । ಭಂವತಚಿ ಅಸಾವೇ ॥ ೪೪ ॥ ಹೇ ಸಾಯಾಸ ದೇಖೋನಿ ಮೋಠೇ । ಆತಾ ಕೈಸೇನಿ ಪಾ ಏಕ ವೇಳ ಫಿಟೇ । ಮ್ಹಣೋನಿ ಯೋಗ ಮಾರ್ಗ

ಗೋಮಟೀ । ಶೋಧಿಲೀ ದೋನ್ಹೀ ॥ ೪೫ ॥ ತವ ಏಕೇ ಬ್ರಹ್ಮತ್ವಾ ಜಾಇಜೇ । ಆಣಿ ಏಕೇ ಪುನರಾವೃತ್ತೀಯೇಇಜೇ । ಪರೀ ದೈವಗತ್ಯಾ ಜೋ ಲಾಹಿಜೇ । ದೇಹಾಂತೀ ಜೇಣೇ ॥ ೪೬ ॥

**ಅರ್ಥ—** ಒಂದು ಸರಲ, ಒಂದು ಅಡ್ಡ ಹೀಗೆ ಎರಡು ದಾರಿಗಳು, ಅನಾದಿಕಾಲದಿಂದ ನಡೆದು ಬಂದಿರುತ್ತವೆ. ಆದುದರಿಂದ ಎಲೋ ಮಹಾವೀರನೇ! ಅದನ್ನು ನಿನಗೆ ಬುದ್ಧಿಪೂರ್ವಕವಾಗಿ ತೋರಿಸಿದ್ದೇನೆ. ॥ ೩೮ ॥ ಯಾಕಂದರೆ ಆ ಮಾರ್ಗದಲ್ಲಿ ಉತ್ತಮವಾದದ್ದು ಯಾವದು, ಮತ್ತು ಕೆಡಕು ಯಾವದೆಂಬದು ನಿನಗೆ ಒಡೆದು ಕಾಣಬೇಕು. ಮತ್ತು ನಿಜವಾದದ್ದು ಯಾವದು ಎಂಬದರ ವಿಚಾರವನ್ನು ಮಾಡಬೇಕಾಗುವದು. ॥ ೩೯ ॥ ಹೀಗೆ ನೋಡು, ಉತ್ತಮವಾದ ನೌಕೆಯನ್ನು ನೋಡಿದ ಮೇಲೆಯೂ ಆಳವಾದ ಮಡುವಿನಲ್ಲಿ ಯಾರಾದರೂ, ಹಾರಿಕೊಳ್ಳುವರೇ ? ಅಥವಾ ಸರಳವಾದ ರಾಜಮಾರ್ಗವನ್ನು ಬಿಟ್ಟು ಅಡದಾರಿಯನ್ನು ಹಿಡಿದು ಯಾರಾದರೂ ಹೋಗುವರೇನು ? ॥ ೪೦ ॥ ವಿಷ ಮತ್ತು ಅಮೃತ ಈ ಎರಡೂ ಪದಾರ್ಥಗಳನ್ನು ಪರೀಕ್ಷಿಸಬಲ್ಲನವು. ಅಮೃತವನ್ನು ಚಲ್ಲಿಕೊಡುವನೇನು ? ಅದೇ ಪ್ರಕಾರಾ ಯಾವನು ಸರಳ ಮಾರ್ಗವನ್ನು ನೋಡಿರುತ್ತಾನೋ, ಅವನು ಅಡಮಾರ್ಗವನ್ನು ಎಂದಿಗೂ ಹಿಡಿಯುವದಿಲ್ಲ. ॥ ೪೧ ॥ ಆದುದರಿಂದ ಮೊದಲಿಗೆ ನಿಜವಾದದ್ದಾವುದು, ಮತ್ತು ಅಸತ್ಯವಾದದ್ಯಾವದೆಂಬುದನ್ನು ಪರೀಕ್ಷಿಸಲಿಕ್ಕೆ ಬೇಕು. ಹಾಗೆ ಮಾಡದವನು ಯಾವಾಗ್ಯೂ ಸಂಕಟದಲ್ಲಿ ಬೀಳುವದಿಲ್ಲ. ಅವನ ದೇಹವು ಅಕಾಲದಲ್ಲಿ, ಬಿದ್ದು ಹೋಗುವದಿಲ್ಲ. ॥ ೪೨ ॥ ಹಾಗೆ ಮಾಡದೇ ಇದ್ದರೆ, ಮರಣಕಾಲದಲ್ಲಿ ಈ ಭ್ರಾಂತಿಕಾರಕ ಧೂಮ್ರ ಮಾರ್ಗದ ದೊಡ್ಡ ಭಯವು ಮತ್ತು ಸಂಕಟವು ಅದೆ. ಇದರ ಹೊರ್ತು ಜನ್ಮದಾರಭ್ಯ ಯಾವ ಹೇತುವಿನಿಂದ ಅಭ್ಯಾಸ ಮಾಡಿರುವನು, ಅದು ವ್ಯರ್ಥವಾಗಿ ಹೋಗುವದು. ॥ ೨೪೩ ॥ ಅರ್ಚಿರಾದಿ ಮಾರ್ಗವು ತಪ್ಪಿ ಹೋಗಿ ಅಕಸ್ಮಾತ್ ಧೂಮ್ರ ಮಾರ್ಗದಲ್ಲಿ ಬಿದ್ದರೆ ಜನನಮರಣದ ಚಕ್ರದಲ್ಲಿ ತೊಡಕಿಕೊಂಡು ಯಾವಾಗಲೂ ಸುತ್ತುತ್ತಲೇ ಇರಬೇಕಾಗುವದು. ॥ ೪೪ ॥ ಈ ಜನನ ಮರಣದ ಕಷ್ಟವನ್ನು ನೋಡಿ ಈ ಸಂಕಟವು ಯಾವದರಿಂದ ಇಲ್ಲದಂತೆ ಆದೀತೆಂದು ವಿಚಾರಮಾಡಿ ಈ ಎರಡೂ ಯೋಗ ಮಾರ್ಗಗಳನ್ನು ಚನ್ನಾಗಿ ಸ್ಪಷ್ಟವಾಗಿ ಹೇಳಿರುವೆನು. ॥ ೨೪೫ ॥ ಆದರೆ ಒಂದು (ಅರ್ಚಿರಾದಿ) ಮಾರ್ಗದಿಂದ ಬ್ರಹ್ಮಪ್ರಾಪ್ತಿಯಾಗುತ್ತದೆ. ಇನ್ನೊಂದು (ಧೂಮ್ರಮಾರ್ಗದಿಂದ) ಪುನರ್ಜನ್ಮಕ್ಕೆ ಬರಬೇಕಾಗುತ್ತದೆ. ಆದರೆ ದೇಹಾವಸಾನದ ಕಾಲಕ್ಕೆ ಪ್ರಾಕ್ತನಾನುಸಾರವಾಗಿ ಯಾವನಿಗೆ ಯಾವದು ಪ್ರಾಪ್ತವಾದೀತು ಅದೇ ನಿಜ ॥ ೨೪೬ ॥

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭ ॥**

**[ ನೈತೇ ಇತಿ ]** ತೇ ವೇಳೀ ಮ್ಹಣಿತಲೇ ಹೇ ನವ್ಹೇ । ವಾಯಾ ಅವಚಟೇ ಕಾಯ ಪಾವೇ । ದೇಹ ತ್ಯಜೂನಿ ವಸ್ತು ಹೋಆವೇ । ಮಾರ್ಗೇ ಚ ಕೀ ॥ ೪೭ ॥ ತರೀ ಆತಾ ದೇಹ ಅಸೋ ಅಥವಾ ಜಾವೋ । ಆಮ್ಹೀ ತೋ ಕೇವಳ ವಸ್ತೂಚಿ ಆಹೋ । ಕಾ ಜೇ ದೋರೀ ಸರ್ಪತ್ವಾವೋ । ದೋರಾಚಿ-ಕಡೂನಿ ॥ ೪೮ ॥ ಮಗ ತರಂಗ ಪಣ ಅಸೇ ಕೀ ನಸೇ । ಐಸೇ ಹೇ ಉದಕಾ ಪ್ರತಿ ಕಹಿ ಭಾಸೇ । ತೇ ಭಲತೇವ್ಹಾ ಜೈಸೇ ತೈಸೇ । ಉದಕಚಿ ಕೀ ॥ ೪೯ ॥ ತರಂಗಾಕಾರೇ ನ ಜನ್ಮೇಚಿ । ನಾ ತರಂಗ ಲೋಪೇ ನಿಮೋಚಿ । ತೇವೀ ದೇಹೀ ಜೇ ದೇಹೇಂಚಿ । ವಸ್ತು ಜಾಹಾಲೇ ॥ ೫೦ ॥ ಆತಾ ಶರೀರಾಚೇ ತಯಾಂಚಿಯಾ ರಾಈ । ಆಡನಾವಹೀ ಉರಲೇ ನಾಹೀ । ತರೀ ಕೋಣೇ ಕಾಳೇ ಕಾಈ । ನಿಮೋ ತೇ ಪಾಹೇ ಪಾ ॥ ೫೧ ॥ ಮಗ ಮಾರ್ಗಾತೇ ಕಾಸಯಾ ಶೋಧಾವೇ । ಕೋಣೇ ಕೋರೂನಿ ಕೇ ಜಾವೇ । ಜರೀ ದೇಶ ಕಾಳಾದಿ ಆಘವೇ । ಆಪಣಚಿ ಅಸೇ ॥ ೫೨ ॥ ಆಣಿ ಹಾ ಗಾ ಘಟು ಜೇ ವೇಳೀ ಫುಟೇ । ತೇ ವೇಳೀ ತೇಥೀಂಚೇ ಆಕಾಶ ಲಾಗೇ ನೀಟ ವಾಟೇ । ವಾಟಾ ಲಾಗಲೇ ತರಿ ಗಗನಾ ಭೇಟೇ । ಯೇರವೀ ಚುಕೇ ॥ ೫೩ ॥

ಸಾಹೇ ಪಾ ಐಸೇ ಹನ ಆಹೇ । ಕೀ ತೋ ಆಕಾರೂಚಿ ಜಾಯೇ । ಯೇರ ಗಗನ ತೇ ಗಗನೀಚಿ ಆಹೇ । ಘಟತ್ವಾಹೀ ಆಧೀ ॥ ೫೪ ॥ ಐಸಿಯಾ ಬೋಧಾಚೇನಿ ಸುರವಾಡೇ । ಮಾರ್ಗಾ ಮಾರ್ಗಾಚೇ ಸಾಂಕಡೇ । ತಯಾ ಸೋಹಂ ಸಿದ್ಧಾ ನ ಪಡೇ । ಯೋಗಿ ಯಾಂಸೀ ॥ ೫೫ ॥ ಯಾ ಕಾರಣೇ ಪಾಂಡುಸುತಾ । ತುವಾ ಹೋ ಆವೇ ಯೋಗ ಯುಕ್ತಾ । ತೇತುಲೇನಿ ಸರ್ವ ಕಾಳೀ ಸಾಮ್ಯತಾ । ಆಪೈಸಯಾ ಹೋಯಿಲ ॥ ೫೬ ॥ ಮಗ ಭಲತೇಥ ಭಲತೇ ವ್ಹಾ । ದೇಹ ಅಸೋ ಅಥವಾ ಜಾವಾ । ಪರೀ ಅಬಂಧಾ ನಿತ್ಯ ಬ್ರಹ್ಮಭಾವಾ । ವಿಘಡ ನಾಹೀ ॥ ೫೭ ॥ ತೋ ಕಲ್ಪಾದಿ ಜನ್ಮಾ ನಾಗವೇ । ಕಲ್ಪಾಂತೀ ಮರಣೇ ನಾಪ್ಲವೇ । ಮಾಜೀ ಸ್ವರ್ಗ ಸಂಸಾರಾಚೇನಿ ಲಾಘವೇ । ಝುಕವೇನಾ ॥ ೫೮ ॥ ಯೇಣೇ ಬಾಧೇ ಜೋ ಯೋಗೀ ಹೋಯೇ । ತಯಾಸೀಚಿ ಯಾ ಬೋಧಾಚೇ ನೀಟಪಣ ಆಹೇ । ಕಾ ಜೇ ಭೋಗಾಂಚೇ ಪೇಲೂನ ಪಾಯೇ । ನಿಜ ರೂಪಾ ಯೇ ॥ ೫೯ ॥ ಪೈಗಾ ಇಂದ್ರಾದಿಕಾ ದೇವಾ । ಜಯಾ ಸರ್ವಸ್ವೇ ಸ್ವರ್ಗೀ ಗಾಜತೀ ರಾಣಿವಾ । ತೇ ಸಾಂಡಣೇ ಮಾನೂನಿ ಪಾಂಡವಾ । ಡಾವಲೀ ಜೋ ॥ ೨೬೦ ॥

**ಅರ್ಥ—** (ಮರಣಕಾಲದಲ್ಲಿ ಅರ್ಚಿರಾದಿ ಮಾರ್ಗವು ನಮ್ಮ ಪಾಲಿಗೆ ಬರುತ್ತದೋ, ಅಥವಾ ಧೂಮ್ರ ಮಾರ್ಗವು ಬಂದು ಒದಗುತ್ತದೆಂಬವು ಅನಿಶ್ಚಿತವಾಗಿರುತ್ತದೆಂಬದನ್ನು ನೋಡಿ ಅರ್ಜುನನು ಖಿನ್ನನಾದನು.) ಆ ವೇಳೆದಲ್ಲಿ ಭಗವಂತನು ಅನ್ನುತ್ತಾನೆ. ದೇಹವು ಹೋಗಿ ಅರ್ಚಿರಾದಿ ಮಾರ್ಗದಿಂದ ಬ್ರಹ್ಮರೂಪವಾದೀತೆಂಬದು ವ್ಯರ್ಥವಾದದ್ದಿರುತ್ತದೆ. ಕಾರಣವೇನಂದರೆ ಪ್ರಾರಬ್ಧವಶಾತ್ ಅಕಸ್ಮಾತ ಯಾವದು ಪ್ರಾಪ್ತವಾದೀತೆಂಬದು ಯಾರಿಗೆ ಗೊತ್ತಾಗುವದು ? (ಅದು ತಿಳಿಯುವದಿಲ್ಲ.) ಆದುದರಿಂದ ಇದು ಬೇಡೇ ಬೇಡ. ॥ ೪೭ ॥ ಆದರೆ ಇನ್ನು ಮೇಲೆ ದೇಹ ಇರಲಿ, ಅಥವಾ ಹೋಗಲಿ, ನಾವು ಕೇವಲ ಬ್ರಹ್ಮಸ್ವರೂಪವೇ ಇದ್ದೇವೆಂಬವನ್ನು ಜ್ಞಾನಿಗಳು ತಿಳಿಯುತ್ತಾರೆ. ಕಾರಣವೇನಂದರೆ ಹಗ್ಗದ ಮೇಲಿನ ಸರ್ಪನ ಭ್ರಮೆಯು ಹಗ್ಗದ ಸತ್ಯತ್ವವು ಕಂಡು ಬಂದಕೂಡಲೆ ಹೇಗೆ ಇಲ್ಲದಂತೆ ಆಗುತ್ತದೆ. ॥ ೪೮ ॥ ತನ್ನ ಮೇಲೆ ಥೆರೆಗಳು ಬರುತ್ತವೆ ಅಥವಾ ಇಲ್ಲದಂತೆ ಆಗಿರುತ್ತವೆಂಬದು, ಯಾವ ಕಾಲದಲ್ಲಿಯೂ, ನೀರಿಗೆ ಭಾಸವಾಗುವದೇನು ? ಆದರೆ ಯಾವಾಗ ನೋಡಿದರೂ ನೀರು ಇದ್ದಕ್ಕಿದ್ದಂತೆ ಸ್ಥಿರವಾಗಿಯೇ ಇರುತ್ತದೆ. ॥ ೪೯ ॥ ಆ ನೀರಿನಲ್ಲಿ ಥೆರೆಗಳು ಉಂಟಾಗುವದರಿಂದ ಅವು ಜನ್ಮ ಹೊಂದುವದಿಲ್ಲ, ಇಲ್ಲವೇ ಥೆರೆಗಳು ಇಲ್ಲದಂತೆ ಆದಮೇಲೆಯೂ ಆ ನೀರು ನಾಶ ಹೊಂದುವದಿಲ್ಲ. ಈ ಪ್ರಕಾರಾ ದೇಹದಲ್ಲಿದ್ದು ಯಾರು ದೇಹಸಹಿತ ಬ್ರಹ್ಮರೂಪವಾದರು, ॥ ೨೫೦ ॥ ಅವರು ಬ್ರಹ್ಮರೂಪವಾದಮೇಲೆ ಆ ತತ್ವವೇತ್ತ್ಯರಲ್ಲಿ ಶರೀರವೆಂಬ ಹೆಸರೇ ಉಳಿಯುವದಿಲ್ಲ. ಆದರೆ ಅಲ್ಲಿ ಯಾವ ಕಾಲದಲ್ಲಿ ಯಾವದು ನಾಶ ಹೊಂದುವದದೆ ? ॥ ೨೫೧ ॥ ಆದರೆ ಸರ್ವ ದೇಶಕಾಲ ಮುಂತಾದವು ತಾನೇ ಆಗಿರಲು ಅಂದಬಳಿಕ "ಅರ್ಚಿರಾದಿ" ಅಥವಾ "ಧೂಮ್ರ ಮಾರ್ಗ" ಇವುಗಳ ಶೋಧವಮಾಡುತ್ತ ಏಕೆ ಕೂಡಬೇಕು ಮತ್ತು ಯಾರು ಎಲ್ಲಿಂದ ಎಲ್ಲಿಗೆ ಹೋಗಬೇಕಾಗಿರುವದು ? ॥ ೨೫೨ ॥ ಮತ್ತು ಯಾವ ವೇಳ್ಯೆಕ್ಕೆ ಕೊಡವು ವಡಿಯುತ್ತದೆ. ಆಗ್ಗೆ ಆ ಕೊಡದಲ್ಲಿರುವ ಆಕಾಶವು ಸರಳ ಮಾರ್ಗದಿಂದ ಹೋದರೆ ಅದು ಮಹದಾಕಾಶದಲ್ಲಿ ಹೋಗಿ ಕೂಡುತ್ತದೆ. ಇಲ್ಲವೇ ಇದ್ದರೆ ಕೂಡುವದು ತಪ್ಪುವದೇನು ? ॥ ೨೫೩ ॥ ಹೀಗೆ ನೋಡು ನಿಜವಾದ ಮಾತು ಹೇಗೆ ಇರುವವೆಂದರೆ ಆ ಘಟದ ಆಕಾರದ್ದೇ ನಾಶವಾಗುತ್ತದೆ. ಆದರೆ ಘಟಾಕಾಶವು ಘಟನಿರ್ಮಾಣ ಮಾಡುವ ಪೂರ್ವದಲ್ಲಿಯೂ, ಮೂಲತಃ ಆಕಾಶರೂಪವಾಗಿಯೇ ಇರುವದು. ॥ ೫೪ ॥ ಈ ತರದ ಬೋಧದ ಅನಕೂಲತೆಯಿಂದ ನಾನು ಬ್ರಹ್ಮಸ್ವರೂಪನಾಗಿರುವೆನೆಂದು ಜ್ಞಾನವಾದ ಯೋಗಿಗಳಿಗೆ ಅರ್ಚಿರಾದಿ ಅಥವಾ ಧೂಮ್ರ ಮಾರ್ಗದ ಸಂಕಟವು ಬೀಳುವದಿಲ್ಲ. ॥ ೨೫೫ ॥ ಈ ಕಾರಣದ ದೆಶೆಯಿಂದ ಎಲೋ ಪಂಡುಪುತ್ರನೇ ! ನೀನು ಯೋಗ ಸಂಪನ್ನನಾಗು ಆ ಯೋಗದಿಂದ ನಿನಗೆ ಯಾವಾಗಲೂ ತನ್ನಿಂದ ತಾನೇ ಬ್ರಹ್ಮಸ್ವರೂಪತಾ ಪ್ರಾಪ್ತವಾದೀತು. ॥ ೨೫೬ ॥

ಆ ಮೇಲೆ ಬೇಕಾದ ಸ್ಥಳದಲ್ಲಿ ಬೇಕಾದಾಗ್ಗೆ ದೇಹವು ಇರಲಿ ಅಥವಾ ಹೋಗಲಿ. ಆದರೆ ನಿಷ್ಪ್ರತಿಬಂಧಪರಬ್ರಹ್ಮ ಸ್ವರೂಪಕ್ಕೆ ಅಂತರ ಬೀಳಲಿಕ್ಕಿಲ್ಲ. ॥ ೨೫೭ ॥ ಅದು ಸೃಷ್ಟಿಯ ಆರಂಭದಲ್ಲಿ ಜನ್ಮಕ್ಕೆ ಬರುವದಿಲ್ಲ ಸೃಷ್ಟಿಯ ಅಂತ್ಯದಲ್ಲಿ ಮರಣವನ್ನು ಹೊಂದುವದಿಲ್ಲ ಮತ್ತು ಸೃಷ್ಟಿಯ ಸ್ಥಿತಿಯಲ್ಲಿ ಸ್ವರ್ಗ ಮತ್ತು ಸಂಸಾರಸುಖ ಇವುಗಳ ಮೋಹದಿಂದ ಯಾವಾಗಲೂ ಮೋಸಹೋಗುವದಿಲ್ಲ. ॥ ೫೮ ॥ ಈ ಬೋಧದಿಂದ ಯಾವ ಯೋಗಿಯು ಸಾವಧಾನ ವಾಗಿರುತ್ತಾನೋ, ಅವನಿಗೆ ಈ ಬೋಧದ ಫಲಪ್ರಾಪ್ತಿಯು ಆಗುತ್ತದೆ. ಕಾರಣವೇನಂದರೆ ಅವನು ವಿಷಯೋಪ ಭೋಗವನ್ನು ದಾಟಿ ಬ್ರಹ್ಮರೂಪದಲ್ಲಿ ಕೂಡಿರುತ್ತಾನೆ ॥ ೫೯ ॥ ಹೀಗೆ ನೋಡು, ಇಂದ್ರ ಮೊದಲಾದ ದೇವತೆಗಳಿಗೆ ಸ್ವರ್ಗದಲ್ಲಿ ಯಾವಾಗಲೂ ಸರ್ವಪ್ರಕಾರದ ಸುಖೋಪಭೋಗವು ದೊರಕುತ್ತದೆ. ಅರ್ಜುನನೆ! ಆ ಸುಖವನ್ನು ನಿವಾಳಿಸಿ ಒಗೆದ ಪದಾರ್ಥದಂತೆ ತ್ಯಾಜ್ಯವೆಂದು ತಿಳಿದು ಆ ಸುಖವನ್ನು ( ಬ್ರಹ್ಮಜ್ಞಾನಿಗಳು ) ದೂರವಾಗಿ ಸರಿಸಿ ಬಿಟ್ಟಿರುತ್ತಾರೆ. ॥ ೨೬೦ ॥

**ವೇದೇಷು ಯಜ್ಞೇಷು ತಪಸ್ಸು ಚೈವ ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ॥**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ ॥೨೮॥**

**ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ' ಅಕ್ಷರ ಬ್ರಹ್ಮಯೋಗೋ ' ನಾಮ ಅಷ್ಟಮೋಽಧ್ಯಾಯಃ ॥ ೮ ॥**

**[ ವೇದೇಷ್ವಿತಿ ]** ಜರೀ ವೇದಾಧ್ಯಯನಾಚೀ ಜಾಲೀ । ಅಥವಾ ಯಜ್ಞಾಚೀ ಶೇತ ಪಿಕಲೀ । ಕೀ ತಪದಾನಾಂಚೇ ಜೋಡಲೇ । ಸರ್ವಸ್ವ ಹನಜೇ ॥ ೬೧ ॥ ತಯಾ ಆಘವಾ ಪುಣ್ಯಾಚಾ ಮಳಾ । ಭಾರ ಆಂತೌನಿ ಜಯಾ ಯೇ ಫಳಾ । ತೇ ಪರಬ್ರಹ್ಮ ನಿರ್ಮಳಾ । ಸಾಂಟ ನ ಸರೆ ॥ ॥ ೬೨ ॥ ಜೇ ನಿತ್ಯಾನಂದಾಚೇನಿ ಮಾನೇ । ಉಪಮೇತಾ ಕಾಂಟಾಳಾ ನದಿಸೇ ಸಾನೇ । ಪಾ ಹಾ ಪಾ ವೇದ ಯಜ್ಞಾದಿ ಸಾಧನೇ । ಜಯಾ ಸುಖಾ ॥ ೬೩ ॥ ಜೇ ವಿಟೇ ನಾಸರೇ । ಭೋಗೀ ತಯಾ ಚೇನಿ ಪವಾಡೇ ಪುರೇ । ಪುಢತೀ ಮಹಾ ಸುಖಾಚೇ ಸೋಯರೇ । ಭಾವಂಡಚೀ ॥ ೬೪ ॥ ಐಸೇ ದೃಷ್ಟೀಚೇನಿ ಸುಖಪಣೇ । ಜಯಾಸಿ ಅದೃಷ್ಟಾಚೇ ಬೈಸಣೇ । ಜೇ ಶತಮುಖಾಹೀ ಆಂಗವಣೇ ನೋಹೇಚಿ ಏಕಾ ॥ ೬೫ ॥ ತಯಾತೇ ಯೋಗೀಶ್ವರ ಅಲೌಕಿಕೇ । ಡಿಠೀಚೇನಿ ಹಾತ ತುಕೇ । ಅನುಮಾನತೀ ಕೌತುಕೇ । ತವ ಹಳವಾರ ಆವಡೇ ॥ ೬೬ ॥ ಮಗ ತಯಾ ಸುಖಾಚೀ ಕಿರೀಟೇ । ಕರೂನಿಯಾ ಗಾ ಪಾವುಠೇ । ಪರಬ್ರಹ್ಮಾಚಿಯೇ ಪಾಠೀ । ಆರೂಢತೀ ॥ ೬೭ ॥ ಐಸೆ ಚರಾ ಚರೈಕ ಭಾಗ್ಯ । ಜೇ ಬ್ರಹ್ಮೇಶಾ ಆರಾಧನೇ ಯೋಗ್ಯ । ಯೋಗಿಯಾಂಚೇ ಭೋಗ್ಯ । ಭೊಗಧನ ಜೇ ॥ ೬೮ ॥ ಜೋ ಸಕಳಕಳಾಚೀ ಕಳಾ । ಜೋ ಪರಮಾನಂದ ಪುತಳಾ । ಜೋ ಜೀವಾಚಾ ಜಿವ್ಹಾಳಾ । ವಿಶ್ವಾಚಿಯಾ ॥ ೬೯ ॥ ಜೋ ಸರ್ವಜ್ಞತೇಚಾ ವೋಲಾವಾ । ಜೋ ಯಾದವ ಕುಳೀಂಚಾ ಕುಳದಿವಾ । ತೋ ಶ್ರೀಕೃಷ್ಣಜೀ ಪಾಂಡವಾ । ಪ್ರತೀ ಬೋಲಿಲಾ ॥ ೭೦ ॥ ಐಸಾ ಕುರು ಕ್ಷೇತ್ರೀಂಚಾ ವೃತ್ತಾಂತ । ಸಂಜಯೋರಾಯಾಸಿ ಅಸೇ! ಸಾಂಗತ । ತೇಚಿ ಪರಿಯೇಸಾ ಪುಢಾರೀ ಮಾತ ಜ್ಞಾನದೇವ ಮ್ಹಣೇ ॥೨೭೧॥

**ಇತಿ ಶ್ರೀಜ್ಞಾನದೇವವಿರಚಿತಾಯಾಂ ಭಾವಾರ್ಥದೀಪಿಕಾಯಾಂ ಅಷ್ಟಮೋಽಧ್ಯಾಯಃ ॥ ೮ ॥ ಶ್ಲೋಕ ೨೮, ಓವಿಗಳು ೨೭೧**

**ಅರ್ಥ—** ಒಂದುವೇಳೆ ವೇದಾಧ್ಯಯನಮಾಡಿ ವೈದಿಕನಾದರೆ, ಅಥವಾ ಯಜ್ಞಮಾಡಿ ಪುಣ್ಯದ ಹೊಲವೇ ಬೆಳೆದರೆ, ಇಲ್ಲವೇ ತಪಶ್ಚರ್ಯ ಮತ್ತು ದಾನಮಾಡಿ ಸರ್ವಪುಣ್ಯಗಳನ್ನು ದೊರಕಿಸಿದರೆ, ॥ ೨೬೧ ॥ ಇಂಥ ಪ್ರಕಾರದ ಸರ್ವಪುಣ್ಯಗಳ ತೋಟವು ಫಲದ ಭಾರದಿಂದ ತುಂಬಿಹೋದರೆ, ಆ ಸರ್ವ ಸುಕೃತಗಳು ನಿತ್ಯಶುದ್ಧ ಪರಮಾತ್ಮ ಪರಬ್ರಹ್ಮನ ಸಮಾನವಾಗಲರಿಯವು. ॥ ೨೬೨ ॥ ಯಾವದು ನಿತ್ಯಾನಂದದ ತುಲನೆಯ ತಕ್ಕಡಿಯಲ್ಲಿ

ಹಾಕಿನೋಡಲು, ಪರಬ್ರಹ್ಮ ರೂಪಕ್ಕೆ ಸಂಣದಾಗುತ್ತದೋ ಯಾವ ಸುಖದ ಪ್ರಾಪ್ತಿಯುದೆಶೆಯಿಂದ ವೇದಯಜ್ಞಾದಿ ಸಾಧನಗಳನ್ನು ಮಾಡಬೇಕಾಗುತ್ತದೋ, ॥೨೬೩॥ ಆ ಸ್ವರ್ಗಸುಖವು ಬೇಸರಾಗುವದಿಲ್ಲ. ಮತ್ತು ತ್ರಪ್ತಿಯಾಗುವಂತೆ ಇಲ್ಲ. (ಮುಗಿಯುವದಿಲ್ಲ.) ಮತ್ತು ಭೋಗ ತೆಗೆದುಕೊಳ್ಳುವವರ ಇಚ್ಛಾ ಪೂರ್ಣಮಾಡುತ್ತದೆ, ಹೊರತು ಸ್ವರ್ಗಸುಖವು (ಮಹಾಸುಖ) ಅಂದರೆ ಪರಬ್ರಹ್ಮ ಸುಖದ ಪ್ರೀತಿಯು ತಂಮನೇ ಆಗಿರುವದು. ॥ ೨೬೪ ॥ ಈ ಪ್ರಕಾರಾ ಮೇಲಿಂದಲೇ ಮಾತ್ರ ಕಾಣುವ ಆ ಸುಖವು, ಮರಣಾನಂತರವೇ ದೊರಕುತ್ತದೆ. ಮತ್ತು ಅದು ನೂರುಯಜ್ಞಗಳನ್ನು ಮಾಡಿಯೂ, ಎಷ್ಟೋಜನರಿಗೆ ದೊರಕುವದಿಲ್ಲ. ॥ ೨೬೫ ॥ ಆ ಸ್ವರ್ಗಸುಖಕ್ಕೆ ಯೋಗೀಶ್ವರರು (ತಂಮ) ಲೋಕೋತ್ತರ ವಿಚಾರ ದೃಷ್ಟಿರೂಪಿ ಕೈಮೇಲೆ ಲೀಲೆಯಿಂದ ತೂಗಿ ನೋಡಲು, ಬ್ರಹ್ಮ ಸುಖದಮುಂದೆ ಸ್ವರ್ಗಸುಖವು ಹಗುರಾಗಿರುವದೆಂದು ಕಂಡುಬರುತ್ತದೆ. ॥ ೨೬೬ ॥ ಅರ್ಜುನನೇ! ಆ ಮೇಲೆ ಆ ಯೋಗೀಶ್ವರರು ಆ ಸ್ವರ್ಗಸುಖದ ಪಾವಟಿಗೆಗಳನ್ನು ಮಾಡಿ ಪರಬ್ರಹ್ಮದ ರಾಜ್ಯದ ಮೇಲೆ ಆರೂಢರಾಗುತ್ತಾರೆ. ॥ ೨೬೭ ॥ ಈ ಪ್ರಕಾರಾ ಸ್ಥಾವರ ಜಂಗಮಾತ್ಮಕ ಜಗತ್ಯದ ಯಾವ ಒಂದು ಭಾಗ್ಯವು ಅದೆ, ಅದು ಬ್ರಹ್ಮದೇವನಿಗೂ, ಮತ್ತು ಶ್ರೀಶಂಕರನಿಗೂ, ಸಹಾ ಆರಾಧನೆ ಮಾಡುವಂಥದು, ಮತ್ತು ಯೋಗಿಗಳಿಗೆ ಉಪಭೋಗ ತೆಗೆದುಕೊಳ್ಳಲಿಕ್ಕೆ ಯೋಗ್ಯವಾದ ವಸ್ತು ಯಿರುತ್ತದೆ. ॥ ೨೬೮ ॥ ಮತ್ತು ಆದ್ಯ ಜ್ಞಾನಸ್ವರೂಪನು, ಮತ್ತು ಯಾವನು ಪರಮಾನಂದದ ಕೇವಲಮೂರ್ತಿಯು, ಯಾವನು ಸರ್ವ ವಿಶ್ವದೊಳಗಿನ ಪ್ರಾಣಿ ಮಾತ್ರಗಳ ಜೀವನನು, ॥ ೨೬೯ ॥ ಯಾವನು ಸರ್ವಜ್ಞಾನದ ಜೀವನ ನಾಗಿರುವನೋ, ಮತ್ತು ಯಾದವಕುಲದ ಕುಲದೀಪಕನಾದ ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಹೀಗೆ ಮಾತನಾಡಿದನು. ॥ ೨೭೦ ॥ ಈ ಪ್ರಕಾರಾ ಕುರುಕ್ಷೇತ್ರದಲ್ಲಿಯ ಕಥೆಯ ಭಾಗವನ್ನು ಸಂಜಯನು ಧೃತರಾಷ್ಟ್ರರಾಜನ ಮುಂದೆ ಹೇಳುತ್ತಿದ್ದನು. ಆ ಕಥೆಯನ್ನು ಮುಂದೆ ಹೇಳುವೆನು. ಶ್ರವಣ ಮಾಡಿರೆಂದು ಶ್ರೀಜ್ಞಾನೇಶ್ವರರು ಅನ್ನುತ್ತಾರೆ. ॥ ೨೭೧ ॥

**ಶ್ರೀಮದ್‌ಭಗವದ್ಗೀತೆಯ ಮತ್ತು ಶ್ರೀಜ್ಞಾನೇಶ್ವರಿಯ ಸರಲ, ಸುಲಭ, ಕನ್ನಡ, ಅನುವಾದದ ಎಂಟನೆಯ ಅಧ್ಯಾಯವು ಮುಗಿದುದು.**

## ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**



# ಜ್ಞಾನೇಶ್ವರೀ

---

## ಒಂಬತ್ತನೆಯ ಅಧ್ಯಾಯವು

ತರೀ ಅವಧಾನ ಯೇಕಲೇ ದೀಜೇ । ಮಗ ಸರ್ವ ಸುಖಾಸಿ ಪಾತ್ರ ಹೋಇಜೇ । ಹೇ ಪ್ರತಿಜ್ಞೋತ್ತರ ಮಾಝೇ । ಉಘಡ ಆಇಕಾ ॥ ೧ ॥ ಪರೀ ಪ್ರೌಢೀ ನ ಬೋಲೇ ಹೋಂಜೇ । ತುಮ್ಹಾ ಸರ್ವಜ್ಞಾಂಚ್ಯಾ ಸಮಾಜೇ । ದೇಯಾವೇ ಅವಧಾನ ಹೇ ಮಾಝೇ । ವಿನವಣೀ ಸಲಗೀಚೀ ॥ ೨ ॥ ಕಾ ಜೇ ಲಳೇಯಾಂಚೇ ಲಳೇ ಸರತೀ । ಮನೋರಥಾಂಚೇ ಮನೋರಥ ಪುರತೀ । ಜರೀ ಮಾಹೇರ ಶ್ರೀಮಂತೇ ಹೋತೀ । ತುಮ್ಹಾ ಐಸೀ ॥ ೩ ॥ ತುಮಚೇಯಾ ದಿಠೀವೇಯಾಚಿಯೇ ಬೋಲೇ । ಸಾಸಿನ್ನಲೇ ಪ್ರಸನ್ನ ತೇಚೇ ಮಳೇ । ತೇಸಾವುಲೀ ದೇಖೋನೀ ಲೋಳೇ । ಶ್ರಾಂತ ಜೇ ಮೀ ॥ ೪ ॥ ಪ್ರಭೂ ತುಮ್ಹೀ ಸುಖಾಮೃತಾಚೇ ಡೋಹೋ । ಮ್ಹಣೋನಿ ಆಪುಲಿಯಾ ಸ್ವೇಚ್ಛಾ ಮೋಲಾವಾ ಲಾಹೋ । ತೇಥಹೀ ಜರೀ ಸಲಗೀ ಕರೂಬಿಹೋ । ತರೀ ನಿವೋ ಕೇ ಪಾ ॥ ೫ ॥ ನಾತರೀ ಬಾಳಕ ಬೋಬಡಾ ಬೋಲೀ । ಕಾಂ ವಾಕುಡಾ ವಿಚುಕಾ ಪಾಊಲೀ । ತೇ ಚೋಜ ಕರೂನಿ ಮಾವುಲೀ । ರಿಝೇ ಜೈಸೀ ॥ ೬ ॥ ತೇವೀ ತುಮ್ಹಾ ಸಂತಾಚಾ ಪಢಿಯಾವೋ । ಕೈಸೇನಿ ತರೀ ಆಮ್ಹಾವರೀ ಹೋ । ಯಾ ಬಹುವಾ ಆಳುಕಿಯಾ ಜೇ ಆಹೋ । ಸಲಗೀ ಕರಿತ ॥ ೭ ॥ ವಾಂಚೂನಿ ಮಾಝಿಯೇ ಬೋಲತೀಯೇ ಯೋಗ್ಯತೇ। ಸರ್ವಜ್ಞ ಭವಾದೃಶ ಶ್ರೋತೇ । ಕಾಯ ಧಡ್ಯಾವರೀ ಸಾರಸ್ವತೇ । ವಢೋ ಸಿಕಿಜೇ ॥ ೮ ॥ ಅವಧಾರಾ ಆವಡೇ ತೇಸಣಾ ಧುಂಧುರೂ । ಪರೀ ಮಹಾತೇಜೇ ನ ಮಿರವೇ ಕಾಯ ಕರೂ । ಅಮೃತಾಚಿಯಾ ತಾಟೇ ವೋಗರೂ । ಐಸೀ ರಸಸೋಯ ಕೈಂಚೀ ॥ ೯ ॥ ಹಾ ಹೋ ಹಿಮಕರಾಸೀ ವಿಂಜಣೇ ಕೀ ನಾದಾ ಪುಡೇ ಆಇಕವಣೇ । ಲೇಣೆಯಾಸಿ ಲೇಣೇ । ಹೇ ಕಹೀ ಆಥೀ ॥ ೧೦ ॥ ಸಾಂಗಾ ಪರಿಮಳೇ ಕಾಯ ತುರಂಬಾವೇ । ಸಾಗರೇ ಕವಣೇ ಠಾಯೀ ನಾಹಾವೇ । ಹೇ ಗಗನಚಿ ಆಡೇ ಆಘವೇ । ಐಸಾ ಪವಾಡು ಕೈಂಚಾ ॥ ೧೧ ॥ ತೈಸೇ ತುಮಚೇ ಅವಧಾನ ಧಾಯೇ । ಆಣಿ ತುಮ್ಹೀ ಮ್ಹಣಾ ಹೇ ಹೋಯೇ । ಐಸೇ ವಕ್ತೃತ್ವ ಕವಣಾ ಆಹೇ । ಜೇಣೇ ರಿಝಾ ತುಮ್ಹೀ ॥ ೧೨ ॥ ತರೀ ವಿಶ್ವ ಪ್ರಗಟತಿಯಾ ಗಭಸ್ತೀ । ಕಾಯ ಹಾತಿವೇನ ನ ಕೀಜೇ ಆರತೀ । ಕಾ ಚುಳೋದಕೇ ಅಪಾಂಪತೀ । ಅರ್ಘ್ಯ ನೇದಿಜೇ ॥ ೧೩ ॥ ಪ್ರಭೂ ತುಮ್ಹೀ ಮಹೇಶಾಚಿಯಾ ಮೂರ್ತಿ । ಆಣಿ ಮೀ ದುಬಳಾ ಅರ್ಚಿತಸೇ ಭಕ್ತೀ । ಮ್ಹಣೋನಿ ಬೋಲ ಜರ್ಹೀ ಗಂಗಾವತೀ । ತರ್ಹೀ ಸ್ವೀಕಾರಾಲಕೀ ॥ ೧೪ ॥ ಬಾಳಕ ಬಾಪಾಚಿಯೇ ತಾಟೀರಿಗೆ । ಆಣಿ ಬಾಪಾತೇಚ ಜೇವವೂ ಲಾಗೇ । ಕೀ ತೋ ಸಂತೋಷಲೇನಿ ವೇಗೇ । ಮುಖಚಿ ಮೋಢವೀ ॥ ೧೫ ॥ ತೈಸಾ ಮೀ ಜರೀ ತುಮ್ಹಾ ಪ್ರತೀ । ಚಾವಟೀ ಕರಿತಸೇ ಬಾಳಮತೀ । ತರೀ ತುಮ್ಹೀ ಸಂತೋಷಿಜೇ ಐಸೀ ಜಾತೀ । ಪ್ರೇಮಾಚೇ ಅಸೇ ॥ ೧೬ ॥ ಆಣಿ ತೇಣೇ ಆಪುಲೇ ಪಣಾಚೇನಿ ಮೋಹೇ । ತುಮ್ಹೀ ಸಂತ ಘೇತಲೇ ಅಸಾ ಬಾಹೇ । ಮ್ಹಣೋನಿ ಕೇಲಿಯೇ ಸಲಗೀಚಾ ನೋಹೇ । ಅಭಾರ ತುಮ್ಹಾ ॥ ೧೭ ॥ ಅಹೋ ತಾನ್ಹಯಾಚೇ ಲಾಗತಾ ಝುಟೇ । ತೇಣೇ ಅಧಿಕಚಿ ಪಾನ್ಹಾ ಫುಟೇ । ರೋಷೇ ಪ್ರೇಮ ದುಣವಟೇ । ಪಢಿಯಂತಯಾ.

ಚೇನಿ ॥ ೧೮ ॥ ಮ್ಹಣವೂನಿ ಮಜ ಲೇಕುರ ವಾಚೇನಿ ಬೋಲೇ । ತುಮಚೇ ಕೃಪಾಳೂ ಪಣ ನಿದ್ರೈಲೇ । ತೇ ಚೇಇಲೇ ಐಸೇ ಜೇ ಜಾಣವಲೇ । ಯಾ ಲಾಗೀ ಬೋಲಿಲೋ ಮೀ ॥ ೧೯ ॥ ಯೇರ್ಹವೀ ಚಾಂದಿಣೇ ಪಿಕವಿಜತ ಆಹೇಚೇಪಣೇ । ಕೀ ವಾರ್‍ಯಾ ಘಾಪತ ಆಹೇ ವಾಹಣೇ । ಹಾ ಹೋ ಗಗನಾಸಿ ಗವಸಣೇ । ಘಾಲಿಜೇ ಕೇವೀ ॥ ೨೦ ॥ ಆಇಕಾ ಪಾಣಿ ಪೋಥಿ ಜಾವೇ ನ ಲಗೇ । ನವನೀತೀ ಮಾಥುಲಾ ನ ರಿಗೇ । ತೇವೀ ಲಾಜಿಲೇ ವ್ಯಾಖ್ಯಾನ ಸಿಗೇ । ದೇಖೋನಿ ಜಯಾಂತೇ ॥ ೨೧ ॥ ಹೇ ಅಸೋ ಶಬ್ದಬ್ರಹ್ಮ ಜಿಯೇ ಬಾಜೇ । ಶಬ್ದ ಮಾವಳಲೇಯಾ ನಿವಾಂತ ನಿಜೇ । ತೋ ಗೀತಾರ್ಥ ಮರ್‍ಹಾಟೇಯಾ ಬೋಲಿಜೇ । ಹಾ ಪಾಡು ಕಾಈ ॥ ೨೨ ॥ ಪರಿ ಐಸಿಯಾಹೀ ಮಜ ಧಿಂವಸಾ । ತೋ ಪುಢತೀ ಯಾಚಿ ಯೇಕೀ ಆಶಾ । ಜೇ ಧಿಟೀವಾ ಕರೂನ ಭವಾ ದೃಶಾ । ಪಢಿಯಂತಯಾ ಹೋ ಆವೇ ॥ ೨೩ ॥ ತರೀ ಆತಾ ಚಂದ್ರಾ ಪಾಸೋನಿ ನಿವ ವಿತೇ । ಜೇ ಅಮೃತಾ ಹೂನಿ ಜೀವವಿತೇ । ತೇಣೇ ಅವಧಾನೇ ಕೀಜೇ ವಾಢತೇ । ಮನೋರಥ ಮಾಝಿಯಾ ॥ ೨೪ ॥ ಕಾ ಜೈ ದಿಠಿವಾ ತುಮಚಾ ವರುಷೇ । ತೈ ಸಕಳಾರ್ಥ ಸಿದ್ಧಿ ಮತೀ ಪಿಕೇ । ಯೇರ್ಹವೀ ಕೋಂಭೇಲಾ ಉನ್ಮೇಷ ಸುಕೇ । ಜರೀ ಉದಾಸ ತುಮ್ಹೀ ॥ ೨೫ ॥ ಸಹಜೇ ತರೀ ಅವಧಾರಾ । ವಕ್ತೃತ್ವಾ ಅವಧಾನಾಚಾ ಹೋಯ ಚಾರಾ । ತರೀ ದೋಂದೇ ಪೇಲತೀ ಅಕ್ಷರಾ । ಪ್ರಮೇಯಾಚೀ ॥ ೨೬ ॥ ಅರ್ಥ ಬೋಲಾಚೀ ವಾಟ ಪಾಹೇ । ತೇಥ ಅಭಿಪ್ರಾವೋಚಿ ಅಭಿಪ್ರಾಯಾತೇ ವಿಯೇ । ಭಾವಾಚಾ ಫುಲೌರಾ ಹೋತ ಜಾಯೇ । ಮತಿವರೀ ॥ ೨೭ ॥ ಮ್ಹಣೂನಿ ಸಂವಾದಾಚಾ ಸುವಾವೋ ಢಳೇ । ತರ್ಹೀ ಹೃದಯಾಕಾಶಾ ಸಾರಸ್ವತ ವೋಳೇ । ಆಣಿ ಶ್ರೋತಾ ದುಶ್ಚಿತ ತರೀ ವಿತುಳೇ । ಮಾಂಡಲಾರಸ ॥ ೨೮ ॥ ಅಹೋ ಚಂದ್ರಕಾಂತ ದ್ರವತಾ ಕೀರ ಹೋಯೇ । ಪರೀ ತೇ ಹಾತವಟೀ ಚಂದ್ರೀ ಕೀ ಆಹೇ । ಮ್ಹಣವೂನಿ ವಕ್ತಾ ತೋ ವಕ್ತಾ ನೋಹೇ । ಶ್ರೋತೇನವಿಣ ॥ ೨೯ ॥ ಪರೀ ಆತಾ ಆಮುತೇ ಗೋಡ ಕರಾವೇ । ಐಸೇ ತಾಂದುಳೀ ಕಾಸಯಾ ವಿನವಾವೇ । ಸಾಇಖಡೀಯಾನೇ ಕಾಈ ಪ್ರಾರ್ಥಾವೇ । ಸೂತ್ರಧಾರಾತೇ ॥ ೩೦ ॥ ತೋ ಕಾಯ ಬಾಹುಲಿಯಾಂಚಿಯಾ ಕಾಜಾ ನಾಚವೀ । ಕೀ ಆಪುಲಿಯೇ ಜಾಣಿವೇಚೀ ಕಳಾ ವಾಢವೀ । ಮ್ಹಣವೂನಿ ಆಮ್ಹಾ ಯಾ ಠೇವಾಠೇವೀ । ಕಾಯ ಕಾಜ ॥ ೩೧ ॥ ತವ ಶ್ರೀಗುರು ಮ್ಹಣತೀ ಕಾಈ ಜಾಹಾಲೇ । ಹೇ ಸಮಸ್ತ ಹೀ ಆಮ್ಹಾ ಪಾವಲೇ । ಆತಾ ಸಾಂಗೇ ಜೇ ನಿರೋಪಿಲೇ । ಶ್ರೀಕೃಷ್ಣ ದೇವೇ ॥ ೩೨ ॥ ಯೇಥ ಸಂತೋಷೋನಿ ನಿವೃತ್ತಿ ದಾಸೇ । ಜೀ ಜೀ ಮ್ಹಣವೂನಿ ಉಲ್ಲಾಸೇ । ಅವಧಾರಾ ಶ್ರೀಕೃಷ್ಣ ಐಸೇ । ಬೋಲತೇ ಜಾಹಾಲೇ ॥ ೩೩ ॥

**ಅರ್ಥ—** ಶ್ರೀ ಜ್ಞಾನೇಶ್ವರ ಮಹಾರಾಜರು ಅನ್ನುತ್ತಾರೆ— ಶ್ರೋತೃಗಳಿರಾ ಕೇಳಿರಿ— ನಾನು ಪ್ರತಿಜ್ಞಾಪೂರ್ವಕವಾಗಿ ಸ್ಪಷ್ಟವಾಗಿ ಹೇಳುತ್ತೇನೆ. ನೀವು ಇತ್ತ ಕಡೆಗೆ ಅವಧಾನವಿಟ್ಟರೆ ಸರ್ವ ಸುಖಕ್ಕೆ ಪಾತ್ರರಾಗುವಿರಿ । ॥ ೧ ॥ ಆದರೆ ನಿಮ್ಮಂಥ ಸರ್ವಜ್ಞರ ಸಭೆಯಲ್ಲಿ ನಾನು ಪ್ರತಿಷ್ಠೆಯಿಂದ ಮಾತನಾಡುವದಿಲ್ಲ. ನೀವು ಅವಧಾನವನ್ನಿಡಿರಿ ಎಂದು ಹೇಳುವದು ಸಹಾ ಯೋಗ್ಯವಿರುವದಿಲ್ಲ. ಆದರೆ ಇದು ನಿಮಗೆ ನನ್ನ ಸಲಿಗೆಯ ವಿನಂತಿ ಇರುವದು. ॥ ೨ ॥ ಕಾರಣವೇನಂದರೆ ನಿಮ್ಮಂಥಾ ಐಶ್ವರ್ಯ ಸಂಪನ್ನರಾದ ತವರುಮನೆಯುವರು ಇದ್ದಮೇಲೆ ಅಲ್ಲಿ ಅಪೇಕ್ಷೆ ಮಾಡಿದ ಪ್ರೀತಿಯ ವಸ್ತುಗಳು ದೊರಕುವದಲ್ಲದೆ ಮನೋಭೀಷ್ಟಗಳೂ ಪೂರ್ಣ ಹೊಂದುತ್ತವೆ. ॥ ೩ ॥ ನಿಮ್ಮ ಕೃಪಾದೃಷ್ಟಿಯ ಹಸಿಯಿಂದ ಪ್ರಸನ್ನತೆಯ ತೋಟದಲ್ಲಿ ಭರದಿಂದ ಬೆಳೆದ ವೃಕ್ಷಗಳ ತಣ್ಣಗಿನ ನೆಳಲನ್ನು ನೋಡಿ ಶ್ರಮ ಹೊಂದಿದಂಥ ನಾನು ಆ ಸ್ಥಳದಲ್ಲಿ ವಿಶ್ರಾಂತಿ ಹೊಂದುತ್ತೇನೆ. ॥ ೪ ॥ ಮಹಾರಾಜರೇ ! ನೀವು ಸುಖಾಮೃತದ ಸಾಗರವೇ ಆಗಿರುವಿರಿ ಆದುದರಿಂದ ನಾನು ನನ್ನ ಇಚ್ಛಾಪ್ರಕಾರ ಅಲ್ಲಿ ಅವಗಾಹನವನ್ನು ಮಾಡಿ ತಣ್ಣಗಾಗಬೇಕೆಂದು ಅನ್ನುತ್ತೇನೆ. ಆ ಸ್ಥಳದಲ್ಲಿಯೂ ನಾನು ನಿಮ್ಮ ಕೂಡ ಸಲಿಗೆ ಮಾಡಲು ಭಯಪಟ್ಟು ಹಿಂಜರಿದರೆ ನನಗೆ ಇನ್ನು ಯಾವ ಸ್ಥಳದಲ್ಲಿ

ವಿಶ್ರಾಂತಿ ದೊರಕಬೇಕು ? ॥ ೫ ॥ ಇಲ್ಲವೆ ಸಣ್ಣ ಕೂಸಿನ ತೊದಲ್ನುಡಿಗಳಿಂದಲೂ, ತಪ್ಪಹೆಜ್ಜೆಗಳನ್ನಿಟ್ಟು ನಡೆಯುವದರಿಂದಲೂ, ತಾಯಿಯು ಆಶ್ಚರ್ಯಚಕಿತಳಾಗಿ ಹೇಗೆ ಆನಂದ ಪಡುವಳೋ, ॥ ೬ ॥ ಅದೇ ಪ್ರಕಾರಾ ನಿಮ್ಮ ಸಂತಜನರ ಪ್ರೀತಿಯು ಯಾವದಾದರೂ ರೀತಿಯಿಂದ ನನ್ನ ಮೇಲೆ ಆಗಬೇಕೆಂಬ ಪೂರ್ಣವಾದ ಉತ್ಕಟೇಚ್ಛೆಯಿಂದ ನಾನು ನಿಮ್ಮ ಕೂಡ ಸಲಿಗೆ ಮಾಡುತ್ತೇನೆ. ॥ ೭ ॥ ನಿಮ್ಮ ಸಮಾನರಾದ ಸರ್ವಜ್ಞ ಶ್ರೋತ್ರುಗಳ ಮುಂದೆ ನನ್ನ ಸಂಭಾಷಣದಿಂದ ಹೊಸದಾಗಿ ನೀವು ತಿಳಿದುಕೊಳ್ಳುವ ವಿಷಯವು ಏನಿರುವದು. ಸರಸ್ವತಿಯ ಮಗನಿಗೆ ಪಾಠಗಳನ್ನು ಕಲಿಸಬೇಕಾಗಿರುವದೇನು ? ॥ ೮ ॥ ನೋಡಿರಿ ಬೇಕಾದಂಥ ದೊಡ್ಡ ಕಾಜು ಇದ್ದರೂ ಸೂರ್ಯನ ಪ್ರಕಾಶದ ಮುಂದೆ ಅದರ ತೇಜ ಬೀಳುವದೇನು ? ಅಮೃತರೂಪಿ ತಾಟನಲ್ಲಿ ನೀಡುವಂಥ ಅಡಿಗೆಯನ್ನು ಹೇಗೆ ಮಾಡಬೇಕು ? ॥ ೯ ॥ ಎಲೋ, ಯಾವನ ಕಿರಣಗಳು ತಣ್ಣಗಿರುವವೋ ಇಂಥ ಚಂದ್ರನಿಗೆ ಬೀಸಣಿಕೆಯಿಂದ ಗಾಳಿ ಹಾಕುವದೂ, ಮಧುರ ಸುಸ್ವರಕ್ಕೆ ಗಾಯನವನ್ನು ಕೇಳಿಸುವದೂ, ಆಭರಣಗಳಿಗೆ ಅಲಂಕಾರವನ್ನು ಹಾಕುವದೂ, ಎಲ್ಲಿಯಾದರೂ ಇರುವದೇ? ॥೧೦॥ ಪರಿಮಳವು ಯಾವುದರ ವಾಸನೆಯನ್ನು ತೆಗೆದುಕೊಳ್ಳಬೇಕು ? ಸಮುದ್ರವು ಯಾವ ಸ್ಥಳದಲ್ಲಿ ಸ್ನಾನಮಾಡಬೇಕು ? ಆಕಾಶವು ಹಿಡಿಯುವಷ್ಟು ದೊಡ್ಡ ವಸ್ತುವು ಯಾವದು ? ಹೇಳು ನೋಡುವಾ ! ॥ ೧೧ ॥ ಅದೇ ಪ್ರಕಾರ ನೀವು ಈ ಶ್ರವಣದಿಂದ ತೃಪ್ತರಾದಿರಿ. ಮತ್ತು ಅಪ್ಪಾ ಈ ವ್ಯಾಖ್ಯಾನವು ಬಹಳ ಚೆನ್ನಾಗಿರುವದೆಂಬು ಅನ್ನುವಿರಿ. ಹೀಗೆ ನಿಮ್ಮನ್ನು ತೃಪ್ತಿಪಡಿಸುವಂಥ ವಕ್ತೃತ್ವವು ಯಾರಲ್ಲಿರುವದು ? ॥ ೧೨ ॥ ಆದರೂ ಸರ್ವ ಜಗತ್ತನ್ನು ಪ್ರಕಾಶಮಾಡುವಂಥ ಸೂರ್ಯ ನಾರಾಯಣನಿಗೆ ಭಕ್ತಿಯಿಂದ ತುಪ್ಪದಿಂದ ತೊಯ್ದ ಬತ್ತಿಯಿಂದ ಆರತಿಯನ್ನು ಬೆಳಗಬಾರದೇ ಹೇಗೆ ? ಇಲ್ಲವೇ ಸಮುದ್ರರಾಜನಿಗೆ ಬೊಗಸೆ ತುಂಬ ನೀರಿನಿಂದ ಅರ್ಘ್ಯವನ್ನು ಕೊಡಬಾರದೇ ಹೇಗೆ ? ॥ ೧೩ ॥ ಮಹಾರಾಜರೇ ! ನೀವು ಸಾಕ್ಷಾತ ಕೇವಲ ಪ್ರತ್ಯಕ್ಷ ಶ್ರೀ ಶಂಕರನ ಮೂರ್ತಿಯೇ ಇರುವಿರಿ. ಮತ್ತು ನಾನು ಒಬ್ಬ ದೈನ್ಯ ದರಿದ್ರನಿದ್ದು ನಿಮ್ಮನ್ನು ಭಕ್ತಿಪೂರ್ವಕವಾಗಿ ಪೂಜಿಸುತ್ತಿರುವೆನು. ಆದುದರಿಂದ ನನ್ನ ಸಂಭಾಷಣರೂಪೀ ಬಿಲ್ವದಳಗಳನ್ನು ನಿಮಗೆ ಅರ್ಪಿಸಿರುವೆನು. ನೀವು (ಆ ದಳಗಳನ್ನು) ನಿಶ್ಚಯವಾಗಿ ಸ್ವೀಕರಿಸುವಿರಿ. ॥೧೪॥ ಸಣ್ಣ ಮಗುವು ತಂದೆಯ ತಳಿಗೆಯಲ್ಲಿ ಭೋಜನ ಮಾಡುತ್ತಿರಲು ತನ್ನ ಯೋಗ್ಯತೆ ಇಲ್ಲದೇ ತಂದೆಗೆ ಉಣಿಸಹೋಗುತ್ತದೆ. ಆಗ್ಗೆ ಅವನು ಸಂತೋಷದ ಭರದಲ್ಲಿ ಮಗುವಿನ ಕೈ ತುತ್ತನ್ನು ತೆಗಿದುಕೊಳ್ಳುವದಕ್ಕೆ ತಾನಾಗಿಯೇ ಬಾಯಿ ಮುಂದೆ ಮಾಡುತ್ತಾನೆ. ॥ ೧೫ ॥ ಅದೇ ಪ್ರಕಾರಾ ನಾನು ಒಂದುವೇಳೆ ನಿಮ್ಮ ಸಂಗಡ ಸಣ್ಣ ಕೂಸಿನಂತೆ ವಿನೋದ ಮಾಡುತ್ತಿರಲು ಆ ನನ್ನ ವರ್ತನದಿಂದ ನಿಮಗೆ ಹೆಚ್ಚಿಗೆ ಆನಂದವು ಆಗಲಿಕ್ಕೇಬೇಕು. ಹೀಗೆ ಪ್ರೇಮದಲ್ಲಿ ಗುಣವೇ ಇರುವದು. ॥ ೧೬ ॥ ಮತ್ತು ನಾನು ನಿಮ್ಮವನೇ ಎಂಬುವ ಅಭಿಮಾನದಿಂದ ನೀವು ಸಂತ ಜನರು ಬಹಳೇ ರೀತಿಯಿಂದ ನನ್ನ ಮೇಲೆ ( ಮಗುವಿನಂತೆ ) ಪ್ರೇಮ ಮಾಡುತ್ತಿರುವಿರಿ. ಆದುದರಿಂದ ನನ್ನ ಈ ಸಲಿಗೆಯ ಸಂಭಾಷಣದ ವಿಷಯವಾಗಿ ನಿಮಗೆ ವಿಷಾದವೂ ( ಭಾರವೂ ) ಆಗಲಾರದು. ॥ ೧೭ ॥ ಎಲೋ! ಆಕಳ ಕರುವು ತಾಯಿಯ ಮೊಲೆಯನ್ನು ಗುದ್ದಿ ಗುದ್ದಿ ಉಂಡ ಹಾಗೆಲ್ಲ ಆಕಳವು ಹೆಚ್ಚೆಚ್ಚಿಗೆ ತೊರೆಬಿಡುತ್ತದೆ. ಅದರಂತೆ ಅತ್ಯಂತ ಪ್ರೀತಿಯ ಮನುಷ್ಯನ ಸಿಟ್ಟಿನಿಂದ ಪ್ರೇಮವು ದ್ವಿಗುಣಿತವಾಗುತ್ತದೆ. ॥ ೧೮ ॥ ಆದುದರಿಂದ ನನ್ನ ಸಣ್ಣ ಮಗುವಿನ ತೊದಲ್ನುಡಿಗಳಿಂದ ನಿಮ್ಮ ಮಲಗಿಕೊಂಡ ಕೃಪಾಳು ತನವು ಜಾಗೃತವಾದೀತೆಂಬ ನಂಬಿಗೆಯಿಂದ ನಾನು ಮಾತನಾಡಿದೆನು. ॥ ೧೯ ॥ ಆದರೆ ಚಂದ್ರಮನ ಬೆಳದಿಂಗಳನ್ನು ಯಾರ ದರೂ ಹಣ್ಣಿಗೆ ಹಾಕಿ ಪಕ್ವ ಮಾಡಿರುವಿರೋ ಹೇಗೆ ? ಇಲ್ಲವೇ ಗಾಳಿಗೆ ಬೀಸಲಿಕ್ಕೆ ಯಾರಾದರೂ ಗತಿ ಕೊಟ್ಟಿರುವರೋ ಹೇಗೆ ? ಅದರಂತೆ ಆಕಾಶಕ್ಕೆ ಆಚ್ಛಾದನವನ್ನು ಹೇಗೆ ಮಾಡಬೇಕು ? ॥ ೨೦ ॥ ಲಕ್ಷ್ಯವಿಡಿರಿ. ನೀರನ್ನು ತೆಳ್ಳಗೆ ಮಾಡಲಿಕ್ಕೆ ಬೇಕಾಗುವದಿಲ್ಲ. ಆದರೆ ಬೆಣ್ಣೆಯು ಬಂದಮೇಲೆ ಕಡಗೋಲಿನಿಂದ ಅದನ್ನು ಯಾರೂ ಕಡೆಯುವದಿಲ್ಲ. ಅದೇ ಪ್ರಕಾರ ಗೀತಾರ್ಥವನ್ನು ನೋಡಿ ನನ್ನ ವ್ಯಾಖ್ಯಾನವು ನಾಚಿ ಹೊರ ಹೊರಡುವದಿಲ್ಲ. ॥ ೨೧ ॥ ಇಂದತೂ ಇರಲಿ. ಯಾವದರ ಮುಂದೆ ವೇದದ ಶಬ್ದಗಳು ಕುಂಠಿತ ವಾದುದರಿಂದ ಅವು ಗೀತಾರ್ಥದ ಹಾಸಿಗೆಯ ಮೇಲೆ ಗಾಢವಾಗಿ ನಿದ್ರಿಸುತ್ತಿರುವವೋ ಆ ಗೀತಾರ್ಥವನ್ನು ಮಹಾರಾಷ್ಟ್ರ ಭಾಷೆಯಲ್ಲಿ ವರ್ಣಿಸುವ ಅಧಿಕಾರವು ನನ್ನಲ್ಲಿರುವದೇನು ? ॥ ೨೨ ॥ ಆದರೆ

ಹೀಗೆ ನನ್ನ ಸ್ಥಿತಿಯು ಇದ್ದರೂ, ಮುಂದಿನ ಒಂದು ಆಶಾದಿಂದ ( ಗೀತಾರ್ಥ ಹೇಳುವ ) ಅಪೇಕ್ಷೆ ಉಂಟಾಗಿರುವದು ಅದು ಯಾವದೆಂದರೆ ಧಿಟ್ಟತನದಿಂದ ಮಾತನಾಡಿ ನಿಮ್ಮಂಥ ( ಸತ್ಪುರುಷರ ) ಪ್ರೇಮಕ್ಕೆ ಪಾತ್ರ ನಾಗಬೇಕೆಂಬದೇ ನನ್ನ ಉದ್ದೇಶವು. ॥ ೨೩ ॥ ಆದರೆ ಚಂದ್ರನಿಗಿಂತ ತಣ್ಣಗೆ ಮಾಡುವ ಮತ್ತು ಅಮೃತದಕಿಂತಲೂ ಜೀವಿತ ವನ್ನು ವೃದ್ಧಿ ಮಾಡುವಂಥ ನಿಮ್ಮ ಅವಧಾನದಿಂದ ನನ್ನ ಮನೋರಥಕ್ಕೆ ಪುಷ್ಟಿಯನ್ನುಂಟುಮಾಡಬೇಕು ॥ ೨೪ ॥ ಕಾರಣವೇನಂದರೆ ನಿಮ್ಮ ಕೃಪಾದೃಷ್ಟಿರೂಪ ಮಳೆಯು ನನ್ನಮೇಲೆ ಸಂಪೂರ್ಣವಾಗಿ ಸುರಿದರೆ ನನ್ನ ಬುದ್ಧಿ ರೂಪ ಭೂಮಿಯಲ್ಲಿ ಸಕಲಾರ್ಥರೂಪ ಧಾನ್ಯದ ಬೆಳೆಯು ಬೆಳೆಯುವದು. ನೀವು ಉದಾಸೀನರಾದರೆ ಮಾತ್ರ ನನ್ನಲ್ಲಿ ಅಂಕುರಿಸಿದ ಜ್ಞಾನವು ನಶಿಸಿ ಹೋಗುವದು. ॥ ೨೫ ॥ ಸಹಜವೇ ವಕ್ತ್ಯಾನ ವಕ್ತೃತ್ವದ ಕಡೆಗೆ ಶ್ರೋತಾಗಳ ( ಸಂಪೂರ್ಣ ) ಲಕ್ಷ್ಯರೂಪಿ ಭೋಜನವು ದೊರೆತರೆ ವಕ್ತ್ಯಾನ ಅಕ್ಷರಗಳಿಗೆ ಅರ್ಥರೂಪಿ ಪುಷ್ಟಿಯು ಉಂಟಾಗುತ್ತದೆ. ॥ ೨೬ ॥ ಅರ್ಥವು ಶಬ್ದಗಳು ಹೊರಗೆ ಬೀಳುವ ಮಾರ್ಗದ ನಿರೀಕ್ಷಣ ಮಾಡುತ್ತಿರುತ್ತದೆ. ಶಬ್ದಗಳು ಹೊರಗೆ ಬಿದ್ದ ಕೂಡಲೇ ಅದರೊಳಗಿಂದ ಅರ್ಥದಮೇಲೆ ಅರ್ಥಹೊರಡುತ್ತ ಹೋಗುತ್ತದೆ. ಮತ್ತು ಬುದ್ಧಿಗೆ ನಾನಾ ಪ್ರಕಾರದ ಅಭಿಪ್ರಾಯಗಳ ಸ್ಫೂರ್ತಿ ಉಂಟಾಗಹತ್ತುತ್ತದೆ. ॥ ೨೭ ॥ ಆದುಪರಿಂದ ಸಂವಾದರೂಪೀ ಅನುಕೂಲವಾದ ಗಾಳಿಯು ಬೀಸುವದರಿಂದ ವಕ್ತ್ಯಾನ ಹೃದಯಾಕಾಶದಲ್ಲಿ ಶಾಸ್ತ್ರಸಿದ್ಧಾಂತರೂಪೀ ಮೇಘಗಳು ತುಂಬಿ ಬರುತ್ತವೆ. ಮತ್ತು ಅಲ್ಲಿ ಕೇಳುವವರ ದುರ್ಲಕ್ಷ್ಯವಿದ್ದರೆ ಮಾತ್ರವಕ್ತೃತ್ವಕ್ಕೆ ಉಂಟಾದ ರಸವು ಅಲ್ಲಿಂದಲ್ಲಿಯೇ ಕರಗಿ ಹೋಗುತ್ತದೆ. ॥ ೨೮ ॥ ಎಲೋ, ಚಂದ್ರಕಾಂತಮಣಿಯಲ್ಲಿ ಸೆಲೆಯು ( ನೀರು ) ಹೊರಡುವದೇನೋ ನಿಜ. ಆದರೆ ಈ ಸಾಮರ್ಥ್ಯವು ಚಂದ್ರನಲ್ಲಿಯೇ ಇರುವದು. ಆದುದರಿಂದ ವ್ಯಾಖ್ಯಾನ ಕರ್ತನಿಗೆ ಶ್ರೋತ್ರಗಳ ಹೊರ್ತು ಗತಿಯೇ ಇರುವದಿಲ್ಲ. ಶ್ರೋತ್ರಗಳ ಚಿತ್ತವು ಸಂಪೂರ್ಣ ಇರಬೇಕಾಗುತ್ತದೆ. ॥ ೨೯ ॥ ಆದರೆ ನಮಗೆ ರುಚಿ ಮಾಡಿಕೊಂಡು ಬಕ್ಷಿಸ ಬೇಕೆಂದು ಜನರಿಗೆ ಅಕ್ಕಿಗಳು ಬೇಡಿಕೊಳ್ಳುವವೇನು ? ಸೂತ್ರ ಗೊಂಬೆಗಳು ನಮಗೆ ಚನ್ನಾಗಿ ಕುಣಿಸೆಂದು ಸೂತ್ರಧಾರನಿಗೆ ಬೇಡಿಕೊಳ್ಳಬೇಕಾಗಿರುವದೇನು ? ॥ ೩೦ ॥ ಆ ಸೂತ್ರಧಾರನು ಆ ಗೊಂಬೆಗಳ ಸಲುವಾಗಿ ಅವುಗಳನ್ನು ಕುಣಿಸುತ್ತಿರುವನು ? ಆದರೆ ಅವನು ತನ್ನ ಜಾಣ ತನವನ್ನು ಜನರಿಗೆ ತೋರಿಸುವದರ ಸಲುವಾಗಿಯೇ ಆ ಗೊಂಬೆಗಳನ್ನು ಕುಣಿಸುತ್ತಿರುವನು. ಆಪ್ರಕಾರ ನಾನು ಒಂದು ಗೊಂಬೆಯಂತೆ ಇದ್ದೇನೆ. ನೀವು ಮಾತಾಡಿಸಿದಂತೆ ನಾನು ಮಾತನಾಡುವೆನು ! ನನಗೆ ಇಂಥಾದ್ದೇ ಹೀಗೇ ಮಾತಾಡಿಸಿರೆಂದು ನಿಮಗೆ ಪ್ರಾರ್ಥನೆಯನ್ನು ಮಾಡಿ ವ್ಯರ್ಥ ಶ್ರಮಪಡುವ ಕಾರಣವೇನು ? ॥ ೩೧ ॥ ಆ ವೇಳೆ ಯಲ್ಲಿ ಶ್ರೀಗುರು ನಿವೃತ್ತಿ ಮಹಾರಾಜರು ಅನ್ನುತ್ತಾರೆ— ಜ್ಞಾನದೇವನೇ ! ನೀನು ಇಷ್ಟು ವಿಸ್ತಾರವಾದ ವ್ಯಾಖ್ಯಾನ ವನ್ನು ಯಾಕೆ ಮಾಡುವಿ ? ನಿನ್ನ ಸರ್ವ ಅಭಿಪ್ರಾಯವು ನಮಗೆ ತಿಳಿದಿರುವದು. ಆದರೆ ಇನ್ನು ಮೇಲೆ ಶ್ರೀಕೃಷ್ಣ ಪರಮಾತ್ಮನು ಯಾವ ಸಂಭಾಷಣವನ್ನು ಅರ್ಜುನನ ಮುಂದೆ ಹೇಳದನು. ಅದನ್ನೇ ಶ್ರೋತ್ರಗಳ ಮುಂದೆ ಹೇಳು. ॥ ೩೨ ॥ ಆಗ್ಗೆ ನಿವೃತ್ತಿದಾಸ ಜ್ಞಾನದೇವನು ಸಂತೋಷವುಳ್ಳವನಾಗಿ ಬಹಳ ಆನಂದದಿಂದ ಅನ್ನುತ್ತಾನೆ— ಅಹುದು, ಶ್ರೀಗುರುಗಳೇ ಇನ್ನುಮುಂದೆ ನಾನು ಶ್ರೀಕೃಷ್ಣಾರ್ಜುನರ ಸಂವಾದವನ್ನೇ ಹೇಳುವೆನು. ಲಕ್ಷ್ಯವಿಡಬೇಕು. ॥ ೩೩ ॥

ಶ್ರೀ ಭಗವಾನುವಾಚ:—

ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧ ॥

[ ಇದಂ ತುತೇ ಗುಹ್ಯತಮಮಿತಿ ] ನಾತರೀ ಅರ್ಜುನಾ ಹೇ ಬೀಜ । ಪುಢತೀ ಸಾಂಗಿಜೇಲ ತುಜ । ಜೇಹೇ ಅಂತಃಕರಣೀಚೇ ಗುಜ । ಜಿವಾಚಿಯೇ ॥ ೩೪ ॥ ಯೇಣೇ ಮಾನೇ ಜಿವಾಚೇ ಹಿಯೇ ಫೋಡಾವೇ । ಮಗ ಗುಜಕಾಪಾ ಮಜ ಸಾಂಗಾವೇ । ಐಸೇ ಕಾಹೀ ಸ್ವಭಾವೇ । ಕಲ್ಪಿಶೀ ಜರೀ ॥ ೩೫ ॥ ತರೀ ಪರಿಯೇಸೀ ಗಾ ಪ್ರಾಜ್ಞಾ । ತೂ ಆಸ್ಥೇಚೀಚ

ಸಂಜ್ಞಾ । ಬೋಲಿಲಿಯೇ ಗೋಷ್ಟೀಚೀ ಅವಜ್ಞಾ । ನೇಣಸೀ ಕರೂ ॥ ೩೬ ॥ ಮ್ಹಣೋನಿ ಗೂಢಪಣ ಆಪುಲೇ ಮೋಡೋ । ಮರೀ ನ ಬೋಲಣೇಹೀ ಬೋಲಾವೇ ಘಡೋ । ಪರೀ ಆಮುಚಿಯೇ ಜೀವೀಂಚೆ ಪಡೋ । ತುರ್ಝಾ ಜೀವೀ ॥ ೩೭ ॥ ಅಗಾ ಥಾನೀ ಕೀರ ದೂಧ ಗೂಢ । ಪರೀ ಥಾನಾ ಸೀಚ ನವ್ಹೇ ಕೀ ಗೋಡ । ಮ್ಹಣೋನಿ ಸರೋ ಕಾ ಸೇವಿ ತಯಾಚೀ ಚಾಡ । ಜರೀ ಅನನ್ಯ ಮಿಳೇ ॥ ೩೮ ॥ ಮೂಡಾಹೂನಿ ಬೀಜ ಕಾಢಿಲೇ । ಮಗ ನಿರ್ವಾಳಾಲಿಯೇ ಭೂಮೀ ಪೇರಿಲೇ । ತರೀ ತೇ ಸಾಂಡಿ ವಿಖುರೀ ಗೇಲೇ । ಮ್ಹಣೋಯೇ ಕಾಇ ॥ ೩೯ ॥ ಯಾಲಾಗೀ ಸುಮನ ಆಣಿ ಶುದ್ಧಮತೀ । ಜೋ ಅಸಿಂದಕ ಅನನ್ಯಗತೀ । ಪೈಗಾ ಗೌಪ್ಯಹೀ ಪರೀ ತಯಾ ಪ್ರತೀ । ಚಾವಳಿಜೇ ಸುಖೇ ॥ ೪೦ ॥ ತರೀ ಪ್ರಸ್ತುತ ಆತಾ ಗುಣೀ ಇಹೀ । ತೂ ವಾಂಚೂನ ಆಣಿಕ ನಾಹೀ । ಮ್ಹಣೋನಿ ಗುಜ ತರೀ ತುರ್ಝ್ಯಾ ಠಾಯೀ । ಲಪವೂನಯೇ ॥ ೪೧ ॥ ಆತಾ ಕಿತೀ ನಾವಾ ನಾವಾ ಗುಜ । ಮ್ಹಣತಾ ಕಾನಡೇ ವಾಟೇಲ ತುಜ । ತರೀ ಸಾಂಗೇನ ಜ್ಞಾನ ಸಹಜ । ವಿಜ್ಞಾನೇಸೀ ॥ ೪೨ ॥ ಪರೀ ತೇಚಿ ಐಸೇನಿ ನಿವಾಡೇ । ಜೈಸೇ ಭೇಸಳಲೇ ಖರೇ ಕುಡೇ । ಮಗ ಕಾಢಿಜೇ ಫಾಡೋ ವಾಡೇ । ಪಾರಖೂನಿಯಾ ॥ ೪೩ ॥ ಕಾ ಚಾಂಚೂಚೇನಿ ಸಾಂಡಸೇ । ಖಾಂಡಿಜೇ ಪಯ ಪಾಣೀ ರಾಜಹಂಸೇ । ತುಜ ಜ್ಞಾನ ವಿಜ್ಞಾನ ತೈಸೇ । ವಾಂಟೂನಿ ದೇವೂ ॥ ೪೪ ॥ ಮಗ ವಾರಯಾಚಿಯಾ ಧಾರಸಾ । ಪಡಿನಲಾ ಕೋಂಡಾ ಕಾ ನುರೇಚಿ ಜೈಸಾ । ಅಣಿ ಕಣಾಚಾ ಆವೈಸಾ । ರಾಶಿವಾ ಜೋಡೇ ॥ ೪೫ ॥ ತೈಸೇ ಜೇ ಜಾಣಿತಲೇಯಾ ಸಾರೀ । ಸಂಸಾರ ಸಂಸಾರಾಚಿಯೇ ಗಾಂಠೀ । ಲಾವೂನಿ ಬೈಸವೀ ಪಾಟೀ । ಮೋಕ್ಷ ಶ್ರಿಯೇಚ್ಯಾ ॥ ೪೬ ॥

**ಅರ್ಥ—** ಅರ್ಜುನನೇ ! ನನ್ನ ಅಂತಃಕರಣದಲ್ಲಿ ಅತಿ ಗುಪ್ತವಾದ ಜ್ಞಾನದ ಆದಿ ಕಾರಣವನ್ನು ನಿನಗೆ ಮತ್ತೆ ಹೇಳುತ್ತೇನೆ. ॥ ೩೪ ॥ ಆದರೆ ಈ ಪ್ರಕಾರದ ಜೀವದೊಳಗಿನ ಗುಹ್ಯ ಮಾತನ್ನು ಬೈಲಿಗೆ ಒಡೆದು ಕಾಣುವಂತೆ ನಿನಗೆ ನಾನು ಯಾಕೆ ಹೇಳುತ್ತಿರಬೇಕೆಂಬ ಸಂಶಯವು ನಿನ್ನ ಮನಸಿನಲ್ಲಿ ಬರಬಹುದು. ॥ ೩೫ ॥ ಆದರೆ ಅಪ್ಪಾ ಅರ್ಜುನನೇ ! ಕೇಳು. ನೀನು ಒಳ್ಳೇ ತಿಳುವಳಿಕೆಯುಳ್ಳವನಿದ್ದು ಕೇವಲ ಆಸ್ತಾದ ಮೂರ್ತಿಯೇ ಆಗಿರುವಿ ಮತ್ತು ನಾವು ನಿನಗೆ ಏನು ಹೇಳುತ್ತೇವೆ ಅದನ್ನು ನೀನು ಅನಾದರ ಮಾಡುವದಿಲ್ಲ. ॥ ೩೬ ॥ ಆದುದರಿಂದ ನಮ್ಮ ಗುಪ್ತವಾದ ಮಾತು ಬೈಲಿಗೆ ಬಿದ್ದರೆ ಬೀಳಲಿ, ಮತ್ತು ಮಾತಾಡಬಾರದಂಥ ಮಾತು ಮಾತಾಡುವ ಪ್ರಸಂಗ ಬಂದರೂ ಬರಲಿ, ಆದರೆ ನಮ್ಮ ಹೃದಯದೊಳಗಿನ ಗುಹ್ಯ ಸಂಭಾಷಣವು ನಿನ್ನ ಹೃದಯದಲ್ಲಿ ಬೀಳಲಿ. ॥ ೩೭ ॥ ಎಲೋ ಅರ್ಜುನನೇ ! ಮೊಲಿಯಲ್ಲಿ ಹಾಲು ತುಂಬಿ ಕೊಂಡಿದ್ದಾಗ್ಯೂ ಅದರ ಸ್ವಾದವು ಸ್ತನಗಳಿಗೆ ಉಂಟಾಗುವದಿಲ್ಲ. ಮೊಲೆಯ ಹಾಲು ತೀರಿ ಹೋದರೂ ಅನನ್ಯ ಭಾವನೆಯಿಂದ ಸೇವನಮಾಡುವಂಥ ಕರುವಿಗೆ ಉಣಿಸುವ ಅಪೇಕ್ಷೆಯು ತಾಯಿಗೆ ಇರುತ್ತದೆ. ॥ ೩೮ ॥ ಕೂಡಿಟ್ಟ ಬಿತ್ತುವ ಬೀಜಗಳನ್ನು ತೆಗೆದು ಹಸನ ಮಾಡಿದ ಭೂಮಿಯಲ್ಲಿ ಬಿತ್ತುವದರಿಂದ ಅವು ವ್ಯರ್ಥವಾಗಿ ಹಾಳಾದವೆಂದು ಅನ್ನಲಿಕ್ಕೆ ಬಂದೀತೆ ಹೇಗೆ ॥ ೩೯ ॥ ಈ ಕಾರಣದಿಂದ ನಿರ್ಮಲಾಂತಃಕರಣವುಳ್ಳ ಶುದ್ಧಬುದ್ಧಿಯುವನೂ ಮತ್ತು ನಿಂದಾಮಾಡದೇ ಇರುವ ಏಕನಿಷ್ಠ ಭಕ್ತನಿಗೆ ನಮ್ಮ ಮನಸಿನೊಳಗಿನ ಗುಹ್ಯ ಸಂಭಾಷಣವನ್ನು ಆನಂದದಿಂದ ಹೇಳಬೇಕು. ॥ ೪೦ ॥ ಆದರೆ ಈ ಗುಣದಿಂದ ಸಂಪನ್ನನಾದಂಥವನು ಸದ್ಯಕ್ಕೆ ನಿನ್ನ ಹೊರ್ತು ಯಾರೂ ಇರುವದಿಲ್ಲ. ಆದುದರಿಂದ ಗುಪ್ತವಾದ ಮಾತು ಇದ್ದರೂ ನಿನಗೆ ಹೇಳದೆ ಮುಚ್ಚಿಡುವದು ಯೋಗ್ಯವಿರುವದಿಲ್ಲ. ॥ ೪೧ ॥ ಆದರೆ ಮೇಲಿಂದಮೇಲೆ ಗುಹ್ಯ ಮತ್ತು ಗುಪ್ತವೆಂದು ವರ್ಣನಮಾಡುವದರಿಂದ ನಿನಗೆ ಬೇಸರ ಉಂಟಾದೀತು. ಈ ಗುಹ್ಯ ಬ್ರಹ್ಮಜ್ಞಾನವನ್ನು ಪ್ರಾಪಂಚಿಕ ಜ್ಞಾನಸಹವಾಗಿ ನಿನಗೆ ಹೇಳುತ್ತೇನೆ. ॥ ೪೨ ॥ ಆದರೆ ನಿಜವಾದ ನಾಣ್ಯ ಇಲ್ಲವೇ ಖೊಟ್ಟಿ ನಾಣ್ಯಗಳು ಒಂದೇ ಸ್ಥಳದಲ್ಲಿ ಕೂಡಿದಮೇಲೆ ಅವುಗಳನ್ನು ಪರೀಕ್ಷಿಸಿ ಬೇರೆ ಬೇರೆ ಮಾಡಿ ಇಡುವಂತೆ. ॥ ೪೩ ॥ ಅಥವಾ ರಾಜಹಂಸ ಪಕ್ಷಿಯು ತನ್ನ ಚೊಂಚಿನಿಂದ ಪರೀಕ್ಷಿಸಿ ಹಾಲು ಮತ್ತು ನೀರು

ಬೇರೆ ಬೇರೆಯಾಗಿ ಮಾಡಿಡುವಂತೆ ಜ್ಞಾನ ಮತ್ತು ವಿಜ್ಞಾನ ಇವುಗಳನ್ನು ವಿಂಗಡಿಸಿ ಒಡೆದು ಕಾಣುವಂತೆ ಹೇಳುವೆನು । ೪೪ ॥ ಆದರೆ ಧಾನ್ಯದ ರಾಸಿ ಆದಮೇಲೆ ಒಂದೇಕಡೆಗೆ ಕೂಡಿದ ಕಾಳು ಹೊಟ್ಟನ್ನು ಗಾಳಿಗೆ ಹಿಡಿದು ತೂರಿದರೆ ಹೊಟ್ಟು ಹಾರಿಹೋಗಿ ತಳದಲ್ಲಿ ಕಾಳಿನರಾಸಿಯೇ ಉಳಿಯುತ್ತದೆ ॥೪೫॥ ಅದೇಪ್ರಕಾರಾ ಆ ಗುಹ್ಯಬ್ರಹ್ಮಜ್ಞಾನವನ್ನು ಪ್ರಾಪ್ತಿಮಾಡಿಕೊಳ್ಳುವದರಿಂದ ಶರೀರ ಮತ್ತು ಜನ್ಮಮರಣವ ತೊಡಕುಹಾಕಿ ಜನನ ಮರಣ ಬಂಧನದಿಂದ ಮುಕ್ತನಾಗಿ ಮುಮುಕ್ಷುವಿಗೆ ಆತ್ಮಸ್ವರೂಪ ಮೋಕ್ಷೈಶ್ವರ್ಯದ ರಾಜ್ಯದಮೇಲೆ ಪಟ್ಟಾಭಿಷೇಕವಾಗುವದು. ॥ ೪೬ ॥

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥ ೨ ॥**

**[ರಾಜವಿದ್ಯಾ ರಾಜಗುಹ್ಯಮಿತಿ]** ಜೇ ಜಾಣಣೇಯಾ ಸುವಿದ್ಯೇಚ್ಯಾ ಗಾಂವೀ । ಗುರುತ್ವಾಚೀ ಆಚಾರ್ಯ ಪದವೀ । ಜೇ ಸಕಳ ಗುಹ್ಯಾಂಚಾ ಗೋಸಾವೀ । ಪವಿತ್ರಾ ರಾವೋ ॥ ೪೭ ॥ ಆಣಿ ಧರ್ಮಾಚೇ ನಿಜಧಾಮ । ತೇವೀಂಚಿ ಉತ್ತಮಾಚೇ ಉತ್ತಮ । ಪೈಜಯಾ ಯೇತಾ ನಾಹೀ ಕಾಮ । ಜನ್ಮಾಂತರಾಚೇ ॥ ೪೮ ॥ ಮೋಟಕೇ ಗುರುಮುಖೇ ಉದ್ಭೈಜತ ದಿಸೇ । ಆಣಿ ಹೃದಯೀಂ ಸ್ವಯಂಭಚಿ ಅಸೇ । ಪ್ರತ್ಯಕ್ಷ ಫಾವೋ ಲಾಗೇ ತೈಸೇ । ಅಪ್ಪೈಸಯಾಚಿ ॥ ೪೯ ॥ ತೇವೀಂಚಿ ಗಾ ಸುಖಾಚ್ಯಾ ಪಾವುಟೀ। ಚಢತಾ ಯೇಇಜೇ ಜಯಾಚ್ಯಾ ಭೇಟೀ । ಮಗ ಭೇಟಲ್ಯಾ ಕೀರ ಮಿಠೀ । ಭೋಗಣೇಯಾಹಿ ಪಡೇ ॥ ೫೦ ॥ ಪರೀ ಭೋಗಾಚಿಯೇ ಐಲಿಕಡಿಲಿಯೇ ಮೇರೆ । ಚಿತ್ತ ಉಭೇ ಠೇಲೇ ಸುಖಾಭರೇ । ಐಸೇ ಸುಲಭ ಆಣಿ ಸೋಪಾರೇ । ವರೀ ಪರಬ್ರಹ್ಮ ॥ ೫೧ ॥ ಪೈ ಗಾ ಆಣಿಕಹೀ ಏಕ ಯಾಚೇ । ಜೇ ಹಾತಾ ಆಲಿಯಾ ತರೀ ನ ವಚೇ । ಆಣಿ ಅನುಭವಿತಾ ಕಾಹೀ ನ ವೇಂಚೇ । ವರೀ ವಿಟೇಹಿನಾ ॥ ೫೨ ॥ ಯೇಥ ಜರೀ ತೂ ತಾರ್ಕಿಕಾ । ಐಸೀ ಹನ ಘೇಸೀ ಶಂಕಾ । ನಾ ಯೇವಢೀ ವಸ್ತು ಹೇ ಲೋಕಾ । ಉರಲೀ ಕೇವೀ ಪಾ ॥ ೫೩ ॥ ಜೇ ಏಕೋತ್ತರೇಯಾಚಿಯಾ ವಾಢೀ । ಜಳತಿಯೇ ಆಗೀ ಘಾಲಿತೀ ಉಡೀ । ತೇ ಅನಾಯಾಸೇ ಸ್ವಗೋಡೀ । ಸಾಂಡಿತೀ ಕೇವೀ ॥ ೫೪ ॥ ತರೀ ಪವಿತ್ರ ಆಣಿ ರಮ್ಯ । ತೇವಿಂಚಿ ಸುಖೋಪಾಯ ಸುಗಮ್ಯ । ಆಣಿ ಸುಸುಖ ಪರಮ ಧರ್ಮ್ಯ । ವರೀ ಆಪಣಪಾ ಜೋಡೇ ॥ ೫೫ ॥ ಐಸಾ ಆಘವಾಚಿ ಹಾ ಸುರವಾಡ ಆಹೇ । ತರೀ ಜನಾ ಹಾತೀ ಕೇವೀ ಉರೋ ಲಾಹೇ । ಹಾ ಶಂಕೇಚಾ ಠಾವ ಕೀರ ಹೋಯೇ । ಪರೀ ನ ಧರಾವೇ ತುವಾ ॥ ೫೬ ॥

**ಅರ್ಥ –** ಯಾರಿಗೆ ಸರ್ವಜ್ಞಾನಗ ವಿಷಯದಲ್ಲಿ ಮುಖ್ಯ ಆಚಾರ್ಯರೆಂಬ ಪದವಿಯು ದೊರಕುತ್ತದೆ ಮತ್ತು ಯಾರು ಸರ್ವಗುಹ್ಯ ಜ್ಞಾನದ ಸ್ವಾಮಿಯೂ, ಪವಿತ್ರವಸ್ತುಗಳ ರಾಜನೂ, ॥೪೭॥ ಮತ್ತು ಧರ್ಮದ ಅಧಿಷ್ಠಾನನೂ ಉತ್ತಮರಲ್ಲಿ ಉತ್ತಮನೂ ಆಗಿರುವನು. ಯಾವ ಜ್ಞಾನದ ಪ್ರಾಪ್ತಿಯಾಗುವದರಿಂದ. ಅವನಿಗೆ ಪುನರ್ಜನ್ಮವನ್ನೆತ್ತುವ ಕಾರಣವೇ ಉಳಿಯುವದಿಲ್ಲ, ॥ ೪೮॥ ಆ ಬ್ರಹ್ಮಜ್ಞಾನವು ಗುರುಗಳ ಮುಖದಿಂದ ಮಹಾವಾಕ್ಯದ್ವಾರಾ ಶಬ್ದಸ್ವರೂಪದಿಂದ ಹೊರ ಹೊರಡುವಷ್ಟರಲ್ಲಿ ಶಿಷ್ಯನ ಅಂತಃಕರಣದಲ್ಲಿ ಸ್ವಯಮೇವ ಇರುವ ಬ್ರಹ್ಮವು ಅವನಿಗೆ ಸಹಜವೇ ಪ್ರತ್ಯಕ್ಷವಾಗುತ್ತದೆ. ॥ ೪೯ ॥ ಅದೇ ಪ್ರಕಾರಾ ಸುಖದ ಪಾವಟಿಗೆಗಳನ್ನು ಹತ್ತುತ್ತಹೋಗುವದರಿಂದ ಯಾವದರ ಭೆಟ್ಟಿಯಾಗುತ್ತದೊ, ಮತ್ತು ಆ ಭೆಟ್ಟಿ ಆದಮೇಲೆ ದರ್ಶನಮಾತ್ರದಿಂದ ಆಗುವ ಸುಖವು ಯಾವ ಸ್ಥಳದಲ್ಲಿ ಲಯಹೊಂದುತ್ತದೋ ॥ ೫೦ ॥ ಆದರೆ ಯಾವ ಸುಖದ ಈಚಿಯವಂಡೆಯ ಮೇಲೆ ನಿಂತಿರುವಾಗ್ಗೆ ಸಹ ಅಂತಃಕರಣವು ಆನಂದಯುಕ್ತವಾಗುತ್ತದೊ, ಹೀಗೆ ಸುಲಭವಿದ್ದು ಅದು ಶ್ರೇಷ್ಠಪರಬ್ರಹ್ಮವು ಅದೆ. ॥ ೫೧ ॥ ಅರ್ಜುನನೇ! ಸಿಜವಾಗಿ ಈ ಜ್ಞಾನದಲ್ಲಿ ಮತ್ತೊಂದು ಗುಣವಿರುತ್ತದೆ ಅದು ಯಾವದೆಂದರೆ ಅದು ಪ್ರಾಪ್ತವಾಗಿರಲು ಇಲ್ಲದಂತೆ ಆಗುವದಿಲ್ಲ. ಅದರ ಅನುಭವತೆಗಿದುಕೊಳ್ಳುವದರಿಂದ ಕಡಿಮೆ ಆಗುವದಿಲ್ಲ. ಮತ್ತು ಬೇಸರವೂ ಬರುವದಿಲ್ಲ ॥ ೫೨ ॥ ಎಲೈ ಜಾಣನಾದ ಅರ್ಜುನನೇ! ಇಂಥ ಅಪ್ರತಿಮವಾದ ವಸ್ತು ಜನರ ಕೈಯೊಳಗಿಂದ ಹೇಗೆ

ಉಳದಿರುವದು? ಈ ಶ್ರೇಷ್ಠವಸ್ತುವಿನ ಕಡೆಗೆ ಜನರು ಯಾಕೆ ನೋಡುವದಿಲ್ಲ? ಎಂಬ ಸಂಶಯುವು ನಿನಗೆ ಬರಬಹುದು. ॥ ೫೩ ॥ ಕಾರಣವೇನಂದರೆ– ಅವರು ನೂರಕ್ಕೆ ಒಂದು ರುಪಾಯಿ ಬಡ್ಡಿಯ ಲಾಭದ ಆಶಾದಿಂದ ಉರಿಯು ಬೆಂಕಿಯಲ್ಲಿ ಹಾರಿಕೊಳ್ಳುವರು (ಠಕ್ಕರಿಗೆ ಹಣಕೊಟ್ಟು ಸಂಕಟದಲ್ಲಿಬಿದ್ದು ಗೋಳಾಡುವರು ಅವರು ಸಹಜವೇ ತಮ್ಮಲ್ಲಿರುವ ಸುಖಸ್ವಾದವನ್ನು ಹೇಗೆ ಬಿಟ್ಟುಬಿಡುವರು? ॥ ೫೪ ॥ ಆದರೂ ಅದು ಪವಿತ್ರ ಮತ್ತು ರಮ್ಯ ಸುಖೋಪಾಯದಿಂದ ಪ್ರಾಪ್ತವಾಗುವಂಥದು, ತಿಳಿಯಲು ಅತಿ ಸುಲಭವಾದಂಥದು, ಬಹು ಸುಖಕರವಾದುದು, ಮತ್ತು ಪೂರ್ಣ ಧರ್ಮಾನುಕೂಲವಾಗಿರುವದು. ಅದು ತನ್ನಲ್ಲಿಯೇ ಇದ್ದು ತನಗೆ ದೊರಕುತ್ತದೆ. ॥ ೫೫ ॥ ಅರ್ಜುನನೇ! ಈ ಪ್ರಕಾರಾ ಸರ್ವ ಮಾತುಗಳು ಅನಕೂಲ ಇರುತ್ತಿರುವದು. ಅದು ಜನರ ಕೈಯೊಳಗೆ ದೊರಕದೇ ಹೇಗೆ ಉಳದಿರಬೇಕೆಂಬ ಸಂಶಯುವು ಉಂಟಾಗುವದೇನೋ ನಿಜ ಆದರೆ ಈ ಸಂಶಯುವನ್ನು ನಿನ್ನ ಮನಸಿನಲ್ಲಿ ತರಬೇಡ ಕಂಡಿಯಾ! ॥ ೫೬ ॥

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

[ **ಅಶ್ರದ್ದಧಾನಾ ಇತಿ** ] ಪಾಹೇ ಪಾ ದೂಧ ಪವಿತ್ರ ಆಣಿ ಗೋಡ । ಪಾಸೀ ತ್ವಚೇಚಿಯಾ ಪದರಾ ಆಡ । ಪರೀ ತೇ ಅವ್ಹೆರೂನಿಯಾ ಗೋಚಿಡ । ಅಶುದ್ಧಚಿ ಸೇವೀ ॥ ೫೭ ॥ ಕಾ ಕಮಲ ಕಂದಾ ಆಣಿ ದರ್ದುರೀ । ನಾಂದಣೂಕ ಏಕೇಚಿ ಘರೀ । ಪರೀ ಪರಾಗ ಸೇವಿಜೇ ಭ್ರಮರೀ । ಯೇರಾ ಚಿಖಲಚಿ ಉರೇ ॥ ೫೮ ॥ ನಾ ತರೀ ನಿದ್ದೈವಾಚ್ಯಾ ಪರಿವರೀ । ಲೋಹ್ಯಾ ರುತಲಿಯಾ ಆಹಾತಿ ಸಹಸ್ರವರೀ । ಪರೀ ತೇಥ ಬೈಸೋನಿ ಉಪವಾಸ ಕರೀ । ಕಾದವಿದ್ರೇಜಿಯೇ ॥ ೫೯ ॥ ತೈಸಾ ಹೃದಯಾ ಮಧ್ಯ ಮೀ ರಾಮು । ಅಸತಾ ಸರ್ವ ಸುಖಾಚಾ ಆರಾಮು । ಕೀ ಭ್ರಾಂತಾಸೀ ಕಾಮು । ವಿಷಯಾವರೀ ॥ ೬೦ ॥ ಬಹು ಮೃಗಜಳ ದೇಖೋನಿ ಡೋಳಾ । ಥುಂಕಿಜೇ ಅಮೃತಾಚಾ ಗಿಳಿತಾ ಗಳಾಳಾ । ತೋಡಿಲಾ ಪರಿಸ ಬಾಂಧಿಲಾ ಗಳಾ । ಶುಕ್ತಿಕಾಲಾಭೇ ॥ ೬೧ ॥ ತೈಸೀ ಅಹಂಮಮತೇಚಿಯೇ ಲವಡ ಸವಡೀ । ಮಾತೇ ನ ಪವಿತೀಚಿ ಬಾಪುಡೀ । ಮ್ಹಣೋನಿ ಜನ್ಮಮರಣಾಚಿಯೇ ಮುಥಡೀ । ಡಹುಳಿತೇ ಠೇಲೀ ॥ ೬೨ ॥ ಯೇರ್ಹವೀ ತರೀ ಮೀ ಕೈಸಾ । ಮುಖಾಪ್ರತಿ ಭಾನು ಕಾ ಜೈಸಾ । ಕೇಹೀ ನಸೇ ನ ದಿಸೇ ಐಸಾ । ವಾಣೀಚಾ ನೋಹೇ ॥ ೬೩ ॥

**ಅರ್ಥ**— ಅರ್ಜುನನೇ! ನೋಡು ಆಕಳ ಹಾಲು ಪವಿತ್ರವಿದ್ದು, ರುಚಿಕರವಾಗಿರುತ್ತವೆ. ಅವು ತೀರ ತ್ವಚದ ಸಮೀಪದಲ್ಲಿ ಪಂದು ಪದರಿನವಳಗೇ ಇದ್ದು ಆ ಹಾಲನ್ನು ಸ್ವೀಕರಿಸದೇ ತ್ಯಾಗಮಾಡಿ ಉಣ್ಣಿಯು ರಕ್ತವನ್ನೇ ಸೇವನ ಮಾಡುತ್ತದೆ. ॥ ೫೭ ॥ ಇಲ್ಲವೇ ಕಮಲದ ಬೊಡ್ಡಿಯಲ್ಲಿಯೇ ಕಪ್ಪೆಯು ವಾಸಮಾಡಿಕೊಂಡಿರುತ್ತದೆ. ಆದರೆ ಕಮಲ ಪುಷ್ಪದೊಳಗಿನ ಸುಗಂಧವನ್ನು (ಬಹು ದೂರಿನಿಂದ ಬಂದ) ಭ್ರಮರಗಳೇ ಸೇವನೆಮಾಡುತ್ತವೆ ಹೊರ್ತು ಕಪ್ಪೆಯ ಪಾಲಿಗೆ ಕೆಸರೇ ಉಳಿಯುತ್ತದೆ. ॥ ೫೮ ॥ ಅಥವಾ ದುರ್ದೈವಿ ಪುರುಷನ ಮನೆಯಲ್ಲಿ ಸಾವಿರಾರು ಮೋಹರುಗಳು ಹೂಳಿರುವವು ಆದರೆ ಅವನು ಆ ಸ್ಥಳದಲ್ಲಿಯೇ ಕುಳಿತುಕೊಂಡು ಉಪವಾಸಬಿದ್ದು ದರಿದ್ರಾವಸ್ಥೆಯನ್ನು ಭೋಗಿಸುವಂತೆ ॥ ೫೯ ॥ ಪ್ರಾಣಿಮಾತ್ರಗಳಿಗೆ ಸರ್ವಸುಖವನ್ನು ಕೊಡುವ ಸುಖದ ವಿಶ್ರಾಂತಿಸ್ಥಾನನಾದ ಹೃದಯಸ್ಥ. "ಶ್ರೀರಾಮನು" ಇರುತ್ತಿರಲು ಆ ಅಜ್ಞಾನಿ ಜೀವರುಗಳಿಗೆ ವಿಷಯದಲ್ಲಿ ವಾಸನಾ ಉಂಟಾಗುತ್ತದೆ. ॥ ೬೦ ॥ ಬಹಳೇ ಮೃಗಜಲವನ್ನು (ಬಿಸಲುಕುದರೆಯನ್ನು) ನೋಡಿ ತನ್ನ ಬಾಯಿಯಲ್ಲಿರುವ ಅಮೃತತುಲ್ಯ ರುಚಿಕರವಾದ ನೀರಿನ ಗುಟಕನ್ನು ಉಗಳಿಬಿಡುವನು ಇಲ್ಲವೇ ಶುಭ್ರವಾದ ಸಿಂಪಿಗಳ ಸರವನ್ನು ನೋಡಿದ ಕೂಡಲೆ ತನ್ನ ಕೊರಳಲ್ಲಿ ಕಟ್ಟಿಕೊಂಡ ಸ್ಪರ್ಶಮಣಿಯ ಹಾರವನ್ನು ಹರಿದು ಬಿಸಾಡುವನು ॥ ೬೧ ॥ ಅದೇ ಪ್ರಕಾರಾ ನಾನು ನನ್ನದು ಎಂಬ

ಭ್ರಾಂತಿಯಿಂದ ದೈನ್ಯರಾದ ಜೀವರಿಗೆ ನನ್ನ ಪ್ರಾಪ್ತಿಯು ಆಗುವದಿಲ್ಲ. ಅವರು ಜನನಮರಣದ ಎರಡೂ ದಂಡೆಯ ಮೇಲೆ ಯಾವಾಗಲೂ ಮುಳಮುಳಗಿ ಏಳುತ್ತಿರುತ್ತಾರೆ. ವ್ಯರ್ಥವಾಗಿ (ಸಂಸಾರದ ಬಲಿಯಲ್ಲಿ ಶಿಕ್ಕುಬಿದ್ದು) ಸಂಕಟಪಡುತ್ತಾರೆ. ॥ ೬೨ ॥ ಆದರೆ ನಾನು ಹೇಗೆ ಇರುತ್ತೇನೆಂದರೆ ಸೂರ್ಯನು ಒಂದು ವೇಳೆ ಕಾಣುವನು ಮತ್ತೊಂದು ವೇಳೆ ನೋಡಿದರೆ ಕಾಣದೇ ಹೋಗುವನು ಹೀಗೆ ಹೆಚ್ಚುಕಡಿಮೆ ಕಾಣುವ (ವ್ಯಂಗವು) ಸೂರ್ಯನಲ್ಲಿರುವದು ಅದು ನನ್ನಲ್ಲಿರುವದಿಲ್ಲ ॥ ೬೩ ॥

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

**[ ಮಯಾ ತತಮಿದಮಿತಿ ]** ಮಾಝೀಯಾ ವಿಸ್ತಾರಲೇ ಪಣಾಚೇನಿ ನಾವೇ । ಹೇ ಜಗಚಿ ನೋಹೇ ಆಘವೇ । ಜೈಸೇ ದೂಧ ಮುರಾಲೇ ಸ್ವಭಾವೇ । ತರೀ ತೇಚಿ ದಹೀ ॥ ೬೪ ॥ ಕಾ ಬೀಜಚಿ ಜಾಹಲೇ ತರೂ । ಅಥವಾ ಭಾಂಗಾರಚಿ ಅಳಂಕಾರೂ । ತೈಸಾ ಮಜ ಏಕಾಚಾ ವಿಸ್ತಾರೂ । ತೇ ಹೇ ಜಗ ॥ ೬೫ ॥ ಹೇ ಅವ್ಯಕ್ತಪಣ ಥಿಜಲೇ । ತೇಚಿ ಮಗ ವಿಶ್ವಾಕಾರೇ ವೋಥಿಜಲೇ । ತೈಸೇ ಅಮೂರ್ತ ಮೂರ್ತಿಮೀಯಾ ವಿಸ್ತಾರಲೇ । ತ್ರೈಲೋಕ್ಯ ಜಾಣೇ ॥ ೬೬ ॥ ಮಹದಾದಿ ದೇಹಾಂತೇ । ಇಯೇ ಅಶೇಷೇಹೀ ಭೂತೇ । ಪೈ ಮಾಝ್ಯಾ ಠಾಯೀ ಬಿಂಬಿತೇ । ಜೈಸೇ ಜಳೀ ಫೇಣ ॥ ೬೭ ॥ ಪರೀ ತಯಾ ಫೇನಾ ಆಂತ ಪಾಹತಾ । ಜೇವೀ ಜಳ ನ ದಿಸೇ ಪಾಂಡುಸುತಾ । ನಾತರೀ ಸ್ವಪ್ನೀಂಚೀ ಅನೇಕತಾ ಚೇಇಲಿಯಾ ನೋಹಿಜೇ ॥ ೬೮ ॥ ತೈಸೀ ಭೂತೇ ಇಯೇ ಮಾಝ್ಯಾಠಾಯೀ । ಬಿಂಬತಿ ತಯಾ ಮಾಜೀ ಮೀ ನಾಹೀ । ಇಯಾ ಉಪಪತ್ತೀ ತುಜಪಾಹೀ । ಸಾಂಗಿತಲಿಯಾ ಮಾಗಾ ॥೬೯ ॥ ಮ್ಹಣವೂನಿ ಬೋಲಿಲಿಯಾ ಬೋಲಾಚಾ ಅತಿಸೋ । ನ ಕೀಜೇ ಯಾಲಾಗೀ ಹೇ ಅಸೋ । ಪರೀ ಮಜ ಆಂತ ಪೈಸೋ । ದಿಠೀ ತುಝೀ ॥ ೭೦ ॥

**ಅರ್ಥ—** ನನ್ನ ನಿರ್ಗುಣ ಸ್ವರೂಪದ ವಿಸ್ತಾರವೇ ಈ ಜಗತ್ತು ಇರುವದಿಲ್ಲೇನು? ಅದರಂತೆ ಸಹಜವೇ ಹಾಲು ಹೆರೆತರೆ ಅದೇ ಮೊಸರು. ॥ ೬೪ ॥ ಇಲ್ಲವೇ ಬೀಜವೇ ವೃಕ್ಷವಾಗುವದು. ಸುವರ್ಣದಿಂದ ಅಲಂಕಾರಗಳಾಗುವಂತೆ ನಿರ್ಗುಣನಾದ ನನ್ನೊಬ್ಬನಿಂದಲೇ ಈ ಜಗತ್ತು ವಿಸ್ತಾರವಾಗಿರುವದು. ॥ ೬೫ ॥ ನನ್ನ ಈ ಸ್ವರೂಪವು ಅವ್ಯಕ್ತವಿರುವಾಗ್ಗೆ ನಿರಾಕಾರ ಇರುತ್ತದೆ. ಆ ಮೇಲೆ ಅದೇ ಸೃಷ್ಟಿಯ ರೂಪದಿಂದ ವಿಸ್ತಾರ ಉಳ್ಳದ್ದಾಗಿ ಆಕಾರಕ್ಕೆ ಬರುತ್ತದೆ. ಇದರಂತೆ ನಿರ್ಗುಣನಿದ್ದು ಸಾಕಾರನಾದ ಯಾವ ನಾನು ಮೂರು ಲೋಕಗಳನ್ನು ಯೋಜನೆ ಮಾಡಿರುವೆನೆಂದು ತಿಳಿ. ॥ ೬೬ ॥ ಮಹತತ್ವದಿಂದ ದೇಹದವರೆಗೆ ಈಭೂತಗಳು ನಿಜವಾಗಿ ನನ್ನ ಸತ್ತಾಮಾತ್ರದಿಂದಲೇ ಭಾಸವಾಗುತ್ತವೆ. ಯಾವ ಪ್ರಕಾರಾ ನೀರಿನಲ್ಲಿ ಬುರಗು, ಭಾಸವಾಗುತ್ತದೋ ॥ ೬೭ ॥ ಆದರೆ ಆ ಬುರಗಿನಲ್ಲಿ ನೋಡಲಿಕ್ಕೆ ಹೋದರೆ ನೀರು ಕಾಣುವದಿಲ್ಲ. ಇಲ್ಲವೇ ಅರ್ಜುನನೇ! ಸ್ವಪ್ನದಲ್ಲಿ ಅನೇಕ ರೂಪಗಳನ್ನು ಧಾರಣ ಮಾಡಿದಾಗ್ಯೂ ಜಾಗ್ರುತವಾದಮೇಲೆ ಇಲ್ಲದಂತೆ ಆಗುತ್ತವೆ ॥ ೬೮ ॥ ಅದೇ ಪ್ರಕಾರಾ ಈ ಭೂತಗಳು ನನ್ನಲ್ಲಿ ಭಾಸಮಾನವಾಗಿದ್ದರೂ, ಆ ಭೂತಗಳಲ್ಲಿ ನಾನು ಇರುವದಿಲ್ಲ. ಈ ಅಖ್ಯಾನವನ್ನು ಹಿಂದೆ (ಅಧ್ಯಾಯ ೭ ಶ್ಲೋಕ ೧೨ನೇದರಲ್ಲಿ ನೋಡು) ॥ ೬೯ ॥ ಆದುದರಿಂದ ಮೊದಲು ಮಾತಾಡಿದ ಮಾತಿನ ವಿಸ್ತಾರವನ್ನು ಮರಳಿಮಾಡುವ ಕಾರಣವಿಲ್ಲ. ಅದಂತೂ ಇರಲಿ ಆದರೆ ನಿನ್ನ ದೃಷ್ಟಿಯ ಪ್ರವೇಶವು ನನ್ನ ಯಥಾರ್ಥವಾದ ಸ್ವರೂಪದಲ್ಲಿಯೇ ನೆಲೆಗೊಳಿಸು. ॥ ೭೦ ॥

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

**[ ನಚ ಮತ್ಸ್ಥಾನೀತಿ ]** ಆಮುಚ್ಯಾ ಪ್ರಕೃತೀ ಪೈಲೀಕಡೀಲ ಭಾವೋ । ಜರೀ ಕಲ್ಪನೇ ವೀಣ ಲಾಗಸೀ ಪಾಹೋ । ತರೀ ಮಜ ಮಾಜೀ ಭೂತೇ ಹೇಂಹೀ ವಾಹೋ । ಜೇ ಮೀ ಸರ್ವ ಮ್ಹಣವೂನಿ ॥ ೭೧ ॥ ಯೇರ್ಹವೀ ಸಂಕಲ್ಪಾಚಿಯೇ ಸಾಂಜವೇಳೇ । ನಾವೇಕ ತಿಮಿರಜತೀ ಬುದ್ಧೀಚೇ ಡೋಳೇ । ಮ್ಹಣೋನಿ ಅಖಂಡಿತಚೀ ಪರೀ ಝಾಂಬಳೇ । ಭೂತ ಭಿನ್ನ ಐಸೇ ದೇಖೇ ॥ ೭೨ ॥ ತೇಚಿ ಸಂಕಲ್ಪಾಚೀ ಸಾಂಜ ಪೈ ಲೋಪೇ । ತೈ ಅಖಂಡಿತಚೀ ಆಹೇ ಸ್ವರೂಪೇ । ಜೈಸೇ ಶಂಕಾ ಜಾತ ಖೆಂವೋ ಲೋಪೇ । ಸಾಪಪಣ ಮಾಳೇಚೇ ॥ ೭೩ ॥ ಯೇರ್ಹವೀ ತರೀ ಭೂಮೀ ಆಂತೂನಿ ಸ್ವಯಂಭ । ಕಾಯ ಘಡೇಯಾ ಗಾಡಗೇ ಯಾಂಚೇ ನಿಘತೀ ಕೊಂಭ । ಪರೀ ತೇ ಕುಲಾಲ ಮತೀಚೇ ಗರ್ಭ । ಉಮಟಲೇ ಕೀ ॥ ೭೪ ॥ ನಾತರೀ ಸಾಗರೀಂಚ್ಯಾ ಪಾಣೀ । ಕಾಯ ತರಂಗಾಚಿಯಾ ಆಹತೀ ಖಾಣೀ । ತೇ ಅವಾಂತರ ಕರಣೀ । ವಾರಯಾಚೀ ನವ್ಹೇ ॥ ೭೫ ॥ ಪಾಹೇ ಪಾ ಕಾಪಸಾಚ್ಯಾ ಪೋಟೀ । ಕಾಯ ಕಾವಡಾಚೀ ಹೋತೀ ಪೇಟೀ । ತೋ ವೇಢಿತಯಾಚಿಯಾ ದಿಠೀ । ಕಾಪಡ ಜಾಹಲಾ ॥ ೭೬॥ ಜರೀ ಸೋನೇ ಲೇಣೇ ಹೋವೂನಿ ಘಡೇ । ತರೀ ತಯಾಚೇ ಸೋನೇಪಣ ನ ಮೋಡೇ । ಯೇರ ಅಲಂಕಾರ ಹೇ ವರಚಿಲೀ ಕಡೇ । ಲೇತಯಾಚೇನಿ ಭಾವೇ ॥ ೭೭ ॥ ಸಾಂಗೇ ಪಡಿ ಸಾದಾಚೀ ಪ್ರತ್ಯುತ್ತರೇ । ಕಾ ಆರಿಸಾ ಜೇ ಆವಿಷ್ಕರೇ । ತೇ ಆಪುಲೇಕೀ ಸಾಚೋಕಾರೇ । ತೇಥಿಚೇ ಹೊತೇ ॥ ೭೮ ॥ ತೈಸೇ ಇಯೇ ನಿರ್ಮಳ ಮಾಝ್ಯಾ ಸ್ವರೂಪೀ । ಜೋ ಭೂತ ಭಾವನಾ ಆರೋಪೀ । ತಯಾಸಿ ತಯಾಚಾ ಸಂಕಲ್ಪೀ । ಭೂತಾ ಭಾಸ ಅಸೇ ॥ ೭೯ ॥ ತೇಚಿ ಕಲ್ಪಿತೀ ಪ್ರಕೃತಿ ಪುರೇ । ತರೀ ಭೂತಾಭಾಸ ಆಧೀಂಚ ಸರೇ । ಮಗ ಸ್ವರೂಪ ಉರೇ ಏಕಸರೇ । ನಿಖಳ ಮಾಝೇ ॥ ೮೦ ॥ ಹೇ ಅಸೋ ಆಂಗೀ ಭರಲಿಯಾ ಭವಂಡೀ । ಜೈಶಾ ಭೋವತ ದಿಸತೀ ಅರಡೀ ದರಡೀ । ತೈಸೀ ಆಪುಲಿಯಾ ಕಲ್ಪನಾ ಅಖಂಡೀ । ಗಮತೀ ಭೂತೇ ॥ ೮೧ ॥ ತೇಚಿ ಕಲ್ಪನಾ ಸಾಂಡೂನಿ ಪಾಹೀ । ತರೀ ಮೀ ಭೂತೀ ಭೂತೇ ಮಾಝ್ಯಾಯಾ ಠಾಯೀ । ಸ್ವಪ್ನೀಹೀ ಪರೀ ನಾಹೀ । ಕಲ್ಪಾವಯಾ ಜೋಗೇ ॥ ೮೨॥ ಅತಾ ಮೀಚ ಯೇಕ ಭೂತಾಂತೇ ಧರ್ತಾ । ಅಥವಾ ಭೂತಾಮಾಜೀ ಮೀ ಅಸತಾ । ಯಾ ಸಂಕಲ್ಪ ಸನ್ನಿಪಾತಾ । ಆಂತುಲಿಯಾ ಬೋಲಿಯಾ ॥ ೮೩ ॥ ಮ್ಹಣೋನಿ ಪರಿಯೇಸೀಗಾ ಪ್ರಿಯೋತ್ತಮಾ । ಯಾಪರೀ ಮೀ ವಿಶ್ವೇಸೀ ವಿಶ್ವಾತ್ಮಾ । ಜೋ ಇಯಾ ಲಟಿಕಿಯಾ ಭೂತಗ್ರಾಮಾ । ಭಾವ್ಯ ಸದಾ ॥ ೮೪ ॥ ರಶ್ಮೀಚೇನಿ ಆಧಾರೇ ಜೈಸೇ । ನವ್ಹತೇಚಿ ಮೃಗಜಳ ಅಭಾಸೇ । ಮಾಝ್ಯಾ ಠಾಯೀ ಭೂತಜಾತ ತೈಸೇ । ಆಣಿ ಮಾತೇಹೀ ಭಾವೀ ॥ ೮೫ ॥ ಮೀ ಯೇ ಪರೀಚಾ ಭೂತಭಾವನೂ । ಪರಿ ಸರ್ವ ಭೂತಾಂಸಿ ಅಭಿನ್ನೂ । ಜೈಸೀ ಪ್ರಭಾ ಆಣಿ ಭಾನೂ । ಏಕಚಿತೇ ॥ ೮೬ ॥ ಹಾ ಆಮುಚಾ ಐಶ್ವರ್ಯ ಯೋಗ । ತುವಾ ದೇಖಿಲಾ ಕೀ ಚಾಂಗ । ಆತಾ ಸಾಂಗೇ ಕಾಹೀ ಏಥ ಲಾಗ । ಭೂತ ಭೇದಾಚಾ ಅಸೇ ॥ ೮೭ ॥ ಯಾಲಾಗೀ ಮಜ ಪಾಸೂನಿ ಭೂತೇ । ಆನೇ ನವ್ಹತೀ ಹೇ ನಿರುತೇ । ಆಣಿ ಭೂತಾವೇಗಳಿಯಾ ಮಾತೇ । ಕಹೀಚ ನ ಮನೀಹೋ ॥ ೮೮ ॥

**ಅರ್ಥ**— ಮಾಯಾದ ಆಚೆಕಡೆಗೆ ಇರುವ ನನ್ನ ಶುದ್ಧ ಸ್ವರೂಪವನ್ನು ಒಂದು ವೇಳೆ ನೀನು ನಿನ್ನ ಕಲ್ಪನೆಯನ್ನು ಬಿಟ್ಟು ನೋಡಿದರೆ ನನ್ನ ಸ್ಥಳದಲ್ಲಿ ಈ ಸರ್ವ ಪ್ರಾಣಿಗಳು ಇರುತ್ತವೆಂಬುವದು ಸಹ ಮಿಥ್ಯವಿರುತ್ತದೆಂಬದು ನಿನಗೆ ಕಾಣಬಹುದು. ಆದರೆ ಸರ್ವದರಲ್ಲಿಯೂ ನಾನೇ ಇದ್ದೇನೆ. ॥ ೭೧ ॥ ಆದರೆ ಸಂಕಲ್ಪರೂಪ ಸಾಯಂಕಾಲದ ವೇಳೆಕ್ಕೆ ಜ್ಞಾನರೂಪ ಕಣ್ಣುಗಳು ಅಜ್ಞಾನರೂಪ ಕತ್ತಲೆಯಿಂದ ಕೆಲವು ಕಾಲದವರೆಗೆ ಮುಚ್ಚಿಕೊಂಡಿರುವದರಿಂದ ಆ ಕತ್ತಲೆಯಲ್ಲಿ ನಾನು ಅಖಂಡ ಇರುತ್ತಿರಲು ಭೂತಗಳು ನನ್ನಿಂದ ಬೇರೆಯಾಗಿ ದೃಷ್ಟಿಗೆ ಬೀಳುತ್ತವೆ. ॥ ೭೨ ॥ ನೂಲೆಯ ಮೇಲಿನ ಸರ್ಪ ಭ್ರಾಂತಿಯು ಇಲ್ಲದಂತಾದಮೇಲೆ ಮಾಲೆಯೇ ಅಲ್ಲಿ ಉಳದಿರುತ್ತದೆ. ಅದೇ ಪ್ರಕಾರಾ

ಸಂಕಲ್ಪದ ಸಂಜೆಯುವೇಳೆಯು ಇಲ್ಲದಂತಾದಮೇಲೆ ನನ್ನ ಅಖಂಡ ಸ್ವರೂಪವು ಅವಶೇಷವಾಗಿ ಉಳಿಯುತ್ತದೆ. ।೭೩॥ ಭೂತ ಭೇದದ ಪ್ರತೀತಿಯನ್ನು ನೋಡುವವರ ಸಂಕಲ್ಪವೇ ಕಾರಣವಾಗಿರುತ್ತದೆ. ಇದಕ್ಕೆ ದೃಷ್ಟಾಂತವೇನಂದರೆ ( ಮಣ್ಣಿನ ಪಾತ್ರೆಗಳು ) ಕೊಡ ಗಡಿಗೆ ಮುಂತಾದವುಗಳು ಭೂಮಿಯಲ್ಲಿಯೇ ಸ್ವಯಂಭವಾಗಿ ಉದ್ಭವಿಸುವವೋ ? ಇಲ್ಲ. ಆದರೆ ಕುಂಬಾರನ ಬುದ್ಧಿ ( ಕುಶಲತೆ ) ಯಂತೆ ಅವು ಎಲ್ಲ ಸಾಮುಗ್ರಿಗಳು ಸಿದ್ಧವಾಗುತ್ತವೆ. ॥ ೭೪ ॥ ಇಲ್ಲವೇ ಸಮುದ್ರದ ನೀರಿನಲ್ಲಿ ತೆರೆಗಳ ಖಣಿಯು ಇರುವದೋ ಹೇಗೆ? ನೀರಿನ ರೂಪಾಂತರವು ( ತೆರೆಗಳು ) ಗಾಳಿಯಿಂದುಂಟಾಗುವದಿಲ್ಲೇನು ? ॥ ೭೫ ॥ ಹೀಗೆ ನೋಡು, ಹತ್ತಿಯ ಹೊಟ್ಟೆಯಲ್ಲಿ ಅರಿವೆಗಳ ಗಂಟು ಇರುವವೇನು ? ಅವುಗಳು ಉರಿಭೋಗ ಮಾಡುವವರ ಅಪೇಕ್ಷೆಯಂತೆ ಆ ಹತ್ತಿಯಿಂದ ವಸ್ತ್ರಗಳನ್ನು ಸಿದ್ಧಪಡಿಸಿರುತ್ತಾರೆ. ॥ ೭೬ ॥ ಆದರೆ ಬಂಗಾರದ ದಾಗೀನೆಗಳನ್ನು ಮಾಡಿಸಿದರೆ ಬಂಗಾರವು ಇಲ್ಲದಂತೆ ಆಗುವದಿಲ್ಲ ಆದರೆ ಸ್ಥೂಲ ದೃಷ್ಟಿಯಿಂದ ಅವುಗಳನ್ನು ಉಪಯೋಗಿಸುವವರ ಕಲ್ಪನೆಯಿಂದ ಅವು ಅಲಂಕಾರಗಳೆಂದು ಕಂಡುಬರುತ್ತವೆ. ॥ ೭೭ ॥ ನಮ್ಮ ಶಬ್ದದ ಯಾವ ಪ್ರತಿಧ್ವನಿಯು ಕೇಳಬರುತ್ತದೋ ಇಲ್ಲವೇ ಕನ್ನಡಿಯಲ್ಲಿ ನಮ್ಮ ಸ್ವದೂಪವನ್ನು ನಾವು ನೋಡುತ್ತೇವೆ. ಅದು ನಿಜ, ವಾಗಿ ನಾವು ಮಾತಾಡಿದ ಇಲ್ಲವೇ ನೋಡುವ ಪರಿಣಾಮವೇ ಇರುವದು ಇಲ್ಲವೇ ನಮ್ಮಕಿಂತಲೂ ಮೊದಲಿಗೆ ಅದು ಅಲ್ಲಿ ನಿಜವಾಗಿ ಇತ್ತೋ ಹೇಗೆ ಹೇಳು ? ॥ ೭೮ ॥ ಅದೇ ಪ್ರಕಾರಾ ನನ್ನ ನಿರುಪಾಧಿಕ ಸ್ವರೂಪದ ಮೇಲೆ ಯಾರು ಭೂತಗಳ ಕಲ್ಪನೆಯು ಅರೋಪ ಮಾಡುವರೋ, ಅವರಿಗೆ ನನ್ನಲ್ಲಿ ಭೂತಗಳ ಭಾಸವಾಗುತ್ತದೆ. ॥ ೭೯ ॥ ಅದೇ ಕಲ್ಪನಾ ಮಾಡುವ ಪ್ರಕೃತಿ ಇಲ್ಲದಂತಾದ ಮೇಲೆ ನನ್ನಲ್ಲಿ ಮೊದಲಿಗೇ ಇಲ್ಲದ ಭೂತಗಳ ಭಾಸವು ಎಂದಿಗೂ ಆಗುವದಿಲ್ಲ ಆ ಮೇಲೆ ನನ್ನ ನಿರುಪಾಧಿಕವಾದ ಶುದ್ಧ ಸ್ವರೂಪವು ಅದೇ ಅಖಂಡವಾಗಿ ಉಳಿಯುತ್ತದೆ. ॥ ೮೦ ॥ ಇದಂತೂ ಇರಲಿ, ತನ್ನ ಮೈಸುತ್ತಲೆ ತಾನು ಗರಗರ ತಿರಗುವಾಗ್ಗೆ ಕಣ್ಣು ತಿರುಗಿ ಗುಡ್ಡ ಮುಂತಾದವುಗಳು ತಿರುಗಿದಂತೆ ಕಾಣುತ್ತವೆ ಅದೇಪ್ರಕಾರ ನಮ್ಮ ಮನಸ್ಸಿನಲ್ಲಿ ಕಲ್ಪನೆಯು ಉಂಟಾದಮೇಲೆ ಅಖಂಡ ಬ್ರಹ್ಮ ಸ್ವರೂಪದಲ್ಲಿ ಭೂತಗಳ ಭಾಸವಾಗುತ್ತದೆ. ॥ ೮೧ ॥ ಅದೇ ಕಲ್ಪನೆಯನ್ನು ಬಿಟ್ಟುಕೊಟ್ಟು ನೋಡಿದರೆ ನಾನು ಭೂತಗಳಲ್ಲಿ ಭೂತಗಳು ನನ್ನಲ್ಲಿ ಇರುತ್ತವೆಂಬದು ಸ್ವಪ್ನದಲ್ಲಿ ಸಹ ಕಲ್ಪನೆ ಮಾಡುವಂಥ ಮಾತು ಇರುವದಿಲ್ಲ. ॥ ೮೨ ॥ ಇನ್ನುಮೇಲೆ ನಾನೇ ಒಬ್ಬ ಭೂತಮಾತ್ರಗಳ ಧಾರಣ ಮಾಡುವವನು ಅಥವಾ ಭೂತಗಳಲ್ಲಿರುವವನು ಎಂಬ ಈ ಎಲ್ಲ ಮಾತುಗಳು ಸಂಕಲ್ಪರೂಪ ಸನ್ನಿಪಾತ ವಾಯುವಿನ ಲಹರಿಯಲ್ಲಿ ಬಡಬಡಿಸುವಂತೆ ಅದೆ. ॥ ೮೩ ॥ ಆದುದರಿಂದ ಎಲೋ ಪ್ರೀಯೊತ್ತಮನೇ ಕೇಳು ನಾನು ಪ್ರಷ್ಟಿಯ ವಿಶ್ವಾತ್ಮನು ಇಲ್ಲವೇ ಮಿಥ್ಯವಾದ ಪ್ರಷ್ಟಿಯ ಆಧಾರ ಭೂತನೂ ಎಂಬುವ ಭಾವನೆಯು ಅಸತ್ಯವಾದದ್ದಿರುತ್ತದೆ. ॥ ೮೪ ॥ ಸೂರ್ಯ ಕಿರಣಗಳ ಆಧಾರದಿಂದಲೇ ಇಲ್ಲದೇ ಇದ್ದ, ಮೃಗ ಜಲವು ಇದ್ದಂತೆ ಕಂಡುಬರುತ್ತದೆ. ಅದೇ ಪ್ರಕಾರಾ ಪ್ರಾಣಿಮಾತ್ರಗಳು ನನ್ನಲ್ಲಿ ಮೃಗಜಲದಂತೆ ಮಿಥ್ಯವಿರುವವೆಂದು ನಂಬು. ಮತ್ತು ನನ್ನನ್ನು ಸೂರ್ಯಕಿರಣದಂತೆ ಸತ್ಯವೆಂದು ತಿಳಿಯುವನಾಗು. ॥ ೮೫ ॥ ಈ ರೀತಿಯಿಂದ ನಾನು ಭೂತಗಳ ಉತ್ಪತ್ತಿ ಮಾಡುತ್ತೇನೆಂದು ಅನ್ನುತ್ತಾರೆ ಆದರೆ ನಿಜವಾಗಿ ಭೂತಗಳು ಮತ್ತು ನಾನು ಒಂದೇ ಆಗಿರುವೆವು. ಸೂರ್ಯ ಮತ್ತು ಪ್ರಕಾಶ ಎರಡೂ ಒಂದೇ ಹೇಗೆ ಇರುವವೋ, ॥ ೮೬ ॥ ಅದರಂತೆ ಈ ನಮ್ಮ ಐಶ್ವರ್ಯ ಯೋಗವು ನಿನಗೆ ಚನ್ನಾಗಿ ತಿಳದಿರುವದೇನು ? ಈಗ ಹೇಳು ನೋಡುವಾ ! ನಾನು ಮತ್ತು ಪ್ರಾಣಿ ಮಾತ್ರಗಳಲ್ಲಿ ಏನಾದರೂ ಭೇದದ ಸಮ್ಬಂಧ ಉಳದಿರುವದೇನು ? ॥ ೮೭ ॥ ಈ ಕಾರಣದಿಂದ ಸರ್ವ ಪ್ರಾಣಿಮಾತ್ರಗಳು ನಿಜವಾಗಿ ನನ್ನಿಂದ ಬೇರೆ ಇರುವದಿಲ್ಲ. ಮತ್ತು ನಾನಾದರೂ ಅವರಿಂದ ಬೇರೆ ಇರುವೆನೆಂಬದನ್ನು ತಿಳಿಯಬೇಡ ಕಂಡಿಯಾ ? ॥ ೮೮ ॥

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

**[ ಯಥಾಕಾಶಸ್ಥಿತೋ ನಿತ್ಯಮಿತಿ ]** ಪೈ ಗಗನ ಜೇವಢೇ ಜೈಸೇ । ಪವನಹಿ ಗಗನೀ ತೇವಢಾಚಿ ಅಸೇ । ಸಹಜೇ ಹಾಲವಿಲಿಯಾ ವೇಗಳಾ ದಿಸೇ । ಯೇರ್ಹವೀ ಗಗನ ತೇಚಿ ತೋ ॥ ೮೯ ॥ ತೈಸೇ

ಭೂತಜಾತ ಮಾಝ್ಯಾ ಠಾಯೀ । ಕಲ್ಪಿಜೇ ತರೀ ಆಭಾಂಸೇ ಕಾಂಹೀ । ನಿರ್ವಿಕಲ್ಪೀ ತರೀ ನಾಹೀ । ತೇಥ ಮೀಚಿ ಮೀ ಆಘವೇ ॥ ೯೦ ॥ ಮ್ಹಣವೂನಿ ನಾಹೀ ಆಣಿ ಅಸೇ । ಹೇ ಕಲ್ಪನೆಚೇನಿ ಸೌರಸೇ । ಜೇ ಕಲ್ಪನಾ ಲೋಪೇ ಭ್ರಂಶೇ । ಆಣಿ ಕಲ್ಪನೇ ಸವೇ ಹೋಯ ॥ ೯೧ ॥ ತೇಚಿ ಕಲ್ಪಿತೇ ಮುದಲ ಜಾಯೇ । ತ್ಮೆ ಅಸೇ ನಾಹೀ ಹೇ ಕೇ ಆಹೆ ! ಮ್ಹಣವೂನಿ ಪುಢತೀ ತೂ ಪಾಹೇ । ಹಾ ಐಶ್ವರ್ಯಯೋಗ ॥೯೨॥ ಐಸಿಯಾ ಪ್ರತೀತೀ ಬೋಧ ಸಾಗರೀ । ತೂ ಆಪಣ ಯಾತೇ ಕಲ್ಲೋಳ ಏಕ ಕರೀ । ಮಗ ಜಿವ ಪಹಾಸೀ ಚರಾಚರೀ । ತವ ತೂಚಿ ಆಹಾಸೀ ॥೯೩॥ ಯಾ ಜಾಣಣೇಯಾಚಾ ಚೇವ್ರೋ । ತುಜ ಆಲಾನಾ ಮ್ಹಣತೀ ದೇವ್ರೋ । ತರೀ ಆತಾ ದ್ವೈತ ಸ್ವಪ್ನ ವಾವ್ರೋ । ಜಾಲೇ ಕೀ ನಾ ॥ ೯೪ ॥ ತರೀ ಪುಢತೀ ಜರೀ ವಿಪಾಯೇ । ಬುದ್ಧೀಸಿ ಕಲ್ಪನೇಚೀ ಝೋಪ ಯೇ । ತರೀ ಅಭೇದ ಬೋಧ ಜಾಯೇ । ಜ್ಯೆ ಸ್ವಪ್ನೀ ಪಡಿಜೇ ॥೯೫॥ ಮ್ಹಣೋನಿ ಯೇ ನಿದ್ರೇಚೀ ವಾಟ ಮೋಡೇ । ನಿಖಿಳ ಉದ್ಬೋಧಾಚೇಂಚಿ ಆಪಣ ಪೇ ಘಡೇ । ಐಸೇ ವರ್ಮ ಜೇ ಆಹೇ ಪುಡೇ । ತೇ ದಾವ್ರೋ ಆತಾ ॥೯೬॥ ತರೀ ಧನುರ್ಧರಾ ಧೈರ್ಯಾ । ನಿಕೇ ಅವಧಾನ ದೆಈ ಬಾ ಧನಂಜಯಾ । ಪೈ ಸರ್ವ ಭೂತಾತೇ ಮಾಯಾ । ಕರೀ ಹರೀ ಗಾ ॥ ೯೭ ॥

**ಅರ್ಥ**— ಆಕಾಶವು ಎಷ್ಟು ವಿಸ್ತಾರವಾಗಿರುವದು ಅಷ್ಟು ಗಾಳಿಯು ತುಂಬಿಕೊಂಡಿರುತ್ತದೆ. ಆದರೆ ಅದನ್ನು ಸಹಜವೇ ಅಲ್ಲಾಡಿಸಿದಾಗ ಆಕಾಶದಿಂದ ಬೇರೆಯಾಗಿ ಕಂಡರೂ ಅದು ಆಕಾಶವೇ ಆಗಿರುವದು. ॥ ೮೯ ॥ ಆ ಪ್ರಕಾರಾ ಪ್ರಾಣಿಗಳು ನನ್ನಲ್ಲಿರುವವು ಎಂಬ ಕಲ್ಪನೆಯು ಮನಸ್ಸಿನಲ್ಲಿ ಬಂದರೆ ನಂನಲ್ಲಿ ಭೂತಗಳು ಇರುತ್ತವೆಂಬ ಭಾಸವಾಗುತ್ತದೆ. ಅದೇ ಕಲ್ಪನೆಯು ಅಭಾವದಲ್ಲಿ ನೋಡಿದರೆ ಸರ್ವದರಲ್ಲಿಯೂ ನಾನು ಒಬ್ಬನೇ ಇದ್ದೇನೆ. । ೯೦ ॥ ಅದರಿಂದ ಭೂತಗಳು ಇರುವದು ಅರ್ಥಾತ್ ಇಲ್ಲದೇ ಇರುವದು ಇದು ಕಲ್ಪನೆಯ ಸಂಬಂಧವಾಗಿ ಭಾಸವಾನ ವಾಗುತ್ತದೆ. ಕಾರಣವೇನಂದರೆ ಭೂತಾಭಾಸಕಲ್ಪನೆಯು ನಷ್ಟಹೊಂದಿದ ಕೂಡಲೆ ಅದರ ಸಂಗಡವೇ ನಾಶಹೊಂದು ತ್ತದೆ. ಕಲ್ಪನೆಯು ಉತ್ಪನ್ನವಾದ ಕೂಡಲೇ ಅದರ ಸಂಗಡವೇ ಉತ್ಪನ್ನವಾಗುತ್ತದೆ. ॥ ೯೧ ॥ ಅದೇ ಕಲ್ಪನೆಯನ್ನು ಹುಟ್ಟಿಸುವ ಅಜ್ಞಾನವು ಸಮೂಲವಾಗಿ ಇಲ್ಲದಂತೆ ಆದ ಮೇಲೆ ಭೂತಗಳು ಇರುವದೂ, ಇಲ್ಲವೇ ಇರದೇ ಇರುವದು, ಇದು ಎಲ್ಲಿಂದ ಹ್ಯಾಗೆ ಭಾಸವಾಗಬೇಕು? ಆದುದರಿಂದ ನೀನು ಇನ್ನೂ ಒಂದು ಸಾರೆ ಈ ಐಶ್ವರ್ಯಯೋಗದ ಸಂಬಂಧ ವಾಗಿ ಪುನ್ಹಾ ವಿಚಾರಮಾಡಿ ನೋಡು. ॥ ೯೨ ॥ ಈ ತರದ ಅನುಭವರೂಪ ಸಮುದ್ರದಲ್ಲಿ ನೀನು ಸ್ವತಃ ತೆರೆಯಾಗಿ ಈ ಚರಾಚರದ ಕಡೆಗೆ ನೋಡು, ಅಂದರೆ ಸರ್ವತ್ರದಲ್ಲಿಯೂ ನೀನೆ ತುಂಬಿಕೊಂಡಿರುವದು ನಿನ್ನ ದೃಷ್ಟಿಗೆ ಬೀಳುವದು. ॥ ೯೩ ॥ ಭಗವಾನ ಶ್ರೀಕೃಷ್ಣನು ಅನ್ನುತ್ತಾನೆ ಅರ್ಜುನನೇ ! ಈ ಯಾವ ಜ್ಞಾನವನ್ನು ನಾನು ನಿನಗೆ ಹೇಳಿದೆನು ಅದರ ಪ್ರಕಾಶವು ನಿನ್ನ ಹೃದಯದಲ್ಲಿ ಬಿದ್ದಿರುವದೇನು ? ನಾನು ಮತ್ತು ಈ ವಿಶ್ವವು ಎರಡು ಇರುವವೆಂಬ ಸ್ವಪ್ನವು ನಿನಗೆ ಬಿದ್ದಿರುವದು ಈಗ ಅದು ಅಸತ್ಯವಾಗಿರುವದೆಂಬದು ನಿನಗೆ ನಿಶ್ಚಯವಾಗಿರುವದೇನು ? ॥ ೯೪ ॥ ಆದರೆ ನಿನ್ನ ಬುದ್ಧಿಗೆ ಪುನ್ಹ ಒಂದು ವೇಳೆ ಕಲ್ಪನಾರೂಪೀ ನಿದ್ರೆಯು ಹತ್ತಿದರೆ ಭೇದರೂಪ ಸ್ವಪ್ನದಲ್ಲಿ ನೀನು ಬೀಳ ಬಹುದು. ಮತ್ತು ಅಭೇದ ಬೋಧವು ನಷ್ಟವಾಗಿ ಹೋದೀತು. ॥ ೯೫ ॥ ಆದುದರಿಂದ ಈ ಕಲ್ಪನಾರೂಪಿ ನಿದ್ರೆಯ ಹಾದಿಗೆ ಹೋಗದೆ ಶುದ್ಧ ಬೋಧರೂಪನು ನಾನೇ ಇರುವೆನೆಂಬ ಜ್ಞಾನದ ಒಂದು ರಹಸ್ಯವಿರುತ್ತದೆ. ಅವನ್ನು ನಿನಗೆ ಇಂನು ಮುಂದೆ ಹೇಳುತ್ತೇನೆ. ॥ ೯೬ ॥ ಆದರೆ ಧೈರ್ಯಶಾಲಿಯಾದ ಧನುರ್ಧರ ಧನಂಜಯನೇ ! ನೀನು ಲಕ್ಷಕೊಡು. ಪ್ರಾಣಿಮಾತ್ರಗಳ ಉತ್ಪತ್ತಿ, ಸ್ಥಿತಿ, ಲಯ, ಇವುಗಳಿಗೆ ಮಾಯಾ ಒಂದೇ ಕಾರಣವಾಗಿರುತ್ತದೆ. ॥ ೯೭ ॥

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ॥ ೭ ॥**

[ **ಸರ್ವಭೂತಾನೀತಿ** ] ಜಿಯೇ ನಾವ ಗಾ ಪ್ರಕೃತೀ । ಜೇ ದ್ವಿವಿಧ ಸಾಂಗಿತಲೀ ತುಜಪ್ರತೀ । ಏಕೀ ಅಷ್ಟಧಾ ಭೇದ ವ್ಯಕ್ತೀ । ದುಜೀ ಜೀವರೂಪಾ ॥ ೯೮ ॥ ಹಾ ಪ್ರಕೃತೀ ವಿಷೋ ಆಘವಾ ।

ತೂವಾ ಮಾಗಾ ಪರಿಸಿಲಾಸೇ ಪಾಂಡವಾ । ಮ್ಹಣೋನಿ ಅಸೋ ಕಾ ಈ ಸಾಂಗಾವಾ । ಪುಢತ ಪುಢತೀ ॥ ೯೯ ॥ ತರೀ ಯೇ ಮಾಝಿಯೇ ಪ್ರಕೃತೀ । ಮಹಾ ಕಲ್ಪಾಚ್ಯಾ ಅಂತೀ । ಸರ್ವ ಭೂತೇ ಅವ್ಯಕ್ತೀ । ಐಕ್ಯಾಸೀ ಯೇತೀ ॥ ೧೦೦ ॥ ಗ್ರೀಷ್ಮಾಚ್ಯಾ ಅತಿರಸೀ । ಸಬೀಜೇ ತೃಣೇ ಜೈಸೀ । ಮಾಗುತೀ ಭೂಮೀಸೀ । ಸುಲೀನೇ ಹೋತೀ ॥ ೧ ॥ ಕಾ ವಾರ್ಷಿಯೇ ಥೇಂಥೇ ಫಿಟೇ । ಜೆವ್ಹಾ ಶಾರದೀಯೆಚಾ ಅನುಭೂಡು ಫುಟೇ । ತೆವ್ಹಾ ಘನಜಾತ ಆಟೇ । ಗಗನೀಂಚಿ ಗಗನೀ ॥ ೨ ॥ ನಾತರೀ ಆಕಾಶಾಚೇ ಖೋಪೇ । ವಾಯುಊ ನಿವಾಂತಚಿ ಲೋಪೇ । ಕಾ ತರಂಗಾಕಾರ ಹಾರಪೇ । ಜಳೀ ಜೇವೀ ॥ ೩ ॥ ಅಥವಾ ಜಾಗಿ ನಲಿಯೇ ವೇಳೇ । ಸ್ವಪ್ನ ಮನೀಚೇ ಮನೀ ಮಾವಳೇ । ತೈಸೇ ಪಾಕೃತ ಪ್ರಕೃತೀ ಮಿಳೇ । ಕಲ್ಪಕ್ಷಯೀ ॥ ೪ ॥ ಮಗ ಕಲ್ಪಾದೀ ಪುಢತೀ । ಮೀಚಿ ಸೃಜೇ ಐಸೀ ವದಂತೀ । ತರೀ ಇಯೇ ವಿಷಯೀ ನಿರುತೀ । ಉಪಪತ್ತೀ ಆಯಿಕ ॥ ೫ ॥

**ಅರ್ಥ—** ಆ ಮಾಯೆಗೆ ಪ್ರಕೃತಿ ಎಂಬ ಹೆಸರಿರುವದು ಅದು ದ್ವಿವಿಧವಾಗಿರುವದೆಂಬದನ್ನು ಮೊದಲು ನಾನು ನಿನಗೆ ಹೇಳಿದ್ದೇನೆ. ಅದರಲ್ಲಿ ಒಂದು ಎಂಟು ವಿಧರೂಪದಿಂದ ಭಿನ್ನವಿರುತ್ತದೆ. ಮತ್ತು ಎರಡನೇದು ಜೀವರೂಪ ವೆಂದು ಅದೆ. ॥ ೯೮ ॥ ಪಂಡುಪುತ್ರನೇ ! ನೀನು ಪ್ರಕೃತಿಯ ಸರ್ವ ವಿಷಯುಗಳನ್ನು ಮೊದಲಿಗೇ ( ಅಧ್ಯಾಯ ೭ ಶ್ಲೋಕ ೪।೫ ರಲ್ಲಿ ನೋಡು ) ಕೇಳಿರುವಿ ಅದಂತೂ ಇರಲಿ ಇಂನು ಮುಂದೆ ಹೇಳಿದ್ದನ್ನೇ ಹೇಳುವ ಕಾರಣವೇನು ? ॥ ೯೯ ॥ ಆದರೆ ಮಹಾಪ್ರಳಯದ ಕೊನೆಗೆ ಈ ಸರ್ವ ಭೂತಗಳು ನನ್ನ ಪ್ರಕೃತಿರೂಪ ಅವ್ಯಕ್ತಸ್ವರೂಪದಲ್ಲಿ ಲಯ ಹೊಂದುತ್ತವೆ. ॥ ೧೦೦ ॥ ಗ್ರೀಷ್ಮಋತುವಿನ ಕೊನೆಗೆ ಹುಲ್ಲು ಬೀಜದಿಂದ ಕೂಡಿಕೊಂಡು ಮರಳಿ ಭೂಮಿಯಲ್ಲಿ ಅಡಿಗಿ ಹೋಗುತ್ತದೆ. ॥ ೧೦೧ ॥ ಇಲ್ಲವೇ ವರ್ಷಕಾಲದ ಮೇಘದ ಅಬ್ಬರವು ಮುಗಿದಮೇಲೆ ಶರದೃತುವಿನ ಅಂಕುರವು ಹುಟ್ಟುತ್ತದೆ. ಆಗ್ಗೆ ಸರ್ವ ಆಕಾಶದೊಳಗಿನ ಮೋಡಗಳು ಅಡಿಗಿಹೋಗುತ್ತವೆ. ॥ ೨ ॥ ಅಥವಾ ಆಕಾಶದ ಪೊಳ್ಳಿನಲ್ಲಿ ಹೇಗೆ ವಾಯುವಿಲ್ಲದಂತೆ ಆಗುತ್ತದೆ. ಇಲ್ಲವೇ ನೀರಿನಲ್ಲಿ ಉತ್ಪನ್ನವಾದ ತೆರೆಗಳು ನೀರಿನಲ್ಲಿಯೇ ನಾಶಹೊಂದುವಂತೆ ॥ ೩ ॥ ಇಲ್ಲವೇ ಜಾಗ್ರತವಾದ ಮೇಲೆ ಮನಸಿನಲ್ಲಿಯ ಸ್ವಪ್ನವು ಮನಸಿನಲ್ಲಿಯೇ ಅಡಿಗಿ ಹೋಗುವಂತೆ ಮಹಾ ಪ್ರಳಯದ ಕೊನೆಗೆ ಪ್ರಕೃತಿಯಿಂದ ಉತ್ಪನ್ನವಾದ ಸರ್ವಭೂತಗಳು ಪ್ರಕೃತಿಯಲ್ಲಿಯೇ ಕೂಡಿಹೋಗುತ್ತವೆ. ॥ ೪ ॥ ಆಮೇಲೆ ಸೃಷ್ಟಿಯು ಪ್ರಾರಂಭವಾದಲ್ಲಿ ಪುತ್ತೆ ಅವುಗಳನ್ನು ನಾನೇ ನಿರ್ಮಾಣ ಮಾಡುತ್ತೇನೆಂಬುವದು ಶಾಸ್ತ್ರಸಂಮತ ವಾಗಿರುತ್ತದೆ. ಆ ವಿಷಯದಲ್ಲಿ ನಿಜವಾದ ಸ್ಥಿತಿಯನ್ನು ನಿನಗೆ ಹೇಳುತ್ತೇನೆ ಕೇಳು. ॥ ೫ ॥

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

**[ ಪ್ರಕೃತಿಂ ಸ್ವಾಮವಷ್ಟಭ್ಯೇತಿ ]** ತರಿ ಹೇಚಿ ಪ್ರಕೃತೀ ಕಿರೀಟೀ । ಮೀ ಸ್ವಕೀಯಾ ಸಹಜೇ ಅಧಿಷ್ಠೀ । ತೇಥ ತಂತೂ ಸಮವಾಯ ಪಟೀ । ಜೇವಿ ವಿಣಾವಣೀ ದಿಸೇ ॥ ೧೦೬ ॥ ಮಗ ತಿಯೇ ವಿಣಾವಣೀಚೇನಿ ಆಧಾರೇ । ಲಾಹಾನಾ ಚೌಕಡಿಯಾ ಪಟತ್ವ ಭರೇ । ತೈಸೀ ಪಂಚಾತ್ಮಕೇ ಆಕಾರೇ । ಪ್ರಕೃತೀಚಿ ಹೋಯ ॥ ೭ ॥ ಜೈಸೇ ವಿರಜಣಿಯಾಚೇನಿ ಸಂಗೇ ದೂಧಚಿ ಆಟೇಜೋ ಲಾಗೇ । ತೈಸೀ ಪ್ರಕೃತೀ ಆಂಗಾರಿಗೇ । ಸೃಷ್ಟೀ ಪಣಾಚಿಯಾ ॥ ೮ ॥ ಬೀಜ ಜಳಾಚೇ ಜವಳೀಕ ಲಾಹೇ । ಆಣಿ ತೇಚಿ ಶಾಖೋಪಶಾಖೀ ಹೋಯೇ । ತೈಸೇ ಮಜ ಕರಣೇ ಆಹೇ । ಭೂತಾಚೇ ಹೇ ॥ ೯ ॥ ಅಗಾ ನಗರ ಹೇ ರಾಯೇ ಕೇಲೇ । ಯಾ ಮ್ಹಣಣ್ಯಾ ಸಾಚಪಣ ಕೀರ ಆಲೇ । ಪರೀ ನಿರುತೇ ಪಾಹಾತಾ ಕಾಯ ಸಿಣಲೇ । ರಾಯಾಚೇ ಹಾತ ॥ ೧೧೦ ॥ ಆಣಿ ಮೀ ಪ್ರಕೃತೀ ಅಧಿಷ್ಠೀತೇ ಕೈಸೇ । ಜೈಸಾ ಸ್ವಪ್ನಿ ಜೋ ಅಸೇ । ಮಗ ತೋಚಿ ಪ್ರವೇಶೇ । ಜಾಗ್ರುತಾವಸ್ಥೇ ॥ ೧೧ ॥ ತರೀ ಸ್ವಪ್ನೌನಿ ಜಾಗೃತೀ ಯೇತಾ । ಕಾಯ ಪಾಯ

ದುಖತೀ ಪಾಂಡುಸುತಾ । ಕೀ ಸ್ವಪ್ನಾ ಮಾಜೀ ಅಸತಾ । ಪ್ರವಾಸ ಹೋಯ॥ ೧೨ ॥ ಯಾ ಆಘವಿಯಾಚಾ ಅಭಿಪ್ರಾವೋಕಾಯೀ । ಜೇ ಹೇ ಭೂತ ಸೃಷ್ಟೀಚೀ ಕಾಹೀ । ಮಜ ಏಕಹೀ ಕರಣೇ ನಾಹೀ । ಐಸಾಚಿ ಅರ್ಥ ॥ ೧೩ ॥ ಜೈಸೀ ರಾಯೇ ಅಧಿಷ್ಠಿಲೀ ಪ್ರಜಾ । ವ್ಯಾಪಾರೇ ಆಪುಲಾಲಿಯಾ ಕಾಜಾ । ತೈಸಾ ಪ್ರಕೃತೀ ಸಂಗ ಮಾಝಾ । ಯೇರ ಕರಣೇ ತೇ ಇಯೇಚೇ ॥ ೧೪ ॥ ಪಾಹೇ ಪಾ ಪೂರ್ಣ ಚಂದ್ರಾಚಿಯೇ ಭೇಟೀ । ಸಮುದ್ರೀ ಅಪಾರ ಭರತೇ ದಾಟೀ । ತೇಥ ಚಂದ್ರಾಸಿ ಕಾಯ ಕಿರೀಟೀ । ಉಪಖಾ ಪಡೇ ॥ ೧೫ ॥ ಜಡ ಮರೀ ಜವಳಿಕಾ । ಲೋಹ ಚಳೇ ತರೀ ಚಳೋಕಾ । ತರೀ ಕವಣಶೀಣ ಭ್ರಾಮುಕಾ । ಸನ್ನಿಧಾನಾಚಾ ॥ ೧೬ ॥ ಕಿಂಬಹುನಾ ಯಾ ಪರೀ । ಮೀ ನಿಜ ಪ್ರಕೃತೀ ಅಂಗಿಕಾರೀ । ಆಣಿ ಭೂತ ಸೃಷ್ಟೀ ಏಕಸರೀ । ಪ್ರಸವೋಂಚಿ ಲಾಗೇ ॥ ೧೭ ॥ ಜೋ ಹಾ ಭೂತ ಗ್ರಾಮು ಆಘವಾ । ಅಸೇ ಪ್ರಕೃತೀ ಅಧೀನ ಪಾಂಡವಾ । ಜೈಸೀ ಬೀಜಾಚಿಯಾ ವೇಲ ಪಾಲವಾ । ಸಮರ್ಥ ಭೂಮೀ ॥ ೧೮ ॥ ನಾತರೀ ಬಾಳಾದಿಕಾ ವಯಸಾ । ಗೋಸಾವೀ ದೇಹ ಸಂಗ ಜೈಸಾ । ಅಥವಾ ಘನಾನಳೀ ಆಕಾಶಾ । ವಾರ್ಷಿಯೇ ಜೇವೀ ॥ ೧೯ ॥ ಕಾ ಸ್ವಪ್ನಾಸಿ ಕಾರಣ ನಿದ್ರಾ । ತೈಸೀ ಪ್ರಕೃತೀ ಹೇ ನರೇಂದ್ರಾ । ಯಾ ಅಶೇಷಾಹಿ ಭೂತ ಸಮುದ್ರಾ । ಗೋಸಾವಿಣೀ ಗಾ ॥ ೨೦ ॥ ಸ್ಥಾವರಾ ಆಣಿ ಜಂಗಮಾ । ಸ್ಥೂಳಾ ಅಥವಾ ಸೂಕ್ಷ್ಮಾ । ಹೇ ಅಸೋಭೂತಗ್ರಾಮಾ । ಪ್ರಕೃತೀಚಿ ಮೂಳ ॥ ೨೧ ॥ ಮ್ಹಣೋನಿ ಭೂತೇ ಹನ ಸೃಜಾವೀ । ಕಾಸೃಜಿಲೀ ಪ್ರತಿ ಪಾಳಾವೀ । ಇಯೇ ಕರಣೇ ನ ಯೇತೀ ಆಘವೀ । ಆಮುಚಿಯಾ ಆಂಗಾ ॥ ೨೨ ॥ ಜಳೀ ಚಂದ್ರಿಕೇಚಿಯಾ ಪಸರತೀ ವೇಲೀ । ತೇ ವಾಥೀ ಚಂದ್ರೇ ನಾಹೀ ಕೇಲೀ । ತೇವಿ ಮಾತೇ ಪಾವೋನಿ ಠೇಲೀ । ದೂರೀ ಕರ್ಮೇ ॥ ೨೩ ॥

**ಅರ್ಥ—** ಆದರೆ ಅರ್ಜುನನೇ ! ನನ್ನ ಪ್ರಕೃತಿಯನ್ನು ನಾನು ಯಾವಾಗ್ಗೆ ಸಹಜವೇ ಅಂಗಿಕಾರ ಮಾಡುತ್ತೇನೆ. ಆಗ್ಗೆ ನೂಲಿನ ನಿತ್ಯ ಸಮುಂಧ ಇರುವ ವಸ್ತ್ರದಲ್ಲಿ ಯಾವ ಪ್ರಕಾರಾ ನೇಕಾರನು ಕಂಡು ಬರುತ್ತಾನೆ. ॥ ೧೦೬ ॥ ಆ ನೇಯುವವನ ಆಧಾರದಿಂದ ಹೇಗೆ ಸಣ್ಣ ಸಣ್ಣ ಚೌಕ ವಸ್ತ್ರಗಳು ಹುಟ್ಟುವಂತೆ ಪಂಚನುಹಾ ಭೂತಗಳಿಂದ ಜಗತ್ಯದ ಆಕಾರವನ್ನು ಪ್ರಕೃತಿಯೇ ಪ್ರಕಟಮಾಡುತ್ತದೆ. ॥ ೧೦೭ ॥ ಆದರೆ ನೀರಿನಂತೆ ಇರುವ ಹಾಲು ಹೆರಿಯುವದರಿಂದ ಮೊಸರಿನ ರೂಪದಿಂದ ಘಟ್ಟಿಯಾಗುತ್ತ ಹೋಗುವಂತೆ ಪ್ರಕೃತಿಯು ಸೃಷ್ಟಿಯ ಆಕಾರ ವನ್ನು ಹೊಂದುತ್ತದೆ. ॥ ೧೦೮ ॥ ಯಾವ ಪ್ರಕಾರಾ ಬೀಜಕ್ಕೆ ನೀರಿನ ಸಾನ್ನಿಧ್ಯ ದೊರಕಿದ ಕೂಡಲೆ ಆ ಬೀಜವೇ ಸಣ್ಣ ದೊಡ್ಡ ಟೊಂಗೆಗಳ ರೂಪದಿಂದ ಪರಿಣಮಿಸಿ ವಿಸ್ತಾರವಾಗುವಂತೆ ನಾನು ಪ್ರಾಣಿಮಾತ್ರಗಳನ್ನು ಉತ್ಪನ್ನ ಮಾಡುವದು ಆದೆ. ॥ ೧೦೯ ॥ ಎಲೋ ಅರ್ಜುನನೇ ! ಒಂದಾನೊಂದು ಪಟ್ಟಣವನ್ನು ರಾಜನು ನಿರ್ಮಾಣ ಮಾಡಿದನೆಂಬುವದು ನಿಜವಿದ್ದರೂ ವಿಚಾರಿಸಿ ನೋಡಲು ರಾಜನ ಕೈಗೆ ಏನಾದರೂ ಶ್ರಮ ಪಡಬೇಕಾಗಿರುವದೇನು ? ॥ ೧೧೦ ॥ ಮತ್ತು ಸ್ವಪ್ನದಲ್ಲಿದ್ದ ಮನುಷ್ಯನು ಜಾಗ್ರದವಸ್ಥೆಯಲ್ಲಿ ಬರುತ್ತಾನೆ. ಅದರಂತೆ ನಾನು ಪ್ರಕೃತಿಯು ಅಂಗಿಕಾರ ಮಾಡುತ್ತೇನೆ. ॥ ೧೧೧ ॥ ಆದರೆ ಎಲೋ ಪಂಡುಸುತನೇ ! ಸ್ವಪ್ನದೊಳಗಿಂದ ಜಾಗ್ರದವಸ್ಥೆಗೆ ಬರುವಾಗ್ಗೆ ಆ ಮನುಷ್ಯನ ಕಾಲುಗಳು ನೋಯುತ್ತವೇನು ? ಇಲ್ಲವೇ ಸ್ವಪ್ನದಲ್ಲಿದ್ದಾಗ್ಗೆ ಅವನಿಗೆ ನಿಜವಾಗಿ ತಿಂಗಾಡುವ ಶ್ರಮವಾದರೂ ಆಗುವದೇನು ? ॥ ೧೧೨ ॥ ಈ ಸರ್ವದರ ಅಭಿಪ್ರಾಯವೇನಂದರೆ ಈ ಭೂತ ಸೃಷ್ಟಿಯನ್ನು ನಿರ್ಮಾಣ ಮಾಡಲು ನನಗೆ ಏನೂ ಶ್ರಮಪಡಬೇಕಾಗಿರುವದಿಲ್ಲ. ॥ ೧೧೩ ॥ ಯಾವ ಪ್ರಕಾರಾ ರಾಜನ ಆಜ್ಞಾದಲ್ಲಿದ್ದ ಪ್ರಜಗಳು ತತ್ಪರರಾಗಿ ತಮ್ಮ ತಮ್ಮ ಕೆಲಸ ಮಾಡುವಂತೆ ಪ್ರಕೃತಿ ಮತ್ತು ನನ್ನದು ಸಮ್ಮಂಧ ಮಾತ್ರ ಇರುತ್ತದೆ. ಆದರೆ ಉತ್ಪತ್ತಿ, ಸ್ಥಿತಿ, ಲಯ, ಈ ಸರ್ವ ವ್ಯಾವಹಾರಗಳು ಪ್ರಕೃತಿಯಿಂದಲೇ ಆಗುತ್ತವೆ. ॥ ೧೧೪ ॥ ಹೀಗೆ ನೋಡು ಪೌರ್ಣಿಮಾ ಚಂದ್ರನ ದರ್ಶನ ಆದ ಕೂಡಲೆ ಸಮುದ್ರ

ರಾಜನಿಗೆ ಅಪಾರವಾದ ಭರ್ತಿ ಬರುತ್ತದೆ. ಆದರೆ ಅರ್ಜುನನೇ! ಇಲ್ಲಿ ಚಂದ್ರನಿಗೆ ಏನಾದರೂ ಶ್ರಮ ಪಡಬೇಕಾಗಿರುವದೇನು? ॥ ೧೫ ॥ ಕಬ್ಬಿಣವು ಜಡವಿದ್ದು ಲೋಹಚುಂಬುಕದ ಸನ್ನಿಧಾನದಿಂದ ಕಬ್ಬಿಣವು ಅಲ್ಲಾಡುತ್ತದೆ. ಇದರಿಂದ ಲೋಹಚುಂಬಕವು ಏನಾದರೂ ಶ್ರಮಪಡಬೇಕಾಗಿರುವದೇನು? ॥ ೧೬ ॥ ಇದೇ ಪ್ರಕಾರಾ ನಾನು ಸ್ವಯಂ ಪ್ರಕೃತಿಯ ಅಂಗಿಕಾರ ಮಾಡುವದರಿಂದ ಒಮ್ಮೆಂದೊಮ್ಮೆಲೆ ಪ್ರಾಣಿಮಾತ್ರಗಳ ಉತ್ಪತ್ತಿ ಆಗ ಹತ್ತುತ್ತದೆ. ॥ ೧೭ ॥ ಎಲೋ ಪಾಂಡವನೇ! ಈ ಸರ್ವ ಪ್ರಾಣಿಸಮುದಾಯುಗಳು ಪ್ರಕೃತಿಯ ಆಧೀನವಿರುತ್ತವೆ. ಬೀಜಗಳಿಗೆ ಬಳ್ಳಿ ಎಲಿ ಮುಂತಾದವುಗಳನ್ನು ಉದ್ಭವ ಮಾಡಲು ಭೂಮಿಯು ಹೇಗೆ ಸಮರ್ಥವಿರುವದೋ, ॥ ೧೮ ॥ ಅಥವಾ ಬಾಲ್ಯ ತಾರುಣ್ಯ, ವೃದ್ಧತ್ವ, ಈ ಅವಸ್ಥಾತ್ರಯಗಳಿಗೆ ದೇಹ ಸಂಗತಿಯು ಹೇಗೆ ಮುಖ್ಯ ಕಾರಣವಾಗಿರುತ್ತದೋ, ಇಲ್ಲವೇ ಆಕಾಶದಲ್ಲಿ ಮೇಘಪಂಕ್ತಿ ಉತ್ಪನ್ನವಾಗಲಿಕ್ಕೆ ಹೇಗೆ ವರ್ಷಾಕಾಲವು ಕಾರಣವಾಗಿರುವದೋ, ॥ ೧೯ ॥ ಇಲ್ಲವೇ ಸ್ವಪ್ನಕ್ಕೆ ಹೇಗೆ ನಿದ್ರಾ ಕಾರಣವಾಗಿರುವದೋ, ಅದೇ ಪ್ರಕಾರಾ ಎಲೋ ಕಿರೀಟಿಯೇ! ಈ ಸರ್ವ ಪ್ರಾಣಿಸಮುದಾಯಗಳಿಗೆ ಪ್ರಕೃತಿಯೇ ಮುಖ್ಯ ಕಾರಣವಾಗಿರುವದು. ॥ ೧೨೦ ॥ ಸ್ಥಾವರ, ಜಂಗಮ, ಸ್ಥೂಲ ಸೂಕ್ಷ್ಮಗಳಿಗೆ ಪ್ರಕೃತಿಯೇ ಕಾರಣವು ಇದಂತೂ ಇರಲಿ ಈ ಸರ್ವ ಜಗತ್ತಿಗೆ ಸಹ ಪ್ರಕೃತಿಯೇ ಮೂಲಕಾರಣವಾಗಿರುವದು ॥ ೨೧ ॥ ಆದುದರಿಂದ ಪ್ರಾಣಿಗಳ ಉದ್ಭವವು ಮತ್ತು ಉತ್ಪನ್ನವಾದ ಪ್ರಾಣಿಗಳ ಪ್ರತಿಪಾಲನ ಮಾಡುವದು ಈ ಎಲ್ಲ ಕರ್ತತ್ವವು ನನ್ನ ಕಡೆಗೆ ಬರುವದಿಲ್ಲ. ॥ ೧೨೨ ॥ ನೀರಿನಲ್ಲಿ ಚಂದ್ರನ ಪ್ರಕಾಶದಿಂದ ಬಳ್ಳಿಯು ಹಬ್ಬಿದಂತೆ ಕಾಣುತ್ತದೆ. ಅದರ ಉತ್ಪತ್ತಿಯನ್ನು ಚಂದ್ರನು ಮಾಡುವದಿಲ್ಲ. ಅದೇ ಪ್ರಕಾರಾ ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ, ಮುಂತಾದ ಕರ್ಮಗಳು ನನ್ನಿಂದ ಉತ್ಪನ್ನವಾಗಿದ್ದರೂ ಅವುಗಳು ನನ್ನಿಂದ ದೂರ ಉಳಿದಿರುತ್ತವೆ. ॥ ೧೨೩ ॥

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

**[ ನ ಚ ಮಾಂ ತಾನಿ ಕರ್ಮಾಣೀತಿ ]** ಆಣಿ ಸುಟಲಿಯಾ ಸಿಂಧು ಜಳಾಚಾ ಲೋಟ । ನ ಶಕೇ ಧರೂ ಸೈಂಧವಾಚಾ ಘಾಟ । ತೇವಿ ಸಕಳ ಕರ್ಮ ಮೀಚ ಶೇವಟ । ತಿ ಕಾಯ ಬಾಂಧತೀ ಮಾತೇ ॥ ೧೨೪ ॥ ಧೂಮರಜಾಚೀ ಪಿಂಜರೀ । ವಾಜತಿಯಾ ವಾಯೂತೇ ಜರೀ ಹೋತಿ ಕಾ ಸೂರ್ಯ ಬಿಂಬಾ ಮಾಝಾರಿ । ಅಂಧಾರೇ ಶಿರೇ ॥ ೧೨೫ ॥ ಹೇ ಅಸೋ ಪರ್ವತಾಚಿಯೇ ಹೃದಯೀಂಚೇ । ಜೇವಿ ಪರ್ಜನ್ಯ ಧಾರಾಸ್ತವ ನ ಖೋಂಚೇ । ತೇವಿ ಕರ್ಮಜಾತ ಪ್ರಕೃತೀಚೇ । ನ ಲಗೇ ಮಜ ॥ ೧೨೬ ॥ ಯೆರ್ಹವೀ ಇಯೇ ಪ್ರಕೃತಿ ವಿಕಾರಿ । ಏಕ ಮೀಚಿ ಅಸೇ ಅವಧಾರೀ । ಪರಿ ಉದಾಸೀನಾಚಿಯಾ ಪರಿ । ಕರಿ ನಾ ಕರವೋ ॥ ೧೨೭ ॥ ಜೈಸಾ ದೀಪ ಠೇವಿಲಾ ಪರಿವರೀ । ಕವಣಾತೇ ನಿಯಮೀ ನಾ ನಿವಾರೀ । ಆಣಿ ಕವಣಕವಣಿಯೇ ವ್ಯಾಪಾರೀ । ರಾಹಾಟೀ ತೇಹಿ ನೇಣೇ ॥ ೧೨೮ ॥ ತೋ ಜೈಸಾ ಕಾ ಸಾಕ್ಷಿಭೂತು । ಗ್ರಹ ವ್ಯಾಪಾರ ಪ್ರವೃತ್ತಿ ಹೇತು । ತೈಸಾ ಭೂತ ಕರ್ಮೀ ಅನಾಸಕ್ತು । ಮೀ ಭೂತೀ ಅಸೇ ॥ ೨೯ ॥ ಹಾ ಏಕಚಿ ಅಭಿಪ್ರಾವೋ ಪೃಥಕ ಪೃಥಕೀ । ಕಾಯ ಸಾಂಗೋ ಬಹುತಾ ಉಪಪತ್ತೀ । ಯೇಥ ಏಕಹೇಳಾ ಸುಭದ್ರಾಪತೀ । ಯೇತುಲೇ ಜಾಣ ಪಾ ॥ ೧೩೦ ॥

**ಅರ್ಥ**— ಮತ್ತು ಸಮುದ್ರದ ನೀರಿನ ಥೆರೆಗಳು ಹರಿಯುತ್ತಿರಲು ಅದನ್ನು ಉಪ್ಪಿನ ವಡ್ಡು ಕಟ್ಟಿ ಬಂಧಿಸುವದು ಆಗಲಾರದು. ಅದೇ ಪ್ರಕಾರಾ ನನ್ನಲ್ಲಿ ಲಯಹೊಂದುವ ಸರ್ವ ಕರ್ಮಗಳು ನನ್ನನ್ನು ಹೇಗೆ ಬಂಧನ ಮಾಡುವವು? ॥ ೧೨೪ ॥ ಹೊಗಿಯ ಕಣಗಳ ಸಮುದಾಯವು ಜೋರಿನಿಂದ ಬೀಸುವ ಗಾಳಿಯನ್ನು ನಿಲ್ಲಿಸಿದರೆ, ಸೂರ್ಯ ಬಿಂಬದಲ್ಲಿ

ಕತ್ತಲೆಯು ಶೇರಿದರೆ, ॥ ೧೨೫ ॥ ಇದಂತೂ ಇರಲಿ ಪರ್ವತದ ಹೊಟ್ಟೆಯಲ್ಲಿ ಇರುವ ಪದಾರ್ಥವು ಅತಿವೃಷ್ಟಿಯಿಂದ ಬಾಧೆ ಪಡಬಹುದಾದರೆ ಮಾತ್ರ ಪ್ರಕೃತಿಯ ಕರ್ಮದಿಂದ ನನಗೆ ಯಾವದಾದರೂ ಬಾಧೆಯು ಉಂಟಾಗ ಬಹುದು ॥ ೧೨೬ ॥ ಆದರೆ ಪ್ರಕೃತಿಯ ಕಾರ್ಯಕ್ಕೆ ನಾನೇ ಒಬ್ಬನು ಕಾರಣನಾಗಿದ್ದೇನೆ. ಆದರೆ ಉದಾಸೀನ ಪುರುಷನಂತೆ ನಾನು ಏನೂ ಮಾಡುವದಿಲ್ಲ ಮಾಡಿಸುವದೂ ಇಲ್ಲ ॥ ೧೨೭ ॥ ಮನೆಯಲ್ಲಿಟ್ಟ ದೀವಿಗೆಯು ಯಾವದಾದರೊಂದು ಕೆಲಸ ಮಾಡು, ಇಲ್ಲವೇ ಮಾಡಬೇಡವೆಂದು ಯಾರಿಗೂ ಹೇಳುವದಿಲ್ಲ. ಮತ್ತು ಅದು ಯಾರು ಯಾವ ಕೆಲಸ ಮಾಡುತ್ತಾರೆಂಬ ದನ್ನಾದರೂ ತಿಳಿಯುವದಿಲ್ಲ ॥ ೧೨೮ ॥ ಆ ದೀವಿಗೆಯು ಸಾಕ್ಷಿಭೂತವಿದ್ದು ಗೃಹಕೃತ್ಯದ ಪ್ರವೃತ್ತಿ ಮಾಡಲು ಕಾರಣೀ ಭೂತವಾಗಿರುವದು. ಆದೇ ಪ್ರಕಾರಾ ಸೃಷ್ಟಿಯ ಉತ್ಪತ್ತಿ, ಸ್ಥಿತಿ, ಲಯ, ಈ ಕರ್ಮದಲ್ಲಿ ನಾನು ಉದಾಸೀನ ನಾಗಿದ್ದು ಭೂತಮಾತ್ರಗಳಲ್ಲಿದ್ದೇನೆ. ॥ ೧೨೯ ॥ ಇದೊಂದೇ ಅಭಿಪ್ರಾಯವು ನಿಜವಿರುತ್ತದೆ. ಪುನಃ ಪುನಃ ಅನೇಕ ಪರ್ಯಾಯ ದಿಂದ ಏನು ಹೇಳಲಿ! ಆದರೆ ಎಲೋ ಸುಭದ್ರಾಪತೇ! ಒಂದಾವರ್ತಿ ಇಷ್ಟು ಮಾತು ಲಕ್ಷದಲ್ಲಿಡು. ॥ ೧೩೦ ॥

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸ ಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

**[ ಮಯಾಧ್ಯಕ್ಷೇಣೇತಿ ]** ಜೇ ಲೋಕಚೇಷ್ಟಾ ಸಮಸ್ತಾ। ಜೈಸಾ ನಿಮಿತ್ತಮಾತ್ರ ಕಾ ಸವಿತಾ । ತೈಸಾ ಜಗತ್ಪ್ರಭವೋ ಪಾಂಡುಸುತಾ । ಹೇತೂ ಮೀ ಜಾಣೇ ॥ ೩೧ ॥ ಕಾ ಜೇ ಮಿಯಾ ಅಧಿಷ್ಠಿಲಿಯಾ ಪ್ರಕೃತಿ । ಹೋತೀ ಚರಾಚರಾಚಿಯಾ ಸಂಭೂತೀ । ಮ್ಹಣೋನಿ ಮೀ ಹೇತು ಹೇ ಉಪಪತ್ತೀ । ಘಡೇ ಯಯಾ ॥ ೩೨ ॥ ಆತಾ ಯೇಣೆ ಉಜಿಯೇಡೇ ನಿರುತೇ । ನ್ಯಾಹಾಳೀ ಪಾ ಐಶ್ವರ್ಯ ಯೋಗಾತೇ । ಜೇ ಮಾಝ್ಯಾ ಠಾಯೀ ಭೂತೇ । ಪರೀ ಭೂತೀ ಮೀ ನಸೇ ॥ ೩೩ ॥ ಅಥವಾ ಭೂತೇ ಮಾಝ್ಯಾ ಠಾಯೀ । ಆಣಿ ಭೂತಾ ಮಾಜೀ ಮೀ ನಾಹೀ । ಯಾ ಖುಣಾ ತೂ ಕಹೀ । ಚುಕೋನಕೋ ॥ ೩೪ ॥ ಹೇ ಸರ್ವಸ್ವ ಆಮುಚೇ ಗೂಢ । ಪರೀ ದಾವಿಲೇ ತುಜ ಉಘಡ । ಆತಾ ಇಂದ್ರಿಯಾ ದೇವೂನಿ ಕವಾಡ । ಹೃದಯೀ ಭೋಗೀ ॥ ೩೫ ॥ ಹಾದಂಶಜವ ನಯೇ ಹಾತಾ । ತವ ಮಾಝೇ ಸಾಚೋಕಾರ ಪಣ ಪಾರ್ಥಾ । ನ ಸಂಪಡೇ ಗಾ ಸರ್ವಥಾ । ಜೇವೀ ತುಷೀಕಣ ॥ ೩೬ ॥ ಯೇಠ್ಠವೀ ಅನುಮಾನಾಚೇನಿ ಪೈಸೇ । ಆವಡೇ ಕೀರ ಕಳಲೇ ಐಸೇ । ಪರೀ ಮೃಗಜಳಾಚೇನಿ ಪೋಲಾಂಶೇ । ಕಾಯ ಭೂಮೀ ತಿಮೇ ॥ ೩೭ ॥ ಜೇ ಜಾಳ ಜಳೀ ಪಾಂಗಿಲೇ । ತೇಥ ಚಂದ್ರಬಿಂಬ ದಿಸೇ ಆತುಡಲೇ । ಪರಿ ಥಡಿಯೇ ಕಾಢೂನಿ ಝಾಡಿಲೇ । ತೆವ್ಹಾಂ ಬಿಂಬ ಕೇ ಸಾಂಗೇ ॥ ೩೮ ॥ ತೈಸೇ ಬೋಲವರೀ ವಾಚಾಬಳೇ । ವಾಯಾಂಚಿ ಝುಕವಿಜತೀ ಪ್ರತೀತೀಚೆ ಡೋಳೆ । ಮಗ ಸಾಚೋಕಾರೆ ಬೋಧಾವೇಳೆ । ಆಥೀ ನಾ ಹೋಇಜೆ ॥ ೩೯ ॥

**ಅರ್ಥ**— ಅರ್ಜುನನೇ! ಸರ್ವಸೃಷ್ಟಿಯೊಳಗಿನ ಜನರ ವ್ಯಾಪಾರಕ್ಕೆ ಸೂರ್ಯನು ಯಾವ ಪ್ರಕಾರಾ ಕಾರಣೀಭೂತನಾಗಿರುವನೋ, ಅದೇ ಪ್ರಕಾರಾ ಜಗತ್ಯದ ಉತ್ಪತ್ತಿಗೆ ನಾನು ಕಾರಣನಿದ್ದೇನೆ. ॥ ೩೧ ॥ ಯಾವಾಗ್ಗೆ ನಾನು ಪ್ರಕ್ರುತಿಯ ಅಂಗೀಕಾರಮಾಡುತ್ತೇನೆ, ಆ ವೇಳೆಯಲ್ಲಿ ಆ ಮಾಯಾ ಯೋಗದಿಂದ ಪ್ರಾಣಿಮಾತ್ರಗಳ ಉತ್ಪತ್ತಿಯು ಆಗುತ್ತದೆ ಆದುದರಿಂದ ಈ ಜಗತ್ಯದ ಉತ್ಪತ್ತಿಗೆ ಕಾರಣನು ನಾನೇ ಇರುವೆನೆಂದು ಜನರ ತಿಳುವಳಿಕೆ ಅದೆ ॥ ೩೨ ॥ ಆಗ್ಗೆ ನನ್ನಿಂದ ಭೂತಮಾತ್ರಗಳ ಉತ್ಪತ್ತಿ ಆಗುತ್ತದೆ ಆದರೂ ನನ್ನಲ್ಲಿ ಸರ್ವಭೂತಮಾತ್ರಗಳು ಅವೆ. ಆದರೆ ಭೂತಗಳಲ್ಲಿ ಮಾತ್ರ ನಾನಿರುವದಿಲ್ಲವೆಂಬವನ್ನು ಈ ಜ್ಞಾನಪ್ರಕಾಶದಿಂದ ನನ್ನ ಅದ್ಭುತ ಐಶ್ವರ್ಯಯೋಗವನ್ನು ಚನ್ನಾಗಿ ನಿರೀಕ್ಷಿಸಿ ನೋಡು. ॥ ೩೩ ॥ ಅಥವಾ ಪ್ರಾಣಿಗಳು ನನ್ನಲ್ಲಿರುವದಿಲ್ಲ ಮತ್ತು ಪ್ರಾಣಿಗಳಲ್ಲಿ ನಾನಿರುವದಿಲ್ಲ ವೆಂಬ ಈ ಮುಖ್ಯ ತತ್ವರಹಸ್ಯವನ್ನು ನೀನೆಂದಿಗೂ ಮರೆಯಬೇಡ ॥ ೩೪ ॥ ಈ ನನ್ನ ಮುಖ್ಯ ರಹಸ್ಯವನ್ನು ನಿನಗೆ ಒಡೆದು ಕಾಣುವಂತೆ ಹೇಳಿರುವೆನು ನೀನು ಇಂದ್ರಿಯಗಳ ದ್ವಾರವನ್ನು ನಿರೋಧಿಸಿ ವಿಷಯಸುಖೋಪಭೋಗವನ್ನು ಬಂಧಿಸಿ ಇಂದ್ರಿಯಗಳಿಗೆ ತಿಳಿಯಗೊಡದೇ ನಿನ್ನ ಅಂತಃಕರಣದಲ್ಲಿ ಈ ಮಾತಿನ ಉಪಭೋಗ ತೆಗೆದುಕೊಳ್ಳುವವನಾಗು.

॥ ೧೩೫ ॥ ಅರ್ಜುನನೇ ! ಈ ವೇದಾಂತಸಿದ್ಧಾಂತದ ರಹಸ್ಯವು ಎಲ್ಲಿಯ ವರೆಗೆ ನಿನ್ನ ಹಸ್ತಗತವಾಗಿರುವದಿಲ್ಲ, ಅಲ್ಲಿಯ ವರೆಗೆ ನನ್ನ ನಿಜವಾದ ಸ್ವರೂಪಸ್ಥಿತಿಯ ಅನುಭವವು ನಿನಗೆ ಎಂದಿಗೂ ಉಂಟಾಗದು (ಹೇಗಂದರೆ) ಹೊಟ್ಟನಲ್ಲಿ ಕಾಳು ಹುಡಕಿದರೆ ದೊರಕಬಹುದೇ ? ॥ ೧೩೬ ॥ ಆದರೆ ತರ್ಕದ್ರುಷ್ಟಿಯನ್ನಿಟ್ಟು ಅನುಮಾನದ ಜೋರಿನಿಂದ ಜೀವರುಗಳಿಗೆ ಆತ್ಮಜ್ಞಾನವಾಗಿರುತ್ತದೆಂದು ಕಂಡುಬರುತ್ತದೆ ಆದರೆ ಅದು ವ್ಯರ್ಥವಾಗಿರುವದು. ಕಾರಣವೇನಂದರೆ ಮೃಗಜಲದಿಂದ ಭೂಮಿ ಏಂದಿಗಾದರೂ ಹಸಿಯಾಗಿರುವದೇನು ? ಇಲ್ಲ (ಅದರಹಾಗೆ ಅದೆ) ॥ ೧೩೭ ॥ ಮೀನಗಳನ್ನು ಹಿಡಿಯುವದರ ದೆಶೆಯಿಂದ ಜಾಳಿಗೆಯನ್ನು ನೀರಿನಲ್ಲಿ ವಿಸ್ತಾರವಾಗಿ ಹರವುತ್ತಾರೆ ಅದರಲ್ಲಿ ಚಂದ್ರಬಿಂಬವು ಸಿಲುಕಿಬಿದ್ದಂತೆ ಕಾಣುತ್ತದೆ. ಆ ಜಾಳಿಗೆಯನ್ನು ನದಿಯ ದಂಡೆಗೆ ಜಾಡಿಸಿ ನೋಡಲು ಅದರಲ್ಲಿ ಪ್ರತಿಬಿಂಬವು ಎಲ್ಲರುತ್ತದೆ ಹೇಳು ? ನೋಡುವಾ ! ॥ ೩೮ ॥ ಅದೇ ಪ್ರಕಾರಾ ವಕ್ತೃತ್ವದ ಬಲದ ಮೇಲಿಂದ ಎಷ್ಟೋ ಜನರು ನಮಗೆ ಅನುಭವ ಬಂದಿರುವದೆಂದು ಅನ್ನುತ್ತಾರೆ. ಆದರೆ ನಿಜವಾದ ಬೋಧದ ಪರೀಕ್ಷೆಯ ಕಾಲವು ಬಂದರೆ ಮಾತ್ರ ಆಗ್ಗೆ ಅವರ ಅನುಭವವಿಲ್ಲದ ಶಬ್ದಪಾಂಡಿತ್ಯವು ನಿರರ್ಥಕವಾಗುತ್ತದೆ. ॥ ೧೩೯ ॥

**ಅವಜಾನಂತಿ ಮಾಂ ಮೂಢಾಂ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥ ೧೧ ॥**

**[ ಅವಜಾನಂತೀತಿ ]** ಕಿಂಬಹುನಾ ಭವಾ ಬಿಹಾಯಾ ! ಆಣಿ ಸಾಚೇ ಚಾಡ ಅಥಿ ಜೀಮಿಯಾ । ತರೀ ತೂ ಗಾ ಉಪಪತ್ತೀ ಇಯಾ । ಜತನ ಕೀಜೇ ॥ ೧೪೦ ॥ ಯೇರ್ಹವೀ ದಿಠೀ ವೇಧಲೀ ಕಾವಳೇ । ತೈಚಾಂದಿಣೆಯಾತೇ ಮ್ಹಣೇ ಪಿವಳೇ । ತೇವಿ ಮಾಝ್ಯಾ ಸ್ವರೂಪೀ ನಿರ್ಮಳೇ । ದೇಖಿತೀ ದೋಷ ॥ ೧೪೧ ॥ ನಾ ತರೀ ಜ್ವರೇ ವಿಟಾಳಲೇ ಮುಖ ! ತೇ ದುಧಾತೆ ಮ್ಹಣೇ ಕಡೂವಿಖ । ತೇವಿ ಅಮಾನುಷಾ ಮಾನುಷ । ಮಾನಿತೀ ಮಾತೇ ॥ ೧೪೨ ॥ ಮ್ಹಣಾವೂನಿ ಪುಢತಪುಢತೀ ಧನಂಜಯಾ । ಝಣೇ ವಿಸಂಬಸೀಯಾ ಅಭಿಪ್ರಾಯಾ । ಜೇ ಯಿಯಾ ಸ್ಥೂಲದೃಷ್ಟೀ ವಾಯಾ । ಜಾಈಜೇಲ ಗಾ ॥ ೧೪೩ ॥ ಪೈ ಸ್ಥೂಲದೃಷ್ಟೀ ದೇಖತೀ ಮಾತೇ । ತೇಚಿ ನ ದೇಖಣೇ ಜಾಣ ನಿರುತೇ । ಜೈಸೇ ಸ್ವಪ್ನೀ ಚೇನಿ ಅಮೃತೇ । ಅಮರ ನೋಹಿಜೇ ॥ ೧೪೪ ॥ ಏರ್ಹವೀ ಸ್ಥೂಳದೃಷ್ಟೀ ಮೂಢ । ಮಾತೇ ಜಾಣತೀ ಕೀರ ದೃಢ । ಪರೀ ತೇ ಜಾಣಣೇಂಚಿ ಜಾಣಣೇಯಾ ಆಡ । ರಿಗೋನಿ ಠಾಕೇ ॥ ೧೪೫ ॥ ಜೈಸಾ ನಕ್ಷತ್ರಾಚಿಯಾ ಆಭಾಸಾ-ಸಾಠೀ ಘಾಂತ ಜಾಲಾ ತಯಾ ಹಂಸಾ । ಮಾಜೀ ರತ್ನಬುದ್ಧೀಚಿಯಾ ಆಶಾ । ರಿಗೋನಿಯಾ ॥ ೧೪೬ ॥ ಸಾಂಗೇ ಗಂಗಾ ಯಾ ಬುದ್ಧೀ ಮೃಗಜಳ । ಠಾಕೋನಿ ಆಲಿಯಾಚೇ ಕವಣ ಫಳ । ಕಾಯ ಸುರತರು ಮ್ಹಣೋನಿ ಬಾಬುಳ । ಸೇವಿಲೀ ಕರೀ ॥ ೧೪೭ ॥ ಹಾ ನಿಳಯಾಚಾಚಿ ದುಸರಾ । ಯಾ ಬುದ್ಧೀ ಹಾತ ಘಾತಲಾ ವಿಖಾರಾ । ಕಾ ರತ್ನೆ ಮ್ಹಣೋನಿ ಗಾರಾ । ವೇಂಚಿ ಜೇವಿ ॥ ೧೪೮ ॥ ಅಥವಾ ನಿಧಾನ ಹೇ ಪ್ರಗಟಲೇ । ಮ್ಹಣೋನಿ ಖದಿರಾಂಗಾರ ಖೋಳೇ ಭರಿಲೇ । ಕಾ ಸಾವುಲೀ ನೇಣತಾ ಘಾತಲೇ । ಕುಹಾ ಸಿಂಹೇ ॥ ೧೪೯ ॥ ತೇವಿ ಮೀ ಮ್ಹಣೋನಿ ಪ್ರಪಂಚೀ । ಜಿಹೀ ಬುಡೀ ದಿಧಲೀ ಕೃತನಿಶ್ಚಯಾಚೀ । ತಿಹೀ ಚಾಂದ್ರಾಸಾಠೀ ಜೇವಿ ಜಳೀಂಚೀ । ಪ್ರಭಾ ಧರಿಲೀ ॥ ೧೫೦ ॥ ತೈಸಾ ಕೃತನಿಶ್ಚಯ ವಾಯಾಗೇಲಾ । ಜೈಸಾ ಕೋಣ್ಹೀ ಏಕ ಕಾಂಜೀ ಪ್ಯಾಲಾ । ಮಗ ಪರಿಣಾಮು ಪಾಹೋ ಲಾಗಲಾ ಅಮೃತಾಚಾ ॥ ೧೫೧ ॥ ತೈಸೇ ಸ್ಥೂಳಾಕಾರೀ ನಾಶಿವಂತೇ । ಭರವಸಾ ಬಾಂಧೋನಿ ಚಿತ್ತೇ । ಪಹಾತೀ ಮಜ ಅವಿನಾಶಾತೇ । ತರೀ ಕೈಂಚಾ ದಿಸೆ ॥ ೧೫೨ ॥ ಅಗಾ ಕಾಈ ಪಶ್ಚಿಮ ಸಮುದ್ರೀಚಿಯಾ ತಟಾ । ನಿಘಿಜೇತ ಆಹೇ ಪೂರ್ವಿಲಿಯಾ ವಾಟಾ । ಕಾ ಕೋಂಡಾ ಕಾಂಡಿತಾ ಸುಭಟಾ । ಕಣ ಜೋಡೇ ॥ ೧೫೩ ॥ ತೈಸೇ ವಿಕಾರಲೇ ಹೇ ಸ್ಥೂಳ । ಜಾಣಿತಲೇಯಾ ಮೀ ಜಾಣವ ತಸೇ ಕೇವಳ । ಕಾಈ ಫೇಣ ಪಿತಾ ಜಳ ।

ಸೇವಿಲೇ ಹೋಯ ॥ ೧೫೪ ॥ ಮ್ಹಣೋನಿ ಮೋಹಿಲೇನಿ ಮನೋಧರ್ಮೇ । ಹೇಚಿ ಮೀ ಮಾನೂನಿ ಸಂಭ್ರಮೇ । ಮಗ ಯೇಥಿಂಚೇ ಜಿಯೇ ಜನ್ಮಕರ್ಮೇ । ತಿಯೇ ಮಜಚಿ ಮ್ಹಣತೀ ॥ ೧೫೫ ॥ ಯೇತುಲೇನಿ ಅನಾಮನಾಮ । ಮಜ ಅಕ್ರಿಯಾಸಿ ಕರ್ಮ । ವಿದೇಹಾಸಿ ದೇಹಧರ್ಮ । ಆರೋಪಿತೀ ॥ ೧೫೬ ॥ ಮಜ ಆಕಾರ ಶೂನ್ಯಾ ಆಕಾರ । ನಿರುಪಾಧಿಕಾ ಉಪಚಾರ । ಮಜ ವಿಧಿ ವರ್ಜಿತಾ ವ್ಯವಹಾರ । ಆಚಾರಾದಿಕ ॥ ೧೫೭ ॥ ಮಜ ವರ್ಣಹೀನಾ ವರ್ಣ । ಗುಣಾತೀತಾಸೀ ಗುಣ । ಮಜ ಅಚರಣಾ ಚರಣ । ಅಪಾಣಿಯಾ ಪಾಣೀ ॥ ೧೫೮ ॥ ಮಜ ಅಮೇಯಾ ಮಾನ । ಸರ್ವಗತಾಸೀ ಸ್ಥಾನ । ಜೈಸೇ ಸೇಜೇ ಮಾಜೀ ವನ । ನಿದೇಲಾ ದೇಖೇ ॥ ೧೫೯ ॥ ತೈಸಾ ಅಶ್ರವಣಾ ಶ್ರೋತ್ರ । ಮಜ ಅಚಕ್ಷೂಸೀ ನೇತ್ರ । ಅಗೋತ್ರಾ ಗೋತ್ರ । ಅರೂಪಾ ರೂಪ ॥ ೧೬೦ ॥ ಮಜ ಅವ್ಯಕ್ತಾಸಿ ವ್ಯಕ್ತಿ । ಅನಾರ್ತಾಸೀ ಆರ್ತೀ । ಸ್ವಯಂತೃಪ್ತಾ ತೃಪ್ತೀ । ಭಾವಿತೀ ಗಾ ॥ ೧೬೧ ॥ ಮಜ ಅನಾವರಣಾ ಪ್ರಾವರಣ । ಭೂಷಣಾತೀತಾಸಿ ಭೂಷಣ । ಮಜ ಸಕಳ ಕಾರಣಾ ಕಾರಣ । ದೇಖತೀ ತೇ ॥ ೧೬೨ ॥ ಮಜ ಸಹಜಾತೀ ಕರಿತೀ । ಸ್ವಯಂಭಾತೇ ಪ್ರತಿಷ್ಠಿತೀ । ನಿರಂತರಾತೇ ಆವ್ಹಾನಿತೀ । ವಿಸರ್ಜಿತೀ ಗಾ ॥ ೧೬೩ ॥ ಮೀ ಸರ್ವದಾ ಸ್ವತಃ ಸಿದ್ಧ । ತೋ ಕೀ ಬಾಳ ತರುಣ ವೃದ್ಧ । ಮಜ ಏಕರೂಪಾ ಸಂಬಂಧ । ಜಾಣತೀ ಐಸೇ ॥ ೧೬೪ ॥ ಮಜ ಅದ್ವೈತಾಸಿ ದುಜೇ । ಮಜ ಅಕರ್ತಯಾಸಿ ಕಾಜೇ । ಮೀ ಅಭೋಕ್ತಾ ಕೀ ಭುಂಜೇ । ಐಸೇ ಮ್ಹಣತೀ ॥ ´೬೫ ॥ ಮಜ ಅಕುಳಾಚೇ ಕುಳ ವಾನಿತೀ । ಮಜ ನಿತ್ಯಾಚೇ ನಿಧನೇ ಶಿಣತಿ । ಮಜ ಸರ್ವಾಂತರಾತೇ ಕಲ್ಪಿತೀ । ಅರಿ ಮಿತ್ರ ಗಾ ॥ ೧೬೬ ॥ ಮೀ ಸ್ವಾನಂದಾಭಿರಾಮ । ತಯಾ ಮಜ ಅನೇಕ ಸುಖಾಂಚಾ ಕಾಮ । ಆಘವಾಚಿ ಮೀ ಅಸೇ ಸಮ । ಕೀ ಮ್ಹಣತೀ ಏಕ ದೇಶೀ ॥ ೧೬೭ ॥ ಮೀ ಆತ್ಮಾ ಏಕ ಚರಾಚರೀ । ಮ್ಹಣತೀ ಏಕಾಚಾ ಕೈಪಕ್ಷ ಕರೀ । ಆಣಿ ಕೋಪೋನಿ ಏಕಾತೇ ಮಾರೀ । ಹೇಚಿ ರೂಢವಿತೀ ॥ ೧೬ ॥ ಕಿಂಬಹುನಾ ಐಸೇ ಸಮಸ್ತ । ಜೇಹೇ ಮಾನುಷಧರ್ಮ ಪ್ರಾಕೃತ । ತಯಾಚೀ ನಾವಮೀ ಐಸೇ ವಿಪರೀತ । ಜ್ಞಾನ ತಯಾಂಚೇ ॥ ೧೬೯ ॥ ಜಂವ ಆಕಾರ ಏಕ ಪುಢಾ ದೇಖತೀ । ತಂವ ಹಾ ದೇವ ಯೇಣೇ ಭಾವೇ ಭಜತೀ । ಮಗ ತೋಚಿ ವಿಘಡಲಿಯಾ ಟಾಕಿತೀ । ನಾಹೀ ಮ್ಹಣೋನಿ ॥ ೧೭೦ ॥ ಮಾತೇ ಯೇಣೇ ಯೇಣೇ ಪ್ರಕಾರೇ । ಜಾಣತೀ ಮನುಷ್ಯ ಐಸೇನಿ ಆಕಾರೇ । ಮ್ಹಣವೂನಿ ಜ್ಞಾನಚಿ ತೇ ಅಂಧಾರೇ । । ಜ್ಞಾನಾಸಿ ಕರೀ ॥ ೧೭೧ ॥

**ಅರ್ಥ—** ಬಹಳೀ ಹೇಳುವದೇನದೆ? ಈ ಸಂಸಾರದ ವಿಷಯದಲ್ಲಿ ನಿನಗೆ ಅಂಜಿಕೆಯಿದ್ದು ನಿಜವಾಗಿ ನನ್ನ ಪ್ರಾಪ್ತಿ ಮಾಡಿಕೊಂಡು ಅಕ್ಷಯ ಸುಖವನ್ನನುಭವಿಸಬೇಕೆಂಬ ಆಶಾ ಯಿದ್ದದ್ದಾದರೆ ನಾನು ಹೇಳಿದ ರಹಸ್ಯವನ್ನು ನೀನು ಪೂರ್ಣ ಲಕ್ಷ್ಯದಲ್ಲಿಟ್ಟು ಆಚರಿಸು ॥ ೧೫೦ ॥ ಯಿಲ್ಲದೇ ಯಿದ್ದರೆ ಕಾಮಿಣಿ ಆದ ಯೋಗದಿಂದ ದೃಷ್ಟಿಯು ದೂಷಿತವಾದ ಮನುಷ್ಯನು ಬೆಳದಿಂಗಳಿಗೆ ಸಹಾ ಹಳದೀ ಬಂಣವಿರುವದೆಂದು ಅನ್ನುವಂತೆ, ನಿರ್ದೋಷವಾದ ನಂನ ಶುದ್ಧ ಸ್ವರೂಪದಲ್ಲಿ ಅವನಿಗೆ ದೋಷವು ಕಾಣುತ್ತದೆ. ॥ ೧೫೧ ॥ ಇಲ್ಲವೇ ಜ್ವರದಿಂದ ಬಾಯಿ ವಿಷವಾದಮೇಲೆ ಹಾಲು ವಿಷದಂತೆ ಹತ್ತುವಂತೆ ನಾನು ಮನುಷ್ಯನಿರದೇ ನನಗೆ ಮನುಷ್ಯನೆಂದು ತಿಳಿಯುತ್ತಾರೆ. ॥ ೧೫೨ ॥ ಎಲೋ! ಧನಂಜಯನೇ! ಮೇಲಿಂದಮೇಲೆ ಹೇಳುತ್ತಿರುವ ಈ ನನ್ನ ಅಭಿಪ್ರಾಯವನ್ನು ನೀನು ಮರೆಯಬೇಡ ಯಾಕಂದರೆ ಸ್ಥೂಲದ್ರುಷ್ಟಿಯಿಂದ ನೋಡಿದರೆ ನಿಂನ ನೋಡುವಿಕೆಯು ವ್ಯರ್ಥವಾದೀತು. ॥ ೧೫೩ ॥ ಸ್ವಪ್ನದೊಳಗಿನ ಅಮೃತವನ್ನು ಕುಡಿದು ಯಾರಾದರೂ ಅಮರರಾಗುವದುಂಟೇ? ಅದೇ ಪ್ರಕಾರಾ ಸ್ಥೂಲ ದೃಷ್ಟಿಯಿಂದ ನೋಡುವವರು ನಿಜವಾಗಿ ನಾನನ್ನು ನೋಡುವದಿಲ್ಲ. ॥ ೧೫೪ ॥ ಅಜ್ಞಾನಿ ಜನರು ಸ್ಥೂಲದೃಷ್ಟಿಯಿಂದ ನಂನನ್ನು ತಿಳಿದಿರುವೆವೆಂದು ಅನ್ನುತ್ತಾರೆ, ಅವರ ಸ್ಥೂಲದೃಷ್ಟಿಯು ತಿಳುವಳಿಕೆಯೇ ಯಥಾರ್ಥ। ಜ್ಞಾನವಾಗುವದಕ್ಕೆ ಪ್ರತಿ

ಬಂಧ ಮಾಡುತ್ತದೆ. ॥ ೧೪೫ ॥ ಯಾವ ಪ್ರಕಾರಾ ನಕ್ಷತ್ರದ ಪ್ರತಿಬಿಂಬವನ್ನು ನೀರಿನಲ್ಲಿ ನೋಡಿ ಮುತ್ತು ಇರುವದೆಂಬ ಭಾವನೆಯಿಂದ ಅದನ್ನು ಪ್ರಾಪ್ತ ಮಾಡಿಕೊಳ್ಳಲು ಹಂಸಪಕ್ಷಿಯು ಆಕಾಶದಿಂದ ಹಾರಿಕೊಂಡು ಪ್ರಾಣವನ್ನು ನೀಗುವಂತೆ ॥ ೧೪೬ ॥ ಮೃಗಜಲವನ್ನು ನೋಡಿ ಗಂಗಾನದಿಯೇ ಹರಿಯುತ್ತದೆಂಬ ಭ್ರಮೆಯಿಂದ ಹತ್ತರ ಹೋದರೆ ಅಲ್ಲಿ ಅವರಿಗೆ ತ್ರಷಾ ಶಾಂತಿ ಆದೀತೆ ಹೇಗೆ? ಮತ್ತು ಕಲ್ಪವೃಕ್ಷವಿರುವದೆಂಬ ಭಾವನೆಯಿಂದ ಜಾಲಿಗಿಡವನ್ನು ಕೈಯಲ್ಲಿ ಹಿಡಿದರೆ ಲಾಭವೇನು ? ॥ ೧೪೭ ॥ ನೀಲಮಣಿಯ ಎರಡು ಸರದ ಹಾರ ವಿರುವದೆಂಬ ತಿಳವಳಿಕೆಯಿಂದ ಕವಡಿ ಬಣ್ಣದ ಸರ್ಪಿಗೆ ಕೈ ಹಾಕಿದರೆ, ಇಲ್ಲವೇ ರತ್ನವೆಂದು ತಿಳಿದು ಗಾರಗಲ್ಲು ಆರಿಸಿಕೊಂಡರೆ, ॥ ೧೪೮ ॥ ಅಥವಾ ಭೂಮಿಗತ ನಿಕ್ಷೇಪವು ಪ್ರಕಟವಾಗಿ ಪ್ರಕಾಶಬಿದ್ದಿರುವದೆಂಬ ಭ್ರಮೆಯಿಂದ ಬೆಂಕಿಯನ್ನು ಪದರಿನಲ್ಲಿ ಕಟ್ಟಿಕೊಂಬುವಂತೆ, ಅಥವಾ ತನ್ನ ನೆರಳು ನೀರಿನಲ್ಲಿ ಬಿದ್ದಿರುವದೆಂಬದನ್ನರಿಯದೇ ಸಿಂಹವು ಬಾವಿಯಲ್ಲಿ ಹಾರಿಕೊಂಡು ಪ್ರಾಣವನ್ನು ನೀಗುವಂತೆ, ॥ ೧೪೯ ॥ ನಾನು ಪರಮಾತ್ಮನು ದೇಹಧಾರಿ ಇದ್ದೇನೆಂಬದನ್ನು ತಿಳಿದು ಯಾರು ಕ್ರತನಿಶ್ಚಯ ಮಾಡಿದರೋ, ಅವರು ನೀರಿನಲ್ಲಿಯ ಚಂದ್ರನ ಪ್ರತಿಬಿಂಬವನ್ನು ನೋಡಿ ನಿಜವಾದ ಚಂದ್ರನೇ ಇರುವನೆಂಬ ಭ್ರಮೆಯಿಂದ ಚಂದ್ರನನ್ನು ಹಿಡಿಯಲು ವ್ಯರ್ಥ ಶ್ರಮ ಪಟ್ಟು ಮೋಸ ಹೋಗುವರು. ॥ ೧೫೦ ॥ ಅದೇ ಪ್ರಕಾರಾ ಪರಮಾತ್ಮನು ದೇಹಧಾರಿ ಇದ್ದಾನೆಂಬ ಅವರ ಕ್ರತನಿಶ್ಚಯವು ವ್ಯರ್ಥವಾಗಿರುವದು. ಅದು ಹೇಗಿರುವದೆಂದರೆ ಯಾವನಾದರೊಬ್ಬನು ಅಕ್ಕಿಯ ಗಂಜಿಯನ್ನು ಕುಡಿದು ಅಮೃತದಿಂದಾಗುವ ಸುಖದ ಪರಿಣಾಮವನ್ನು ಅಪೇಕ್ಷಿಸುವಂತೆ ॥ ೧೫೧ ॥ ತಂಮ ಅಂತಃಕರಣದಲ್ಲಿ ಪೂರ್ಣ ಭರವಸವನ್ನಿಟ್ಟು ನಾಶಿವಂತ ಸ್ಥೂಲ ಸಗುಣ ಸ್ವರೂಪವೇ ಅವಿನಾಶಿ ಎಂಬ ಬುದ್ಧಿಯಿಂದ ನಂನನ್ನು ನೋಡುವದು ವೆರ್ಥವಾಗಿರುವದು. ಅವರಿಗೆ ನಾನು ಹೇಗೆ ಕಾಣುವೆನು ? ॥ ೧೫೨ ॥ ಹೀಗೆ ನೋಡು ಯಾವನಾದರೊಬ್ಬನು ಪಶ್ಚಿಮಸಮುದ್ರದ ದಂಡೆಗೆ ಹೋಗುವ ಆಶಾದಿಂದ ಪೂರ್ವಸಮುದ್ರದ ಹಾದಿ ಹಿಡಿದದ್ದಾದರೆ ಅವನಿಗೆ ಪಶ್ಚಿಮಸಮುದ್ರವು ಪ್ರಾಪ್ತವಾಗಬಹುದೇ ? ಮಹಾವೀರನಾದ ಅರ್ಜುನನೇ ! ಹೊಟ್ಟು ಹಸ್ತಗತವಾದರೆ ಅದರಲ್ಲಿ ಧಾನ್ಯ ದೊರಕಬಹುದೋ ? ॥ ೧೫೩ ॥ ಅದೇಪ್ರಕಾರಾ ಈ ವಿಸ್ತಾರವಾದ ಜಗತ್ತು ತಿಳಕೊಳ್ಳುವದರಿಂದ ನಿರ್ದೋಷವಾದ ನನ್ನನ್ನು ತಿಳಿದುಕೊಳ್ಳಲಿಕ್ಕೆ ಬಂದೀತೇ ಹೇಗೆ ? ನೀರಿನ ಮೇಲಿನ ಬುರುಗು ಕುಡಿದರೆ ನೀರಡಿಕೆ ಹೋದೀತೆ? ॥ ೧೫೪ ॥ ಆದುದರಿಂದ ಮಾಯಾಮೋಹಿತವಾದ ಮನೋವೃತ್ತಿಯಿಂದ ಸಂಸಾರದಲ್ಲಿಯೇ ನಾನಿರುವೆನೆಂಬ ಭ್ರಮೆಯಿಂದ ಅಲ್ಲಿಯ ಜನನ ಮರಣಾದಿ ಸರ್ವಸ್ಥಿತಿಯು ನನಗೂ ಇರುವದೆಂದು ತಿಳಿಯುತ್ತಾರೆ ॥ ೫೫ ॥ ಇಷ್ಟರಿಂದಲೇ ನಾಮರಹಿತ, ಕ್ರಿಯಾರಹಿತ, ದೇಹರಹಿತನಾದ ನನಗೆ ( ಪರಮಾತ್ಮನಿಗೆ ) ನಾಮಧಾರಿಯು, ಕರ್ಮಮಾಡುವವನು, ಮತ್ತು ದೇಹ ಧರ್ಮದಿಂದ ಯುಕ್ತನೆಂದು ಅವರು ತಿಳಿಯುತ್ತಾರೆ. ॥ ೫೬ ॥ ನನಗೆ ನಿರಾಕಾರನಿಗೆ ಆಕಾರ, ನಿರುಪಾಧಿಕನಿಗೆ ಉಪಚಾರ, ಕರ್ತವ್ಯ ರಹಿತನಿಗೆ, ವ್ಯವಹಾರಗಳು ॥ ೫೭ ॥ ಜಾತಿ ರಹಿತನಾದ ನನಗೆ ಕುಲವು, ಗುಣಾತೀತನಾದವನಿಗೆ ಗುಣವು, ಚರಣ ರಹಿತನಿಗೆ ಚರಣಗಳು, ಹಸ್ತ ರಹಿತನಿಗೆ ಹಸ್ತಗಳು, ॥ ೫೮ ॥ ಪರಿಮಾಣಾತೀತನಾದ ನನಗೆ ಪರಿಮಾಣವು, ಸರ್ವ ವ್ಯಾಪಕನಾದ ನನಗೆ ಸ್ಥಾನವಿರುವದೆಂದು ಕಲ್ಪಿಸುತ್ತಾರೆ. ಹೇಗಂದರೆ ಹಾಸಿಗೆಯ ಮೇಲೆ ಮಲಗಿದವನು ಸ್ವಪ್ನದಲ್ಲಿ ವನಶೋಭೆಯನ್ನು ನೋಡುವಂತೆ, ॥ ೫೯ ॥ ಕರ್ಣರಹಿತನಾದ ನನಗೆ ಕಿವಿಗಳು, ನೇತ್ರರಹಿತನಾದವನಿಗೆ ಕಣ್ಣುಗಳು, ಗೋತ್ರ ರಹಿತನಾದವನಿಗೆ ಗೋತ್ರವು, ನಿರಾಕಾರನಿಗೆ ರೂಪವು, ॥ ೧೬೦ ॥ ಅವ್ಯಕ್ತನಾದ ನನಗೆ ವ್ಯಕ್ತನೆಂದೂ, ನಿರಿಚ್ಛನಾದ ನನಗೆ ಇಚ್ಛೆಯು. ಸ್ವಯಮೇವ ತೃಪ್ತನಾದ ನನಗೆ ತೃಪ್ತಿಯುಂಟೆಂದು ಕಲ್ಪಿಸುತ್ತಾರೆ. ॥ ೬೧ ॥ ನಾವು ವಸ್ತ್ರರಹಿತನು ಅಂದರೆ ಜಗತ್ತಿಗೆ ಹೊದಿಕೆಯಾಗಿರುವ ನನಗೆ ಹೊದಿಸುತ್ತಾರೆ. ಭೂಷಣಾತೀತನಾದ ನಿರಾಕಾರನಿಗೆ ಅಲಂಕಾರಗಳನ್ನಿಡಿಸುತ್ತಾರೆ. ನಾನು ಸರ್ವ ಜಗತ್ಯದ ಸೃಷ್ಟಿಕರ್ತನಿದ್ದು ನನಗೆ ಎರಡನೆಯವರಿಂದ ಜನ್ಮವನ್ನೆತ್ತಿರುವೆನೆಂದು ಊಹಿಸುತ್ತಾರೆ. ॥ ೬೨ ॥ ನಾನು ಸ್ವಯಂ ಮೂರ್ತಿಯಿದ್ದು ನನ್ನ ಮೂರ್ತಿಯನ್ನು ಸ್ಥಾಪಿಸುತ್ತಾರೆ. ನಾನು ಸ್ವಯಂ ಸಿದ್ಧನಿದ್ದು ನನಗೆ ಪ್ರಾಣ ಪ್ರತಿಷ್ಠೆಯನ್ನು ಮಾಡುತ್ತಾರೆ. ನಾನು ನಿತ್ಯ ಸರ್ವತ್ರದಲ್ಲಿಯೂ ವ್ಯಾಪ್ತನಿದ್ದು ನನ್ನ ಆಹ್ವಾನ ವಿಸರ್ಜನ ಮಾಡುತ್ತಾರೆ. ॥ ೬೩ ॥ ನಾನು ಯಾವಾಗಲೂ ಸ್ವಯಮೇವ

ನಿರಾಕಾರ ಸಿದ್ಧನಿದ್ದು ನನಗೆ ಬಾಲ್ಯ, ತಾರುಣ್ಯ, ವೃದ್ಧಾಪ್ಯ, ಮುಂತಾದ ಅವಸ್ಥಾತ್ರಯಗಳುಂಟೆಂದೂಹಿಸುತ್ತಾರೆ. ॥ ೯೪ ॥ ನಾನು ಅದ್ವೈತನಿದ್ದು ನನ್ನಲ್ಲಿ ದ್ವೈತ ಕಲ್ಪನೆಯನ್ನು ಮಾಡುತ್ತಾರೆ. ನಾನು ಏನೊಂದು ಮಾಡದೇ ಇದ್ದರೂ ಕರ್ಮಮಾಡುವವನೆಂದು, ಮತ್ತು ನಾನು ಏನೂ ತಿನ್ನದವನಿದ್ದು ತಿನ್ನುತ್ತೇನೆಂದೆನ್ನುತ್ತಾರೆ. ॥ ೯೫ ॥ ನನಗೆ ಕುಲ ಗೋತ್ರಗಳಿಲ್ಲದೇ ನನ್ನ ಕುಲದ ವರ್ಣನೆಯನ್ನು ಮಾಡುತ್ತಾರೆ. ನಾನು ನಿತ್ಯನಿದ್ದು ನನಗೆ ಮರಣವಿರುವದೆಂದು ನನ್ನ ಮರಣದಿಂದ ದುಃಖಿಸುತ್ತಾರೆ. ಅದರಂತೆ ನಾನು ಸರ್ವರ ಸರ್ವಾಂತರ್ಯಾಮಿಯಾಗಿದ್ದು ಒಬ್ಬನ ಶತ್ರುವೂ, ಮತ್ತೊಬ್ಬನ ಮಿತ್ರನಿರುವೆನೆಂದು ನನ್ನಲ್ಲಿ ಕಲ್ಪನೆಮಾಡುತ್ತಾರೆ. ॥ ೯೬ ॥ ನಾನು ನಿಜಾನಂದದಲ್ಲಿ ನಿಮಗ್ನನಾಗಿರಲು ಆ ನನಗೆ ಮಿಕ್ಕಾದ ವಿಷಯಸುಖಗಳ ಅಪೇಕ್ಷೆ ಮಾಡುವವನೆಂದು ಮತ್ತು ಸರ್ವಸ್ಥಳದಲ್ಲಿ ನನ್ನ ವ್ಯಾಪ್ತಿಯು ಸಮಾನವಿದ್ದು ನನಗೆ ಏಕದೇಶಿ ಅಂದರೆ ಒಂದೇ ಸ್ಥಳದಲ್ಲಿರುವವನೆಂದೆನ್ನುತ್ತಾರೆ. ॥ ೯೭ ॥ ನಾನು ಸರ್ವ ಸ್ಥಾವರ ಜಂಗಮದ ಆತ್ಮನಿದ್ದು ಒಬ್ಬನ ವೈರಿಯು ಮತ್ತೆ ಒಬ್ಬನನ್ನು ಕ್ರೋಧದಿಂದ ಕೊಲ್ಲುವವನೆಂದು ಸರ್ವತ್ರದಲ್ಲಿಯೂ ಪ್ರಸಿದ್ಧ ಮಾಡುತ್ತಾರೆ. ॥ ೯೮ ॥ ಆದರೆ ಈ ತರದ ಸರ್ವ ಕ್ಷುದ್ರ ಮನುಷ್ಯಧರ್ಮದ ಗುಣಗಳೆಲ್ಲವು ನನಗೆ ಸಂಬಂಧಿಸಿರುತ್ತವೆಂಬ ವಿಪರೀತ ಜ್ಞಾನವು ಅವರಿಗೆ ಉಂಟಾಗಿರುತ್ತದೆ ॥ ೯೯ ॥ ಯಾವಾಗ್ಗೆ ತಮ್ಮ ದೃಷ್ಟಿಯು ಎದುರಿಗೆ ಯಾವದಾದರೊಂದು ಮೂರ್ತಿಯನ್ನು ನೋಡಿದ ಕ್ಷಣವೇ ಸಾಕ್ಷಾತ ದೇವರೇ ಇರುವನೆಂಬ ಭಾವನೆಯಿಂದ ಆ ಮೂರ್ತಿಗೆ ಭಜಿಸುತ್ತಾರೆ. ಅಕಸ್ಮಾತ್ ಅದು ಭಂಗವಾದರೆ ಅದರಲ್ಲಿಯು ದೇವತಾ ಸಾನ್ನಿಧ್ಯವು ಇಲ್ಲದಂತಾಗಿರುವದೆಂದು ಅದನ್ನು ತ್ಯಾಗಮಾಡುತ್ತಾರೆ. ॥ ೧೦೦ ॥ ಈ ರೀತಿಯಿಂದ ನನಗೆ ದೇಹಧಾರಿಗಳಂತೆ ನಾನೂ ಒಬ್ಬ ಮನುಷ್ಯನೇ ಇದ್ದೇನೆಂದು ನಂಬುತ್ತಾರೆ. ಆದರೆ ಅವರ ವಿಪರೀತ ಜ್ಞಾನವು ನನ್ನ ಶುದ್ಧಸ್ವರೂಪದ ಯಥಾರ್ಥವಾದ ಜ್ಞಾನವಾಗುವದಕ್ಕೆ ಮರೆಮಾಡುತ್ತದೆ. ॥ ೧೦೧ ॥

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

**[ ಮೋಘಾಶಾ ಇತಿ ]** ಯಾಲಾಗೀ ಜನ್ಮಲೇ ತೇ ಮೋಘ । ಜೈಸೇ ವಾರ್ಷಿಯೇ ಮೀಣ ಮೇಘ । ಕಾ ಮೃಗಜಳಾಚೇ ತರಂಗ । ದುರೂನೀಚ ಪಹಾವೇ ॥ ೭೨ ॥ ಅಥವಾ ಕೋಲ್ಹೋರೀಚೇ ಅಸಿವಾರ । ನಾತರೀ ಪೋಡಂಬರೀಚೆ ಅಳಂಕಾರ । ಕೀ ಗಂಧರ್ವ ನಗರೀಚೇ ಆವಾರ । ಆಭಾಸತೀಕಾ ॥ ೭೩ ॥ ಸಾಬರೀ ವಾಢಿನ್ನಲ್ಯಾ ಸರಳಾ । ವರೀ ಫಳ ನಾಹೀ ಅಂತ ಪೋಕಳಾ । ಕಾಸ್ತನ ಜಾಲೇ ಗಳಾ । ಶೇಳಿಯೇ ಜೈಸೇ ॥ ೭೪ ॥ ತೈಸೇ ಮೂರ್ಖಾಚೇ ತಯಾ ಜಿಯಾಲೇ । ಆಣಿ ಧಿಗ ಕರ್ಮ ತಯಾಂಚೇ ನಿಪಜಲೇ । ಜೈಸೇ ಸಾವರೀ ಫಳ ಆಲೇ । ಫೋಪೇ ನಾದೀಜೇ ॥ ೭೫ ॥ ಮಗ ಜೇ ಕಾಹೀ ತೇ ಪಢಿನ್ನಲೇ। ತೇ ಮರ್ಕಟೇ ನಾರೇಳ ತೋಡಿಲೇ। ಕಾ ಆಂಧಳ್ಯಾಹಾತೀ ಪಡಿಲೇ। ಮೋತೀ ಜೈಸೇ ।೭೬॥ ಕಿಂಬಹುನಾ ತಯಾಂಚೀ ಶಾಸ್ತ್ರೇ। ಜೈಸೀ ಕುಮಾರೀ ಹಾತೀ ದಿಧಲೀ ಶಸ್ತ್ರೇ। ಕಾ ಅಶೌಚ್ಯಾ ಮಂತ್ರೇ । ಬೀಜೇ ಕಥಿಲೀ ॥ ೭೭ ॥ ತೈಸೇ ಜ್ಞಾನಜಾತ ತಯಾ । ಆಣಿ ಜೇ ಕಾಹೀ ಆಚರಲೇ ಗಾ ಧನಂಜಯಾ। ತೇ ಆಘವೇಂಚಿ ಗೇಲೆ ವಾಯಾ। ಜೇ ಚಿತ್ತಹೀನ ॥೭೮॥ ಪೈ ತಮೋಗುಣಾಚೀ ರಾಕ್ಷಸೀ । ಜೇ ಸುಬುದ್ಧೀ ತೇ ಗ್ರಾಸೀ । ವಿವೇಕಾಚಾ ಠಾವಚಿ ಪುಸೀ । ನಿಶಾಚರೀ ಜೇ ॥ ೭೯ ॥ ತಿಯೇ ಪ್ರಕೃತೀ ವರಪಡೇ ಜಾಲೇ । ಮ್ಹಣವೂನಿ ಚಿಂತೇಚೇನಿ ಕಪಾಟೇ ಗೇಲೇ । ವರೀ ತಾಮಸೀಯೇಚೇ ಪಡಿಲೇ । ಮುಖಾಮಾಜೀ ॥ ೧೮೦ ॥ ಜೇಥ ಆಸೇಚಿಯೇ ಲಾಳೇ । ಆತ ಹಿಂಸಾ ಜೀಭ ಲೋಳೇ । ತೇವೀಂಚಿ ಅಸಂತೋಷಾಚೇ ಚಾಕಳೇ । ಅಖಂಡ ಚಘಳೀ ॥ ೧೮೧ ॥ ಜೇ ಅನರ್ಥಾಚೇ ಕಾನವೇರೀ । ಆವಾಳುವೀ ಚಾಟೇ ತನಿಘೇ ಬಾಹೇರೀ । ಜೇ ಪ್ರಮಾದ ಪರ್ವತೀಂಚೀ ದರೀ । ಸದಾಚಿ ಮಾತಲೀ ॥ ೧೮೨ ॥ ಜೇಥ ದ್ವೇಷಾಚಿಯಾ ದಾಢಾ । ಖಸಖಸಾ ಜ್ಞಾನಾಚಾ ಕರಿತೀ ರಗಡಾ । ಜೇ ತ್ವಗಸ್ಥಿ ಗವಸಣೀ

ಮೂಢಾ । ಸ್ಥೂಲಬುದ್ಧೀ ॥ ೮೩ ॥ ಐಸೇ ಆಸುರಿಯೇ ಪ್ರಕೃತಿಚೇ ತೋಂಡೀ । ಜೇ ಜಾಲೇ ಗಾಭೂ ತೋಂಡೀ । ತೇ ಬುಡೋನಿ ಗೇಲೇ ಕುಂಡೀ । ವ್ಯಾಮೋಹಾಚ್ಯಾ ॥ ೮೪ ॥ ಏವಂ ತಮಾಚಿಯೇ ಪಡಿಲೇ ಗರ್ತೇ । ನ ಪವಿಜತಾಚಿ ವಿಚಾರಾಚೇನಿ ಹಾತೇ । ಹೇ ಅಸೋ ತೇ ಗೇಲೇ ಜೇಥೇ । ತೇ ಶುದ್ಧೀಚಿ ನಾಹೀ ॥ ೮೫ ॥ ಮ್ಹಣೋನಿ ಅಸೋ ತ ಇಯೇ ವಾಯಾಣೀ । ಕಾಯುಸೀ ಮೂರ್ಖಾಚೀ ಬೋಲಣೀ । ವಾಯಾ ವಾಢವಿತಾ ವಾಣೀ । ಶಿಣೇಲ ಹನ ॥ ೮೬ ॥ ಐಸೇ ಬೋಲಿಲೇ ದೇವೇ । ತೇಥ ಜೇ ಜೇ ಮ್ಹಣಿತಲೇ ಪಾಂಡವೇ । ಆ ಇಕೇ ಚೇಥ ವಾಚಾ ವಿಸವೇ । ತೇ ಸಾಧು ಕಥಾ ॥ ೮೭ ॥

**ಅರ್ಥ**:— ಸಾರಾಂಶ ಯಾರಿಗೆ ನನ್ನ ವಿಷಯದಲ್ಲಿ ಇಂಥ ಪ್ರಕಾರದ ವಿಚಾರವು ಅದೆಯೋ ಅವರ ಜನ್ಮವೇ ವ್ಯರ್ಥವದೆ. ಪರ್ಜನ್ಯಕಾಲದ ಹೊರ್ತು ಮೇಘವು ಇಲ್ಲವೇ ಮೃಗಜಲದ ತೆರೆಗಳು ದೂರಿನಿಂದಲೇ ನೋಡಲಿಕ್ಕೆ ಯೋಗ್ಯವಾಗಿರುವವು. ॥ ೭೨ ॥ ಅಥವಾ ಮಣ್ಣಿನ ಚಿತ್ರಗಳಲ್ಲಿಯ ಕುದುರೆಯ ಸವಾರರು ಮಂತ್ರಜ್ಞನು ಮಾಡಿದ ಒಡವೆಗಳು ಮತ್ತು ಸಾಯಂಕಾಲದ ಮೋಡಗಳಲ್ಲಿ ಕಾಣುವ ನಗರವು ಹ್ಯಾಗೆ ಭಾಸವಾಗುತ್ತದೋ, ॥ ೭೩॥ ಸಾಬರೀ ವೃಕ್ಷವು ಸರಳವಾಗಿ ಬೆಳೆದರೆ ಅದು ಒಳಗೆ ಪೊಳ್ಳು ಇದ್ದು ಮೇಲೆ ಫಲವು ಬರುವದಿಲ್ಲ. ಆಡಿನ ಕೊರಳ ಮೊಲೆಗಳು ವ್ಯರ್ಥವಾಗಿರುವವು. ॥ ೭೪ ॥ ಸಾಂವರೀ ( ಯಾವದರ ಫಲಗಳು ನಿರುಪಯೋಗಿ ಇರುವವು ಅಂಥ ಒಂದು ಪ್ರಕಾರದ ವೃಕ್ಷವು ) ವೃಕ್ಷದ ಫಲಗಳು ಯಾರಿಗೇನು ಉಪಯೋಗವಾಗುವದು? ಅವು ಕೊಡತೆಗೆದುಕೊಳ್ಳಲು ಬರುವದಿಲ್ಲ. ಅದೇ ಪ್ರಕಾರ ಆ ಮೂರ್ಖನ ಜೀವಿತವು ವ್ಯರ್ಥವಾಗಿರುತ್ತದೆ. ಮತ್ತು ಅವನು ಮಾಡಿದಂಥ ಕರ್ಮಾದಿಗಳಿಗೆ ಧಿಃಕಾರವಿರಲಿ. ॥ ೭೫ ॥ ಆಮೇಲೆ ಆ ಮೂರ್ಖನು ಯಾವದಾದರೂ ಶಾಸ್ತ್ರಾಧ್ಯಯನ ಮಾಡಿದ್ದರೆ, ಅದು, ಮರ್ಕಟವು ಟೆಂಗಿನಕಾಯಿ ಹರಿದರೆ ಆ ಮೂಢ ಕೋಡಗನಿಗೆ ಟೆಂಗಿನಿಂದ ಯಾವ ಪ್ರಯೋಜನವು? ಅಥವಾ ಕುರುಡನಿಗೆ ಮುತ್ತು ದೊರಕಿದಂತೆ ಆಗಿರುವದು. ॥೭೬॥ ಆದರೆ ಅವನು ಅಧ್ಯಯನ ಮಾಡಿದ ಶಾಸ್ತ್ರಗಳು ಸಂಣಹುಡಿಗಿಯ ಕೈಯಲ್ಲಿ ಕೊಟ್ಟ ಶಸ್ತ್ರದಂತೆ, ಅಥವಾ ಅಶುಚಿರ್ಭೂತನಿಗೆ, ಬೀಜಸಹಿತ ಕಲಿಸಿದ ಮಂತ್ರದಂತೆ ಅನರ್ಥಕರವಾಗಿರುವದು. ॥ ೭೭ ॥ ಧನಂಜಯನೇ! ಅದೇ ಪ್ರಕಾರ ಯಾವನ ಚಿತ್ತವು ಅವನ ಸ್ವಾಧೀನದಲ್ಲಿರುವದಿಲ್ಲವೋ ಅವನ ಸರ್ವಜ್ಞಾನವು ಅವನು ಮಾಡಿದ ಯಾವದಾದರೂ, ಆಚರಣಗಳು ವ್ಯರ್ಥವಾಗಿರುತ್ತವೆ. ॥ ೭೮ ॥ ಅದೇ ಪ್ರಕಾರ ತಮೋಗುಣರೂಪ ರಕ್ಕಸಿಯು ಸದ್ಬುದ್ಧಿಯ ಗ್ರಾಸಮಾಡಿ ನೆನಪಿಗೆ ಸಹ ಜ್ಞಾನವಿವೇಕದ ಸ್ಥಳವು ಇಲ್ಲದಂತೆ ಮಾಡಿಬಿಡುವ ನಿಶಾಚರಿ ಇದ್ದಾಳೆ. ॥ ೭೯ ॥ ಈ ಪ್ರಕೃತಿಯಿಂದ ಯಾರು ಗ್ರಸ್ತರಾಗುತ್ತಾರೋ, ಅವರು ನತತ ಚಿಂತಾಕ್ರಾಂತರಿದ್ದು ತಾಮಸ ಪ್ರಕೃತಿಯ ಬಾಯಿಯಲ್ಲಿ ಅನಾಯಾಸವಾಗಿ ಹೋಗಿ ಬೀಳುತ್ತಾರೆ. ॥ ೧೮೦ ॥ ಆ ರಾಕ್ಷಸಿ ಪ್ರಕೃತಿಯು ಆಶಾರೂಪಿ ಜೊಲ್ಲಿನಲ್ಲಿ ಹಿಂಸಾರೂಪ ನಾಲಿಗೆಯನ್ನು ಅಲ್ಲಾಡಿಸಿ ಅಸಂತೋಷರೂಪ ಮಾಂಸದ ಗುಳಿಗೆಯನ್ನು ಯಾವಾಗಲೂ ಕಡಿಯುತ್ತಿರುತ್ತಾಳೆ ॥ ೮೧ ॥ ಅವಳು ಅನರ್ಥರೂಪ ಕಿವಿಯ ವರೆಗೆ ತುಟಿಯನ್ನು ಕಡಿಯುತ್ತ ಹೊರಬೀಳುತ್ತಾಳೆ. ಆ ರಾಕ್ಷಸಿಯು ಯಾವಾಗಲೂ ಪ್ರಮಾದರೂಪ ಪರ್ವತದ ದೊಡ್ಡ ಭಯಪ್ರದ ದರಿಯು ಆಗಿರುತ್ತಾಳೆ. ॥ ೮೨ ॥ ಅವಳು ದ್ವೇಷರೂಪ ಗಡ್ಡೆಗಳನ್ನು ಕಚಕಚನೆ ಕಡಿಯುತ್ತ ಜ್ಞಾನದ ನಾಶಮಾಡಿ ಬಿಡುತ್ತಾಳೆ. ಮತ್ತು ಯಾವ ಅಗಸ್ತ್ಯರುಷಿಗೆ ಇದ್ದಂಥ ಕೊಡದ ಆವರಣದಂತೆ ಸ್ಥೂಲ ಬುದ್ಧಿಯ ಮೂರ್ಖಜನರಿಗೆ ಆಸುರೀ ಮಾಯೆಯು ಗೌಸಣಿಕೆಯಾಗಿದ್ದಾಳೆ. ॥ ೮೩ ॥ ಇಂಥ ಪ್ರಕಾರದ ಆ ರಾಕ್ಷಸಿ ಪ್ರಕೃತಿಯ ಬಾಯಿಯಲ್ಲಿ ಯಾರು ಬಲಿಯಂತೆ ಹೋಗಿ ಬೀಳುವರೋ, ಅವರು ಭ್ರಾಂತಿರೂಪಕುಂಡದಲ್ಲಿ ಮುಳುಗಿಹೋಗುತ್ತಾರೆ. ॥ ೮೪ ॥ ಈ ಪ್ರಕಾರ ಯಾರು ಅಜ್ಞಾನದ ಆಳವಾದ ತೆಗ್ಗಿನಲ್ಲಿ ಬೀಳುವರೋ ಅವರಿಗೆ ವಿಚಾರರೂಪಿ ಕೈಗಳ ಸಹಾಯವು ದೊರಕುವದಿಲ್ಲ. ಇಷ್ಟೇ ಅಲ್ಲ. ಆದರೆ ಅವರು ಎಲ್ಲಿ ಹೋಗುತ್ತಾರೆಂಬದನ್ನು ಶೋಧಮಾಡಲು ಗೊತ್ತಾಗುವದಿಲ್ಲ. ॥ ೮೫ ॥ ಅದರಿಂದ ಈ ನಿರ್ಥಕವಾದ ಕಥೆಯು ಹಾಗೇ ಇರಲಿ, ವ್ಯರ್ಥವಾಗಿ ಮೂರ್ಖರ ವರ್ಣನೆ ಮಾಡುವದರಿಂದ ವಾಣಿಗೆ ಶ್ರಮವು ಮಾತ್ರ ಆಗಬಹುದು. ॥ ೮೬ ॥ ಹೀಗೆ ಶ್ರೀಕೃಷ್ಣಪರಮಾತ್ಮನು ನುಡಿದನು. ಆ ಪ್ರಸಂಗದಲ್ಲಿ ಅರ್ಜುನನು

ಅಹುದು ಸ್ವಾಮೀ ! ನಿಮ್ಮ ಮಾತು ನಿಜವಿರುವದೆಂದೆನಲು, ( ಶ್ರೀಕೃಷ್ಣನು ಅನ್ನುತ್ತಾನೆ. ) ಯಾವ ಸಾಧುಗಳ ವರ್ಣನೆಯಲ್ಲಿ ವಾಣಿಗೆ ವಿಶ್ರಾಂತಿ ದೊರಕುತ್ತದೆ. ಆ ಸುಖಕರವಾದ ಸಾಧುಗಳ ಕತೆಯನ್ನು ಹೇಳುತ್ತೇನೆ ಕೇಳು. ॥೧೮೭॥

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ॥ ೧೩ ॥**

**[ ಮಹಾತ್ಮಾನಸ್ತು ಮಾಂ ಇತಿ ]** ತರೀ ಜಯಾಚೇ ಚೋಖಟೇ ಮಾನಸೀ । ಮೀ ಹೋವೂನಿ ಅಸೇ ಕ್ಷೇತ್ರ ಸಂನ್ಯಾಸೀ । ಜಯಾ ನಿಜೇಲ್ಯಾತೇ ಉಪಾಸೀ । ವೈರಾಗ್ಯ ಗಾ ॥ ೮೮ ॥ ಜಯಾಚಿ ಯಾ ಆಸ್ಥೇಚಿಯಾ ಸದ್ಭಾವಾ । ಆಂತ ಧರ್ಮ ಕರೀ ರಾಣಿವಾ । ಜಯಾಚೇ ಮನ ವೋಲಾವಾ । ವಿವೇಕಾಸೀ ॥ ೮೯ ॥ ಜೇ ಜ್ಞಾನ ಗಂಗೇ ನಾಹಾಲೇ । ಪೂರ್ಣತಾ ಜೇವೂನಿ ಧಾಲೇ । ಜೇ ಶಾಂತೀಸಿ ಝಾಲೇ । ಪಲ್ಲವ ನವೇ ॥ ೧೯೦ ॥ ಜೇ ಪರಿಣಾಮಾ ನಿಘಾಲೇ ಕೊಂಭ । ಜೇ ಧೈರ್ಯ ಮಂಡಪಾಚೇ ಸ್ತಂಭ । ಜೇ ಆನಂದ ಸಮುದ್ರೀ ಕುಂಭ । ಚುಬುಕ ಳೋನಿ ಭರಲೇ ॥ ೯೧ ॥ ಜಯಾ ಭಕ್ತೀಚೀ ಯೇತುಲೀ ಪ್ರಾಪ್ತೀ । ಜೇ ಕೈವಲ್ಯಾತೇ ಪರತೇ ಸರ ಮ್ಹಣತೀ । ಜಯಾಚಿಯೇ ಲೀಲೇ ಮಾಜೀ ನೀತಿ । ಜಿಯಾಲೀ ದಿಸೇ ॥ ೯೨ ॥ ಜೇ ಆಘವಾಂಚಿ ಕರಣೀ । ಲೇಇಲೇ ಶಾಂತೀಚೀ ಲೇಣೀ । ಜಯಾಂಚೇ ಚಿತ್ತ ಗವಸಣೀ । ವ್ಯಾಪಕಾ ಮಜ ॥ ೯೩ ॥ ಐಸೇ ಜೇ ಮಹಾನುಭಾವ । ದೈವಿಯೇ ಪ್ರಕೃತೀಚೇ ದೈವ । ಜೇ ಜಾಣೋನಿಯಾ ಸರ್ವ । ಸ್ವರೂಪ ಮಾಝೇ ॥ ೯೪ ॥ ಮಗ ವಾಢತೇನಿ ಪ್ರೇಮೇ । ಮಾತೇ ಭಜತೀ ಜೇ ಮಹಾತ್ಮೇ । ಪರೀ ದುಜೇ ಪಣ ಮನೋಧರ್ಮೇ । ಶಿವತಲೇ ನಾಹೀ ॥ ೯೫ ॥ ಐಸೇ ಮೀಚ ಹೋವೂನಿ ಪಾಂಡವಾ । ಕರಿತೀ ಮಾಝೀ ಸೇವಾ । ಪರೀ ನವಲಾವ ತೋ ಸಾಂಗಾವಾ । ಅಸೇ ಆಇಕ ॥ ೯೬ ॥

**ಅರ್ಥ—** ಯಾರ ಶುದ್ಧ ಮನೋರೂಪಿ ಕ್ಷೇತ್ರದಲ್ಲಿ ನಾನು ಕ್ಷೇತ್ರ ಸನ್ಯಾಸಿಯಾಗಿರುತ್ತೇನೆ. ಮತ್ತು ಯಾವ ಪುರುಷನು ಮಲಗಿಕೊಂಡಿದ್ದರೂ ವೈರಾಗ್ಯವು ಆ ಪುರುಷನ ಸೇವಾ ಮಾಡುತ್ತಿರುತ್ತದೆ. ॥ ೮೮ ॥ ಯಾವ ಪುರುಷನ ಪರಮಾತ್ಮ ಪ್ರಾಪ್ತಿಯ ಉತ್ಕಟವಾದ ಇಚ್ಛಾದಲ್ಲಿ ಧರ್ಮವು ರಾಜ್ಯಮಾಡುತ್ತಿರುತ್ತದೋ, ಯಾವನ ಮನಸು ಯಾವಾಗಲೂ ಸದ್ವಿಚಾರದ ಜೀವನವಾಗಿರುತ್ತದೆ. ॥ ೮೯ ॥ ಯಾರು ಜ್ಞಾನರೂಪ ಗಂಗೆಯಲ್ಲಿ ಸ್ನಾನ ಮಾಡಿ ಅಂತರ್ಬಾಹ್ಯ ಶುದ್ಧರಾಗಿ ಪೂರ್ಣ ಬ್ರಹ್ಮಸ್ವರೂಪದ ಪ್ರಾಪ್ತಿಯಿಂದ ತೃಪ್ತರಾಗಿರುವರೋ, ಅವರ ಶರೀರವೇ ಶಾಂತಿರೂಪ ವೃಕ್ಷಕ್ಕೆ ಹೊಸದಾಗಿ ನವಪಲ್ಲವಗಳು ಮೂಡಿದಂತೆ ಶೋಭಿಸುವದು. ॥ ೯೦ ॥ ಆ ಮಹಾತ್ಮರ ಶರೀರವು ಬ್ರಹ್ಮರೂಪ ವೃಕ್ಷಕ್ಕೆ ಚಿಗಿತ ಟೊಂಗಿಗಳು ಇಲ್ಲವೇ ಧೈರ್ಯರೂಪ ಮಂಟಪದ ಖಂಬವೇ ಆಗಿರುವದು. ಅದೇ ಪ್ರಕಾರಾ ಆ ಪುರುಷರು ಆನಂದ ಸಮುದ್ರದಲ್ಲಿ ಮುಳಗಿಸಿ ತುಂಬಿ ತೆಗೆದ ಕೊಡದಂತೆ ಇರುವರು. ॥ ೯೧ ॥ ಯಾರು ಭಕ್ತಿ ಪ್ರಾಪ್ತಿಯ ಮುಂದೆ, ಮೋಕ್ಷಪದವನ್ನು ಸಹ ತುಚ್ಛವೆಂದು ತಿಳಿದು ಅದನ್ನು ದೂರ ಸರಿಸಿ ಬಿಟ್ಟಿರುವರು ಅವರು ಲೀಲಾ ಮಾತ್ರದಿಂದ ಮಾಡುವ ಆಚರಣವಲ್ಲಿಯೂ ನೀತಿಯು ಜನ್ಮ ಹೊಂದಿರುವದೆಂದು ತೋರುವದು. ॥ ೯೨ ॥ ಯಾವನು ತನ್ನ ಅವಯವಗಳಲ್ಲಿ ಶಾಂತಿರೂಪ ಅಲಂಕಾರಗಳನ್ನು ಧರಿಸಿರುತ್ತಾನೋ, ಮತ್ತು ಯಾವನ ಅಂತಃಕರಣವು ಸರ್ವವ್ಯಾಪಕನಾದ ನನ್ನನ್ನು ಅಚ್ಛಾದನ ಮಾಡಿರುತ್ತದೋ, ॥ ೯೩ ॥ ಇಂಥ ಮಹಾತ್ಮರು ಭಗವದ್‌ಭಕ್ತಿಗೆ ಅನುಕೂಲ ಇರುವ ಸಾತ್ವೀಕ ಪ್ರಕೃತಿಯ ಭಾಗ್ಯವೇ ಆಗಿರುವರು. ಆ ಮಹಾತ್ಮರು ತಮ್ಮ ಕಣ್ಣಿಗೆ ಕಾಣುವ ಸರ್ವ ವಸ್ತುಗಳಲ್ಲಿ ನನ್ನ ಸ್ವರೂಪವೇ ಇರುವದೆಂದು ತಿಳಿದು, ॥ ೯೪ ॥ ಆ ಮೇಲೆ ಆ ಮಹಾತ್ಮರು ನನ್ನಲ್ಲಿ ನಿಸ್ಸೀಮವಾದ ಪ್ರೇಮವನ್ನಿಟ್ಟು ಭಜಿಸುತ್ತಾರೆ. ಆದರೆ

ಅವರ ಮನೋಧರ್ಮವು ದ್ವೈತ ಭಾವನೆಯ ಸ್ಪರ್ಶ ಸಹ ಮಾಡಿರುವದಿಲ್ಲ. ॥ ೯೫ ॥ ಅರ್ಜುನನೇ ! ಈ ಪ್ರಕಾರಾ ಮದ್ರೂಪವಾಗಿಯೂ ಅವರು ನನ್ನ ಸೇವೆಯನ್ನು ಮಾಡುತ್ತಾರೆ. ಆ ಸೇವೆಯ ಆಶ್ಚರ್ಯದ ಸಂಗತಿಯನ್ನು ಹೇಳುವದದೆ ಅದನ್ನು ಕೇಳು.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

**[ ಸತತಂ ಕೀರ್ತಯಂತ ಇತಿ ]** ತರೀ ಕೀರ್ತನಾಚೇನಿ ನಟನಾಚೇ । ನಾಶಿಲೇ ವ್ಯವಸಾಯ ಪ್ರಾಯಶ್ಚಿತ್ತಾಂಚೇ । ಜೇ ನಾವಮಚಿ ನಾಹೀ ಪಾಪಾಚೇ । ಐಸೇ ಕೇಲೇ ॥ ೯೭ ॥ ಯಮದಮಾ ಅವಕಳಾ ಆಣಿಲೀ । ತೀರ್ಥೇ ಠಾಯಾ ವರೂನಿ ಉಠವಿಲೀ । ಯಮ ಲೋಕೀಂಚೀ ಖುಂಟಿಲೀ । ರಾಹಾಟೀ ಆಘವೀ ॥ ೯೮ ॥ ಯಮ ಮ್ಹಣೇ ಕಾಯ ಯಮಾವೇ । ದಮ ಮ್ಹಣೇ ಕವಣಾತೇ ದಮಾವೇ । ತೀರ್ಥೇ ಮ್ಹಣತೀ ಕಾಯ ಖಾವೇ । ದೋಷ ಔಷಧಾಸಿ ನಾಹೀ ॥ ೯೯ ॥ ಐಸೇ ಮಾಝೇನಿ ನಾಮ ಘೋಷೇ । ನಾಹೀಂಚಿ ಕರಿತೀ ವಿಶ್ವಾಚೀ ದುಃಖೇ । ಅವಘೇ ಜಗಚಿ ಮಹಾ ಸುಖೇ । ದುಮದುಮಿತ ಭರಲೇ ॥ ೨೦೦ ॥ ತೆ ಪಹಾಂಟೆ ವೀಣ ಪಹಾವಿತ । ಅಮೃತೇವೀಣ ಜೀವವಿತ । ಯೋಗೇವೀಣ ದಾವಿತ ಕೈವಲ್ಯ ಡೋಳಾ ॥ ೧ ॥ ಪರೀ ರಾಯಾ ರಂಕಾ ಪಾಡ ಧರೂ । ನೇಣತೀ ಸಾನೇಯಾ ಥೋರಾ ಕಡಸಣೇ ಕರೂ । ಏಕಸರೇ ಆನಂದಾಚೇ ಆವಾರೂ । ಹೋತ ಜಗಾ ॥ ೨ ॥ ಕಹೀಂ ಏಕಾಧೇನಿ ವೈಕುಂಠಾ ಜಾವೇ । ತೇತಿಹೀ ವೈಕುಂಠಚಿ ಕೇಲೇ ಆಘವೇ । ಐಸೇ ನಾಮಘೋಷ ಗೌರವೇ । ಧವಳಲೇ ವಿಶ್ವ ॥ ೩ ॥ ತೇಜೇ ಸೂರ್ಯ ತೈಸೇ ಸೋಜ್ಜ್ವಳ । ಪರೀ ತೋಹೀ ಅಸ್ತವೇ ಹೇ ಕಿಡಾಳ । ಚಂದ್ರ ಸಂಪೂರ್ಣ ಏಖಾದೇ ವೇಳ ಹೇ ಸದಾ ಪುರತೇ ॥ ೪ ॥ ಮೇಘ ಉದಾರ ಪರೀ ವೋಸರೇ । ಮ್ಹಣವೂನಿ ಉಪಮೇಸಿ ನ ಪುರೇ । ಹೇ ನಿಃಶಂಕಪಣೇ ಸಪಾಖರೇ । ಪಂಚಾನನ ॥ ೫ ॥ ಜಯಾಚೇ ವಾಂಚೇ ಪುಢಾ ಭೋಜೇ । ಅಖಂಡ ನಾಮ ನಾಚತ ಅಸೇ ಮಾಝೇ । ಜೇ ಜನ್ಮ ಸಹಸ್ರೀ । ವೋಳಗಿಜೇ । ಏಕ ವೇಳಯಾನಯಾ ॥ ೬ ॥ ತೋ ಮೀ ವೈಕುಂಠೀ ನಸೇ । ವೇಳ ಏಕ ಭಾನು ಬಿಂಬೀಹೀ ನ ದಿಸೇ । ವರೀ ಯೋಗಿಯಾಂಚೀಹೀ ಮಾನಸೇ । ಉಮರಡೋನಿ ಜಾಯ ॥ ೭ ॥ ಪರೀ ತಯಾ ಪಾಶೀ ಪಾಂಡವಾ । ಮೀ ಹಾರಪಲಾ ಗಿವಸಾವಾ । ಜೇಥ ನಾಮಘೋಷ ಬರವಾ । ಕರಿತೀ ಮಾಝಾ ॥ ೮ ॥ ಕೈಸೇ ಮಾಝ್ಯಾ ಗುಣೀ ಧಾಲೇ । ದೇಶ ಕಾಳಾತೇ ವಿಸರಲೇ । ಕೀರ್ತನ ಸುಖೇ ಸುಖಾವಲೇ । ಆಪಣ ಪಾಂಚಿ ॥ ೯ ॥ ಕೃಷ್ಣ ವಿಷ್ಣು ಹರಿ ಗೋವಿಂದ । ಯಾ ನಾಮಾಚೇ ನಿಖಿಲ ಪ್ರಬಂಧ । ಮಾಜೀ ಆತ್ಮಚರ್ಚಾ ವಿಶದ । ಉದಂಡ ಗಾತೀ ॥ ೨೧೦ ॥ ಹೇ ಬಹು ಅಸೋ ಯಾ ಪರೀ । ಕೀರ್ತಿತ ಮಾತೇ ಅವಧಾರೀ । ಏಕ ವಿಚರತೀ ಚರಾಚರೀ । ಪಾಂಡುಕುಮರಾ ॥ ೧೧ ॥ ಮಗ ಆಣಿಕ ತೇ ಅರ್ಜುನಾ । ಸಾವಿಯಾ ಬಹುವಾ ಜತನಾ । ಪಂಚಪ್ರಾಣ ಮನಾ । ಪಾಢಾವು ಘೇವೂನೀ ॥ ೧೨ ॥ ಬಾಹೇರೀ ಯಮ ನಿಯಮಾಂಚೀ ಕಾಂಟೇ ಲಾವಿಲೀ । ಆಂತ ವಜ್ರಾಸನಾಚೀ ಪೌಳೀ ಪನ್ನಾಸಿಲೀ । ವರೀ ಪ್ರಾಣಾಯಾಮಾಚೀ ಮಾಂಡಿಲೀ । ವಾಹಾತೀ ಯಂತ್ರೇ ॥ ೧೩ ॥ ತೇಥ ಉಲ್ಹಾಟಶಕ್ತೀಚೇನಿ ಉಜಿವಡೇ । ಮನ ಪವನಾಚೇನಿ ಸುರವಾಡೇ । ಸತರಾವಿಯೇಚೇ ಪಾಣಿಯಾಡೇ । ಬಳಾವಿಲೇ ॥ ೧೪ ॥ ತೆವ್ಹಾ ಪ್ರತ್ಯಾಹಾರೇ ಖ್ಯಾತೀ ಕೇಲೀ । ವಿಕಾರಾಂಚೇ ಸಂಪಲೀ ಬೋಹಲೀ । ಇಂದ್ರಿಯೇ ಬಾಂಧೋನಿ ಆಣಿಲೀ । ಹೃದಯಾ ಆಂತ ॥ ೧೫ ॥ ತವ ಧಾರಣಾವಾರೂ ದಾಟಲೇ । ಮಹಾಭೂತಾತೇ ಏಕ ವಟಲೇ । ಮಗ ಚತುರಂಗ ಸೈನ್ಯ ನಿವಟಲೇ । ಸಂಕಲ್ಪಾಚೇ ॥ ೧೬ ॥

ತಯಾವರೀ ಜೈತ ರೇ ಜೈತ । ವ್ಹಣೋನಿ ಧ್ಯಾನಾಚೇ ನಿಶಾಣ ವಾಜತ । ದಿಸೇ ತನ್ಮಯಾಚೇ ಝುಳಕತ । ಏಕಛತ್ರ ॥ ೧೭ ॥ ಪಾಟೇ ಸಮಾಧಿಶ್ರಿಯೇಚಾ ಅಶೇಖಾ । ಆತ್ಮಾನುಭವ ರಾಜ್ಯ ಸುಖಾ । ಪಟ್ಟಾಭಿಷೇಕ ದೇಖಾ । ಸಮರಸೇ ಜಾಹಲಾ ॥ ೧೮ ॥ ಐಸೇ ಹೇ ಗಹನ । ಅರ್ಜುನಾ ಮಾಝೇ ಭಜನ । ಆತಾ ಐಕೇ ಸಾಂಗೇನ । ಜೇ ಕರಿತೀ ಏಕ ॥ ೧೯ ॥ ತರೀ ದೋನ್ಹೀ ಪಾಲವವೇರೀ । ಜೈಸಾ ಏಕ ತಂತೂ ಅಂಬರೀ । ತೈಸಾ ಮೀ ವಾಂಚೂನಿ ಚರಾಚರೀ । ಜಾಣ ತೀನಾ ॥ ೨೨೦ ॥ ಆದೀ ಬ್ರಹ್ಮಾ ಕರೂನೀ । ಶೇವಟೀ ಮಶಕ ಧರೂನೀ । ಮಾಜೇ ಸಮಸ್ತ ಹೇ ಜಾಣೋನಿ । ಸ್ವರೂಪ ಮಾಝೇ ॥ ೨೧ ॥ ಮಗ ವಾಡ ಧಾಕುಟೇ ನ ವ್ಹಣತೀ । ಸಜೀವ ನಿರ್ಜೀವ ನೇಣತೀ । ದೇಖಿಲಿಯೇ ವಸ್ತು ಉಜೂ ಉಂಟಿತೀ । ಮೀಚಿ ವ್ಹಣೋನಿ ॥ ೨೨ ॥ ಆಸಲೇ ಉತ್ತಮುತ್ತ ನಾರವೇ । ಪುಢೀಲ ಯೋಗ್ಯಾಯೋಗ ನೇಣವೇ । ಏಕಸರೇ ವ್ಯಕ್ತಿ ಮಾತ್ರ ಚೇನಿ ನಾವೇ । ನಮೂಂಚಿ ಆವಡೇ ॥ ೨೩ ॥ ಜೈಸೇ ಉಂಚೀ ಹೂನಿ ಉದಕ ಪಡಿಲೇ । ತೇ ತನವಟವರೀ ಯೇವೂ ಲಾಗಲೇ । ತೈಸೇ ನಮಿಜೇ ಭೂತ ಜಾತ ದೇಖಿಲೇ । ಐಸಾ ಸ್ವಭಾವಚಿ ತಯಾಂಚಾ ॥ ೨೪ ॥ ಕಾ ಫಳತಿಯಾ ತರೂಚೇ ಶಾಖಾ । ಸಹಜೇ ಭೂಮೀಸೀ ಉತರೇ ದೇಖಾ । ತೈಸೇ ಜೀವ ಮಾತ್ರ ಅಶೇಖಾ । ಖಾಲಾವತೀ ತೇ ॥ ೨೫ ॥ ಅಖಂಡ ಅಗರ್ವತಾ ಹೋವೂನಿ ಅಸತೀ । ತಯಾಂಚೀ ವಿನಯ ಹೇಚಿ ಸಂಪತ್ತಿ । ಜೇ ಜಯ ಜಯ ಮಂತ್ರೇ ಅರ್ಪಿತೀ । ಮಾಝ್ಯಾ ಠಾಯೀ ॥ ೨೬ ॥ ನಮಿತಾ ಮಾನಾಪಮಾನ ಗಳಾಲೇ । ವ್ಹಣೋನಿ ಅವಚಿತಾ ಮೀಚಿ ಜಾಹಾಲೇ । ಐಸೇ ನಿರಂತರ ಮಿಸಳಲೇ । ಉಪಾಸಿತೀ ॥ ೨೭ ॥ ಅರ್ಜುನಾ ಹೇ ಗುರುವೀ ಭಕ್ತೀ । ಸಾಂಗಿತಲೀ ತುಜ ಪ್ರತೀ । ಆತಾ ಜ್ಞಾನ ಯಜ್ಞೇ ಯಜಿತೀ । ತೇ ಭಕ್ತ ಆಇಕೇ ॥ ೨೮ ॥ ಪರೀ ಭಜನ ಕರಿತೀ ಹಾತವಟೇ । ತೂ ಜಾಣತ ಆಹಾಸಿ ಕಿರೀಟೇ । ಜೇ ಮಾಗಾ ಇಯಾ ಗೋಷ್ಟೀ । ಕೇಲಿಯಾ ಆವ್ಹೀ ॥ ೨೯ ॥ ತವ ಆಥಿ ಜೇ ಅರ್ಜುನ ವ್ಹಣೇ । ಹೇ ದೈವಿಕ್ರಿಯಾ ಪ್ರಸಾದಾಚೇ ಕರಣೇ । ತರೀ ಕಾಯ ಅಮೃತಾಚೇ ಆರೋಗಣೇ । ಪುರೇ ವ್ಹಣವೇಲ ॥ ೨೩೦ ॥ ಯಾ ಬೋಲಾ ಶ್ರೀ ಅನಂತೇ । ಲಾಗಟಾ ದೇಖಿಲೇ ತಯಾತೇ । ಶ್ರೀ ಸುಖಾವಲೇನಿಚಿತ್ತೇ । ಡೋಲತ ಅಸೇ ॥ ೨೩೧ ॥ ವ್ಹಣೇ ಭಲೇ ಕೇಲೇ ಪಾರ್ಥಾ । ಯೇರ್ಹವೀ ಹಾ ಅನವಸರ ಸರ್ವಥಾ । ಪರೀ ಬೋಲವಿತಸೆ ಆಸ್ಥಾ । ತುಝೀ ಮಾತೇ ॥ ೨೩೨ ॥ ತವ ಅರ್ಜುನ ವ್ಹಣೇ ಹೇಕಾಂಗೇ । ಚಕೋರೇವೀಣ ಚಾಂದಣೇಂಚಿ ನಾಹೀ । ಜಗಚಿ ನಿವವಿಜೇ ಹಾ ತಯಾಚ್ಯಾ ಠಾಯೀ । ಸ್ವಭಾವೋ ಕೀಜೇ ॥ ೨೩೩ ॥ ಯೇರೇ ಚಕೋರೇ ತಿಯೇ ಆಪುಲಿಯೇ ಚಾಡೇ । ಚಾಂಚೂ ಕರಿತೀ ಚಂದ್ರಾ ಕಡೇ । ತೇವಿ ಆವ್ಹೀ ವಿನವೂ ತೇ ಥೋಕಡೇ । ದೇವೋ ಕೃಪಾಸಿಂಧು ॥ ೨೩೪ ॥ ಜೇ ಮೇಘು ಆಪುಲಿಯೇ ಪ್ರೌಢೀ । ಜಗಾಚೀ ಆರ್ತೀ ದವಡೀ । ವಾಂಚೂನಿ ಚಾತಕಾಚೀ ತಾಹಾನ ಕೇವಢೀ । ತೋ ವರ್ಷಾವ ಪಾಹುನೀ ॥ ೨೩೫ ॥ ಪರೀ ಚುಳಾ ಏಕಾಚಿಯಾ ಚಾಡೇ । ಜೇವೀ ಗಂಗೇ ತೇಂಚಿ ಠಾಕಣೇ ಪಡೇ । ತೇವಿ ಆರ್ತ ಬಹು ಕಾ ಥೋಡೇ । ತರೀ ಸಾಂಗಾವೇ ದೇವೇ ॥ ೨೩೬ ॥ ತೇಥೇ ದೇವೇ ವ್ಹಣಿತಲೇ ರಾಹೇ । ಜೋ ಸಂತೋಷ ಆವ್ಹಾ ಜಾಹಾಲಾ ಆಹೇ । ತಯಾವರೀ ಸ್ತುತೀ ಸಾಹೇ । ಐಸೇ ಉರಲೇ ನಾಹೀ ॥ ೨೩೭ ॥ ಪೈ ಪರಿಸತು ಆಹಾಸಿ ನಿಕಿಯಾ ಪರೀ । ತೇಚಿ ವಕ್ತೃತ್ವಾ ವರ್ಹಾಡೀ ಕರೀ । ಐಸೇ ಪುರಸ್ಕರೋನಿ ಶ್ರೀಹರೀ । ಆವರೇಲೇ ಬೋಲೋ ॥ ೨೩೮ ॥

**ಅರ್ಥ—** ಆದರೆ ಅವರು ಕೀರ್ತನ ಭರದಲ್ಲಿ ಪ್ರೇಮದಿಂದ ಹಾಡಿ ಕುಣಿದು ಪ್ರಾಯಶ್ಚಿತ್ತದ ಸರ್ವ ವ್ಯಾಪಾರ ವನ್ನು ನಾಶಮಾಡಿದರು. ಮತ್ತು ಪರಮಾತ್ಮನ ನಾಮ ಸಂಕೀರ್ತನೆಯ ಯೋಗದಿಂದ ಹೆಸರಿಗೆ ಸಹ ಪಾಪವು

ಉಳಿಯದಂತೆ ಮಾಡಿರುತ್ತಾರೆ. ॥೯೭॥ ಯಮ ಅಂದರೆ ಮನೋನಿಗ್ರಹ, ಮತ್ತು ದಮ ಅಂದರೆ ಇಂದ್ರಿಯ ನಿಗ್ರಹ, ಇವುಗಳಿಗೆ ನಿಸ್ತೇಜವನ್ನುಂಟು ಮಾಡಿರುವರು. ಗಂಗಾ ಮುಂತಾದ ತೀರ್ಥರೂಪೀ ನದಿಗಳಿಗೆ ಪಾಪನಾಶ ಮಾಡುವಂಥ ಯಾವ ಶ್ರೇಷ್ಠಪದವು ದೊರಕಿತ್ತೋ, ಆ ಶ್ರೇಷ್ಠ ಪದದ ಮೇಲಿಂದ ತೀರ್ಥಗಳಿಗೆ ಪದಚ್ಯುತ ಮಾಡಿದರು. ಮತ್ತು ಪಾಪ ಮಾಡಿದ ಜನರು ಯಮಲೋಕದ ಹಾದಿ ಹಿಡಿಯುವಷ್ಟರಲ್ಲಿ ಶ್ರೀಹರಿಯ ನಾಮ ಸಂಕೀರ್ತನೆಯ ಶ್ರವಣ ಬಲದಿಂದ ಆ ಪಾಪಿಗಳ ಪಾಪವು ಇಲ್ಲದಂತೆ ಮಾಡಿದರು. ಪಾತಕಿ ಜನರು ( ಪವಿತ್ರರಾಗಿ ) ಯಮಲೋಕದ ಮಾರ್ಗವನ್ನು ಹಿಡಿಯದಂತಾದರು ಅದರಿಂದ ಯಮಲೋಕದ ಸರ್ವ ವ್ಯವಹಾರಗಳು ನಿಂತುಬಿಟ್ಟವು. ॥ ೧೯೮ ॥ ಯಮ ಸಾಧನ ಅನ್ನುತ್ತದೆ, ನಾನು ಯಾವ ಮನಸಿನ ನಿಗ್ರಹ ಮಾಡಬೇಕಾಗಿರುವದೋ, ಆ ಮನಸು ಕೀರ್ತನಾನಂದದಿಂದ ಆತ್ಮರೂಪವಾಗಿರುವದು. ದಮ ಸಾಧನವು ಅನ್ನುತ್ತದೆ, ನಾನು ಯಾವ ಇಂದ್ರಿಯಗಳ ನಿಗ್ರಹ ಮಾಡಬೇಕಾಗಿರುವದೋ, ಆ ಸರ್ವ ಇಂದ್ರಿಯಗಳು ಆತ್ಮರೂಪದಲ್ಲಿ ತಲ್ಲೀನವಾಗಿರುವವು. ಹೀಗೆ ಭಗವಂತನ ನಾಮ ಸಂಕೀರ್ತನೆಯ ಯೋಗದಿಂದ ಔಷಧಕ್ಕೆ ಸಹ ಪಾಪಗಳು ಉಳಿಯದಂತಾದಮೇಲೆ ನಾವು ಏನು ತಿಂದು ಜೀವಿಸಬೇಕೆಂದು ತೀರ್ಥಗಳು ಅನ್ನುತ್ತಿದ್ದವು. ॥ ೧೯೯ ॥ ಈ ಪ್ರಕಾರಾ ನನ್ನ ನಾಮ ಸಂಕೀರ್ತನೆಯ ಜಯಘೋಷದಿಂದ ವಿಶ್ವದ ದುಃಖವನ್ನು ಇಲ್ಲದಂತೆ ಮಾಡಿ, ಸರ್ವ ಜಗತ್ತು ಶ್ರೀಹರಿಯ ನಾಮಘೋಷದಿಂದ ದುಮು ದುಮಿಸುವಂತೆ ಮಾಡಿದರು. ॥ ೨೦೦ ॥ ಆ ಸಾಧುಗಳು ಪ್ರಾಕೃತ ಸೂರ್ಯನ ಉದಯವಾಗದಲೇ ಜೀವರುಗಳಿಗೆ ಜ್ಞಾನ ಸೂರ್ಯನ ಪ್ರಕಾಶಮಾಡುತ್ತಾರೆ. ಮತ್ತು ಸ್ವರ್ಗದೊಳಗಿನ ಪ್ರಾಕೃತ ಅಮೃತದ ಹೊರ್ತು ನಾಮಾಮೃತದಿಂದ ಅವರು ಜೀವವನ್ನು ಬದುಕಿಸುತ್ತಾರೆ. ಮತ್ತು ಅಷ್ಟಾಂಗ ಯೋಗ ಸಾಧನದ ಹೊರ್ತು ಮೋಕ್ಷವನ್ನು ಕಣ್ಣಿಗೆ ಕಾಣುವಂತೆ ಮಾಡುತ್ತಾರೆ ( ಅನುಭವಕ್ಕೆ ತಂದುಕೊಡುತ್ತಾರೆ ) ॥ ೨೦೧ ॥ ಆದರೆ ಇವನು ಅರಸನು ಅವನು ದರಿದ್ರನು ಎಂಬ ಯೋಗ್ಯತಾ ಭೇದವನ್ನು ಮನಸಿನಲ್ಲಿ ತರುವದಿಲ್ಲ. ಇದು ಸಣ್ಣದು ಇದು ದೊಡ್ಡದು ಅನ್ನುವ ಭೇದವನ್ನೂ ತಿಳಿಯುವದಿಲ್ಲ. ಈ ರೀತಿಯಿಂದ ಅವರು ಸರ್ವ ಜಗತ್ತಿನ ಜನರಿಗೆ ಆನಂದದ ತೌರಮನೆಯಾಗಿರುತ್ತಾರೆ. ॥ ೨೦೨ ॥ ವೈಕುಂಠಕ್ಕೆ ಹೋಗುವವರು ಕ್ವಚಿತವಾಗಿಯೇ ಕಂಡುಬರುವರು ಆದರೆ ಆ ಮಹಾತ್ಮರು ಸರ್ವ ಜಗತ್ತನ್ನೇ ವೈಕುಂಠಮಾಡಿ ನನ್ನ ನಾಮ ಸಂಕೀರ್ತನದ ಸಾಮರ್ಥ್ಯದಿಂದ ಸರ್ವಪ್ರಾಣಿಗಳನ್ನು ಪವಿತ್ರಮಾಡಿ ಬಿಟ್ಟಿರುತ್ತಾರೆ. ॥ ೨೦೩ ॥ ಆ ಸಾಧುಗಳ ತೇಜವು ಸೂರ್ಯನಂತೆ ನಿರ್ಮಲವಾಗಿರುವದೆಂದು ಹೇಳಬೇಕೆ ? ಆ ಸೂರ್ಯನಲ್ಲಿ ಅಸ್ತವಾಗುವ ದೋಷವು ಕಂಡುಬರುತ್ತದೆ. ಈ ( ಮಹಾತ್ಮರ ಜ್ಞಾನೋದಯದ ಅಸ್ತವು ಎಂದಿಗೂ ಆಗುವದಿಲ್ಲ ) ಇವರಿಗೆ ಚಂದ್ರನ ಉಪಮೆ ಕೊಡಬೇಕೆ ! ಚಂದ್ರನು ಪೌರ್ಣಿಮೆಯ ದಿವಸವೇ ಮಾತ್ರ ಪೂರ್ಣನಾಗಿರುವನು ಆದರೆ ಈ ಮಹಾತ್ಮರು ಯಾವಾಗಲೂ ಸ್ವರೂಪ ಸ್ಥಿತಿಯಿಂದ ಪೂರ್ಣರಾಗಿರುತ್ತಾರೆ. ॥ ೨೦೪ ॥ ಮೇಘವು. ವೃಷ್ಟಿಗರೆಯುವದರಲ್ಲಿ ಉದಾರವಿರುವದೇನೋ ನಿಜ, ಆದರೆ ಅದು ಕಳಿಗಿ ಹೋಗುತ್ತದೆ. ಅದುದರಿಂದ ಆ ಮೇಘವು ( ಪರಮಾತ್ಮನ ನಾಮಬೋಧದ ಸದೈವ ವೃಷ್ಟಿಗರೆಯುವ ಈ ಸಾಧುಗಳಿಗೆ ) ಉಪಮಾ ಕೊಡಲಿಕ್ಕೆ ಪೂರ್ಣವಾಗಲಾರದು. ಈ ಮಹಾತ್ಮ ಸಾಧುಗಳು ನಿಸ್ಸಂಶಯವಾಗಿ ಕೃಪಾಯುಕ್ತ ಸಿಂಹಾಸನೋಪಾಧಿಯಲ್ಲಿರುವರು. ॥ ೨೦೫ ॥ ಯಾವ ನನ್ನ ನಾಮವು ಮುಖದಿಂದ ಒಂದಾವರ್ತಿ ಉಚ್ಚಾರವಾಗಬೇಕಾದರೆ, ಸಹಸ್ರ ಜನ್ಮಗಳವರೆಗೆ ನನ್ನ ಸೇವೆ ಮಾಡಬೇಕಾಗುವದೋ, ಆ ನನ್ನ ನಾಮವು ಯಾವನ ವಾಣಿಯಲ್ಲಿ ನಿಶ್ಚೀಮ ಪ್ರೇಮದಿಂದ ಸತತ ಕುಣಿಯುತ್ತಿರುತ್ತದೆ. ॥ ೨೦೬ ॥ ( ಆ ನಾಮದ ಮಹಿಮೆಯು ಹೀಗೆ ಇರುತ್ತದೆ ) ನಾನು ವೈಕುಂಠದಲ್ಲಿರುವದಿಲ್ಲ ಸೂರ್ಯ ಬಿಂಬದಲ್ಲಿಯೂ ಇರುವದಿಲ್ಲ. ನಾನು ಒಂದುವೇಳೆ ಯೋಗಿಗಳ ಮನಸ್ಸನ್ನು ಸಹಾ ಉಲ್ಲಂಘನಮಾಡಿ ಹೋಗುತ್ತೇನೆ. ॥ ೨೦೭ ॥ ಆದರೆ ಪಾಂಡವನೇ! ಈ ರೀತಿಯಿಂದ ನಾನು ಎಲ್ಲಿಯೂ ಸಿಗುವದಿಲ್ಲ. ಆ ಕಾಲದಲ್ಲಿ ನನ್ನನ್ನು ಕಳಕೊಂಡಿದ್ದಾದರೆ ಭಕ್ತರು ನನ್ನ ನಾಮ ಸಂಕೀರ್ತನೆಯ ಜಯಘೋಷವನ್ನು ಮಾಡುವ ಸ್ಥಳದಲ್ಲಿ ನಾನು ನಿಶ್ಚಯವಾಗಿ ಅವರ ಹತ್ತಿರವೇ ಸುತ್ತುತ್ತಿರುತ್ತೇನೆ. ಅಲ್ಲಿಯೇ ನನ್ನ ಶೋಧಮಾಡು. ॥ ೨೦೮ ॥ ಆ ಮಹಾತ್ಮರು ನನ್ನ ಗುಣಾನುವಾದವನ್ನು ಹಾಡುವದರಲ್ಲಿಯೇ ತೃಪ್ತರಾಗಿ, ದೇಶಕಾಲವನ್ನು ಮರೆತು ನನ್ನ ನಾಮ ಸಂಕೀರ್ತನೆಯ ಯೋಗದಿಂದ ತಮ್ಮಲ್ಲಿಯೇ ತಾವು ಸುಖಿಗಳಾಗಿರುತ್ತಾರೆ. ॥ ೨೦೯ ॥

ಕೃಷ್ಣ, ವಿಷ್ಣು, ಹರಿ,, ಗೋವಿಂದ ಈ ಪವಿತ್ರನಾಮದ ಹಾಡುಗಳನ್ನು ಹಾಡುತ್ತ ಮಧ್ಯ ಮಧ್ಯದಲ್ಲಿ ಶುದ್ಧ ಆತ್ಮ ಚರ್ಚೆಯನ್ನು ವಿಸ್ತೃತವಾಗಿ ಮಾಡುತ್ತಾರೆ. ॥ ೧೦ ॥ ಇವನ್ನು ಬಹಳ ವರ್ಣನ ಮಾಡುವದು ಹಾಗೇ ಇರಲಿ ಪಂಡು ನಂದನನೇ ! ಈ ಪ್ರಕಾರಾ ಇನ್ನೂ ಅನೇಕ ಪ್ರಕಾರದಿಂದ ನನ್ನ ಗುಣಾನುವಾದವನ್ನು ವರ್ಣನಮಾಡುತ್ತ ಅವರು ಚರಾಚರಾತ್ಮಕ ಪೃಥ್ವಿಯಲ್ಲಿ ತಿರುಗುತ್ತಿರುತ್ತಾರೆ. ॥ ೨೧೧ ॥ ಆ ಮೇಲೆ ಅರ್ಜುನನೇ ! ಎರಡನೇ ಎಷ್ಟೋ ಜನರು ಪಂಚಪ್ರಾಣ ಮತ್ತು ಮನಸು ಸಹವಾಗಿ ಜಯಿಸಿ ಜಯಪತ್ರವನ್ನು ದೊರಕಿಸುತ್ತಾರೆ. ॥ ೨೧೨ ॥ ಇನ್ನುಮೇಲೆ ಶ್ರೀ ಜ್ಞಾನೇಶ್ವರ ಮಹಾರಾಜರು ಕ್ರಮದಿಂದ ಅಷ್ಟಾಂಗ-ಯೋಗದ ವರ್ಣನವನ್ನು ಮಾಡುತ್ತಾರೆ. ಹೊರಗಿನಿಂದ ಯಮನಿಯಮದ ಬೇಲಿಯನ್ನು ಹಚ್ಚಿ ಒಳಗೆ ಮೂಲ ಬಂಧದ ವಜ್ರಾಸನದ ಕೋಟೆಯನ್ನು ಸಿದ್ಧಪಡಿಸಿ ಆದರಮೇಲೆ ಪ್ರಾಣಾಯಾಮ ರೂಪ ತೋಫು ಇಡುತ್ತಾರೆ॰ ॥ ೧೩ ॥ ಆ ಮೇಲೆ ಕುಂಡಲಿನಿಯು ಊರ್ಧ್ವ ಮುಖವಾಗಿ ಅದರ ಪ್ರಕಾಶದಿಂದ ಮನಸು ಮತ್ತು ಪ್ರಾಣ ಇವುಗಳ ಅನುಕೂಲತೆಯಿಂದ ಚಂದ್ರಾಮೃತದ ಹದಿನೇಳನೆಯ ಕಲೆಯ ಕೆರೆಯನ್ನು ಸ್ವಾಧೀನ ಮಾಡಿಕೊಳ್ಳುತ್ತಾರೆ. ॥ ೧೪ ॥ ಆ ವೇಳೆಯಲ್ಲಿ ಪ್ರತ್ಯಾಹಾರವು ಮಹಾಪರಾಕ್ರಮದಿಂದ ಕಾಮ ಕ್ರೋಧ ಮುಂತಾದ ವಿಕಾರಗಳ ಪರಿವಾರವನ್ನು ಸಮೂಲವಾಗಿ ಹೊಡೆದೋಡಿಸಿ, ಇಂದ್ರಿಯಗಳನ್ನು ಬಂಧಿಸಿ ಹೃದಯದಲ್ಲಿ ನಿಲ್ಲಿಸುತ್ತದೆ. ॥ ೧೫ ॥ ಇಷ್ಟರಲ್ಲಿ ಧಾರಣಾರೂಪಿ ಕುದುರೆಯ ಸವಾರನು ಯುದ್ಧಮಾಡಿ ಪಂಚ ಮಹಾಭೂತದ ಐಕ್ಯಮಾಡುತ್ತಾನೆ॰ ಮತ್ತು ಸಂಕಲ್ಪದ ಚತುರಂಗ ಸೈನ್ಯವು ಮನ, ಬುದ್ಧಿ, ಚಿತ್ತ, ಅಹಂಕಾರ ಇವುಗಳನ್ನು ಇಲ್ಲದಂತೆ ಮಾಡುತ್ತಾನೆ. ॥ ೧೬ ॥ ಆ ಮೇಲೆ ಜಯ ದೊರಕಿತು ಜಯ ದೊರಕಿತೆಂದು ಅನ್ನುತ್ತ ಧ್ಯಾನದ ನಿಶಾನಿಯು ಶೋಭಿಸುತ್ತದೆ. ಮತ್ತು ಐಕ್ಯರೂಪದ ಛತ್ರವು ಹೊಳೆಯುತ್ತದೆ. ॥ ೧೭ ॥ ಹಿಂದಿನಿಂದ ಸಮಾಧಿರೂಪ ಲಕ್ಷ್ಮೀಯ ಅಖಂಡ ಆತ್ಮಾನುಭವರೂಪಿ ರಾಜ್ಯಸುಖದ ಬ್ರಹ್ಮರೂಪ ಐಕ್ಯತೆಯಿಂದ ಪಟ್ಟಾಭಿಷೇಕ ವಾಗುತ್ತದೆ. ॥ ೧೮ ॥ ಅರ್ಜುನನೇ ! ಈ ಪ್ರಕಾರ ( ಅಷ್ಟಾಂಗ ಯೋಗದ ದ್ವಾರದಿಂದ ) ಮಾಡುವ ನನ್ನ ಬಜನೆಯು ಬಹಳೇ ಕಷ್ಟವದೆ ಇನ್ನು ಎಷ್ಟೋ ಜನರು (ನಮನರೂಪ ಭಕ್ತಿಯಿಂದ) ಭಜಿಸುತ್ತಾರೆ. ಅದನ್ನು ಹೇಳುವೆನು ಕೇಳು. ॥೨೧೯॥ ಆವರೆ ವಸ್ತ್ರದಲ್ಲಿ ಒಂದು ಪದರಿನಿಂದ ಎರಡನೆಯ ಪದರಿನವರೆಗೆ ಯಾವ ಕಡೆಯಿಂದ ನೋಡಿದರೂ ಹೇಗೆನೂಲೇ ತುಂಬಿಕೊಂಡಿರುತ್ತದೋ, ಅದರಂತೆ ಸಜೀವ ಮತ್ತು ನಿರ್ಜೀವ ಪದಾರ್ಥಗಳಲ್ಲಿ ನನ್ನ ಹೊರ್ತು ಎರಡನೇ ಯಾವ ವಸ್ತುವು ಅವರಿಗೆ ಕಂಡುಬರುವದಿಲ್ಲ. ॥ ೨೨೦ ॥ ಸರ್ವರಲ್ಲಿ ಶ್ರೇಷ್ಠನಾದ ಬ್ರಹ್ಮದೇವನಿಂದ ಅತಿಶಯ ಕ್ಷುದ್ರವಾದ ಕೀಟಾದಿಪ್ರಾಣಿಗಳಲ್ಲಿ ನನ್ನ ಸ್ವರೂಪವೇ ಅದೆ. ಎಂದು ( ಆ ಮಹಾತ್ಮರು ) ತಿಳಿಯುತ್ತಾರೆ.॥ ೨೨೧ ॥ ಆ ಮೇಲೇ ಸಣದು, ದೊಡ್ಡದು, ಸಜೀವ, ಮತ್ತು ನಿರ್ಜೀವ ಎಂಬ ಭೇದವನ್ನು ಮಾಡದೇ ಯಾವ ಯಾವವಸ್ತು ದೃಷ್ಟಿಗೆ ಬಿದ್ದೀತು ಅದು ನನ್ನ ಸ್ವರೂಪವೇ ಇರುತ್ತದೆಂಬ ಭಾವನೆಯಿಂದ ಜೀವ ಮಾತ್ರಗಳಿಗೆ ಸಾಷ್ಟಾಂಗನಮಸ್ಕಾರ ಮಾಡುತ್ತಾರೆ. ॥ ೨೨ ॥ ತನ್ನ ದೊಡ್ಡಿಸ್ತನವನ್ನೂ ಮಹತ್ವವನ್ನೂ ಮರೆತು ಮುಂದೆ ಬರುವ ವಸ್ತು ಯೋಗ್ಯವದೆಯೋ ಅಥವಾ ಅಯೋಗ್ಯವದೆಯೋ, ಎಂಬದನ್ನು ತಿಳಿಯದೇ ಸರ್ವ ವಸ್ತುಗಳಿಗೆ ಸಮಾನ ದೃಷ್ಟಿಯಿಂದ ನಮಸ್ಕಾರ ಮಾಡುವದು ಇದೇಅವರಿಗೆ ಪ್ರೀಯವಾಗಿರುತ್ತದೆ.॥೨೩॥ ಯಾವಪ್ರಕಾರಾ ಬಹಳೇ ಎತ್ತರ ಮೇಲಿಂದ ಬೀಳುವ ನೀರು ಒಂದೇಕಾಲಕ್ಕೆ ಸಹಜವೇ ತಳಕ್ಕೆ ಬೀಳುವಂತೆ ಯಾವ ಪ್ರಾಣಿಗಳು ದೃಷ್ಟಿಗೆ ಬೀಳುವವು ಅವರಿಗೆ ನಮಸ್ಕಾರಮಾಡುವದು ಇದು ಅವರ ಸ್ವಭಾವವೇ ಆಗಿರುತ್ತದೆ. ॥ ೨೪ ॥ ಇಲ್ಲವೇ ಫಲಗಳಿಂದ ಪರಿಪೂರ್ಣವಾಗಿ ತುಂಬಿದ ಗಿಡದ ಟೊಂಗಿಗಳು ಹ್ಯಾಗೆ ತನ್ನಿಂದ ತಾನೇ ಬಾಗಿ ಭೂಮಿಗೆ ಹತ್ತಿರುವವೋ, ಅದೇ ಪ್ರಕಾರಾ ಅವರು ಪ್ರಾಣಿಮಾತ್ರಗಳನ್ನುಕಂಡರೆ ಶಿರ ಬಾಗಿ ನಮಸ್ಕಾರ ಹಾಕುತ್ತಾರೆ. ॥ ೨೫ ॥ ಅವರು ಯಾವಾಗಲೂ ಗರ್ವರಹಿತರಾಗಿರುತ್ತಾರೆ. ಮತ್ತು ನಮ್ರತೆಯು ಇದೇ ಅವರ ಸಂಪತ್ತು ಅದೆ. ಆ ಸಂಪತ್ತನ್ನು ಜಯ ಜಯ ಮಂತ್ರದಿಂದ ಅವರು ನಂನಲ್ಲಿಯೇ ಸಮರ್ಪಣೆ ಮಾಡು ತ್ತಾರೆ. ॥ ೨೬ ॥ ನಮ್ರ ಆಗುತ್ತ ಆಗುತ್ತ ಮಾನಾಪಮಾನದ ವಿಚಾರವು ಅವರಲ್ಲಿ ಉಳಿಯುವದಿಲ್ಲ. ಆದುದರಿಂದ ಅವರು ನಂನವರೇ (ಮದ್ರೂಪ) ಆಗಿರುತ್ತಾರೆ, ಈ ರೀತಿಯಿಂದ ಮದ್ರೂಪವಾಗಿಯೂ ಅವರು ನಿರಂತರ (ನಂನ) ಸೇವಕರಾಗಿ ನಂನ ಉಪಾಸನೆಯನ್ನೇ ಮಾಡುತ್ತಾರೆ. ॥ ೨೭ ॥ ಅರ್ಜುನನೇ ! ಈ ರೀತಿಯಿಂದ ಈ ಶ್ರೇಷ್ಠಭಕ್ತಿ

ಯನ್ನು ನಿನಗೆ ಹೇಳಿದೆನು. ಇನ್ನು ಮೇಲೆ ಯಾರು ನನ್ನಲ್ಲಿ ಜ್ಞಾನಯಜ್ಞದಿಂದ ಭಕ್ತಿಮಾಡುತ್ತಾರೆ ಅವರು ಯಾವ ಭಕ್ತರೆಂಬದನ್ನು ಹೇಳುವೆನು ಕೇಳು. ॥ ೨೨೮ ॥ ಆದರೆ ಎಲೋ ಕಿರೀಟಿ ! ಅವರು ಭಜನಮಾಡುವ ಹತವಟಿಯು ನಿನಗೆ ಗೊತ್ತೇ ಅದೆ. ಆ ವಿಷಯವಾಗಿ ನಾನು ಪೂರ್ವದಲ್ಲಿ ( ಅಧ್ಯಾಯ ೬ ಶ್ಲೋಕ ೩೩ ದಿಂದ ೪೨ ನೋಡು ) ವರ್ಣನ ಮಾಡಿರುತ್ತೇನೆ. ॥೨೯॥ ಆಗ್ಗೆ ಅರ್ಜುನನು ಅನ್ನುತ್ತಾನೆ. ದೇವಾ ಅಹುದು ಇದು ದೇವರ ಪ್ರಸಾದದ ಅನುಗ್ರಹವೇ ಅದೆ. ಅಮೃತದ ಭೋಜನವು ದೊರೆತರೆ ಅದು ಸಾಕಾಗಿರುವದು ಎಂದು ಅನಿಸುವದೇನು ? ॥ ೩೦ ॥ ಆಗ್ಗೆ ಅರ್ಜುನನ ಈ ಸಂಭಾಷಣವನ್ನು ಕೇಳಿ ಅವನಲ್ಲಿ ಶ್ರವಣದ ವಿಷಯದಲ್ಲಿರುವ ಆತುರತೆಯನ್ನು ನೋಡಿ, ಭಗವಾನ ಶ್ರೀಕೃಷ್ಣನು ಅಂತಃಕರಣದಲ್ಲಿ ಸಂತೋಷಉಳ್ಳವನಾಗಿ ತಲೆದೂಗಿದನು. ॥ ೩೧ ॥ ಶ್ರೀಕೃಷ್ಣನು ಅನ್ನುತ್ತಾನೆ. ಪಾರ್ಥಾ ! ಭಲೆ ಶಾಬಾಸ ಆದರೆ ಹೇಳಿದಮಾತು ಪುನ್ಹಾ ಹೇಳುವದು ಈ ಯುದ್ಧಪ್ರಸಂಗದಲ್ಲಿ ಅನುಚಿತವಾದದ್ದಿರುತ್ತದೆ. ಆದರೆ ನಿಂನಲ್ಲಿ ಕೇಳುವ ವಿಷಯದಲ್ಲಿ ಅಂಥ ಉತ್ಕಟವಾದ ಇಚ್ಛೆಯನ್ನು ನೋಡಿ, ನನಗೆ ಹೇಳುದ ಅವಶ್ಯವದೆ. ॥ ೩೨ ॥ ಆಗ್ಗೆ ಅರ್ಜುನನು ಅನ್ನುತ್ತಾನೆ, ಇದೇನು ಚಕೋರಪಕ್ಷಿಯು ಹೊರ್ತು ಚಂದ್ರಮನ ಬೆಳದಿಂಗಳದ ಉಪಯೋಗ ವಿಲ್ಲೇನು ? ಜಗತ್ತಿಕ್ಕೆ ಶಾಂತಮಾಡುವದು ಇದು ( ಆ ಚಂದ್ರಮನ ) ಸ್ವಭಾವವೇ ಇರುತ್ತದೆ. ॥ ೩೩ ॥ ಚಕೋರ ಪಕ್ಷಿಯು ಮಾತ್ರ ತನ್ನ ಸ್ವಾರ್ಥದ ದೆಶೆಯಿಂದ ಯಾವ ಪ್ರಕಾರಾ ಚಂದ್ರನ ಕಡೆಗೆ ಮೋರೆಮಾಡಿ ತನ್ನ ಬಾಯಿಯನ್ನು ಮೇಲೆ ತೆರೆಯುವಂತೆ ನಾವು (ಚಾತಕ ನಿಷ್ಟೆಯಿಂದ ) ವಿನಂತಿಮಾಡುವದು ಎಷ್ಟು ಅಲ್ಪವಿರುವದು ? ಆದರೆ ದೇವಾ ! ತಾವು ಜಗತ್ತಿದ ಕಲ್ಯಾಣಮಾಡುವದರಲ್ಲಿ ಕೃಪಾಸಿಂಧುವಾಗಿರುವಿರಿ. ॥ ೩೪ ॥ ಮಹಾರಾಜರೇ ! ಮೇಘವು ತನ್ನ ಉದಾರತನದಿಂದ ಮಳೆಗರೆದು ಸಂಪೂರ್ಣ ಜಗತ್ತಿದ ಕಷ್ಟವನ್ನು ಹೋಗಲಾಡಿಸುತ್ತದೆ. ಆ ಮಳೆಯು ಸುರಿಯುವ ಮಾನದಿಂದ ಚಾತಕಪಕ್ಷಿಯ ನೀರಡಿಕೆಯು ಎಷ್ಟಿರುವದು ? (ಅಲ್ಪವೇ) ॥ ೩೫ ॥ ಆದರೆ ಒಂದು ಗುಟುಕು ನೀರಿನ ಇಚ್ಛೆಯಾದರೂ ಯಾವ ಪ್ರಕಾರಾ ಗಂಗೆಗೆ ಹೋಗಬೇಕಾಗುತ್ತದೋ, ಅದರಂತೆ ನಮ್ಮ ಇಚ್ಛೆಯು ಬಹಳೇ ಇರಲಿ ಅಥವಾ ಅಲ್ಪವೇ ಇರಲಿ ಅದನ್ನು ದೇವಾ, ನೀವೇ ಪೂರ್ಣಮಾಡಲಿಕ್ಕೇಬೇಕು. ॥ ೩೬ ॥ ಆ ವೇಳೆಯಲ್ಲಿ ಶ್ರೀಕೃಷ್ಣನು ಅನ್ನುತ್ತಾನೆ. ಇದಂತೂ ಇರಲಿ. ನಿನ್ನ ಅಪೇಕ್ಷೆಯನ್ನು ನೋಡಿ ಯಾವ ಆನಂದವು ನಮಗೆ ಆಗಿಸುತ್ತದೆ ಅದಕ್ಕೆ ನಿಂನ ಸ್ತುತಿಯ ಅವಶ್ಯಕತೆಯು ಉಳದಿರುವದಿಲ್ಲ. ॥ ೩೭ ॥ ನೀನು ಉತ್ತಮ ರೀತಿಯಿಂದ ಲಕ್ಷ್ಯವಿಟ್ಟು ಕೇಳುತ್ತಿರುವಿ. ಆ ನಿನ್ನ ಪ್ರೇಮವೇ ನನ್ನನ್ನು ಮಾತಾಡಲಿಕ್ಕೆ ಹಚ್ಚುತ್ತಿರುವದೆಂದು ಹೇಳಿ ಅರ್ಜುನನಿಗೆ ಮಾನಕೊಟ್ಟು ಸಂಭಾಷಣ ಮಾಡಲು ಪ್ರಾರಂಭಮಾಡಿದನು. ॥ ೩೮ ॥

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥ ೧೫ ॥**

**[ಜ್ಞಾನಯಜ್ಞೇನ ಚಾಪನ್ಯೇಯಜಂತ ಇತಿ]** ತರೀ ಜ್ಞಾನಯಜ್ಞ ತೋ ಏವಂರೂಪ । ಜೇಥ ಆದಿ ಸಂಕಲ್ಪ ಹಾ ಯೂಪ । ಮಹಾಭೂತೇ ಮಂಡಪ । ಭೇದ ತೋ ಪಶೂ ॥ ೩೯ ॥ ಮಗ ಪಾಂಚಾಂಚೇ ಜೇ ವಿಶೇಷ ಗುಣ । ಅಥವಾ ಇಂದ್ರಿಯೇ ಆಣಿ ಪ್ರಾಣ । ಹೇಚಿ ಯಜ್ಞೋಪಚಾರ ಭರಣ । ಅಜ್ಞಾನ ಘೃತ ॥ ೨೪೦ ॥ ತೇಥ ಮನಬುದ್ಧೀಚಿಯಾ ಕುಂಡಾ– । ಆಂತ ಜ್ಞಾನಾಗ್ನಿ ಧಡಪುಡಾ । ಸಾಮ್ಯ ತೇಚಿ ಸುಹಾಡಾ । ವೇದಿಕಾ ಜಾಣೇ ॥೪೧॥ ಸ ವಿವೇಕಮತಿ ಪಾಟವ । ತೇಚಿ ಮಂತ್ರ ವಿದ್ಯಾಗೌರವ । ಶಾಂತಿ ಸ್ರುಕ್‌ಸ್ರುವ । ಜೀವ ಯಜ್ವಾ ॥ ೪೨ ॥ ತೋ ಪ್ರತೀತೀಚೇನಿ ಪಾತ್ರೇ । ವಿವೇಕ ಮಹಾ ಮಂತ್ರೇ । ಜ್ಞಾನಾಗ್ನಿ ಹೋತ್ರೇ । ಭೇದ ನಾಶೀ ॥ ೪೩ ॥ ತೇಥ ಅಜ್ಞಾನ ಸರೋನಿ ಜಾಯೇ । ಆಣಿ ಯಜಿತಾ ಯಜನ ಹೇ ಠಾಯೇ । ಆತ್ಮಸಮರಸೀನ್ಹಾಯೇ । ಅವಭೃಥೀ ಜೆವ್ಹಾ ॥ ೪೪ ॥ ತೆವ್ಹಾ ಭೂತೇ ವಿಷಯ ಕರಣೇ । ಹೇ ವೇಗಳಾಲೇ ಕಾಹೀ ನ ಮ್ಹಣೇ । ಆಘವಿ ಏಕಚಿ ಐಸೇ ಜಾಣೇ । ಆತ್ಮಬುದ್ಧಿ ॥ ೪೫ ॥ ಜೈಸಾ ಚೇಇಲಾ ತೋ ಅರ್ಜುನಾ । ಮ್ಹಣೇ ಸ್ವಪ್ನೀಂಚೀ ಹೇ ವಿಚಿತ್ರ ಸೇನಾ । ಮೀಚಿ

ಜಾಹಾಲೋ ಹೋತೋನಾ । ನಿದ್ರಾನಶೇ ॥ ೪೬ ॥ ಆತಾ ಸೇನಾತೇ ಸೇನಾ ನವ್ಹೇ । ಹೇ ಮೀಚ ಏಕ
ಆಘವೇ । ಐಸೇ ಏಕತ್ವೇಂ ಮಾನವೇ । ವಿಶ್ವ ತಯಾ ॥ ೪೭ ॥ ಮಗ ತೋ ಜೀವ ಹೇ ಭಾಷ ಸರೇ ।
ಆಬ್ರಹ್ಮ ಪರಮಾತ್ಮ ಬೋಧೇ ಭರೇ । ಐಸೇ ಭಜತೀ ಜ್ಞಾನಾಧ್ವರೇ । ಏಕತ್ವೇಯೇಣೇ ॥ ೪೮ ॥
ಅಥವಾ ಅನಾದಿ ಹೇ ಅನೇಕ । ಜೇ ಆನಾಸಾರಿಖೇಂ ಏಕೋ ಏಕ । ಆಣಿ ನಾಮರೂಪಾದಿಕ । ತೇಹೀ
ವಿಷಮ ॥ ೪೯ ॥ ಮ್ಹಣೋನಿ ವಿಶ್ವ ಭಿನ್ನ ಭಿನ್ನ । ಪರೀ ನ ಭೇದೇ ತಯಾಚೇಂ ಜ್ಞಾನ । ಜೈಸೇ ಅವಯವ
ತರೀ ಆನ ಆನ । ಪರೀ ಏಕೇಚಿ ದೇಹೀಂಚೇ ॥ ೨೫೦ ॥ ಕಾ ಶಾಖಾ ಸಾನಿಯಾ ಥೋರಾ । ಪರೀ
ಆಹಾತಿ ಏಕಾಚಿ ತರುವರಾ । ಬಹು ರಶ್ಮಿ ಪರೀ ದಿನಕರಾ । ಏಕಾಚೇ ಜೇವೀ ॥ ೫೧ ॥ ತೇವಿ ನಾನಾವಿಧಾ
ವ್ಯಕ್ತೀ । ಆನಾನೇ ನಾಮೇ ಅನಾನೀ ವೃತ್ತೀ । ಐಸೇ ಜಾಣತೀ ಭೇದಲಾ ಭೂತೀ । ಅಭೇದಾ ಮಾತೇ
॥ ೫೨ ॥ ಯೇಣೇ ವೇಗಳಾಲೇಪಣೇ ಪಾಂಡವಾ । ಕರಿತೀ ಜ್ಞಾನಯಜ್ಞ ಬರವಾ । ಜೇ ನ ಭೇದತೀ
ಜಾಣಿವಾ । ಜಾಣತೇ ಮ್ಹಣವುನಿ ॥ ೫೩ ॥ ನಾ ತರೀ ಜೇಥವಾ ಜಿಯೇ ಠಾಯಿ । ದೇಖತೀ ಕಾ ಜೇ ಜೇ
ಕಾಹೀ । ತೇ ಮೀ ವಾಂಚೂನಿ ನಾಹೀ । ಐಸಾಚಿ ಬೋಧ ॥ ೫೪ ॥ ಪಾಹೆ ಪಾ ಬುಡ ಬುಡಾ ಜೇವುತಾ
ಜಾಯೇ । ತೇವುತೇ ಜಳ ತಯಾ ಏಕ ಆಹೇ । ಮಗ ವಿರೇ ಅಥವಾ ರಾಹೇ । ತರ್ಹೀ ಜಳಾಚೀ ಮಾಜೇ
॥ ೫೫ ॥ ಕಾ ಪವನೇ ಪರಮಾಣು ಉಚಲಲೇ । ತೇ ಪೃಥ್ವೀಪಣಾ ವೇಗಳೇ ನಾಹೀ ಗೇಲೇ । ಆಣಿ
ಮಾಘಾರೇ ಜರೀ ಪಡಲೇ । ತರೀ ಪೃಥ್ವೀಚಿವರುತೇ ॥ ೫೬ ॥ ತೈಸೇ ಭಲತೇಥ ಭಲತೇಣೇ ಭಾವೇ ।
ಭಲತೇಹೀ ಹೋ ಅಥವಾ ನೋಹಾವೇ । ಪರೀ ತೇ ಮೀ ಐಸೇ ಆಘವೇ । ಹೋವೂನಿ ಠೇಲೆ ॥ ೫೭ ॥
ಅಗಾ ಹೇ ಜೇವ್ಹಡೀ ಮಾಝೀ ವ್ಯಾಪ್ತೀ । ತೇವ್ಹಡೀಚಿ ತಯಾಂಚೀ ಪ್ರತೀತೀ । ತೈಸೇ ಬಹುಧಾಕಾರೀ
ವರ್ತತೀ । ಮೀಚಿ ಹೋವುನೀ ॥ ೫೮ ॥ ಹೇ ಭಾನುಬಿಂಬ ಆವಡೇ ತಯಾ । ಸಂಮುಖ ಜೈಸೇ
ಧನಂಜಯಾ । ತೈಸೇ ತೇ ವಿಶ್ವಾಇಯಾ । ಸಮೋರ ಸದಾ ॥ ೫೯ ॥ ಅಗಾ ತಯಾಂಚಿಯಾ ಜ್ಞಾನಾ ।
ಪಾಠೀ ಪೋಟ ನಾಹೀ ಅರ್ಜುನಾ । ವಾಯು ಜೈಸಾ ಗಗನಾ । ಸರ್ವಾಂಗೀ ಅಸೇ ॥ ೨೬೦ ॥ ತೈಸಾ ಮೀ
ಜೇ ತುಲಾ ಆಘವಾ । ತೇಂಚಿ ತುಕ ತಯಾಂಚಿಯಾ ಸದ್ಭಾವಾ । ತರೀ ನ ಕರಿತಾ ಪಾಂಡವಾ । ಭಜನ
ಜಾಹಾಲೇ ॥ ೬೧ ॥ ಯೇರ್ಹವೀ ತರೀ ಸಕಳ ಮೀಚಿ ಆಹೇ । ತರೀ ಕವಣೇ ಕೇ ಉಪಾಸಿಲಾ ನೋಹೇ ।
ಏಥ ಏಕೇ ಜಾಣಣೇ ವೀಣ ಠಾಯೇ । ಅಪ್ರಾಪ್ತೀಸೀ ॥ ೬೨ ॥ ಪರೀ ತೇ ಅಸೋ ಯೇಣೇ ಉಚಿತೇ ।
ಜ್ಞಾನಯಜ್ಞೇ ಯಜಿತ ಸಾಂತೇ । ಉಪಾಸಿತೀ ಮಾತೇ । ತೇ ಸಾಂಗಿತಲೇ ॥ ೬೩ ॥ ಅಖಂಡ ಸಕಳ ಹೇ
ಸಕಳಾ ಮುಖೀ । ಸಹಜ ಅರ್ಪತ ಅಸೇ ಮಜ ಏಕೀ । ಕೀ ನೇಣಣೇಯಾಸಾಠೀ ಮೂರ್ಖೀ । ನ
ಪವಿಜೇಚಿ ಮಾತೇ ॥ ೬೪ ॥

**ಅರ್ಥ—** ಜ್ಞಾನಯಜ್ಞದ ಲಕ್ಷಣವು ಯಾವದೆಂದರೆ ಆದಿಸಂಕಲ್ಪವು ಇದೇ ಯಜ್ಞಸ್ತಂಭವಾಗಿರುವದು. ಪಂಚಮಹಾಭೂತವು ಯಜ್ಞಮಂಟಪವು. ಜೀವೇಶ್ವರರ ಭಿನ್ನತ್ವವು ಇದೇ ಪಶುರೂಪವಾಗಿರುವದು. ॥ ೩೯ ॥ ಆ ಮೇಲೆ ಪಂಚಮಹಾಭೂತದ ಯಾವ ಶಬ್ದಸ್ಪರ್ಶಾದಿ ವಿಶೇಷಗುಣಗಳು ಅಥವಾ ಇಂದ್ರಿಯ ಮತ್ತು ಪ್ರಾಣ ಇವೇ ಯಜ್ಞದ ಸಾಹಿತ್ಯವು ಮತ್ತು ಬ್ರಹ್ಮವಿಷಯದ ಅಜ್ಞಾನವು ಘೃತವಾಗಿರುವದು. ॥ ೪೦ ॥ ಆ ಯಜ್ಞದಲ್ಲಿ ಮನ ಮತ್ತು ಬುದ್ಧಿ ಎರಡು ಕುಂಡಗಳಿದ್ದು ಈ ಎರಡು ಕುಂಡಗಳಲ್ಲಿ ಜ್ಞಾನರೂಪ ಅಗ್ನಿಯನ್ನು ಪ್ರದೀಪ್ತಮಾಡಬೇಕಾಗುತ್ತದೆ. ಎಲೋ ಪರಾಕ್ರಮಿಯಾದ ಅರ್ಜುನನೇ! ಸುಖದುಃಖ ಮುಂತಾದ ದ್ವಂದವಿಷಯದಲ್ಲಿ ಯಾವ ಚಿತ್ತದ ಸಮತಾ ಇದೇ ವೇದಿಕಾ ಅಂದರೆ ಆ ಯಜ್ಞಕುಂಡದ ಸುತ್ತಮುತ್ತಲೆ ಇರುವ ದರ್ಭದ ಪರೀಘವು ( ಅಥವಾ ಯಜ್ಞಕುಂಡದಲ್ಲಿಯ ಶುದ್ಧಮಾಡಿದ ಕಟ್ಟೆ ) ಯಿರುವದೆಂದು ತಿಳಿ. ॥ ೨೪೧ ॥ ಆತ್ಮಾನಾತ್ಮ ವಿಚಾರಮಾಡುವ ವಿಷಯದಲ್ಲಿ ಯಾವ ಬುದ್ಧಿಯ ಕುಶಲತೆಯು ಅದೆ ಮತ್ತು ಮಂತ್ರವಿದ್ಯದ ಶೋಭಾ ಅದೆ, ಶಾಂತಿ ಇದು ಸ್ರುಕ್ ಸ್ರುವಾ ಈ ಹೆಸರಿನ ಯಜ್ಞಪಾತ್ರೆ

ಗಳು ಇರುತ್ತವೆ. ಮತ್ತು ಜೀವನು ಯಜ್ಞಮಾಡುವವನಿರುತ್ತಾನೆ. ॥ ೨೪೨ ॥ ಆ ಯಜ್ಞಮಾಡುವ ಜೀವನು ಸ್ವರೂಪಾನುಭವರೂಪಿ ಪಾತ್ರದಿಂದ ಮತ್ತು ಬ್ರಹ್ಮವಿಚಾರರೂಪಿ ಮಹಾಮಂತ್ರದಿಂದ, ಮತ್ತು ಜ್ಞಾನರೂಪಿ ಅಗ್ನಿಹೋತ್ರದ ಕರ್ಮದಿಂದ ಜೀವೇಶ್ವರರ ಭಿನ್ನತ್ವದ ಆಹುತಿಯನ್ನು ಕೊಟ್ಟು, ಅವನು ಭೇದವನ್ನು ಇಲ್ಲದಂತೆ ಮಾಡುತ್ತಾನೆ. ॥ ೨೪೩ ॥ ಇಲ್ಲಿ ಅಜ್ಞಾನರೂಪ ತುಪ್ಪವು ತೀರಿಹೋಗುತ್ತದೆ. ಮತ್ತು ಯಜ್ಞಮಾಡುವವನು ಮತ್ತು ಯಜ್ಞಮಾಡುವದು ಸಹ ನಿಲ್ಲುತ್ತದೆ. ಯಜ್ಞಮಾಡುವ ಜೀವನು ಅವಭ್ರುತಸ್ನಾನದ ವೇಳೆದಲ್ಲಿ ಆತ್ಮೈಕ್ಯರೂಪ ನೀರಿನಿಂದ ಸ್ನಾನಮಾಡುತ್ತಾನೆ. ॥ ೨೪೪ ॥ ಆಗ್ಗೆ ಆ ಯಜ್ಞಮಾಡುವವನು ಪಂಚಮಹಾಭೂತಗಳು, ಶಬ್ದ ಮುಂತಾದ ವಿಷಯಗಳು, ಮತ್ತು ಇಂದ್ರಿಯಗಳು ಬೇರೆಯೆಂದು ತಿಳಿಯುವದಿಲ್ಲ. ಬ್ರಹ್ಮದಲ್ಲಿ ತಾದಾತ್ಮ್ಯವಾದುದರಿಂದ ಸರ್ವವೂ ಒಂದೇ ಇರುವದೆಂದು ತಿಳಿಯುತ್ತಾನೆ. ॥ ೨೪೫ ॥ ಅರ್ಜುನನೇ! ಯಾವ ಪ್ರಕಾರಾ ನಿದ್ರಾವಶನಾದ ಮನುಷ್ಯನು ಜಾಗ್ರುತನಾದ ಮೇಲೆ ಸ್ವಪ್ನದಲ್ಲಿ ಕಂಡ ಚಿತ್ರವಿಚಿತ್ರವಾದ ಸೈನ್ಯವು ನಿದ್ದೆಹತ್ತಿದ್ದರಿಂದ ನಾನೇ ಆಗಿದ್ದೆನೆಂದು ತಿಳಿಯುತ್ತಾನೆ. ॥ ೨೪೬ ॥ ಈಗ ಯಾವ ಸೈನ್ಯವನ್ನು ನೋಡಿದ್ದೆನು ಅದು ನಿಜವಾದ ಸೈನ್ಯವಿರದೇ ಸರ್ವವೂ ನಾನೇ ಆಗಿದ್ದೆನೆಂದು ಅನ್ನುವನು. ಅದೇ ಪ್ರಕಾರಾ ಈ ವಿಶ್ವವು ಅವನಿಗೆ ಆತ್ಮಸ್ವರೂಪದಂತೆ ಭಾಸವಾಗುತ್ತದೆ. ॥ ೨೪೭ ॥ ಆ ಮೇಲೆ ಅವರಿಗೆ ನಾನು ಜೀವ ಇದ್ದೇನೆಂಬ ಕಲ್ಪನೆಯು ಇಲ್ಲದಂತಾಗುತ್ತದೆ. ಬ್ರಹ್ಮದೇವನಿಂದ ಇರುವೆಗಳ ವರೆಗೆ ಸರ್ವದರಲ್ಲಿಯೂ ಬ್ರಹ್ಮವೇ ತುಂಬಿಕೊಂಡಿರುತ್ತದೆಂಬ ಜ್ಞಾನಯಜ್ಞದಿಂದ ಐಕ್ಯಉಳ್ಳವರಾಗಿ ಅವರು ನನ್ನ ಭಜನೆ ಮಾಡುತ್ತಾರೆ. ॥ ೨೪೮ ॥ ಎಷ್ಟೋ ಜನರು ಅನಾದಿ ಕಾಲದಿಂದ ಇದ್ದಂಥವಿಶ್ವದಲ್ಲಿ ಒಂದರಂತೆ ಮತ್ತೊಂದು ಇದ್ದರೂ, ಅವು ಭಿನ್ನವಾದವು ಮತ್ತು ಅವುಗಳ ನಾಮರೂಪಗಳು ಬೇರೆ ಬೇರೆ ಆಗಿರುತ್ತವೆ. ॥ ೨೪೯ ॥ ಆದುದರಿಂದ ಒಂದುವೇಳೆ ಈ ಜಗತ್ಯದಲ್ಲಿ ಅವರ ದೃಷ್ಟಿಗೆ ಪದಾರ್ಥಗಳು ಭಿಂನ ಭಿಂನವಾಗಿ ತೋರಿದರೂ, ಆ ಯೋಗದಿಂದ ಅವರ ಜ್ಞಾನವು ಭೇದ ಹೊಂದುವದಿಲ್ಲ. ಯಾವ ಪ್ರಕಾರಾ ಅವಯವಗಳು ಬೇರೆ ಬೇರೆ ಆಗಿರುತ್ತವೆಂಬದೇನೋ ನಿಜ. ಆದರೆ ಆ ಸರ್ವ ಅವಯವಗಳು ಒಂದೇ ದೇಹದವು ಇರುತ್ತವೆ. ॥ ೨೫೦ ॥ ಆದರೆ ಸಣ್ಣ ದೊಡ್ಡ ಟೊಂಗೆಗಳು ಇದ್ದಾಗ್ಯೂ ಅವೆಲ್ಲವೂ ಒಂದೇ ಗಿಡದವು ಇರುತ್ತವೆ. ಅದರಂತೆ ಅನೇಕ ಕಿರಣಗಳಿದ್ದಾಗ್ಯಾದರೂ ಅವುಗಳು ಒಂದೇ ಸೂರ್ಯನಿಂದಾಗಿರುತ್ತವೆ. ॥ ೨೫೧ ॥ ಅದೇ ಪ್ರಕಾರಾ ನಾನಾ ಪ್ರಕಾರದ ವ್ಯಕ್ತಿಗಳು ಇದ್ದು ಅವುಗಳ ಭಿಂನವಾದ ಹೆಸರು ಮತ್ತು ಭಿನ್ನವಾದ ಸ್ವಭಾವವೂ ಭಿನ್ನವಾಗಿರುತ್ತದೆ ಆದರೂ ಭಿನ್ನ ಭಿನ್ನ ಪ್ರಾಣಿಗಳಲ್ಲಿಯೂ ಅಭೇದ ಪುರುಷನಾದ ನನ್ನನ್ನೇ ಅವರು ತಿಳಿಯುತ್ತಾರೆ. ॥ ೨೫೨ ॥ ಎಲೋ ಪಾಂಡವನೇ! ಈ ರೀತಿಯಿಂದ ಇಂದ್ರಿಯಗಳಿಗೆ ಗೋಚರವಾಗುವಂಥ ಸರ್ವ ಭೂತ ಮಾತ್ರಗಳು ಬೇರೆ ಇರುವವೆಂದು ತಿಳಿದರೂ, ಅವರು ಉತ್ತಮವಾದ ಜ್ಞಾನ ಯಜ್ಞವನ್ನು ಮಾಡುತ್ತಾರೆ. ಆ ಪುರುಷರು ಆತ್ಮಜ್ಞಾನ ಪರಿಪೂರ್ಣರಿದ್ದು ಅವರ ಜ್ಞಾನದಲ್ಲಿ ಭಿನ್ನ ಭಾವನೆಯು ಉಳಿಯುವದಿಲ್ಲ. ॥ ೨೫೩ ॥ ಅಥವಾ ಯಾವಾಗ್ಯೆ ಯಾವ ಸ್ಥಳದಲ್ಲಿ ಯಾವ ಯಾವದನ್ನು ನೋಡುತ್ತಾರೆ, ಅದು ನಂನ ಸ್ವರೂಪದ ಹೊರ್ತು ಅನ್ಯ ಯಾವದೂ ಇರುದದಿಲ್ಲವೆಂಬ (ಧ್ರುಡವಾದ) ಬೋಧವು ಅವರಿಗೆ ಆಗಿರುತ್ತದೆ. ॥ ೨೫೪ ॥ ನೀರಿನಿಂದ ಆದ ಗುಳ್ಳೆಗಳು ಎಲ್ಲಿ ಯಾವಕಡೆಗೆ ಹೋಗುವವು ಅಲ್ಲಿ ಅವುಗಳಿಗೆ ಒಂದು ನೀರು ಮಾತ್ರ ಇರುವದು. ಆ ಗುಳ್ಳೆಗಳು ಉಳಿದರೂ ಅಥವಾ ನಾಶ ಹೊಂದಿದರೂ ಅವು ನೀರಿನಲ್ಲಿಯೇ ಇರುತ್ತವೆ. ॥ ೨೫೫ ॥ ಅಥವಾ ಗಾಳಿಯಿಂದ ಪ್ರುಥ್ವಿಯ ಧೂಮ್ರಗಳು ಹಾರಿ ಹೋದರೂ, ಅವು ಪ್ರುಥ್ವಿಸ್ವರೂಪದಿಂದ ಬೇರೆ ಆಗಿರುವದಿಲ್ಲ. ಮತ್ತು ಮೇಲೆ ಹಾರಿ ಹೋದ ಮಂಣಿನ ರಜಗಳು ಪುನಾಃ ಕೆಳಗೆ ಬಿದ್ದರೂ, ಅವು ಪ್ರುಥ್ವಿಯ ಮೇಲೆಯೇ ಬೀಳುತ್ತವೆ. ॥ ೨೫೬ ॥ ಅದೇ ಪ್ರಕಾರಾ ಬೇಕಾದ ಸ್ಥಳದಲ್ಲಿ ಭಿಂನ ಭಾವನೆಯಿಂದ ಬೇಕಾದ್ದು ಆದರೂ, ಆಗದೇ ಇದ್ದರೂ, ಈ ವಿಶ್ವವೆಲ್ಲವೂ ನಂನ ಸ್ವರೂಪವೇ ಇರುವದೆಂದು ಅವನ ಮನೋವ್ರುತ್ತಿಯು ಧ್ರುಡವಾಗಿರುತ್ತದೆ. ॥ ೨೫೭ ॥ ಅರ್ಜುನನೇ! ನನ್ನ ಸ್ವರೂಪದ ವ್ಯಾಪ್ತಿ ಎಷ್ಟು ಅದೆ ಅಷ್ಟೇ ಅವರ ಪ್ರತೀತಿಯ ಅನುಭವ ಅದೆ. ಆದುದರಿಂದ ನಾನಾವಿಧರೂಪದಿಂದ ಜಗತ್ತು ದ್ರುಷ್ಟಿಗೋಚರವಾಗುತ್ತದೆ. ಆದರೂ ಅವರು ಬಹು ವಿಧದರೂಪದಿಂದ ನಾನೇ ಇದ್ದೇನೆಂದು ವೆವಹಾರ ಮಾಡುತ್ತಾರೆ. ॥ ೨೫೮ ॥ ಎಲೋ ಅರ್ಜುನನೇ! ಸೂರ್ಯಬಿಂಬವು ಹ್ಯಾಗೆ ಬೇಕಾದವನಿಗೆ ಸನ್ಮುಖವಾಗಿ (ಪ್ರತ್ಯಕ್ಷವಿರುತ್ತದೆ.) ಅದೇ ಪ್ರಕಾರಾ ಅವನು

ಯಾವಾಗಲೂ ಈ ವಿಶ್ವದ ಸನ್ಮುಖವಾಗಿರುತ್ತಾನೆ. ॥೨೫೯॥ ಅರ್ಜುನನೇ ಅವನ ಜ್ಞಾನಕ್ಕೆ ಒಳಗೆ ಹೊರಗೆ ಅಂಬುವ ಭೇದವಿರುವದಿಲ್ಲ. ಗಾಳಿಯು ಸರ್ವ ಆಕಾಶದ ಪೊಳ್ಳಿನಲ್ಲಿ ಪೂರ್ಣವಾಗಿ ತುಂಬಿಕೊಂಡಿರುತ್ತದೆ. ॥ ೨೬೦ ॥ ಅದೇ ಪ್ರಕಾರಾ ನಾನು ಎಷ್ಟು ಸಂಪೂರ್ಣವಾಗಿದ್ದೇನೆ ಅದೇ ತೂಕವು ಅವರ ಸದ್ಭಾವದಲ್ಲಿರುತ್ತಾನೆ (ಅಂದರೆ ಅಷ್ಟು ಸಂಪೂರ್ಣ ಅವರಲ್ಲಿ ಅನುಭವ ವಿರುತ್ತದೆ.) ಹೀಗೆ ಇರುವದರಿಂದ ಅರ್ಜುನನೇ ! ಅವರು ಕ್ರುತಿಯಿಂದ ಒಂದು ವೇಳೆಯೇ ಭಜನ ಮಾಡದೇ ಇದ್ದರೂ, ಆ ಭಜನೆಯು ಸಹಜವೇ ಆಗುತ್ತಿರುತ್ತದೆ. ॥ ೨೬೧ ॥ ಆದರೆ ನಾನು ಸರ್ವತ್ರ ದಲ್ಲಿ ತುಂಬಿಕೊಂಡಿರುತ್ತೇನೆ. ನಂನ ಉಪಾಸನೆಯನ್ನು ಯಾರು ಮಾಡುವದಿಲ್ಲ? ಸರ್ವರೂ ಸರ್ವಸ್ಥಳದಲ್ಲಿಯೂ, ಸಹಜವೇ ನಂನ ಉಪಾಸನೆಯಂನು ಮಾಡುತ್ತಿರುವರು. ಹೀಗೆ ಇದ್ದು ಯಾರಿಗೆ ನಾನು ಪ್ರಾಪ್ತವಾಗುವದಿಲ್ಲ? ಕೆಲವರಿಗೆ ನಂನ ಯಥಾರ್ಥಜ್ಞಾನವಾಗಿಗುವದಿಲ್ಲ. ಅದರಿಂದ ಅವರಿಗೆ ಆ ಭಜನವು ಪ್ರಾಪ್ತವಾಗುವದಿಲ್ಲ. ॥ ೨೬೨ ॥ ಆದರೆ ಅದಂತೂ ಇರಲಿ, ಇಂಥ ಯೋಗ್ಯವಾದ ಜ್ಞಾನದಿಂದ ಯಜನ ಮಾಡುವವರು ನಂನ ಉಪಾಸನೆಯನ್ನು ಮಾಡು ತ್ತಾರೆ. ಆ ಭಕ್ತರಂನು ನಿನಗೆ ಹೇಳಿದೆನು. ॥ ॥೨೬೩ ॥ ಸದಾ ಸರ್ವಕಾಲದಲ್ಲಿ ಯಾವ ಯಾವ ಕರ್ಮಗಳು ಆಗುತ್ತವೆ ಅವೆಲ್ಲವೂ ನಾನಾವಿಧವಾದ ಮಾರ್ಗದಿಂದ ನನಗೆ ಸಹಜವೇ ಅರ್ಪಣವಾಗುತ್ತಿರುತ್ತವೆ. (ಕಾರಣವೇನಂದರೆ ಆ ಸರ್ವ ರೂಪದಿಂದ ನಾನೇ ಒಬ್ಬನು ಇದ್ದೇನೆ.) ಆದರೆ ಮೂರ್ಖರು ಇದನ್ನು ತಿಳಿಯದೇ ಇದ್ದದರಿಂದ (ಆ ಸಹಜ ಅರ್ಪ ಣವಾಗುವ ಸರ್ವ ಕರ್ಮಗಳು) ನನಗೆ ಮುಟ್ಟುವದಿಲ್ಲ. ॥ ೨೬೪ ॥

**ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।**
**ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥**

**[ ಅಹಂ ಕ್ರತುರಿತಿ ]** ತೋಚಿ ಜಾಣಿವೇಚಾ ಜರೀ ಉದಯು ಹೋಯೇ । ತರೀ ಮುದಲ ವೇದ ಮೀಚಿ ಆಹೇ । ಆಣಿ ತೋ ವಿಧಾನಾತೇ ಜಯಾ ವಿಯೇ । ತೋ ಕ್ರತು ಹೀ ಮೀಚಿ ॥ ೨೬೫ ॥ ಮಗ ತಯಾ ಕರ್ಮಾ ಪಾಸೂನಿ ಬರವಾ । ಜೋ ಸಾಂಗೋಪಾಂಗ ಆಘವಾ । ಯಜ್ಞ ಪ್ರಗಟೇ ಪಾಂಡವಾ । ತೋ ಹೀ ಮೀಗಾ ॥ ೨೬೬ ॥ ಸ್ವಾಹಾಮೀ ಸ್ವಧಾ । ಸೋಮಾದಿ ಔಷಧೀ ವಿವಿಧಾ । ಆಜ್ಯ ಮೀ ಸಮಿಧಾ । ಮಂತ್ರ ಮೀ ಹವಿ ॥ ೨೬೭ ॥ ಹೋತಾ ಮೀ ಹವನ ಕೀಜೇ । ತೇಥ ತೋ ಸ್ವರೂಪ ಮಾಝೆ । ಆಣಿ ಹುತವಸ್ತು ಜೇ ಜೇ । ತೇಹೀ ಮೀಚಿ ॥ ೨೬೮ ॥

**ಅರ್ಥ—** ಅದೇ ಜ್ಞಾನರೂಪ ಸೂರ್ಯೋದಯವಾಗುವದರಿಂದ ಮುಖ್ಯ ವೇದವು ನಾನೇ ಇರುವೆನು. ಆ ವೇದದಲ್ಲಿ ವಿಧಿಯುಕ್ತವಾದ ಯಾವ ಕರ್ಮವನ್ನು ಮಾಡಲು ಹೇಳಿರುವದು ಆ ಕರ್ಮದ ವಿಧಾನರೂಪಕ್ರತು ಯಜ್ಞ ಸಹ ನಾನೇ ಇದ್ದೇನೆ. ॥ ೨೬೫ ॥ ಎಲೋ ಪಾಂಡವನೇ ! ಆ ಕರ್ಮದಿಂದ ಪ್ರಕಟವಾಗುವಂಥ ಯಾವ ಯಥಾ ವಿಧಿಯಜ್ಞವಿರುವದೋ, ಅದಾದರೂ ನಾನೇ ಇದ್ದೇನೆ. ॥೨೬೬॥ ದೇವರಿಗೆ ಸ್ವಹ ಮಂತ್ರದಿಂದ ಕೊಡುವ ಅನ್ನ, ಮತ್ತು ಪಿತರರಿಗೆ ಕೊಡುವ ಆಹುತಿ ಅನ್ನ, ಯಜ್ಞದಲ್ಲಿ ಉಪಯೋಗಿಸುವ ಸೋಮಾದಿ ಸಕಲ ಔಷಧಿ ವನಸ್ಪತಿಗಳು ಮತ್ತು ಯಜ್ಞದಲ್ಲಿ ಹವನ ಮಾಡುವ ತುಪ್ಪವು ಮತ್ತು ಸಮಿಧವು ಯಜ್ಞದಲ್ಲಿ ಉಚ್ಚಾರ ಮಾಡುವ ಮಂತ್ರವು ಮತ್ತು ಯಜ್ಞದ ದಶೆಯಿಂದ ಸಿದ್ಧ ಪಡಿಸಿದ ದ್ರವ್ಯವು ಸರ್ವ ಸಾಮುಗ್ರಿಗಳು ನಾನೇ ಇದ್ದೇನೆ. ॥ ೨೬೭ ॥ ಯಜ್ಞ ಮಾಡಿಸುವ ಬ್ರಾಹ್ಮ ಣನು ನಾನು ಇದ್ದೇನೆ. ಮತ್ತು ಯಾವದರಲ್ಲಿ ಹವನ ಮಾಡುತ್ತಾರೆ ಆ ಅಗ್ನಿಯಾದರೂ ನನ್ನ ಸ್ವರೂಪವೇ ಅದೆ. ಮತ್ತು ಅಗ್ನಿಯಲ್ಲಿ ಹವನ ಮಾಡುವ ಯಾವ ವಸ್ತುಗಳಿರುವವೋ ಅದು ಸಹ ನಾನೇ ಇದ್ದೇನೆ. ॥ ೨೬೮ ॥

**ಪಿತಾಽಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ ಸಾಮ ಯಜುರೇವ ಚ ॥ ೧೭ ॥**

**[ ಪಿತಾಽಹಮಸ್ಯ ಜಗತ ಇತಿ ]** ಪೈಜಯಾಚೇನಿ ಅಂಗ ಸಂಗೇ । ಇಯೇ ಪ್ರಕೃತೀಸ್ತವ ಅಷ್ಟಾಂಗೇ । ಜನ್ಮ ಪಾವಿಜತ ಅಸೇ ಜಗೇ । ತೋ ಪಿತಾ ಮೀಗಾ ॥ ೬೯ ॥ ಅರ್ಧನಾರೀ ನಟೇ

ಶ್ವರೀ । ಜೋ ಪುರುಷ ತೋಚಿ ನಾರೀ । ತೇವೀ ಮೀ ಚರಾಚರೀ । ಮ್ಹಾತಾಹಿ ಹೋಯ್ರೀ ॥ ೨೭೦ ॥ ಆಣಿ ಜಾಹಲೇ ಜಗ ಜೇಥ ರಾಹೇ । ಜೇಣೇ ಜೀವಿತ ವಾಢತ ಆಹೇ । ತೇ ಮೀ ವಾಂಚೂನಿ ನೋಹೇ । ಆನ ನಿರುತೇ ॥ ೨೭೧ ॥ ಇಯೇ ಪ್ರಕೃತಿ ಪುರುಷೇ ದೋನ್ಹೀ । ಉಪಜಲೀ ಜಯಾಚಿಯಾ ಅಮನಮನೀ । ತೋ ಪಿತಾಮಹ ತ್ರಿಭುವನೀ । ವಿಶ್ವಾಚಾ ಮೀ ॥ ೨೭೨ ॥ ಆಣಿ ಆಘವೇಯಾ ಜಾಣ ಣೇಯಾಚಿಯಾ ವಾಟಾ । ಜಯಾಗಾವಾ ಯೇತೀ ಗಾ ಸುಭಟಾ । ವೇದಾಂಚಿಯಾ ಚೋಹಟಾ । ವೇದ್ಯ ಜೇಮ್ಹಣಿಜೇ ॥೨೭೩॥ ಜೇಥ ನಾನಾ ಮತಾ ಬುಝಾವಣೀ ಆಲೀ । ಏಕಮೇಕಾ ಶಾಸ್ತ್ರಾಂಚೀ ಅನೊಳಖೀ ಫಿಟಲೀ । ಚುಕಲೀ ಜ್ಞಾನೇ ಜೇಥ ಮಿಳೋ ಆಲಿ । ಜೇ ಪವಿತ್ರ ಮ್ಹಣಿಜೇ ॥ ೨೭೪ ॥ ಪೈಬ್ರಹ್ಮಬೀಜಾ ಜ್ಞಾಹಲಾ ಅಂಕುರ । ಘೋಷ ಧ್ವನೀ ನಾದಾಕಾರ । ತಯಾಚೇ ಗಾ ಭವನ ಜೋ ಓಂ ಕಾರ । ತೋಹೀ ಮೀ ಗಾ ॥ ೨೭೫ ॥ ಜಯಾ ಓಂಕಾರಾಚಿಯೇ ಕುಶೀ । ಅಕ್ಷರೇ ಹೋತೀ ಅ ಉ ಮಕಾರೇಸೀ । ಜಿಯೇ ಉಪಜತ ವೇದೇಸೀ । ಉಠಲೀ ತೀನ್ಹೀ ॥ ೨೭೬ ॥ ಮ್ಹಣೋನಿ ಋಗ್ ಯಜುಃ ಸಾಮ । ಹೇ ತೀನ್ಹೀ ಮ್ಹಣೇ ಮೀ ಆತ್ಮಾರಾಮು । ಏವಂ ಮೀಚಿ ಕುಲಕ್ರಮು । ಶಬ್ದ ಬ್ರಹ್ಮಾಚಾ ॥ ೨೭೭ ॥

**ಅರ್ಥ—** ಎಲೋ ಅರ್ಜುನನೇ! ಯಾವನ ಅಂಗಸಂಗದಿಂದ ಈ ಅಷ್ಟಾಂಗಪ್ರಕೃತಿಯು ಜಗತ್ತಕ್ಕೆ ಜನ್ಮವನ್ನು ಕೊಡುವದೋ? ಆ ಜಗತ್ಯದ ಪಿತಾ ನಾನು ಇದ್ದೇನೆ. ॥೨೬೯॥ ಅರ್ಧನಾರಿ ನಟೇಶ್ವರಿ ಸ್ವರೂಪದಲ್ಲಿ ಹೇಗೆ ಪುರುಷನೇ ಸ್ತ್ರೀ ಮತ್ತು ಸ್ತ್ರೀಯಳೇ ಪುರುಷನಿರುವಂತೆ ಸ್ಥಾವರ ಜಂಗಮಾತ್ಮಕ ಜಗತ್ತಿಗೆ ತಾಯಿಯಾದರೂ ನಾನೇ ಇರುತ್ತೇನೆ. ॥ ೨೭೦ ॥ ಮತ್ತು ಉತ್ಪನ್ನವಾದ ಜಗತ್ತು ಎಲ್ಲಿರುತ್ತದೆ, ಯಾರಿಂದ ಪ್ರಾಣಿಮಾತ್ರಗಳ ರಕ್ಷಣವಾಗುತ್ತದೆ. ಅದಾದರೂ ನಿಃಸಂಶಯವಾಗಿ ನಾನೇ ಇದ್ದೇನೆ. ॥೨೭೧॥ ಪ್ರಕೃತಿ ಮತ್ತು ಪುರುಷ ಇವೆರಡೂ ಯಾವ ಪುರುಷನ ಅಂತಃಕರಣೋ ಪಾಧಿರಹಿತ ಮೂಲ ಸಂಕಲ್ಪದಿಂದ ಉತ್ಪನ್ನವಾಗಿರುವವೋ, ಆ ನಾನು ಮೂರು ಲೋಕಗಳಲ್ಲಿ ವಿಶ್ವದ ಪಿತಾಮಹನು ನಾನೇ ಇದ್ದೇನೆ. ॥೨೭೨॥ ಅರ್ಜುನನೇ ! ಸರ್ವಜ್ಞಾನದ ಹಾದಿಗಳು ಯಾವ ಗ್ರಾಮದಲ್ಲಿ ಬಂದು ಕೂಡುತ್ತವೆ. ಮತ್ತು ನಾಲ್ಕು ವೇದಗಳ ಹಾದಿಯು ಮೇಲೆ ಯಾವದಕ್ಕೆ ವೇದ್ಯವೆಂದೆನ್ನುತ್ತಾರೆ. ॥ ೨೭೩ ॥ ಯಾವ ಸ್ಥಳದಲ್ಲಿ ಅನೇಕಪ್ರಕಾರದ ಅಭಿಪ್ರಾಯಗಳು ಐಕ್ಯವಾಗುತ್ತವೆ ಮತ್ತು ಶಾಸ್ತ್ರಗಳು ಒಂದಕ್ಕೊಂದು ಪರಿಚಯ ಹೊಂದುತ್ತವೆ ತಪ್ಪಿಹೋದ ಜ್ಞಾನಗಳು ಎಲ್ಲಿ ಏಕತ್ರವಾಗಿ ಕೂಡಿಕೊಳ್ಳುತ್ತವೆ. ಇಂಥ ಯಾವ ಸ್ಥಾನವಿರುವದೋ ಅದಕ್ಕೆ ಪವಿತ್ರವೆಂದೆನ್ನುತ್ತಾರೆ. ॥೨೭೪॥ ಬ್ರಹ್ಮಬೀಜಕ್ಕೆ ಪರಾಪಶ್ಯಂತಿ, ಮಧ್ಯಮಾ, ವೈಖರಿ, ಈ ನಾಲ್ಕು ವಾಚಾಗಳು ಇವೇ ಅಂಕುರಿಸಿದಮೇಲೆ ಅವುಗಳ ಮಂದಿರವಾದ ಓಂಕಾರವು ನಾನೇ ಇದ್ದೇನೆ. ॥೨೭೫॥ ಆ ಓಂಕಾರದ ಹೊಟ್ಟೆಯಲ್ಲಿ ಅ, ಉ, ಮ, (ಅಕಾರ ಉಕಾರ ಮಕಾರವೆಂಬ) ಅಕ್ಷರಗಳು ಉತ್ಪನ್ನವಾಗುತ್ತವೆ. ಮತ್ತು ಯಾವದು ಹುಟ್ಟಿದಕೂಡಲೆ ಮೂರುವೇದಗಳು ಉತ್ಪನ್ನವಾದವು, ॥ ೨೭೬ ॥ ಆದರೆ ರುಗ್ವೇದ, ಯಜುರ್ವೇದ, ಸಾಮವೇದ, ಈ ಮೂರು ವೇದಗಳು ನಾನೇ ಇದ್ದು ಮತ್ತು ವೇದಗಳ ಪರಂಪರೆಯಾದರೂ ನಾನೇ ಇರುವೆನೆಂದು ಶ್ರೀಕೃಷ್ಣನು ಅನ್ನುತ್ತಾನೆ. ॥ ೨೭೭ ॥

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ॥ ೧೮ ॥**

**[ ಗತಿರ್ಭರ್ತಾಪ್ರಭುರಿತಿ ]** ಹೇ ಚರಾಚರ ಆಘವೇ । ಜಿಯೇಪ್ರಕೃತೀ ಆಂತ ಸಾಂತವೇ । ತೇ ಶಿಣಲೀ ಜೇಥ ವಿಸಂಚೆ । ತೇ ಪರಮಗತಿ ಮೀ ॥ ೨೭೮ ॥ ಆಣಿ ಜಯಾಚೇನಿ ಪ್ರಕೃತೀಜಿಯೇ ಜೇಣೇ ಆಧಿಷ್ಟಿಲೀ ವಿಶ್ವವಿಯೇ । ಜೋ ಯೇಛುನಿ ಪ್ರಕೃತೀ ಇಯೇ । ಗುಣಾತೇ ಭೋಗೀ ॥೨೭೯॥ ತೋ ವಿಶ್ವ ಶ್ರಿಯೇಚಾ ಭರ್ತಾ । ಮೀಚಿ ಗಾ ಏಥ ಪಾಂಡುಸುತಾ । ಮೀ ಗೋಸಾವೀ ಸಮಸ್ತಾ । ತ್ರೈಲೋಕ್ಯಾಚಾ ॥ ೨೮೦ ॥ ಆಕಾಶೇ ಸರ್ವತ್ರ ವಸಾವೇ । ವಾಯುನೇ ನಾವಭರೀ ಉಗೇ

ನಸಾವೇ । ಪಾವಕೆ ದಾಹಾವೇ । ವರ್ಷಾವೇ ಜಳೇ ॥ ೨೮೧ ॥ ಪರ್ವತೀ ಬೈಸಕಾ ನ ಸಂಡಾವೀ । ಸಮುದ್ರೀ ರೇಖಾ ನೋಲಾಂಡಾವೀ । ಪೃಥ್ವೀಯಾ ಭೂತೇ ವಾಹಾವೀ । ಹೇ ಆಜ್ಞಾ ಮಾಝೀ ॥೨೮೨॥ ಮ್ಯಾ ಬೋಲವಿಲ್ಯಾ ವೇದ ಬೋಲೇ । ಮ್ಯಾ ಚಾಲವಿಲ್ಯಾ ಸೂರ್ಯ ಚಾಲೇ । ಮ್ಯಾ ಹಾಲವಿಲ್ಯಾ ಪ್ರಾಣ ಹಾಲೇ । ಜೋ ಜಗಾತೇ ಚಾಳಿತಾ ॥ ೨೮೩ ॥ ಮಿಯಾಂಚಿ ನಿಯಮಿಲಾಸಾಂತಾ । ಕಾಲ ಗ್ರಾಸಿತಸೇ ಭೂತಾ । ಇಯೇ ಮ್ಹಣಿಯಾಗತೇ ಪಾಂಡುಸುತಾ । ಸಕಳೇ ಜಯಾಚೀ ॥ ೨೮೪॥ ಜೋ ಐಸಾ ಸಮರ್ಥ । ತೋ ಮೀ ಜಗಾಚಾನಾಥ । ಆಣಿ ಗಗನಾ ಐಸಾ ಸಾಕ್ಷೀಭೂತ । ತೋಹೀ ಮೀಚಿ ॥ ೨೮೫ ॥ ಇಹೀ ನಾಮರೂಪೀ ಆಘವಾ । ಜೋ ಭರಲಾ ಅಸೇ ಪಾಂಡವಾ । ಆಣಿ ನಾಮರೂಪಾಂಚಾಹಿ ಮ್ರೋಲ್ಹಾವಾ । ಆಪಣಚಿ ಜೋ ॥ ೨೮೬ ॥ ಜೈಸೇ ಜಳಾಚೇ ಕಲ್ಲೋಳ! ಆಣಿ ಕಲ್ಲೋಳೀ ಆಥೀ ಜಳ । ಐಸೇನಿ ವಸವೀತಸೇ ಸಕಳ । ತೋ ನಿವಾಸ ಮೀ ॥ ೨೮೭ ॥ ಜೋ ಮಜ ಹೋಯ ಅನನ್ಯ ಶರಣ । ತ್ಯಾಚೆ ನಿವಾರೀ ಮೀ ಜನ್ಮಮರಣ । ಯಾಲಾಗೀ ಶರಣಾಗತಾ ಶರಣ್ಯ ! ಮೀಚಿ ಏಕ ॥ ೨೮೮ ॥ ಮೀಚಿ ಅನೇಕಪಣೇ । ವೇಗಳಾಲೇನಿ ಪ್ರಕೃತಿಗುಣೇ ! ಜೀತ ಜಗಾಚೇನಿ ಪ್ರಾಣೇ । ವರ್ತತ ಅಸೇ ॥ ೨೮೯ ॥ ಜೈಸಾ ಸಮುದ್ರ ಥಿಲ್ಲರ ನ ಮ್ಹಣತಾ । ಭಲತೇಥ ಬಿಂಬೇ ಸವಿತಾ । ತೈಸಾ ಬ್ರಹ್ಮಾದಿ ಸರ್ವ ಭೂತಾ । ಸುಹೃದ ತೋ ಮೀ ॥ ೨೯೦ ॥ ಮೀಚಿ ಗಾ ಪಾಂಡವಾ । ಯಾ ತ್ರಿಭುವನಾಸಿ ಮ್ರೋಲಾವಾ । ಸೃಷ್ಟಿಕ್ಷಯ ಪ್ರಭವಾ । ಮೂಳತೇ ಮೀ ॥ ೨೯೧ ॥ ಬೀಜ ಶಾಖಾಂತೇ ಪ್ರಸವೇ । ಮಗ ತೇ ರೂಖಪಣ ಬೀಜೀ ಸಾವಾವೇ । ತೈಸೇ ಸಂಕಲ್ಪೇ ಹೋಯ ಆಘವೇ । ಪಾಠೀ ಸಂಕಲ್ಪೀ ಮಿಳೇ ॥ ೨೯೨ ॥ ಐಸೇ ಜಗಾಚೇ ಬೀಜ ಜೋ ಸಂಕಲ್ಪ । ಅವ್ಯಕ್ತ ವಾಸನಾರೂಪ । ತಯಾ ಕಲ್ಪಾಂತೀ ಜೇಥ ನಿಕ್ಷೇಪ । ಹೋಯ ತೇ ಮಿ ॥ ೨೯೩ ॥ ಇಯೇ ನಾಮರೂಪೇ ಲೋಟತೀ । ವರ್ಣವ್ಯಕ್ತೀ ಆಟತೀ । ಜಾತೀಚೇ ಭೇದ ಫಿಟತೀ । ಜೈ ಆಕಾರ ನಾಹೀ ॥ ೨೯೪ ॥ ತೈ ಸಂಕಲ್ಪವಾಸನಾ ಸಂಸ್ಕಾರ । ಮಾಘೌತೇ ರಚಾವಯಾ ಆಕಾರ । ಜೇಥ ರಾಹೋನಿ ಅಸತೀ ಅಮರ । ತೇ ನಿಧಾನ ಮೀ ॥ ೨೯೫ ॥

**ಅರ್ಥ**— ಈ ಸ್ಥಾವರ ಜಂಗಮ ವಿಶ್ವವು ಯಾವ ಪ್ರಕೃತಿಯೊಳಗೆ ತುಂಬಿಕೊಂಡಿರುವದು. ಆ ಪ್ರಕೃತಿಗೆ ಶ್ರಮವಾದರೆ ವಿಶ್ರಾಂತಿ ಹೊಂದಲು ಸದಾ ನಾನೇ ಆಶ್ರಯಸ್ಥಾನನಾಗಿರುವೆನು. ॥ ೭೮ ॥ ಯಾವದರಿಂದ ಈ ಪ್ರಕೃತಿಯು ಜೀವಿಸುತ್ತದೆ. ಮತ್ತು ಯಾವದರ ಆಶ್ರಯದಿಂದ ವಿಶ್ವವನ್ನು ಪ್ರಸವಿಸುತ್ತದೆ ಮತ್ತು ಯಾವದು ಪ್ರಕೃತಿಯ ಸ್ವಾಧೀನವಾಗಿ ಸತ್ವ, ರಜ, ತಮ, ಈ ಗುಣಗಳ ಉಪಭೋಗ ತೆಗಿದುಕೊಳ್ಳುತ್ತದೋ, ॥ ೭೯ ॥ ಆ ವಿಶ್ವಲಕ್ಷ್ಮಿದೇವಿಯ ಪತಿಯು ನಾನೇ ಇದ್ದೇನೆ. ಅರ್ಜುನನೇ ! ಮೂರೂ ಲೋಕಗಳಿಗೆ ಮತ್ತು ಸಕಲ ಜಗತ್ತಿಗೆ ಸ್ವಾಮಿಯಾದವರೂ ನಾನೇ ಇದ್ದೇನೆ. ॥ ೮೦ ॥ ಆಕಾಶವು ಸರ್ವ ಸ್ಥಳದಲ್ಲಿರಬೇಕು, ಗಾಳಿಯು ಕ್ಷಣಕಾಲವು ಸಹಾ ಸ್ವಸ್ಥ ಇರಕೂಡದು, ಅಗ್ನಿಯಲ್ಲಿ ದಾಹಕತ್ವವು ಉಂಟಾಗಬೇಕು, ಮೇಘವು ವೃಷ್ಟಿಗರಿಯಬೇಕು, ॥ ೮೧ ॥ ಪರ್ವತಗಳು ತಮ್ಮ ಸ್ಥಾನವನ್ನು ಬಿಡಬಾರದು, ಸಮುದ್ರವು ತನ್ನ ಮರ್ಯಾದೆಯನ್ನು ಉಲ್ಲಂಘನ ಮಾಡಬಾರದು, ಮತ್ತು ಪ್ರಥ್ವಿಯು, ಸರ್ವ ಭೂತಗಳ ಭಾರವನ್ನು ವಹಿಸಬೇಕೆಂಬ ಸರ್ವ ಆಜ್ಞೆಯು ನನ್ನದೇ ಅದೆ. ॥ ೮೨ ॥ ಪರಮ ವೇದಗಳೆಲ್ಲವೂ ನಾನು ಹೇಳಿರುವ ಪರಿಯಿಂದ ಘೋಷಿಸುತ್ತವೆ. ( ಮಾತಾಡುತ್ತವೆ ) ದಿನಕರನು ನನ್ನಾಜ್ಞೆಯಿಂದಲೇ ಸಂಚರಿಸುತ್ತಾನೆ. ಸರ್ವ ಜಗತ್ತಿನ ಚಾಲಕ ಪ್ರಾಣವು ಆದಾದರೂ ನಾನು ಅಲ್ಲಾಡುವಂತೆ ಮಾಡುವದರಿಂದ ಅದು ಚಲಿಸುತ್ತದೆ. ॥೮೩॥ ಮತ್ತು ನನ್ನ ಆಜ್ಞೆಯಿಂದಲೇ ಕಾಲನು ಭೂತಗಳಿಗೆ ಗ್ರಾಸಿಸುತ್ತಾನೆ. ಅಯ್ಯಾ ಅರ್ಜುನನೇ ! ಈ ಪ್ರಕಾರ ಈ ಸರ್ವರೂ ನನ್ನ ಆಜ್ಞಾಧಾರಕರಾಗಿ ( ಸೇವಕರಂತೆ ) ತಮ್ಮ ತಮ್ಮ ಕೆಲಸಗಳನ್ನು ಮಾಡುತ್ತಾರೆ. ॥ ೮೪ ॥ ಇಂಥ ಯಾವ ಸಮರ್ಥನೂ ಜಗತ್ತಿನ ಒಡೆಯನೂ ಆವ ನಾನು ಆಕಾಶದಂತೆ ಸರ್ವ ಸ್ಥಳದಲ್ಲಿಯೂ ವ್ಯಾಪ್ತನಿದ್ದು ಸಾಕ್ಷಿ

ಭೂತನಾಗಿರುವವನು ನಾನೇ ಇದ್ದೇನೆ. ॥ ೮೫ ॥ ಎಲೋ ಪಾಂಡವನೇ ! ಈ ಪ್ರಕಾರಾ ಈ ನಾಮ ರೂಪಗಳಲ್ಲಿ ಯಾವನು ಸರ್ವತ್ರದಲ್ಲಿಯೂ ತುಂಬಿಕೊಂಡಿರುವನೋ, ಮತ್ತು ಅವನೇ ನಾಮರೂಪದ ಜೀವನ ಕಲೆಯಾಗಿರುವನು. ॥ ೮೬ ॥ ತೆರೆಗಳು ನೀರಿನಲ್ಲಿಯೇ ಹುಟ್ಟುತ್ತವೆ, ಮತ್ತು ಆ ಥೆರೆಗಳಲ್ಲಿ ನೀರೇ ಇರುತ್ತದೆ. ಅದೇ ಪ್ರಕಾರಾ ಜಗತ್ತು ನನ್ನಲ್ಲಿ ನಾನು ಜಗತ್ತಿನಲ್ಲಿ ಇದ್ದೇನೆ. ಈ ರೀತಿಯಿಂದ ವಿಶ್ವದ ವಾಸಸ್ಥಾನವು ನಾನೇ ಆಗಿದ್ದೇನೆ. ॥ ೮೭ ॥ ಯಾವನು ನನಗೆ ಏಕನಿಷ್ಠೆಯಿಂದ ಅನನ್ಯ ಶರಣಾಗತನಾಗುತ್ತಾನೋ, ಅವನನ್ನು ನಾನು ಜನನ ಮರಣದಿಂದ ಮುಕ್ತ ಮಾಡುತ್ತೇನೆ. ಆದರೆ ಶರಣಾಗತರ ರಕ್ಷಕನೆಂಬ ಬಿರುದು ನನಗೊಬ್ಬನಿಗೇ ಸಲ್ಲುವದು. ॥ ೮೮ ॥ ನಾನು ಒಬ್ಬನೇ ಅನೇಕ ರೂಪಗಳನ್ನು ಧರಿಸಿ ಪ್ರಾಣಿಗಳ ಭಿನ್ನ ಭಿನ್ನವಾದ ಸ್ವಭಾವ ಧರ್ಮದ ಪ್ರಕಾರಾ ಜೀವಂತ ಇದ್ದ ಈ ಜಗತ್ತಿನಲ್ಲಿಯು ಪ್ರಾಣಿಮಾತ್ರಗಳಲ್ಲಿ ಪ್ರಾಣಿರೂಪದಿಂದ ಜೀವಂತ ಇರುತ್ತೇನೆ. ॥ ೮೯ ॥ ಇದು ಸಮುದ್ರವು, ಇಲ್ಲವೇ ಇದು ಸಂಣ ತೆಗ್ಗಿನೊಳಗೆ ನಿಂತ ನೀರು ಎಂಬ ಭೇದವನ್ನು ಮಾಡದೇ ಸೂರ್ಯನು ಬೇಕಾದಲ್ಲಿ ಪ್ರತಿಬಿಂಬಿತ ವಾಗುವಂತೆ ಇವನು ಬ್ರಹ್ಮದೇವನು ಮತ್ತು ಇದು ಸಂಣ ಕೀಟಕವು ಎಂಬ ಭೇದವಿಲ್ಲದೇ ಪ್ರತಿಫಲದ ಅಪೇಕ್ಷೆಮಾಡದೆ ಬ್ರಹ್ಮಾದಿ ಸರ್ವಭೂತಗಳಮೇಲೆ ಸಮಾನವಾದ ಪ್ರೀತಿಮಾಡುವ ಮಹಾತ್ಮನು ನಾನೇ! ॥ ೨೯೦ ॥ ಎಲೋ ಪಾಂಡವನೇ! ಈ ತ್ರಿಭುವನದಲ್ಲಿ ಜೀವನನೂ ಮತ್ತು ಉತ್ಪತ್ತಿ, ಸ್ಥಿತಿ, ಲಯ, ಈ ಮೂರೂ ಅವಸ್ಥೆಗೆ ಮೂಲಕಾರಣನೂ ನಾನೇ ಇರುತ್ತೇನೆ. ॥ ೯೧ ॥ ಬೀಜದಿಂದ ವೃಕ್ಷ ಮತ್ತು ಶಾಖೆಗಳು ಉತ್ಪನ್ನವಾಗುತ್ತವೆ. ಮತ್ತು ಆ ಗಿಡವೇ ಬೀಜದಲ್ಲಿ ಸಮಾವೇಶವಾಗುವಂತೆ ಆದಿ ಸಂಕಲ್ಪದಿಂದ ಸರ್ವ ಜಗತ್ತು ಉತ್ಪತ್ತಿಯಾಗಿ ಮರಳಿ ಆ ಜಗತ್ತು ಆದಿ ಸಂಕಲ್ಪದಲ್ಲಿಯೇ ಲಯ ಹೊಂದುತ್ತದೆ. ॥ ೨೯೨ ॥ ಇದೇ ಪ್ರಕಾರಾ ವಾಸನಾರೂಪಿ ಜಗತ್ಯದ ಮೂಲ ಬೀಜರೂಪಿ ಸಂಕಲ್ಪವು ಮತ್ತು ಸೂಕ್ಷ್ಮ ವಾಸನಾರೂಪ ಸಂಕಲ್ಪವು ಕಲ್ಪಾಂತ್ಯದಲ್ಲಿ ಎಲ್ಲಿ ಸೂಕ್ಷ್ಮರೀತಿಯಿಂದ ಇರುವದೋ, ಆ ಸ್ಥಾನವು ನಾನೇ ಇದ್ದೇನೆ. ॥ ೨೯೩ ॥ ಯಾವಾಗ್ಗೆ ನಿರಾಕಾರ ಸ್ವರೂಪವು ಪ್ರಗಟವಾಗುತ್ತದೆ ಆಗ್ಗೆ ಈ ನಾಮರೂಪಗಳು ಇಲ್ಲದಂತಾ ಗುತ್ತವೆ. ವರ್ಣ ಮತ್ತು ವ್ಯಕ್ತಿಗಳು ಅಟ್ಟಿಸಿಹೋಗುತ್ತವೆ. ಜಾತಿಯ ಭಿನ್ನ ಭಿನ್ನ ಪ್ರಕಾರಗಳು ಇಲ್ಲದಂತಾಗುತ್ತವೆ. ॥೨೯೪॥ ಆ ವೇಳೆಯಲ್ಲಿ ಸಂಕಲ್ಪ ವಾಸನಾ ಸಂಸ್ಕಾರವು ಮರಳಿ ಜಗದಾಕಾರನನ್ನು ರಚಿಸುವದರದೆಶೆಯಿಂದ ಯಾವ ಸ್ಥಾನದಲ್ಲಿ ಅಮರವಾಗಿರುವದೋ ಆ ಸ್ಥಾನವು ನಾನೇ ಇದ್ದೇನೆ. ॥ ೨೯೫ ॥

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

**[ ತಪಾಮ್ಯಹ ಮಿತಿ ]** ಮೀ ಸೂರ್ಯಾಚೇನಿ ವೇಷೇಂ । ತಪೇ ತ್ಯೆ ಹೇ ಶೋಷೇ । ಪಾಠೀ ಇಂದ್ರ ಹೋವೂನಿ ವರ್ಷೇ । ತ್ಯೆ ಪುಢತೀ ಭರೇ ॥ ೯೬ ॥ ಅಗ್ನಿ ಕಾಷ್ಠೇ ಖಾಯೇ । ತೇ ಕಾಷ್ಠಚಿ ಅಗ್ನಿ ಹೋಯೇ । ತೈಸೇ ಮರತೇ ಮಾರಿತೇ ಪಾಹೇ । ಸ್ವರೂಪ ಮಾಝೇ ॥ ೯೭ ॥ ಯಾಲಾಗೀ ಮೃತ್ಯೂಚಾ ಭಾಗೀ ಜೇ ಜೇ । ತೇ ತೇಹೀ ಮೈರೂಪ ಮಾಝೇ । ಆಣಿ ನ ಮರತೇ ತವಸಹಜೇ । ಮೀಚಿ ಆಹೇ ॥೯೮॥ ಆತಾ ಬಹು ಬೋಲೋನಿ ಸಾಂಗಾವೇ । ತೇ ಏಕೇ ಹೇಳಾ ಘೇ ಪಾ ಆಘವೇ । ತರೀ ಸತಾಸತಹೀ ಜಾಣಾವೇ ಮೀಚಿ ಪೈಗಾ ॥ ೯೯ ॥ ಮ್ಹಣೋನಿ ಅರ್ಜುನಾ ಮೀ ನಸೇ । ಐಸಾ ಕವಣಠಾವ ಅಸೇ । ಪರೀ ಪ್ರಾಣಿಯಾಚೇ ದೈವ ಕೈಸೇ । ಜೇ ನ ದೇಖತೀ ಮಾತೇ ॥ ೩೦೦ ॥ ತರಂಗ ಪಾಣಿಯೇವೀಣ ಸುಕತೀ । ರಶ್ಮಿ ವಾತೀವೀಣನ ದೇಖತೀ । ತೈಸೇಮೀಚಿ ತೇ ಮೀ ನೋಹತೀ । ವಿಸ್ಮೋ ದೇಖೇ ॥೧॥ ಹೇ ಆಂತ ಬಾಹೇರ ಮಿಯಾ ಕೊಂದಲೇ ! ಜಗ ನಿಖಿಲ ಮಾಝೇಚಿ ವೋತಿಲೇ । ಕೀ ಕೈಸೇ ಕರ್ಮ ತಯಾ ಆಡ ಆಲೇ। ಜೇ ಮೀಚಿ ನಾಹೀ ಮ್ಹಣತೀ ॥ ೨ ॥ ಪರೀ ಅಮೃತ ಕುಹಾ ಪಡಿಜೇ । ಕಾ ಆಪಣ ಪಯಾಂತೇ ಕಡಿಯೇ ಕಾಢಿಜೇ । ಐಸೇ ಆರ್ಥೀ ಕಾಯಕೀಜೇ । ಅಪ್ರಾಪ್ತಾಸೀ ॥ ೩ ॥ ಗ್ರಾಸಾ ಏಕಾ ಅನ್ನಾಸಾಠೀ । ಅಂಧ ಧಾವ ತಾಹೇ ಕಿರೀಟೀ । ಆಢಳಲಾ ಚಿಂತಾಮಣಿ ಪಾಯೇ ಲೊಟೀ । ಅಂಧಳೇ

ಪಣೇ ॥ ೪ ॥ ತೈಸೆ ಜ್ಞಾನ ಜೈ ಸಾಂಡೂನಿ ಜಾಯೇ । ತೈ ಐಶೀ ಹೇ ದಶಾ ಆಹೇ । ಮ್ಹಣೋನಿ ಕೀಜೇ ತೇ ಕೇಲೇ ನೋಹೇ । ಜ್ಞಾನೇವೀಣ ॥ ೫ ॥ ಅಂಧಳೇ ಯಾ ಗರುಡಾಚೇ ಪಾಂಖ ಅಹಾತೀ । ತೇ ಕವಣಾ ಉಪೇಗಾ ಜಾತೀ । ತೈಸೇ ಸತ್ಕರ್ಮಾ ಚೇ ಉಪಖೇಶಾತೀ । ಜ್ಞಾನೇವಿಣ ॥ ೬ ॥

**ಅರ್ಥ—** ನಾನು ಸೂರ್ಯನಾಗಿ ಪ್ರಕಾಶದ (ಬಿಸಲಿನಿಂದ) ಈ ಜಗತ್ತು ವಣಗಿಸುತ್ತೇನೆ. ಇಂದ್ರನಾಗಿ ವೃಷ್ಟಿಗರೆದು ಪುನ್ಹಾ ಸವೃದ್ಧಿ ಮಾಡುತ್ತೇನೆ. ॥ ೯೬ ॥ ಅಗ್ನಿಯು ಕಟ್ಟಿಗೆಗಳನ್ನು ತಿನ್ನುತ್ತದೆ. ಆ ಮೇಲೆ ಆ ಕಟ್ಟಿಗಿಗಳೇ ಅಗ್ನಿ ರೂಪವಾಗುತ್ತವೆ. ಆ ಪ್ರಕಾರಾ ಸಾಯುವವನ ಕೊಲ್ಲುವವನ ಈ ಸ್ವರೂಪಗಳು ನನ್ನವೇ ಇರುತ್ತವೆ. ॥ ೯೭ ॥ ಇ ಕಾರಣದ ದೆಶೆಯಿಂದ ಮೃತ್ಯುವಿನಿಂದ ಆವರಿಸಿದ ಯಾವ ಯಾವ ರೂಪಗಳು ಅವೆ, ಅವೆಲ್ಲವುಗಳು ನನ್ನ ರೂಪವೇ ಅವೆ. ಮತ್ತು ಸಾಯದೇ ಇರುವ ಯಾವ ಅವಿನಾಶ ವಸ್ತು ಅದೆಯೋ ಅದಂತೂ ಸಹಜವೇ ನಾನೇ ಇದ್ದೇನೆ. ॥ ೯೮ ॥ ಬಹಳ ಹೇಳುವದೇನದೆ! ಸರ್ವವನ್ನು ಒಂದೇಕಾಲಕ್ಕೆ ಹೇಳುತ್ತೇನೆ ಲಕ್ಷ್ಯದಲ್ಲಿಡು. ಆದರೆ ವಿನಾಶಿ, ಅವಿನಾಶಿ, ಎಂಬ ಯಾವ ಪದಾರ್ಥಗಳು ಅವೆ ಅವೆಲ್ಲವೂ ನಾನೇ ಇದ್ದೇನೆಂಬದನ್ನು (ಧೃಡವಾಗಿ) ನಂಬು. ॥ ೯೯ ॥ ಆದುದರಿಂದ ಅರ್ಜುನನೇ! ಎಲ್ಲಿ ನಾನು ಇರುವದಿಲ್ಲ! ಇಂಥ ಸ್ಥಳವು ಎಲ್ಲಿಯಾದರೂ ದೊರಕಬಹುದೋ? ಆದರೆ ಈ ಪ್ರಾಣಿಗಳ ದುರ್ದೈವ ಹೇಗಿರುವದೆಂಬದನ್ನು ನೋಡು. ನಾನು ಸರ್ವವ್ಯಾಪಿ ಇದ್ದಾಗ್ಯೂ ಅವರು ನನ್ನನ್ನು ಎಲ್ಲಿಯೂ ಕಾಣುವದಿಲ್ಲ. ॥೨೦೦॥ ತೆರೆಗಳು ಜಲರೂಪವಿದ್ದು ನೀರಿನ ಹೊರ್ತು (ವೃಕ್ಷ ಮುಂತಾದವುಗಳಂತೆ) ವಣಗಬಹುದೋ? ಇಲ್ಲವೇ ಸೂರ್ಯಕಿರಣವು ದೀವಿಗೆಯು ಬೆಳಕಿನ ಹೊರ್ತು ಕಾಣಲಾರದೋ? ಅದೇ ಪ್ರಕಾರ ಸರ್ವಜೀವರು ನನ್ನಿಂದಲೇ ಆಗಿದ್ದು ಅವು ನನ್ನ ಗುರ್ತು ಹಿಡಿಯುವದಿಲ್ಲವಲ್ಲ! ಇದು ಎಷ್ಟು ಆಶ್ಚರ್ಯವದೆ? ನೋಡು. ॥ ೨೦೧ ॥ ಈ ಸಕಲ ವಿಶ್ವದಲ್ಲಿ ಒಳಗೆ ಹೊರಗೆ ನಾನೇ ತುಂಬಿಕೊಂಡಿದ್ದೇನೆ. ಮತ್ತು ಈ ಜಗತ್ತು ಮದ್ರೂಪವೇ ಇರುತ್ತದೆ. ಆದರೆ ಜೀವರುಗಳ ಕರ್ಮವು ಹ್ಯಾಗೆ ಅಡ್ಡಬಂದಿರುತ್ತದೆಂಬದನ್ನು ನೋಡಿದರೆ, ಅವರು ನನ್ನನ್ನೇ ಮರೆತು ಆ ನಾಸ್ತಿಕರು ನಾನೇ ಇರುವದಿಲ್ಲವೆಂದೆನ್ನುತ್ತಾರೆ. ॥ ೨೦೨ ॥ ಆದರೆ ಮನುಷ್ಯನು ಅಮೃತದ ಬಾವಿಯಲ್ಲಿ ಬಿದ್ದಮೇಲೆ ಅವನು ಹೊರಗೆ ಬರಬೇಕೆಂದು ಪ್ರಯತ್ನಪಡುತ್ತಾನೋ, ಆ ಅಭಾಗಿ ಪುರುಷನಿಗೆ ಏನು ಅನ್ನಬೇಕು? ॥ ೨೦೩ ॥ ಅಯ್ಯಾ! ಕಿರೀಟಿಯೇ! ಒಂದು ತುತ್ತು ಅನ್ನದ ಆಶಾದಿಂದ ಓಡುತ್ತಿರುವ ಕುರುಡನ ಕಾಲಿಗೆ ಚಿಂತಾಮಣಿಯು ತಗಲಿದರೆ ಕಂಣು ಕಾಣದೇ ಅವನು ಅದನ್ನು ಹೇಗೆ ಕಾಲಿನಿಂದ ನೂಕುತ್ತಾನೋ, ॥ ೪ ॥ ಅದರಂತೆ ಯಥಾರ್ಥ ಜ್ಞಾನವು ಪ್ರಾಪ್ತವಾಗಿರದೇ ಇದ್ದರೆ ಕುರುಡನ ಸ್ಥಿತಿಯಂತೆ ಆಗುತ್ತದೆ. ಆದರೆ ಜ್ಞಾನವಿಲ್ಲದೇ ಯಾವ ಯಾವ ಕರ್ಮಗಳನ್ನು ಮಾಡಿದರೂ, ಆ ಎಲ್ಲ ಕರ್ಮಗಳು ನಿರರ್ಥಕವಾಗುತ್ತವೆ. ॥ ೨೦೫ ॥ ಕಣ್ಣಿಲ್ಲದ ಗರುಡ ಪಕ್ಷಿಗೆ ಪಕ್ಕಗಳಿದ್ದರೂ ಅವುಗಳಿಂದ ಎಷ್ಟು ಉಪಯೋಗಬೀಳುವದು ಹೇಳು! ಅದರಂತೆ ಯಥಾರ್ಥ ಜ್ಞಾನದ ಹೊರ್ತು ಸತ್ಕರ್ಮಾದಿಗಳನ್ನು ಮಾಡಿದ ಶ್ರಮವು ವ್ಯರ್ಥವಾಗಿರುವದು. ॥ ೨೦೬ ॥

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಮಶ್ನಂತಿ ದಿವ್ಯಾನ್‌ದಿವಿ ದೇವಭೋಗಾನ್ ॥ ೨೦ ॥**

**[ ತ್ರೈವಿದ್ಯಾ ಮಾಂ ಸೋಮಪಾಃ ಇತಿ ]** ದೇಖ ಪಾ ಗಾ ಕಿರೀಟೀ । ಆಶ್ರಮಧರ್ಮಾಚಿಯಾ ರಾಹಾಟೀ । ವಿಧಿಮಾರ್ಗಾ ಕಸವಟೀ । ಜೇ ಆಪಣಚಿ ಹೋತೀ ॥ ೭ ॥ ಯಜನ ಕರಿತಾ ಕೌತುಕೇ । ತಿಹೀ ವೇದಾಂಚಾ ಮಾಥಾ ತುಕೇ । ಕ್ರಿಯಾ ಫಳೇಸಿ ಉಭೀ ಠಾಕೇ । ಪುಢಾ ಜಯಾ ॥ ೮ ॥ ಐಸೇ ದೀಕ್ಷಿತ ಜೇ ಸೋಮಪ । ಜೇ ಆಪಣಚಿ ಯಜ್ಞಾಚೇ ಸ್ವರೂಪ । ತಿಹೀ ತಯಾ ಪುಣ್ಯಾ

ಚೇನಿ ನಾವೇ ಪಾಪ । ಜೋಡಿಲೇ ದೇಖೇ ॥ ೯ ॥ ಜೇಶ್ರುತಿತ್ರಯಾತೇ ಜಾಣೋನಿ । ಶತವರೀ ಯಜ್ಞ ಕರೂನಿ । ಯಜಿಲಿಯಾ ಮಾತೇ ಚುಕೋನಿ । ಸ್ವರ್ಗಾ ವರಿತೀ । ೧೦ ॥ ಜೈಸೇ ಕಲ್ಪತರೂ ತಳವಟೀ । ಬೈಸೋನಿ ಝೋಳಿಯೇ ದೇತಸೇ ಗಾಂಠೀ । ಮಗ ನಿದೈವ ನಿಘೇ ಕಿರೀಟೀ । ದೈನ್ಯಚಿ ಕರೂ ॥ ೧೧ ॥ ತೈಸೇ ಶತಕ್ರತುಯಜಿಲೇ ಮಾತೇ । ಕೀ ಈಪ್ಸಿತಾತಿ ಸ್ವರ್ಗ ಸುಖಾತೇ । ಆತಾ ಪುಣ್ಯ ಕೀ ಹೇ ನಿರುತೇ । ಪಾಪ ನೋಹೇ ? ॥ ೧೨ ॥ ಮ್ಹಣೋನಿ ಮಜವೀಣ ಪಾವಿಜೇ ಸ್ವರ್ಗ । ತೋ ಅಜ್ಞಾನಾಚಾ ಪುಣ್ಯಮಾರ್ಗ । ಜ್ಞಾನಿಯೇ ತಯಾತೇ ಉಪಸರ್ಗ । ಹಾನಿ ಮ್ಹಣತೀ ॥ ೧೩ ॥ ಯೇರ್ಹವೀ ತರೀ ನರಕೀಂಚೇ ದುಃಖ । ಪಾವೋನಿ ಸ್ವರ್ಗಾನಾಮುಕೀ ಸುಖ । ವಾಂಚೂನಿ ನಿತ್ಯಾನಂದ ಗಾ ನಿರ್ದೋಖ । ತೇ ಸ್ವರೂಪ ಮಾಝೇ ॥ ೧೪ ॥ ಮಜ ಯೇತಾ ಪೈ ಸುಭಟಾ । ಯಾದ್ವಿವಿಧಾಗಾ ಅವ್ಹಾಂಟಾ । ಸ್ವರ್ಗ ನರಕ ಯಾ ವಾಟಾ । ಚೋರಾಂಚಿಯಾ ॥ ೧೫ ॥ ಸ್ವರ್ಗಾ ಪುಣ್ಯಾತ್ಮಕೇ ಪಾಪೇ ಯೇಇಜೇ । ಪಾಪಾತ್ಮಕೇ ಪಾಪೇ ನರಕಾ ಜಾಇಜೇ । ಮಗ ಮಾತೇ ಜೇಣೇ ಪಾವಿಜೇ । ತೇ ಶುದ್ಧ ಪುಣ್ಯ ॥ ೧೬ ॥ ಆಣಿ ಮಜಚಿ ಮಾಜೀ ಅಸತಾ । ಜೇಣೇ ಮೀ ದುರ್ಹಾವೇ ಪಾಂಡುಸುತಾ । ತೇ ಪುಣ್ಯ ಐಸೇ ಮ್ಹಣತಾ । ಜೀಭ ನ ತುಟೇ ಕಾಈ ॥ ೧೭ ॥ ಪರೀ ಹೇ ಅಸೋ ಆತಾ ಪ್ರಸ್ತುತ । ಐಕೇ ಯಾಪರೀ ತೇ ದೀಕ್ಷಿತ । ಯಜೂನಿ ಮಾತೇ ಯಾಚಿತ । ಸ್ವರ್ಗ ಭೋಗ ॥ ೧೮ ॥ ಮಗ ಮೀನ ಪವಿಜೇ ಐಸೇ । ಜೇ ಪಾಪರೂಪ ಪುಣ್ಯ ಅಸೇ । ತೇಣೇ ಲಾಧಲೇನಿ ಸೌರಸೇ । ಸ್ವರ್ಗಾ ಯೇತೀ ॥ ೧೯ ॥ ಜೇಥ ಅಮರತ್ವ ಹೇ ಸಿಂಹಾಸನ । ಐರಾವತಾ ಸಾರಖೇ ವಾಹನ । ರಾಜಧಾನೀ ಭುವನ । ಅಮರಾವತೀ ॥೩೨೦॥ ಜೇಥ ಮಹಾಸಿದ್ಧೀಂಚೀ ಭಾಂಡಾರೇ । ಅಮೃತಾಚೇ ಕೋಠಾರೇ । ಜಿಯೇ ಗಾವೀ ಖಿಲ್ಲಾರೇ । ಕಾಮಧೇನೂಂಚೀ ॥ ೨೧ ॥ ಜೇಥ ವೋಳಗೇ ದೇವ ಪಾಇಕಾ । ಸ್ಯೆಂಧ ಚಿಂತಾಮಣೀಚಿಯಾ ಭೂಮಿಕಾ । ವಿನೋದವನ ವಾಟಿಕಾ । ಸುರತರೂಂಚಿಯಾ ॥ ೨೨ ॥ ಗಂಧರ್ವ ಗಾತ ಗಾಣೇ । ಜೇಥ ರಂಭೇ ಐಶಿಯಾ ನಾಚಣೇ । ಉರ್ವಶೀ ಮುಖ್ಯ ವಿಲಾಸಿನೀ । ಅಂತೌರಿಯಾ ॥ ೨೩ ॥ ಮದನ ವೋಳಗೇ ಶೇಜಾರೇ । ಜೇಥ ಚಂದ್ರ ಶಿಂಪೇ ಸಾಂಬರೇ । ಪವನಾ ಐಸೇ ಮ್ಹಣಿಯಾರೇ ಧಾವಣೇ ಜೇಥ ॥ ೨೪ ॥ ಪೈ ಬೃಹಸ್ಪತೀ ಮುಖ್ಯ ಆಪಣ । ಐಸೇ ಸ್ವಸ್ತಿ ಶ್ರೀಯೇಚೇ ಬ್ರಾಹ್ಮಣ । ಭಾಟ ವೇಚೇ ಸುರಗಣ । ಬಹುವಸ ಜೇಥೇ ॥ ೨೫ ॥ ಲೋಕಪಾಳ ರಾಂಗೇಚೇ । ರಾವುತ ಜಿಯೇ ಪದವೀ ಚೇ । ಉಚ್ಚೈಃಶ್ರವಾ ಖಾಂಚೇ । ಖೋಲಣೇಯೇ ॥ ೨೬ ॥ ಹೇ ಅಸೋ ಬಹು ಐಸೇ । ಭೋಗ ಇಂದ್ರಸುಖಾ ಸರಿಸೇ । ತೇ ಭೋಗೀಜತೀ ಜವ ಅಸೇ । ಪುಣ್ಯ ಲೇಶ ॥ ೨೭ ॥

**ಅರ್ಥ**— ಎಲೋ ಅರ್ಜುನನೇ ! (ಯಜ್ಞಕರ್ತರು) ವರ್ಣವಿಹಿತ ಧರ್ಮದ ಆಚರಣ ಮಾಡಿ ಅವರು ತಾವೇ ವಿಹಿತ ಮಾರ್ಗದರ್ಶಕರಾಗಿರುತ್ತಾರೆ. ( ವೇದದಲ್ಲಿ ಹೇಳಿದಂತೆ ವಿಧಿಯುಕ್ತ ಆಚರಣ ಮಾಡುತ್ತಾರೆ.) ॥ ೩೦೭ ॥ ಅವರು ಸಹಜವೇ ಲೀಲೆಯಿಂದ ಯಜ್ಞಮಾಡಲು ಉದ್ಯುಕ್ತರಾದರೆ, ಮೂರೂ ವೇದಗಳು ಸಂತೋಷದಿಂದ ತಲೆ ದೂಗುತ್ತವೆ. ಆ ಯಜ್ಞಕ್ರಿಯೆಗಳು ತಮ್ಮ ಫಲ ಸಹಿತವಾಗಿ ಮೂರ್ತಿಮಂತ ಮುಂದೆ ಬಂದು ನಿಲ್ಲುತ್ತವೆ. ॥ ೩೦೮ ॥ ಈ ಪ್ರಕಾರಾ ಯಜ್ಞದಲ್ಲಿ ಸೋಮಪಾನ ಮಾಡುವಂಥ ಯಜ್ಞಕರ್ತ ( ದೀಕ್ಷಿತ )ರು ತಾವೇ ಯಜ್ಞ ಸ್ವರೂಪರಾಗಿರುತ್ತಾರೆ. ಅವರು ಆ ಪುಣ್ಯದ ಹೆಸರಿನಿಂದ ಪಾತಕವನ್ನು ಸಂಗ್ರಹ ಮಾಡಿಕೊಂಡಿರುವರೆಂದು ತಿಳಿ. ॥ ೩೦೯ ॥ ಯಜ್ಞ ಮಾಡಿಯೂ ಪಾಪದ ಸಂಗ್ರಹವನ್ನು ಹೇಗೆ ಮಾಡಿಕೊಂಡಿರುವರು ಎಂದು ಕೇಳಬಹುದು. ಆದರೆ ಅವರು ಋಗ್ವೇದ, ಯಜುರ್ವೇದ, ಸಾಮವೇದ, ಮೂರು ವೇದಗಳನ್ನು ತಿಳದವರಾಗಿ ನೂರಾರು ಯಜ್ಞದಿಂದ ನನ್ನ ಯಜನ ಮಾಡುತ್ತಾರೆ. ಆದರೆ ನನ್ನ ಪ್ರಾಪ್ತಿಯ ಅಪೇಕ್ಷೆಯನ್ನು ಬಿಟ್ಟು ಕೊಟ್ಟು ಕ್ಷುದ್ರವಾದ

ಸ್ವರ್ಗಪ್ರಾಪ್ತಿಯ ಅಪೇಕ್ಷಾ ಮಾಡುತ್ತಾರೆ. ॥ ೧೦ ॥ ಅರ್ಜುನನೇ ! ಯಾವನಾದರೊಬ್ಬ ದುರ್ದೈವಿ ಮನುಷ್ಯನು ಕಲ್ಪತರು ವೃಕ್ಷದ ಬುಡದಲ್ಲಿ-ಕುಳಿತು ಜೋಳಿಗೆಯ ಪದರಿಗೆ ಗಂಟು ಹಾಕಿ ಭಿಕ್ಷೆ ಬೇಡಬೇಕೆಂದು ಹೊರಡುತ್ತಾನೆ. ॥ ೩೧೧ ॥ ಅದೇ ಪ್ರಕಾರಾ ನೂರಾರು ಯಜ್ಞಗಳಿಂದ ನನ್ನ ಯಜನ ಮಾಡಿ ಅವರು ಸ್ವರ್ಗ ಸುಖದ ಇಚ್ಛಾ ಮಾಡುತ್ತಾರೆ. ಆದರೆ ಇದು ಪುಣ್ಯವಿರದೇ ನಿಜವಾಗಿ ನೋಡಿದರೆ ಪಾಪವಿರುವದಿಲ್ಲೇನು ? ॥ ೩೧೨ ॥ ಆದುದರಿಂದ ನನ್ನ ಪ್ರಾಪ್ತಿಯ ಇಚ್ಛೆಯನ್ನು ಬಿಟ್ಟು ಯಾರು ಸ್ವರ್ಗಕ್ಕೆ ಹೋಗುತ್ತಾರೆ, ಅದಕ್ಕೆ ಅಜ್ಞಾನಿ ಜನರು ಪುಣ್ಯ ಮಾರ್ಗವೆಂದು ಅನಬಹುದು, ಆದರೆ ಜ್ಞಾನಿ ಜನರು ಮಾತ್ರ ಈ ( ದಿಕ್ಷಿತರಿಗೆ ) ಜನನ ಮರಣ ರೂಪಿ ಸಂಕಟದಲ್ಲಿ ಬಿದ್ದು ಅವರ ಹಾನಿ ಆಗಿರುವದೆಂದು ಅನ್ನುತ್ತಾರೆ. ॥ ೩೧೩ ॥ ವಿಚಾರ ಮಾಡಿದರೆ ನರಕದೊಳಗಿನ ದುಃಖದ ಕಡೆಗೆ ದ್ರುಷ್ಟಿ ಕೊಟ್ಟು ಸ್ವರ್ಗಕ್ಕೆ ಸುಖವೆಂಬ ಹೆಸರು ಉಂಟಾಗಿರುವದು. ನಿಜವಾಗಿ ನೋಡಿದರೆ ಅರ್ಜುನನೇ ! ನಿರ್ದೋಷವಾದ ತ್ರಿಕಾಲಾಬಾಧಿತ ಆನಂದವು ಅದು ನನ್ನ ಸ್ವರೂಪವಾಗಿರುತ್ತವೆ. ॥ ೩೧೪ ॥ ಎಲೋ ಮಹಾವೀರಅರ್ಜುನನೇ ! ನನ್ನ ಪ್ರಾಪ್ತಿಯಾಗಲು ಸ್ವರ್ಗ, ಮತ್ತು ನರಕ, ವೆಂಬ ಎರಡು ಅಡ್ಡ ಹಾದಿಗಳು ಇದ್ದು ಇವುಗಳು ಕಳ್ಳರ ಹಾದಿಗಳಿರುತ್ತವೆ. ॥ ೩೧೫ ॥ ಪುಣ್ಯ ರೂಪ ಪಾಪದಿಂದ ( ಬಹಿರಂಗವಾಗಿ ನೋಡಲಿಕ್ಕೆ ಪುಣ್ಯದಂತೆ ತೋರಿದರೂ ಒಳಗೆ ಸಂಪೂರ್ಣ ಪಾಪವೇ ತುಂಬಿಕೊಂಡಿರುತ್ತದೆ. ) ಸ್ವರ್ಗಪ್ರಾಪ್ತಿಯಾಗುತ್ತದೆ. ಮತ್ತು ನರಕ ಪ್ರಾಪ್ತಿಯು ಪಾಪಾತ್ಮಕ ಪಾಪದಿಂದ ದೊರಕುತ್ತದೆ. ಆದರೆ ಯಾವ ಯೋಗದಿಂದ ನನ್ನ ಪ್ರಾಪ್ತಿಯಾಗುತ್ತದೆ ಅದು ಶುದ್ಧ ಪುಣ್ಯವೆಂದು ನಂಬು. ॥ ೩೧೬ ॥ ಪಂಡುನಂದನನೇ ! ನನ್ನ ಅಂಶಭೂತವಾದ ಸರ್ವ ಪ್ರಾಣಿಗಳು ಯಾವ ಕರ್ಮ ಮಾಡುವದರಿಂದ ನಾನು ದೂರಾಗುತ್ತೇನೆ, ಆ ಕ್ರುತ್ಯಕ್ಕೆ ಪುಣ್ಯವೆಂದು ಅನಬೇಕಾದರೆ ನಾಲಿಗೆಯು ಕತ್ತರಿಸಿ ಬೀಳಲಿಕ್ಕಿಲ್ಲೇನು ? ॥ ೩೧೭ ॥ ಆದರೆ ಈ ಪ್ರಸಂಗದಲ್ಲಿ ಅದು ಹಾಗೇ ಇರಲಿ. ಅರ್ಜುನನೇ ಕೇಳು ! ಈ ಪ್ರಕಾರಾ ಆ ದೀಕ್ಷಿತರು ನನ್ನ ಯಜನ ಮಾಡಿ ಸ್ವರ್ಗ ಸುಖೋಪಭೋಗದ ಯಾಚನಾ ಮಾಡುತ್ತಾರೆ. ॥ ೩೧೮ ॥ ನಾನು ಯಾವ ಯೋಗದಿಂದ ದೊರಕುವದಿಲ್ಲ, ಇಂಥ ಪಾಪರೂಪಿ ಪುಣ್ಯವನ್ನು ಪ್ರಾಪ್ತಿ ಮಾಡಿಕೊಂಡು ಉತ್ಸಾಹದಿಂದ ಸ್ವರ್ಗಕ್ಕೆ ಹೋಗುತ್ತಾರೆ. ॥ ೩೧೯ ॥ ಎಲ್ಲಿ ಅಮರತ್ವವೇ ಸಿಂಹಾಸನವು, ಐರಾವತದಂಥ ಆನಿಯು, ಅಮರಾವತಿ ಇದೇ ರಾಜಧಾನಿಯ ಶಹರವು ॥ ೩೨೦ ॥ ಎಲ್ಲಿ ಅಷ್ಟ ಮಹಾಸಿದ್ಧಿಗಳ ಭಾಂಡಾರಗಳು, ಅಮೃತದ ಹೊಂಡಗಳು, ಮತ್ತು ಯಾವ ಗ್ರಾಮದಲ್ಲಿ ಕಾಮಧೇನುವಿನ ಹಿಂಡುಗಳಿರುತ್ತವೆಯೋ ! ॥ ೩೨೧ ॥ ಎಲ್ಲಿ ದೇವತೆಗಳ ಸಮುದಾಯವು ಕಿಂಕರತ್ವವನ್ನು ವಹಿಸಿ ಸೇವೆ ಮಾಡುತ್ತಿರುವರೋ, ಚಿಂತಾಮಣಿ ಎಂಬ ಹೆಸರಿನ ರತ್ನಗಳಿಂದ ತುಂಬಿದ ಭೂಮಿಯಿರುವದೋ, ಮತ್ತು ಎಲ್ಲಿ ವಿನೋದಾರ್ಥವಾಗಿ ಮಾಡಿದಂಥ ತೋಟಗಳು ಕಲ್ಪವೃಕ್ಷಗಳಿಂದ ಯುಕ್ತವಾಗಿರುವವೋ, ॥ ೩೨೨ ॥ ಎಲ್ಲಿ ಗಂಧರ್ವರೇ ಗಾಯಕರಾಗಿರುವರೋ, ರಂಭೆಯಂಥ ಅಪ್ಸರಾ ಸ್ತ್ರೀಯರು ನರ್ತನ ಗೈಯುತ್ತಿರುವರೋ, ಮತ್ತು ವಿಲಾಸಿನಿ ಸ್ತ್ರೀಯರಲ್ಲಿ ಉರ್ವಶಿಯು ಮುಖ್ಯವಾಗಿರುವಳೋ, ॥ ೩೨೩ ॥ ಯಾವ ಸ್ಥಾನದ ಶಯ್ಯಾಗ್ರುಹದಲ್ಲಿ ಮದನನು ಕಿಂಕರನಾಗಿ ಸೇವಾ ಮಾಡುತ್ತಿರುವನೋ, ಚಂದ್ರನು ( ತನ್ನ ಅಮೃತ ಕಿರಣದಿಂದ ) ಷಡ್ಸಂಮಾರ್ಜನ ಮಾಡುತ್ತಿರುವನೋ, ಅಲ್ಲಿ ವಾಯುವೇಗ ಸಮಾನರಾದ ಹೇಳಿದ ಕೆಲಸವನ್ನು ತತ್ಪರದಿಂದ ಮಾಡುವ ಚಪಲ ಸೇವಕರಿರುವರು. ॥ ೩೨೪ ॥ ಎಲ್ಲಿ ಇಂದ್ರನಿಗೆ ಆಶೀರ್ವಾದ ಕೊಡುವವರಲ್ಲ ಬ್ರಹಸ್ಪತಿಯಂಥ ಮುಖ್ಯ ಬ್ರಾಹ್ಮಣನಿರುವನೋ, ಮತ್ತು ಸಾವಿರಾರು ಸ್ತುತಿ ಪಾಠಕರು ದೇವತೆಗಳೇ ಆಗಿರುವರೋ ॥ ೩೨೫ ॥ ಯಾರ ಸುತ್ತುಮುತ್ತಲೆ ಲೋಕಪಾಲಕರಂಥ ರಾಜರು ನಡಿಯುತ್ತಿದ್ದು ಜಯಪ್ರದವನ್ನು ದೊರಕಿಸಿದ ಪವವಿಧರರು ಸರದಾರರು ಇರುವರೋ, ಅಲ್ಲಿ ಉಚ್ಛೈಃಶ್ರವವೆಂಬ ಹೆಸರಿನ ಶ್ರೇಷ್ಠ ಕೊತವಾಲ ಕುದರೆಯು ಇರುವದು. ॥ ೩೨೬ ॥ ಇದಂತೂ ಇರಲಿ, ಎಲ್ಲಿಯವರೆಗೆ ಅವರಲ್ಲಿ ಪುಣ್ಯದ ಅಂಶವು ಅದೆ. ಅಲ್ಲೀವರೆಗೆ ಈ ಪ್ರಕಾರದ ಇಂದ್ರ ಪದವಿಯ ಸುಖೋಪಭೋಗವನ್ನು ಅವರು ಭೋಗಿಸುತ್ತಾರೆ. ॥ ೩೨೭ ॥

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ॥**
**ಏವಂ ತ್ರಯೀಧರ್ಮಮನುಪ್ರಪನ್ನಾ ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

**[ತೇ ತಮಿತಿ]** ಮಗ ತಯಾ ಪುಣ್ಯಾಚೀ ಪಾಉಲೀ ಸರೇ । ಸವೇಂಚಿ ಇಂದ್ರಪಣಾಚೀ ಉಟೇ ಉತರೇ । ಆಣಿ ಯೇಊಲಾಗತೀ ಮಾಘಾರೇ । ಮೃತ್ಯುಲೋಕಾ ॥ ೨೮ ॥ ಜೈಸಾ ವೇಶ್ಯಾಭೋಗೀ ಕವಡಾ ವೇಂಚೇ । ಮಗ ದಾರಹೀಚೇಪೂ ನ ಯೇ ತಿಯೇಚೇ । ತೈಸೇ ಲಾಜಿರವಾಣೇ ದೀಕ್ಷಿತಾಂಚೇ । ಕಾಯ ಸಾಂಗೋ ॥ ೨೯ ॥ ಏವಂ ಥಿತಿಯಾ ಮಾತೇ ಚುಕಲೇ । ಜಿಹೀ ಪುಣ್ಯೇ ಸ್ವರ್ಗ ಕಾಮಿಲೇ । ತಯಾ ಅಮರ ಪಣ ತೇ ವಾವೋಜಾಲೇ । ಆಂತೀ ಮೃತ್ಯುಲೋಕ ॥ ೩೦ ॥ ಮಾತೇಚಿಯಾ ಉದರ ಕುಹರೀ । ಪಚೂನಿ ವಿಷ್ಠೇಚ್ಯಾ ದಾಥರೀ । ಉಕಡೂನಿ ನವಮಾಸವರೀ । ಜನ್ಮಜನ್ಮೋನಿ ಮರತೀ ॥ ೩೧ ॥ ಅಗಾ ಸ್ವಪ್ನೀ ನಿಧಾನ ಫಾವೇ । ಪರೀ ಚೇಇಲಿಯಾ ಹಾರಪೇ ಆಘವೇ । ತೈಸೇ ಸ್ವರ್ಗ ಸುಖ ಜಾಣಾವೇ । ವೇದಜ್ಞಾಚೇ ॥ ೩೨ ॥ ಅರ್ಜುನಾ ವೇದವಿದ್ ಜರ್ಹಿ ಜಾಹಲಾ । ತರೀ ಮಾತೇ ನೇಣತಾ ವಾಯಾ ಗೇಲಾ । ಕಣ ಸಾಂಡೂನಿ ಉಪಣಿಲಾ । ಕೋಂಡಾಜೈಸಾ ॥ ೩೩ ॥ ಮ್ಹಣವೂನಿ ಮಜ ಏಕೇವಿಣ । ಹೇ ತ್ರಯೀಧರ್ಮ ಅಕಾರಣ । ಆತಾ ಮಾತೇ ಜಾಣೋನಿ ಕಾಹೀ ನೇಣ । ತೂ ಸುಖಿಯಾ ಹೋಸೀ ॥ ೩೪ ॥

**ಅರ್ಥ—** ಆ ನೋಲೆ ಆ ಪುಣ್ಯಪ್ರಭಾವವು ತೀರಲು ಆ ಕ್ಷಣದಲ್ಲಿ ಇಂದ್ರಪದದ ಐಶ್ವರ್ಯದ ಭೋಗದಿಂದ ಮುಕ್ತರಾಗಿ ಅವರು ಮೃತ್ಯುಲೋಕದಲ್ಲಿ ತಿರುಗಿಬರುತ್ತಾರೆ. ॥ ೨೮ ॥ ಯಾವ ಪ್ರಕಾರಾ ವೇಶ್ಯಾಸ್ತ್ರೀಯಳ ದೆಶೆಯಿಂದ ಒಬ್ಬಾನೊಬ್ಬನು ತನ್ನ ಸರ್ವಸ್ವವನ್ನು ಸಂಪತ್ತುಸಹಿತವಾಗಿ ಕಳಕೊಂಡ ನಂತರ ಅವನಿಗೆ ಆ ಸ್ತ್ರೀಯಳ ಮನೆಯ ಬಾಗಿಲಿಗೆ ಸಹ ಹಸ್ತಸ್ಪರ್ಶಮಾಡುವಷ್ಟು ಅಧಿಕಾರ ಉಳಿಯುವದಿಲ್ಲ. ಅಂದಬಳಿಕ ಆ ಸ್ತ್ರೀಯಳ ಅಂಗಸ್ಪರ್ಶಮಾಡುವ ದಂತೂ ದೂರೇ ಉಳಿಯಿತು. ಅದರಂತೆ ಈ ಯಜ್ಞಕರ್ತನ ಸ್ಥಿತಿಯು ಬಹಳೇ ಲಜ್ಜಾಸ್ಪದವಾಗಿರುವದು. ಅದರ ವರ್ಣನವನ್ನು ನಿನಗೆ ನಾನು ಏನು ಹೇಳಲಿ? ॥ ೨೯ ॥ ಇದೇ ಪ್ರಕಾರಾ ಯಾವನು ಪುಣ್ಯಬಲದಿಂದ ಸ್ವರ್ಗದ ಅಪೇಕ್ಷೆಯನ್ನು ಮಾಡುವನು ಅವನು ನಿತ್ಯ ಹತ್ತರವೇ ಇರುವ ನನ್ನಿಂದ ದೂರಾಗಿರುವನು. ಮತ್ತು ಅವನ ಅಮರತ್ವವು ವ್ಯರ್ಥವಾಗಿ ಹೋಗುವದು. ಮತ್ತು ಅವನಿಗೆ ಮೊದಲಿನ ಮೃತ್ಯುಲೋಕವೇ ಮರಳಿ ಬರುತ್ತದೆ. ॥ ೩೦ ॥ ಆ ನೋಲೆ ತಾಯಿಯ ಉದರರೂಪಗುಹೆಯಲ್ಲಿ ನರಕದ ಥರದಲ್ಲಿ ತೊಳಲಿ, ಒಂಬತ್ತು ತಿಂಗಳ ವರೆಗೆ ಬೆಂದು ಪಕ್ವದಶೆಗೆ ಬರುತ್ತಾನೆ. ಮತ್ತು ತಿರುತಿರುಗಿ ಜನ್ಮಕ್ಕೆ ಬಂದು ಮರಣಹೊಂದುತ್ತಾನೆ. ॥ ೩೧ ॥ ಎಲೋ, ಸ್ವಪ್ನದಲ್ಲಿ ಪ್ರಾಪ್ತವಾದ ಧನವು ಹೇಗೆ ಜಾಗ್ರತವಾದ ನೋಲೆ ಸರ್ವವೂ ಇಲ್ಲದಂತಾಗುವಂತೆ ಆ ಯಜ್ಞಕರ್ತನ ಸುಖವು ಇರುತ್ತದೆಂದು ತಿಳಿ. ॥ ೩೨ ॥ ಅರ್ಜುನನೇ! ಯಾವ ಪ್ರಕಾರಾ ಧಾನ್ಯವನ್ನು ತೆಗಿದುಕೊಂಡ ಬಳಿಕ ಮಿಕ್ಕುಳಿದ ತೌಡು ಕುಟ್ಟುವದರಿಂದ ಹ್ಯಾಗೆ ವ್ಯರ್ಥವಾಗುತ್ತದೋ, ಆ ಪ್ರಕಾರಾ ವೇದಾರ್ಥಜ್ಞಾನವಿದ್ವಾಂಸ್ಯಾದರೂ ನನ್ನನ್ನು ತಿಳಕೊಳ್ಳದಹೊರ್ತು ಅವನ ಜನ್ಮವು ವ್ಯರ್ಥವಾಗಿರುವದು. ॥ ೩೩ ॥ ನನ್ನ ಒಬ್ಬನ ಹೊರ್ತು ಈ ವೇದೋಕ್ತವಾದ ಮೂರು ಧರ್ಮಗಳು ವ್ಯರ್ಥವಾಗಿರುತ್ತವೆ. ಆದುದರಿಂದ ನನ್ನನ್ನೇ ತಿಳಕೊಳ್ಳುವವನಾಗು. ಎರಡನೇ ಯಾವದನ್ನೂ ನಿನ್ನ ಮನಸಿನಲ್ಲಿ ತರಬೇಡ ಅಂದರೆ ನೀನು ಸುಖಿಯಾಗುವಿ. ॥ ೩೪ ॥

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ೨೨ ॥**

**[ಅನನ್ಯಾಶ್ಚಿಂತಯಂತೋ ಮಾಮಿತಿ]** ಪೈ ಸರ್ವಭಾವೇಸೀ ಉಖಿತೇ । ಜೇ ವೋಪಿಲೇ ಮಜ ಚಿತ್ತೇ । ಜೈಸಾಗರ್ಭಗೋಳ ಉದ್ಯಮಾತೇ । ಕೋಣ್ಹಾಹೀ ನೇಣೇ ॥ ೩೫ ॥ ತೆಸ್ಯಾ ಮೀ

ವಾಂಚೂನಿ ಕಾಹೀ । ಆಣೀಕ ಗೋಮಟೇಂಚಿ ನಾಹೀ । ಮಜಚಿ ನಾಮ ಪಾಹೀ । ಜಿಣೇಯಾ ಠೇವಿಲೇ ॥ ೩೬ ॥ ಏಸೇ ಅನನ್ಯಗತಿಕೇ ಚಿತ್ತೇ । ಚಿಂತಿತಸಾಂತೇ ಮಾತೇ । ಜೇ ಉಪಾಸಿತೀ ತಯಾಂಕೇ । ಮೀಚಿ ಸೇವೀ ॥ ೩೭ ॥ ತೇ ಏಕವಟೂನಿ ಜಿಯೇ ಕ್ಷಣೀ । ಅನುಸರಲೇ ಗಾ ಮಾಝಿಯೇ ವಾಹಣೀ । ತೆವ್ಹಾಂಚಿ ತಯಾಂಚೀ ಚಿಂತವಣೀ । ಮಜಚಿ ಪಡಲೀ ॥ ೩೮ ॥ ಮಗ ತಿಹೀ ಜೇ ಜೇ ಕರಾವೇ । ತೇ ಮಜಚಿ ಪಡಲೇ ಆಘವೇ । ಜೈಸೀ ಅಜಾತಪಕ್ಷಾಚೇನಿ ಜೀವೇ । ಪಕ್ಷಿಣೀ ಜಿಯೇ ॥ ೩೯ ॥ ಆಪುಲೀ ತಹಾನ ಭೂಕ ನೇಣೇ । ತಾನ್ಹಯಾ ನಿಕೇ ತೇ ಮಾವುಲೀಸಚಿ ಕರಣೇ । ತೈಸೇ ಅನುಸರಲೇ ಮಜ ಪ್ರಾಣೇ । ತಯಾಂಚೇ ಸರ್ವ ಮೀ ಕರೀ ॥ ೩೪೦ ॥ ತಯಾ ಮಾಝಿಯಾ ಸಾಯುಜ್ಯಾಚೀ ಚಾಡ । ತರೀ ತೇಚಿ ಪುರವೀ ಕೋಡ । ಕಾ ಸೇವಾ ಮ್ಹಣತೀ ತರೀ ಆಡ । ಪ್ರೇಮ ಸುಯೇ ॥ ೪೧ ॥ ಐಸಾ ಮನೀ ಜೋ ಜೋ ಧರಿತೀ ಭಾವೋ । ತೋ ಪುಢಾ ಪುಢಾ ಲಾಗೇ ತಯಾ ದೇವೋ । ಆಣಿ ದಿಧಲಿಯಾಚಾ ನಿರ್ವಾಹೋ । ತೋಹೀ ಮೀಚಿ ಕರೀ ॥ ೪೨ ॥ ಹಾ ಯೋಗಕ್ಷೇಮ ಆಘವಾ । ತಯಾಂಚಾ ಮಜಚಿ ಪಡಿಲಾ ಪಾಂಡವಾ । ಜಯಾಂಚಿಯಾ ಸರ್ವಭಾವಾ । ಆಶ್ರಯ ಮೀ ॥ ೪೩ ॥

**ಅರ್ಥ—** ಆದರೆ ಯಾವನು ಸರ್ವಭಾವದಿಂದ ನನ್ನ ಅನನ್ಯಭಕ್ತಿಯ ಸಲುವಾಗಿ ತನ್ನ ಚಿತ್ತವೃತ್ತಿಯನ್ನು ನನ್ನಲ್ಲಿ ಮಾರಿಕೊಂಡಿದ್ದಾನೆ ಮತ್ತು ಯಾವ ಪ್ರಕಾರಾ ಗರ್ಭದೊಳಗಿನ ಕೂಸು ಯಾವ ಉದ್ಯೋಗಮಾಡುವದನ್ನೂ ಅದು ತಿಳಿಯುವದಿಲ್ಲವೋ ॥ ೩೩೫ ॥ ಅದೇ ಪ್ರಕಾರಾ ಯಾವನಿಗೆ ನನ್ನನ್ನು ಬಿಟ್ಟು ಅನ್ಯ ಯಾವದೂ ಉತ್ತಮವೆಂದು ಕಾಣುವದಿಲ್ಲ. ಅವನು ಭಗವತ್ಕಟಾಕ್ಷವನ್ನೇ ಧಾರಕವಾಗಿ ನಂಬಿ ನನ್ನ ಪ್ರಾಪ್ತಿಯ ದೆಶೆಯಿಂದಲೇ ತನ್ನ ಜೀವವನ್ನಿಟ್ಟಿರುತ್ತಾನೆ. ॥ ೩೩೬ ॥ ಈ ಪ್ರಕಾರಾ ಅನನ್ಯಭಕ್ತನು (ಚಾತಕನಿಷ್ಠೆಯಿಂದ) ಅಂತಃಕರಣಪೂರ್ವಕ ಚಿಂತನ ಮಾಡಿ ನನ್ನ ಸೇವಾಮಾಡುತ್ತಾನೋ ಅವನ ಸೇವೆಯನ್ನು ನಾನೇ ಮಾಡುತ್ತೇನೆ. ॥ ೩೩೭ ॥ ಅವನು ಐಕ್ಯತೆಯನ್ನು ಹೊಂದಿಯೂ ನನ್ನ ಭಜನೆಯಲ್ಲಿಯೇ ನಿರತನಾಗಿರುವದರಿಂದ ಅವನ ಚಿಂತೆಯು ನನಗೆ ಬಿದ್ದಿರುವದು. ॥ ೩೩೮ ॥ ಆ ಮೇಲೆ ಅವನು ಏನೇನು ಮಾಡುವದನ್ನು ಮನಸ್ಸಿನಲ್ಲಿ ತರುತ್ತಾನೋ ಆ ಸರ್ವ ಕೆಲಸಗಳನ್ನು ನಾನೇ ಮಾಡಬೇಕಾಗುತ್ತದೆ. ಯಾವ ಪ್ರಕಾರಾ ಪಕ್ಕವು ಮೂಡದೇ ಇದ್ದ ಪಕ್ಷಿಯು ಜೀವನದ ದೆಶೆಯಿಂದ ಅದರ ತಾಯಿಯು ಹೇಗೆ ಯಾವಾಗಲೂ ಪ್ರಯತ್ನಮಾಡುತ್ತಿರುವದೋ ॥ ೩೩೯ ॥ ಇಲ್ಲವೇ ತನ್ನ ಹಸಿವೆ ನೀರಡಿಕೆಗಳ ಪರಿವೆ ಇಲ್ಲದೇ ತನ್ನ ಸಣ್ಣ ಪ್ರೀತಿಯ ಮಗುವಿಗೆ ಯಾವದು ಸುಖಕರವಾಗಿರುವದೋ ಅದನ್ನೇ ತಾಯಿಗೆ ಮಾಡಬೇಕಾಗುತ್ತದೆ. ಅದೇ ಪ್ರಕಾರಾ ಯಾವನು ಅಂತಃಕರಣಪೂರ್ವಕ ಸರ್ವ ಭಾವವನ್ನು ನನ್ನ ಮೇಲೆ ಇಟ್ಟಿದ್ದಾನೆ ಅವನ ಸರ್ವ ಮನೋಬಯಕೆಗಳನ್ನು ನಾನೇ ಪೂರೈಸುತ್ತೇನೆ. ॥ ೩೪೦ ॥ ಅವನಿಗೆ ಸಾಯುಜ್ಯಮುಕ್ತಿ ದೊರಕಬೇಕೆಂದು ಇಚ್ಛೆಯಾದರೆ ನಾನು ಅವನ ಅಪೇಕ್ಷೆಯನ್ನು ಪೂರ್ಣ ಮಾಡಿಕೊಡುತ್ತೇನೆ. ಮತ್ತು ಅವನು ನಂನ ಸೇವಕನಾಗಿ ಸೇವೆಯನ್ನೇ ಮಾಡಬೇಕೆಂದು ಅನ್ನುತ್ತಿದ್ದರೆ ಅವನಲ್ಲಿ ಮತ್ತು ನನ್ನಲ್ಲಿ ಪ್ರೇಮಭಾವನನ್ನುಂಟುಮಾಡುತ್ತೇನೆ. ॥ ೩೪೧ ॥ ಈ ಪ್ರಕಾರಾ ಅವರು ತಮ್ಮ ಮನಸಿನಲ್ಲಿ ಯಾವ ಯಾವ ಇಚ್ಛೆಯನ್ನು ಮಾಡುತ್ತಾರೆ ಆ ಎಲ್ಲ ಮನೋಬಯಕೆಗಳನ್ನು ನಾನು ಮೇಲಿಂದಮೇಲೆ ಪೂರೈಸಬೇಕಾಗುತ್ತದೆ. ಮತ್ತು ಯಾವದನ್ನು ನಾನು ( ಅನುಗ್ರಹಿಸಿ ) ಕೊಟ್ಟಿರುವೆನು ಅದರ ಸಂರಕ್ಷಣೆಯನ್ನು ಸಹಾ ನಾನೇ ಮಾಡುತ್ತೇನೆ. ॥ ೩೪೨ ॥ ಎಲೋ ಪಾಂಡವನೇ ! ಯಾವನಲ್ಲಿ ಸರ್ವಭಕ್ತಿಯುಕ್ತಪ್ರೇಮವು ನನ್ನಲ್ಲಿಯೇ ನಟ್ಟಮನಸ್ಸುಳ್ಳದ್ದಾಗಿರುವದೋ, ಅವರ ಯೋಗಕ್ಷೇಮದ ಭಾರವು ನನ್ನ ಮೇಲೆಯೇಬೀಳುತ್ತದೆ. ॥೩೪೩॥

**ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥ ೨೩ ॥**

[ **ಯೇಽಪ್ಯನ್ಯದೇವತಾಭಕ್ತಾ ಇತಿ** ] ಆತಾ ಆಣಿಕಹಿ ಸಂಪ್ರದಾಯೇ । ಪರೀ ಮಾತೇ ನೇಣತೀ ಸಮವಾಯೇ । ಜೇ ಅಗ್ನಿ ಇಂದ್ರ ಸೂರ್ಯ ಸೋಮಾಯೇ । ಮ್ಹಣವುನಿ ಯಜಿತೀ ॥೩೪೪॥

ತೇ ಹೀ ಕೀರ ಮಾತೇಚಿಹೋಯೇ । ಕಾ ಜೇ ಹೇ ಆಘವೇ ಮೀಚಿ ಆಹೇ । ಪರೀ ತೇ ಭಜತೀ ಉಜರೀ ನವ್ಹೇ । ವಿಷಮ ಪಡೆ ॥ ೩೪೫ ॥ ಪಾಹೇ ಪಾ ಶಾಖಾ ಪಲ್ಲವ ರುಖಾಚೇ । ಹೇ ಕಾಯ ನವ್ಹತೀ ಏಕಾಚಿ ಬೀಜಾಚೇ । ಪರೀ ಪಾಣೀ ಘೇಣೇ ಮುಳಾಚೇ । ತೇ ಮುಳೀಚಿ ಘಾಪೇ ॥ ೩೪೬ ॥ ಕಾ ದಾಹಾಹೀ ಇಂದ್ರಿಯೇ ಆಹಾತೀ । ಇಯೇ ಜರೀ ಏಕಚೀ ದೇಹೀಂಚೀ ಹೋತೀ। ಆಣಿ ಇಹೀ ಸೇವಿಲೇ ವಿಷಯಜಾತೀ। ಏಕಾಚೀ ಠಾಯಾ ॥೩೪೭॥ ತರೀ ಕರೋನಿ ರಸಸೋಯ ಬರವೀ । ಕಾನೀಕೇವೀ ಭರಾವೀ । ಫುಲೇ ಆಣೋನಿ ತುರಂಬಾವೀ। ಡೋಳಾ ಕೇವೀ ॥ ೩೪೮ ॥ ತೇಥ ರಸ ತೋ ಮುಖೇಂಚಿ ಸೇವಾವಾ । ಪರಿಮಳ ತೋ ಘ್ರಾಣೇಂಚಿ ಘ್ಯಾವಾ । ತೈಸಾ ಮೀ ತೋ ಯಜಾವಾ । ಮೀಚಿ ಮ್ಹಣೋನಿ ॥ ೩೪೯ ॥ ಯೇರ ಮಾತೇ ನೇಣೋನಿ ಭಜನ । ತೇ ವಾಯಾಂಚಿ ಗಾ ಆನೇ ಆನ । ಮ್ಹಣೋನಿ ಕರ್ಮಾಚೇ ಡೋಳೆ ಜ್ಞಾನ । ತೇ ನಿರ್ದೋಷ ಹೋ಼ ಆವೇ ॥ ೩೫೦ ॥

**ಅರ್ಥ**— ಇನ್ನು ಮೇಲೆ ಮತ್ತೂ ಹಲವು ಸಂಪ್ರದಾಯಗಳಿರುತ್ತವೆ. ಆದರೆ ನಾನು ಸರ್ವವ್ಯಾಪಕನಾಗಿರುತ್ತೇನೆಂಬದನ್ನು ಅರಿತುಕೊಳ್ಳದೇ ಅವರು ಅಗ್ನಿ, ಇಂದ್ರ, ಸೂರ್ಯ, ಚಂದ್ರ, ಮುಂತಾದ ದೈವತಗಳನ್ನು ಭಜಿಸುತ್ತಾರೆ. ॥ ೨೪೪ ॥ ಅವರು ಮಾಡುವ ಆ ಪೂಜನವು ನಿಜವಾಗಿ ನನ್ನದೇ ಆಗಿರುವದು. ಕಾರಣವೇನಂದರೆ ಈ ಸರ್ವ ಜಗತ್ಯದಲ್ಲಿ ನಾನೇ ತುಂಬಿ ಉಳದಿರುತ್ತೇನೆ. ಆದರೂ ಅವರ ಆ ಭಜನೆಯು ಯೋಗ್ಯವಾಗಿರದೇ ಹಾದೀ ತಪ್ಪಿರುವದು. ॥೩೪೫॥ ಅರ್ಜುನನೇ ನೋಡು ! ವೃಕ್ಷದ ಟೊಂಗೆಗಳು ಮತ್ತು ಎಲೆಗಳು ಮುಂತಾದವು ಒಂದೇಬೀಜದಿಂದ ಉತ್ಪನ್ನವಾಗಿರುವದಿಲ್ಲೇನು ? ಆದರೆ ನೀರು ಹಾಕಬೇಕಾದರೆ ಗಿಡದ ಬೊಡ್ಡಿಗೇ ಹಾಕಬೇಕಾಗಿರುವದು. ॥ ೪೬ ॥ ಇಲ್ಲವೇ ದಶೇಂದ್ರಿಯಗಳು ಒಂದೇ ದೇಹದವು ಇರುತ್ತವೆ. ಅವುಗಳು ಸೇವನಮಾಡಿದ ವಿಷಯಗಳು ( ಪದಾರ್ಥಗಳು ) ಒಂದೇ ಸ್ಥಳದಲ್ಲಿ ಹೋಗುತ್ತವೆ. ॥ ೩೪೭ ॥ ಆದರೂ ಉತ್ತಮವಾದ ಅಡಿಗೆಯನ್ನು ಮಾಡಿ ಅದನ್ನು ಕಿವಿಯಲ್ಲಿ ಹೇಗೆ ಹಾಕಬೇಕು ? ಮತ್ತು ಹೂಗಳನ್ನು ತಂದು ಅವುಗಳನ್ನು ಕಣ್ಣಿನಿಂದ ಹೇಗೆ ವಾಸನೆಯನ್ನು ತೆಗೆದುಕೊಳ್ಳಬೇಕು ? ॥ ೩೪೮ ॥ ಆದರೆ ಅನ್ನವನ್ನು ಬಾಯಿಯಿಂದಲೇ ಸೇವನ ಮಾಡಲಿಕ್ಕೆಬೇಕು. ಮತ್ತು ಸುಗಂಧವನ್ನು ಘ್ರಾಣೇಂದ್ರಿಯಗಳಿಂದಲೇ ಸೇವನ ಮಾಡಬೇಕಾಗಿರುವದು. ಅದೇಪ್ರಕಾರಾ ನನ್ನ ಪೂಜಾ ಮಾಡುವದು. ನನ್ನಲ್ಲಿ ಭಕ್ತಿಯುಕ್ತ ಅಂತಃಕರಣವನ್ನಿಟ್ಟೇ ಮಾಡಲಿಕ್ಕೆಬೇಕು. ॥ ೩೪೯ ॥ ಆದರೆ ನನ್ನನ್ನು ತಿಳಕೊಳ್ಳದೇ ಭಜನಮಾಡುವದು ಅದು ಯಾವದಿದ್ದರೂ ವ್ಯರ್ಥವಾಗಿರುತ್ತದೆ. ಆದುದರಿಂದ ಕರ್ಮಾಚರಣ ಮಾಡಲಿಕ್ಕೆ ಜ್ಞಾನ ಇದು ದೃಷ್ಟಿ ಇರುತ್ತದೆ. ಆದರೆ ಅಜ್ಞಾನವು ನಿರ್ದೋಷವಾಗಿರಲಿಕ್ಕೆ ಬೇಕು. ॥ ೩೫೦ ॥

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

**[ಅಹಂ ಹಿ ಸರ್ವಯಜ್ಞಾನಾಮಿತಿ]** ಯೇರ್ಹವೀ ಪಾಹೇ ಪಾ ಪಾಂಡುಸುತಾ। ಯಾ ಯಜ್ಞೋಪಹಾರಾ ಸಮಸ್ತಾ । ಮೀ ವಾಂಚೂನಿ ಭೋಕ್ತಾ । ಕವಣ ಅಹೇ ॥ ೫೧ ॥ ಮೀ ಸಕಳಾ ಯಜ್ಞಾಂಚಿ಼ ಆದಿ । ಆಣಿಯಜನಾ ಯಯಾ ಮೀಚಿ ಅವಧಿ । ಕೀ ಮಾತೇ ಚುಕೋನಿ ದುರ್ಬುದ್ಧಿ । ದೇವಾಭಜಲೇ ॥ ೫೨ ॥ ಗಂಗೇಚೇ ಉದಕ ಗಂಗೇ ಜೈಸೇ಼ । ಅರ್ಪಿಜೇ ದೇವ ಪಿತರೋದ್ದೇಶೇ । ಮಾಝೇ ಮಜ ದೇತೀ ತೈಸೇ । ಪರೀ ಆನಾನೀ ಭಾವೀ ॥ ೫೩ ॥ ಮ್ಹಣವೂನಿ ತೇ ಪಾರ್ಥಾ । ಮಾತೇ ನ ಪವತೀಚಿ ಸರ್ವಥಾ । ಮಗ ಮನೀ ವಾಹಿಲೀ ಜೇ ಆಸ್ಥಾ । ತೇಥ ಆಲೇ ॥ ೫೪ ॥

**ಅರ್ಥ**— ಅರ್ಜುನನೇ ! ಆದರೆ ಈ ಸರ್ವ ಯಜ್ಞೋಪಚಾರವನ್ನು ಸ್ವೀಕರಿಸುವವರು ನನ್ನ ಹೊರ್ತು ಅನ್ಯರ್‍ಯಾರು ಭೋಕ್ತಾ ಇರುವರೇನು ? ॥ ೩೫೧ ॥ ನಾನು ಸರ್ವ ಯಜ್ಞದ ಆದಿಯೂ ಮತ್ತು ಯಜನದ ಸಮಾ

ಪ್ರಿಯು ನಾನೇ ಇದ್ದೇನೆ. ಆದರೆ ದುರ್ಬುದ್ಧಿಗಳು ನನ್ನನ್ನು ಬಿಟ್ಟು ಇಂದ್ರಾದಿ ದೇವತೆಗಳನ್ನು ಭಜಿಸುತ್ತಾರೆ. ॥೩೫೨॥ ಗಂಗಾನದಿಯ ದಂಡೆಗೆ ಕುಳಿತು ತರ್ಪಣಮಾಡುವದರದೆಶೆಯಿಂದ ಗಂಗೆಯೊಳಗಿನ ನೀರೇ ದೇವ ಪಿತರುಗಳ ಉದ್ದೇಶವಾಗಿ ಪುನ್ಹಾ ಗಂಗೆಯಲ್ಲಿ ಅರ್ಪಣ ಮಾಡುವಂತೆ ನನ್ನದೇನನಗೆ ಕೊಡುತ್ತಾರೆ. ಆದರೆ ಅವರು ಬೇರೆ ಬೇರೆ ಭಾವನೆಯಿಂದ ಕೊಡುತ್ತಾರೆ. ॥ ೩೫೩ ॥ ಆದುದರಿಂದ ಆವರಿಗೆ ಎಂದಿಗೂ ನನ್ನ ಪ್ರಾಪ್ತಿಯು ಆಗುವದಿಲ್ಲ. ಮನಸಿನಲ್ಲಿ ಯಾವದರ ಇಚ್ಛೆಯನ್ನು ಮಾಡುತ್ತಾರೋ ಆ ಲೋಕಗಳಿಗೆ ಅವರು ಹೋಗುತ್ತಾರೆ. ॥ ೩೫೪ ॥

**ಯಾಂತಿ ದೇವವ್ರತಾ ದೇವಾನ್ ಪಿತೃನ್ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಂ ॥ ೨೫ ॥**

**[ ಯಾಂತಿ ದೇವವೃತಾ ದೇವಾನಿತಿ ]** ಮನೇ ವಾಚಾ ಕರಣೀ । ಜಯಾಂಚಿಯಾ ಭಜನೀ ದೇವಾಂಚಿಯಾ ವಾಹಣೀ । ತೇ ಶರೀರ ಜಾತಿಯೇ ಕ್ಷಣೀ । ದೇವಚಿ ಜಾಲೇ ॥ ೫೫ ॥ ಅಥವಾ ಪಿತರಾಂಚೀ ವ್ರತೇ । ವಾಹತೀ ಜಯಾಂಚೀ ಚಿತ್ತೇ । ಜೀವಿತ ಸರಲಿಯಾ ತಯಾತೇ । ಪಿತೃತ್ವ ವರೀ ॥೫೬॥ ಕಾ ಕ್ಷುದ್ರ ದೇವತಾದಿ ಭೂತೇ । ತಿಯೇಂಚಿ ಜಯಾಂಚೀ ಪರಮ ದೈವತೇ । ಜಿಹೀ ಅಭಿಚಾರೇ ತಯಾ ತೇ । ಉಪಾಸಿಲೇ ॥ ೫೭ ॥ ತಯಾ ದೇಹಾಚೀ ಜವನಿಕಾ ಫಿಟಲೀ । ಆಣಿ ಭೂತತ್ವಾಚೀ ಪ್ರಾಪ್ತಿ ಜಾಹಾಲೀ । ಏವಂ ಸಂಕಲ್ಪವಶೇ ಫಳಲೀ । ಕರ್ಮೇ ತಯಾ ॥ ೫೮ ॥ ಮಗ ಮೀಚಿ ಡೋಳಾ ದೇಖಿಲಾ । ಜೇ ಹೀ ಕಾನೀಮೀಚಿ ಐಕಿಲಾ । ಮೀಚಿ ಮನೀ ಭಾವಿಲಾ । ವಾನಿಲಾ ವಾಚಾ ॥ ೫೯ ॥ ಸರ್ವಾಂಗೀ ಸರ್ವಾಠಾಯೀ । ಮೀಚಿ ನಮಸ್ಕಾರಿಲಾ ಜಿಹೀ । ದಾನ ಪುಣ್ಯಾದಿಕೇ ಜೇ ಕಾಂಹೀ । ತೇ ಮಾಝಿಯಾಚಿ ಮೋಹರಾ ॥ ೩೬೦ ॥ ಜಿಹೀ ಮಾತೇಚಿ ಅಧ್ಯಯನ ಕೇಲೆ । ಜೇ ಆತ ಬಾಹೇರೀ ಮಿಯಾಂಚಿ ಧಾಲೇ । ಜಯಾಂಚೇ ಜೀವಿತ್ವ ಜೋಡಲೇ । ಮಜಚಿ ಲಾಗೀ ॥ ೬೧ ॥ ಜೇ ಆಹಂಕಾರವಾಹತ ಆಂಗೀ । ಆವ್ಹೀ ಹರೀಚೆ ಭೂಷಾವಯಾಲಾಗೀ । ಜೇ ಲೋಭಿಯೇ ಏಕಚಿ ಜಗೀ । ಮಾಝೋನಿ ಲೋಭೇ ॥ ೬೨ ॥ ಜೇ ಮಾಝೋನಿ ಕಾಮೇ ಸಕಾಮ । ಜೇ ಮಾಝೋನಿ ಪ್ರೇಮೇ ಸಪ್ರೇಮ । ಜೇ ಮಾಝಿಯಾ ಭುಲೀ ಸಭ್ರಮ । ನೇಣತೀ ಲೋಕ ॥ ೬೩ ॥ ಜಯಾಂಚೀ ಜಾಣತೀ ಮಜಚಿ ಶಾಸ್ತ್ರೇ । ಮೀ ಜೋಡೇ ಜಯಾಂಚೇನಿ ಮಂತ್ರೇ । ಐಸೇ ಜೇ ಚೇಷ್ಟಾ ಮಾತ್ರೇ । ಭಜಲೇ ಮಜ ॥ ೬೪ ॥ ತೇ ಮರಣಾ ಐಲೀಚ ಕಡೇ । ಮಜ ಮಿಳೋನಿ ಗೇಲೇ ಪುಡೇ । ಮಗ ಮರಣೀ ಅಣೇಕೀ ಕಡೇ । ಜಾತೀಲ ಕೇವೀ ॥ ೬೫ ॥ ಮ್ಹಣೋನಿ ಮದ್ಯಾಜೀ ಜೇ ಜಾಹಾಲೇ । ತೇ ಮಾಝಿಯಾ ಸಾಯುಜ್ಯಾ ಆಲೇ । ಜಿಹೀ ಉಪಚಾರಮಿಷೇ ದಿಧಲೇ । ಆಪಣಪೇ ಮಜ ॥ ೬೬ ॥ ಅರ್ಜುನಾ ಮಾಝೋ ಠಾಯೀ । ಆಪಣಪೇವೀಣ ಸೌರಸ ನಾಹೀ । ಮೀ ಉಪಚಾರೇ ಕವಣಾಹೀ । ನಾಕಳೇ ಗಾ ॥ ೬೭ ॥ ಏಥ ಜಾಣೀವ ಕರೀ ತೋಚಿ ನೇಣೇ । ಆಥಿಲೇ ಪಣ ಮಿರವೀ ತೇಚಿ ಉಣೇ । ಆವ್ಹೀ ಜಾಹಾಲೋ ಐಸೇ ಜೋ ಮ್ಹಣೇ । ತೋ ಕಾಹೀಚ ನವ್ಹೆ ॥ ೬೮ ॥ ಅಥವಾ ಯಜ್ಞದಾನಾದಿ ಕಿರೀಟೀ । ಕಾ ತಪೇಹನಜೇ ಹುಟಹುಟೀ । ತೇ ತೃಣಾ ಏಕಾಸಾಠೀ । ನ ಸರೇ ಏಥ ॥ ೬೯ ॥ ಪಾಹೇ ಪಾ ಜಾಣಿವೇಚೇನಿ ಬಳೇ । ಕೋಣ್ಹೀ ವೇದಾಪಾಸೂನಿ ಅಸೇ ಆಗಳೇ । ಕೀ ಶೇಷಾಹುನೀ ತೋಂಡಾಳೇ । ಬೋಲಕೇ ಆಥೀ ॥೩೭೦॥ ತೋಹೀ ಅಂಥರೂಣಾ ತಳವಟೀ ದಡೇ । ಯೆರೂನೇತಿ ನೇತಿ ಮ್ಹಣೋನಿ ಬಹುಡೇ । ಏಥ ಸನಕಾದಿಕ ವೇಡೇ । ಪಿಸೇ ಜಾಹಾಲೇ ॥ ೭೧ ॥ ಕರಿತಾ ತಾಪಸಾಂಚೀ ಕಡಸಣೀ । ಕವಣ ಜವಳಾ ಠೇವಿಜೇ ಶೂಳಪಾಣೀ । ತೋಹಿ ಅಭಿಮಾನ ಸಾಂಡೂನಿ ಪಾಯವಣೀ । ಮಾಥಾ ವಾಹೇ ॥ ೭೨ ॥ ನಾತರೀ ಅಥಿಲೇಪಣೇ ಸರಿಶೀ । ಕವಣೀ ಆಹೇ ಲಕ್ಷ್ಮಿಯೇ ಐಸೀ । ಶ್ರಿಯೇಸಾರಿಖಿಯಾ ದಾಸೀ । ಘರೀ ಜೇಯೇತೇ ॥ ೭೩ ॥ ತಿಯಾ ಖೇಳತಾ ಕರಿತೀ ಘರಕುಲೀ । ತಯಾ ನಾಮೇ ಅಮರ ಪುರೇ ಜಃ

ಕೇವಿಲೀ । ತರೀ ನ ಹೋತೀ ಕಾಯ ಬಾಹುಲೀ । ಇಂದ್ರಾದಿಕ ತಯಾಚೀ ॥ ೭೪ ॥ ತಿಯಾ ನಾವಡೋನಿ ಜೆವ್ಹಾ ವೋಡತೀ । ತೆಂವ್ಹಾ ಮಹೇಂದ್ರಾಚೇ ರಂಕ ಹೋತೀ । ತಿಯಾ ಜಿಯಾ ಝಾಡಾ ಕಡೆ ಸಾಹಾತೀ । ತೇ ಕಲ್ಪವೃಕ್ಷ ॥ ೭೫ ॥ ಐಸಿಯಾ ಜಿಯೇಚಿಯಾ ಜವಳಿಕಾ । ಸಾಮರ್ಥ್ಯ ಘರೀ ಚಿಯಾ ಪಾಇಕಾ । ತೇ ಲಕ್ಷ್ಮೀ ಮುಖ್ಯ ನಾಯಿಕಾ । ನ ಮನೇಚಿ ಏಥ ॥ ೭೬ ॥ ಮಗ ಸರ್ವಸ್ವೇ ಕರೂನಿ ಸೇವಾ । ಅಭಿಮಾನ ಸಾಂಡೂನಿ ಪಾಂಡವಾ । ತೇ ಪಾಯ ಧುವಾವಯಾಚಿಯಾ ದೈವಾ । ಪಾತ್ರ ಜಾಹಾಲೀ ॥ ೭೭ ॥ ಮ್ಹಣೋನಿ ಥೋರಪಣ ಪರ್ಹಾ ಸಾಂಡಿಜೇ । ಏಥ ವ್ಯುತ್ಪತ್ತೀ ಆಘವೀ ವಿಸ ರಿಜೇ । ಜೈಜಗಾ ಧಾಕುಟೇ ಹೋಇಜೇ । ತೈ ಜವಳೀಕ ಮಾಝೀ ॥ ೭೮ ॥ ಅಗಾ ಸಹಸ್ರ ಕಿರಣಾ ಚಿಯೇ ದಿಠೀ । ಪುಢಾ ಚಂದ್ರಹೀ । ಲೋಪೇ ಕಿರೀಟೀ । ತೇಥ ಖದ್ಯೋತ ಕಾ ಹುಟಹುಟೀ । ಆಪುಲೇನಿ ತೇಜೇ ॥ ೭೯ ॥ ತೈಸೇ ಲಕ್ಷ್ಮೀಯೇಚೇ ಥೋರಪಣ ನ ಸರೇ । ಜೇಥ ಶಂಭೂಚೇ ಹೀ ತಪ ನ ಪುರೇ । ತೇಥ ಯೇರ ಪ್ರಾಕೃತ ಹೇಂದರೇ । ಕೇವೀ ಜಾಣೋ ಲಾಹೇ ॥೩೮೦॥ ಯಾಲಾಗೀ ಶರೀರ ಸಾಂಡೋವಾ ಕೀಜೇ । ಸಕಳ ಗುಣಾಂಚೇ ಲೋಣ ಉತರಿಜೇ । ಸಂಪತ್ತಿ ಮದ ಸಾಂಡಿಜೇ । ಕುರವಂಡೀ ಕರೂನೀ ॥೮೧॥

**ಅರ್ಥ —** ಮನ ವಾಚಾ ಇಂದ್ರಿಯಗಳ ಯೋಗದಿಂದ ಯಾರು ಇಂದ್ರಾದಿ ದೇವತೆಗಳ ಭಜನ ಮಾಡುತ್ತಾರೆ. ಅವರ ಶರೀರ ವಿಯೋಗವಾದ ಕ್ಷಣಕ್ಕೆ ಅವರು ದೇವರೂಪವಾಗುತ್ತಾರೆ. ॥ ೩೫೫ ॥ ಅಥವಾ ಯಾರು ಭಕ್ತಿಯಿಂದ ಪಿತರುಗಳ ವ್ರತ ಮಾಡುವರೋ, ಅವರು ಮರಣದ ನಂತರ ಪಿತರ ಸ್ವರೂಪವನ್ನು ಪಡೆಯುತ್ತಾರೆ. ॥ ೩೫೬ ॥ ಇಲ್ಲವೇ ಭೂತ ಪಿಶಾಚ ಮುಂತಾದ ಕ್ಷುದ್ರ ದೈವತಗಳು ಯಾರಿಗೆ ಪರಮ ದೈವತವಾಗಿರುವವೋ, ಮತ್ತು ಯಾರು ಘಾತುಕವಾದ ತಮ್ಮ ಕಾರ್ಯಗಳನ್ನು ಸಾಧಿಸಿಕೊಳ್ಳುವದರ ದೆಸೆಯಿಂದ ಆ ದೈವತಗಳ ಉಪಾಸನಾ ಮಾಡುವರೋ, ॥ ೫೭ ॥ ಅವರ ದೇಹದ ವಿಯೋಗವಾದ ಕೂಡಲೆ ಅವರಿಗೆ ಭೂತ ಪಿಶಾಚಿ ಮುಂತಾದವುಗಳ ಯೋನಿಯು ಪ್ರಾಪ್ತವಾಗುತ್ತದೆ. ಈ ಪ್ರಕಾರ ಅವರ ಸಂಕಲ್ಪ ಮಾತ್ರದಿಂದ ಅವರ ಕರ್ಮಗಳು ಅವರಿಗೆ ಫಲದ್ರೂಪವಾಗುತ್ತವೆ. ॥ ೫೮ ॥ ಆ ಮೇಲೆ ಯಾರು ದೃಷ್ಟಿಯಿಂದ ನನ್ನನ್ನೇ ನೋಡುತ್ತಾರೆ. ಕಿವಿಗಳಿಂದ ನನ್ನ ನಾಮ ಸಂಕೀರ್ತನವನ್ನೇ ಕೇಳುತ್ತಾರೆ. ಮನಸಿನಿಂದ ನನ್ನ ಧ್ಯಾನವನ್ನೇ ಯಾವಾಗಲೂ ಮಾಡುತ್ತಾರೆ. ಮತ್ತು ವಾಚಾದಿಂದ ನನ್ನ ವರ್ಣನವನ್ನೇ ಮಾಡುತ್ತಾರೆ. ಸರ್ವಾಂಗದಿಂದ ಮತ್ತು ಸರ್ವ ಸ್ಥಳದಲ್ಲಿ ನನಗೇ ನಮಸ್ಕಾರ ಮಾಡುತ್ತಾರೆ. ದಾನ ಪುಣ್ಯ ಮುಂತಾದ ಸರ್ವ ಸತ್ಕರ್ಮಗಳು ಏನೇನು ಮಾಡುತ್ತಾರೋ, ಅದೆಲ್ಲವು ನನ್ನ ಉದ್ದೇಶದಿಂದಲೇ ಮಾಡುತ್ತಾರೆ. ॥ ೩೬೦ ॥ ಯಾರು ನನ್ನ ಸ್ವರೂಪವು ಯಥಾರ್ಥವಾಗಿ ತಿಳಿಯುವಂಥ ಶಾಸ್ತ್ರವನ್ನೇ ಅಧ್ಯಯನ ಮಾಡಿರುವರು. ಅವರು ನನ್ನ ಯೋಗದಿಂದಲೇ ಅಂತರ್ಬಾಹ್ಯದಲ್ಲಿ ತೃಪ್ತರಾಗಿರುತ್ತಾರೆ. ಯಾರು ತಮ್ಮ ಆಯುಷ್ಯವನ್ನು ನನ್ನ ಕಡೆಗೆ ವಿನಿಯೋಗ ಮಾಡಿರುತ್ತಾರೆ. ॥ ೩೬೧ ॥ ಯಾರಿಗೆ ನನ್ನ ಹೊರ್ತು ಎರಡನೇ ಯಾವ ತರದ ಪ್ರಾಪ್ತಿಯ ಅಪೇಕ್ಷೆಯು ಇರುವದಿಲ್ಲ, ಮತ್ತು ನಾವು ಶ್ರೀಹರಿಯ ಕೀರ್ತಿಯನ್ನು ಬೆಳೆಸುವ ಸೇವಕರೆಂಬ ಅಹಂಕಾರದಿಂದ ಅವರು ಯುಕ್ತರಾಗಿರುತ್ತಾರೆ, ॥ ೬೨ ॥ ಯಾರು ನನ್ನ ಪ್ರಾಪ್ತಿಯ ಅಪೇಕ್ಷೆಯಿಂದಲೆ ಸಕಾಮವಾಗಿರುತ್ತಾರೆ, ಮತ್ತು ನನ್ನ ವಿಷಯದ ಪ್ರೇಮದಿಂದ ಪ್ರೇಮಯುಕ್ತರಾಗಿರುತ್ತಾರೆ, ಅವರು ನನ್ನಲ್ಲಿಯೇ ಮೋಹಿತರಾಗಿ ಹುಚ್ಚರಾಗಿದ್ದಾರೆ. ಅದರಿಂದ ಲೌಕಿಕವು ಅವರ ಕಣ್ಣಿಗೆ ಕಾಣುವದೇ ಇಲ್ಲ. ॥ ೬೩ ॥ ಯಾವನ ಶಾಸ್ತ್ರಗಳು ನನ್ನ ಪರಿಚಯವನ್ನು ಮಾಡಿಕೊಡುತ್ತವೆ. ಅವರು ಮಾಡುವ ( ನಿರ್ದೋಷ ಪವಿತ್ರ ) ಮಂತ್ರ ಜಪದಿಂದ ಅವರಿಗೆ ನನ್ನ ಪ್ರಾಪ್ತಿಯೇ ಆಗುತ್ತದೆ. ಈ ರೀತಿಯಿಂದ ಯಾವನು ಕಾಯಿಕ, ವಾಚಿಕ ಮಾನಸೀಕ ( ಶ್ರದ್ಧಾಪೂರ್ವಕ ) ಸರ್ವ ಕರ್ಮಗಳಿಂದ ನನ್ನ ಹೊರ್ತು ಅನ್ಯ ಯಾವ ದೈವತಗಳ ಭಜನೆಯನ್ನೂ ಮಾಡುವದಿಲ್ಲವೋ, ॥೩೬೪॥ ಅವರು ಮರಣ ಪೂರ್ವದಲ್ಲಿಯೇ ಬ್ರಹ್ಮರೂಪವಾಗುತ್ತಾರೆ. ಅವರು ಮರಣದ ನಂತರ ( ನನ್ನನ್ನು ಬಿಟ್ಟು ) ಅನ್ಯ ಕಡೆಗೆ ಹೇಗೆ ಹೋಗುವರು ? ॥೬೫॥

ಆದುದರಿಂದ ನನ್ನ ಯಜನ ಮಾಡುವವರು ಸಾಯುಜ್ಯ ಮೋಕ್ಷವನ್ನು ಪಡೆಯುತ್ತಾರೆ. ಕಾರಣ ಅವರು ಸೇವಾ ನಿಮಿತ್ಯದಿಂದ ತಮ್ಮ ದೇಹವನ್ನೇ ನನಗೆ ಅರ್ಪಣ ಮಾಡಿರುತ್ತಾರೆ. ॥ ೬೬ ॥ ಅರ್ಜುನನೇ ! ಭಕ್ತರು ನನ್ನಲ್ಲಿ ಆತ್ಮಸಮರ್ಪಣೆಯನ್ನು ಮಾಡದ ಹೊರ್ತು ಅನ್ಯ ಯಾವ ಉಪಚಾರದಿಂದಲೂ, ನಾನು ಅವರಿಗೆ ವಶ ನಾಗುವದಿಲ್ಲ. ॥ ೬೭ ॥ ಇಲ್ಲಿ ಯಾವನು ನಾನು ಪರಮಾತ್ಮ ಸ್ವರೂಪವನ್ನು ತಿಳದಿರುವೆನೆಂದು ಅನ್ನುವನೋ, ಅವನಿಗೆ ನಿಶ್ಚಯವಾಗಿ ತಿಳದಿರುವದಿಲ್ಲ. ಮತ್ತು ನಾನು ಕ್ರುತಾರ್ಥನಾಗಿರುವೆನೆಂದು ಅನ್ನುವನೋ, ಅದೇ ಅವ ನಿಗೆ ಕ್ರುತಾರ್ಥತೆಯಲ್ಲಿ ಸಾಮಾನ್ಯತನವು. ನಾನು ಮುಕ್ತನಾಗಿರುವೆನೆಂದು ಯಾವನು ಅನ್ನುವನೋ, ಅವನು ಮುಕ್ತನಾಗಿರುವದೇ ಇಲ್ಲವೆಂದು ತಿಳಿಯಬೇಕು. ॥ ೬೮ ॥ ಅಥವಾ ಎಲೋ ಕಿರೀಟಿ ! ನಾವು ಯಜ್ಞ ಮಾಡಿ ದೆವು, ನಾವು ಧರ್ಮ ಮಾಡಿದೆವು, ಇಲ್ಲವೇ ನಾವು ತಪಶ್ಚರ್ಯ ಮಾಡಿದೆವು, ಎಂದು ಹೀಗೆ ಯಾರು ಹೆಮ್ಮೆ ಪಡುತ್ತಾರೋ, ಅವರಿಗೆ ನನ್ನ ಪ್ರಾಪ್ತಿಯ ಮಾನದಿಂದ ನೋಡುತ್ತಿರಲು, ಒಂದು ಕಡ್ಡಿಯಷ್ಟು ಯೋಗ್ಯತೆಯು ಸಹ ಅವರಲ್ಲಿರುವದಿಲ್ಲ. ॥ ೬೯ ॥ ಹೀಗೆ ನೋಡು ! ಜ್ಞಾನದ ಬಲದಲ್ಲಿ ವೇದದಕಿಂತಲೂ ಯಾರಾದರೂ ಹೆಚ್ಚಿನ ಜ್ಞಾನಿಗಳಿರುವರೇನು ? ಇಲ್ಲವೇ ಸಹಸ್ರ ಮುಖದಿಂದ ಮಾತಾಡುವ ಶೇಷನಕಿಂತಲೂ, ಹೆಚ್ಚಿಗೆ ಮಾತಾಡುವ ವರು ಯಾರಾದರೂ ಇರುವರೇನು ? ॥ ೩೭೦ ॥ ಆದರೆ ಆ ಶೇಷನು ಸಹಾ, ಯಾರಿಗೆ ಹಾಸಿಗೆ ಆಗಿರುವನೋ, ವೇದಗಳು ಸಹಾ ನೇತಿ ನೇತಿ ಅಂದರೆ ಇದು ಪರಮಾತ್ಮನಲ್ಲಾ, ಅದು ಪರಮಾತ್ಮ ವಸ್ತು ಇರುವದಿಲ್ಲವೆಂದು ಹೇಳಿ ಸ್ತಬ್ಧವಾಗುತ್ತವೆ. ಅದರಂತೆ ಸನಕಾದಿಕ ರುಷಿಗಳು ಸಹ ಪರಮಾತ್ಮನ ಸ್ವರೂಪದ ನಿರ್ಧಾರ ವಿಷಯ ದಲ್ಲಿ ಹುಚ್ಚರಾಗಿ ಭ್ರಮಿಷ್ಟರಾಗಿ ಹೋಗಿರುವರೋ, ॥ ೩೭೧ ॥ ತಪಸ್ವಿಗಳ ವಿಷಯದಲ್ಲಿ ನೋಡಿದರೆ ಮಹಾದೇವರ ಯೋಗ್ಯತೆಗೆ ಸಮಾನರಾದವರು ಅನ್ಯರ್‍ಯಾರಾದರೂ ದೊರಕುವರೇನು ? ಆದರೂ ಆ ಭೋಳಾಶಂಕರನು ಅಭಿ ಮಾನವನ್ನು ಪರಿತ್ಯಜಿಸಿ ಯಾವನ ಪಾದೋದಕವನ್ನು ಅಂದರೆ ಗಂಗೆಯನ್ನು ( ಚರಣ ತೀರ್ಥವೆಂದು ) ತನ್ನ ಮಸ್ತಕದ ಮೇಲೆ ಧಾರಣ ಮಾಡಿಕೊಂಡಿರುತ್ತಾನೆ. ॥ ೭೨ ॥ ಇಲ್ಲವೇ ಐಶ್ವರ್ಯದಿಂದ ಶ್ರೇಷ್ಠಳಾದ ಲಕ್ಷ್ಮಿ ದೇವಿಯಕಿಂತಲೂ, ಸಂಪನ್ನತೆಯಲ್ಲಿ ಯಾರಾದರೂ ಹೆಚ್ಚಿನವರಿರುವರೇನು ? ಅವಳ ಮನಿಯಲ್ಲಿ ಅಷ್ಟಮಹಾಸಿದ್ಧಿ ಗಳು ದಾಸಿಯರಾಗಿದ್ದಾರೆ. ॥ ೭೩ ॥ ಆ ದಾಸಿಗಳು ತಮ್ಮ ಆಟದಲ್ಲಿ ಮನಿ ಕಟ್ಟಿ ಅದರ ಹೆಸರು ಅಮರ ಪುರವೆಂದು ಇಟ್ಟರೆ ಇಂದ್ರಾದಿ ದೇವತೆಗಳು ಅವರ ಆಟದೊಳಗಿನ ಗೊಂಬೆಗಳು ಆಗಲಿಕ್ಕೇನು ? ॥೭೪॥ ಮುಂದೆ ಆ ದಾಸಿಯರು ತಮ್ಮ ಗೊಂಬಿ ಆಟವು ಬೇಸರವಾಗಿ ಯಾವಾಗ್ಗೆ ಮುರಿಯುತ್ತಾರೆ. ಆಗ್ಗೆ ಇಂದ್ರನು ಪದ ಚ್ಯುತನಾಗಿ ದರಿದ್ರನಾಗುತ್ತಾನೆ. ಮತ್ತು ಆ ದಾಸಿಯರು ಯಾವ ಗಿಡದ ಕಡೆಗೆ ನೋಡುತ್ತಾರೆ. ಆ ವೃಕ್ಷಗಳು ಕಲ್ಪವೃಕ್ಷಗಳಾಗುತ್ತವೆ. ॥ ೭೫ ॥ ಹೀಗೆ ಯಾವ ಲಕ್ಷ್ಮಿದೇವಿಯ ಮನಿಯೊಳಗಿನ ದಾಸಿಯರ ಸಾಮರ್ಥ್ಯವು ಅದೆ ಆ ಪಟ್ಟರಾಣಿ ಶ್ರೀ. ಲಕ್ಷ್ಮಿದೇವಿಯವರದು ಸಹ ಈ ಸ್ಥಳದಲ್ಲಿ ಪ್ರತಿಷ್ಠೆಯು ಉಳದಿರುವದಿಲ್ಲ. ॥ ೭೬ ॥ ಆ ಮೇಲೆ ಅರ್ಜುನನೇ ! ಮನೋಭಾವದಿಂದ ಸೇವಾ ಮಾಡಿ ಸರ್ವ ಅಭಿಮಾನವನ್ನು ತ್ಯಾಗ ಮಾಡಿ ಅವಳು ಪರಮಾತ್ಮನ ಪಾದ ತೊಳಿಯುವ ಅಧಿಕಾರಕ್ಕೆ ಪಾತ್ರಳಾದಳು. ॥ ೭೭ ॥ ಆದುದರಿಂದ ದೊಡ್ಡಸ್ತಿಕೆಯನ್ನು ಒಂದು ಕಡೆಗೆ ಇಟ್ಟು ಸರ್ವ ಶಾಸ್ತ್ರೀಯ ಜ್ಞಾನದ ಅಭಿಮಾನವನ್ನು ಮರೆತು, ಯಾವಾಗ್ಗೆ ಜಗತ್ತಿದಲ್ಲಿ ನಮ್ರತನದಿಂದ ನಡಿಯು ತ್ತಾರೋ ಅದೇ ಕಾಲಕ್ಕೆ ನನ್ನ ಪ್ರಾಪ್ತಿಯು ಅವರಿಗೆ ಆಗುತ್ತದೆ. ॥ ೭೮ ॥ ಎಲೋ ಕಿರೀಟಿ ! ಯಾವ ಸ್ಥಳ ದಲ್ಲಿ ಸೂರ್ಯನ ತೇಜದ ಮುಂದೆ ಚಂದ್ರನ ತೇಜವು ಅಡಗಿ ಹೋಗುತ್ತದೆ. ಅಲ್ಲಿ ಹೊನ್ನಿ ಹುಳವು ತನ್ನ ಪ್ರಕಾಶದ ದೆಶೆಯಿಂದ ( ಯಾಕೆ ಬಡಿವಾರ ತೋರಿಸಬೇಕು ? ॥೭೯॥ ಅದೇ ಪ್ರಕಾರಾ ಯಾವ ಸ್ಥಳದಲ್ಲಿ ಲಕ್ಷ್ಮಿದೇವಿಯ ಐಶ್ವರ್ಯವೂ ಮತ್ತು ಶಂಭುವಿನ ತಪಶ್ಚರ್ಯವೂ, ಸಹಾ ಸರಿಯಾಗುವದಿಲ್ಲವೋ, ಆ ಸ್ಥಾನದಲ್ಲಿ ಅಜ್ಞಾನಿ ಮೂಢ ಜನರಿಂದ ನನ್ನನ್ನು ತಿಳಿಯಲಿಕ್ಕೆ ಹ್ಯಾಗೆ ಸಾಧ್ಯವಾದೀತು ? ॥ ೮೦ ॥ ಈ ಕಾರಣದದೆಶೆಯಿಂದ ಸರ್ವ ಶರೀರದ ಅಭಿಮಾನವನ್ನು ಬಿಟ್ಟುಕೊಟ್ಟು ಸರ್ವ ಗುಣಗಳನ್ನು ಪರಮಾತ್ಮನಿಗೆ ಅರ್ಪಿಸಿ ಮತ್ತು ಸಂಪತ್ತಿಯ ಮದವನ್ನು ಪರಿತ್ಯಜಿಸಿ ತಮ್ಮ ದೇಹಾಭಿಮಾನವನ್ನು ನನ್ನ ಮೇಲಿಂದಾ ನಿವಾಳಿ ಮಾಡ ಒಗಿಯಲಿಕ್ಕೆ ಬೇಕು. ॥ ೩೮೧ ॥

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

**[ಪತ್ರಂ ಪುಷ್ಪಂ ಇತಿ]** ಮಗ ನಿಃಸ್ಸೀಮಭಾವ ಉಲ್ಹಾಸೇ । ಮಜ ಅರ್ಪಾವಯಾಚೇನಿ ಮಿಸೇ । ಫಳ ಏಕ ಆವಡೇ ತೈಸೇ । ಭಲತಯಾಚೇ ಹೋ ॥೮೨॥ ಭಕ್ತ ಮಾಝಿಯಾಕಡೇ ದಾವೀ । ಆಣಿ ಮೀ ದೋನ್ಹೀ ಹಾತ ಓಡವೀ । ಮಗ ದೇಠ ನ ಫೇಡಿತಾ ಸೇವೀ । ಆದರೇಸೀ ॥ ೮೩ ॥ ಪೈ ಗಾ ಭಕ್ತೀಚೇನಿ ನಾವೇ । ಫೂಲ ಏಕ ಮಜ ದ್ಯಾವೇ । ತೇ ಲೇಖೇ ತರೀ ಹ್ಯಾ ತುರಂಬಾವೇ । ಪರೀ ಮುಖೀಂಚಿ ಘಾಲೀ ॥ ೮೪ ॥ ಹೇ ಅಸೋ ಕಾಯಸೀ ಫುಲೇ । ಪಾನಚಿ ಏಕ ಆವಡತೇ ಜಾಹಾಲೇ । ತೇ ಸಾಜುಕಹೀ ನ ಹೋ ಸುಕಲೇ । ಭಲತೈಸೇ ॥ ೮೫ ॥ ಪರೀ ಸರ್ವಭಾವೇ ಭರಲೇ ದೇಖೇ । ಆಣಿ ಭುಕೇಲಾ ಅಮೃತೇ ತೋಖೇ । ತೈಸೇ ಪತ್ರಚಿ ಪರೀ ತೇಣೇ ಸುಖೇ । ಆರೋಗೂ ಲಾಗೇ ॥ ೮೬ ॥ ಅಥವಾ ಐಸೇಹೀ ಏಕ ಘಡೇ । ಜೇ ಪಾಲಾಹೀ ಪರೀ ನ ಜೋಡೇ । ತರೀ ಉದಕಾಚೇ ತವ ಸಾಂಕಡೇ । ನವ್ಹೇಲ ಕೀ ॥ ೮೭ ॥ ತೇ ಭಲತೇಥ ನಿಮೋಲೇ । ನ ಜೋಡಿತಾ ಆಹೇ ಜೋಡಲೇ । ತೇಚಿ ಸರ್ವಸ್ವ ಕರೂನಿ ಅರ್ಪಿಲೇ । ಜೇಣೇ ಮಜ ॥ ೮೮ ॥ ತೇಣೇ ವೈಕುಂಠಾಪಾಸೋನಿ ವಿಶಾಳೇ । ಮಜಲಾಗೀ ಕೇಲಿ ರಾವುಳೇ । ಕೌಸ್ತುಭಾಹೋನಿ ನಿರ್ಮಳೇ । ಲೇಣೇ ದಿಧಲೀ ॥ ೮೯ ॥ ದುಧಾಚೀ ಸೇಜಾರೇ । ಕ್ಷೀರಾಬ್ಧೀ ಐಸೀ ಮನೋಹರೇ । ಮಜಲಾಗೀ ಅಪಾರೇ । ಸೃಜಿಲೀ ತೇಣೇ ॥ ೩೯೦ ॥ ಕರ್ಪೂರ ಚಂದನ ಅಗರೂ । ಐಸೆಯಾ ಸುಗಂಧಾಚೇ ಮಹಾಮೇರೂ । ಮಜ ಹಾತಿವಾ ಲಾವಿಲಾ ದಿನಕರೂ । ದೀಪಮಾಳೇ ॥ ೩೯೧ ॥ ಗರುಡಾಸಾರಿಖೇ ವಾಹನೇ । ಮಜ ಸುರತರೂಚೀ ಉದ್ಯಾನೇ । ಕಾಮಧೇನೂಂಚೀ ಗೋಧನೇ । ಅರ್ಪಿಲೀ ತೇಣೇ ॥ ೯೨ ॥ ಮಜ ಅಮೃತಾಹೂನಿ ಸುರಸೇ । ಬೋನೀ ಓಗರಿಲೀ ಬಹುವಸೇ । ಐಸಾ ಭಕ್ತಾಚೇನಿ ಉದಕಲೇಶೇ । ಪರಿತೋಷೇ ಗಾ ॥ ೯೩ ॥ ಹೇ ಸಾಂಗಾವೇ ಕಾಯ ಕಿರೀಟೀ । ತುವಾಂಚಿ ದೇಖಿಲೇ ಆಪುಲಿಯಾ ದಿಠೀ । ಮೀ ಸುದಾಮಯಾಚಿಯಾ ಸೋಡೀ ಗಾಂಠೀ । ಪವ್ಹಯಾ ಸಾಠೀ ॥ ೯೪ ॥ ಪೈ ಭಕ್ತೀ ಏಕೀ ಮೀ ಜಾಣೇ । ತೇಥ ಸಾನೇ ಥೋರ ನ ಮ್ಹಣೇ । ಆಮ್ಹೀ ಭಾವಾಚೇ ಪಾಹುಣೇ । ಭಲತೇಯಾ ॥ ೯೫ ॥ ಯೇರ ಪತ್ರ ಪುಷ್ಪ ಫಳ । ಹೇ ಭಜಾವಯಾ ಮಿಸ ಕೇವಳ । ವಾಂಚೂನಿ ಆಮುಚಿಯಾಲಾಗೀ ನಿಷ್ಕಳ । ಭಕ್ತಿ ತತ್ತ್ವ ॥ ೯೬ ॥ ಮ್ಹಣೋನಿ ಅರ್ಜುನಾ ಅವಧಾರೀ । ತೂ ಬುದ್ಧೀ ಏಕೀ ಸೋಪಾರೀ ಕರೀ । ತರೀ ಸಹಜೇ ಆಪುಲಿಯಾ ಮನೋಮಂದಿರೀ । ನ ವಿಸಂಬೇ ಮಾತೇ ॥ ೯೭ ॥

**ಅರ್ಥ—** ಆ ಮೇಲೆ ಧೃಢವಾದ ಭಕ್ತಿಯ ಆನಂದದಿಂದ ನನಗೆ ಅರ್ಪಣಮಾಡುವ ನಿಮಿತ್ಯದಿಂದ ಬೇಕಾದ ಗಿಡದ ಬೇಕಾದಂಥ ಫಲವನ್ನು ॥ ೮೨ ॥ ಭಕ್ತನು ನನ್ನ ಮುಂದೆ ಇಟ್ಟರೆ ಅಥವಾ ಇಡುವಷ್ಟರಲ್ಲಿ ನಾನಾಗಿಯೇ ನನ್ನ ಎರಡೂ ಕೈಗಳನ್ನು ಚಾಚಿ ತೆಗಿದುಕೊಳ್ಳುತ್ತೇನೆ. ಮತ್ತು ಅದರ ದೇಟ ಸಹಾ ಸುಲಿಯದೇ ಅದನ್ನು ಆದರದಿಂದ ಸೇವನಮಾಡುತ್ತೇನೆ ಹೀಗೆ ನನಗೆ ಆತುರವು ಉಂಟಾಗುತ್ತದೆ. ॥ ೮೩ ॥ ಆದರೆ ಭಕ್ತಿಭಾವದಿಂದ ನನಗೆ ಯಾರಾದರೂ ಭಕ್ತರು ಒಂದು ವೇಳೆ ಪುಷ್ಪವನ್ನು ಕೊಟ್ಟರೆ ನಿಜವಾಗಿ ನೋಡಿದರೆ ಅದನ್ನು ನಾನು ಮೂಸಿನೋಡಬೇಕು. ಆದರೆ ಅದನ್ನು ಬಿಟ್ಟು ಪ್ರೇಮದ ಭರದಲ್ಲಿ ನಾನು ಬಾಯಿಯಲ್ಲಿಯೇ ಹಾಕಿಕೊಳ್ಳುತ್ತೇನೆ. ॥ ೮೪ ಬಹಳ ಹೇಳುವದೇನು ಹೂವಿನ ವಿಷಯವಂತೂ ಹಾಗೇ ಇರಲಿ ಆದರೆ ನನಗೆ ಒಂದಾನೊಂದು ಗಿಡದ ಎಲಿಯು ಸಹ ಪ್ರಿಯವಾಗಿರುವದು. ಆ ಮೇಲೆ ಅದು ಯಾವದಾದರು ಗಿಡದ ನವಪಲ್ಲವ ಅಥವಾ ಒಣಗಿದ್ದಾಗಿರಲಿ ಯಾವದೇ ಆಗಿರಲಿ, ॥ ೮೫ ॥ ಆದರೆ ಅದು ಭಕ್ತಿಭಾವದಿಂದ ಪರಿಪೂರ್ಣವಾಗಿರುವದೆಂದು ನೋಡಿದಕೂಡಲೆ ಯಾವ ಪ್ರಕಾರಾ ಒಬ್ಬಾನೊಬ್ಬ ಕ್ಷುದಿತ ಮನುಷ್ಯನು ಅಮೃತದಿಂದ ತೃಪ್ತನಾಗುತ್ತಾನೋ, ಅದೇ ಪ್ರಕಾರಾ ಭಕ್ತಿಭಾವದಿಂದ ಪರಿಪೂರ್ಣವಾದ ಆ ಒಣಗಿದ

ಪತ್ರವನ್ನೇ ಅಮೃತಸಮಾನ ಮಾಡಿ ನಾನು ತಿನ್ನಲಿಕ್ಕೆ ಹತ್ತುತ್ತೇನೆ. ॥ ೮೭ ॥ ಅಥವಾ ಒಂದು ವೇಳೆ ಗಿಡಗಳಿಗೆ ಎಲ್ಲಿಯೂ ಎಲೆಗಳು ಸಹಾ ದೊರಕುವದಿಲ್ಲ ಇಂಥ ಕಠಿಣ ಪ್ರಸಂಗವು ಬಂದೊದಗಿದರೆ, ನೀರು ದೊರಕುವ ಸಂಕಟವಂತೂ ಬೀಳಲಿಕ್ಕಿಲ್ಲವಲ್ಲ ? ॥ ೮೭ ॥ ಆ ನೀರು ಬೇಕಾದ ಸ್ಥಳದಲ್ಲಿ ಪುಕ್ಕಟೆಯಾಗಿ ಶ್ರಮವಡದೇ ದೊರಕುತ್ತವೆ. ಆ ಜಲವನ್ನೇ ನನಗೆ ಮನೋಭಾವದಿಂದ ಅರ್ಪಣಮಾಡುವದರಿಂದ ॥ ೮೮ ॥ ಅವನು ನನ್ನ ದೆಶೆಯಿಂದ ವೈಕುಂಠದ ಕಿಂತಲೂ ದೊಡ್ಡ ದೇವಾಲಯವನ್ನು ಕಟ್ಟಿಸಿದಂತೆ ಮತ್ತು ಕೌಸ್ತುಭಮಣಿಯಕಿಂತಲೂ ತೇಜಸ್ವಿಯಾದ ರತ್ನಾಭರಣಗಳನ್ನು ನನಗೆ ಅರ್ಪಣಮಾಡಿದಂತೆ ಆಗುತ್ತದೆ. ॥ ೮೯ ॥ ಅವನು ಕ್ಷೀರಸಾಗರದಂಥ ನಿರ್ಮಲವಾದ ಹಾಲಿನಿಂದ ತುಂಬಿದ ಮನೋಹರವಾದ ಅಗಣಿತ ಶಯ್ಯಾಸ್ಥಾನಗಳು ನನ್ನ ದೆಶೆಯಿಂದ ನಿರ್ಮಾಣಮಾಡಿದಂತೆ ಆಗಿರುವದು. ॥೯೦॥ ಕರ್ಪುರ ಚಂದನ ಕಷ್ಣಾಗರು ಇಂಥ ಸುಗಂಧದ ಮಹಾಮೇರುಪರ್ವತದಷ್ಟು ಗುಂಪಿಯನ್ನು ಹಾಕಿ ನನ್ನ ಮುಂದೆ ಕಡ್ಡಿಬತ್ತಿಯನ್ನು ಹಚ್ಚಿ (ಪ್ರಜ್ವಲಿಸಿ) ಸೂರ್ಯನಿಗೆ ದೀಪಮಾಲೆ ಬೆಳಗಿದಂತೆ ಇರುತ್ತದೆ. ॥ ೯೧ ॥ ಅವನು ಗರುಡನ ಸಮಾನವಾದ ವಾಹನವು ಕಲ್ಪತರುವಿನ ತೋಟವು ಮತ್ತು ಕಾಮಧೇನುವಿನ ಹಿಂಡುಗಳ ಸಮುದಾಯವನ್ನು ನನಗೆ ಅರ್ಪಣಮಾಡಿದಂತೆ ಇರುತ್ತದೆ. ॥ ೯೨ ॥ ನನಗೆ ಅಮೃತದಕಿಂತಲೂ ರುಚಿಕರವಾದ ಅನೇಕ ತರದ ಪಕ್ವಾನ್ನಗಳನ್ನು ಉಣಬಡಿಸುವದರಿಂದ ಯಾವ ಸಂತೋಷವು ಆಗುತ್ತದೆ, ಅದು ಇಂಥ ಭಕ್ತಿಯುಕ್ತ ಅಂತಃಕರಣದಿಂದ ಭಕ್ತರು ಅರ್ಪಣಮಾಡಿದ ನೀರಿನ ಹನಿಗಳಿಂದಲೇ ನನಗೆ ಆಗುತ್ತದೆ. ॥ ೯೩ ॥ ಎಲೋ ಕಿರೀಟಿ ! ಬಹಳ ಹೇಳುವದೇನು ನನಗೆ ಅರ್ಪಣಮಾಡುವ ಉದ್ದೇಶ್ಯದಿಂದ ತನ್ನ ಬಡತನದ ಸಲುವಾಗಿ ಮುಗ್ಗಿನುಚ್ಚು ಅವಲಕ್ಕಿಯನ್ನು (ಹರಕು ಅರಿವೆಯಲ್ಲಿ) ಗಂಟುಕಟ್ಟಿಕೊಂಡು ಸುದಾಮನು ಪ್ರೀತಿಯಿಂದ ಬಗಲಲ್ಲಿ ಇಟ್ಟುಕೊಂಡು ತಂದಿದ್ದನು, ಅವನ ಆ ಗಂಟನ್ನು ನಾನು ಲಗುಬಗೆಯಿಂದ ಬಿಚ್ಚಿ ನೋಡಿ (ದುಷ್ಕಾಳಪೀಡಿತ ದರಿದ್ರನಂತೆ ಭಕ್ಷಿಸಿದೆನು.) ಅದನ್ನು ನೀನು ನಿನ್ನ ಪ್ರತ್ಯಕ್ಷ ಕಣ್ಣಿನಿಂದ ನೋಡಿರುವದಿಲ್ಲೇನು ? ॥ ೯೪ ॥ ಆದುದರಿಂದ ನಾನು ನಿಜವಾಗಿ ಭಕ್ತಿಯೊಂದನ್ನೇ ತಿಳಿಯುತ್ತೇನೆ. ಆ ಸ್ಥಳದಲ್ಲಿ ಇದು ದೊಡ್ಡದು ಸಣ್ಣದೆಂಬ ಭಾವನೆಯನ್ನು ನನ್ನ ಮನಸ್ಸಿನಲ್ಲಿ ತರುವದಿಲ್ಲ. ಮತ್ತು ಬೇಕಾದವರು ಯಾಕಾಗಲೊಲ್ಲರು ನನ್ನ ವಿಷಯವಾಗಿ ಅನನ್ಯಭಾವವಿದ್ದರೆ ನಾವು ಅವರ ಮನೆಯ ಬೀಗರಾಗಿದ್ದೇವೆ. ॥ ೯೫ ॥ ಆದರೆ ಪತ್ರ, ಪುಷ್ಪ, ಫಲ ಇವುಗಳು ನಮ್ಮ ಭಕ್ತಿಯನ್ನು ಮಾಡುವದರ ದೆಶೆಯಿಂದ ಕೇವಲ ನಿಮಿತ್ಯಮಾತ್ರವಾಗಿರುತ್ತವೆ. ನಿಜವಾಗಿ ನೋಡಿದರೆ ನಿಷ್ಕಲಂಕವಾದ ಭಕ್ತಿಯು ಇದು ನನ್ನ ಪ್ರಾಪ್ತಿಯ ಮುಖ್ಯ ಸಾಧನವಾಗಿರುತ್ತದೆ. ಭಕ್ತಿತತ್ವದವಿನಾ ಮಿಕ್ಕುಳಿದ ಸರ್ವ ಪೂಜಾಸಾಮಗ್ರಿಗಳು ನಾವು ವ್ಯರ್ಥವಾಗಿರುವವೆಂದು ತಿಳಿಯುತ್ತೇವೆ. ॥ ೯೬ ॥ ಆದುದರಿಂದ ಅರ್ಜುನನೇ ಕೇಳು ! ನಿನ್ನ ಬುದ್ಧಿಯನ್ನು ನಿನ್ನ ಸ್ವಾಧೀನಮಾಡಿಕೊಂಡು ಯಾವಾಗಲೂ ನಿನ್ನ ಮನೋರೂಪ ಮಂದಿರದಲ್ಲಿ ನನ್ನ ವಿಸ್ಮೃತಿ ಆಗಗೊಡಬೇಡ ಕಂಡಿಯಾ ! ॥ ೯೭ ॥

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥ ೨೭ ॥**

**[ ಯತ್ಕರೋಷಿ ಯದಶ್ನಾಸೀತಿ ]** ಜೇ ಜೇ ಕಾಹೀ ವ್ಯಾಪಾರ ಕರಿಸೀ । ಕಾ ಭೋಗಹನ ಭೋಗೀಸೀ ಅಥವಾ ಯಜ್ಞೀ ಯಜಿಸೀ । ನಾನಾವಿಧೀ ॥ ೯೮ ॥ ನಾತರೀ ಪಾತ್ರ ವಿಶೇಷೀ ದಾನೇ । ಕಾ ಸೇವಕಾ ದೇಸೀ ಜೀವನೇ । ತಪಾದಿ ಹನ ಸಾಧನೇ । ವ್ರತೇ ಕರಿಸೀ ॥ ೯೯ ॥ ತೇ ಕ್ರಿಯಾಜಾತ ಆಘವೇ । ಜೈಸೇ ನಿಪಜೇಲ ಸ್ವಭಾವೇ । ತೇ ಭಾವನಾ ಕರೋನಿ ಕರಾವೇ । ಮಾಝಿಯಾ ಮೋಹರಾ ॥ ೪೦೦ ॥ ಪರೀ ಸರ್ವಥಾ ಆಪುಲೇ ಜೀವೀ । ಕೇಲಿಯಾಚೀ ಸೇ ಕಾಂಹೀಚೀ ನುರವೀ । ಐಸೀ ಧುವೋನಿ ಕರ್ಮೇ ದ್ಯಾವೀ । ಮಾಝಿಯಾ ಹಾತೀ ॥ ೪೦೧ ॥

**ಅರ್ಥ**— ಇಷ್ಟರ ದೆಶೆಯಿಂದ ನೀನು ಯಾವ ಯಾವದು ಏನಾದರೂ ಉದ್ಯೋಗ ಮಾಡುವಿ ಅಥವಾ ವಿಶೇಷವಾಗಿ ಅನೇಕ ಪ್ರಕಾರದ ಯಜ್ಞಗಳಿಂದ ನನ್ನಯಜನ ಮಾಡಬಹುದು, ॥ ೯೮ ॥ ಇಲ್ಲವೇ ಸತ್ಪಾತ್ರದಲ್ಲಿ ಯಾವ

ಯಾವ ದಾನಗಳನ್ನು ಮಾಡುವಿ, ಅಥವಾ ಸೇವಾ ಮಾಡುವ ಮನುಷ್ಯರಿಗೆ ಯಾವ ಯಾವ ವೇತನಗಳನ್ನು ಕೊಡುತ್ತಿರುವಿ, ಮತ್ತು ಯಾವ ತಪಶ್ಚರ್ಯ ಮುಂತಾದ ಸಾಧನಗಳು ಮತ್ತು ವ್ರತಗಳನ್ನು ಮಾಡುತ್ತಿರುವಿ, ॥ ೩೯೯ ॥ ಅವು ನಿಂನ ಕೈಯಿಂದ ಸಹಜವಾಗಿ ಆಗುವ ಸರ್ವ ಕರ್ಮಗಳು ನೀನು ನಂನ ಉದ್ದೇಶದಿಂದ ಭಕ್ತಿಯುಕ್ತ ಅಂತಃಕರಣ ಪೂರ್ವಕವಾಗಿ ಮಾಡುವವನಾಗು. ॥ ೪೦೦ ॥ ಆದರೆ ಆ ಕರ್ಮಗಳನ್ನು ನಾನು ಮಾಡಿದೆನೆಂಬ ಕರ್ತತ್ವದ ಸಂಶಯವು ( ಅಹಂತಾ ) ಮೂಲತಃ ನಿಂನ ಮನಸಿನಲ್ಲಿ ತರಬೇಡ. ಈ ಪ್ರಕಾರಾ ಸರ್ವ ಕರ್ಮಗಳನ್ನು ( ಕರ್ತತ್ವ ಅಭಿಮಾನರಹಿತನಾಗಿ ) ನಿಷ್ಕಾಮ ಬುದ್ಧಿಯಿಂದ ಮಾಡಿದ ನಿರ್ಮಲವಾದ ಕರ್ಮಗಳನ್ನು ನನಗೆ ಅರ್ಪಣ ಮಾಡುವವನಾಗು. ॥ ೪೦೧ ॥

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

[ **ಶಭಾಶುಭೇತಿ** ] ಮಗ ಅಗ್ನಿಕುಂಡೀ ಬೀಜೇ ಘಾತಲೀ । ತಿಯೇ ಅಂಕುರದಶೇ ಜೇವೀ ಮುಕಲೀ । ತೇವೀ ನ ಫಳತೀಚಿ ಮಜ ಅರ್ಪಿಲೀ । ಶುಭಾಶುಭೇ ॥ ೨ ॥ ಅಗಾ ಕರ್ಮಿಂ ಜ್ಯೈ ಉರಾವೇ । ತ್ಯೈ ತಿಹೀ ಸುಖದುಃಖೀ ಫಳಾವೇ । ಆಣಿ ತಯಾತೇ ಭೋಗಾವಯಾ ಯಾವೇ । ದೇಹಾ ಏಕಾ ॥ ೩ ॥ ತೇ ಉಗಾಣಿಲೇ ಮಜಕರ್ಮ । ತೆಂವ್ಹಾಚಿ ಪುಸಿಲೇ ಮರಣ ಜನ್ಮ । ಜನ್ಮಾಸವೇ ಶ್ರಮ । ವರಚಿಲಹೀ ಗೇಲೇ ॥ ೪ ॥ ಮ್ಹಣವೂನಿ ಅರ್ಜುನಾ ಯಾ ಪರೀ । ಪಾಹೇಚಾವೇಳ ನವ್ಹೇಲ ಭಾರೀ । ಹೇ ಸಂನ್ಯಾಸ ಯುಕ್ತಿ ಸೋಪಾರೀ । ದಿಧಲೀ ತುಜ ॥ ೫ ॥ ಯಾದೇಹಾಚಿಯೇ ಬಾಂದೋಡೀ ನ ಪಡಿಜೇ । ಸುಖದುಃಖಾಂಚಿಯಾ ಸಾಗರೀ ನ ಬುಡಿಜೇ । ಸುಖೇ ಸುಖರೂಪಾ ಧಾಡಿಜೇ । ಮಾಝಿಯಾಂಚಿ ಆಂಗಾ ॥ ೬ ॥

**ಅರ್ಥ—** ಆ ಮೇಲೆ ಅಗ್ನಿಯಲ್ಲಿ ಹುರಿದ ಬೀಜಗಳಿಗೆ ಅಂಕುರವು ಹುಟ್ಟುವದಿಲ್ಲ ಅದೇ ಪ್ರಕಾರ ನನಗೆ ಅರ್ಪಣ ಮಾಡಿದ ಶುಭಾಶುಭ ಕರ್ಮಗಳ ಫಲಪ್ರಾಪ್ತಿಯು ನಿನಗೆ ಆಗಲಾರದು. ॥ ೪೦೨ ॥ ಎಲೋ ! ಮೊದಲಿಗೆ ಕರ್ಮವು ಉಳದಿದ್ದರೆ ಮಾತ್ರ ಆ ಕರ್ಮದಿಂದ ಸುಖದುಃಖರೂಪಿ ಫಲಗಳು ಉಂಟಾಗುವವು. ಮತ್ತು ಆ ಸುಖದುಃಖಗಳು ಭೋಗಿಸುವದರದೆಶೆಯಿಂದ ಜನ್ಮತೆಗೆದುಕೊಳ್ಳಬೇಕಾಗುವದು. ॥ ೪೦೩ ॥ ಹೀಗೆ ರೀತಿ ಅದೆ. ಆದರೆ ಅದೇ ಕರ್ಮಗಳನ್ನು ನನಗೆ ಅವರು ಅರ್ಪಣ ಮಾಡುವದರಿಂದ ಅವರ ಜನನ ಮರಣಗಳು ತಪ್ಪಿ ಹೋಗುತ್ತವೆ. ಮತ್ತು ಜನ್ಮಪ್ರಾಪ್ತಿ ಆದನಂತರ ಬರುವ ಯಾವ ದುಃಖಗಳು ಅವುಗಳಾದರೂ ತಮ್ಮಿಂದ ತಾವೇ ನಾಶವಾಗಿ ಹೋಗಿರುವವು. ॥೪೦೪॥ ಆದುದರಿಂದ ಅರ್ಜುನನೇ ! ಈ ಹೇಳಿದ ಸುಲಭವಾದ ಸನ್ಯಾಸದ ಯುಕ್ತಿಯನ್ನು ಇನ್ನುಮೇಲೆ ಮಾಡಿ ನೋಡೋಣವೆಂದು ಆಲಸ್ಯತನದಿಂದ ಕಾಲ ಕಳೆಯುವಂಥಾದ್ದು ಇರುವದಿಲ್ಲ. ॥ ೪೦೫ ॥ ಈ ಯುಕ್ತಿಯಿಂದ ದೇಹಬಂಧನದಲ್ಲಿ ಬೀಳದೇ ಮತ್ತು ಸುಖ ದುಃಖದ ಸಮುದ್ರದಲ್ಲಿ ಮುಳಗದೇ, ಅನಾಯಾಸದಿಂದ ಸುಖಸ್ವರೂಪನಾದ ಆ ನನ್ನ ಸ್ವರೂಪವಲ್ಲಿ ನಿಮಗ್ನನಾಗಿ ಹೋಗು. ॥ ೪೦೬ ॥

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥ ೨೯ ॥**

[ **ಸಮೋಽಹಂ ಸರ್ವಭೂತೇಷ್ವಿತಿ** ] ತೋ ಮೀ ಪುಸಸೀ ಕೈಸಾ । ತರೀ ಜೋ ಸರ್ವಭೂತೀ ಸದಾ ಸರಿಸಾ । ಜೇಥ ಆಪ ಪರ ಐಸಾ । ಭಾಗ ನಾಹೀ ॥ ೪೦೭ ॥ ಜೇ ಐಸಿಯಾ ಮಾತೇ ಜಾಣೋನಿ । ಅಹಂಕಾರಾಚಾ ಕುರುತಾ ಮೋಡೋನಿ । ಜೇ ಜೀವೇ ಕರ್ಮೆ ಕರೂನಿ । ಮಾತೇ ಭಜಲೇ ॥ ೪೦೮ ॥ ತೇ ವರ್ತತ ದಿಸತೀ ದೇಹೀ । ಪರೀ ತೇ ದೇಹೀ ನಾ ಮಾಝ್ಯಾ ಠಾಯೀ ।

ಆಣಿ ಮೀ ತಯಾಂಚ್ಯಾ ಹೃದಯೀ । ಸಮಗ್ರ ಅಸೇ ॥ ೪೦೯ ॥ ಸವಿಸ್ತರ ವಟತ್ವ ಜೈಸೇ । ಬೀಜಕಣಿಕೇಮಾಜೀ ಐಸೇ । ಆಣಿ ಬೀಜ ಕಣವಸೇ । ವಟೀ ಜೇವೀ ॥ ೪೧೦ ॥ ತೇವೀ ಆಮ್ಹಾ ತಯಾ ಪರಸ್ಪರೀ । ಬಾಹೇರ ನಾಮಾಂಚೀ ಅಂತರೀ । ವಾಂಚೂನಿ ಆಂತುವಟ ವಸ್ತು ವಿಚಾರೀ । ಮೀ ತೇಚಿ ತೇ ॥ ೪೧೧ ॥ ಆತಾ ಜಾಯಾಂಚೇ ಜೈಸೇ ಲೇಣೇ । ಅಂಗಾವರೀ ಆಹಾಚ ವಾಣೇ । ತೈಸೇ ದೇಹ ಧರಣೇ । ಉದಾಸ ತಯಾಂಚೇ ॥ ೪೧೨ ॥ ಪರಿಮಳ ನಿಘಾಲಿಯಾ ಪವನಾ ಪಾಠೀ । ಮಾಗೇ ವೋಸಫೂಲ ರಾಹೇ ದೇಠೀ । ತೈಸೇ ಆಯುಷ್ಯಾಚಿಯೇ ಮುಠೀ । ಕೇವಳ ದೇಹ ॥ ೪೧೩ ॥ ಯೇರ ಅವಷ್ಟಂಭ ಜೋ ಆಘವಾ । ತೋ ಆರೂಢೋನಿ ಮದ್ಭಾವಾ । ಮಜಚಿ ಆಂತ ಪಾಂಡವಾ । ಪೈಠಾ ಜಾಹಲಾ ॥ ೪೧೪ ॥

**ಅರ್ಥ—** ಆ ನಾನು ಹ್ಯಾಗೆ ಇರುವೆನೆಂದು ವಿಚಾರಿಸಬಹುದು ಆದರೆ ಸರ್ವ ಪ್ರಾಣಿಗಳಲ್ಲಿ ಸಮಾನವಾಗಿ ವ್ಯಾಪಕನಾಗಿದ್ದೇನೆ. ಅಲ್ಲಿ ಇದು ನನ್ನದು ಪರರದು ಅಂಬುವ ಭೇದವು ಇರುವದಿಲ್ಲ. ॥ ೪೦೭ ॥ ಯಾರು ಇಂಥ ಪ್ರಕಾರದ ನನ್ನ ವ್ಯಾಪಕ ಸ್ವರೂಪವನ್ನು ತಿಳಿದು ಕರ್ತತ್ವದ ಅಹಂಕಾರದ ಬೀಜವನ್ನೇ ಅಳಿದು ಕಾಯಾವಾಚಾ ಮನ ಸಿನಿಂದ ನನ್ನನ್ನು ಭಜಿಸುತ್ತಾರೆ. ॥ ೪೦೮ ॥ ಅವರು ಜಗತ್ಯದಲ್ಲಿ ದೇಹದಿಂದಾ ವ್ಯವಹಾರ ಮಾಡುವದೇನೋ ನಿಜ. ಆದಾಗ್ಯೂ ದೇಹದಲ್ಲಿರದೇ ಅವರ ಚಿತ್ತವು ನನ್ನಲ್ಲಿಯೇ ಲೀನವಾಗಿರುತ್ತದೆ ಮತ್ತು ನಾನಾದರೂ ಸಂಪೂರ್ಣವಾಗಿ ಅವರ ಹೃದಯದಲ್ಲಿಯೇ ವಾಸಮಾಡಿರುತ್ತೇನೆ. ॥ ೪೦೯ ॥ ಯಾವ ಪ್ರಕಾರಾ ವಟವೃಕ್ಷದ ದೊಡ್ಡಗಿಡವು ಬೀಜದಲ್ಲಿ ಮತ್ತು ಬೀಜವು ಆ ಗಿಡದಲ್ಲಿಯೇ ಅಡಗಿರುತ್ತವೆ. ॥ ೪೧೦ ॥ ಆದೇ ಪ್ರಕಾರ ನನ್ನಲ್ಲಿ ಅವರಲ್ಲಿ ಕೇವಲ ಹೆಸರಿನಿಂದಲೇ ಅಂತರ ವಿರುತ್ತದೆ. ಅಂತಃಸ್ಥಿತಿಯ ವಿಚಾರ ಮಾಡಿ ನೋಡಿದರೆ ಅವರು ಮತ್ತು ನಾನು ಒಂದೇ ಆಗಿದ್ದೇವೆ. ॥ ೪೧೧ ॥ ಈಗ ಪರ ಜನರ ಒಡವೆ ಅಲಂಕಾರಗಳನ್ನು ಬೇಡಿ ತಂದು ಮೈಮೇಲೆ ಹಾಕಿಕೊಳ್ಳುವದು ಹ್ಯಾಗೆ ವ್ಯರ್ಥವಾಗಿರುವದೋ, ಅದರಂತೆ ಅವನ ದೇಹಧಾರಣವು ಉದಾಸೀನವಾಗಿರುವದು. ॥ ೪೧೨ ॥ ಗಾಳಿಯು ತನ್ನ ಸಂಗಡ ಪುಷ್ಪದೊಳಗಿನ ಸರ್ವ ಸುಗಂಧವನ್ನು ತೆಗಿದುಕೊಂಡು ಹೋದ ಮೇಲೆ ಕೇವಲ ದೇಟಗೆ ಸುಗಂಧಶೂನ್ಯವಾದ ಪುಷ್ಪವು ಉಳಿಯು ತ್ತದೆ ಅದೇ ಪ್ರಕಾರಾ ಭಕ್ತನ ದೇಹವು ( ಅವಶೇಷ ಪ್ರಾರಬ್ಧದ ಭೋಗಾರ್ಥವಾಗಿ ) ಆಯುಷ್ಯ ಮರ್ಯಾದೆಯನ್ನು ಹಿಡಿದು ನಿಲ್ಲಿಸಿ ಬಿಡುತ್ತದೆ. ॥ ೪೧೩ ॥ ಎಲೈ ಪಾಂಡು ಪುತ್ರನೇ! ಅವನ ಸರ್ವ ದೇಹ ಅಹಂಕಾರವು ನನ್ನ ಸ್ವರೂಪದಲ್ಲಿ ಬಂದು ಸೇರಿ ಭಕ್ತಿಗೆ ಅನುಸರಿಸಿ ನನ್ನಲ್ಲಿಯೇ ಕೂಡಿ ಹೋಗುತ್ತದೆ. ॥ ೪೧೪ ॥

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿಸಃ ॥ ೩೦ ॥**

[ **ಅಪಿಚೇತ್ಸು ದುರಾಚಾರ ಇತಿ** ] ಐಸೇ ಭಜತೇನಿ ಪ್ರೇಮ ಭಾವೇ । ಜಯಾ ಶರೀ ರಹೀ ಪಾಠೀ ನಪವೇ । ತೇಣೇ ಭಲತಯಾ ವ್ಹಾವೇ । ಜಾತೀಚಿಯಾ ॥ ೪೧೫ ॥ ಆಣಿ ಆಚರಣ ಪಾಹಾತಾ ಸುಭಟಾ । ತೋ ದುಷ್ಕೃತಾಚಾ ಕೀರ ಸೇಲ ವಾಂಟಾ । ಪರೀ ಜೀವಿತ ವೇಂಚಿಲೇ ಚೋಹಟಾ । ಭಕ್ತೀಚಿಯಾ ಕೀ ॥ ೪೧೬ ॥ ಅಗಾ ಅಂತೀಚಿಯಾ ಮತೀ । ಸಾಚಪಣ ಪುಢಿಲೀಗತಿ । ಮ್ಹಣೋನಿ ಜೀವಿತ ಜೇಣೇ ಭಕ್ತೀ ! ದಿಧಲೇ ಶೇಖೀ ॥ ೪೧೭ ॥ ತೋ ಆಧೀ ಜರೀ ದುರಾಚಾರೀ ! ತರೀ ಸರ್ವೋತ್ತಮಚಿ ಅವಧಾರೀ । ಜೈಸಾ ಬುಡಾಲಾ ಮಹಾಪೂರೀ । ನ ಮರತ ನಿಘಾಲಾ ॥ ೪೧೮ ॥ ತಯಾಚೇ ಜೀವಿತ ಐಲ ಥಡಿ ಯೇ ಆಲೇ । ಮ್ಹಣೋನಿ ಬುಡಾಲೇ ಪಣ ವಾಯಾಗೇಲೆ । ತೇವೀ ನುರೇಚಿ ಪಾಪ ಕೇಲೇ । ಶೇವಟಲಿಯೇ ಭಕ್ತೀ ॥ ೪೧೯ ॥ ಯಾಲಾಗೀ ದುಷ್ಕೃತೀ ಜರ್‍ಹೀ ಜಾಹಾಲಾ । ತರೀ ಅನುತಾಪ ತೀರ್ಥೀ ನ್ಹಾಲಾ । ನ್ಹಾವೂನಿ ಮಜ ಆಂತ ಆಲಾ । ಸರ್ವಭಾವೇ ॥ ೪೨೦ ॥ ತರೀ ಆತಾ ಪವಿತ್ರ ತಯಾಚೇ ಕುಳ । ಆಭಿಜಾತ್ಯ ತೇಂಚಿ ನಿರ್ಮಳ । ಜನ್ಮಲೇಯಾಚೇ

ಫಳ। ತಯಾಸೀಚ ಜೋಡಲೇ ॥ ೨೧ ॥ ತೋಸಕಳಹೀ ಪಢಿನ್ನಲಾ । ತಪೇ ತೋಚಿ ತಪಿನ್ನಲಾ । ಅಷ್ಟಾಂಗ ಅಭ್ಯಾಸಿಲಾ । ಯೋಗ ತೇಣೇ ॥ ೨೨ ॥ ಹೇ ಅಸೋ ಬಹುತ ಪಾರ್ಥಾ । ತೋ ಉತರಲಾ ಕರ್ಮೀ ಸರ್ವಥಾ । ಜಯಾಚೀ ಅಖಂಡ ಗಾ ಆಸ್ಥಾ । ಮಜಚಿ ಲಾಗೀ ॥ ೨೩ ॥ ಅವಧಿಯಾ ಮನೋ ಬುದ್ಧೀಚಿಯಾ ರಾಹಟೀ । ಭರೋನಿ ಏಕ ನಿಷ್ಠೇಚೀ ಪೇಟೀ । ಮಜ ಮಾಜೀ ಕಿರೀಟೀ । ನಿಕ್ಷೇಪಿಲೀ ಜೇಣೇ ॥ ೨೪ ॥

**ಅರ್ಥ—** ಹೀಗೆ ಪ್ರೇಮಭಾವದಿಂದ ನನ್ನನ್ನು ಭಜಿಸುತ್ತಿರಲು ಅವರಿಗೆ ತಿರುಗಿ ಈ ಶರೀರವು ಪ್ರಾಪ್ತಿಯಾಗುವದಿಲ್ಲ. ಅವರು ಬೇಕಾದಂಥ ಜಾತಿಯವರಾಗಿದ್ದರೂ ಇರಲಿ, ॥ ೧೫ ॥ ಆದರೆ ಎಲೋ ಮಹಾವೀರನೇ ! ಅವನು ಪಾಪಾಚರಣೆಯನ್ನು ಮಾಡುವದರಲ್ಲಿ ಮೊದಲನೇಯವನು ಶ್ರೇಷ್ಠನಾಗಿದ್ದರೂ ತನ್ನ ( ಉಳಿದ ) ಆಯುಷ್ಯವನ್ನು ನನ್ನ ಭಕ್ತಿ ಮಾರ್ಗದಲ್ಲಿಯೇ ವಿನಿಯೋಗ ಮಾಡಿರುತ್ತಾನೆ. ॥ ೧೬ ॥ ಎಲೋ ! ಮರಣಕಾಲದಲ್ಲಿ ಯಾವ ವಾಸನಾದಲ್ಲಿ ಬದ್ಧಿಯು ತೊಡಕಿರುತ್ತದೆ. ಆ ವಾಸನಾನುರೂಪವಾಗಿ ಮುಂದೆ ಜನ್ಮ ದೊರಕುತ್ತದೆ. ಈ ಕಾರಣದ ದೆಶೆಯಿಂದಾ ಯಾವನು ತನ್ನ ಪ್ರಾಣವನ್ನು ಕೊನೆಗೆ ನನ್ನ ಭಕ್ತಿಯಲ್ಲಿಯೇ ಅರ್ಪಣಮಾಡಿದನು, ॥ ೧೭ ॥ ಅವನು ಪೂರ್ವ ವಯದಲ್ಲಿ ದುರಾಚಾರಿಯಾಗಿದ್ದರೂ ಅವನು ಸರ್ವೋತ್ತಮನೆಂದು ನಂಬು. ಯಾವನಾದರೊಬ್ಬ ಮನುಷ್ಯನು ಮಹಾಪೂರದೊಳಗಿಂದ ಮುಳುಗುತ್ತಿರಲು ಅವನು ಮರಣ ಹೊಂದದೆ ಪಾರಾಗಿ ಬಂದರೆ, ॥ ೧೮ ॥ ಹೇಗೆ ಅವನ ಮುಳಗುವದು ವ್ಯರ್ಥವಾಗಿ ಆಚೆದಂಡೆಗೆ ಹೋಗಿ ಮುಟ್ಟುವನೋ, ಅದೇ ಪ್ರಕಾರಾ ಮೊದಲು ಮಾಡಿದ ಪಾಪವು ಕೊನೆಗೆ ಭಕ್ತಿಮಾಡುದರಿಂದ ಉಳಿಯುವದೇ ಇಲ್ಲ. ( ನಾಶವಾಗುತ್ತದೆ. ) ॥ ೪೧೯ ॥ ಈ ಕಾರಣದಿಂದ ಮೊದಲು ದುರಾಚಾರಿ ಇದ್ದರೂ ಅವರು ಪಶ್ಚಾತ್ತಾಪರೂಪಿ ತೀರ್ಥದಲ್ಲಿ ಸ್ನಾನಮಾಡಿ ಸರ್ವಭಾವನೆಯಿಂದ ನನಗೆ ಅನನ್ಯ ಶರಣು ಬರುತ್ತಾರೆ. ॥ ೪೨೦ ॥ ಆದರೆ ಅವನ ಕುಲವು ಪವಿತ್ರವಾಗಿರುತ್ತದೆ. ಅದರಂತೆ ಶುದ್ಧ ಶ್ರೇಷ್ಠ ಕುಲೀನತ್ವವು ಮತ್ತು ಜನ್ಮಕ್ಕೆ ಬಂದ ಫಲವು ಅವನಿಗೇ ದೊರಕಿರುವದು. ॥ ೪೨೧ ॥ ಅವನೇ ಸರ್ವ ಶಾಸ್ತ್ರಗಳ ಅಧ್ಯಯನ ಮಾಡಿದನು. ಮತ್ತು ತಪಶ್ಚರ್ಯದ ಆಚರಣ ಮಾಡಿದನು. ಆಸನ ಮುಂತಾದ ಅಷ್ಟಾಂಗ ಯೋಗದ ಅಭ್ಯಾಸಮಾಡಿದ ಶ್ರೇಯವು, ಅವನಿಗೇ ಪ್ರಾಪ್ತವಾಗಿರುವದು. ॥ ೪೨೨ ॥ ಅರ್ಜುನನೇ ! ಈ ವರ್ಣನವು ಸಾಕು. ಯಾವನ ಪ್ರೇಮವು ಯಾವಾಗಲೂ ನನ್ನಲ್ಲಿಯೇ ನೆಲೆಗೊಂಡದೆ, ಅವನು ಸಂಪೂರ್ಣವಾಗಿ ಕರ್ಮರೂಪಿ ಬಂಧನದಿಂದ ಮುಕ್ತನಾಗಿರುವನು. ॥ ೪೨೩ ॥ ಎಲೈ ಅರ್ಜುನನೇ ! ಯಾವನು ತನ್ನ ಮನಬುದ್ಧಿಯ ಸರ್ವ ವ್ಯವಹಾರಗಳು ನನ್ನ ವಿಷಯದಲ್ಲಿ ಇರುವ ಅವನ ಏಕನಿಷ್ಠ ಪ್ರೇಮದ ಪೆಟ್ಟಿಗೆಯಲ್ಲಿ ತುಂಬಿ ಅ ಪೆಟ್ಟಿಗೆಯನ್ನು ನನ್ನ ಸ್ವಾಧೀನದಲ್ಲಿಯೇ ಇಟ್ಟುಬಿಟ್ಟದ್ದಾನೆ. ॥ ೪೨೪ ॥

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

**[ ಕ್ಷಿಪ್ರಂ ಭವತಿ ಧರ್ಮಾತ್ಮೇತಿ ]** ತೋ ಆತಾ ಅವಸರೇ ಮಜಸಾರಿಖಾ ಹೋಈಲ । ಐಸಾ ಹನಭಾವ ತುಜ ಜಾಇಲ । ಹಾಗಾ ಅಮೃತಾ ಆಂತ ರಾಹೀಲ । ತಯಾ ಮರಣ ಕೈಂಚೇ ॥ ೨೫ ॥ ಪೈ ಸೂರ್ಯ ಜೋ ವೇಳೂ ನುದೈಜೇ । ತಯಾ ವೇಳಾ ಕೀ ರಾತ್ರಿ ಮ್ಹಣಿಜೇ । ತೇವೀ ಮಾಝಿಯೇ ಭಕ್ತೀವಿಣ ಜೇ ಕೀಜೇ । ತೇ ಮಹಾಪಾಪ ನೋಹೇ ॥ ೨೬ ॥ ಮ್ಹಣೋನಿ ತಯಾಚಿಯಾ ಚಿತ್ತಾ । ಮಾಝಿ ಜವಳಿಕ ಪಾಂಡುಸುತಾ । ತೆಂವ್ಹಾಂಚಿ ತೋ ತತ್ವತಾ । ಸ್ವರೂಪ ಮಾಝೇ ॥ ೨೭ ॥ ಜೈಸಾ ದೀಪೇ ದೀಪಲಾವಿಜೇ । ತೇಥ ಆದೀಲ ಕೋಣ ಹೇ ನೋಳಖಿಜೇ । ತೈಸಾ ಸರ್ವಸ್ವೇ ಜೋ ಮಜ ಭಜೇ । ತೋ ಮೀಚಿ ಹೋವೂನಿ ಠಾಕೇ ॥ ೨೮ ॥ ಮಗ ಮಾಝೀ ನಿತ್ಯಶಾಂತಿ । ತಯಾ ತೇಚಿ ಕಾಂತೀ । ಕಿಂಬಹುನಾ ಜಿತೀ । ಮಾಝೇನಿ ಜೀವೇ ॥ ೨೯ ॥ ಏಥ ಪಾರ್ಥಾ ಪುಢತ ಪುಢತೀ । ತೇಂಚಿ ತೇ

**ಸಾಂಗೋ ಕಿತೀ । ಜರೀ ಮಿಯಾಚಾಡ ತರೀ ಭಕ್ತೀ । ನ ವಿಸಂಬಿಜೇ ಗಾ ॥ ೪೩೦ ॥ ಅಗಾ ಕುಳಾಚಿಯಾ ಚೋಖಟ ಪಣಾ ನ ಲಗಾ । ಆಭಿಜಾತ್ಯ ಝಣೀ ಶ್ಲಾಘಾ । ವ್ಯುತ್ಪತ್ತೀಚಾ ವಾವುಗಾ । ಸೋಸ ಕಾ ವಾಹಾವಾ ॥ ೩೧ ॥ ಕಾ ರೂಪ ವಯುಸಾ ಮಾಜಾ । ಆಥಿಲೇ ಪಣೇ ಕಾ ಗಾಜಾ । ಏಕ ಭಾವ ನಾಹಿ ಮಾಝಾ । ತರೀ ಪಾಲ್ಹಾಳ ತೇ ॥ ೩೨ ॥ ಕಣೇ ವಿಣ ಸೋಪಟೇ । ಕಣಸೇಲಾಗಲೀ ಘನದಾಟೇ । ಕಾಯ ಕರಾವೇ ಗೋಮಟೇ । ವೋಸ ನಗರ ॥ ೩೩ ॥ ನಾತರೀ ಸರೋವರ ಆಟಲೇ । ರಾನೀ ದುಃಖಿಯಾ ದುಃಖೀ ಭೇಟಲೇ । ಕಾ ವಾಂಝು ಫುಲೀ ಫುಲಲೇ । ಝಾಡ ಜೈಸೇ ॥ ೩೪ ॥ ತೈಸೇ ಸಕಳ ತೇ ವೈಭವ । ಅಥವಾ ಕುಳಜಾತಿ ಗೌರವ । ಜೈಸೇ ಶರೀರ ಆಹೇ ಸಾವೇವ । ಪರೀ ಜೀವಚಿ ನಾಹೀ ॥ ೩೫ ॥ ತೈಸೇ ಮಾಝಿಯೇ ಭಕ್ತೀವಿಣ । ಜಳೋತೇ ಜಿಯಾಲೇಪಣ । ಅಗಾ ಪೃಥ್ವೀವರೀ ಪಾಷಾಣ । ನಸತೀ ಕಾಇ ॥ ೩೬ ॥ ಸೈಹಿವರಾಚೀ ದಾಟ ಸಾವುಲೀ । ಸಜ್ಜನೀ ಜೈಸೀ ವಾಳಿಲೀ । ತೈಸೀ ಪುಣ್ಯೇ ಡಾವಲೂನಿಗೇಲೀ । ಅಭಕ್ತಾಂತೇ ॥ ೩೭ ॥ ನಿಂಬ ನಿಂಬೋಳಿಯಾ ವೋಡೋನಿ ಆಲಾ । ತರೀ ತೋ ಕಾವುಳಿಯಾಸೀಂಚಿ ಸುಕಾಳ ಜಾಹಾಲಾ । ತೈಸಾ ಭಕ್ತಿಹೀನ ವಾಢಿನ್ನಲಾ । ದೋಷಾಂಚಿ ಲಾಗೀ ॥ ೩೮ ॥ ಕಾ ಷಡ್ರಸ ಖಾಪರೀ ವಾಢಿಲೇ । ವಾಢೂನಿ ಚೋಹಟಾ ಠೇವಿಲೇ । ತೇ ಸುಣಿಯಾಂಚೇ ಉಪೇಗಾ ಆಲೇ । ಜಿಯಾಪರೀ ॥ ೩೯ ॥ ತೈಸೇ ಭಕ್ತಿಹೀನಾಚೇ ಜಿಣೇ । ಜೋ ಸ್ವಪ್ನೀಹಿ ಪರೀ ಸುಕೃತ ನೇಣೇ । ತೇಣೇ ಸಂಸಾರ ದುಃಖಾಸಿ ಭಾಣೇ । ವೋಗರಿಲೇ ॥ ೪೪೦ ॥ ಮ್ಹಣೋನಿ ಕುಳ ಉತ್ತಮ ನೋಹಾವೇ । ಜಾತೀ ಅಂತ್ಯಜಹೀ ವ್ಹಾವೇ । ವರೀ ದೇಹಾಚೇನಿ ನಾವೇ । ಪಶುಚೇಹೀ ಲಾಭೋ ॥ ೪೧ ॥ ಪಾಹೇ ಪಾ ಸಾವಜೇ ಹಾತಿರೂ ಧರಿಲೇ । ತೇಣೇ ತಯಾ ಕಾಕುಳತೀ ಮಾತೇ ಸ್ಮರಿಲೇ । ಕೀ ತಯಾಂಚೇ ಪಶುತ್ವ ವಾವೋ ಜಾಹಾಲೇ । ಪಾವಲಿಯಾ ಮಾತೇ ॥ ೪೨ ॥**

**ಅರ್ಥ** — ಆ ಭಕ್ತನು ಕಾಲಾಂತರದಿಂದ ನನ್ನಂತೆ ಆಗುವನೆಂಬ ಕಲ್ಪನೆಯು ನಿನ್ನ ಅಂತಃಕರಣದಲ್ಲಿ ಬರ ಬಹುದು ಆದರೇ ಅರ್ಜುನನೇ ! ಅಮೃತದಲ್ಲಿಯೇ ವಾಸ ಮಾಡುವವನಿಗೆ ಮರಣವು ಹೇಗೆ ಬರುವದು? ॥ ೨೫ ॥ ಯಾವ ಕಾಲದಲ್ಲಿ ಸೂರ್ಯನು ಉದಯವಾಗುವದಿಲ್ಲ, ಆ ಕಾಲಕ್ಕೆ ರಾತ್ರಿ ಎಂದೆನಬೇಕಾಗುತ್ತದೆ. ಅದರಂತೆ ನನ್ನ ಭಕ್ತಿಯು ಹೊರ್ತು ಯಾವ ಯಾವ ಕರ್ಮ ಮಾಡುವದು ಅವೆಲ್ಲ ಕೃತ್ಯಗಳು ಮಹಾಪಾತಕವಿರುವದಿಲ್ಲೇನು ? ॥ ೨೬ ॥ ಎಲೋ ಪಂಡುಪುತ್ರನೇ ! ಈ ಕಾರಣದಿಂದ ಭಕ್ತರ ಚಿತ್ತದಲ್ಲಿ ನನ್ನ ಸ್ವರೂಪದ ಸಾಂನಿಧ್ಯವು ಯಾವಾಗ್ಗೆ ಪ್ರಾಪ್ತವಾಗುತ್ತದೆ, ಆ ಕಾಲಕ್ಕೆ ನಿಜವಾಗಿ ಅವರು ಮದ್ರೂಪವಾಗುತ್ತಾರೆ. ॥ ೨೭ ॥ ಯಾವ ಪ್ರಕಾರಾ ಒಂದು ದೀವಿಗೆಯಿಂದ ಎರಡನೇ ದೀವಿಗೆಯನ್ನು ಹಚ್ಚುವದರಿಂದ ಅದರಲ್ಲಿ ಮೊದಲನೇ ದೀವಿಗೆಯು ಯಾವ ದಿರುವದೆಂಬದನ್ನು ಗೊತ್ತುಹಚ್ಚಲಿಕ್ಕೆ ಬರುವದಿಲ್ಲವೋ, ಅದೇ ಪ್ರಕಾರಾ ಸರ್ವ ಭಾವದಿಂದ ಪ್ರೇಮಪೂರ್ವಕ ನನ್ನನ್ನು ಭಜಿಸುತ್ತಾರೆ. ಅವರು ನನ್ನ ಸ್ವರೂಪವೇ ಆಗುತ್ತಾರೆ. ॥ ೨೮ ॥ ಆ ಮೇಲೆ ಅವರಿಗೆ ನನ್ನ ಸ್ಥಿತಿ ನನ್ನ ಕಾಂತಿ ಮತ್ತು ನನ್ನ ನಿತ್ಯ ಶಾಂತಿ ಪ್ರಾಪ್ತವಾಗುತ್ತವೆ. ಬಹಳ ಹೇಳುವದೇನು, ಅವರು ನನ್ನ ಮೇಲಿನ ಪ್ರೇಮದ ದೆಶೆ ಯಿಂದಲೇ ಬದುಕಿ ಜೀವವನ್ನಿಟ್ಟಿರುತ್ತಾರೆ. ॥ ೪೨೯ ॥ ಪಾರ್ಥ ! ಇಲ್ಲಿ ಮೇಲಿಂದ ಮೇಲೆ ಹೇಳಿದ್ದನ್ನೇ ಎಷ್ಟು ಹೇಳಬೇಕು. ಯಾರಿಗೆ ನನ್ನ ಪ್ರಾಪ್ತಿಯು ಅಪೇಕ್ಷೆಯು ಇರುವದೋ ಅವರು ನನ್ನ ಭಕ್ತಿಯನ್ನು ಯಾವಾಗಲೂ ಮರಿಯಬಾರದು. ॥ ೪೩೦ ॥ ಉತ್ತಮ ಶುದ್ಧ ಕುಲವೇ ಇರಬೇಕೆಂಬ ಅವಶ್ಯಕತೆಯು ಇರುವದಿಲ್ಲ. ಮತ್ತು ನಮ್ಮ ಕುಲವು ಶ್ರೇಷ್ಠವಿರಬೇಕೆಂಬದೂ ಕಾರಣವಿರುವದಿಲ್ಲ. ಆ ಮೇಲೆ ಸುಮ್ಮನೇ ಶಾಸ್ತ್ರಾಧ್ಯಯನ ಮುಂತಾದ್ದು ಮಾಡಿ ಶ್ರಮಪಟ್ಟು ವಿದ್ವತ್ತ ಸಂಪಾದನ ಮಾಡುವ ಅಪೇಕ್ಷೆಯನ್ನಾದರೂ ಮಾಡುವ ಕಾರಣವೇನು ? ॥ ೩೧ ॥ ಅಥವಾ ಉತ್ತಮ ಸ್ವರೂಪ ಮತ್ತು ತಾರುಣ್ಯದ ಮದದಿಂದ ಏಕೆ ಗರ್ವಿಷ್ಟರಾಗಬೇಕು ? ಐಶ್ವರ್ಯ ಮುಂತಾದ ಸಂಪತ್ತಿನ ಬಡಿವಾರವನ್ನು ಏಕೆ ತೋರಿಸಬೇಕು ? ( ಪರಮೇಶ್ವರನ ಪ್ರಾಪ್ತಿಗೆ ಇವುಗಳಲ್ಲಿ ಒಂದೂ ಬೇಕಾಗಿರುವ

ದಿಲ್ಲ.) ಆದರೆ ನನ್ನಲ್ಲಿ ಭಕ್ತಿಯೊಂದಿಲ್ಲದಿದ್ದರೆ ಈ ಸರ್ವವು ವ್ಯರ್ಥವಾಗಿರುವವು. ॥ ೪೩೨ ॥ ಕಾಳುಗಳಿಲ್ಲದ ಬಚ್ಚ ತೆನಿಗಳು ಬಹು ದಟತವಾಗಿ ಬೆಳೆದಿರಲು ಅಥವಾ ಸುಂದರ ಶಹರವಿದ್ದು ನಿರ್ಜನವಾಗಿದ್ದರೆ ಅದರ ಉಪಯೋಗ ವೇನು? ॥ ೩೩ ॥ ಇಲ್ಲವೇ ಸರೋವರವು ಅಟ್ಟಿಸಿ ವಣಗಿ ನೀರಿಲ್ಲದೇ ಹೋದರೆ ವ್ಯರ್ಥವೇ ಸರಿ. ಅಥವಾ ಅರಣ್ಯದಲ್ಲಿ ಒಬ್ಬ ದುಃಖದಿಂದ ಕಷ್ಟಪಡುವವನಿಗೆ ಮತ್ತೊಬ್ಬ ದುಃಖ ಮನುಷ್ಯನ ಭೆಟ್ಟಿ ಆದರೆ ಉಪಯೋಗ ವೇನು? ಬಂಜೆ ಗಿಡವು ಹೂವಿನಿಂದ ಪ್ರಫುಲ್ಲಿತವಾದರೆ, ॥ ೩೪ ॥ ಅದರಂತೆ ಭಕ್ತಿ ಹೀನನ ಸರ್ವ ವೈಭವವು, ಶ್ರೇಷ್ಠ ಕುಲವು ಮತ್ತು ಜಾತಿಯು ದೊಡ್ಡಸ್ತಿಕೆಯು, ವ್ಯರ್ಥವಾಗಿರುವದು. ಹೇಗೆ ಸರ್ವ ಅವಯವದಿಂದ ಯುಕ್ತವಾದ ಶರೀರವಿದ್ದು ಅದರಲ್ಲಿ ಜೀವ ಮಾತ್ರೊಂದಿರದೇ ಹೋದರೆ (ಆ ಹೆಣವನ್ನು ಸುಡುಗಾಡಿಗೊಯ್ದು ಸುಡಬೇಕು. ಆ ಶ್ರವದ ಸ್ಪರ್ಶದಿಂದ ನಕ್ಷತ್ರ ಕಂಡು ಸಚ್ಚೈಲ ಸ್ನಾನ ಮಾಡಬೇಕಾಗುವದು.) ॥ ೪೩೫ ॥ ಅದೇ ಪ್ರಕಾರಾ ನನ್ನ ಭಕ್ತಿಯ ಹೊರ್ತು ಅವನ ಜೀವಿತವು ವ್ಯರ್ಥವಾಗಿರುವದು. ಎಲೋ ಅರ್ಜುನನೇ! ಪ್ರುಥ್ವಿಯ ಮೇಲೆ ಬಂಡೆಗಲ್ಲುಗಳಿರುವದಿಲ್ಲೇನು? ಹೀಗೆ ನೋಡು ಸಿಂದಿಯ ಗಿಡದ ಮುಳ್ಳಿನ ದಟತವಾದ ನೆರಳು ಇದ್ದಾಗ್ಯೂ (ಅದರ ಉಪಯೋಗವೇನು?) ಅದನ್ನು ಸಜ್ಜನರು ನಿಷಿದ್ಧವೆಂದು ಬಿಟ್ಟುಬಿಡುತ್ತಾರೆ. ಅದೇ ಪ್ರಕಾರಾ ಯಾವನು ನನ್ನ ಭಕ್ತಿಯನ್ನು ಮಾಡುವದಿಲ್ಲ. ಅಂಥ ಭಕ್ತಿ ಹೀನ ಜನರಿಂದ (ತಪ್ಪಿಸಿ) ಪುಣ್ಯವು ಹೋಟುಹೋಗುತ್ತದೆ. ॥ ೩೭ ॥ ಬೇವಿನ ಗಿಡವು ಕಾಯಿ ಮತ್ತು ಹಣ್ಣುಗಳ ಭರದಿಂದ ಬಾಗಿ ಹೋದರೂ ಯಾವ ಪ್ರಕಾರಾ (ಪಕ್ಷೀಣಾಂ ಕಾಕಚಾಂಡಾಲಾ) ಕಾಗಿಗಳಿಗೆ ಸುಕಾಲವಾಗುತ್ತದೋ, ಅದೇ ಪ್ರಕಾರಾ ನನ್ನ ಭಕ್ತಿಯನ್ನು ಮಾಡದೇ ಇದ್ದ ಪಾಪಾತ್ಮನು ಪಾಪದ ಸಂಚಯುವನ್ನೇ ಮಾಡಿಕೊಳ್ಳುವದರ ದೆಶೆಯಿಂದ ಬೆಳೆದಿರುತ್ತಾನೆ. ॥ ೪೩೮ ॥ ಅಥವಾ ಷಡ್ರಸೋಪೇತವಾದ ಪಕ್ವಾನ್ನವನ್ನು ಒಂದು ಹಂಚಿನಲ್ಲಿ ಹಾಕಿ ಬೈಲಿಗೆ (ಬೀದಿಯಲ್ಲಿ) ಇಟ್ಟರೆ ಅದು ಶ್ವಾನಗಳಿಗೆ ಮಾತ್ರ ಉಪಯೋಗವಾಗುತ್ತದೆ. ॥ ೩೯ ॥ ಅದೇ ಪ್ರಕಾರಾ ಯಾವನು ಸ್ವಪ್ನದಲ್ಲಿಯೂ ಸಹ ಪುಣ್ಯ ಮಾರ್ಗದ ಆಚರಣವನ್ನು ಮಾಡುವದಿಲ್ಲ ಆ ಭಕ್ತಿ ಹೀನನ ಜೀವಿತವು ಅಂದರೆ ಸಂಸಾರ ದುಃಖವನ್ನು ಉಣಬಡಿಸಲು ಇಟ್ಟ ಪಾತ್ರೆಯೇ ಆಗಿರು ವನು. ॥ ೪೪೦ ॥ ಆದುದರಿಂದ ಉತ್ತಮ ಕುಲವು ಇಲ್ಲದೇ ಇದ್ದರೂ, ಅಥವಾ ಜಾತಿಯಿಂದ ಅಂತ್ಯಜನಾಗಿದ್ದರೂ, ಇಲ್ಲದೇ ಪಶುಜನ್ಮ ಪ್ರಾಪ್ತವಾಗಿದ್ದರೂ ನಡಿಯುಬಹುದು. ಮುಖ್ಯವಾಗಿ ಭಕ್ತಿಯೇ ಬೇಕಾಗಿರುವದು. ॥ ೪೧ ॥ (ಪಶು ಜನ್ಮದಲ್ಲಿ ಮುಕ್ತಿಯು ದೊರಕುವ ಬಗೆ ಹೇಗೆ? ಅನ್ನುವ ಸಂಶಯವನ್ನು ದೂರಮಾಡುತ್ತಾರೆ.) ಅರ್ಜುನನೇ! ನೋಡು. ಮೊಸಳೆಯು ನೀರಿನಲ್ಲಿ ಗಜೇಂದ್ರನನ್ನು ಹಿಡಿದಮೇಲೆ ಅದು ದೈನ್ಯವಾಗಿ ಅದರ ಬಾಯೊಳಗಿಂದ ಪಾರಾಗ ಬೇಕೆಂದು ನನ್ನ ಸ್ಮರಣೆ ಮಾಡಿದ್ದರಿಂದ ನನ್ನ ಪ್ರಾಪ್ತಿಯಾಗಿ ಅದರಿಂದ ಅದರ ಪಶುತ್ವ ವ್ಯರ್ಥವಾಯಿತು. ॥ ೪೪೨ ॥

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥ ೩೨ ॥**

[**ಮಾಂಹಿ ಪಾರ್ಥ ವ್ಯಪಾಸ್ರಿತ್ಯೇತಿ**] ಅಗಾ ನಾವೇ ಘೇತಾ ವೋಖಟೇ। ಜೇ ಆಘ ವೇಯಾ ಅಧಮಾಚಿಯೇ ಶೇವಟೇ। ತಿಯೇ ಪಾಪಯೋನೀಹೀ ಕೀರೀಟೇ। ಜನ್ಮಲೇ ಜೇ ॥ ೪೪೩ ॥ ತೇ ಪಾಪಯೋನಿ ಮೂಢ। ಮೂರ್ಖ ಜೈಸೇ ಕಾ ದಗಡ। ಪರೀ ಮಾಝ್ಯಾ ಠಾಯೀ ದೃಢ। ಸರ್ವಭಾವೇ ॥ ೪೪೪ ॥ ಜಯಾಂಚಿಯೇ ವಾಂಚೇ ಮಾಝೇ ಆಲಾಪ। ದೃಷ್ಟೀ ಭೋಗೀ ಮಾಝೇಂಚಿ ರೂಪ। ಜಯಾಂಚೆ ಮನ ಸಂಕಲ್ಪ। ಮಾಝಾಚಿ ವಾಹೇ ॥ ೪೪೫ ॥ ಮಾಝಿಯಾ ಕೀರ್ತಿ ವಿಣ। ಜಯಾಂಚೇ ರಿತೇ ನಾಹೀ ಶ್ರವಣ। ಜಯಾ ಸರ್ವಾಂಗೀ ಭೂಷಣ। ಮಾಝೀ ಸೇವಾ ॥ ೪೪೬ ॥ ಜಯಾಂಚೇ ಜ್ಞಾನ ವಿಷೋ ನೇಣೇ। ಜಾಣಿವ ಮಜ ಏಕಾತೇಚಿ ಜಾಣೇ। ಜಯಾ ಐಸೇ ಲಾಭೇ ತರೀ ಜಿಣೇ। ಯೆರ್ಹವೀ ಮರಣ ॥ ೪೪೭ ॥ ಐಸಾ ಆಘವಾಂಚಿ ಪರೀ ಪಾಂಡವಾ। ಜಿಹೀ ಆಪುಲಿಯಾ ಸರ್ವಭಾವಾ। ಜಿಯಾವಯಾ ಲಾಗೀ ಪೋಲಾವಾ। ಮೀಚಿ ಕೇಲಾ ॥ ೪೪೮ ॥

ತೇ ಪಾಪಯೋನೀಹೀ ಹೋತು ಕಾ । ತೇ ಶ್ರುತಾಧೀತಹೀ ನ ಹೋತುಕಾ । ಪರೀ ಮಜಸೀ ತುಕಿತಾ ತುಕಾ । ತುಟೀ ನಾಹೀ ॥ ೪೪೯ ॥ ಪಾಹೇ ಪಾ ಭಕ್ತೀಚೇನಿ ಆಥಿಲೇ ಪಣೇ । ದೈತ್ಯೀ ದೇವಾ ಆಣಿಲೇ ಉಣೇ । ಮಾಝೇ ನರಸಿಂಹತ್ವ ಲೇಣೇ । ಜಯಾಚಿಯೇ ಮಹಿಮೇ ॥ ೪೫೦ ॥ ತೋ ಪ್ರಲ್ಹಾದ ಗಾ ಮಜಸಾಟೀ । ಘೇತಾ ಬಹುತೇ ಸದಾ ಕಿರೀಟೀ । ಕಾ ಜೇ ಮಿಯಾ ದ್ಯಾವೇ ತೇ ಗೋಷ್ಠೀ । ತಯಾಚಿಯಾ ಜೋಡೇ ॥ ೫೧ ॥ ಯೆರ್ಹವೀ ದೈತ್ಯಕುಳಸಾಚೋಕಾರೇ । ಪರೀ ಇಂದ್ರಹೀ ಸರೀ ನ ಲಾಹೇ ಉಪರೇ । ಮ್ಹಣೋನಿ ಭಕ್ತಿ ಗಾ ಏಥ ಸರೇ । ಜಾತಿ ಅಪ್ರಮಾಣ ॥ ೪೫೨ ॥ ರಾಜಾಜ್ಞೇಚಿ ಅಕ್ಷರೇ ಆಹಾತೀ । ತಿಯೇ ಚಾಮಾ ಏಕಾ ಜಯಾ ಪಡತೀ । ತಯಾ ಚಾಮಾಸಾಠೀ ಜೋಡತೀ । ಸಕಳ ವಸ್ತು ॥ ೪೫೩ ॥ ವಾಂಚೂನಿ ಸೋನೇ ರುಪೇ ಪ್ರಮಾಣ ನೋಹೇ । ಏಥ ರಾಜಾಜ್ಞಾಚಿ ಸಮರ್ಥ ಆಹೇ । ತೇಚಿ ಚಾಮ ಏಕ ಜ್ಯೈ ಲಾಹೇ । ತೇಣೆ ವಿಕತೀ ಆಘವೀ ॥ ೪೫೪ ॥ ತೈಸೇ ಉತ್ತಮತ್ವ ತೈಚಿ ತರೇ । ತೈಚಿ ಸರ್ವಜ್ಞತಾ ಸರೇ । ಜ್ಯೈ ಮನೋ ಬುದ್ಧೀ ಭರೇ । ಮಾಝೇನಿ ಪ್ರೇಮೇ ॥ ೪೫೫ ॥ ಮ್ಹಣೋನಿ ಕುಳ ಜಾತಿ ವರ್ಣ । ಹೇ ಆಘವೇಂಚಿ ಗಾ ಅಕಾರಣ । ಏಥ ಅರ್ಜುನಾ ಮಾಝೇ ಪಣ । ಸಾರ್ಥಕ ಏಕ ॥ ೪೫೬ ॥ ತೇಂಚಿ ಭಲತೇಣೇ ಭಾವೇ । ಮನ ಮಜ ಆಂತು ಯೇತೇ ಹೋ ಆವೇ । ಆಲೇ ತರೀ ಆಘವೇ । ಮಾಗೀಲ ವಾವೋ ॥ ೪೫೭ ॥ ಜೈಸೇ ತವಚಿ ವಹಾಳ ವೋಹಳ । ಜವ ನ ಪವತೀ ಗಂಗಾಜಳ । ಮಗ ಹೋವೂನಿ ಠಾಕತೀ ಕೇವಳ । ಗಂಗಾ ರೂಪ ॥ ೪೫೮ ॥ ಕಾ ಖೈರ ಚಂದನ ಕಾಷ್ಠೇ । ಹೇ ವಿವಂಚನಾ ತವಚಿ ಘಟೇ । ಜವ ನ ಘಾಪತೀ ಏಕವಟೇ । ಅಗ್ನಿ ಮಾಜೇ ॥ ೪೫೯ ॥ ತೈಸೇ ಕ್ಷತ್ರೀ ವೈಶ್ಯಸ್ತ್ರಿಯಾ । ಕಾ ಶೂದ್ರ ಅಂತ್ಯಜಾದಿ ಇಯಾ । ಜಾತೀ ತವಚಿ ವೇಗಳಾಲಿಯಾ । ಜವ ನ ಪವತೀ ಮಾತೇ ॥ ೪೬೦ ॥ ಮಗ ಜಾತೀ ವ್ಯಕ್ತೀ ಪಡೇ ಬಿಂದುಲೇ । ಜೇವ್ಹಾ ಭಾವೇ ಹೋತೀ ಮಜ ಮೀನಲೇ । ಜೈಸೇ ಲವಣ ಕಣೇ ಘಾತಲೇ । ಸಾಗರಾ ಮಾಜೇ ॥ ೪೬೧ ॥ ತವ ವರೀ ನದನದೀಂಚೀ ನಾವೇ । ತವಚಿ ಪೂರ್ವ ಪಶ್ಚಿಮೇಚೇ ಯಾವೇ । ಜವ ನ ಯೇತಿ ಆಘವೇ । ಸಮುದ್ರಾ ಮಾಜೇ ॥ ೪೬೨ ॥ ಹೇಚಿ ಕವಣೇ ಏಕೇ ಮಿಸೇ । ಚಿತ್ತ ಮಾಝೇ ಠಾಯೀ ಪ್ರವೇಶೇ । ಯೇತುಲೇ ಹೋ ಮಗ ಆಪೈಸೇ । ಮೀಚಿ ಹೋಣೇ ಅಸೇ ॥ ೬೩ ॥ ಅಗಾ ಮರೀ ಫೋಡಾವಯಾಚಿ ಲಾಗಿ । ಲೋ ಹೋ ಮಿಳೋ ಕಾ ಪರೀಸಾಚೇ ಅಂಗೀ । ಕಾ ಜೇ ಮಿಳತಿಯೇ ಪ್ರಸಂಗೀ । ಸೋನೇಂಚಿ ಹೋಈಲ ॥ ೬೪ ॥ ಪಾಹೇ ಪಾ ವಲ್ಲಭಾಚೇನಿ ವ್ಯಾಜೇ । ತಿಯಾ ವ್ರಜಾಂಗನಾಂಚೀ ನಿಜೇ । ಮಜ ಮಿನಲಿಯಾ ಕಾಯ ಮಾಝೇ । ಸ್ವರೂಪ ನವ್ಹತೀ ॥ ೬೫ ॥ ನಾತರೀ ಭಯಾಚೇನಿ ಮಿಸೇ । ಮಾತೇ ನ ಪವಿಜೇಚಿ ಕಾಯ ಕಂಸೇ । ಕೀ ಅಖಂಡ ವೈರ ವಶೇ । ಚೈದ್ಯಾದಿಕೀ ॥ ೬೬ ॥ ಅಗಾ ಸೋಯರೇ ಪಣೇಂಚಿ ಪಾಂಡವಾ । ಮಾಝೇ ಸಾಯುಜ್ಯಯಾದವಾ । ಕೀ ಮಮತ್ವೇ ವಸುದೇವಾ । ದಿಕಾ ಸಕಳಾ ॥ ೬೭ ॥ ನಾರದಾ ಧ್ರುವಾ ಅಕ್ರೂರಾ । ಶುಕಾ ಹನ ಸನತ್ಕುಮಾರಾ । ಇಯಾ ಭಕ್ತೀ ಮೀ ಧನುರ್ಧರಾ । ಪ್ರಾಪ್ಯ ಜೈಸಾ ॥ ೬೮ ॥ ತೈಸಾಚಿ ಗೋಪಿಕಾಸೀ ಕಾಮೇ । ತಯಾ ಕಂಸಾ ಭಯಸಂಭ್ರಮೇ । ಯೇರಾ ಘಾತಕಾ ಮನೋ ಧರ್ಮೇ । ಶಿಸುಪಾಲಾದಿಕಾ ॥ ೬೯ ॥ ಅಗಾ ಮೀ ಏಕಲಾಣೇಚೇ ಖಾಗೇ । ಮಜಯೇವೋ ಯೇ ಭಲತೇನಿ ಮಾರ್ಗೇ । ಭಕ್ತಿ ಕಾ ವಿಷಯ ವಿರಾಗೇ । ಅಥವಾ ವೈರೇ ॥ ೪೭೦ ॥ ಮ್ಹಣೋನಿ ಪಾರ್ಥಾ ಪಾಹೀ । ಪ್ರವೇಶಾ ವಯಾ ಮಾಝ್ಯಾ ಠಾಯೀ । ಉಪಾಯಾಂಚೀ ನಾಹೀ । ವಾಣೀ ಏಥ ॥ ೭೧ ॥ ಆಣಿ ಭಲತಿಯಾ ಜಾತಿ ಜನ್ಮಾವೇ । ಮಗ ಭಜಿಜೇ ಕಾ ವಿರೋಧಾವೇ । ಪರೀ ಭಕ್ತಾ ಕಾ ವೈರಿಯಾ ವ್ಹಾವೇ । ಮಾಝಿಯಾಚಿ ॥ ೭೨ ॥ ಅಗಾ ಕವಣೇ ಏಕೇ ಬೋಲೆ । ಮಾಝೇಪಣ ಜರ್ಹೀ ಜಾಹಾಲೇ । ತರೀ ಮೀ

ಹೋಣೇ ಆಲೇ । ಹಾತಾ ನಿರುತೇ ॥ ೭೩ ॥ ಯೂಲಾಗೀ ಪಾಪಯೋನೀಹೀ ಅರ್ಜುನಾ । ಕಾ ವೈಶ್ಯ ಶೂದ್ರ ಅಂಗನಾ । ಮಾತೇ ಭಜತಾ ಸದನಾ । ಮಾಝಿಯಾ ಯೇತೀ ॥ ೭೪ ॥

**ಅರ್ಥ—** ಯಾವನು ಅಧಮನಕಿಂತಲೂ ಅಧಮನು, ಮತ್ತು ಅವನ ಹೆಸರು ಉಚ್ಚರಿಸುವದು ಸಹ ಉಚಿತ ವಾಗಿರುವದಿಲ್ಲವೋ, ಇಂಥ ಪಾಪ ಯೋನಿಯಲ್ಲಿ ಯಾವನು ಜನ್ಮ ತೆಗಿದುಕೊಂಡಿರುವನು, ॥ ೪೩ ॥ ಅವನ ಜನ್ಮವು ಇಂಥ ಪಾಪಯೋನಿಯಲ್ಲಿ ಆಗಿರುವದು ಮತ್ತು ಮೂರ್ಖತನದಲ್ಲಿ ನೋಡಿದರೆ ಕೇವಲ ಬಂಡಿಗಲ್ಲೇ ಆಗಿರುವನು. ಆದರೂ ನನ್ನಲ್ಲಿ ಮಾತ್ರ ಸರ್ವದರಿಂದಲೂ ಧೃಡವಾದ ಭಾವವನ್ನಿಟ್ಟಿರುವನು. ॥ ೪೪ ॥ ಯಾವನ ವಾಣಿಯಿಂದ ನನ್ನ ನಾಮೋಚ್ಚಾರವಾಗುತ್ತದೆ ಯಾವನ ಕಣ್ಣುಗಳು ನನ್ನ ರೂಪವನ್ನೇ ನೋಡುತ್ತವೆ ಮತ್ತು ಯಾವನ ಮನಸಿನಲ್ಲಿ ನನ್ನ ಹೊರ್ತು ಅನ್ಯ ಸಂಕಲ್ಪವೇ ಇರುವದಿಲ್ಲವೋ, ॥ ೪೫ ॥ ಯಾವನ ಕಿವಿಗಳು ನನ್ನ ಗುಣಾನುವಾದ ವನ್ನು ಕೇಳದಲೆ ಕ್ಷಣ ಕಾಲವಾದರೂ ಸುಮ್ಮನೇ ಇರುವದಿಲ್ಲ. ( ಯಾವಾಗಲೂ ಕೇಳುತ್ತವೆ. ) ಮತ್ತು ಯಾವನ ಸರ್ವ ಅವಯವಗಳಿಗೆ ನನ್ನ ಸೇವೆಯ ವಿನಃ ಯಾವದೂ ಭೂಷಣಾಸ್ಪದವಾಗಿರುವದಿಲ್ಲವೋ, ॥ ೪೪೬ ॥ ಯಾವನ ಬುದ್ಧಿಗೆ ವಿಷಯವು ಕಾಣಿಸದೇ ನಾನೇ ಒಬ್ಬನು ಕಾಣಿಸುತ್ತಿರುತ್ತೇನೆಯೋ, ಇಂಥ ಸ್ಥಿತಿಯು ಇದ್ದರೆ ಮಾತ್ರ ಅವರು ಜೀವದಿಂದಿರುತ್ತಾರೆ. ಇಲ್ಲದಿದ್ದರೆ ಸಾಯುವರು. ॥ ೪೪೭ ॥ ಎಲೋ ಪಾಂಡುಪುತ್ರನೇ ಹೀಗೆ ಸರ್ವ ಪ್ರಕಾರದಿಂದಲೂ. ಯಾರು ತಮ್ಮ ಭಾವ ಭಕ್ತಿಯನ್ನು ಮತ್ತು ತಮ್ಮ ಸರ್ವಸ್ವವನ್ನು ನನಗೆ ಅರ್ಪಿಸಿ ತಮ್ಮ ಜೀವಿತದ ಆಧಾರವು ನಾನೇ ಎಂದು ನಂಬಿರುವರು, ॥ ೪೪೮ ॥ ಅವರು ಪಾಪಯೋನಿಯಲ್ಲಿ ಜನ್ಮ ತಗೊಂಡವ ರಾಗಿರಲಿ, ಇಲ್ಲವೇ ಶಾಸ್ತ್ರ ಸಹಾ ಕೇಳಿದವರು ಮತ್ತು ಓದಿದವರು ಆಗದೇ ಇರಲಿ, ಆದರೆ ಅವರನ್ನು ನನ್ನ ಕೂಡಾ ತುಲನಾ ಮಾಡುತ್ತಿರಲು ಅವರು ನನ್ನಕಿಂತಲೂ ಕಡಿಮೆ ಬೀಳುವದಿಲ್ಲ. ॥ ೪೯ ॥ ಹೀಗೆ ನೋಡು. ಭಕ್ತಿಯ ಮಹತ್ವದಿಂದ ದೈತ್ಯರು ದೇವತೆಗಳಿಗೆ ಸಹಾ ಹಿಂದೊಗೆದರು. ಮತ್ತು ಆ ಪ್ರಲ್ಹಾದನ ಭಕ್ತಿಯ ಮಹತ್ಮೆಯ ದೆಶೆಯಿಂದ ನನಗೆ ನರಸಿಂಹ ಅವತಾರವನ್ನು ತೆಗಿದುಕೊಳ್ಳಬೇಕಾಯಿತು. ॥ ೫೦ ॥ ಎಲೋ ಕಿರೀಟ ! ಯಾವ ಪ್ರಲ್ಹಾದನು ನನ್ನ ಪ್ರಾಪ್ತಿಯ ದೆಶೆಯಿಂದ ಯಾವಾಗಲೂ ಅನಂತ ಸಂಕಟಗಳನ್ನು ಭೋಗಿಸಿದನೋ, ಆ ಪ್ರಲ್ಹಾದನ ಚರಿತ್ರವನ್ನು ಒಂದು ವೇಳೆ ವರ್ಣನ ಮಾಡಿದರೆ, ನಾನು ಪ್ರಸನ್ನ ಆಗುವದರಿಂದ ಯಾವ ಪ್ರಾಪ್ತಿಯು ಆಗುತ್ತದೋ, ಅದೇ ( ಲಾಭವು ) ಆ ಭಕ್ತ ಚರಿತ್ರೆಯನ್ನು ವರ್ಣನ ಮಾಡುವದರಿಂದ ಮತ್ತು ಶ್ರವಣ ಮಾಡುವದರಿಂದ ಆಗುತ್ತದೆ. ॥ ೪೫೧ ॥ ನಿಜವಾಗಿ ನೋಡಿದರೆ ಅವನು ದೈತ್ಯ ಕುಲದಲ್ಲಿ ಜನ್ಮ ತಗೊಂಡವ ನಾದಾಗ್ಯೂ ಇಂದ್ರನಿಗೆ ಸಹಾ ಅವನಕಿಂತಲೂ ಹೆಚ್ಚಿಗೆ ಶ್ರೇಷ್ಟತ್ವವು ದೊರಕಿರುವದಿಲ್ಲ. ಆದುದರಿಂದ ನನ್ನ ಪ್ರಾಪ್ತಿಯನ್ನು ಮಾಡಿಕೊಳ್ಳಲಿಕ್ಕೆ ಒಂದು ಭಕ್ತಿಯೇ ಸಾಕಾಗಿರುವದು. ಶ್ರೇಷ್ಟ ಕುಲ ಮುಂತಾದವುಗಳು ಈ ಯಾವದೂ ಕಾರಣವಿರುವದಿಲ್ಲ. ॥ ೪೫೨ ॥ ರಾಜಾಜ್ಞೆಯ ಅಕ್ಷರಗಳು ಒಂದು ತೊಗಲಿನ ತುಣಕಿನಲ್ಲಿ ಬರೆ ದಿದ್ದಾಗ್ಯಾದರೂ ಆ ತೊಗಲಿನ ತುಂಡಿನಿಂದ ( ನೋಟಿನಿಂದ ) ಎಲ್ಲ ವಸ್ತುಗಳ ಲಾಭವು ಸಹಜವೇ ಆಗುತ್ತವೆ. ॥ ೫೩ ॥ ಆ ಅಕ್ಷರಗಳ ಹೊರ್ತು ಬಂಗಾರ ಮತ್ತು ಬೆಳ್ಳಿಯ ಬೆಲೆಯು ಕಡಿಮೆ ಆಗಿರುವದು ಯಾಕಂದರೆ ಅಲ್ಲಿ ರಾಜಾಜ್ಞೆಯ ಅಕ್ಷರಗಳೇ ಸಮರ್ಥವಾಗಿರುವವು. ಅದೇ ರಾಜ ಮುದ್ರೆಯಿಂದ ಯುಕ್ತವಾದ ತೊಗಲಿನ ( ನೋಟಿನಿಂದ ) ಬೇಕಾದ ಪದಾರ್ಥಗಳು ಮಾರಲಿಕ್ಕೆ ದೊರಕುತ್ತವೆ. ॥ ೪೫೪ ॥ ಅದೇ ಪ್ರಕಾರಾ ಯಾವಾಗ್ಗೆ ಮನ ಮತ್ತು ಬುದ್ಧಿಗಳು ನನ್ನ ಪ್ರೇಮದಿಂದಲೇ ಯುಕ್ತವಾಗುತ್ತವೆ, ಆಗ್ಗೆ ದೊಡ್ಡಸ್ತಿಕೆಯೂ ಸರ್ವಜ್ಞತನವು ಇವುಗಳ ಉಪಯೋಗವಾಗುತ್ತದೆ. ॥ ೪೫೫ ॥ ಆದುದರಿಂದ ಕುಲ ಜಾತಿ ವರ್ಣ ಇವೆಲ್ಲವೂ ನಿಷ್ಕಾರಣವಾಗಿರುತ್ತವೆ. ಅರ್ಜುನನೇ ! ಕೇವಲ ನನ್ನ ಭಕ್ತಿಯೊಂದರಿಂದಲೆ ಇವೆಲ್ಲವೂ ಸಾರ್ಥಕವಾಗುತ್ತವೆ. ॥ ೫೬ ॥ ಅನನ್ಯ ಭಕ್ತಿ ಯನ್ನು ಬೇಕಾದವರು ಮನೋ ಭಾವದಿಂದ ಮಾಡುತ್ತಿರಲು ಅವರು ಪೂರ್ವದಲ್ಲಿ ಯಾವ ವರ್ಣದವರಿದ್ದರೂ ಚಿಂತೆಯಿಲ್ಲ. ॥ ೫೭ ॥ ಹಳ್ಳಗಳು ಹರಿದು ಎಲ್ಲಿಯ ವರೆಗೆ ಗಂಗೆಯಲ್ಲಿ ಕೂಡಿರುವದಿಲ್ಲವೋ, ಅಲ್ಲಿಯ ವರೆಗೆ

ಅವುಗಳಿಗೆ ಹಳ್ಳ ಕೊಳ್ಳ ಮುಂತಾದ ಹೆಸರಿನಿಂದ ಕರೆಯುತ್ತಿರುತ್ತಾರೆ. ಆದರೆ ಅವುಗಳು ಗಂಗೆಯಲ್ಲಿ ಕೂಡಿದ ಮೇಲೆ ಗಂಗಾ ಸ್ವರೂಪವೇ ಆಗುತ್ತವೆ. ॥ ೫೮ ॥ ಇಲ್ಲವೇ ಕಟ್ಟಿಗೆಗಳು ಎಲ್ಲಿಯ ವರೆಗೆ ಅಗ್ನಿ ಸಂಸರ್ಗವಾಗಿ ರುವದಿಲ್ಲವೋ, ಅಲ್ಲಿಯ ವರೆಗೆ ಅವುಗಳಿಗೆ ಜಾಲಿ, ಬೇವು, ಚಂದನ, ಮುಂತಾದ ಅನಂತ ನಾಮಗಳು ಉಂಟಾ ಗಿರುತ್ತವೆ. ॥ ೫೯ ॥ ಅದೇ ಪ್ರಕಾರಾ ಎಲ್ಲಿಯು ವರೆಗೆ ನನ್ನ ಸ್ವರೂಪವು ಪ್ರಾಪ್ತವಾಗಿರುವದಿಲ್ಲವೋ ಅಲ್ಲಿಯ ವರೆಗೆ ಮಾತ್ರ ಕ್ಷತ್ರಿಯ, ವೈಶ್ಯ, ಶೂದ್ರ, ಸ್ತ್ರೀ, ಅಂತ್ಯಜ, ಮುಂತಾದ ಬೇರೆ ಬೇರೆ ಜಾತಿಗಳು ಇರುತ್ತವೆ. ॥ ೬೦ ॥ ಯಾವ ಪ್ರಕಾರಾ ಸಮುದ್ರದಲ್ಲಿ ಉಪ್ಪು ಹಾಕಿದ ಮೇಲೆ ಅದು ಒಂದೇ ರೂಪವಾಗಿ ಹೋಗು ವದೋ ಅದೇ ಪ್ರಕಾರಾ ಮನೋಭಾವದಿಂದ ನನಗೆ ಅನನ್ಯ ಶರಣು ಬಂದ ಮೇಲೆ ಜಾತಿ ವ್ಯಕ್ತಿ ಮುಂತಾದ ಭೇದಗಳು ಇಲ್ಲದಂತೆಯಾಗುತ್ತವೆ. ॥ ೬೧ ॥ ಎಲ್ಲಿಯು ವರೆಗೆ ಸಮುದ್ರದಲ್ಲಿ ಬಂದು ಕೂಡಿರುವದಿಲ್ಲವೋ ಅಲ್ಲಿಯು ವರೆಗೆ ಗಂಗಾ ಯಮುನಾ ನದಿಗಳು ಮತ್ತು ಪೂರ್ವ ವಾಹಿನಿ ಪಶ್ಚಿಮ ವಾಹಿನಿ ಮುಂತಾದ ಭೇದ ಗಳು ಕಾಣುತ್ತವೆ. ॥ ೬೨ ॥ ಅದೇ ಪ್ರಕಾರಾ ಯಾವದಾದರೂ ನಿಮಿತ್ತದಿಂದ ನನ್ನ ಕಡೆಗೆ ಚಿತ್ತವು ಅಂಟಿ ಕೊಂಡರೆ ಸಾಕು. ಆ ಮೇಲೆ ಸಹಜವೇ ನನ್ನ ಸ್ವರೂಪವು ಪ್ರಾಪ್ತವಾಗುತ್ತದೆ. ॥ ೬೩ ॥ ಎಲೋ ಅರ್ಜುನನೇ ಸ್ಪರ್ಶಮಣಿಯನ್ನು ಒಡೆಯುವದರ ದೆಶೆಯಿಂದಾದರೂ ಅದಕ್ಕೆ ಕಬ್ಬಿಣದ ಸುತ್ತಿಗೆಯನ್ನು ಸ್ಪರ್ಶ ಮಾಡಿದ ಕೂಡಲೆ ಅದು ಆ ಕ್ಷಣಕ್ಕೆ ಸುವರ್ಣವಾಗುತ್ತದೋ, ॥ ೬೪ ॥ ಅದೇ ಪ್ರಕಾರಾ ಗೋಪಿಕಾ ಸ್ತ್ರೀಯರು ವಿಷಯಾಭಿಲಾಷೆಯಿಂದ ನನ್ನಲ್ಲಿ ಪ್ರೇಮಪೂರ್ವಕವಾಗಿ ಚಿತ್ತವನ್ನಿಟ್ಟದರಿಂದ ಅವರಿಗೆ ನನ್ನ ಸ್ವರೂಪ ಪ್ರಾಪ್ತಿ ಯಾಗಿರುವದಿಲ್ಲೇನು ? ॥ ೬೫ ॥ ಭೀತಿಯ ಯೋಗದಿಂದ ಕಂಸನು ಅಥವಾ ನನ್ನಲ್ಲಿ ಅಖಂಡ ವೈರತ್ವವನ್ನು ಮಾಡಿದ ಶಿಸುಪಾಲಾದಿಗಳಿಗೆ ನನ್ನ ಸ್ವರೂಪ ಪ್ರಾಪ್ತಿ ಆಗಿರುವದಿಲ್ಲೇ ಹೇಗೆ ? ॥ ೬೬ ॥ ಅದರಂತೆ ಅಯ್ಯಾ ಅರ್ಜು ನನೇ! ಪಾಂಡವರು ಮತ್ತು ಯಾದವ ಮುಂತಾದವರಿಗೆ ಆಪ್ತತ್ವದ ಸಂಬಂಧದಿಂದಲೂ, ವಸುದೇವ ಮುಂತಾದ ವರಿಗೆ ಮಮತ್ವದಿಂದಲೂ ನನ್ನ ಸಾಯುಜ್ಯ ಮುಕ್ತಿಯು ದೊರಕಿರುವದಿಲ್ಲೇನು ? ॥ ೬೭ ॥ ಎಲೋ ಧನುರ್ಧ ರನೇ ! ನಾರದ, ಧ್ರುವ, ಅಕ್ರೂರ, ಶುಕ, ಮತ್ತು ಸನತ್ಕುಮಾರ, ಮುಂತಾದವರಿಗೆ ನಾನು ಹ್ಯಾಗೆ ಭಕ್ತಿ ಯಿಂದ ಪ್ರಾಪ್ತವಾಗಿರುವೆನೋ, ॥ ೬೮ ॥ ಅದರಂತೆ ಗೋಪಿಕಾ ಸ್ತ್ರೀಯರಿಗೆ ಕಾಮದಿಂದ, ( ವಿಷಯ ಬುದ್ಧಿ ಯಿಂದ ) ಕಂಸನಿಗೆ ಭೀತಿಯಿಂದ, ಮತ್ತು ಶಿಸುಪಾಲ ಮುಂತಾದವರಿಗೆ ವೈರಬುದ್ಧಿಯಿಂದ, ನಾನು ಪ್ರಾಪ್ತ ನಾಗಿದ್ದೇನೆ. ॥ ೬೯ ॥ ಎಲೋ ಅರ್ಜುನನೇ! ನಾನು ಮುಕ್ತಿಯ ಸ್ಥಾನವಾಗಿದ್ದೇನೆ. ಆದುದರಿಂದ ನನಗೆ ಬೇಕಾ ದಂಥ ಮಾರ್ಗದಿಂದ ಅಂದರೆ ಭಕ್ತಿಯಿಂದಾಗಲೀ ವಿಷಯ ಬುದ್ಧಿಯಿಂದಾಗಲೀ, ವೈರಾಗ್ಯದಿಂದಾಗಲೀ, ಅಥವಾ ವೈರತ್ವದಿಂದಾಗಲೀ ಹೀಗೆ ಬೇಕಾದ ಮಾರ್ಗದಿಂದ ನನ್ನ ಕಡಿಗೆ ( ನನ್ನ ಸ್ವರೂಪದಲ್ಲಿ ) ಬಂದು ಸೇರಲಿಕ್ಕೆ ತೊಂದರೆ ಉಳದಿರುವದಿಲ್ಲ. ॥ ೪೭೦ ॥ ಆದುದರಿಂದ ಪಾರ್ಥನೇ ! ನನ್ನ ಹತ್ತರ ಬಂದು ಕೂಡುವದರ ದೆಶೆ ಯಿಂದ ಇಲ್ಲಿ ಸಾಧನದ ಕೊರತೆಯೇ ಇರುವದಿಲ್ಲ. ( ಹೀಗೆ ಅನೇಕ ಮಾರ್ಗಗಳು ) ಇರುವವು. ॥ ೪೭೧ ॥ ಮತ್ತು ಬೇಕಾದ ಜಾತಿಯಲ್ಲಿ ಜನ್ಮ ಬರಲಿ ಅದರ ತೊಂದರೆಯೇ ಉಳದಿರುವದಿಲ್ಲ. ಆ ಮೇಲೆ ನನ್ನಲ್ಲಿ ಭಕ್ತಿ ಇಲ್ಲವೇ ವೈರಿತನವನ್ನು ಸಾಧಿಸಿದರೂ ಅಡ್ಡಿ ಇರುವದಿಲ್ಲ. ಆದರೆ ಭಕ್ತಿಯನ್ನಾಗಲೀ, ಅಥವಾ ವೈರತ್ವವನ್ನಾ ಗಲೀ, ಮಾಡುವದಿದ್ದರೆ ನನ್ನಲ್ಲಿಯೇ ಮಾಡಬೇಕು. ॥ ೪೭೨ ॥ ಎಲೋ! ಯಾವದಾದರೂ ನಿಮಿತ್ಯದಿಂದ ನನಗೆ ಯಾರಾದರೂ ಶರಣು ಬಂದರೆ ಮದ್ರೂಪವಾಗುವದು ಅವರ ಕೈಯೊಳಗೇ ಅದೆ. ॥ ೭೩ ॥ ಈ ಕಾರಣದ ದೆಶೆ ಯಿಂದ ಅರ್ಜುನನೇ ! ಪಾಪಯೋನಿಯಲ್ಲಿ ಜನ್ಮ ಬಂದಿರಲಿ, ಇಲ್ಲವೇ ವೈಶ್ಯ, ಶೂದ್ರ, ಸ್ತ್ರೀಯರಿರಲಿ, ಇವರು ನನ್ನ ಭಕ್ತಿಯನ್ನು ಮಾಡುವದರಿಂದ ನನ್ನ ಸ್ವರೂಪವನ್ನು ಹೊಂದುತ್ತಾರೆ. ॥ ೪೭೪ ॥

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥ ೩೩ ॥**

**[ ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಇತಿ ]** ಮಗ ವರ್ಣಾಂಮಾಜೀ ಛತ್ರ ಚಾಮರ । ಸ್ವರ್ಗ ಜಯಾಚೇ ಅಗ್ರಹಾರ । ಮಂತ್ರ ವಿದ್ಯೇಸಿ ಮಾಹೇರ । ಬ್ರಾಹ್ಮಣ ಜೇ ॥ ೭೫ ॥ ಜೇ ಪೃಥ್ವೀತಳೀಂಚೇ ದೇವ । ಜೇ ತಪೋವತಾರ ಸಾವಯವ । ಸಕಳ ತೀರ್ಥಾಸಿ ದೈವ । ಉದಯಲೇ ಜೇ ॥ ೭೬ ॥ ಜೆಥ ಅಖಂಡ ವಸಿಜೇ ಯಾಗೀ । ಜೇ ವೇದಾಂಚೀ ವಜ್ರಾಂಗೀ । ಜಯಾಂಚಿಯೇ ದಿಠೀಚಿಯಾ ಉತ್ಸಂಗೀ । ಮಂಗಳ ವಾಢೇ ॥ ೭೭ ॥ ಜಯಾಂಚಿಯೇ ಆಸ್ಥೇಚೇನಿ ವೋಲೇ । ಸತ್ಕರ್ಮ ಪಾಲ್ಹಾಳೀ ಗೇಲೇ । ಸಂಕಲ್ಪೆ ಸತ್ಯ ಜಿಯಾಲೇ । ಜಯಾಂಚೇನಿ ॥ ೭೮ ॥ ಜಯಾಂಚೇನಿ ಗಾ ಬೋಲೇ । ಅಗ್ನೀಸಿ ಆಯುಷ್ಯ ಜಾಹಲೇ । ಮ್ಹಣೋನಿ ಸಮುದ್ರೇ ಪಾಣೀ ಆಪುಲೇ । ದಿಧಲೇ ಯಾಂಚಿಯಾ ಪ್ರೀತೀ ॥ ೭೯ ॥ ಮಿಯಾ ಲಕ್ಷ್ಮೀ ಡಾವಲೋನಿ ಕೇಲೀ ಪರೌತೀ । ಫೇಡೋನಿ ಕೌಸ್ತುಭ ಘೇತಲಾ ಹಾತೀ । ಮಗ ವೋಢವಲೀ ವಕ್ಷಃಸ್ಥಳಾಚೀ ವಾಖತೀ । ಚರಣರಜಾ ॥ ೪೮೦ ॥ ಅಜ್ಹೂನಿ ಪಾವುಲಾಚೀ ಮುದ್ರಾ । ಮೀ ಹೃದಯೀ ವಾಹೇ ಗಾ ಸುಭದ್ರಾ । ಜೇ ಆಪುಲಿಯಾ ದೈವ ಸಮುದ್ರಾ । ಜತನೇ ಲಾಗೀ ॥ ೮೧ ॥ ಜಯಾಂಚಾ ಕೋಪ ಸುಭಟಾ । ಕಾಳಾಗ್ನಿರುದ್ರಾಚಾ ವಸೌಟಾ । ಜಯಾಂಚೇ ಪ್ರಸಾದೀ ಫುಕಟಾ । ಜೋಡತೀ ಸಿದ್ಧೀ ॥ ೮೨ ॥ ಐಸೇ ಪುಣ್ಯಪೂಜ್ಯ ಜೇ ಬ್ರಾಹ್ಮಣ । ಆಣಿ ಮಾಝ್ಯಾ ಠಾಯೀಂ ಅತಿನಿಪುಣ । ಆತಾ ಮಾತೇ ಪಾವತೀ ತೇಹೇ ಕವಣ । ಸಮರ್ಥಣೇ ॥ ೮೩ ॥ ಪಾಹೇ ಪಾ ಚಂದನಾಚೇನಿ ಅಂಗಾನಿಳೇ । ಶಿವತಿಲೇ ನಿಂಬ ಹೋತೇ ಜೇ ಜವಳೇ । ತಿಹೀ ನಿರ್ಜೀವೀಹೀ ದೇವಾಂಚೀ ನಿಢಳೇ । ಬೈಸಣೇ ಕೇಲೀ ॥ ೮೪ ॥ ಮಗ ತೋ ಚಂದನ ತೇಥೇ ನ ಪವೇ । ಐಸೇ ಮನೀ ಕೈಸೇನಿ ಧರಾವೇ । ಅಥವಾ ಪಾತಲಾ ಹೇ ಸಮರ್ಥಾವೇ । ತೆಂವ್ಹಾ ಕಾಯೀ ಸಾಚ ॥ ೮೫ ॥ ತೇಥ ನಿವವೀಲ ಐಸಿಯಾ ಆಶಾ । ಹರೇ ಚಂದ್ರಮಾ ಆಧಾ ಐಸಾ । ವಾಹಿಜತ ಶಿರಸಾ । ನಿರಂತರ ॥ ೮೬ ॥ ತೇಥ ನಿವವಿತಾ ಆಣಿ ಸಳಾ । ಪರಿಮಳ ಚಂದ್ರಾಹೂನ ಆಗಳಾ । ತೋ ಚಂದನ ಕೇವೀ ಅವಲೀಳಾ । ಸರ್ವಾಂಗೀ ನ ಬೈಸೇ ॥ ೮೭ ॥ ಕಾ ರಥ್ಯೋದಕೇ ಜಿಯೇಚಿಯೇ ಕಾಸೇ । ಲಾಗಲಿಯಾ ಸಮುದ್ರ ಜಾಲೀ ಅನಾಯಾಸೇ । ತಿಯೇ ಗಂಗೇಸಿ ಕಾಯ ಅನಾರಿಸೇ । ಗತ್ಯಂತರ ಅಸೇ ॥ ೮೮ ॥ ಮ್ಹಣೋನಿ ರಾಜರ್ಷಿ ಕಾ ಬ್ರಾಹ್ಮಣ । ಜಯಾ ಗತಿ ಮತಿ ಮೀಚಿ ಶರಣ । ತಯಾ ತ್ರಿಶುದ್ಧೀ ಮೀಚಿ ನಿರ್ವಾಣ । ಸ್ಥಿತಿಹೀ ಮೀಚಿ ॥ ೮೯ ॥ ಯಾಲಾಗೀ ಶತಜರ್ಜರ ನಾವೇ । ರಿಗೋನಿ ಕೇವೀ ನಿಶ್ಚಿಂತ ಹೋ ಆವೇ । ಕೈಸೇನಿ ಉಘಡಿಯಾ ಅಸಾವೇ । ಶಸ್ತ್ರವರ್ಷೀ ॥ ೪೯೦ ॥ ಆಂಗಾವರೀ ಪಡತಾ ಪಾಷಾಣ । ನ ಸುವಾವೇ ಕೇವೀ ವೋಢಣ । ರೋಗೇ ದಾಟಲಾ ಆಣಿ ಉದಾಸಪಣ । ವೋಖದೇಸೀ ॥ ೯೧ ॥ ಜೇಥ ಚಹೂಕಡೇ ಜಳತ ವಣವಾ । ತೇಥೂನಿ ನ ನಿಗಿಜೇ ಕೇವೀ ಪಾಂಡವಾ । ತೇವೀ ಲೋಕಾ ಯೇವೂನಿ ಸೋಪದ್ರವಾ । ಕೇವೀ ನ ಭಜಿಜೇ ಮಾತೇ ॥ ೯೨ ॥ ಅಗಾ ಮಾತೇ ನ ಭಜಾವಯಾ ಲಾಗೀ । ಕವಣ ಬಳಪಾ ಆಪುಲಿಯಾ ಆಂಗೀ । ಕಾಇ ಘರೀ ಕೀ ಭೋಗೀ । ನಿಶ್ಚಿಂತೀ ಕೇಲೀ ॥ ೯೩ ॥ ನಾತರೀ ವಿದ್ಯಾ ಕೀ ವಯಸಾ । ಯಯಾ ಪ್ರಾಣಿಯಾಸಿ ಹಾ ಐಸಾ । ಮಜ ನ ಭಜತಾ ಭರವಸಾ । ಸುಖಾಚಾ ಕೋಣ ॥ ೯೪ ॥ ತರೀ ಭೋಗ್ಯ ಜಾತ ಜೇತುಲೇ । ತೇ ಏಕಾ ದೇಹಾಚಿಯಾ ನಿಕಿಯಾ ಲಾಗಲೇ । ಆಣಿ ಏಥ ದೇಹ ತವ ಅಸೇ ಪಡಿಲೇ । ಕಾಳಾಚಿಯೇ ತೋಂಡೀ ॥ ೯೫ ॥ ಬಾಪ ದುಃಖಾಚೇ ಕೇಣೇ ಸುಟಲೇ । ಜೆಥ ಮರಣಾಚೇ ಭರೇ ಲೋಟಲೇ । ತಿಯೇ ಮೃತ್ಯುಲೋಕೀಚೇ ಶೇವಟಲೇ । ಹಾಟವೇಳೇ ಯೇಣೇ ಜಾಹಾಲೇ ॥ ೯೬ ॥ ಆತಾ ಸುಖೇಸಿ ಜೀವಿತಾ । ಕೈಂಚಿ ಗ್ರಾಹಿಕೀ ಕೀಜೇಲ ಪಾಂಡುಸುತಾ । ಕಾಯ ರಾಖೋಂಡೀ ಫುಂಕಿತಾ । ದೀಪ ಲಾಗೇ ॥ ೯೭ ॥ ಅಗಾ ವಿಷಾಚೇ ಕಾಂದೇ ವಾಂಟುನೀ । ಜೋ ರಸ ಘೇಇಜೇ ಪಿಳುನೀ । ತಯಾ ನಾಮ ಅಮೃತ ಠೇವುನೀ । ಜೈಸೇ ಅಮರ ಹೋಣೇ ॥ ೯೮ ॥ ತೇವೀ ವಿಷಯಾಂಚೇ ಜೇ ಸುಖ । ತೇ ಕೇವಳ ಪರಮ ದುಃಖ । ಪರೀ ಕಾಯ ಕೀಜೇ ಮೂರ್ಖ । ನ ಸೇವಿತಾ ನ ಸರೇ ॥ ೯೯ ॥

ಕಾ ಶೀಸ ಖಾಂಡೂನಿ ಆಪುಲೇ । ಪಾಯರಾಚ್ಯಾ ಖಿಶೀ ಬಾಂಧಿಲೀ । ತೈಸೀ ಮೃತ್ಯುಲೋಕೀಂಚೀ ಭಲೇ । ಆಹೇ ಆಘವೇ ॥ ೫೦೦ ॥ ಮ್ಹಣೋನಿ ಮೃತ್ಯುಲೋಕೀ ಸುಖಾಚೀ ಕಹಾಣೀ । ಐಕಿ ಜೇಲ ಕವಣಾ ಚಿಯೇ ಶ್ರವಣೀ । ಕೈಂಚೀ ಸುಖನಿದ್ರಾ ಆಂಥರುಣೀ । ಇಂಗಳಾಂಚ್ಯಾ ॥ ೧ ॥ ಜಿಯೇ ಲೋಕೀಂಚಾ ಚಂದ್ರ ಕ್ಷಯರೋಗೀ । ಜೇಥ ಉದಯು ಹೋಯ ಅಸ್ತಾಲಾಗೀ । ದುಃಖ ಲೇವೂನಿ ಸುಖಾಚೀ ಆಂಗೀ । ಸಳಿತ ಜಗಾತೇ ॥ ೨ ॥ ಜೇಥ ಮಂಗಳಾಚಿಯಾ ಅಂಕುರೀ । ಸವೇಚಿ ಅಮಂಗಳಾಚೀ ಪಡೇ ಪಾರೀ । ಮೃತ್ಯು ಉದರಾಚಿಯಾ ಪರಿವರೀ । ಗರ್ಭಗಿಂವಸೀ ॥ ೩ ॥ ಜೇ ನಾಹೀ ತಯಾತೇ ಚಿಂತವೀ । ತವ ತೇಂಚಿ ನೇಇಜೇ ಗಂಧರ್ವೀ । ಗೇಲಿಯಾಚೀ ಕವಣೇ ಗಾಂವೀ । ಶುದ್ಧೀ ನಲಗೇ ॥ ೪ ॥ ಅಗಾಗಿಂವ ಸಿತಾ ಆಘವಿಯಾ ವಾಟೇ । ಪರತಲೇ ಪಾವುಲಚಿ ನಾಹೀ ಕಿರೀಟೀ । ಸೈಂಧ ನಿಮಾಲಿಯಾಂಚಿಯಾ ಗೋಷ್ಟೀ । ತಿಯೇ ಪುರಾಣೇ ಜೇಥೀಂಚೀ ॥ ೫ ॥ ಜೇಥೀಂಚಿಯೇ ಅನಿತ್ಯ ತೇಚೀ ಥೋರೀ । ಕರಿತಯಾ ಬ್ರಹ್ಮಯಾಚೇ ಆಯುಷ್ಯ ವೇರೀ । ಕೈಸೇ ನಾಹೀ ಹೋಣೇ ಅವಧಾರೀ । ನಿಪಟುನಿಯಾ ॥ ೬ ॥ ಐಸೀ ಲೋಕೀಂಚೀ ಜಿಯೇ ನಾಂದಣುಕ । ತೇಥ ತೇ ಜನ್ಮಲೇ ಆಥಿ ಜೇ ಲೋಕ । ತಯಾಂಚಿಯೇ ನಿಶ್ಚಿಂತೀಚೇ ಕೌತುಕ । ದಿಸತ ಅಸೇ ॥ ೭ ॥ ಪೈ ದೃಷ್ಟಾ-ದೃಷ್ಟೀಚಿಯೇ ಜೋಡೀ । ಲಾಗೀ ಭಾಂಡವಲ ನ ಸುಟೇ ಕವಡೀ । ಜೇಥ ಸರ್ವಸ್ವೇ ಹಾನಿ ತೇಥ ಕೋಡೀ । ವೇಂಚಿತೀ ಗಾ ॥ ೮ ॥ ಜೋ ಬಹುವೇ ವಿಷಯ ವಿಲಾಸೇ ಗುಂಫೇ । ತೋ ಮ್ಹಣತೀ ಉವಾಈ ಪಡಿಲಾ ಸಾಂಪೇ । ಜೋ ಅಭಿಲಾಷ ಭಾರೇ ದಡಪೇ । ತಯಾಂತೇ ಸಜ್ಞಾನ ಮ್ಹಣತೀ ॥ ೯ ॥ ಜಯಾಂಚೇ ಆಯುಷ್ಯ ಧಾಕುಟೇ ಹೋಯ । ಬಳ, ಪ್ರಜ್ಞಾಜಿರೋನಿ ಜಾಯ । ತಯಾಚೇ ನಮಸ್ಕಾರಿತೀ ಪಾಯ । ವಡಿಲ ಮ್ಹಣೂನೀ ॥ ೫೧೦ ॥ ಜವ ಜವ ಬಾಳ ಬಳಿಯಾ ವಾಢೇ । ತವ ತವ ಭೋಜೇ ನಾಚತೀ ಕೋಡೇ । ಆಯುಷ್ಯ ನಿಮಾಲೇ ಆಂತುಲಿಯೇ ಕಡೇ । ತೇ ಗ್ಲಾನೀಚಿ ನಾಹೀ ॥ ೧೧ ॥ ಜನ್ಮಲಿಯಾ ದಿವಸ ದಿವಸೇ । ಹೋ ಲಾಗೇ ಕಾಳಾಚೇ ಯಾಚಿ ಐಸೇ । ಕೀ ವಾಢತೀ ಕರಿತೀ ಉಲ್ಹಾಸೇ । ಉಭವಿತೀ ಗುಡಿಯಾ ॥ ೫೧೨ ॥ ಅಗಾ ಮರ ಹಾ ಬೋಲ ನ ಸಾಹತೀ । ಆಣಿ ಮೇಲಿಯಾ ತರೀ ರಡತೀ । ಪರೀ ಅಸತೇ ಜಾತ ನ ಗಣಿತೀ । ಗಹಿಂಸ ಪಣೇ ॥ ೧೩ ॥ ದರ್ದುರ ಸಾಪೇ ಗಿಳಿಜತು ಆಹೇ ಉಭಾ । ಕೀ ತೋ ಮಾಶಿಯಾ ವೇಂಟಾಳೀ ಜಿಭಾ । ತೈಸೇ ಪ್ರಾಣಿಯೇ ಕವಣೇ ಲೋಭಾ । ವಾಢವಿತೀ ತೃಷ್ಣಾ ॥ ೫೧೪ ॥ ಅಹಾ ಕಟಕಟಾ ಹೇ ವೋಖಟೇ । ಇಯೇ ಮೃತ್ಯು ಲೋಕೀಂಚೇ ಉಫರಾಟೇ । ಏಥ ಅರ್ಜುನಾ ಜರೀ ಅವಚಟೇ । ಜನ್ಮಲಾಸೀ ತೂ ॥ ೫೧೫ ॥ ತರೀ ಝಡ ಝಡೋನಿ ವಹಿಲಾ ನಿಘ । ಇಯೇ ಭಕ್ತೀಚಿಯೇ ವಾಟೇ ಲಾಗ । ಜಿಯಾ ಪಾವಸೀ ಅವ್ಯಂಗ । ನಿಜಧಾಮ ಮಾಝೇ ॥ ೫೧೬ ॥

**ಅರ್ಥ**—ಆಮೇಲೆ ನಾಲ್ಕೂ ವರ್ಣಗಳಲ್ಲಿ ಛತ್ರಚಾಮರದಂತೆ ಶ್ರೇಷ್ಠರಾಗಿರುವರೋ ಮತ್ತು ಸ್ವರ್ಗವು ಯಾರಿಗೆ ನಿರ್ವಾಹದದೆಶೆಯಿಂದ ಹಾಕಿಕೊಟ್ಟ ಇನಾಮು ಗ್ರಾಮುವಾಗಿರುವದೋ, ಆ ಶ್ರೇಷ್ಠ ಬ್ರಾಹ್ಮಣರು, ॥ ೭೫ ॥ ಅವರು ಪ್ರಥ್ವಿಯ ಮೇಲಿನ ( ಭೂದೇವ ) ದೈವತಗಳೂ ಮತ್ತು ತಪಶ್ಚರ್ಯದ ಮೂರ್ತಿಮಂತ ಅವತಾರಿಕರೂ, ಆಗಿರುವರು. ಯಾರ ಯೋಗದಿಂದ ಸರ್ವ ತೀರ್ಥಗಳ ದೈವವು ಉದಯವಾಗಿರುವದೋ, ॥೭೬॥ ಯಾರ ಸ್ಥಳದಲ್ಲಿ ಯಜ್ಞದ ಅಖಂಡ ವಾಸವು, ಮತ್ತು ವೇದಗಳ ಅಭೇದ್ಯವಾದ ಕವಚವಿರುವದೋ, ಅವರ ನಿಜದೃಷ್ಟಿಯ ಯೋಗದಿಂದ ಸರ್ವಸ್ಥಳದಲ್ಲಿ ಮಂಗಲ ಕಾರ್ಯಗಳು ವೃದ್ಧಿ ಹೊಂದುತ್ತವೆ. ॥ ೪೭೭ ॥ ಯಾರ ಆಸ್ಥಾರೂಪ ಹಸಿಯಿಂದ ಸತ್ಕರ್ಮದ ಪ್ರಸಾದವಾಗಿರುವದೋ. ಮತ್ತು ಯಾರ ನಿಶ್ಚಯದಿಂದ ಸತ್ಯವು ಜೀವಂತ ಉಳದಿರುವದೋ, ॥ ೪೭೮ ॥ ಯಾವ ಭೂಸುರರ ಆಶೀರ್ವಾದ ಬಲದಿಂಧ ಅಗ್ನಿಯ ಆಯುಷ್ಯವು ಬೆಳೆದಿರುವದೋ, ಆ ಮಹಾತ್ಮರ ಪ್ರೀತಿಯದೆಶೆಯಿಂದಲೇ ಅಗ್ನಿಗೆ ಸಮು

ದ್ರವು ತನ್ನ ಸ್ಥಳದಲ್ಲಿ ಆಶ್ರಯವನ್ನು ಕೊಟ್ಟಿರುವದು. ॥ ೪೭೯ ॥ ನಾನು ಲಕ್ಷ್ಮೀದೇವಿಯನ್ನು ದೂರಸರಿಸಿ ಬೇರೆ ಮಾಡಿ ಶ್ರೇಷ್ಠ ಕೌಸ್ತುಭ ಮಣಿಯ ಹಾರವನ್ನು ಕೊರಳೊಳಗಿಂದ ತೆಗೆದು ಕೈಯೊಳಗೆ ಹಿಡಿದೆನು. ಆ ವೇಳೆ (ಭೂಸುರನ) ಚರಣರಜವನ್ನು ಸ್ವೀಕರಿಸಬೇಕೆಂಬ ತತ್ಪರತೆಯಿಂದ ನನ್ನ ವಕ್ಷಸ್ಥಳವನ್ನು ಮುಂದೆ ಮಾಡಿದೆನು. ॥ ೪೮೦ ॥ ಎಲೋ ಸುಭದ್ರಾ ಪತಿಯೇ ! ನನ್ನ ಶಾಂತತ್ವವೂ, ಮತ್ತು ಲೌಕಿಕವೂ, ಷಡ್ಗುಣೈಶ್ವರ್ಯ ಸಂಪನ್ನತೆಯು, ಸ್ಥಿರವಾಗಿ ರಕ್ಷಣ ಮಾಡುವದರದೆಶೆಯಿಂದ, ಇಂದಿನವರೆಗೆ ಆ ಬ್ರಾಹ್ಮಣರ ಪಾದ ಮುದ್ರೆಗಳ (ಶ್ರೀವತ್ಸಲಾಂಛನವೆಂಬ) ಚಿನ್ಹವನ್ನು ನನ್ನ ವಿಶಾಲವಾದ ಹೃದಯದ ಸ್ಥಳದಲ್ಲಿ ಧರಿಸಿದ್ದೇನೆ. ॥ ೪೮೧ ॥ ಎಲೋ ಮಹಾವೀರನೇ ! ಯಾರ ಕೋಪವು ಪ್ರಳಯ ಕಾಲದ ಕಾಲಾಗ್ನಿ ರುದ್ರದೇವರ ವಾಸಸ್ಥಾನವಾಗಿರುವದೊ, ಮತ್ತು ಯಾರ ಅನುಗ್ರಹವಾಗುವದರಿಂದ ಪುಕ್ಕಟೆಯಾಗಿ ಅಷ್ಟಮಹಾಸಿದ್ಧಿಗಳು ಪ್ರಾಪ್ತವಾಗುತ್ತವೆಯೋ ॥ ೪೮೨ ॥ ಹೀಗೆ ಪುಣ್ಯ ಮತ್ತು ಪರಮ ಪೂಜ್ಯ ಬ್ರಾಹ್ಮಣರಿದ್ದು ಅವರು ನನ್ನ ಸ್ಥಳದಲ್ಲಿ ಪೂರ್ಣ ಭಕ್ತಿಮಾಡುತ್ತಾರೆ. ಅವರು ಮದ್ರೂಪವಾಗುತ್ತಾರೆಂಬದನ್ನು ಈಗ ಬೇರೆ ಸಿದ್ಧ ಮಾಡಬೇಕಾಗಿರುವದೇನು ? ॥ ೪೮೩ ॥ ಚಂದನ ಗಿಡದಮೇಲಿಂದ ಬರುವಗಾಳಿಯ ಸ್ಪರ್ಶದಿಂದ ಹತ್ತಿರ ಇರುವ ಬೇವಿನ ಗಿಡಗಳು ಚಂದನ ವೃಕ್ಷಗಳಾಗುತ್ತವೆ. ಅವು ನಿರ್ಜೀವ (ಅಚೇತನ) ವಿದ್ದಾಗ್ಯೂ ಅದು ದೇವರ ಮಸ್ತಕದ ಮೇಲೆ ಅರ್ಪಣ ಮಾಡಲಿಕ್ಕೆ ಯೋಗ್ಯವಾಗುವದು. ॥ ೪೮೪ ॥ ಆದರೆ ಪ್ರತ್ಯಕ್ಷ ಚಂದನ ವೃಕ್ಷವು ಆಸ್ಥಾನವನ್ನು ದೊರಕಿಸಲಿಕ್ಕಿಲ್ಲ ವೆಂಬುದನ್ನು ಮನಸಿನಲ್ಲಿ ಹೇಗೆ ತರಬೇಕು ? ಅಥವಾ ಆ ಸ್ಥಾನವು ದೊರಕಿರುತ್ತದೆಂಬದನ್ನು ಸಿದ್ಧ ಮಾಡಬೇಕಾಗಿರುವದೋ ? ಇಲ್ಲದಿದ್ದರೆ ಅದು ಅಸತ್ಯವಾದೀತೇನು. ॥ ೪೮೫ ॥ ಶ್ರೀಶಂಕರನು ಪರೋಪಕಾರಾರ್ಥವಾಗಿ ಹಾಲಾಹಲ ವಿಷವನ್ನು ಪ್ರಾಶನ ಮಾಡಿದ್ದುದರಿಂದ ಆದ ದಾಹ ಶಾಂತಮಾಡಿಕೊಳ್ಳುವದಕ್ಕಾಗಿ ತನ್ನ ಮಸ್ತಕದ ಮೇಲೆ ನಿರಂತರ ಅರ್ಧ ಚಂದ್ರನನ್ನು ಧರಿಸಿದನು. ॥ ೪೮೬ ॥ ಆದರೆ ದಾಹ ತಂಣಗೆ ಮಾಡುವಂಥದು ಮತ್ತು ಚಂದ್ರನಕಿಂತಲೂ ಪೂರ್ಣ ಸುವಾಸನೆಯಿಂದ ಶ್ರೇಷ್ಠವಾದ ಚಂದನವನ್ನು ಸರ್ವಾಂಗದಲ್ಲಿ ಸಹಜವೇ, ಏಕೆ ಧಾರಣ ಮಾಡಲಿಕ್ಕಿಲ್ಲ ? ॥ ೪೮೭ ॥ ಅಥವಾ ಹಾದಿಯ ಮೇಲೆ ಹರಿಯುವ ನೀರು ಯಾವದರ ಆಶ್ರಯ ಮಾಡುವದರಿಂದ (ಆ, ರಥ್ಯೋದಕವು) ಅನಾಯಾಸದಿಂದ ಸಮುದ್ರ ರೂಪವಾಗಿ ಹೋಗುವದೋ, ಆ ಗಂಗಾನದಿಗೆ ಸಮುದ್ರದ ಹೊರ್ತು ಅನ್ಯಗತಿ ಇರುವದೇನು ? ॥ ೪೮೮ ॥ ಆದುದರಿಂದ ಎಲ್ಲರಿಗೂ ಗತಿ ಮತ್ತು ಜ್ಞಾನ ಕೊಡುವವನೂ, ನಿಶ್ಚಯವಾಗಿ ನಾನೇ ಇದ್ದೇನೆ. ಆ ರಾಜಋಷಿಗಳಿಗೆ ಮತ್ತು ಬ್ರಾಹ್ಮಣರಿಗೆ ಭಕ್ತಿ ಮತ್ತು ಮುಕ್ತಿಯ ಸ್ಥಾನವು ನಾನೇ ಆಗಿದ್ದೇನೆ. ॥ ೪೮೯ ॥ ಆದುದರಿಂದ ನೂರಾರು ಛಿದ್ರಉಳ್ಳ ನೌಕೆಯಲ್ಲಿ ನಿಷ್ಕಾಳಜಿಯಿಂದ ಕುಳಿತು ನಾವು ಮುಳಗಲಿಕ್ಕಿಲ್ಲೆಂಬ ನಂಬಿಗೆಯಿಂದ ಹೇಗೆ ಸ್ವಸ್ಥಚಿತ್ತಉಳ್ಳವರಾಗಿರಬೇಕು ? ಇಲ್ಲವೇ ಶಸ್ತ್ರಗಳ ಮಳೆಯು ಸುರಿಯುತ್ತಿರಲು ಮಧ್ಯದಲ್ಲಿ ಮೈಮೇಲೆ ಹೊದಿಕೆ ಸಹ ಇಲ್ಲದೇ ನಿರ್ಭಯದಿಂದ ಹೇಗೆ ನಿಲ್ಲಬೇಕು ? ॥ ೪೯೦ ॥ ಅರ್ಜುನಾ ! ಮೈಮೇಲೆ ಪಾಷಾಣವೃಷ್ಟಿಗರೆಯುತ್ತಿರಲು ಮಧ್ಯದಲ್ಲಿ ಢಾಲು ಮುಂದೆ ಮಾಡಿ ಪರಿಹಾರ ಯಾಕೆ ಮಾಡಿಕೊಳ್ಳಬಾರದು ? ದೇಹವು ರೋಗದಿಂದ ಗ್ರಸ್ತವಾಗಿರಲು ಆಲಸ್ಯತನವನ್ನು ಏಕೆ ಮಾಡಬೇಕು ? ॥ ೪೯೧ ॥ ಅರ್ಜುನನೇ ! ಎಲ್ಲಿ ನಾಲ್ಕೂಕಡೆಯಿಂದ ಜ್ವಾಲೆ ಪಸರಿಸುತ್ತಿರಲು ಅಲ್ಲಿಂದ ಪಾರಾಗಿ ತೀವ್ರ ಹೊರಗೆ ಏಕೆ ಹೋಗಬಾರದು ? ಮತ್ತು ಅನೇಕ ದುಃಖಗಳಿಂದ ಯುಕ್ತವಾದ ಈ ಮೃತ್ಯುಲೋಕದಲ್ಲಿ ಜನ್ಮಕ್ಕೆ ಬಂದು ಪ್ರಾಣಿಗಳು ನನ್ನನ್ನು ಭಜಿಸದೇ ಹೇಗೆ ಇರಬೇಕು ? ॥ ೪೯೨ ॥ ಎಲೈ ಅರ್ಜುನನೇ ! ನನ್ನ ಭಜನೆಯನ್ನು ಮಾಡಬಾರದೆಂಬ ಬಗ್ಗೆ ಈ ಪ್ರಾಣಿಗಳ ಮೈಯಲ್ಲಿ ಯಾವ ಸಾಮರ್ಥ್ಯವಿರುವದು ? ಅಥವಾ ನಿಶ್ಚಿಂತಿಯಿಂದ ಇರುವಂಥ ಯಾವ ಭೋಗ್ಯವಸ್ತುಗಳ ಸಮೃದ್ಧಿಯು ಇವರ ಮನೆಯಲ್ಲಿ ಇರುವದು ಹೇಳು. ॥ ೪೯೩ ॥ ಇಲ್ಲವೇ ನನ್ನನ್ನು ಭಜಿಸದೇ ತಂನ ವಿದ್ಯಾ ಅಥವಾ ತಾರುಣ್ಯ ಇವುಗಳಿಂದಲೇ ತನಗೆ ನಿರಂತರ ಸುಖವು ದೊರಕುವದೆಂಬದಾದರೂ ಇವನಿಗೆ ಹೇಗೆ ಭರವಸವಿರಬಹುದು ? ॥ ೪೯೪ ॥ ಆದರೆ ಭೋಗ್ಯವಸ್ತುಗಳೆಂದೆಷ್ಟು ಇರುವವೋ, ಅವೆಲ್ಲವುಗಳು ಒಂದು ದೇಹದ ಸುಖಪ್ರಾಪ್ತಿಯದೆಶೆಯಿಂದ ಇರುವವು ಮತ್ತು ಆ ದೇಹವು ನೋಡಿದರೆ ಈ ಮೃತ್ಯುಲೋಕದಲ್ಲಿ ಮರಣದ ಬಾಯಿಯಲ್ಲಿ ಬಿದ್ದಿರುತ್ತದೆ. ॥ ೪೯೫ ॥ ಎಲೋ ಅರ್ಜುನನೇ ! ಈ ಮೃತ್ಯುಲೋಕದ ಮನುಷ್ಯರೂಪಿ ಕಡೆಯಸಂತೆಯಲ್ಲಿ ದುಃಖರೂಪಿ ವಸ್ತುಗಳೇ ತುಂಬಿದ್ದು ಮರಣರೂಪಿ ಮಾಪನಿಂದ ಅಳೆಯುವದು ನಡೆದಿರುತ್ತದೆ.

ಸ್ಥಳದಲ್ಲಿ ನಾವು ಮನುಷ್ಯ ಜನ್ಮವನ್ನೆತ್ತಿ ಬಂದಿರುತ್ತೇವೆ. ॥ ೯೯೬ ॥ ಆದರೆ ಎಲೋ ಪಂಡುಸುತನೇ! ಇಂಥ ದುಃಖ ರೂಪವಾದ ಸಂತೆಯಲ್ಲಿ ( ದುಃಖಮಯವಾದ ಪದಾರ್ಥಗಳೇ ತುಂಬಿದ್ದರಿಂದ ) ಜೀವಿತವು ಸುಖ ಹೊಂದುವಂಥ ಯಾವ ಪದಾರ್ಥಗಳನ್ನು ಕೊಳ್ಳಲಿಕ್ಕೆ ಬಂದೀತು? ಬೆಂಕಿಯು ಆರಿಹೋದಮೇಲೆ ಉಳಿದಂಥ ಕರಿಬೂದಿಯನ್ನು ಊದುತ್ತಾ ಕುಳಿತರೆ ಅದರೊಳಗಿಂದ ದೀವಿಗೆಯು ಹತ್ತಬಲ್ಲದೇ? ॥ ೯೯೭ ॥ ಅರ್ಜುನನೇ! ಬಚನಾಗನೆಂಬ ವಿಷದ ಗಡ್ಡೆಯನ್ನು ಅರೆದು ಅದರರಸವನ್ನು ತೆಗೆದು ಅವಕ್ಕೆ ಅಮೃತವೆಂದು ಹೆಸರಿಟ್ಟು ಸೇವನ ಮಾಡಿ ಅಮರ ನಾಗುವೆನೆಂದು ಯಾವನು ಬಯಸುವನೋ, ॥ ೯೯೮ ॥ ಅದೇ ಪ್ರಕಾರ ಈ ವಿಷಯದಿಂದಾಗುವ ಸುಖವು ಅದು ಕೇವಲ ಮಹತ್ವವಾದ ದುಃಖವೇ ಇರುತ್ತದೆ. ಆದರೆ ಯಾರು ಮೂರ್ಖರೂ ಅಜ್ಞಾನಿಗಳೂ ಇರುವರು ಅವರಿಗೆ ಆ ವಿಷಯಸುಖದ ಸೇವನ ಮಾಡದೇ ಅವರು ಎಂದಿಗೂ ಬಿಡುವದಿಲ್ಲ ॥ ೯೯೯ ॥ ಇಲ್ಲವೆ ಕಾಲಿಗೆ ಆದಗಾಯ ವಾಯುವದರ ದೆಶೆಯಿಂದ ತಮ್ಮ ಮಸ್ತಕವನ್ನು ಕೊಯ್ದು ಕಟ್ಟುವದು ಎಷ್ಟು ಹಿತಕರವಾಗಿರುವದೋ, ಅಷ್ಟೇ ಈ ಮೃತ್ಯುಲೋಕದೊಳ ಗಿನ ಸರ್ವ ವ್ಯವಹಾರಗಳು ಉತ್ತಮವಾಗಿರುತ್ತವೆ. ॥ ೫೦೦ ॥ ಆದುದರಿಂದ ಈ ಮೃತ್ಯುಲೋಕದಲ್ಲಿ ಸ್ವಲ್ಪಾ ದರೂ ಸುಖವಿರುವದೆಂಬ ಮಾತು ಯಾರಾದರೂ ತಮ್ಮ ಕಿವಿಯಿಂದ ಕೇಳಿರುವರೇನು? ಪ್ರಜ್ವಲಿತವಾದ ಬೆಂಕಿಯ ಹಾಸಿಗೆಯ ಮೇಲೆ ಆನಂದದಿಂದ ನಿದ್ದೆಯು ಹೇಗೆ ಬರಬೇಕು? ॥ ೫೦೧ ॥ ಯಾವ ಮೃತ್ಯುಲೋಕದ ಚಂದ್ರನು ಕ್ಷಯರೋಗಿ ಇರುವನೋ, ಎಲ್ಲಿ ಮುಳುಗುವವರ ದೆಶೆಯಿಂದಲೇ ( ಸೂರ್ಯನ ) ಉದಯವಾಗುತ್ತಿರುವದೋ, ಅಲ್ಲಿ ದುಃಖವು ಸುಖದ ಪೋಷಾಕವನ್ನು ಧರಿಸಿಕೊಂಡು ಜಗತ್ತಿನ ಜನರನ್ನು ಯಾವಾಗಲೂ ಠಕ್ಕಿಸುತ್ತದೆ. ॥ ೫೦೨ ॥ ಎಲ್ಲಿ ಮಂಗಲಕರವಾದ ಅಂಕುರವು ಹುಟ್ಟುವಷ್ಟರಲ್ಲಿಯೇ ಅಲ್ಲಿ ಅಮಂಗಲದ ಮಾತಿನ ಹುಳವು ಬೀಳುತ್ತದೆ. ಮತ್ತು ಮರಣವು ಹೊಟ್ಟೆಯೊಳಗಿನ ಗರ್ಭವನ್ನು ಸಹ ಹುಡುಕುತ್ತ ಬರುತ್ತದೆ. ॥ ೫೦೩ ॥ ಯಾವದು ಚಿಂತನ ಮಾಡಲಿಕ್ಕೆ ಯೋಗ್ಯವಿರುವದಿಲ್ಲವೋ, ಅದರ ಚಿಂತನ ಮಾಡುತ್ತಾನೆ. ಅಷ್ಟರಲ್ಲಿಯೇ ಅವನನ್ನು ಯಮದೂ ತನು ತೆಗೆದುಕೊಂಡು ಹೋಗುತ್ತಾನೆ, ಮತ್ತು ಯಾವ ಊರಿಗೆ ತೆಗೆದುಕೊಂಡು ಹೋಗುತ್ತಾನೆ, ಇದರ ಗೊತ್ತೇ ಹತ್ತುವದಿಲ್ಲ. ॥ ೫೦೪ ॥ ಎಲೋ ಅರ್ಜುನನೇ! ಸರ್ವ ಮಾರ್ಗದಿಂದ ಶೋಧನಮಾಡಿ ನೋಡಿದರೂ ಮೃತ್ಯು ಹೊಂ ದಿದವರು, ತಿರುಗಿ ಬರುವ ಮಾತೇ ಇರುವದಿಲ್ಲ. ಈ ಮೃತ್ಯು ಮುಖದಲ್ಲಿ ಬಿದ್ದು ಹೋದ ಹಿಂದಿನ ಜನರ ಕಥೆಗಳೇ ಪುರಾಣವಾಗಿರುವವು ॥ ೫೦೫ ॥ ಈ ಮೃತ್ಯು ಲೋಕದ ಅಶಾಶ್ವತ ಸೃಷ್ಟಿಯನ್ನು ನಿರ್ಮಾಣ ಮಾಡುವ ಬ್ರಹ್ಮದೇವರ ಆಯುಷ್ಯದವರೆಗೆ ಅಲ್ಲಿಯ ಕ್ಷಣಭಂಗುರತ್ವದ ಪ್ರಭಾವದ ವರ್ಣನಮಾಡಿದಾಗ್ಯಾದರೂ ಮುಗಿಯುವಂತೆ ಇರುವದಿಲ್ಲ. ॥ ೫೦೬ ॥ ಹೀಗೆ ಯಾವ ಮೃತ್ಯುಲೋಕದ ಸ್ಥಿತಿಯು ಇರುವದೋ, ಅಲ್ಲಿಜನ್ಮತೆಗೆದುಕೊಳ್ಳುವಜನರು ಸುಖರೂಪವಾಗಿರು ವರೆಂಬ ಮಾತನ್ನು ಕೇಳಿ ನನಗೆ ಬಹಳೇ ಆಶ್ಚರ್ಯವೆನಿಸುತ್ತದೆ. ॥ ೫೦೭ ॥ ಯಾವದರಿಂದ ಇಹ ಪರಲೋಕದ ಲಾಭ ವಾಗುವದೋ, ಅಂಥ ಹಿತಾವಹ ಕಾರ್ಯದಲ್ಲಿ ಒಂದು ಕವಡಿ ಧನವನ್ನು ಸಹಾ ಕೈ ಬಿಟ್ಟು ಖರ್ಚು ಮಾಡಲಾರರು. ಅವರು ಸರ್ವದರಿಂದಲೂ ಹಾನಿಯಾಗುವಂಥ ಕೆಲಸದಲ್ಲಿ ಕೋಟ್ಯಾವಧಿ ಹಣವನ್ನು ಹಾಳು ಮಾಡಿಕೊಳ್ಳುವರು. ॥ ೫೦೮ ॥ ಯಾವನು ವಿಲಾಸದಲ್ಲಿ ಬಹಳೇ ನಿಮಗ್ನನಾಗಿರುವನೋ ಅವನಿಗೆ ಈಗ ಸುಖದಲ್ಲಿರುವನೆಂದೆನ್ನುವರು. ಮತ್ತು ಯಾವನು ಲೋಭದಿಂದ ಗ್ರಸ್ತನಾಗಿರುವನೋ ಅವನಿಗೆ ಈ ಜಗತ್ತಿನಲ್ಲಿ ಜ್ಞಾನಿಎಂದೆನ್ನುವರು. ॥ ೫೦೯ ॥ ಯಾವನ ಆಯುಷ್ಯವು ಸ್ವಲ್ಪೇ ಉಳಿದಿರುವದೋ ಮತ್ತು ಯಾವನ ಬಲವೂ ಬುದ್ಧಿಯು ಇಲ್ಲದಂತಾಗಿರುವದೋ, ಇಂಥ ವಯೋವೃದ್ಧ ಪುರುಷನಿಗೆ ಶ್ರೇಷ್ಠ ಹಿರಿಯನೆಂದು ಅವನ ಕಾಲು ಬೀಳುವರು ॥ ೫೧೦ ॥ ಸಣ್ಣ ಕೂಸು ದೊಡ್ಡದಾಗುತ್ತ ಹೋದ ಹೋದ ಹಾಗೆ ತಾಯಿತಂದೆಗಳು ಸಂತೋಷದಿಂದ ಕುಣಿಯುತ್ತಾರೆ. ಆದರೆ ಆ ಹುಡುಗನ ಆಯುಷ್ಯವು, ದಿನೇ ದಿನೇ ಕಡಿಮೆಯಾದಬಗ್ಗೆ ಅವರಿಗೆ ದುಃಖವೇ ಆಗುವದಿಲ್ಲ. ( ಆಶ್ಚರ್ಯ! ) ॥ ೫೧೧ ॥ ಜನ್ಮದಾ ರಭ್ಯ ಪ್ರತಿದಿವಸಾನುದಿವಸ ಹೆಚ್ಚೆಚ್ಚಿಗೆ ಮೃತ್ಯುವಿನ ಸಮೀಪದಲ್ಲಿ ಹೋಗಿ ಕಾಲದ ಸ್ವಾಧೀನವಾಗುವ ಆ ಕೂಸಿಗೆ ಹುಟ್ಟಿದ ದಿವಸವನ್ನು ಮಾಡಿ ಉತ್ಸಾಹದಿಂದ ಧ್ವಜವನ್ನು ನಿಲ್ಲಿಸುತ್ತಾರೆ. ॥ ೫೧೨ ॥ ಎಲೋ ಅರ್ಜುನನೇ! ಸಾಯಿ ಎಂದು ಯಾರಾದರೂ ನುಡಿದರೆ ಆ ಶಬ್ದವೂ ಸಹ ಸಹನವಾಗುವದಿಲ್ಲ. ಮತ್ತು ಮೃತ್ಯು ಬಂಧ

ಮೇಲೆ ಅಳುತ್ತ ಕೂಡುವರು. ಆದರೆ ಇದ್ದಂಥ ಆಯುಷ್ಯವು ವ್ಯರ್ಥವಾಗಿ ಹೋಗುತ್ತದೆಂಬದು ಮೂರ್ಖತನದಿಂದ ಅವರಿಗೆ ತಿಳಿಯುವದಿಲ್ಲ ॥ ೫೧೩ ॥ ಹಾವು, ಕಪ್ಪೆಯನ್ನು ಹಿಂಬದಿಯಿಂದ ನೆಟ್ಟಗೆ ನುಂಗುವಾಗ್ಗೆ ಕಪ್ಪೆಯ ಬಾಯಿಯಷ್ಟೇ ಉಳಿದಿರಲು ಇಂಥ ಸ್ಥಿತಿಯಲ್ಲಿಯೂ ಆ ಕಪ್ಪೆಯು ತನ್ನ ಮುಂದೆ ಹಾರಾಡುವ ನೊಣಗಳನ್ನು ಹಿಡಿಯುವದರ ದೆಶೆಯಿಂದ ನಾಲಿಗೆಯನ್ನು ಹೊರಗೆ ಚಾಚಿ ತಿನ್ನಲಿಕ್ಕೆ ಯತ್ನ ಪಡುತ್ತದೆ. ಈ ರೀತಿ ಪ್ರಾಣಿಗಳು ಯಾವಲೋಭದದೆಶೆಯಿಂದ ತಮ್ಮ ಅಪೇಕ್ಷೆಯನ್ನು ವೃದ್ಧಿಂಗತ ಮಾಡುವರೆಂಬದನ್ನು ಯಾರುಬಲ್ಲರು ? ॥ ೫೧೪ ॥ ಅಕಟಕಟಾ ! ಮೈಮೇಲೆ ಮುಳ್ಳುಬರುತ್ತವೆ. !! ಈ ಮೃತ್ಯುಲೋಕದೊಳಗಿನ ಸರ್ವವ್ಯವಹಾರಗಳು ಕೇವಲವಿರುದ್ಧ ಅಮಂಗಲವಿರುವದೆಂಬದನ್ನು ಎಷ್ಟು ಹೇಳಿದರೂ ತೀರದು. ಅರ್ಜುನನೇ ! ಇಂಥ ಮೃತ್ಯು ಲೋಕದಲ್ಲಿ ಅಕಸ್ಮಾತ್ತಾಗಿ ನೀನು ಜನ್ಮವನ್ನು ಪಡೆದಿರುವಿ. ॥ ೫೧೫ ॥ ಆದರೆ ಈ ಮೃತ್ಯು ಲೋಕದ ವ್ಯವಹಾರಚಕ್ರದ ಇರುಕಿನೊಳಗಿಂದ ಪಾರಾಗಿ ತೀವ್ರವೇ ಮುಕ್ತನಾಗಿ ಹೋಗು. ಮತ್ತು ಈ ಭಕ್ತಿಮಾರ್ಗವನ್ನು ದೃಢವಾಗಿ ಅವಲಂಬನಮಾಡುವದರಿಂದ ನಿನಗೆ ನನ್ನ ನಿರ್ದೋಷ ಅವಿನಾಶ ಪದವು ನಿಶ್ಚಯವಾಗಿ ದೊರಕುವದು ॥ ೫೧೬ ॥

ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥

ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾ ರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ॥೯॥

[ ಮನ್ಮನಾ ಭವ ಮದ್ಭಕ್ತ ಇತಿ ] ತೂ ಮನ ಹೇ ಮೀಚಿ ಕರೀ । ಮಾಝಿಯಾ ಭಜನೀ ಪ್ರೇಮಧರೀ ! ಸರ್ವತ್ರ ನಮಸ್ಕಾರೀ । ಮಜ ಏಕಾತೇ ॥ ೧೭ ॥ ಮಾಝೇನಿ ಅನುಸಂಧಾನೇ ದೇಖ । ಸಂಕಲ್ಪ ಜಾಳಣೇ ನಿಃಶೇಖ । ಮದ್ಯಾಜೀ ಚೋಖ । ಯಾಚಿ ನಾವ ॥ ೧೮ ॥ ಐಸಾ ಮಿಯಾ ಆಥಿಲಾ ಹೋಸೀ । ತೇಥ ಮಾಝಿಯಾಚಿ ಸ್ವರೂಪಾ ಪಾವಸೀ । ಹೇ ಅಂತಃಕರಣೀಚೇ ತುಜಪಾಸೀ । ಬೋಲಿಜತ ಅಸೇ ॥ ೧೯ ॥ ಅಗಾ ಅವಘಿಯಾ ಚೋರಿಯಾ ಆಪುಲೇ । ಜೇ ಸರ್ವಸ್ವ ಆಮ್ಹೀ ಅಸೇ ಠೇವಿಲೇ। ತೇ ಪಾವೋನಿ ಸುಖ ಸಂಚಲೇ। ಹೋವೂನಿ ಠಾಸೀ ॥ ೫೨೦ ॥ ಐಸೇ ಸಾವಳೇನಿ ಪರಬ್ರಹ್ಮೇ । ತೇಣೇ ಭಕ್ತ ಕಾಮ ಕಲ್ಪದ್ರುಮೇ । ಬೋಲಿಲೇ ಶ್ರೀ ಆತ್ಮಾರಾಮೇ । ಸಂಜಯೊ ಮ್ಹಣೇ ॥ ೨೧ ॥ ಅಹೋ ಐಕಿಜತ ಅಸೇಕೀ ಅವಧಾರಾ । ತವ ಇಯಾ ಬೋಲಾ ನಿವಾಂತ ಮ್ಹಾತಾರಾ । ಜೈಸಾ ಮ್ಹೈಸಾ ನುರೀ ಕಾ ಪುರಾ । ತೈಸಾ ಉಗಾಚಿ ಅಸೇ ॥ ೨೨ ॥ ತೇಥ ಸಂಜಯೇ ಮಾಥಾ ತುಕಿಲಾ । ಅಹೋ ಅಮೃತಾಚಾ ಪಾವೂಸ ವರ್ಷಲಾ । ಕೀ ಹಾ ಏಥ ಅಸತೂಚಿ ಗೇಲಾ । ಸೇಜಿಯಾ ಗಾವಾ ॥ ೨೩ ॥ ತರ್ಹೀ ದಾತಾರ ಹಾ ಆ ಮುಚಾ । ಮ್ಹಣೋನಿ ಹೇ ಬೋಲತಾ ಮೈಳೇಲ ವಾಚಾ । ಕಾಯ ಕೀಜೇ ಯಯಾಚಾ । ಸ್ವಭಾವೋಚಿ ಐಸಾ ॥ ೨೪ ॥ ಪರೀ ಬಾಪ ಭಾಗ್ಯ ಮಾಝೇ । ಜೇ ವೃತ್ತಾಂತ ಸಾಂಗಾವಯಾಚೇನಿ ವ್ಯಾಜೇ । ಕೈಸಾ ರಕ್ಷಿಲೋ ಮುನಿರಾಜೇ । ಶ್ರೀವ್ಯಾಸದೇವೆ ॥ ೨೫ ॥ ಯೆತುಲೇ ಹೇ ವಾಡ ಸಾಯಾಸೇ। ಜನ ಬೋಲತ ಅಸೇ ಧೃಡ ಮಾನಸೇ। ತವ ನ ಧರವೇಚಿ ಆಪುಲಿಯಾ ಐಸೇ । ಸಾತ್ವಿಕೆ ಕೇಲೇ ॥ ೨೬ ॥ ಚಿತ್ತ ಚಾಕಾಟಲೇ ಆಟು ಘೇತ । ವಾಚಾ ಪಾಂಗುಳಲೀ ಜೇಥಿಂಚೀ ತೇಥ । ಆಪಾದ ಕಂಚುಕಿತ । ರೋಮಾಂಚ ಆಲೆ ॥ ೨೭ ॥ ಅರ್ಧೋನ್ಮೀಲಿತ ಡೋಳೇ । ವರ್ಷತಾತಿ ಆನಂದ ಜಳೇ । ಆಂತುಲಿಯಾ ಸುಖೋರ್ಮೀಚೇನಿ ಬಳೇ । ಬಾಹೇರಿ ಕಾಂಪೇ ॥ ೨೮ ॥ ಪೈ ಆಘವಾಚಿ ರೋಮ ಮೂಳೀ । ಆಲೀ ಸ್ವೇದ ಕಣಿಕಾ ನಿರ್ಮಳೀ । ಲೇಇಲಾ ಮೋತಿಯಾಂಚೀ ಕಡಿಯಾಳೀ । ಆನಡೇ ತೈಸಾ ॥ ೨೯ ॥ ಐಸಾ ಮಹಾ ಸುಖಾಚೇನಿ ಅತಿರಸೇ । ಜೇಥ ಆಟಣೇ ಹೋ

ಪಾಹೇ ಜೀವದಶೇ । ತೇಥ ನಿರೋಪಿಲೇ ವ್ಯಾಸೇ । ತೇ ನೇದೀಚ ಹೋ ॥ ೫೩೦ ॥ ಆಣಿಕ ಶ್ರೀಕೃಷ್ಣಾಚೇ ಬೋಲಣೇ । ಘೋಂಕರೀ ಆಲೇ ಶ್ರವಣೇ । ಕೀ ದೇಹಸ್ಮೃತೀಚಾ ತೇಣೇ । ವಾಪಸಾ ಕೇಲಾ ॥ ೩೧ ॥ ತೆಂವ್ಹಾ ನೇತ್ರೀಂಚೇ ಜಳ ವಿಸರ್ಜೀ । ಸರ್ವಾಂಗೀಚಾ ಸ್ವೇದ ಪರಿಮಾರ್ಜೀ । ತೇವೀಂಚಿ ಅವಧಾನ ಮ್ಹಣೇ ಹೋ ಜಿ । ಧೃತರಾಷ್ಟ್ರಾತೇ ॥ ೩೨ ॥ ಆತಾ ಶ್ರೀಕೃಷ್ಣ ವಾಕ್ಯ ಬೀಜನಿವಾಡ । ಆಣಿ ಸಂಜಯು ಸಾತ್ವಿಕಾಚಾ ಬಿವಡ । ಮ್ಹಣೋನಿ ಶ್ರೋತಯಾ ಹೋಈಲ ಸುರವಾಡ । ಪ್ರಮೇಯ ಪಿಕಾಚಾ ॥ ೩೩ ॥ ಅಹೋ ಅಳುಮಾಳ ಅವಧಾನ ದೇಯಾವೇ । ಯೇತುಲೇನಿ ಅನಂದಾಚೇ ರಾಶೀವರೀ ಬೈಸಾವೇ । ಬಾಪ ಶ್ರವಣೇಂದ್ರಿಯಾ ದೈವೇ । ಘಾತಲೀ ಮಾಳ ॥ ೩೪ ॥ ಮ್ಹಣೋನಿ ವಿಭೂತೀಂಚಾ ಜೋ ಠಾವೋ । ಅರ್ಜುನಾ ದಾವೀಲ ಸಿದ್ಧಾಂಚಾ ರಾವೋ । ತೋ ಐಕಾ ಮ್ಹಣೇ ಜ್ಞಾನದೇವೋ । ನಿವೃತ್ತೀಚಾ ॥೫೩೫॥

**ಇತಿ ಶ್ರೀಜ್ಞಾನದೇವ ವಿರಚಿತಾಯಾಂ ಭಾವಾರ್ಥದೀಪಿಕಾಯಾಂ ನವಮೋಽಧ್ಯಾಯಃ ॥೯॥ ಶ್ಲೋಕ ೩೪. ಓವಿಗಳು ೫೩೫**

**ಅರ್ಥ**— ನೀನು ನಿನ್ನ ಮನಸನ್ನು ನನ್ನಲ್ಲಿ ದ್ರುಡವಾಗಿ ನಿಲ್ಲಿಸಿ ನನ್ನ ಭಜನದಲ್ಲಿ ಪ್ರೇಮವನ್ನಿಡು. ಮತ್ತು ಸರ್ವದರಲ್ಲಿಯೂ ನಾನೇ ವ್ಯಾಪ್ತನಾಗಿರುವೆನೆಂಬದನ್ನು ಅರಿತು ಪ್ರೇಮಭಾವದಿಂದ ನನಗೆ ನಮಸ್ಕರಿಸು. ॥೫೧೭॥ ಯಾವನು ನನ್ನ ವೇಧದಿಂದ ಮನಸಿನೊಳಗಿನ ಸರ್ವ ಸಂಕಲ್ಪಗಳನ್ನು ಸಂಪೂರ್ಣವಾಗಿ ಇಲ್ಲದಂತೆ ಮಾಡುವನೋ, ಅವನೇ ನನ್ನ ಯಜನ ಮಾಡುವವನೆಂದು ಹೆಸರು ಪಡೆಯುತ್ತಾನೆ. ॥ ೫೧೮ ॥ ಹೀಗೆ ನಾನು ಬಹು ಗುಪ್ತವಾಗಿಟ್ಟುಕೊಂಡ ಯೋಗವನ್ನು ನೀನು ಸಂಪಾದನ ಮಾಡುವದರಿಂದ ನನ್ನ ಸ್ವರೂಪವನ್ನು ಹೊಂದುವಿ ಈ ನನ್ನ ಅಂತಃಕರಣದೊಳಗಿನ ಚನ್ನಾಗಿರುವ ಗುಹ್ಯವನ್ನು ನಿನಗೆ ಹೇಳಿದ್ದೇನೆ. ॥ ೧೯ ॥ ಎಲೋ ಅರ್ಜುನನೇ ! ಸರ್ವರಿಗೂ ಮರೆಮಾಡಿ ಬಚ್ಚಿಟ್ಟ ನಮ್ಮ ಗುಪ್ತ ಸಂಭಾಷಣವು ಪ್ರಾಪ್ತ ಮಾಡಿಕೊಳ್ಳುವದರಿಂದ ನೀನು ಸುಖರೂಪವಾಗುವಿ. ॥ ೫೨೦ ॥ ಸಂಜಯನು ಅನ್ನುತ್ತಾನೆ— ಶಾಮಸುಂದರ ಪರಮಾತ್ಮನು ಮತ್ತು ಭಕ್ತರ ಮನೋರಥಗಳನ್ನು ಪೂರ್ಣಮಾಡುವವನು ಕಲ್ಪವೃಕ್ಷ ಸದ್ರುಶನು ಆದ ಶ್ರೀ ಕ್ರಷ್ಣನು ಹೀಗೆ ಮಾತನಾಡಿದನು. ॥ ೨೧ ॥ ಎಲೋ ಶ್ರೋತ್ರುಗಳಿರಾ ! ಅವಧಾನವನ್ನಿಡಿರಿ. ಕೋಣಗಳು ಹೇಗೆ ಮಹಾಪೂರವನ್ನು ಲೆಕ್ಕಿಸದೇ ನೀರಿನಲ್ಲಿಯೇ ಮಲಗಿ ಬಿಡುತ್ತವೆಯೋ, ಅದೇ ಪ್ರಕಾರಾ ಶ್ರೀಕ್ರಷ್ಣಾರ್ಜುನರ ಸಂವಾದವನ್ನು ಕೇಳಿಯೂ, ವ್ರುದ್ಧನಾದ ಧೃತರಾಷ್ಟ್ರರಾಜನು ಸ್ವಸ್ಥವಾಗಿ ಕುಳಿತುಬಿಟ್ಟನು. ॥ ೫೨೨ ॥ ಆ ವೇಳೆದಲ್ಲಿ ಸಂಜಯನು ತಲೆದೂಗಿ ಅನ್ನುತ್ತಾನೆ. ಅಹಹಾ !! ಈ ಹೊತ್ತಿನ ದಿವಸ ಅಮೃತದ ಮಳೆಯು ಸುರಿಯುತ್ತಿರಲು ( ದುರ್ದೈವಿಯಾದ ಅಂಧ ) ಧೃತರಾಷ್ಟ್ರನು ಈ ಸ್ಥಳದಲ್ಲಿ ಇದ್ದೂ ಇಲ್ಲದಂತಾಗಿ ಅವನು ಸಮೀಪದ ಊರಿಗೆ ಹೋದಂತೆ ಆಗಿರುವದು. ॥ ೨೩ ॥ ಆದಾಗ್ಯೂ ಇವನು ನನ್ನ ಯಜಮಾನನಾದುದರಿಂದ ಈ ರೀತಿಯಿಂದ ಸ್ಪಷ್ಟವಾಗಿ ಮಾತನಾಡಿದರೆ ನಮ್ಮ ವಾಣಿಯು ದೂಷಿತವಾಗಬಹುದು, ಆವರೆ ಏನು ಮಾಡಬೇಕು ? ಇವನ ಸ್ವಭಾವವೇ ಹೀಗೆ ಇರುವದು. ॥ ೨೪ ॥ ಆವರೆ ಮುನಿಶ್ರೇಷ್ಠ ವ್ಯಾಸ ಋಷಿಯು ಶ್ರೀಕೃಷ್ಣಾರ್ಜುನರ ಸಂವಾದವನ್ನು ಧೃತರಾಷ್ಟ್ರರಾಜನಿಗೆ ಹೇಳುವದರ ದೆಶೆಯಿಂದ ಇಲ್ಲಿ ನನ್ನ ಯೋಜನೆಯನ್ನು ಮಾಡಿರುವದರಿಂದ ನನ್ನ ಭಾಗ್ಯವು ಧನ್ಯವಾಗಿರುವದು. ॥ ೨೫ ॥ ಇಷ್ಟು ಮನಸಿನ ನಿಶ್ಚಯಮಾಡಿ ಬಹಳೇ ಕಷ್ಟದಿಂದ ಮಾತನಾಡುತ್ತಿರಲು ಸಂಜಯನಿಗೆ ಅಷ್ಟು ಸಾತ್ವಿಕ ಭಾವಗಳು ಉಂಟಾದವು ಅದು ಅವನಿಗೆ ಆವರಿಸದಂತೆ ಆಯಿತು. ॥ ೨೬ ॥ ಆ ಕೃಷ್ಣಾರ್ಜುನರ ಸಂವಾದದಲ್ಲಿ ಚಿತ್ತವು ಮಗ್ನವಾಗಿ ಹೋದುದರಿಂದ ಸ್ಥಿರವಾಗಿ ವಾಣಿಯು ಅಲ್ಲಿಂದಲ್ಲೇ ಸ್ತಬ್ಧವಾಯಿತು. ಮತ್ತು ನಖ ಶಿಖದೊಳಗೆ ಸಹ ರೋಮಾಂಚಗಳು ಎದ್ದು ನಿಂತವು. ॥ ೨೭ ॥ ಅನಂದಾಶ್ರುಗಳು ಸುರಿಯಲಿಕ್ಕೆ ಹತ್ತಿದವು. ಮತ್ತು ಅಂತರ್ಯಾಮಿ ಸುಖದ ಥೆರೆಗಳು ಬಂದುದರಿಂದ ಹೊರಗೆ ಮೈಗೆ ನಡಗು ಹುಟ್ಟಿತು. ॥ ೨೮ ॥ ಸರ್ವರೋಮ ರಂಧ್ರದೊಳಗಿಂದ ನಿರ್ಮಲವಾದ ಬೆವರಿನ ಸಂಣ ಸಂಣ ಗುಳ್ಳೆಗಳು ಉದ್ಭವಿಸಿದ್ದರಿಂದ ಅವನ ಮೈಯ್ಯಲ್ಲಿ ಮುತ್ತಿನ ಜಾಳಿಗೆಯನ್ನು ಹಾಕಿರುವದೋ ಎನೋ ಹೀಗೆ ಕಾಣುತ್ತಿತ್ತು, ॥ ೨೯ ॥ ಈ ಮಹಾ ಸುಖದ ಪ್ರೇಮದಿಂದ ಜೀವದಶಾ ಇಲ್ಲದಂತೆ ಆದುದರಿಂದ ಶ್ರೀ ವ್ಯಾಸದೇವರು ನಿಯಮಿಸಿದ ಕೆಲಸವು ಅವನ ಕೈಯಿಂದಾಗದಂತಾಯಿತು. ॥೫೩೦ ॥ ಇಷ್ಟರಲ್ಲಿ

ಶ್ರೀ ಕೃಷ್ಣಾರ್ಜುನರ ಸಂವಾದವು "ಧೋ ಧೋ" ಎಂದು ಶಬ್ದಮಾಡುತ್ತಹರಿದು ಬಂದು ಕಿವಿಯಲ್ಲಿ ಬಿದ್ದಕೂಡಲೆ ಸಂಭಾಷಣ ಮಾಡುವ ಸಂಜಯನ ದೇಹ ಸ್ಥಿತಿಯಲ್ಲಿ ಎಚ್ಚರಿಕೆಯುಂಟಾಗಿ ತನ್ನ ಕಡೆಗೆ ಶ್ರೀವ್ಯಾಸ ದೇವರು ನಿಯಮಿಸಿದ ಕಾರ್ಯವನ್ನು ಮಾಡಲು ಸಿದ್ಧನಾದನು. ॥ ೫೩೧ ॥ ಆ ಮೇಲೆ ತೀವ್ರವೇ ಕಣ್ಣಿನ ನೀರು ಮತ್ತು ಸರ್ವಾಂಗದ ಬೆವರು ವರಸಿಕೊಂಡು ಧೃತರಾಷ್ಟ್ರರಾಜನಿಗೆ ಅನ್ನುತ್ತಾನೆ. ಮಹಾರಾಜರೇ ! ಶ್ರವಣಮಾಡಿರಿ. ॥ ೫೩೨ ॥ ಈಗ ಶ್ರೀಕೃಷ್ಣ ವಾಕ್ಯರೂಪಿ ಉತ್ತಮ ಬೀಜಗಳು ಸಂಜಯನ ಹೃದಯ ಕ್ಷೇತ್ರದೊಳ್ (ಭೂಮಿಯಲ್ಲಿ) ಬೀಳಲು ಅವನ ಅಷ್ಟ ಸಾತ್ವಿಕ ಭಾವರೂಪಿ ಎರಡನೇ ಉತ್ತಮವಾದ ಬೆಳೆಯು ಹೆಚ್ಚಿಗೆ ಸಮೃದ್ಧಿ ಹೊಂದಿದರಿಂದ ಶ್ರೋತ್ರಗಳಿಗೆ ಸಿದ್ಧಾಂತ ರೂಪಿ ಬೆಳೆಯು ಸುಕಾಲವಾದೀತು. ॥ ೫೩೩ ॥ ಎಲೈ ಶ್ರೋತ್ರಗಳಿರಾ ! ಸ್ವಲ್ಪವೇ ಇತ್ತಕಡೆಗೆ ಅವಧಾನವನ್ನು ಕೊಡಿರಿ. ಇಷ್ಟರಿಂದಲೇ ಆನಂದದ ರಾಶಿಯಮೇಲೆ ಕುಳಿತುಕೊಳ್ಳುವಿರಿ. ಈ ಹೊತ್ತಿನ ದಿವಸ ಆ ಕರ್ಣಗಳಿಗೆ ಭಾಗ್ಯವೇ ಮಾಲೆಯನ್ನು ಹಾಕಿರುವದು. ಮತ್ತು ಆ ಕರ್ಣಗಳೇ ಧನ್ಯವಾಗಿರುವವು. ॥ ೫೩೪ ॥ ಆದುದರಿಂದ ತನ್ನ ವಿಭೂತಿಗಳ ಸ್ಥಾನವನ್ನು ಸಿದ್ಧ ಪುರುಷರ ಅರಸನಾದ ಶ್ರೀ ಕೃಷ್ಣನು ಅರ್ಜುನನಿಗೆ ತೋರಿಸುವನು. ಶ್ರೀ ನಿವೃತ್ತಿನಾಥರ ಶಿಷ್ಯ ಶ್ರೀ ಜ್ಞಾನೇಶ್ವರರು ಅನ್ನುತ್ತಾರೆ. ಆ ಮುಂದಿನ (೧೦ನೇ ಅಧ್ಯಾಯದ) ಸುಪ್ರಸಂಗವನ್ನು ಶ್ರೋತ್ರಗಳು ಶ್ರವಣಮಾಡಬೇಕು. ॥ ೫೩೫ ॥

**ಶ್ರೀಮದ್‌ಭಗವದ್ಗೀತೆಯ ಮತ್ತು ಶ್ರೀಜ್ಞಾನೇಶ್ವರಿಯ ಸರಲ, ಸುಲಭ, ಕನ್ನಡಅನುವಾದದ ನವಮೋಧ್ಯಾಯವು ಮುಗಿದುದು.**

## ಮೊದಲನೆಯ ಭಾಗ ಸಮಾಪ್ತವು

**ಶ್ರೀಕೃಷ್ಣಾರ್ಪಣಮಸ್ತು**

ಮುದ್ರಕ:— ಎಂ. ಗಾ. ಭಿಸೆ, ಶ. ಪ್ರಿಂ. ದ. ಧಾ. ೫೪೧೨-೩೫-೧೦೦೦.